# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ಶಲ್ಯಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೨೦

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 20**

*ಮುದ್ರಕರು:*
**ಭಾರತ ದರ್ಶನ ಮುದ್ರಣಾಲಯ**
163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

# ವಿನಮ್ರವಚನಗಳು

ಪರಮಾತ್ಮನ ದಯೆಯಿಂದಲೂ, ಗುರುಭಗವಂತನ ದಿವ್ಯಾಶೀರ್ವಾದ ಗಳಿಂದಲೂ, ಸತ್ಪುರುಷರ ಸಹಕಾರದಿಂದಲೂ ಈ ಇಪ್ಪತ್ತನೆಯ ಸಂಪುಟವು ಸಿದ್ಧವಾಗಿದೆ. ಸುಮನೋಹರಪುಷ್ಪರೂಪವಾದ ಈ ಸಂಪುಟವನ್ನು ಭಗವಂತನ ಪಾದಾರವಿಂದಗಳಲ್ಲಿ ಮನಸಾ ಸಮರ್ಪಿಸಿ ಬಳಿಕ ಪ್ರಸಾದರೂಪವಾದ ಈ ದಿವ್ಯಸಂಪುಟವನ್ನು ನಮ್ಮ ಪ್ರಿಯಗ್ರಾಹಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ.

ಮೇ ತಿಂಗಳಿನಲ್ಲಿಯೇ ಈ ಸಂಪುಟವನ್ನು ಹೊರತರಲು ಆಶಿಸಿದ್ದೆವು. ಆದರೆ ನಮಗೆ ಬರಬೇಕಾಗಿದ್ದ ಕಾಗದವು ಕಾಗದದ ಕಾರ್ಖಾನೆಯಿಂದ ಸಕಾಲದಲ್ಲಿ ಬರಲಿಲ್ಲ. ಆ ಸಮಯದಲ್ಲಿ ನಮಗೆ ಬಂದಿದ್ದ ಸಮಾಚಾರದಂತೆ ಜುಲೈ ತಿಂಗಳಿನಲ್ಲಿ ಮಾತ್ರವೇ ಕಾಗದವು ಸಿಕ್ಕುವುದಾಗಿದ್ದಿತು. ಆದರೆ ಪರಮಾತ್ಮನ ದಯೆಯಿಂದಲೂ ಶ್ರೀ ಕಮಲಾನಾಥರು, ಶ್ರೀ ರಾಮಮೂರ್ತಿ ಗಳು, ಶ್ರೀ ಎಸ್. ಮಂಚಯ್ಯನವರು – ಇವರೇ ಮೊದಲಾದ ಸತ್ಪುರುಷರ ಸಹಕಾರದಿಂದಲೂ ಬೇರೊಂದು ಕಡೆಯಿಂದ ನಾವು ನಿರೀಕ್ಷಿಸಿದುದ ಕ್ಕಿಂತಲೂ ಬಹಳ ಬೇಗ ಕಾಗದವು ಲಭ್ಯವಾಗಿ ಈ ಸಂಪುಟವನ್ನು ಈ ವೇಳೆಗಾದರೂ ಹೊರತರಲು ಸಾಧ್ಯವಾಯಿತು. ಈ ಸತ್ಪುರುಷರಿಗೆ ಪರಮಾತ್ಮನು ಆಯುರಾರೋಗ್ಯ-ಐಶ್ವರ್ಯಾದಿಗಳನ್ನು ಕೊಟ್ಟು ಕಾಪಾಡ ಲೆಂದು ಪ್ರಾರ್ಥಿಸುವುದು ನಮ್ಮ ಮೊದಲನೆಯ ಕರ್ತವ್ಯವಾಗಿರುತ್ತದೆ. ಕಾಗದವು ನಮಗೆ ಏಪ್ರಿಲ್ ತಿಂಗಳಿನ ಕಡೆಯಲ್ಲಿ ಸಿಕ್ಕಿತು. ಇಷ್ಟು ಬೇಗ ಕೇವಲ ಒಂದು ತಿಂಗಳ ಅವಧಿಯಲ್ಲಿ – ಈ ಸಂಪುಟವು ಹೊರಬರಲು ಸಂಪಾದಕಮಂಡಲಿಯವರೂ ಬಹಳವಾಗಿ ಶ್ರಮಿಸಿದ್ದಾರೆ. ಸ್ವಲ್ಪವಾದರೂ ಬೇಸರಪಡದೇ ಹಗಲಿರುಳೂ ಕಾರ್ಯಮಾಡಿದ್ದಾರೆ. ಹಿಂದಿನ ಸಂಪುಟ ಗಳಂತೆಯೇ ತಪ್ಪಿಲ್ಲದೇ ಅಂದವಾಗಿ ಮುದ್ರಿಸಲು ಸಂಪೂರ್ಣಸಹಕಾರ

ವನ್ನು ನೀಡಿರುತ್ತಾರೆ. ನಿಸ್ಪೃಹತೆಯಿಂದ ಈ ಮಹಾಕಾರ್ಯಕ್ಕೆ ನೆರವು ನೀಡುತ್ತಿರುವ ಈ ಮಹಾನುಭಾವರಿಗೆ ಪರಮಾತ್ಮನು ಎಲ್ಲ ವಿಧವಾದ ಸ್ಪೃಹೆಗಳನ್ನೂ ಪೂರ್ಣಗೊಳಿಸಿಕೊಡಲೆಂದು ಪ್ರಾರ್ಥಿಸುತ್ತೇವೆ.

ಯಾವ ವಿಧವಾದ ಆತಂಕವೂ ಇಲ್ಲದೇ ಮುಂದುವರಿಯುತ್ತಿದ್ದ ಮಹಾಭಾರತದ ಪ್ರಕಟಣೆಗೆ ಆತಂಕವುಂಟಾದುದು ಅಥವಾ ಕಾಗದವಿಲ್ಲವೆಂಬ ಕಾರಣದಿಂದ ವಿಘ್ನವುಂಟಾದುದು – ಈ ಸಂಪುಟದ ಪ್ರಕಾಶನದಲ್ಲಿಯೇ. ಪರಮಾತ್ಮನ ದಯೆಯಿಂದ ಈ ವಿಘ್ನವೂ ಬಹಳ ಬೇಗ ನಿರಸನ ಹೊಂದಿ ೨೦ನೆಯ ಸಂಪುಟದ ಮುದ್ರಣವು ಪೂರ್ಣವಾಯಿತು. ಮಹಾಭಾರತದ ಪ್ರಕಟಣೆಯಲ್ಲಿ ವಿಘ್ನವುಂಟಾಗುವುದೆಂಬ ಭಾವನೆಯು ಇಷ್ಟುಮಾತ್ರದಿಂದಲೇ ಪರ್ಯವಸಾನವಾಗಿ ಮುಂದಿನ ಸಂಪುಟಗಳು ಯಾವ ವಿಧವಾದ ವಿಘ್ನಗಳೂ ಇಲ್ಲದೇ ಕಾಲ-ಕಾಲಕ್ಕೆ ಹೊರಬರುತ್ತವೆಂಬ ಆಶಯದಿಂದಿರುತ್ತೇವೆ.

ಈ ಸಂಪುಟದಲ್ಲಿ ಶಲ್ಯಪರ್ವದ ಉಪಪರ್ವವಾದ ಗದಾಪರ್ವವು ಮುಗಿದು ಅರ್ಥಾತ್ ಶಲ್ಯಪರ್ವವು ಮುಗಿದು ಸೌಪ್ತಿಕ, ಸ್ತ್ರೀಪರ್ವಗಳೂ ಮುಗಿದಿವೆ. ಯುಧಿಷ್ಠಿರಪಟ್ಟಾಭಿಷೇಕವೊಂದನ್ನುಳಿದು ಮಹಾಭಾರತದ ಒಂದು ಪೂರ್ಣಘಟ್ಟವನ್ನು ಮುಟ್ಟಿದಂತಾಗಿದೆ. ಇಪ್ಪತ್ತನೆಯ ಸಂಪುಟವು ಶೋಕಪೂರ್ಣವಾಗಿದ್ದರೂ ಅದನ್ನು ಸರಿದೂಗಿಸಲೋ ಎಂಬಂತೆ ತೀರ್ಥ ಯಾತ್ರೆ, ವಿದುರನೀತಿ – ಇವೇ ಮುಂತಾದ ವಿಷಯಗಳಿದ್ದು ಓದುಗರ ಮನಸ್ಸನ್ನು ವಿಕಾಸಗೊಳಿಸುತ್ತವೆ. ಶೋಕವೇ ತುಂಬಿ-ತುಳುಕಾಡುವ ಸ್ತ್ರೀಪರ್ವದಲ್ಲಿಯೂ ವ್ಯಾಸಮಹರ್ಷಿಗಳು ಗಾಂಧಾರಿಯ ಮೂಲಕವಾಗಿ ಎಲ್ಲ ನಾರಿಯರ ಶೋಕವನ್ನೂ ಪರಮಾದ್ಭುತವಾದ ರೀತಿಯಲ್ಲಿ ಹೃದಯಂಗಮವಾಗಿ ಚಿತ್ರಿಸಿದ್ದಾರೆ.

ಈ ಇಪ್ಪತ್ತು ಸಂಪುಟಗಳೂ ಪರಮಾತ್ಮನ ದಯೆಯಿಂದ ನಿರಾತಂಕ ವಾಗಿ ಪೂರೈಸಿದುದರ ಕಾರಣ ಭಗವತ್ಪ್ರೀತ್ಯರ್ಥವಾಗಿ ರುದ್ರಾಭಿಷೇಕ, ಸೂರ್ಯನಮಸ್ಕಾರ, ನವಗ್ರಹಜಪ, ರಾಮಾಯಣಪಾರಾಯಣ, ಮಹಾ ಭಾರತ ಪಾರಾಯಣ, ಭಾಗವತಪಾರಾಯಣ, ಶ್ರೀ ವಿಷ್ಣುಸಹಸ್ರನಾಮ ಪಾರಾಯಣ, ಹರೇರಾಮಮಂತ್ರಜಪ, ವೇದಪಾರಾಯಣ, ಪುರುಷಸೂಕ್ತಪಾರಾ

ಯಣ, ಶ್ರೀಕೃಷ್ಣಮಂತ್ರಜಪ–ಇವುಗಳನ್ನು ಹನ್ನೆರಡು ದಿವಸಗಳವರೆಗೆ ಮಾಡಿ ಹದಿಮೂರನೆಯ ದಿವಸ ತತ್ಸಂಬಂಧವಾದ ಹೋಮಗಳನ್ನು ಮಾಡಲಾಯಿತು. ಪಾರಾಯಣ-ಜಪಗಳು 30-6-1980ರಿಂದ 12-7-1980ರ ವರೆಗೆ ಭಾರತ ದರ್ಶನದ ಕಾರ್ಯಾಲಯದಲ್ಲಿಯೂ, ಹೋಮ ಮತ್ತು ಸಂತರ್ಪಣೆಗಳು 12-7-1980ರಂದು ಶ್ರೀ ನರಸಿಂಹ ರಾಜಾ ಕಾಲೋನಿಯ ಶ್ರೀರಾಮಮಂದಿರದಲ್ಲಿಯೂ ನಡೆದುವು. ಅನೇಕ ವಿದ್ವಾಂಸರು ಈ ಕಾರ್ಯದಲ್ಲಿ ಭಾಗವಹಿಸಿದ್ದರು. ನಮ್ಮ ಅನೇಕ ಗ್ರಾಹಕರೂ ಪೂರ್ಣಾಹುತಿಯ ದಿವಸ ಭಾಗವಹಿಸಿ ಪ್ರಸಾದವನ್ನು ಸ್ವೀಕರಿಸಿದರು.

ಗ್ರಾಹಕರ ಸಂಖ್ಯೆಯು ಸಾಧಾರಣವಾದ ರೀತಿಯಲ್ಲಿ ಅಧಿಕಗೊಳ್ಳುತ್ತಿದೆ. ಸಾವಿರಾರು ಸಂಖ್ಯೆಯಲ್ಲಿ ಗ್ರಾಹಕರಾಗಬೇಕು. ಲಕ್ಷೋಪಲಕ್ಷ ಕನ್ನಡಿಗರು ಮಹಾಭಾರತವನ್ನು ಓದಬೇಕು. ಇದಕ್ಕೆ ನಮ್ಮೆಲ್ಲ ಗ್ರಾಹಕರ ನೆರವೂ ಬೇಕಾಗುತ್ತದೆ. ಒಬ್ಬೊಬ್ಬ ಗ್ರಾಹಕರು ಇಬ್ಬಿಬ್ಬರನ್ನಾದರೂ ಗ್ರಾಹಕರನ್ನಾಗಿ ಮಾಡಿಕೊಡುವ ಹೊಣೆಯನ್ನು ಹೊತ್ತರೆ ನಮ್ಮ ಆಶಯವು ನೆರವೇರುವುದು. ಹಲವಾರು ಮಂದಿ ಗ್ರಾಹಕರು ಹೊಸ ಗ್ರಾಹಕರನ್ನು ಮಾಡಿಕೊಟ್ಟಿರುತ್ತಾರೆ. ಉಳಿದವರೂ ಮಾಡಿಕೊಡಬೇಕೆಂದು ನಾವು ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ಕೆನರಾ, ಸಿಂಡಿಕೇಟ್, ಕರ್ಣಾಟಕ, ಕಾರ್ಪೊರೇಷನ್ ಮತ್ತು ನ್ಯಾಷನಲ್ ಕೋ-ಆಪರೇಟಿವ್ ಬ್ಯಾಂಕುಗಳು ಮಹಾಭಾರತ ಪೂರ್ಣಮಾಲೆಗೆ ಗ್ರಾಹಕರಾಗಲು ಸಾಲಕೊಡುವ ಯೋಜನೆಯನ್ನು ಮುಂದುವರಿಸಿವೆ. ಕನ್ನಡಿಗರು ಈ ಸೌಲಭ್ಯವನ್ನು ಪಡೆದುಕೊಳ್ಳಬೇಕು.

ಪೂರ್ಣಮಾಲೆಗೆ ಚಂದಾಮೌಲ್ಯವನ್ನು ಹೆಚ್ಚಿಸಬೇಕಾದುದು ಅನಿವಾರ್ಯವಾಗಿ ಕಾಣುತ್ತಿದೆ. ಮುದ್ರಣದ ಎಲ್ಲ ವಸ್ತುಗಳ ಬೆಲೆಯೂ ಎರಡುಪಟ್ಟು ಮೂರುಪಟ್ಟು ಅಧಿಕಗೊಂಡಿದೆ. ಲಾಭವಿಲ್ಲದಿದ್ದರೂ ನಷ್ಟ ಮಾಡಿಕೊಂಡು ಸಂಪುಟಗಳನ್ನು ಒದಗಿಸಲು ಸಾಧ್ಯವಾಗಲಾರದು. ಆದುದರಿಂದ ನಮ್ಮ ಕನ್ನಡಿಗರು ಸಾಧ್ಯವಾದಷ್ಟು ಬೇಗ ಪೂರ್ಣಮಾಲೆಗೆ ಗ್ರಾಹಕರಾಗುವುದು ಉತ್ತಮ.

ಎರಡನೆಯ ಸಂಪುಟದ ಪುನರ್ಮುದ್ರಣವಾಗಬೇಕಾಗಿರುತ್ತದೆ.

ಇದುವರೆಗೆ ಎರಡನೆಯ ಸಂಪುಟದ ೯ ಸಾವಿರ ಪ್ರತಿಗಳನ್ನು ಛಾಪಿಸಿದ್ದೇವೆ. ಕಡೆಯ ಪಕ್ಷ ಎಂಟು ಸಾವಿರದ ಐದುನೂರು ಮಂದಿ ಗ್ರಾಹಕರಾದರೂ ಇರಬೇಕಾಗಿದ್ದಿತು. ಗ್ರಾಹಕರ ಸಂಖ್ಯೆಯು ಏಳು ಸಾವಿರವನ್ನು ಮಾತ್ರವೇ ಮುಟ್ಟಿದೆ. ಅನೇಕರು ಮೊದಲನೆಯ ಒಂದೆರಡು ಸಂಪುಟಗಳನ್ನು ಕೊಂಡು ಸುಮ್ಮನಾಗಿಬಿಡುವುದರಿಂದ ಹೀಗಾಗುತ್ತಿದೆ. ಒಂದೆರಡು ಸಂಪುಟಗಳನ್ನು ತೆಗೆದುಕೊಂಡಿರುವವರಿಗೂ ನಾವು ಆಹ್ವಾನಪತ್ರಗಳನ್ನು ಕಳುಹಿಸುತ್ತಲೇ ಇದ್ದೇವೆ. ಹಿಂದಿನ ಸಂಪುಟಗಳನ್ನು ತೆಗೆದುಕೊಂಡವರು ಮಧ್ಯದಲ್ಲಿ ನಿಲ್ಲಿಸಬಾರದೆಂದು ಪ್ರಾರ್ಥಿಸುತ್ತೇವೆ.

ಎರಡನೆಯ ಸಂಪುಟದ ತೃತೀಯಮುದ್ರಣವನ್ನು ಈಗಾಗಲೇ ಪ್ರಾರಂಭಿಸಿದ್ದೇವೆ. ಸಾಧ್ಯವಾದಷ್ಟು ಬೇಗ ಮುಗಿಸಿ ಈ ವರ್ಷದಲ್ಲಿಯೇ ಇನ್ನೆರಡು ಹೊಸ ಸಂಪುಟಗಳನ್ನೂ ಹೊರತರುವ ಆಶಯವಿದೆ. ಪರಮಾತ್ಮನ ಅನುಗ್ರಹದಿಂದ ನಮ್ಮ ಈ ಸಂಕಲ್ಪವು ಈಡೇರಬೇಕಾಗಿದೆ.

೧೯ನೆಯ ಸಂಪುಟದ ಪ್ರಕಾಶನವು ದಿನಾಂಕ 2-2-80ನೇ ಶನಿವಾರ ಸಂಜೆ ಜಯನಗರದ ಶ್ರೀಪಟ್ಟಾಭಿರಾಮ ಸೇವಾ ಮಂಡಲಿಯ ಸಭಾಂಗಣ ದಲ್ಲಿ ಮೈಸೂರು ಬ್ರಹ್ಮತಂತ್ರಸ್ವತಂತ್ರ ಪರಕಾಲಮಠದ ಯತಿಶ್ರೇಷ್ಠರಾದ ಪರಮಪೂಜ್ಯ ಶ್ರೀ ಶ್ರೀಮದಭಿನವರಾಮಾನುಜ ಮಹಾದೇಶಿಕಸ್ವಾಮಿಗಳ ವರ ಅಧ್ಯಕ್ಷತೆಯಲ್ಲಿ ನಡೆಯಿತು. ಡೆಕ್ಕನ್ ಹೆರಾಲ್ಡ್ ಪತ್ರಿಕೆಯ ಸಂಪಾದಕರಾದ ಶ್ರೀ ವಿ.ಕೆ. ನರಸಿಂಹನ್‌ರವರು ಮುಖ್ಯ ಅತಿಥಿಗಳಾಗಿದ್ದರು. ವೇದಘೋಷವಾದ ನಂತರ ಸ್ವಾಗತಪದ್ಯಮಾಲಿಕೆಯನ್ನು ಕುಮಾರೀ ಉಮಾ ಮಣಿಯವರು ಸುಶ್ರಾವ್ಯವಾಗಿ ಹಾಡಿದರು. ಸಂಪಾದಕಮಂಡಲಿಯ ಹಿರಿಯ ವಿದ್ವಾಂಸರಾದ ಶ್ರೀ ಹೆಚ್.ಎನ್. ರಂಗಸ್ವಾಮಿಯವರು ಸ್ವಾಗತ ಭಾಷಣ ಮಾಡಿದರು. ಶ್ರೀ ವಿ.ಕೆ. ನರಸಿಂಹನ್‌ರವರು ಮಂಗಳವಾದ್ಯಗಳು ಮೊಳಗು ತ್ತಿದ್ದಂತೆ ೧೯ನೆಯ ಸಂಪುಟವನ್ನು ಪ್ರಕಾಶನಗೊಳಿಸಿದರು. ಪ್ರಕಾಶನ ಸಮಿತಿಯ ಅಧ್ಯಕ್ಷರಾದ ವಿದ್ವಾನ್ ಶ್ರೀ ಹೆಚ್.ಎಸ್. ವರದದೇಶಿಕಾಚಾರ್ಯ ರಂಗಪ್ರಿಯರವರು ೧೯ನೆಯ ಸಂಪುಟದಲ್ಲಿರುವ ವಿಷಯಗಳನ್ನು ಪರಿಚಯ ಮಾಡಿಕೊಟ್ಟರು. ಮುಖ್ಯ ಅತಿಥಿಗಳಾದ ಶ್ರೀ ವಿ.ಕೆ. ನರಸಿಂಹನ್‌ರವರು ಮಾತನಾಡುತ್ತಾ–'ಭಾರತದೇಶವು ಎಂಟು-ಹತ್ತು ಶತಮಾನಗಳ ಸುದೀರ್ಘ

ಕಾಲದವರೆಗೆ ಪರಕೀಯರ ಆಳ್ವಿಕೆಯಲ್ಲಿ ತತ್ತರಿಸಿಹೋಗಿದ್ದರೂ ನಮ್ಮ ಸನಾತನಸಂಸ್ಕೃತಿಯನ್ನೂ ಮತ್ತು ಧರ್ಮವನ್ನೂ ಉಳಿಸಿಕೊಂಡು ಬರಲು ಮಹಾಭಾರತ-ರಾಮಾಯಣಗ್ರಂಥಗಳು ತುಂಬಾ ಸಹಕಾರಿಯಾಗಿವೆ'– ಎಂದು ಹೇಳಿ ಭಾರತ ದರ್ಶನ ಪ್ರಕಾಶನದವರು ಮಾಡುತ್ತಿರುವ ಕಾರ್ಯ ವನ್ನು ಶ್ಲಾಘಿಸಿದರು. ಪರಮಪೂಜ್ಯ ಶ್ರೀಶ್ರೀಗಳವರು ಅಧ್ಯಕ್ಷಪೀಠದಿಂದ ಅನುಗ್ರಹಭಾಷಣಮಾಡುತ್ತಾ–'ಮಾನವ ಜನಾಂಗವು ಸುಖ-ಶಾಂತಿಗಳಿಂದ ಬಾಳುವೆ ಸಾಗಿಸಲು ಮಹಾಭಾರತದ ಅಧ್ಯಯನವೇ ಏಕೈಕಮಾರ್ಗ'– ಎಂದು ಉದ್ಘೋಷಿಸಿದರು. ಪ್ರಕಾಶಕರ ಕಾರ್ಯವು ಯಶಸ್ವಿಯಾಗಿ ನೆರವೇರಲೆಂದು ತಮ್ಮ ಆರಾಧ್ಯದೇವನಾದ ಶ್ರೀಲಕ್ಷ್ಮೀಹಯಗ್ರೀವನಲ್ಲಿ ಪ್ರಾರ್ಥಿಸಿ ಅನುಗ್ರಹಭಾಷಣವನ್ನು ಮುಕ್ತಾಯಗೊಳಿಸಿದರು. ಈ ನಮ್ಮ ಸಮಾರಂಭದಲ್ಲಿಯೇ ಪ್ರಕಾಶನದ ಅಧ್ಯಕ್ಷರಾದ ವಿದ್ವಾನ್ ಎಚ್.ಎಸ್. ವರದದೇಶಿಕಾಚಾರ್ಯರಂಗಪ್ರಿಯರವರಿಗೆ ಶ್ರೀಶ್ರೀಗಳವರು 'ಪ್ರವಚನ ಭಾಸ್ಕರ' ಎಂಬ ಬಿರುದನ್ನಿತ್ತು ಗೌರವಿಸಿದರು. ಬಳಿಕ ತೀರ್ಥಹಳ್ಳಿ ಶ್ರೀರಾಮಚಂದ್ರಾಪುರ ಮಠದ ಶ್ರೀ ಶ್ರೀ ರಾಘವೇಂದ್ರಭಾರತೀ ಸ್ವಾಮಿಗಳವರು ಕಳುಹಿಸಿದ್ದ ಸುವರ್ಣಮಂತ್ರಾಕ್ಷತೆಯನ್ನು ಸಂಪಾದಕ ಮಂಡಲಿಯವರಿಗೆ ನೀಡಿ ಆಶೀರ್ವದಿಸಿದರು. ವಿದ್ವಾನ್ ಹೆಚ್.ಎನ್. ರಂಗಸ್ವಾಮಿಯವರ ವಂದನಾರ್ಪಣೆಯೊಂದಿಗೆ ಸಮಾರಂಭವು ಮುಕ್ತಾಯವಾಯಿತು.

4-2-80ನೆಯ ಸೋಮವಾರ ಮಂಗಳೂರಿನ ಸಂಸ್ಕೃತಪರಿಷತ್ತಿನ ಆಶ್ರಯದಲ್ಲಿ ಉದಯವಾಣಿಯ ಸಹಸಂಪಾದಕರಾದ ವೇ॥ ಬ್ರಂ। ಶ್ರೀ ಬನ್ನಂಜೆ ಗೋವಿಂದಾಚಾರ್ಯರ ಘನ ಅಧ್ಯಕ್ಷತೆಯಲ್ಲಿ ಮಂಗಳೂರಿನ ಪುರ ಸಭೆಯ ಸಭಾಂಗಣದಲ್ಲಿ ೧೯ನೆಯ ಸಂಪುಟದ ಪ್ರಕಾಶನಸಮಾರಂಭವು ವಿಜೃಂಭಣೆಯಿಂದ ನಡೆಯಿತು. ಅಂತೆಯೇ 23-2-1980ನೆಯ ಶನಿವಾರ ಸಂಜೆ ಚಿಕ್ಕಬಳ್ಳಾಪುರದ ಸಂಸ್ಕೃತ ಸಂಘದ ಆಶ್ರಯದಲ್ಲಿ ಚಿಕ್ಕಬಳ್ಳಾಪುರದ ಖ್ಯಾತನ್ಯಾಯವಾದಿಗಳಾದ ಶ್ರೀ ನರಸಿಂಹಮೂರ್ತಿಯವರ ಘನ ಅಧ್ಯಕ್ಷತೆ ಯಲ್ಲಿ ವಿಜೃಂಭಣೆಯಿಂದ ನಡೆಯಿತು. ಈ ಎರಡು ಸಮಾರಂಭಗಳಲ್ಲಿಯೂ ಸಮಿತಿಯ ಅಧ್ಯಕ್ಷರಾದ ವಿದ್ವಾನ್ ಹೆಚ್.ಎಸ್. ವರದದೇಶಿಕಾಚಾರ್ಯ ರಂಗಪ್ರಿಯರೂ, ಸಂಪಾದಕಮಂಡಲಿಯ ವಿದ್ವಾಂಸರಾದ ವಿದ್ವಾನ್

ಹೆಚ್.ಎನ್. ರಂಗಸ್ವಾಮಿ, ಶ್ರೀ ನೆ. ವೆಂ. ಶ್ರೀನಿವಾಸರಾಯ, ಶ್ರೀ ಶ್ರೀಹರಿ ಮತ್ತು 'ವಿಶ್ವಾಮಿತ್ರ' ಇವರೂ ಭಾಗವಹಿಸಿದ್ದರು.

ಹೀಗೆ ನಮ್ಮ ಹಿತಚಿಂತಕರ ಬೆಂಬಲದಿಂದ ಬೆಂಗಳೂರಿನ ಹೊರಗೂ ಪ್ರಚಾರಕಾರ್ಯವೂ ನಡೆಯುತ್ತಿದೆ. ಇನ್ನೂ ಬಹಳವಾಗಿ ನಡೆಯಬೇಕಾಗಿದೆ. ಬೆಂಗಳೂರಿನ ಹೊರಗಿನ ಗ್ರಾಹಕರು ತಮ್ಮ-ತಮ್ಮ ಸ್ಥಳಗಳಲ್ಲಿ ಇಂತಹ ಸಮಾರಂಭಗಳನ್ನು ನಡೆಸುವುದಾದಲ್ಲಿ ಅದಕ್ಕೆ ಅನುಕೂಲತೆಗಳನ್ನೂ ಮಾಡಿಕೊಡಲಾಗುವುದು. ಸಮಾರಂಭವು ನಡೆದು ಸಾವಿರಾರು ಮಂದಿಗೆ ಈ ಪ್ರಕಾಶನದ ಯೋಜನೆಯು ತಿಳಿಯಬೇಕು. ನೂರಾರು ಮಂದಿಯಾದರೂ ಗ್ರಾಹಕರಾಗಬೇಕು.

ನಮ್ಮ ಪ್ರಾರ್ಥನೆಯಂತೆ ಈ ಸಂಪುಟಕ್ಕೆ ಮುನ್ನುಡಿಯನ್ನು ಬರೆದುಕೊಟ್ಟ ಧರ್ಮಸ್ಥಳದ ಸಮ್ಮಾನ್ಯ ಶ್ರೀ ಡಿ. ವೀರೇಂದ್ರ ಹೆಗ್ಗಡೆಯವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು. ಈ ಮಹನೀಯರು ನಾವು ನಡೆಸಿದ ಶಾಂತ್ಯುತ್ಸವಕ್ಕೂ ಒಂದು ಸಾವಿರ ರೂ.ಗಳನ್ನು ಕಳುಹಿಸಿ ಉಪಕರಿಸಿರುತ್ತಾರೆ.

ನಮ್ಮ ಆಶೋತ್ತರಗಳು ಅಪಾರವಾಗಿವೆ. ಆದರೆ ಎಲ್ಲವೂ ಭಗವಂತನ ದಯೆಯಿಂದ ಕಾಲಾನುಗುಣವಾಗಿ ಪೂರ್ಣಗೊಳ್ಳಬೇಕಾಗಿದೆ. ದಯಾಮಯನಾದ, ದಿವ್ಯಮೂರ್ತಿಯಾದ, ಸಚ್ಚಿದಾನಂದಸ್ವರೂಪನಾದ ಪರಮಾತ್ಮನನ್ನು ನೆನೆಯುತ್ತಾ ಎಲ್ಲವನ್ನೂ ಅವನ ಪಾದಾರವಿಂದಗಳಲ್ಲಿ ಅರ್ಪಿಸುತ್ತಾ ವಿರಮಿಸುವೆವು.

– ಪ್ರಕಾಶಕರು

ಶಾನ್ತಿಃ ಪುಷ್ಟಿಸ್ತುಷ್ಟಿಶ್ಚಾಸ್ತು । ಸಮಸ್ತಸನ್ಮಙ್ಗಲಾನಿ ಭವನ್ತು



# ಮುನ್ನುಡಿ

ಮಹರ್ಷಿ ವೇದವ್ಯಾಸರ ಸಂಸ್ಕೃತ ಮಹಾಭಾರತವನ್ನು ಸರಳ ಕನ್ನಡ ಅನುವಾದದೊಂದಿಗೆ ಪ್ರಕಟಿಸುತ್ತಿರುವ ಭಾರತ ದರ್ಶನ ಪ್ರಕಾಶನ, ಬೆಂಗಳೂರು–ಇವರ ಕಾರ್ಯವು ಶ್ಲಾಘನೀಯ.

ಮಹಾಭಾರತವನ್ನು ಮೂವತ್ತು ಸಂಪುಟಗಳಲ್ಲಿ ಹೊರತರುವ ಯೋಜನೆಯ ಅಂಗವಾಗಿ ಇದುವರೆಗೆ ಹತ್ತೊಂಬತ್ತು ಸಂಪುಟಗಳು ಪ್ರಕಾಶನಗೊಂಡು ಇಪ್ಪತ್ತನೆಯ ಸಂಪುಟವು ಪ್ರಕಾಶನಗೊಳ್ಳುತ್ತಿರುವುದು ಈ ಮಹಾಭಾರತದ ಜನಪ್ರಿಯತೆಗೊಂದು ಸಾಕ್ಷಿಯಾಗಿದೆ. ಸಂಸ್ಕೃತ 'ಕಬ್ಬಿಣದ ಕಡಲೆ' ಅನ್ನುವವರಿಗೆ ಇದು ಅತ್ಯಂತರಸವತ್ತಾದ, ವಿಸ್ತೃತ ವ್ಯಾಖ್ಯಾನದಂತೆ ಇದೆ. ಇದು ಕೇವಲ ಅನುವಾದವಲ್ಲ. ಮಹಾಭಾರತದ ಗೂಢಾರ್ಥಗಳನ್ನು ಸಾಧಾರಣಜನರಿಗೂ ತಿಳಿಯುವಂತೆ ವಿವರಿಸುವ ವ್ಯಾಖ್ಯೆಯಾಗಿದೆ. ಸಾಮಾನ್ಯ ಓದುಗನಿಗೂ ಮಹಾಭಾರತದ ಸವಿಯನ್ನು ಅರ್ಥೈಸಿಕೊಳ್ಳಬಹುದಾದಷ್ಟು ನಿರೂಪಣೆ ಸರಳವಾಗಿದೆ. ಇದುವರೆಗೆ ಪ್ರಕಟವಾದ ಸಂಪುಟಗಳು ಓದುಗನ ಜೀವನಕ್ಕೆ ಮಾರ್ಗದರ್ಶನವನ್ನೀಯುವ ದಾರಿದೀಪಗಳಾಗಿವೆ. ಆತನ ಐಹಿಕ ಮತ್ತು ಪಾರಮಾರ್ಥಿಕ ಜೀವನಸಮಸ್ಯೆಗಳಿಗೆ ಬೇಕಾದ ಉತ್ತರ ಇದರಲ್ಲಿದೆ.

ಇನ್ನೇನು ಇತಿಹಾಸ-ಪುರಾಣ-ಪುಣ್ಯಕಥೆಗಳ ಕಾಲ ಮುಗಿದು ಹೋಯಿತು–ಎನ್ನುವಾಗ ಭಾರತದರ್ಶನ ಪ್ರಕಾಶನಸಂಸ್ಥೆಯವರು ಐತಿಹಾಸಿಕವಾದ ಮಹಾಭಾರತ ಪ್ರಕಟಣೆಯ ಸಾಹಸಕಾರ್ಯಕ್ಕೆ ಕೈಹಾಕಿದ್ದಾರೆ. ಇಂತಹ ಇತಿಹಾಸ-ಪುರಾಣಗಳ ಪ್ರಕಟಣೆಯಂತೆಯೇ ಅವುಗಳ ಪಠಣವೂ ಮಹತ್ತ್ವದ್ದು. ಹಿಂದಿನ ಕಾಲದಲ್ಲಿ ಈ ಕಾರ್ಯವು ಮಠ, ಮಂದಿರಗಳಲ್ಲಿ ನಡೆಯುತ್ತಿತ್ತು. ಈಗ ಆ ಪರಿಪಾಠವೆಲ್ಲವೂ ನಿಂತುಹೋಗಿದೆ. ಇದು ಶೋಚನೀಯ. ಮಠ-ಮಂದಿರಗಳು ಇಂತಹ ಮಹಾಕಾರ್ಯಕ್ಕೆ ಪ್ರೋತ್ಸಾಹವನ್ನಾದರೂ ಕೊಡಬೇಕು. ಸರ್ಕಾರದವರೂ ಸಹ ನಮ್ಮ

ಅಜೇಯಸಂಸ್ಕೃತಿಯ ಉದ್ಧಾರಕ್ಕಾಗಿ ವಿಶೇಷಪ್ರೋತ್ಸಾಹ ಕೊಡಬೇಕು. ಎಲ್ಲ ಶಾಲೆಗಳಲ್ಲಿಯೂ ಇಂತಹ ಮಹಾಗ್ರಂಥಗಳು ಇರುವಂತಾಗಬೇಕು. ನಮ್ಮ ಎಳೆಯರಿಗೆ ಇವು ದಾರಿದೀಪವಾಗಬಲ್ಲುವು. ಇಂತಹ ಮಹಾಗ್ರಂಥಗಳ ಪಠಣದಿಂದ ಎಳೆಯರ ಬುದ್ಧಿಯು ವಿಕಾಸಗೊಳ್ಳುವುದು. ಈ ಇಪ್ಪತ್ತನೆಯ ಸಂಪುಟದಲ್ಲಿ ಬರುವ ವಿದುರನೀತಿಯ ಶ್ಲೋಕವು ಇಂದಿಗೂ ಎಷ್ಟು ಸತ್ಯವಾಗಿದೆಯೆಂಬುದನ್ನು ನಾವು ಗಮನಿಸಬಹುದಾಗಿದೆ.

**ಮೂರ್ಖಾನಿತಿ ಪರಾನಾಹ ನಾತ್ಮಾನಂ ಸಮವೇಕ್ಷತೇ ।**
**ದೋಷಾನ್ಕ್ಷಿಪತಿ ಚಾನ್ಯೇಷಾಂ ನಾತ್ಮಾನಂ ಶಾಸ್ತುಮಿಚ್ಛತಿ ॥**

'ತಾನೇ ಬುದ್ಧಿವಂತನೆಂದು ಭಾವಿಸಿಕೊಂಡು ಇತರರನ್ನು ಮೂರ್ಖರೆಂದು ಹಳಿಯುತ್ತಾನೆ. ಆದರೆ ತನ್ನಲ್ಲಿಯೇ ಎಷ್ಟು ಮೂರ್ಖತನವಿದೆ ಎಂಬುದನ್ನು ಪರೀಕ್ಷಿಸಹೋಗುವುದಿಲ್ಲ. ಇತರರ ಮೇಲೆಯೇ ದೋಷಾರೋಪಣೆ ಮಾಡುವ ಸ್ವಭಾವದಿಂದ ಕೂಡಿರುತ್ತಾನೆ. ತನ್ನ ಮನಸ್ಸನ್ನು ಹಿಡಿತದಲ್ಲಿಡಲು ಇಚ್ಛೆಪಡುವುದಿಲ್ಲ.' (ಪುಟ 5248) ಇಂತಹ ಸುನೀತಿಗಳನ್ನು ನಮ್ಮ ಎಳೆಯರಿಗೆ ವಿವರಿಸಿ ಹೇಳಿದರೆ ಅವರು ತಮ್ಮ ನಡತೆಯನ್ನು ಸರಿಮಾಡಿಕೊಳ್ಳರೇ? ನಾವಾದರೂ ನಾಲ್ಕಾರು ಬಾರಿ ಈ ಶ್ಲೋಕಾರ್ಥವನ್ನು ಮನನಮಾಡಿಕೊಂಡರೆ ನಾವು ಮಾಡುವ ತಪ್ಪು ನಮಗೆ ಸ್ಪಷ್ಟವಾಗಿ ತಿಳಿಯುವುದಲ್ಲವೇ?

ಆದುದರಿಂದ ಇಂತಹ ಕಾವ್ಯಗಳ ಪ್ರಕಟನೆಯಲ್ಲಿ ಓದುಗರ ಆಸಕ್ತಿ ಹೆಚ್ಚಬೇಕು. ಕನ್ನಡನಾಡಿನ ಮನೆ-ಮನೆಗಳಲ್ಲೂ ಮಹಾಭಾರತದ ಪಠಣ ನಡೆಯುವಂತಾಗಬೇಕು. ಹಾಗೇ ಆಗಬೇಕೆಂದು ನಾನು ಆಶಿಸುತ್ತೇನೆ. ಶ್ರೀಸ್ವಾಮಿಯ ಅನುಗ್ರಹದಿಂದ ಮುಂದಿನ ಸಂಪುಟಗಳೂ ಸಹ ಯಶಸ್ವಿಯಾಗಿ ಪ್ರಕಟವಾಗಲಿ ಎಂದು ಹಾರೈಸುತ್ತೇನೆ.

ಶ್ರೀ ಧರ್ಮಸ್ಥಳ-574216 **– ಡಿ. ವೀರೇಂದ್ರ ಹೆಗ್ಗಡೆ**

30-6-80

# ಇಪ್ಪತ್ತನೆಯ ಸಂಪುಟದ ವಿಷಯಾನುಕ್ರಮಣಿಕೆ
## ಮಹಾಭಾರತ-ಶಲ್ಯಪರ್ವ

# ಸೌಪ್ತಿಕಪರ್ವ

## ದ್ವಿತೀಯ ಮುದ್ರಣದ ಪ್ರಸ್ತಾವನೆ

ಭಗವಂತನ ಅನುಗ್ರಹದಿಂದ 20ನೆಯ ಸಂಪುಟದ ಪುನರ್ಮುದ್ರಣವು ಮುಗಿದಿದೆ. 19ನೆಯ ಸಂಪುಟವನ್ನು ಹೊರತಂದು, 20ನೆಯ ಸಂಪುಟವನ್ನು ಹೊರತರಬೇಕಾಗಿದ್ದಿತು. ಆದರೆ ದುರ್ದೈವವಶಾತ್ ಮೈಸೂರಿನ ಒಂದು ಮುದ್ರಣಾಲಯದವರು 19ನೆಯ ಸಂಪುಟಕ್ಕಾಗಿ ಕಳುಹಿಸಿದ್ದ ಕಾಗದವನ್ನು ದುರುಪಯೋಗಪಡಿಸಿಕೊಂಡುದರಿಂದ 19ನೆಯ ಸಂಪುಟದ ಮುದ್ರಣವು ಸ್ಥಗಿತಗೊಂಡಿದೆ. ಸ್ವಲ್ಪ ದಿವಸಗಳಲ್ಲಿಯೇ 19ನೆಯ ಸಂಪುಟವನ್ನು ಹೊರತರುವ ವ್ಯವಸ್ಥೆ ಮಾಡಲಾಗುವುದು. ಮೈಸೂರು ಮುದ್ರಣಾಲಯ ದವರ ಅನೀತಿಯಿಂದಾಗಿ ಅಪಾರ ಕಷ್ಟ-ನಷ್ಟಗಳು ಸಂಭವಿಸಿವೆ. ಪರಮಾತ್ಮನ ದಯೆಯಿಂದ ಎಲ್ಲವೂ ಸರಿಹೋಗಬೇಕಾಗಿದೆ.

ಈ ಸಂಪುಟದ ತಪ್ಪು-ಒಪ್ಪುಗಳನ್ನು ನೋಡಿಕೊಟ್ಟ ಸಂಪಾದಕ ಮಂಡಲಿಯ ವಿದ್ವಾಂಸರಿಗೆ ಹೃತ್ಪೂರ್ವಕವಂದನೆಗಳು. ಪ್ರಸಕ್ತ 17 ಸಂಪುಟಗಳ ಪುನರ್ಮುದ್ರಣವಾಗಬೇಕಾಗಿದೆ. ಪರಮಾತ್ಮನ ದಯೆಯಿಂದ ಸಾಧ್ಯವಾದಷ್ಟು ಬೇಗ ಪುನರ್ಮುದ್ರಣಮಾಡುವ ಆಶಯವನ್ನು ಇಟ್ಟುಕೊಂಡಿರುತ್ತೇವೆ.

ಶ್ರೀಮದ್ವಾಲ್ಮೀಕಿರಾಮಾಯಣದ 2ನೆಯ ಸಂಪುಟವನ್ನು ಸೆಪ್ಟೆಂಬರ್ ಕಡೆಯೊಳಗಾಗಿ ಹೊರತರುವ ಆಶಯವಿದೆ. ಮಹಾಭಾರತದ ಗ್ರಾಹಕರೆಲ್ಲರೂ ರಾಮಾಯಣಕ್ಕೂ ಗ್ರಾಹಕರಾಗಿ ಪ್ರೋತ್ಸಾಹಿಸಬೇಕಾಗಿ ಪ್ರಾರ್ಥನೆ. ಮಹಾಭಾರತ-ರಾಮಾಯಣಗಳನ್ನು ಅನವರತವಾಗಿ ಪ್ರಚಾರ ಮಾಡುತ್ತಿರುವ ನಮ್ಮ ಹಿತೈಷಿಗಳೆಲ್ಲರಿಗೂ ಹೃತ್ಪೂರ್ವಕವಂದನೆಗಳು.

– ಪ್ರಕಾಶಕರು.

## ತೃತೀಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದಲೂ, ಶ್ರೀ ಗುರುಭಗವಂತನ ದಿವ್ಯಾಶೀರ್ವಾದದಿಂದಲೂ, ಸತ್ಪುರುಷರ ಸಹಕಾರ-ಸದಾಶಯಗಳಿಂದಲೂ ಶ್ರೀಮನ್ಮಹಾಭಾರತದ 20ನೆಯ ಸಂಪುಟದ ಮೂರನೆಯ ಮುದ್ರಣವನ್ನು ಮುಗಿಸುತ್ತಿದ್ದೇವೆ. 18–20–30 ಈ 3 ಸಂಪುಟಗಳು ಸಿದ್ಧವಾದರೆ ಸುಮಾರು ಐದುನೂರು ಮಂದಿ ಗ್ರಾಹಕರಿಗೆ ಮಹಾಭಾರತದ ಪೂರ್ಣಮಾಲೆಯು ದೊರೆಯುವಂತಾಗುತ್ತದೆ. 18 ಮತ್ತು 30ನೆಯ ಸಂಪುಟಗಳು ಡಿ.ಟಿ.ಪಿಯ ಮೂಲಕ ಸಿದ್ಧವಾಗುತ್ತಿವೆ. ಇವು ಪರಾವಲಂಬನೆಯಿಂದಲೇ ಮುಗಿಯ ಬೇಕಾಗಿರುವುದರಿಂದ ಯಾವಾಗ ಸಿದ್ಧವಾಗುತ್ತದೆಂಬುದನ್ನು ನಿಖರವಾಗಿ ತಿಳಿಸಲು ಸಾಧ್ಯವಾಗುವುದಿಲ್ಲ. ಭಗವಂತನ ದಯೆಯಿಂದ 2–3 ತಿಂಗಳಲ್ಲಿ ಮುಗಿಯಬಹುದೆನ್ನುವ ವಿಶ್ವಾಸವಿದೆ. ಗ್ರಾಹಕರು ದಯಮಾಡಿ ಸಹಕರಿಸಬೇಕು.

ಭಾರತ ದರ್ಶನದ ಮುದ್ರಣಾಲಯದಲ್ಲಿ ಭಾಗವತದ 4ನೆಯ ಸಂಪುಟದ ಮುದ್ರಣವಾಗುತ್ತಿದ್ದು ಅದು ಮುಗಿದ ನಂತರ ಮಹಾಭಾರತದ ಸಂಪುಟವನ್ನು ಪುನರ್ಮುದ್ರಣಕ್ಕೆ ತೆಗೆದುಕೊಳ್ಳಲಾಗುವುದು.

ರಾಮಾಯಣದ 11 ಸಂಪುಟಗಳೂ ಪ್ರಸಕ್ತ ಸಿಕ್ಕುತ್ತಿವೆ. ರಾಮಾಯಣ-ಭಾಗವತಗಳಿಗೆ ಗ್ರಾಹಕರಾಗದಿರುವ ಮಹಾಭಾರತದ ಗ್ರಾಹಕರು ರಾಮಾಯಣ-ಭಾಗವತಗಳಿಗೂ ಗ್ರಾಹಕರಾಗಿ ಒತ್ತಾಸೆ ನೀಡಬೇಕಾಗಿ ಕಳ-ಕಳಿಯಿಂದ ಪ್ರಾರ್ಥಿಸುತ್ತೇವೆ.

ಎಂದಿನಂತೆಯೇ ಈ ಸಂಪುಟದ ತಪ್ಪು-ಒಪ್ಪುಗಳನ್ನು ಸಂಪಾದಕ ಮಂಡಲಿಯ ವಿದ್ವಾಂಸರು ಪರಿಶೀಲಿಸಿಕೊಟ್ಟಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ಈ ಪವಿತ್ರಗ್ರಂಥಗಳ ಓದುಗರೆಲ್ಲರಿಗೂ ದಯಾಮಯನಾದ ಪರಮಾತ್ಮನು ಮನಸೋದ್ದಿಷ್ಟವಾದ ಕಾಮನೆಗಳನ್ನು ಪೂರೈಸಿಕೊಟ್ಟು ಕಾಪಾಡಲೆಂದು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ಸರ್ವೇ ಜನಾಃ ಸುಖಿನೋ ಭವನ್ತು ಸಮಸ್ತಸನ್ಮಙ್ಗಲಾನಿ ಭವನ್ತು.

– ಪ್ರಕಾಶಕರು

## ನಾಲ್ಕನೆಯ ಪುನರ್ಮುದ್ರಣದ ಪ್ರಸ್ತಾವನೆ

ದಯಾಮಯನಾದ ಭಗವಂತನ ದಿವ್ಯಾನುಗ್ರಹದಿಂದಲೂ ಶ್ರೀರಂಗ ಮಹಾಸದ್ಗುರುವಿನ ದಿವ್ಯಾಶೀರ್ವಾದದಿಂದಲೂ, ಸಜ್ಜನರ ಸಹಕಾರ ಸದಾಶಯಗಳಿಂದಲೂ ಇಪ್ಪತ್ತನೆಯ ಸಂಪುಟದ ನಾಲ್ಕನೆಯ ಪುನರ್ಮುದ್ರಣವನ್ನು ಮುಗಿಸುತ್ತಿದ್ದೇವೆ. ಪ್ರಸಕ್ತ ಗ್ರಾಹಕರಿಗೆ ೧೯ ಸಂಪುಟಗಳು ಸಿಕ್ಕುತ್ತವೆ. ಪರಮಾತ್ಮನ ದಯೆಯಿಂದ ಉಳಿದ ಸಂಪುಟಗಳ ಪುನರ್ಮುದ್ರಣವೂ ಬೇಗನೆ ಮುಗಿದು ಗ್ರಾಹಕರಿಗೆ ಹಂಚುವ ಆಶಯವಿದೆ. ಈ ಸಂಪುಟದ ಪುನರ್ಮುದ್ರಣಕ್ಕೆ ಧನಸಹಾಯಮಾಡಿರುವ ಮಹನೀಯರಿಗೆ ಹೃತ್ಪೂರ್ವಕ ವಂದನೆಗಳು.

ಭಗವಂತನು ಸಮಸ್ತರಿಗೂ ಶಾಂತಿ-ತುಷ್ಟಿ-ಪುಷ್ಟಿಗಳನ್ನು ದಯಪಾಲಿಸಲಿ.

15–8–2000 ಸ್ವಾತಂತ್ರ್ಯೋತ್ಸವದ ಶುಭದಿನದಂದು — ಪ್ರಕಾಶಕರು

## ಐದನೆಯ ಮುದ್ರಣದ ಪ್ರಸ್ತಾಪನೆ

ದಯಾಮಯನಾದ ಭಗವಂತನ ಕರುಣೆಯಿಂದಾಗಿ ಮತ್ತು ಸತ್ಪುರುಷರ ಸಹಕಾರದಿಂದ ಮಹಾಭಾರತದ 20ನೇ ಸಂಪುಟದ ಐದನೆಯ ಮುದ್ರಣವನ್ನು ಮುಗಿಸುತ್ತಿದ್ದೇವೆ. ಈಗ ಮಹಾಭಾರತ ರಾಮಾಯಣ, ಭಾಗವತ, ಹರಿವಂಶಗಳ ಎಲ್ಲ 58 ಸಂಪುಟಗಳೂ ಲಭ್ಯವಿವೆ.

ಈ ಸಂಪುಟದ ತಪ್ಪು-ಒಪ್ಪುಗಳನ್ನು ನೋಡಿಕೊಟ್ಟ ಸಂಪಾದಕ ಮಂಡಲಿಯ ವಿದ್ವಾಂಸರಿಗೆ ಅಭಿವಂದನೆಗಳು.

ಪರಮಾತ್ಮನ ಒಲುಮೆಗಾಗಿ ನಾವೆಲ್ಲರೂ ದಯಾಮಯನಾದ ಪರಮಾತ್ಮನನ್ನು ಪ್ರಾರ್ಥಿಸೋಣ.

— ಪ್ರಕಾಶಕರು.

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ ಶ್ರೀಮಜ್ಜಗದ್ಗುರುಶಂಕರಾಚಾರ್ಯ
ಶ್ರೀಮದ್ರಾಮಚಂದ್ರಾಪುರಮಠಸ್ಥ
**ಶ್ರೀಮದ್ರಾಘವೇಂದ್ರಭಾರತೀ ಶ್ರೀಸ್ವಾಮಿಭಿಃ**

ಅಸ್ಮದ್ರತ್ಯಂತ ಪ್ರಿಯಶಿಷ್ಯ ಕೇಶವಸುಬ್ರಹ್ಮಣ್ಯಕೌಶಿಕ, ಸಂಪಾದಕರು, ಭಾರತ ದರ್ಶನ ಪ್ರಕಾಶನ, ತ್ಯಾಗರಾಜನಗರ, ಬೆಂಗಳೂರು-28 ಇವರಿಗೆ,
**ಶ್ರೀಮನ್ನಾರಾಯಣಸ್ಮರಣಪುರಃಸ್ಸರಂ ಸಂದಿಷ್ಟೋ ಽಯಂ ಸಂದೇಶಃ**

ಅದಾಗಿ ವೇದಸದೃಶವಾದ ಶ್ರೀಮನ್ಮಹಾಭಾರತದ ಲಕ್ಷ ಸಂಖ್ಯಾ ಪರಿಮಿತ ಸಂಸ್ಕೃತಶ್ಲೋಕಗಳನ್ನೂ ಕನ್ನಡಕ್ಕೆ ಅನುವಾದಿಸುತ್ತಾ ಹಂತ-ಹಂತವಾಗಿ ಸಂಪುಟವೆಂಬ ಸಂಜ್ಞೆಯಿಂದ ಪ್ರಕಟಿಸುವ ನೀವು ಇದೀಗ ಇಪ್ಪತ್ತನೆಯ ಸಂಪುಟವನ್ನು ಪ್ರಕಾಶಿಸುತ್ತಿರುವುದನ್ನು ತಿಳಿದು ಬಹುಸಂತಸವಾಯಿತು. ಪರಮಾತ್ಮನು ಶ್ರೀಕೃಷ್ಣಾವತಾರದಲ್ಲಿ ಧರ್ಮನಿಷ್ಠರಾದ ಪಾಂಡವರನ್ನು ರಕ್ಷಣೆ ಮಾಡಿದ ವಿಷಯಗಳನ್ನು ಕಣ್ಮುಂದೆ ನಡೆದ ಘಟನೆಯಂತೆ ವರ್ಣಿಸುವ ಭಗವಾನ್ ವ್ಯಾಸರ ಕಥಾಶೈಲಿಯು-ಪ್ರತಿಯೊಬ್ಬರೂ ನಿರೀಕ್ಷಿಸಿ ಮೈಗೂಡಿಸಿ ಕೊಳ್ಳುವುದಾಗಿದೆಯೆಂಬುದು-ಇದನ್ನೋದಿದಾಗ ಅನುಭವಕ್ಕೆ ಬರುವುದಾಗಿದೆ. **ತವ ಪ್ರಸಾದಾದ್ಗೋವಿಂದ ರಾಜ್ಯಂ ನಿಹತಕಣ್ಟಕಮ್ । ಅಪ್ರಾಪ್ಯಂ ಮನಸಾಪೀದಂ ಪ್ರಾಪ್ತಮಸ್ಮಾಭಿರಚ್ಯುತ॥** ಎನ್ನುವ ಯುಧಿಷ್ಠಿರನ ಮಾತುಗಳೂ, **ದೋಷಾನ್ನಿಕ್ಷಿಪತಿ ಚಾನ್ಯೇಷಾಂ ನಾತ್ಮಾನಂ ಶಾಸ್ತುಮಿಚ್ಛತಿ॥** ಎಂಬ ವಿದುರೋಕಿಗಳೂ ಮಹತ್ವದ ಮನನೀಯವಿಷಯಗಳೆಂದು ಎಷ್ಟು ತಿಳಿದರೂ ಕಡಿಮೆಯೇ ಸರಿ. ಭಾವುಕರಾದ ಕನ್ನಡ ಕವಿಗಳ ವರ್ಣನೆಯಿಂದ ಮಾತ್ರ ಮಹಾಭಾರತದ ಕಥೆಗಳನ್ನು ತಿಳಿದವರು ಇದೀಗ ಕೃಷ್ಣದ್ವೈಪಾಯನರ ಉಕ್ತಿಗಳನ್ನೇ ಅನುವಾದಿಸಿ ಈ ಗ್ರಂಥಗಳಿಂದ ತಿಳಿಯಲನುವುಮಾಡಿದ ನಿಮ್ಮೀ ಸತ್ಪ್ರಯತ್ನವು ಶ್ಲಾಘನೀಯವೂ ಸ್ವಾಗತಾರ್ಹವೂ ಆಗಿದೆ.

ಇದರಂತೆ ಉಳಿದ ಸಂಪುಟಗಳೂ ಶೀಘ್ರವಾಗಿ ನಿರಾತಂಕವಾಗಿ ಪ್ರಕಟಗೊಳ್ಳಲಿ. ಕನ್ನಡ ಜನತೆಗೆ ಮೂಲಮಹಾಭಾರತದ ಪೂರ್ಣರಸಸ್ವಾದನೆಯ ಅಭಿರುಚಿ ವೃದ್ಧಿಗೊಂಡು ಘನಸರ್ಕಾರದ ಪ್ರೋತ್ಸಾಹವೂ ಲಭ್ಯವಾಗಿ ನಿಮ್ಮೀ ಸರಸ್ವತೀ ಸೇವೆಯು ನಿರಂತರ ಸಾಗುತ್ತಾ ಬಂದು ನೀವೆಲ್ಲರೂ ಶ್ರೀಪತಿಯ ಪೂರ್ಣಾನುಗ್ರಹಕ್ಕೆ ಪಾತ್ರರಾಗುವಂತಾಗಲೆಂದು ಹಾರೈಸುತ್ತೇವೆ.

ಶ್ರೀರೌದ್ರಿ ಸಂ। ನಿಜಜ್ಯೇಷ್ಠ
ತಾ॥ 27-6-80

ಇತಿ ಶ್ರೀಮನ್ನಾರಾಯಣಸ್ಮೃತಯಃ

ಶ್ರೀಮಹಾಗಣಪತಯೇ ನಮಃ ಶ್ರೀಮಹಾಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ



ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

# ಮಹಾಭಾರತ–ಶಲ್ಯಪರ್ವ–ಇಪ್ಪತ್ತನೆಯ ಸಂಪುಟ

೩೦ನೆಯ ಅಧ್ಯಾಯ ಗದಾಪರ್ವ

## ಕೃಪ–ಕೃತವರ್ಮಾಶ್ವತ್ಥಾಮರು ಸರೋವರದ ಸಮೀಪಕ್ಕೆ ಹೋಗಿ ಯುದ್ಧದ ವಿಷಯದಲ್ಲಿ ದುರ್ಯೋಧನನೊಡನೆ ಸಮಾಲೋಚನೆ ನಡೆಸಿದುದು : ಯುಧಿಷ್ಠಿರನು ವ್ಯಾಧರ ಮೂಲಕವಾಗಿ ದುರ್ಯೋಧನನಿರುವ ಸ್ಥಳವನ್ನು ಗುರುತಿಸಿ ಸೈನ್ಯಸಮೇತನಾಗಿ ಸರೋವರದ ಬಳಿಗೆ ಬಂದುದು : ಅಶ್ವತ್ಥಾಮಾದಿಗಳು ಯುಧಿಷ್ಠಿರನು ಬಂದುದನ್ನು ನೋಡಿ ದೂರಸರಿದುದು

ಧೃತರಾಷ್ಟ್ರನು ಹೇಳುತ್ತಾನೆ :

**ಹತೇಷು ಸರ್ವಸೈನ್ಯೇಷು ಪಾಣ್ಡುಪುತ್ರೈ ರಣಾಜಿರೇ ।**
**ಮಮ ಸೈನ್ಯಾವಶಿಷ್ಟಾಸ್ತೇ ಕಿಮಕುರ್ವತ ಸಂಜಯ ॥೧॥**

"ಸಂಜಯ! ರಣಾಂಗಣದಲ್ಲಿ ಪಾಂಡುಪುತ್ರರು ನಮ್ಮೆಲ್ಲ ಸೈನಿಕರನ್ನೂ ಸಂಹಾರಮಾಡಿದನಂತರ ನನ್ನ ಮಹಾಸೈನ್ಯದಲ್ಲಿ ಅವಶಿಷ್ಟರಾಗಿ ಉಳಿದಿದ್ದ ಮಹಾವೀರರಾದ ಕೃಪ-ಕೃತವರ್ಮರೂ ಮತ್ತು ವೀರ್ಯವಂತನಾದ ಅಶ್ವತ್ಥಾಮನೂ ಏನು ಮಾಡಿದರು? ಆ ಸಮಯದಲ್ಲಿ ಮಂದಬುದ್ಧಿಯಾದ ದುರ್ಯೋಧನರಾಜನೇನು ಮಾಡಿದನು? ಈ ವಿಷಯವನ್ನು ನನಗೆ ವಿವರಿಸಿ ಹೇಳು."

"ಮಹಾರಾಜ! ಮಹಾತ್ಮರಾದ ಕ್ಷತ್ರಿಯರ ಪತ್ನಿಯರು ಹಸ್ತಿನಾ ಪಟ್ಟಣಕ್ಕೆ ಹೊರಟುಹೋದನಂತರ ಶಿಬಿರಗಳಲ್ಲಿದ್ದ ರಾಜಸೇವಕರೆಲ್ಲರೂ

ನಗರಕ್ಕೆ ಪಲಾಯನಮಾಡಿದರು. ಯುದ್ಧಶಿಬಿರಗಳೆಲ್ಲವೂ ಶೂನ್ಯವಾಗಿ ಹೋದುವು. ಆ ಸಮಯದಲ್ಲಿ ಹತಶೇಷರಾಗಿದ್ದ ಮೂವರು ಮಹಾರಥರೂ ಬಹಳ ಉದ್ವಿಗ್ನರಾಗಿದ್ದರು. ಅಂದು ಸಂಜೆ ವಿಜಯಿಗಳಾಗಿದ್ದ ಪಾಂಡವರ ವಿಜಯಘೋಷಣೆಗಳನ್ನು ಕೇಳಿ ಮತ್ತು ಶಿಬಿರಗಳಲ್ಲಿದ್ದ ರಾಜಸೇವಕರೆಲ್ಲರೂ ಪಲಾಯನಮಾಡಿ ಶಿಬಿರಗಳು ಶೂನ್ಯವಾಗಿರುವುದನ್ನೂ ಕಂಡು ಆ ಮೂವರು ಮಹಾರಥರೂ ಶಿಬಿರದಲ್ಲಿ ಉಳಿದುಕೊಳ್ಳಲು ಇಚ್ಛಿಸಲಿಲ್ಲ. ದುರ್ಯೋಧನನನ್ನು ನೋಡಬೇಕೆಂಬ ಇಚ್ಛೆಯಿಂದ ಕೃತವರ್ಮ-ಕೃಪಾಶ್ವತ್ಥಾಮರು ಸರೋವರದ ಸಮೀಪಕ್ಕೆ ಹೋದರು.

ಅತ್ತಲಾಗಿ ಧರ್ಮಾತ್ಮನಾದ ಯುಧಿಷ್ಠಿರನೂ ತನಗೆ ಲಭಿಸಿದ ವಿಜಯದಿಂದ ಹೃಷ್ಟನಾಗಿ, ಕಡೆಯವನಾಗಿ ಉಳಿದುಕೊಂಡಿರುವ ದುರ್ಯೋಧನನನ್ನೂ ವಧಿಸುವ ಇಚ್ಛೆಯಿಂದ ತನ್ನ ಸಹೋದರರೊಡನೆ ಅವನನ್ನು ಹುಡುಕಿಕೊಂಡು ಸುತ್ತಾಡುತ್ತಿದ್ದನು. ನಿನ್ನ ಮಗನನ್ನು ಜಯಿಸಲು ಇಚ್ಛಿಸಿದ್ದ ಕ್ರುದ್ಧರಾಗಿದ್ದ ಪಾಂಡವರು ಪ್ರಯತ್ನಪೂರ್ವಕವಾಗಿ ಎಲ್ಲ ಕಡೆಗಳಲ್ಲಿಯೂ ಹುಡುಕಾಡಿದರು. ಎಷ್ಟೇ ಹುಡುಕಿದರೂ ನಿನ್ನ ಮಗನನ್ನವರು ಕಾಣಲೇ ಇಲ್ಲ. ನಾನು ಹಿಂದೆಯೇ ಹೇಳಿದ್ದಂತೆ ಗದಾಪಾಣಿಯಾಗಿದ್ದ ದುರ್ಯೋಧನನು ತೀವ್ರವಾದ ವೇಗದಿಂದ ಸರೋವರದ ಬಳಿಗೆ ಹೋಗಿ, ತನ್ನ ಮಾಯೆಯಿಂದ ಸರೋವರದ ನೀರನ್ನು ಸ್ತಂಭಿಸಿ, ಅದರೊಳಗೆ ಪ್ರವೇಶಿಸಿದ್ದನು. ಪಾಂಡವರು ದುರ್ಯೋಧನನನ್ನು ಹುಡುಕಲು ಹಲವು ಕಡೆಗಳಲ್ಲಿ ಸುತ್ತಾಡಿದರು. ಅವನು ಮಾತ್ರ ಸಿಗಲಿಲ್ಲ. ಅವರ ವಾಹನಗಳೂ ಬಹಳ ದೂರ ನಡೆದು ಬಳಲಿದ್ದುವು. ಆದುದರಿಂದ ಅವರೆಲ್ಲರೂ ಸೈನಿಕರೊಡನೆ ತಮ್ಮ ಶಿಬಿರಗಳಿಗೆ ಹಿಂದಿರುಗಿದರು.

ಪಾರ್ಥರು ತಮ್ಮ ಶಿಬಿರಗಳಲ್ಲಿ ವಿಶ್ರಾಂತಿಯನ್ನು ಪಡೆದು ಕೊಳ್ಳುತ್ತಿರಲಾಗಿ, ಕೃಪಾಶ್ವತ್ಥಾಮ-ಕೃತವರ್ಮರು ಮೆಲ್ಲ-ಮೆಲ್ಲನೆ ಸರೋವರದ ಬಳಿಗೆ ತೆರಳಿದರು. ರಾಜನು ಮಲಗಿದ್ದ ಆ ಸರೋವರದ ಸಮೀಪಕ್ಕೆ ಹೋಗಿ, ನೀರಿನಲ್ಲಿ ಮಲಗಿ ವಿಶ್ರಾಂತಿಯನ್ನು ಪಡೆದುಕೊಳ್ಳುತ್ತಿದ್ದ ದುರ್ಧರ್ಷನಾದ ರಾಜನನ್ನು ಕುರಿತು ಆ ಮೂವರೂ ಹೇಳಿದರು :

**ರಾಜನ್ನುತ್ತಿಷ್ಠ ಯುಧ್ಯಸ್ವ ಸಹಾಸ್ಮಾಭಿರ್ಯುಧಿಷ್ಠಿರಮ್ ।**
**ಜಿತ್ವಾ ವಾ ಪೃಥಿವೀಂ ಭುಂಕ್ಷ್ವ ಹತೋ ವಾ ಸ್ವರ್ಗಮಾಪ್ನುಹಿ ॥**

"ಮಹಾರಾಜ! ಮೇಲೇಳು. ನಮ್ಮೊಡನೆ ಕೂಡಿಕೊಂಡು ಯುಧಿಷ್ಠಿರನೊಡನೆ ಯುದ್ಧಮಾಡು. ಯುದ್ಧದಲ್ಲಿ ಯುಧಿಷ್ಠಿರನನ್ನು ಜಯಿಸಿ ಈ ಭೂಮಂಡಲವನ್ನಾದರೂ ಉಪಭೋಗಿಸು ಅಥವಾ ಯುದ್ಧದಲ್ಲಿ ಹತನಾಗಿ ವೀರಪುರುಷರಿಗೆ ಮಾತ್ರವೇ ಲಭ್ಯವಾಗುವ ಸ್ವರ್ಗವನ್ನಾದರೂ ಹೊಂದು.

ದುರ್ಯೋಧನ! ಅವರ ಕಡೆಯ ಎಲ್ಲ ಸೈನಿಕರನ್ನೂ ನೀನು ಈಗಾಗಲೇ ಸಂಹಾರಮಾಡಿರುವೆ. ಹತಶೇಷರಾಗಿ ಈಗ ಉಳಿದಿರುವ ಸೈನಿಕರೂ ಬಹಳವಾಗಿ ಪ್ರಹಾರಗಳನ್ನು ತಿಂದು ಗಾಯಗೊಂಡು ಬಳಲಿ ಬೆಂಡಾಗಿದ್ದಾರೆ. ಅವರಲ್ಲೀಗ ತ್ರಾಣವೇನೂ ಉಳಿದಿಲ್ಲ. ನಮ್ಮಿಂದಲೂ ರಕ್ಷಿತನಾಗಿ ಯುದ್ಧಮಾಡುವ ನಿನ್ನ ಪ್ರಹಾರವೇಗವನ್ನು ಸಹಿಸಿಕೊಳ್ಳಲು ಅವರೀಗ ಸಮರ್ಥರಾಗಿಲ್ಲ. ಆದುದರಿಂದ ನೀನೀಗಲೇ ಸರೋವರದಿಂದ ಹೊರಕ್ಕೆ ಬಂದು ಧರ್ಮರಾಜನೊಡನೆ ಯುದ್ಧವನ್ನು ಮಾಡು."

**ದಿಷ್ಟ್ಯಾ ಪಶ್ಯಾಮಿ ವೋ ಮುಕ್ತಾನೀದೃಶಾತ್ಪುರುಷಕ್ಷಯಾತ್ ।**
**ಪಾಣ್ಡುಕೌರವಸಮ್ಮರ್ದಾಜ್ಜೀವಮಾನಾನ್ನರರ್ಷಭಾನ್ ॥೧೪॥**

"ವೀರಶ್ರೇಷ್ಠರೇ! ಅಪಾರಜನಕ್ಷಯಕಾರಿಯಾದ ಪಾಂಡವ-ಕೌರವರ ಈ ಮಹಾಸಂಗ್ರಾಮದಿಂದ ಮುಕ್ತರಾಗಿ ಇನ್ನೂ ಜೀವದಿಂದ ಉಳಿದಿರುವ ಪುರುಷಶ್ರೇಷ್ಠರಾದ ನಿಮ್ಮನ್ನು ಸೌಭಾಗ್ಯವಶದಿಂದ ಕಾಣುತ್ತಿದ್ದೇನೆ. ವಿಶ್ರಾಂತಿಯನ್ನು ಪಡೆದು ಬಳಲಿಕೆಯನ್ನು ಪರಿಹಾರಮಾಡಿಕೊಂಡನಂತರ ನಾವೆಲ್ಲರೂ ಸೇರಿ ಪಾಂಡವರನ್ನು ಜಯಿಸೋಣ. ಈಗ ನೀವೂ ಬಹಳವಾಗಿ ಬಳಲಿರುತ್ತೀರಿ. ನಾವೂ ಬಾಣಗಳ ಪ್ರಹಾರಗಳಿಂದ ಬಹುವಾಗಿ ಗಾಯಗೊಂಡಿರುತ್ತೇವೆ. ಮೇಲಾಗಿ ಈ ಸಮಯದಲ್ಲಿ ಪಾಂಡವರ ಬಳಿಯಲ್ಲಿ ಇನ್ನೂ ಅಪಾರಸೈನ್ಯವು ಉಳಿದುಕೊಂಡಿದೆ. ಆದುದರಿಂದ ಈಗ ಅವರೊಡನೆ ಯುದ್ಧಮಾಡುವುದು ನನಗೆ ಸೂಕ್ತವಾಗಿ ಕಾಣುವುದಿಲ್ಲ. ಇಂತಹ ಸಮಯದಲ್ಲಿ ನೀವು ಯುದ್ಧದ ವಿಷಯದಲ್ಲಿ ಮಹೋತ್ಸಾಹವನ್ನು ಪ್ರಕಟಿಸುತ್ತಿರುವುದು ನನಗೆ ಅದ್ಭುತವಾಗಿ ಕಾಣುತ್ತಿಲ್ಲ. ನಮ್ಮ ವಿಷಯದಲ್ಲಿ ನೀವು ಶ್ರೇಷ್ಠವಾದ

ಭಕ್ತಿಯನ್ನಿಟ್ಟಿರುವುದರಿಂದಲೇ ಹೀಗೆ ಪ್ರೋತ್ಸಾಹಿಸುತ್ತಿರುವಿರೆಂಬ ವಿಷಯವೂ ನನಗೆ ತಿಳಿದಿದೆ. ಆದರೆ ಪರಾಕ್ರಮವನ್ನು ತೋರಲು ಇದು ಸಕಾಲವಾಗಿಲ್ಲ. ನಾನಿಲ್ಲಿ ಒಂದು ರಾತ್ರಿ ವಿಶ್ರಮಿಸಿಕೊಂಡನಂತರ ನಾಳೆ ನಿಮ್ಮ ಜೊತೆಯಲ್ಲಿ ಸೇರಿಕೊಂಡು ಶತ್ರುಗಳೊಡನೆ ಯುದ್ಧಮಾಡುತ್ತೇನೆ. ಈ ವಿಷಯದಲ್ಲಿ ನನಗೆ ಸಂಶಯವೇ ಇಲ್ಲ."

ಮಹಾರಾಜ! ದುರ್ಯೋಧನನು ಹೀಗೆ ಹೇಳಿದನಂತರವೂ ದ್ರೌಣಿಯು ಯುದ್ಧದುರ್ಮದನಾದ ರಾಜನೊಡನೆ ಹೇಳಿದನು :

"ಮಹಾರಾಜ! ನಿನಗೆ ಮಂಗಳವಾಗಲಿ. ಈಗಲೇ ನೀನು ಇಲ್ಲಿಂದ ಎದ್ದೇಳು. ನಾವೆಲ್ಲರೂ ಸೇರಿ ಶತ್ರುಗಳನ್ನು ಜಯಿಸೋಣ. ನಾನು ಮಾಡಿರುವ ಇಷ್ಟಾಪೂರ್ತಕರ್ಮಗಳು, ದಾನ, ನನ್ನ ಸತ್ಯನಿಷ್ಠೆ ಮತ್ತು ನಾನು ಮಾಡಿರುವ ಜಪ-ತಪಾದಿಗಳು ಇವುಗಳ ಮೇಲೆ ಆಣೆಯಿಟ್ಟು ಹೇಳುತ್ತೇನೆ. ನಾನೀಗ ಯುದ್ಧದಲ್ಲಿ ತೊಡಗಿದ್ದೇ ಆದರೆ ನಾನು ಸೋಮಕರೆಲ್ಲರನ್ನೂ ಸಂಹಾರಮಾಡುತ್ತೇನೆ. ರಾತ್ರಿಯು ಕಳೆಯುವುದರೊಳಗಾಗಿ ಶತ್ರುಗಳನ್ನು ಸಂಹರಿಸದಿದ್ದರೆ ಸತ್ಪುರುಷರಿಗೆ ಉಚಿತವಾದ ಮತ್ತು ಯಜ್ಞಗಳನ್ನು ಮಾಡಿದವರಿಗೆ ಪ್ರಾಪ್ತವಾಗುವ ಪ್ರಸನ್ನತೆಯನ್ನು (ಸಂತೋಷವನ್ನು) ನಾನು ಹೊಂದದಂತಾಗಲಿ. (ನನ್ನ ಮನಸ್ಸಿನಲ್ಲಿರುವ ಪ್ರಸನ್ನತೆಯು ನಾಶವಾಗಲಿ.) ಎಲ್ಲ ಪಾಂಚಾಲರನ್ನೂ ವಧೆಮಾಡದೆ ನಾನು ಈ ನನ್ನ ಕವಚವನ್ನು ಬಿಚ್ಚುವುದಿಲ್ಲ. ಸತ್ಯವಾದ ಈ ಮಾತನ್ನು ನಾನು ನಿನ್ನೊಡನೆ ಹೇಳುತ್ತಿದ್ದೇನೆ. ಗಮನವಿಟ್ಟು ಕೇಳು."

ಮಹಾರಾಜ! ಅವರೆಲ್ಲರೂ ಹೀಗೆ ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದಾಗ-ಭಾರವಾದ ಮಾಂಸವನ್ನು ಹೊತ್ತುಕೊಂಡು ದಾರಿನಡೆದು ಬಹಳವಾಗಿ ಆಯಾಸಗೊಂಡಿದ್ದ ಕೆಲವು ವ್ಯಾಧರು ನೀರು ಕುಡಿಯುವ ಸಲುವಾಗಿ ಅಕಸ್ಮಾತ್ ಆ ಸರೋವರದ ಸಮೀಪಕ್ಕೇ ಬಂದರು. ಆ ವ್ಯಾಧರೆಲ್ಲರೂ ಮರೆಯಲ್ಲಿ ನಿಂತಿದ್ದು ರಹಸ್ಯದಲ್ಲಿ ಅಶ್ವತ್ಥಾಮಾದಿಗಳು ಆಡಿದ ಮಾತುಗಳನ್ನೂ–ದುರ್ಯೋಧನನು ಹೇಳಿದುದನ್ನೂ ಕೇಳಿಸಿಕೊಂಡರು. ಆ ಸಮಯದಲ್ಲಿ ಯುದ್ಧಮಾಡುವುದರಲ್ಲಿಯೇ ಆಸಕ್ತಿಯನ್ನು ಹೊಂದಿದ್ದ ಮಹಾ

ಧನುಷ್ಮಂತರಾದ ಕೃತವರ್ಮ-ಕೃಪಾಶ್ವತ್ಥಾಮರು ಯುದ್ಧಮಾಡಲು ಸ್ವಲ್ಪ ವಾದರೂ ಇಚ್ಛೆಯಿಲ್ಲದಿದ್ದ ಕೌರವನನ್ನು ಯುದ್ಧಕ್ಕೆ ಹೊರಡುವಂತೆ ಬಹಳ ವಾಗಿ ನಿರ್ಬಂಧಿಸುತ್ತಿದ್ದರು. ಪ್ರೋತ್ಸಾಹಕರವಾದ ಹಲವು ಮಾತುಗಳಿಂದ ನೀರಿನಿಂದ ಹೊರಕ್ಕೆ ಬರುವಂತೆ ನಿರ್ಬಂಧಿಸುತ್ತಿದ್ದ ಕೌರವಮಹಾರಥರನ್ನು ಗಮನವಿಟ್ಟು ನೋಡಿ, ಯುದ್ಧಮಾಡಲು ಮನಸ್ಸಿಲ್ಲದ ರಾಜನು ನೀರಿ ನಲ್ಲಿಯೇ ಇರುವನೆಂಬುದನ್ನೂ ತಿಳಿದುಕೊಂಡು, ನೀರಿನಲ್ಲಿದ್ದ ದುರ್ಯೋ ಧನನಿಗೂ ಮತ್ತು ಮೂವರು ಕೌರವವೀರರಿಗೂ ನಡೆಯುತ್ತಿದ್ದ ಸಂಭಾಷಣೆ ಯನ್ನು ಆಲಿಸಿ ಕೇಳಿದ ಆ ಬೇಡರು ದುರ್ಯೋಧನರಾಜನು ನೀರಿನಲ್ಲಿಯೇ ವಿಶ್ರಮಿಸಿಕೊಳ್ಳುತ್ತಿರುವನೆಂಬುದನ್ನು ಅರಿತುಕೊಂಡರು. ಅದಕ್ಕೆ ಸ್ವಲ್ಪ ಹೊತ್ತಿಗೆ ಮುಂಚಿತವಾಗಿ ದುರ್ಯೋಧನನನ್ನು ಹುಡುಕಿಕೊಂಡು ತಿರುಗಾಡುತ್ತಿದ್ದ ಯುಧಿಷ್ಠಿರನು ಆಕಸ್ಮಿಕವಾಗಿ ಹಾದಿಯಲ್ಲಿ ಸಿಕ್ಕಿದ ಅದೇ ವ್ಯಾಧರನ್ನೇ ದುರ್ಯೋಧನನ ವಿಷಯವಾಗಿಯೇ ಪ್ರಶ್ನಿಸಿದ್ದನು. ಧರ್ಮರಾಜನು ದುರ್ಯೋಧನನ ವಿಷಯವಾಗಿ ಕೇಳಿದ್ದುದನ್ನು ವ್ಯಾಧರು ಸ್ಮರಿಸಿ ಕೊಂಡವರಾಗಿ ಮೆಲ್ಲ-ಮೆಲ್ಲನೆ ತಮ್ಮ-ತಮ್ಮಲ್ಲಿಯೇ ಮಾತನಾಡಿಕೊಂಡರು :

**ದುರ್ಯೋಧನಂ ಖ್ಯಾಪಯಾಮೋ ಧನಂ ದಾಸ್ಯತಿ ಪಾಣ್ಡವಃ ।**
**ಸುವ್ಯಕ್ತಮಿಹ ನಃ ಖ್ಯಾತೋ ಹ್ರದೇ ದುರ್ಯೋಧನೋ ನೃಪಃ ॥**

“ನಾವೀಗಲೇ ಹೋಗಿ ಯುಧಿಷ್ಠಿರನಿಗೆ ದುರ್ಯೋಧನನು ಇಲ್ಲಿರುವ ವಿಷಯವನ್ನು ಪ್ರಕಟಪಡಿಸಿಬಿಟ್ಟರೆ ರಾಜನು ನಮಗೆ ಹೇರಳವಾದ ಹಣ ವನ್ನು ಕೊಡುತ್ತಾನೆ. ದುರ್ಯೋಧನರಾಜನು ಈ ಸರೋವರದಲ್ಲಿ ಅಡಗಿ ಕೊಂಡಿರುವನೆಂಬುದು ನಮಗೆ ಸ್ಪಷ್ಟವಾಗಿ ತಿಳಿದುಹೋಯಿತು. ಆದುದ ರಿಂದ ಅಸಹನಶೀಲನಾದ ದುರ್ಯೋಧನನು ಈ ಸರೋವರದಲ್ಲಿ ಮಲಗಿ ವಿಶ್ರಮಿಸಿಕೊಳ್ಳುತ್ತಿರುವನೆಂಬ ವಿಷಯವನ್ನು ತಿಳಿಸಲು ಯುಧಿಷ್ಠಿರರಾಜ ನಿರುವೆಡೆಗೆ ನಾವೆಲ್ಲರೂ ಈಗಲೇ ಹೊರಟುಹೋಗೋಣ. ಧನುರ್ಧರನಾದ, ಧೀಮಂತನಾದ ಭೀಮಸೇನನಿಗೂ ಧೃತರಾಷ್ಟ್ರನ ಮಗನಾದ ದುರ್ಯೋಧನನು ಸರೋವರದ ನೀರಿನಲ್ಲಿ ಮಲಗಿರುವುದನ್ನು ತಿಳಿಸಿಬಿಡೋಣ. ನಮ್ಮ ಈ ರಹಸ್ಯಸ್ಫೋಟದಿಂದ ಸುಪ್ರೀತನಾದ ಭೀಮನು ನಮಗೆ ಅಪಾರಹಣವನ್ನು

ದಯಪಾಲಿಸುತ್ತಾನೆ. ನಮ್ಮ ರಕ್ತವನ್ನೇ ಶೋಷಿಸುವ, ಶುಷ್ಕವಾದ ಮತ್ತು ಹೊತ್ತುಕೊಂಡು ಹೋಗಲು ಬಹಳ ಕಷ್ಟಕರವಾಗಿ ಕಾಣುತ್ತಿರುವ ಈ ಮಾಂಸದಿಂದ ಏನಾಗಬೇಕಾಗಿದೆ? (ರಾಜನಿಂದ ಧನವನ್ನು ಪಡೆದನಂತರವಾದರೂ ಮಾಂಸಾಹರಣದ ಈ ಕಷ್ಟವು ತಪ್ಪುತ್ತದೆ.)" ಧನಾರ್ಥಿಗಳಾದ ಆ ವ್ಯಾಧರು ಸಂಪ್ರಹೃಷ್ಟರಾಗಿ ಹೀಗೆ ಪರಸ್ಪರವಾಗಿ ಮಾತನಾಡಿಕೊಂಡು ಮಾಂಸದ ಹೊರೆಯನ್ನು ಪುನಃ ಹಿಂದಿನಂತೆಯೇ ಹೊತ್ತುಕೊಂಡು ಪಾಂಡವರ ಶಿಬಿರದ ಕಡೆಗೆ ಪ್ರಯಾಣಮಾಡಿದರು.



ಪ್ರಹಾರಕುಶಲರಾದ, ಲಕ್ಷ್ಯಭೇದನದಲ್ಲಿ ಸಿದ್ಧಿಯನ್ನು ಪಡೆದಿದ್ದ ಪಾಂಡವರೂ ರಣರಂಗದಲ್ಲಿ ದುರ್ಯೋಧನನು ಇಲ್ಲದಿರುವುದನ್ನು ಗಮನಿಸಿ ಪಾಪಿಷ್ಠನಾದ ದುರ್ಯೋಧನನ ವಂಚನೆಯಿಂದ ಪಾರಾಗಬೇಕೆಂದು

(ವಂಚನೆಯನ್ನು ಪರಿಣಾಮಕಾರಿಯಾಗಿ ಎದುರಿಸಿ ಜಯಗಳಿಸಬೇಕೆಂದು) ಇಚ್ಛೆಸಿದವರಾಗಿ, ಅವನನ್ನು ಹುಡುಕಲು ರಣಾಂಗಣದ ಎಲ್ಲ ಕಡೆಗಳಿಗೂ ಚಾರರನ್ನು ಕಳುಹಿಸಿದರು. ಧರ್ಮರಾಜನ ಸೈನಿಕರು ಎಲ್ಲ ಕಡೆಗಳಲ್ಲಿಯೂ ಸುತ್ತಾಡಿಬಂದು ದುರ್ಯೋಧನನು ನಷ್ಟನಾಗಿ (ಯಾರ ಕಣ್ಣಿಗೂ ಬೀಳ ದಂತೆ) ಹೊರಟುಹೋಗಿರುವನೆಂಬ ವಾರ್ತೆಯನ್ನು ಏಕಮುಖವಾಗಿ ಹೇಳಿ



ದರು. ಚಾರರು ಹೇಳಿದ ಆ ಮಾತುಗಳನ್ನು ಕೇಳಿ ಯುಧಿಷ್ಠಿರರಾಜನು ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಅತ್ಯಗಾಧವಾದ ಚಿಂತೆಯಲ್ಲಿ ಮಗ್ನ ನಾದನು. ಹೀಗೆ ಪಾಂಡವರು ಖಿನ್ನಮನಸ್ಕರಾಗಿ ತಮ್ಮ ಶಿಬಿರದಲ್ಲಿ ಕುಳಿ ತಿರಲಾಗಿ, ಧನಲೋಭಿಗಳಾದ ವ್ಯಾಧರು ಸರೋವರದ ಪ್ರದೇಶದಿಂದ ಪಾಂಡ ವರ ಶಿಬಿರಗಳಿದ್ದ ಸ್ಥಳಕ್ಕೆ ಆಗಮಿಸಿದರು. ಅವರು ದುರ್ಯೋಧನನನ್ನು

ನೋಡಿ ಬಂದಿದ್ದರು. ಆದುದರಿಂದಲೇ ಪರಮಹೃಷ್ಟರಾಗಿದ್ದರು. ಕಾವಲುಗಾರರು ಬಾರಿ-ಬಾರಿಗೂ ತಡೆಯುತ್ತಿದ್ದರೂ ಭೀಮಸೇನನು ನೋಡುತ್ತಿದ್ದಂತೆಯೇ ಆ ಬೇಡರು ಶಿಬಿರದೊಳಕ್ಕೆ ನುಗ್ಗಿದರು. ಮರುಕ್ಷಣದಲ್ಲಿಯೇ ಅವರು ಪಾಂಡುಪುತ್ರನಾದ ಮಹಾಬಲನಾದ ಭೀಮಸೇನನ ಸಮೀಪದಲ್ಲಿ ನಿಂತು ಸರೋವರದ ಸಮೀಪದಲ್ಲಿ ಏನು ನಡೆಯಿತೋ, ಏನು ಕೇಳಿ ಬಂದಿತೋ–ಎಲ್ಲವನ್ನೂ ಭೀಮಸೇನನಿಗೆ ನಿವೇದಿಸಿದರು. ವ್ಯಾಧರು ನಿರೀಕ್ಷಿಸಿದ್ದಂತೆ ಪರಂತಪನಾದ ಭೀಮಸೇನನು ಅವರಿಗೆ ಅಪಾರವಾದ ಧನವನ್ನು ಪಾರಿತೋಷಿಕವಾಗಿ ಕೊಟ್ಟು ವ್ಯಾಧರು ಹೇಳಿದ ಎಲ್ಲ ವಿಷಯಗಳನ್ನೂ ಅಣ್ಣನಾದ ಧರ್ಮಜನಿಗೆ ತಿಳಿಸಿದನು.

**ಅಸೌ ದುರ್ಯೋಧನೋ ರಾಜನ್ವಿಜ್ಞಾತೋ ಮಮ ಲುಬ್ಧಕೈಃ ।**
**ಸಂಸ್ತಭ್ಯ ಸಲಿಲಂ ಶೇತೇ ಯಸ್ಯಾರ್ಥೇ ಪರಿತಪ್ಯಸೇ ॥೪೩॥**

“ಮಹಾರಾಜ! ನಾನು ಈ ವ್ಯಾಧರಿಂದ ದುರ್ಯೋಧನನು ಇರುವೆಡೆಯನ್ನು ತಿಳಿದುಕೊಂಡೆನು. ಯಾವನು ಸಿಕ್ಕಲಿಲ್ಲವೆಂದು ನೀನು ಬಹಳವಾಗಿ ಪರಿತಪಿಸುತ್ತಿರುವೆಯೋ–ಆ ದುರ್ಯೋಧನನು ಸರೋವರದ ನೀರನ್ನು ಸ್ತಂಭಿಸಿ ಅಲ್ಲಿಯೇ ಮಲಗಿದ್ದಾನೆ.”

ಭೀಮಸೇನನು ಹೇಳಿದ ಅತ್ಯಂತಪ್ರಿಯಕರವಾದ ಆ ಮಾತನ್ನು ಕೇಳಿ ಕುಂತಿಯ ಮಗನಾದ ಅಜಾತಶತ್ರುವು ತನ್ನ ಸಹೋದರರೊಡನೆ ಆನಂದಿತನಾದನು. ಮಹಾಧನುಷ್ಮಂತನಾದ ದುರ್ಯೋಧನನು ನೀರಿನಿಂದ ತುಂಬಿರುವ ಸರೋವರದಲ್ಲಿರುವನೆಂದು ತಿಳಿದೊಡನೆಯೇ ಯುಧಿಷ್ಠಿರನು ಶ್ರೀಕೃಷ್ಣನನ್ನು ಮುಂದೆಮಾಡಿಕೊಂಡು ಸರೋವರದ ಸಮೀಪಕ್ಕೆ ಧಾವಿಸಿದನು.

ಅನಂತರ ಪ್ರಹೃಷ್ಟರಾದ ಪಾಂಡವಸೈನಿಕರ ಮತ್ತು ಪಾಂಚಾಲಸೈನಿಕರ ಮಧ್ಯದಲ್ಲಿ ಕಿಲ-ಕಿಲಾಶಬ್ದವುಂಟಾಯಿತು. ಪ್ರಹೃಷ್ಟರಾದ ಕ್ಷತ್ರಿಯರು ಸಿಂಹನಾದಗಳನ್ನೂ, ಗರ್ಜನೆಯನ್ನೂ ಮಾಡತೊಡಗಿದರು ಮತ್ತು ತ್ವರೆಯಿಂದ ಕೂಡಿದವರಾಗಿ ದ್ವೈಪಾಯನಸರೋವರದ ಬಳಿಗೆ ತೆರಳಿದರು.

‘ಪಾಪಿಷ್ಠನಾದ ದುರ್ಯೋಧನನು ಎಲ್ಲಿರುವನೆಂಬುದು ತಿಳಿದು

ಹೋಯಿತು. ನಾವು ಅವನನ್ನು ನೋಡಿಬಿಟ್ಟೆವು.' ಹೀಗೆಂಬುದಾಗಿ ಪರಮ ಹೃಷ್ಟರಾಗಿದ್ದ ಸೋಮಕಸೈನಿಕರು ಕೂಗಿಕೊಳ್ಳುತ್ತಾ ಮುನ್ನಡೆಯುತ್ತಿದ್ದರು. ಬಹಳ ಶೀಘ್ರವಾಗಿ ಹೋಗುತ್ತಿದ್ದ, ವೇಗಯುಕ್ತವಾಗಿದ್ದ ಅವರ ರಥಗಳ ಭಯಂಕರವಾದ ಗಡ-ಗಡಾಶಬ್ದವು ಆಕಾಶಕ್ಕೂ ಮುಟ್ಟುವುದಾಗಿದ್ದಿತು. ದುರ್ಯೋಧನನನ್ನು ಹುಡುಕುವ ಇಚ್ಛೆಯಿಂದ ಭೀಮಾರ್ಜುನ-ನಕುಲ-ಸಹದೇವರು, ಪಾಂಚಾಲರಾಜನಾದ ಧೃಷ್ಟದ್ಯುಮ್ನ, ಅಪರಾಜಿತನಾದ ಶಿಖಂಡೀ, ಯುಧಾಮನ್ಯೂತ್ತಮೌಜಸರು, ಮಹಾರಥನಾದ ಸಾತ್ಯಕಿ, ದ್ರೌಪದಿಯ ಮಕ್ಕಳು, ಅಳಿದುಳಿದಿದ್ದ ಪಾಂಚಾಲ ಮಹಾರಥರು–ಇವರೆಲ್ಲರೂ ತಮ್ಮ ವಾಹನಗಳು ಬಹಳವಾಗಿ ಬಳಲಿದ್ದರೂ ಬಹಳ ತ್ವರೆಯಿಂದಲೇ ಯುಧಿಷ್ಠಿರನನ್ನು ಅನುಸರಿಸಿ ಹೋದರು. ಪಾಂಡವರ ಕಡೆಯಲ್ಲಿ ಅಳಿದುಳಿದಿದ್ದ ನೂರಾರು ಅಶ್ವ-ಗಜ-ಪದಾತಿಸೈನಿಕರೂ ಯುಧಿಷ್ಠಿರನನ್ನು ಅನುಸರಿಸಿ ಹೋದರು. ಸ್ವಲ್ಪಹೊತ್ತು ಪ್ರಯಾಣ ಮಾಡಿದನಂತರ ಪ್ರತಾಪವಂತನಾದ ಯುಧಿಷ್ಠಿರಮಹಾರಾಜನು ದುರ್ಯೋಧನನಿದ್ದ, ಮಹಾಘೋರವಾಗಿ ಕಾಣುತ್ತಿದ್ದ ದ್ವೈಪಾಯನ ಸರೋವರವನ್ನು ಸೇರಿದನು. ಆ ಸರೋವರದ ಜಲವು ಶುದ್ಧವಾಗಿಯೂ ಶೀತಲವಾಗಿಯೂ ಇದ್ದಿತು. ಅದು ನಿಶ್ಚಯವಾಗಿಯೂ ಎರಡನೆಯ ಸಮುದ್ರದಂತೆಯೇ ಕಾಣುತ್ತಿದ್ದಿತು. ಅತ್ಯದ್ಭುತವಾದ ಜಲಸ್ತಂಭನ ಮಂತ್ರವಿಧಿಯಿಂದಲೂ, ದೈವಯೋಗದಿಂದಲೂ ನಿನ್ನ ಮಗನು ಆ ಸರೋವರದ ನೀರನ್ನು ಸ್ತಂಭನಗೊಳಿಸಿ ಸರೋವರದ ಮಧ್ಯದಲ್ಲಿ ವಿಶ್ರಾಂತಿಯನ್ನು ಪಡೆದುಕೊಳ್ಳುತ್ತಿದ್ದನು.

ಮಹಾರಾಜ! ನಿನ್ನ ಮಗನು ಗದಾಪಾಣಿಯಾಗಿಯೇ ನೀರಿನ ಕೆಳಭಾಗದಲ್ಲಿ ಮಲಗಿದ್ದನು. ಆ ಸಮಯದಲ್ಲಿ ಅವನನ್ನು ನೋಡಲು ಯಾವ ಮನುಷ್ಯನಿಗೂ ಸಾಧ್ಯವಾಗುತ್ತಿರಲಿಲ್ಲ. ನೀರಿನಲ್ಲಿ ಹುದುಗಿಕೊಂಡು ಮಲಗಿದ್ದ ದುರ್ಯೋಧನರಾಜನು ಮೇಘದ ಗರ್ಜನೆಗೆ ಸದೃಶವಾಗಿದ್ದ ಮಹಾಭಯಂಕರಶಬ್ದವನ್ನು ಕೇಳಿದನು. ದುರ್ಯೋಧನನನ್ನು ಸಂಹರಿಸುವ ಸಲುವಾಗಿಯೇ ಯುಧಿಷ್ಠಿರನೂ ತನ್ನ ಸೋದರರೊಡನೆ ದ್ವೈಪಾಯನ ಸರೋವರದ ದಂಡೆಗೆ ಬಂದನು. ನೂರಾರು ಶಂಖಗಳ ಮಹಾಧ್ವನಿಗಳಿಂದಲೂ, ರಥಚಕ್ರಗಳ ಗಡ-ಗಡಾಶಬ್ದಗಳಿಂದಲೂ ಹಾದಿಯುದ್ದಕ್ಕೂ

ಧೂಳನ್ನೆಬ್ಬಿಸುತ್ತಾ ಭೂಮಿಯನ್ನೇ ನಡುಗಿಸುತ್ತಾ ಯುಧಿಷ್ಠಿರನು ಸೈನ್ಯಸಹಿತನಾಗಿ ಬಂದನು. ಆ ಸೈನ್ಯದ ಘೋರಶಬ್ದವನ್ನು ಕೇಳಿ ಮಹಾರಥರಾದ ಕೃತವರ್ಮ-ಕೃಪಾಶ್ವತ್ಥಾಮರು ದುರ್ಯೋಧನನೊಡನೆ ಹೇಳಿದರು :

"ಸಂಹೃಷ್ಟರಾದ, ವಿಜಯೋಲ್ಲಸಿತರಾದ ಪಾಂಡವರು ಸೈನ್ಯಸಮೇತರಾಗಿ ಇತ್ತಕಡೆಯೇ ಬರುತ್ತಿದ್ದಾರೆ. ಆದುದರಿಂದ ನಾವು ಇಲ್ಲಿಂದ ಹೊರಟುಹೋಗುತ್ತೇವೆ. ಅನುಮತಿಯನ್ನು ನೀಡು."



ದುರ್ಯೋಧನನು ವೇಗಶಾಲಿಗಳಾದ ಆ ಮೂವರು ಮಹಾರಥರೂ ಹೇಳಿದ ಮಾತಿಗೆ ಉತ್ತರವಾಗಿ 'ಹಾಗೆಯೇ ಆಗಲಿ'-ಎಂದು ಹೇಳಿ ಪುನಃ ತನ್ನ ಮಾಯೆಯಿಂದ ಸರೋವರದ ನೀರನ್ನು ಸ್ತಂಭಿಸಿದನು. ರಾಜನಿಂದ

ಅನುಮತಿಯನ್ನು ಪಡೆದ ಶೋಕಾಭಿಭೂತರಾಗಿದ್ದ ಕೃಪರೇ ಮೊದಲಾದ ಮಹಾರಥರು ಬಹಳ ದೂರಕ್ಕೆ ಹೊರಟುಹೋದರು. ಬಹಳ ದೂರ ಪ್ರಯಾಣಮಾಡಿದನಂತರ ಬಹಳವಾಗಿ ಬಳಲಿದ್ದ ಅವರು ಅಲ್ಲೊಂದು ಆಲದಮರವನ್ನು ನೋಡಿ ಅದರಡಿಯಲ್ಲಿ ದುರ್ಯೋಧನನನ್ನೇ ಕುರಿತು ಚಿಂತಿಸುತ್ತಾ ವಿಶ್ರಾಂತಿಯನ್ನು ಪಡೆದುಕೊಳ್ಳುತ್ತಿದ್ದರು. ಇತ್ತಲಾಗಿ ಮಹಾಬಲನಾದ ದುರ್ಯೋಧನನು ಜಲವನ್ನು ಸ್ತಂಭಿಸಿ ಪುನಃ ಮಲಗಿ ಕೊಂಡನು. ಅವನೊಡನೆ ಯುದ್ಧಮಾಡುವ ಇಚ್ಛೆಯಿಂದ ಪಾಂಡವರೂ ಆ ಸರೋವರವಿದ್ದ ಪ್ರದೇಶಕ್ಕೇ ಬಂದರು.

ಆಲದಮರದ ಸಮೀಪಕ್ಕೆ ಬಂದ ಕೃಪರೇ ಮೊದಲಾದ ಮೂವರು ಮಹಾರಥರೂ 'ಈಗ ಯುದ್ಧವು ಹೇಗೆ ನಡೆದೀತು? ದುರ್ಯೋಧನನ ಅವಸ್ಥೆಯೇನಾದೀತು? ಸರೋವರದ ತಳಭಾಗದಲ್ಲಿ ಮಲಗಿರುವ ದುರ್ಯೋಧನನನ್ನು ಪಾಂಡವರು ಯುದ್ಧಕ್ಕೆ ಹೇಗೆ ಸೆಳೆದುಕೊಳ್ಳುವರು?' ಇವೇ ಮುಂತಾಗಿ ಚಿಂತಿಸುತ್ತಾ ಕುದುರೆಗಳನ್ನು ರಥಗಳಿಂದ ಬಿಚ್ಚಿದರು. ಅನಂತರ ಅಲ್ಲಿಯೇ ಅವರು ಕುಳಿತು ವಿಶ್ರಾಂತಿಯನ್ನು ಪಡೆದು ಕೊಳ್ಳುತ್ತಿದ್ದರು."

ಃ೦ನೆಯ ಅಧ್ಯಾಯವು ಮುಗಿಯಿತು.

ಃ೧ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಪಾಂಡವರು ದ್ವೈಪಾಯನಸರೋವರಕ್ಕೆ ಹೋದುದು: ಯುಧಿಷ್ಠಿರ–ಕೃಷ್ಣರ ಮಾತುಕತೆ: ಸರೋವರದಲ್ಲಡಗಿದ್ದ ದುರ್ಯೋಧನನೊಡನೆ ಯುಧಿಷ್ಠಿರನ ಸಂಭಾಷಣೆ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ದುರ್ಯೋಧನನ ಅನುಜ್ಞೆಯನ್ನು ಪಡೆದು ಆ ಮೂವರು ಮಹಾರಥರೂ ಹೊರಟುಹೋದನಂತರ ದುರ್ಯೋಧನನಿದ್ದ ಆ ಸರೋವರದ ಸಮೀಪಕ್ಕೆ ಪಾಂಡವರೆಲ್ಲರೂ ಆಗಮಿಸಿದರು. ದ್ವೈಪಾಯನ ಸರೋವರದ ಸಮೀಪಕ್ಕೆ ಬಂದು ಸರೋವರದ ಜಲರಾಶಿಯು ದುರ್ಯೋಧನ

ನಿಂದ ಸ್ತಂಭಿಸಲ್ಪಟ್ಟಿರುವುದನ್ನು ನೋಡಿ ಕುರುವಂಶದ ಸುಪುತ್ರನಾದ ಯುಧಿಷ್ಠಿರನು ವಾಸುದೇವನೊಡನೆ ಹೇಳಿದನು :

"ವಾಸುದೇವ! ದುರ್ಯೋಧನನು ತನ್ನ ಮಾಯಾವಿದ್ಯೆಯನ್ನು ಈ ಸರೋವರದ ನೀರಿನ ಮೇಲೆ ಪ್ರಯೋಗಿಸಿರುವುದನ್ನಾದರೂ ನೋಡು :

**ವಿಷ್ಟಭ್ಯ ಸಲಿಲಂ ಶೇತೇ ನಾಸ್ಯ ಮಾನುಷತೋ ಭಯಮ್ ।**
**ದೈವೀಂ ಮಾಯಾಮಿಮಾಂ ಕೃತ್ವಾ ಸಲಿಲಾನ್ತರ್ಗತೋ ಹ್ಯಯಮ್ ॥**

ಜಲಸ್ತಂಭನಮಾಡಿ ಇವನಿಲ್ಲಿ ಮಲಗಿದ್ದಾನೆ. ಇವನಿಗೆ ಈಗ ಮನುಷ್ಯರಿಂದ ಯಾವ ಭಯವೂ ಇಲ್ಲ. ದೈವೀಮಾಯೆಯನ್ನು ಪ್ರಯೋಗಿಸಿ ದುರ್ಯೋಧನನು ಈಗ ನೀರಿನ ಕೆಳಭಾಗದಲ್ಲಿ ಮಲಗಿದ್ದಾನೆ. ಮೋಸದ ವಿದ್ಯೆಯಲ್ಲಿಯೇ ಪಾರಂಗತನಾಗಿರುವ ಇವನು ವಂಚನೆಯನ್ನೇ ಅವಲಂಬಿಸಿದರೂ ಜೀವಂತನಾಗಿ ನನ್ನಿಂದ ತಪ್ಪಿಸಿಕೊಳ್ಳಲಾರನು. ವಜ್ರಧರನಾದ ಇಂದ್ರನೇ ಸಾಕ್ಷಾತ್ ಇವನ ಸಹಾಯಕ್ಕೆ ಬಂದರೂ ಇವನು ಹತನಾಗುವುದನ್ನು ಎಲ್ಲ ಲೋಕಗಳ ಎಲ್ಲ ಪ್ರಜೆಗಳೂ ನೋಡುತ್ತಾರೆ."

**ಮಾಯಾವಿನ ಇಮಾಂ ಮಾಯಾಂ ಮಾಯಯಾ ಜಹಿ ಭಾರತ ।**
**ಮಾಯಾವೀ ಮಾಯಯಾ ವಧ್ಯಃ ಸತ್ಯಮೇತದ್ಯುಧಿಷ್ಠಿರ ॥೬॥**

"ಯುಧಿಷ್ಠಿರ! ಮಾಯಾವಿಯಾದ ದುರ್ಯೋಧನನ ಈ ಮಾಯೆಯನ್ನು ಮಾಯೆಯಿಂದಲೇ ನಿರಸನಗೊಳಿಸು. ಮಾಯಾವಿಯಾದವನನ್ನು ಮಾಯೆಯಿಂದಲೇ ವಧಿಸಬೇಕು. ಇದು ಸತ್ಯವಾದ ಮಾತು.

**ಕ್ರಿಯಾಭ್ಯುಪಾಯೈರ್ಬಹುಭಿರ್ಮಾಯಾಮಪ್ಸು ಪ್ರಯೋಜ್ಯ ಚ ।**
**ಜಹಿ ತ್ವಂ ಭರತಶ್ರೇಷ್ಠ ಮಾಯಾತ್ಮಾನಂ ಸುಯೋಧನಮ್ ॥೭॥**

ಭರತಶ್ರೇಷ್ಠನೇ! ಅನೇಕವಿಧವಾದ ಉಪಾಯಗಳಿಂದಲೂ ಕ್ರಿಯೆಗಳಿಂದಲೂ ನೀರಿನಲ್ಲಿ ಮಾಯಾವಿದ್ಯೆಯನ್ನು ಪ್ರಯೋಗಿಸಿ ಮಾಯಾಮಯನಾದ ದುರ್ಯೋಧನನನ್ನು ನೀನೀಗಲೇ ಸಂಹರಿಸು. ಮಾಯಾವಿಗಳನ್ನು ಮಾಯೆಯಿಂದಲೇ ಸಂಹಾರಮಾಡಿರುವ ಹಿಂದಿನ ನಿದರ್ಶನಗಳು ಅನೇಕವಿವೆ ; ಧರ್ಮಜ!

**ಕ್ರಿಯಾಭ್ಯುಪಾಯೈರಿನ್ದ್ರೇಣ ನಿಹತಾ ದೈತ್ಯದಾನವಾಃ ।**
**ಕ್ರಿಯಾಭ್ಯುಪಾಯೈರ್ಬಹುಭಿರ್ಬಲಿರ್ಬದ್ಧೋ ಮಹಾತ್ಮನಾ ॥೮॥**

**ಕ್ರಿಯಾಭ್ಯುಪಾಯೈರ್ಬಹುಭಿರ್ಹಿರಣ್ಯಾಕ್ಷೋ ಮಹಾಸುರಃ ।**
**ಹಿರಣ್ಯಕಶಿಪುಶ್ಚೈವ ಕ್ರಿಯಯೈವ ನಿಷೂದಿತೌ ॥೯॥**

**ವೃತ್ರಶ್ಚ ನಿಹತೋ ರಾಜನ್ಕ್ರಿಯಯೈವ ನ ಸಂಶಯಃ ।**
**ತಥಾ ಪೌಲಸ್ತ್ಯತನಯೋ ರಾವಣೋ ನಾಮ ರಾಕ್ಷಸಃ ॥೧೦॥**

**ರಾಮೇಣ ನಿಹತೋ ರಾಜನ್ಸಾನುಬನ್ಧಃ ಸಹಾನುಗಃ ।**
**ಕ್ರಿಯಯಾ ಯೋಗಮಾಸ್ಥಾಯ ತಥಾ ತ್ವಮಪಿ ವಿಕ್ರಮ ॥೧೧॥**

ಮಾಯಾವಿಗಳಾದ ದೈತ್ಯ-ದಾನವರನ್ನು ಇಂದ್ರನು ಉಪಾಯಗಳಿಂದ ಕೂಡಿದ ಕ್ರಿಯೆಗಳಿಂದಲೇ ಸಂಹರಿಸಿದನು. ಮಹಾತ್ಮನಾದ ವಾಮನನು ಅನೇಕವಿಧವಾದ ಉಪಾಯಗಳಿಂದ ಕೂಡಿದ ಕ್ರಿಯೆಗಳಿಂದಲೇ ಬಲಿಚಕ್ರ ವರ್ತಿಯನ್ನು ಬಂಧಿಸಿದನು. ಮಹಾಸುರನಾದ ಹಿರಣ್ಯಾಕ್ಷನ ವಧೆಯೂ ಅನೇಕವಿಧವಾದ ಉಪಾಯಗಳಿಂದ ಕೂಡಿದ ಕ್ರಿಯೆಗಳಿಂದಲೇ ನಡೆಯಿತು. ಇದೇ ವಿಧವಾದ ಉಪಾಯಯುಕ್ತವಾದ ಕ್ರಿಯೆಯಿಂದಲೇ ಹಿರಣ್ಯಕಶಿಪು ವನ್ನೂ ನೃಸಿಂಹನು ಸಂಹರಿಸಿದನು. ಅದೇ ರೀತಿಯಲ್ಲಿ ಬಂಧುಗಳಿಂದಲೂ ಅನುಯಾಯಿಗಳಿಂದಲೂ ಕೂಡಿದ ಪೌಲಸ್ತ್ಯನ ಮಗನಾದ ರಾವಣನೆಂಬ ರಾಕ್ಷಸನನ್ನು ಶ್ರೀರಾಮನು ಉಪಾಯಯುಕ್ತವಾದ ಕ್ರಿಯೆಗಳಿಂದಲೇ ಸಂಹರಿಸಿದನು. ಅದೇ ರೀತಿಯಲ್ಲಿ ನೀನೂ ಸಹ ಉಪಾಯಗಳಿಂದ ಯುಕ್ತವಾದ ಕ್ರಿಯೆಯಿಂದಲೇ ನಿನ್ನ ಪರಾಕ್ರಮವನ್ನು ಪ್ರದರ್ಶಿಸು.

**ಕ್ರಿಯಾಭ್ಯುಪಾಯೈರ್ನಿಹತೌ ಮಯಾ ರಾಜನ್ಪುರಾತನೌ ।**
**ತಾರಕಶ್ಚ ಮಹಾದೈತ್ಯೋ ವಿಪ್ರಚಿತ್ತಿಶ್ಚ ವೀರ್ಯವಾನ್ ॥೧೨॥**

ಮಹಾರಾಜ! ಹಿಂದೆ ನಾನಾದರೂ ಉಪಾಯಗಳಿಂದ ಕೂಡಿದ ಕಾರ್ಯಗಳಿಂದಲೇ ಮಹಾಸುರರಾದ ಮಹಾವೀರ್ಯವಂತರಾದ ತಾರಕ ಮತ್ತು ವಿಪ್ರಚಿತ್ತಿ ಎಂಬ ಮಹಾರಾಕ್ಷಸರನ್ನು ಸಂಹರಿಸಿದೆನು.

ವಾತಾಪಿರಿಲ್ವಲಶ್ಚೈವ ತ್ರಿಶಿರಾಶ್ಚ ತಥಾ ವಿಭೋ ।
ಸುನ್ದೋಪಸುನ್ದಾವಸುರೌ ಕ್ರಿಯಯೈವ ನಿಷೂದಿತೌ ।
ಕ್ರಿಯಾಭ್ಯುಪಾಯೈರಿನ್ದ್ರೇಣ ತ್ರಿದಿವಂ ಭುಜ್ಯತೇ ವಿಭೋ ॥೧೩॥



ಅಗಸ್ತ್ಯಮಹರ್ಷಿಗಳು ಇಲ್ವಲ-ವಾತಾಪಿಗಳನ್ನು ಉಪಾಯಯುಕ್ತವಾದ ಕ್ರಿಯೆಗಳಿಂದಲೇ ಸಂಹರಿಸಿದರು. ತ್ರಿಶಿರಸ ಮತ್ತು ಸುಂದೋಪಸುಂದರೂ ಇಂತಹ ಉಪಾಯಯುಕ್ತವಾದ ಕ್ರಿಯೆಗಳಿಂದಲೇ ನಿಧನ ಹೊಂದಿದರು. ಹೆಚ್ಚೇನು ಹೇಳಲಿ? ಧರ್ಮಜ! ಇಂದು ಇಂದ್ರನು ತ್ರೈಲೋಕ್ಯಾಧಿಪತ್ಯವನ್ನು ಅನುಭವಿಸುತ್ತಿರುವುದೂ ಉಪಾಯಗಳಿಂದ ಯುಕ್ತವಾದ ಕ್ರಿಯೆಗಳನ್ನು ಮಾಡುತ್ತಿರುವುದರಿಂದಲೇ ಆಗಿದೆ.

**ಕ್ರಿಯಾ ಬಲವತೀ ರಾಜನ್ನಾನ್ಯತ್ಕಿಂಚಿದ್ಯುಧಿಷ್ಠಿರ ।**
**ದೈತ್ಯಾಶ್ಚ ದಾನವಾಶ್ಚೈವ ರಾಕ್ಷಸಾಃ ಪಾರ್ಥಿವಾಸ್ತಥಾ ।**
**ಕ್ರಿಯಾಭ್ಯುಪಾಯೈರ್ನಿಹತಾಃ ಕ್ರಿಯಾಂ ತಸ್ಮಾತ್ಸಮಾಚರ ॥೧೯॥**

ಸಮಯೋಚಿತವಾಗಿ ನಾಲ್ಕು ಉಪಾಯಗಳನ್ನೂ ಪ್ರಯೋಗಿಸುತ್ತಾ ಕಾರ್ಯಮಾಡುವುದೇ ಬಲವತ್ತರವಾದುದು. ಅದನ್ನು ಬಿಟ್ಟು ಕಾರ್ಯ ಸಾಧನೆಗೆ ಬೇರೆಯ ವಿಧಾನವೇ ಇಲ್ಲ. ದೈತ್ಯ-ದಾನವ-ರಾಕ್ಷಸರೂ ಮತ್ತು ರಾಜರೂ ಉಪಾಯಯುಕ್ತವಾದ ಕ್ರಿಯೆಗಳಿಂದಲೇ ನಿಹತರಾದರು. ಆದುದರಿಂದ ಈ ಸಮಯದಲ್ಲಿ ನೀನೂ ಸಹ ಉಪಾಯದಿಂದ ಕೂಡಿದ ಕಾರ್ಯವನ್ನೇ ಮಾಡು.”

ಮಹಾರಾಜ! ವಾಸುದೇವನು ಹೀಗೆ ಹೇಳಿದನಂತರ ಕಠೋರ ವ್ರತನಿಷ್ಠನಾದ, ಕುಂತಿಯ ಮಗನಾದ ಯುಧಿಷ್ಠಿರನು ನೀರಿನಲ್ಲಿದ್ದ, ಮಹಾಬಲನಾದ ನಿನ್ನ ಮಗನನ್ನು ಕುರಿತು ನಗು-ನಗುತ್ತಲೇ ಈ ಮಾತುಗಳನ್ನು ಹೇಳಿದನು :

“ಸುಯೋಧನ! ನೀನು ಯಾವ ಕಾರಣದಿಂದಾಗಿ ನೀರಿನಲ್ಲಿ ಈ ಅನುಷ್ಠಾನವನ್ನು ಪ್ರಾರಂಭಿಸಿರುವೆ? ಭೂಮಂಡಲದಲ್ಲಿನ ಎಲ್ಲ ಕ್ಷತ್ರಿಯರನ್ನೂ ವಿನಾಶಗೊಳಿಸಿ, ನಿನ್ನ ಕುಲವನ್ನೂ ಧ್ವಂಸಗೊಳಿಸಿ ಈಗ ನಿನ್ನೊಬ್ಬನ ಪ್ರಾಣವನ್ನು ಉಳಿಸಿಕೊಳ್ಳುವ ಇಚ್ಛೆಯಿಂದ ಈ ಜಲಾಶಯವನ್ನು ಪ್ರವೇಶಿಸಿರುವೆಯಾ? (ನೀನು ಈ ರೀತಿಯಲ್ಲಿ ನಿನ್ನ ಪ್ರಾಣವನ್ನುಳಿಸಿಕೊಳ್ಳುವ ಸಾಧ್ಯತೆಯಿಲ್ಲ.) ಆದುದರಿಂದ ನೀರಿನಿಂದ ಮೇಲೆದ್ದು ಬಾ. ನಮ್ಮೊಡನೆ ಯುದ್ಧಮಾಡು.

**ಸ ತೇ ದರ್ಪೋ ನರಶ್ರೇಷ್ಠ ಸ ಚ ಮಾನಃ ಕ್ವ ತೇ ಗತಃ ।**
**ಯಸ್ತ್ವಂ ಸಂಸ್ತಭ್ಯ ಸಲಿಲಂ ಭೀತೋ ರಾಜನ್ವ್ಯವಸ್ಥಿತಃ ॥೨೦॥**

ಭಯಗೊಂಡಿರುವ ನೀನು ಜಲಸ್ತಂಭನಮಾಡಿ ಈ ಸರೋವರದಲ್ಲಿ ಅಡಗಿಕೊಂಡಿರುವೆಯಲ್ಲವೇ? ನಿನ್ನ ಆ ದರ್ಪವೆಲ್ಲಿ ಹೋಯಿತು? ನಿನ್ನ ಆ ಹಿಂದಿನ ಅಭಿಮಾನವಾದರೂ ಎಲ್ಲಿ ಹೋಯಿತು? (ನಿನ್ನ ಅಭಿಮಾನ-ದರ್ಪಗಳೆರಡೂ ಹಾಳಾಗಿಹೋದುವೇ?)

**ಸರ್ವೇ ತ್ವಾಂ ಶೂರ ಇತ್യೇವಂ ಜನಾ ಜಲ್ಪನ್ತಿ ಸಂಸದಿ ।**
**ವ್ಯರ್ಥಂ ತದ್ಭವತೋ ಮನ್ಯೇ ಶೌರ್ಯಂ ಸಲಿಲಶಾಯನಃ ॥೨೧॥**

ತುಂಬಿದ ಸಭೆಯಲ್ಲಿ ನಿನ್ನನ್ನು ಎಲ್ಲರೂ ಶೂರ-ವೀರನೆಂದು ಕೊಂಡಾಡುತ್ತಿದ್ದರು. ಭಯಗೊಂಡು ನೀರಿನ ಮಧ್ಯದಲ್ಲಿ ಮಲಗಿರುವ ನಿನ್ನ ಆ ಶೌರ್ಯವು ವ್ಯರ್ಥವಾದುದೆಂದೇ ನಾನು ಭಾವಿಸುತ್ತೇನೆ.

**ಉತ್ತಿಷ್ಠ ರಾಜನ್ಯುಧ್ಯಸ್ವ ಕ್ಷತ್ರಿಯೋಽಸಿ ಕುಲೋದ್ಭವಃ ।**
**ಕೌರವೇಯೋ ವಿಶೇಷೇಣ ಕುಲಂ ಜನ್ಮ ಚ ಸಂಸ್ಮರ ॥೨೨॥**

ದುರ್ಯೋಧನರಾಜನೇ! ನೀನು ಕ್ಷತ್ರಿಯನಾಗಿರುವೆ. ಸತ್ಕುಲ ಪ್ರಸೂತನಾಗಿರುವೆ. ಮೇಲಾಗಿ ಶ್ರೇಷ್ಠವಾದ ಕುರುವಂಶದಲ್ಲಿ ಜನ್ಮ ತಾಳಿರುವೆ. ಆದುದರಿಂದ ನಿನ್ನ ಶ್ರೇಷ್ಠವಾದ ಕುಲವನ್ನೂ ಮತ್ತು ಜನ್ಮವನ್ನೂ ಸ್ಮರಿಸಿಕೊಂಡು ಮೇಲೆದ್ದು ಬಂದು ನಮ್ಮೊಡನೆ ಯುದ್ಧಮಾಡು.

**ಸ ಕಥಂ ಕೌರವೇ ವಂಶೇ ಪ್ರಶಂಸಞ್ಜನ್ಮ ಚಾತ್ಮನಃ ।**
**ಯುದ್ಧಾದ್ಭೀತಸ್ತತಸ್ತೋಯಂ ಪ್ರವಿಶ್ಯ ಪ್ರತಿತಿಷ್ಠಸಿ ॥೨೩॥**

ಕುರುವಂಶದಲ್ಲಿ ಜನ್ಮವನ್ನು ಪಡೆದುದರಿಂದ ನಿನ್ನನ್ನೇ ನೀನು ಬಹಳವಾಗಿ ಪ್ರಶಂಸೆಮಾಡಿಕೊಳ್ಳುತ್ತಿದ್ದೆ. ಅಂತಹ ನೀನು ಯುದ್ಧಮಾಡಲು ಭಯಗೊಂಡು ಸರೋವರವನ್ನು ಪ್ರವೇಶಿಸಿ ಹೇಗೆ ತಾನೇ ಕುಳಿತಿರುವೆ?

**ಅಯುದ್ಧಮವ್ಯವಸ್ಥಾನಂ ನೈಷ ಧರ್ಮಃ ಸನಾತನಃ ।**
**ಅನಾರ್ಯಜುಷ್ಟಮಸ್ವರ್ಗ್ಯಂ ರಣೇ ರಾಜನ್ಪಲಾಯನಮ್ ॥೨೪॥**

ಯುದ್ಧಮಾಡದೇ ಇರುವುದೂ ಮತ್ತು ಯುದ್ಧದಲ್ಲಿ ಸ್ಥಿರವಾಗಿ ನಿಲ್ಲದೇ ಶತ್ರುವಿಗೆ ಬೆನ್ನುತೋರಿಸಿಕೊಂಡು ಓಡಿಹೋಗುವುದೂ–ಸನಾತನ ಧರ್ಮವಲ್ಲ. ನೀಚಪುರುಷರಾದವರು ಮಾತ್ರವೇ ಇಂತಹ ಕುತ್ಸಿತವಾದ ಮಾರ್ಗವನ್ನು ಅವಲಂಬಿಸುತ್ತಾರೆ. ಮೇಲಾಗಿ ಈ ಮಾರ್ಗವು ಸ್ವರ್ಗಪ್ರಾಪಕವೂ ಅಲ್ಲ.

**ಕಥಂ ಪಾರಮಗತ್ವಾ ಹಿ ಯುದ್ಧೇ ತ್ವಂ ವೈ ಜಿಜೀವಿಷುಃ ।**
**ಇಮಾನ್ನಿಪತಿತಾನ್ದೃಷ್ಟ್ವಾ ಪುತ್ರಾನ್ಭ್ರಾತೄನ್ಪಿತೄಂಸ್ತಥಾ ॥೨೫॥**

ಸಮ್ಬನ್ಧಿನೋ ವಯಸ್ಯಾಂಶ್ಚ ಮಾತುಲಾನ್ಬಾನ್ಧವಾಂಸ್ತಥಾ ।
ಘಾತಯಿತ್ವಾ ಕಥಂ ತಾತ ಹ್ರದೇ ತಿಷ್ಠಸಿ ಸಾಮ್ಪ್ರತಮ್ ॥೨೬॥

ಯುದ್ಧದ ಪಾರವನ್ನೇ ಇನ್ನೂ ಕಾಣದೆ ನೀನು ಹೇಗೆ ತಾನೇ ಜೀವಿಸಲು ಇಚ್ಛಿಸುತ್ತಿರುವೆ? (ಅದು ನಿನಗೆ ಹೇಗೆ ತಾನೇ ಸಾಧ್ಯವಾಗುವುದು?) ಮಕ್ಕಳು, ಪಿತೃಗಳು, ಅಣ್ಣ-ತಮ್ಮಂದಿರು, ಸಂಬಂಧಿಗಳು, ಸ್ನೇಹಿತರು, ಸೋದರಮಾವಂದಿರು, ಬಾಂಧವರು–ಈ ಎಲ್ಲರನ್ನೂ ನಿನ್ನ ಸಲುವಾಗಿ ಸಾಯಗೊಟ್ಟು ಅವರೆಲ್ಲರೂ ರಣಭೂಮಿಯಲ್ಲಿ ಸತ್ತುಬಿದ್ದಿರುವುದನ್ನು ನೋಡಿಯೂ ನೀನೀಗ ಈ ಸರೋವರದಲ್ಲಿ ಹೇಗೆ ತಾನೇ ಅಡಗಿಕೊಂಡಿರುವೆ?

ಶೂರಮಾನೀ ನ ಶೂರಸ್ತ್ವಂ ಮೃಷಾ ವದಸಿ ಭಾರತ ।
ಶೂರೋಽಹಮಿತಿ ದುರ್ಬುದ್ಧೇ ಸರ್ವಲೋಕಸ್ಯ ಶೃಣ್ವತಃ ॥೨೭॥

ನೀನು ನಿನ್ನನ್ನು ಮಹಾಶೂರನೆಂದು ಭಾವಿಸಿಕೊಂಡಿರುವೆ. ಆದರೆ ನಿಶ್ಚಯವಾಗಿಯೂ ನೀನು ಶೂರನಲ್ಲ. ದುರ್ಬುದ್ಧಿಯೇ! ನೀನು ಎಲ್ಲರೂ ಕೇಳುವಂತೆಯೇ ವ್ಯರ್ಥವಾಗಿ 'ಶೂರೋಽಹಂ'-'ನಾನೇ ಮಹಾಶೂರ' ಎಂದು ಸುಳ್ಳುಹೇಳುತ್ತಿರುವೆ.

ನ ಹಿ ಶೂರಾಃ ಪಲಾಯನ್ತೇ ಶತ್ರೂನ್ದೃಷ್ಟ್ವಾ ಕಥಞ್ಚನ ।
ಬ್ರೂಹಿ ವಾ ತ್ವಂ ಯಯಾ ವೃತ್ತ್ಯಾ ಶೂರ ತ್ಯಜಸಿ ಸಂಗರಮ್ ॥೨೮॥

ವಾಸ್ತವವಾಗಿ ಶೂರರಾದವರು ಶತ್ರುಗಳನ್ನು ನೋಡಿ ಯಾವುದೇ ಕಾರಣದಿಂದಲೂ ಪಲಾಯನಮಾಡುವುದಿಲ್ಲ. ಶೂರಮಾನಿಯೇ! ನಿಜವಾಗಿ ಹೇಳು. ನೀನು ಯಾವ ವೃತ್ತಿಯ ಅವಲಂಬನೆಯಿಂದ ಯುದ್ಧವನ್ನು ತ್ಯಜಿಸಿ ಇಲ್ಲಿಗೆ ಬಂದು ನೀರಿನಲ್ಲಿ ಅವಿತಿಟ್ಟುಕೊಂಡಿರುವೆ?

ಸ ತ್ವಮುತ್ತಿಷ್ಠ ಯುಧ್ಯಸ್ವ ವಿನೀಯ ಭಯಮಾತ್ಮನಃ ।
ಘಾತಯಿತ್ವಾ ಸರ್ವಸೈನ್ಯಂ ಭ್ರಾತೄಂಶ್ಚೈವ ಸುಯೋಧನ ॥೨೯॥
ನೇದಾನೀಂ ಜೀವಿತೇ ಬುದ್ಧಿಃ ಕಾರ್ಯಾ ಧರ್ಮಚಿಕೀರ್ಷಯಾ ।
ಕ್ಷತ್ರಧರ್ಮಮುಪಾಶ್ರಿತ್ಯ ತ್ವದ್ವಿಧೇನ ಸುಯೋಧನ ॥೩೦॥

ಸುಯೋಧನ! ನಿನ್ನ ಮನಸ್ಸಿನಲ್ಲಿರುವ ಭಯವನ್ನು ತೊರೆದು ಮೇಲೆದ್ದು ಬಾ. ನಮ್ಮೊಡನೆ ಯುದ್ಧಮಾಡು. ಕ್ಷತ್ರಧರ್ಮವನ್ನು ಆಶ್ರಯಿಸಿರುವ ನಿನ್ನಂತಹವನು ಸಹೋದರರನ್ನೂ, ಎಲ್ಲ ಸೈನಿಕರನ್ನೂ ಸಾಯಗೊಟ್ಟು ಧರ್ಮವನ್ನಾಚರಿಸುವೆನೆಂಬ ಇಚ್ಛೆಯಿಂದ ಜೀವವನ್ನುಳಿಸಿಕೊಳ್ಳಲು ಪ್ರಯತ್ನಿಸುವುದು ಖಂಡಿತವಾಗಿಯೂ ಯುಕ್ತವಲ್ಲ. (ಕ್ಷತ್ರಿಯಧರ್ಮವನ್ನು ಆಚರಿಸಲು ಇಚ್ಛಿಸುವವನು ಪ್ರಾಣದ ಮೇಲೆ ಆಸೆಯಿಟ್ಟುಕೊಳ್ಳುವುದು ಯುಕ್ತವಲ್ಲ.)

**ಯತ್ತು ಕರ್ಣಮುಪಾಶ್ರಿತ್ಯ ಶಕುನಿಂ ಚಾಪಿ ಸೌಬಲಮ್ ।**
**ಅಮರ್ತ್ಯ ಇವ ಸಮ್ಮೋಹಾತ್ತ್ವಮಾತ್ಮಾನಂ ನ ಬುದ್ಧವಾನ್ ॥೩೧॥**

**ತತ್ಪಾಪಂ ಸುಮಹತ್ಕೃತ್ವಾ ಪ್ರತಿಯುದ್ಧ್ಯಸ್ವ ಭಾರತ ।**
**ಕಥಂ ಹಿ ತ್ವದ್ವಿಧೋ ಮೋಹಾದ್ರೋಚಯೇತ ಪಲಾಯನಮ್ ॥೩೨॥**

ನೀನು ಕರ್ಣನನ್ನೂ ಮತ್ತು ಶಕುನಿಯನ್ನೂ ಆಶ್ರಯಿಸಿ ಮೋಹವಶನಾಗಿ ಅಮರನೆಂದೇ ಭಾವಿಸಿಕೊಂಡುಬಿಟ್ಟೆ. 'ನಾನೂ ಒಬ್ಬ ಮರಣಧರ್ಮವಿರುವವನು'–ಎಂಬುದನ್ನು ನೀನು ಅರಿತುಕೊಳ್ಳಲೇ ಇಲ್ಲ. ಈ ಕಾರಣದಿಂದಲೇ ನಮ್ಮ ವಿಷಯದಲ್ಲಿ ಅನೇಕವಾದ ಪಾಪಕಾರ್ಯಗಳನ್ನೂ ಮಾಡಿರುವ ನೀನು ನಮ್ಮೊಡನೆ ಯುದ್ಧಮಾಡು. ನಿನ್ನಂತಹ ವೀರಪುರುಷನು ಮೋಹವಶನಾಗಿ ಯುದ್ಧದಲ್ಲಿ ಪಲಾಯನಮಾಡುವುದನ್ನು ಹೇಗೆ ತಾನೇ ಇಚ್ಛಿಸುವನು?

**ಕ್ವ ತೇ ತತ್ಪೌರುಷಂ ಯಾತಂ ಕ್ವ ಚ ಮಾನಃ ಸುಯೋಧನ ।**
**ಕ್ವ ಚ ವಿಕ್ರಾನ್ತತಾ ಯಾತಾ ಕ್ವ ಚ ವಿಸ್ಫೂರ್ಜಿತಂ ಮಹತ್ ॥೩೩॥**

**ಕ್ವ ತೇ ಕೃತಾಸ್ತ್ರತಾ ಯಾತಾ ಕಿಂ ಚ ಶೇಷೇ ಜಲಾಶಯೇ ।**
**ಸ ತ್ವಮುತ್ತಿಷ್ಠ ಯುಧ್ಯಸ್ವ ಕ್ಷತ್ರಧರ್ಮೇಣ ಭಾರತ ॥೩೪॥**

ಸುಯೋಧನ! ನಿನ್ನ ಆ ಪೌರುಷವೆಲ್ಲಿ ಹೋಯಿತು? ನಿನ್ನ ಆ ದುರಭಿಮಾನವೆಲ್ಲಿ ಹೋಯಿತು? ನಿನ್ನ ಆ ಪರಾಕ್ರಮವೆಲ್ಲಡಗಿತು? ನಿನ್ನ ಆ ಮಹಾಗರ್ಜನೆಯು ಎಲ್ಲಿಗೆ ಹೋಯಿತು? ನಿನ್ನ ಆ ಅಸ್ತ್ರವಿದ್ಯೆಯೂ ಎಲ್ಲಿ ಹೋಯಿತು? ಈ ಜಲಾಶಯದಲ್ಲಿ ಇನ್ನೂ ನೀನು ಏಕೆ ಮಲಗಿರುವೆ?

ಮೇಲೇಳು, ಸುಯೋಧನ! ಕ್ಷತ್ರಧರ್ಮಾನುಸಾರವಾಗಿ ನಮ್ಮೊಡನೆ ಯುದ್ಧಮಾಡು.

**ಅಸ್ಮಾಂಸ್ತು ವಾ ಪರಾಜಿತ್ಯ ಪ್ರಶಾಧಿ ಪೃಥಿವೀಮಿಮಾಮ್ ।**
**ಅಥವಾ ನಿಹತೋಽಸ್ಮಾಭಿರ್ಭೂಮೌ ಸ್ವಪ್ಸ್ಯಸಿ ಭಾರತ ॥೩೫॥**

ಯುದ್ಧದಲ್ಲಿ ನಮ್ಮನ್ನಾದರೂ ಪರಾಜಯಗೊಳಿಸಿ ಈ ಭೂಮಂಡಲ ವನ್ನಾದರೂ ಶಾಸನಮಾಡು. ಅಥವಾ ನಮ್ಮಿಂದ ಹತನಾಗಿ ರಣಭೂಮಿಯಲ್ಲಾದರೂ ಮಲಗು.

**ಏಷ ತೇ ಪರಮೋ ಧರ್ಮಃ ಸೃಷ್ಟೋ ಧಾತ್ರಾ ಮಹಾತ್ಮನಾ ।**
**ತಂ ಕುರುಷ್ವ ಯಥಾತಥ್ಯಂ ರಾಜಾ ಭವ ಮಹಾರಥ ॥೩೬॥**

ಈ ಸಮಯದಲ್ಲಿ ಯುದ್ಧಮಾಡುವುದೇ ನಿನಗೆ ಶ್ರೇಷ್ಠವಾದ ಧರ್ಮ. ಮಹಾತ್ಮನಾದ ಬ್ರಹ್ಮನು ಕ್ಷತ್ರಿಯನಾದವನಿಗೆ ಈ ಧರ್ಮವನ್ನೇ ಸೃಷ್ಟಿಸಿದ್ದಾನೆ. ಈ ಸನಾತನಧರ್ಮವನ್ನು ಯಥಾವತ್ತಾಗಿ ಪರಿಪಾಲಿಸು. ಮಹಾರಥನೇ! ರಾಜಯೋಗ್ಯವಾದ ರೀತಿಯಲ್ಲಿ ವರ್ತಿಸು.”

ಮಹಾರಾಜ! ಧೀಮಂತನಾದ ಧರ್ಮಪುತ್ರನು ಹೀಗೆ ಹೇಳಿದ ನಂತರ ನೀರಿನೊಳಗಿದ್ದ ನಿನ್ನ ಮಗನು ಹೇಳಿದನು :

**ನೈತಚ್ಚಿತ್ರಂ ಮಹಾರಾಜ ಯದ್ಭೀಃ ಪ್ರಾಣಿನಮಾವಿಶೇತ್ ।**
**ನ ಚ ಪ್ರಾಣಭಯಾದ್ಭೀತೋ ವ್ಯಪಯಾತೋಽಸ್ಮಿ ಭಾರತ ॥೩೮॥**

“ಮಹಾರಾಜ! ಭಯವು ಪ್ರಾಣಿಮಾತ್ರವನ್ನು ಆವರಿಸುವುದೆಂಬುದ ರಲ್ಲಿ ಆಶ್ಚರ್ಯವೇನೂ ಇಲ್ಲ. ಇಂತಹ ಸಂದರ್ಭದಲ್ಲಿ ಅದು ಸ್ವಾಭಾವಿಕವೇ ಆಗಿದೆ. ಆದರೆ ನಾನು ಮಾತ್ರ ಪ್ರಾಣವು ಹೋಗಿಬಿಡುವುದೆಂಬ ಭಯದಿಂದ ರಣರಂಗದಿಂದ ಇಲ್ಲಿಗೆ ಬರಲಿಲ್ಲ.

ನಾನು ರಥಹೀನನಾಗಿದ್ದೆನು. ನನ್ನ ಬಳಿಯಲ್ಲಿ ಬತ್ತಳಿಕೆಯೂ ಇರಲಿಲ್ಲ. ನನ್ನ ಹಿಂಭಾಗದ ಪಾರ್ಶ್ವರಕ್ಷಕರೂ ಮಡಿದಿದ್ದರು. ನನ್ನ ಬಳಿಯಲ್ಲಿ ಯಾವ ಸೈನ್ಯವೂ ಇರಲಿಲ್ಲ. ಆ ಸಮಯದಲ್ಲಿ ನಾನು ಏಕಾಕಿಯಾಗಿದ್ದೆನು. ಇಂತಹ ಸ್ಥಿತಿಯಲ್ಲಿದ್ದ ನಾನು ಸ್ವಲ್ಪಹೊತ್ತು ವಿಶ್ರಾಂತಿಯನ್ನು ಅಪೇಕ್ಷಿಸಿ ಇಲ್ಲಿಗೆ ಬಂದೆನು.

**ನ ಪ್ರಾಣಹೇತೋರ್ನ ಭಯಾನ್ನ ವಿಷಾದಾದ್ವಿಶಾಮ್ಪತೇ ।**
**ಇದಮಮ್ಭಃ ಪ್ರವಿಷ್ಟೋಽಸ್ಮಿ ಶ್ರಮಾತ್ತ್ವಿದಮನುಷ್ಠಿತಮ್ ॥೪೦॥**

ಪ್ರಜಾನಾಥನೇ! ಪ್ರಾಣವನ್ನು ಉಳಿಸಿಕೊಳ್ಳಬೇಕೆಂಬ ಕಾರಣದಿಂದಾಗಲೀ, ಶತ್ರುಗಳಾದ ನಿಮ್ಮಿಂದ ಭಯಪಟ್ಟಾಗಲೀ, ವಿಷಾದದಿಂದಾಗಲೀ ನಾನು ಈ ಸರಸ್ಸನ್ನು ಪ್ರವೇಶಿಸಿದವನಲ್ಲ. ನನಗೆ ಬಹಳ ಆಯಾಸವಾಗಿದ್ದುದರಿಂದ ಆಯಾಸಪರಿಹಾರಕ್ಕಾಗಿ ನಾನು ಈ ಹ್ರದವನ್ನು ಪ್ರವೇಶಿಸಿದೆನು.

ಯುಧಿಷ್ಠಿರ! ನೀನು ಬಹಳವಾಗಿ ಬಳಲಿರುವೆ. ಆದುದರಿಂದ ನೀನೂ ಸ್ವಲ್ಪ ಹೊತ್ತು ವಿಶ್ರಮಿಸಿಕೊ. ನಿನ್ನ ಅನುಯಾಯಿಗಳೂ ವಿಶ್ರಮಿಸಿಕೊಳ್ಳಲಿ. ನಾನೂ ಸ್ವಲ್ಪಹೊತ್ತು ವಿಶ್ರಮಿಸಿ, ದಣಿವಾರಿಸಿಕೊಂಡು ರಣರಂಗದಲ್ಲಿ ನಿಮ್ಮೆಲ್ಲರನ್ನೂ ಏಕಾಕಿಯಾಗಿಯೇ ಎದುರಿಸಿ ಯುದ್ಧಮಾಡುತ್ತೇನೆ."

"ದುರ್ಯೋಧನ! ನಾವೆಲ್ಲರೂ ವಿಶ್ರಮಿಸಿಕೊಂಡುದಾಯಿತು. ಆದುದರಿಂದಲೇ ನಿನ್ನನ್ನು ಎಲ್ಲೆಡೆಗಳಲ್ಲಿಯೂ ಹುಡುಕಿಕೊಂಡು ತಿರುಗುತ್ತಿದ್ದೇವೆ. ನೀನೀಗಲೇ ಮೇಲಕ್ಕೆ ಬಾ. ನಮ್ಮೊಡನೆ ಯುದ್ಧಮಾಡು. ಯುದ್ಧದಲ್ಲಿ ಪಾರ್ಥರನ್ನು ಸಂಹರಿಸಿ ಸಂಪತ್ಸಮೃದ್ಧವಾದ ರಾಜ್ಯವನ್ನು ಅನುಭವಿಸು. ಅಥವಾ ಯುದ್ಧದಲ್ಲಿ ನಮ್ಮಿಂದ ಕೊಲ್ಲಲ್ಪಟ್ಟು ವೀರರು ಪಡೆದುಕೊಳ್ಳಬಹುದಾದಂತಹ ಪುಣ್ಯಲೋಕವನ್ನಾದರೂ ಹೊಂದುವವನಾಗು."

**ಯದರ್ಥಂ ರಾಜ್ಯಮಿಚ್ಛಾಮಿ ಕುರೂಣಾಂ ಕುರುನನ್ದನ ।**
**ತ ಇಮೇ ನಿಹತಾಃ ಸರ್ವೇ ಭ್ರಾತರೋ ಮೇ ಜನೇಶ್ವರ ॥೪೪॥**

**ಕ್ಷೀಣರತ್ನಾಂ ಚ ಪೃಥಿವೀಂ ಹತಕ್ಷತ್ರಿಯಪುಙ್ಗವಾಮ್ ।**
**ನ ಹ್ಯುತ್ಸಹಾಮ್ಯಹಂ ಭೋಕ್ತುಂ ವಿಧವಾಮಿವ ಯೋಷಿತಮ್ ॥೪೫॥**

"ಕುರುನಂದನ! ಮನುಜೇಶ್ವರ! ಯಾರ ಸಲುವಾಗಿ ನಾನು ಈ ರಾಜ್ಯವನ್ನಿಚ್ಛಿಸಿದ್ದೆನೋ–ಆ ನನ್ನ ಸೋದರರೆಲ್ಲರೂ ಯುದ್ಧದಲ್ಲಿ ಹತರಾಗಿ ಹೋದರು. ಈ ಪೃಥ್ವಿಯೀಗ ಸಂಪತ್ತಿನಿಂದ ವಿಹೀನವಾಗಿದೆ. ಭೂಮಂಡಲದಲ್ಲಿದ್ದ ಕ್ಷತ್ರಿಯಶ್ರೇಷ್ಠರೆಲ್ಲರೂ ಹತರಾಗಿಹೋಗಿದ್ದಾರೆ. ಸಕಲಸೌಭಾಗ್ಯಗಳನ್ನೂ ಕಳೆದುಕೊಂಡ ವಿಧವೆಯಾದ ಹೆಂಗಸಿನಂತೆ–ಸಂಪತ್ತಿನಿಂದಲೂ,

ಪೃಥ್ವೀವಲ್ಲಭರಿಂದಲೂ ಹೀನವಾಗಿರುವ ಈ ಭೂಮಿಯನ್ನು ಉಪಭೋಗಿಸಲು ನನಗೆ ಉತ್ಸಾಹವೇ ಇಲ್ಲವಾಗಿದೆ.

ಆದರೆ ಈಗಲೂ ಸಹ ನಾನು ಪಾಂಡು-ಪಾಂಚಾಲರ ರಣೋತ್ಸಾಹ ವನ್ನು ಭಗ್ನಗೊಳಿಸಿ ನಿನ್ನನ್ನು ಜಯಿಸಬೇಕೆನ್ನುವ ಆಶಯದಿಂದಲೇ ಇರುತ್ತೇನೆ. ಆದರೆ ಪಿತಾಮಹನು ಹತನಾದನಂತರ, ದ್ರೋಣ-ಕರ್ಣರೂ ಯುದ್ಧದಲ್ಲಿ ಚಿರಶಾಂತಿಯನ್ನು ಪಡೆದುಕೊಂಡನಂತರ ಯುದ್ಧದಿಂದ ಯಾವುದಾದರೂ ಪ್ರಯೋಜನವಾಗುವುದೆಂದು ನಾನು ಭಾವಿಸುವುದಿಲ್ಲ. ಯುಧಿಷ್ಠಿರ! ಸರ್ವಶೂನ್ಯವಾದ ಪೃಥ್ವಿಯು ಮಾತ್ರ ನಿನಗುಳಿದಿರುತ್ತದೆ. ಅಸಹಾಯನಾದ ಯಾವ ರಾಜನು ತಾನೇ ಇಂತಹ ರಾಜ್ಯವನ್ನಾಳಲು ಇಚ್ಛೆಪಡುತ್ತಾನೆ?

**ಸುಹೃದಸ್ತಾದೃಶಾನ್ಹಿತ್ವಾ ಪುತ್ರಾನ್ಭ್ರಾತೃನ್ಪಿತೄನಪಿ ।**
**ಭವದ್ಭಿಶ್ಚ ಹೃತೇ ರಾಜ್ಯೇ ಕೋ ನು ಜೀವೇತ ಮಾದೃಶಃ ॥೪೯॥**

ಅಂತಹ ಸುಹೃದರನ್ನೂ, ಪುತ್ರರನ್ನೂ, ಸಹೋದರರನ್ನೂ, ಪಿತೃಗಳನ್ನೂ ಬಿಟ್ಟು ನಿಮ್ಮಿಂದ ರಾಜ್ಯವೂ ಅಪಹೃತವಾದನಂತರ ನನ್ನಂತಹವನು ಹೇಗೆ ತಾನೇ ಜೀವಿಸಿರುವನು?

**ಅಹಂ ವನಂ ಗಮಿಷ್ಯಾಮಿ ಹ್ಯಜಿನೈಃ ಪ್ರತಿವಾಸಿತಃ ।**
**ರತಿರ್ಹಿ ನಾಸ್ತಿ ಮೇ ರಾಜ್ಯೇ ಹತಪಕ್ಷಸ್ಯ ಭಾರತ ॥೫೦॥**

ನಾನಾದರೋ ಮೃಗಚರ್ಮವನ್ನು ಹೊದೆದುಕೊಂಡು ಅರಣ್ಯಕ್ಕೆ ಹೊರಟುಹೋಗುತ್ತೇನೆ. ನನ್ನ ಪಕ್ಷದವರೆಲ್ಲರೂ ಸಂಪೂರ್ಣವಾಗಿ ವಿನಾಶಹೊಂದಿರುವಾಗ ನನಗೆ ರಾಜ್ಯದ ಮೇಲೆ ಪ್ರೀತಿಯೇ ಇಲ್ಲವಾಗಿದೆ.

**ಹತಬಾನ್ಧವಭೂಯಿಷ್ಠಾ ಹತಾಶ್ವಾ ಹತಕುಞ್ಜರಾ ।**
**ಏಷಾ ತೇ ಪೃಥಿವೀ ರಾಜನ್ಭುಂಕ್ಷ್ವೈನಾಂ ವಿಗತಜ್ವರಃ ॥೫೧॥**

ಈ ಭೂಮಿಯಿಂದು ಅಧಿಕಸಂಖ್ಯೆಯ ರಾಜಬಂಧುಗಳಿಂದ ವಿಹೀನವಾಗಿದೆ. ಭೂಮಿಯಲ್ಲಿದ್ದ ಅಧಿಕಸಂಖ್ಯೆಯ ಗಜಾಶ್ವಗಳೂ ಯುದ್ಧ ದಿಂದ ವಿನಾಶಹೊಂದಿದೆ. ಇಂತಹ ಸರ್ವಶೂನ್ಯವಾದ ಭೂಮಿಯನ್ನು ನೀನು ಯಾವ ವಿಧವಾದ ಆತಂಕವೂ ಇಲ್ಲದೇ ಉಪಭೋಗಿಸು.

**ವನಮೇವ ಗಮಿಷ್ಯಾಮಿ ವಸಾನೋ ಮೃಗಚರ್ಮಣೀ ।**
**ನ ಹಿ ಮೇ ನಿರ್ಜನಸ್ಯಾಸ್ತಿ ಜೀವಿತೇಽದ್ಯ ಸ್ಪೃಹಾ ವಿಭೋ ॥೫೩॥**

ವಿಭುವೇ! ಕೃಷ್ಣಾಜಿನಗಳನ್ನು ಧರಿಸಿಕೊಂಡು ನಾನು ಅರಣ್ಯಕ್ಕೆ ಹೊರಟುಹೋಗುತ್ತೇನೆ. ಸ್ವಜನರಿಂದ ವಿಹೀನನಾಗಿರುವ ನನಗೆ ಜೀವಿಸಿರುವುದರಲ್ಲಿ ಆಸಕ್ತಿಯೇ ಇಲ್ಲವಾಗಿದೆ.

**ಗಚ್ಛ ತ್ವಂ ಭುಂಕ್ಷ್ವ ರಾಜೇನ್ದ್ರ ಪೃಥಿವೀಂ ನಿಹತೇಶ್ವರಾಮ್ ।**
**ಹತಯೋಧಾಂ ನಷ್ಟರತ್ನಾಂ ಕ್ಷೀಣವೃತ್ತಿರ್ಯಥಾಸುಖಮ್ ॥೫೪॥**

ರಾಜೇಂದ್ರ! ನೀನೀಗಲೇ ಹೋಗು. ರಾಜರಿಂದ ವಿಹೀನವಾಗಿರುವ, ಯೋಧರಾಗಲೀ-ನವರತ್ನಗಳಿಂದ ತುಂಬಿದ ಬೊಕ್ಕಸವಾಗಲೀ ಇಲ್ಲದಿರುವ ಈ ಭೂಮಿಯನ್ನು ವೃತ್ತಿಶೂನ್ಯನಾಗಿ ಸುಖದಿಂದ ಉಪಭೋಗಿಸು."

ಮಹಾರಾಜ! ದುರ್ಯೋಧನನು ದೈನ್ಯದಿಂದ ಹೇಳಿದ ಮಾತುಗಳನ್ನು ಕೇಳಿ ಮಹಾಯಶೋವಂತನಾದ ಯುಧಿಷ್ಠಿರನು ನೀರಿನಲ್ಲಿಯೇ ಇದ್ದ ನಿನ್ನ ಮಗನನ್ನು ಕುರಿತು ಹೇಳಿದನು :

**ಆರ್ತಪ್ರಲಾಪಾನ್ಮಾ ತಾತ ಸಲಿಲಸ್ಥಃ ಪ್ರಭಾಷಿಥಾಃ ।**
**ನೈತನ್ಮನಸಿ ಮೇ ರಾಜನ್ವಾಶಿತಂ ಶಕುನೇರಿವ ॥೫೫॥**

"ನರೇಶ್ವರ! ನೀನು ನೀರಿನಲ್ಲಿಯೇ ಕುಳಿತುಕೊಂಡು ಆರ್ತಪುರುಷ ರಂತೆ ಪ್ರಲಾಪಗಳನ್ನು ಮಾಡಬೇಡ. ಪಕ್ಷಿಯ ಚಿಲಿ-ಪಿಲಿ ಗುಟ್ಟುವಿಕೆಯಂತಿರುವ ಈ ನಿನ್ನ ಮಾತುಗಳು ನನ್ನ ಮನಸ್ಸಿನ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡುವುದಿಲ್ಲ.

**ಯದಿ ವಾಪಿ ಸಮರ್ಥಃ ಸ್ಯಾಸ್ತ್ವಂ ದಾನಾಯ ಸುಯೋಧನ ।**
**ನಾಹಮಿಚ್ಛೇಯಮವನೀಂ ತ್ವಯಾ ದತ್ತಾಂ ಪ್ರಶಾಸಿತುಮ್ ॥೫೬॥**

ಒಂದು ವೇಳೆ ಈ ಸಮಯದಲ್ಲಿ ನೀನು ಈ ಭೂಮಂಡಲವನ್ನು ದಾನವಾಗಿ ಕೊಡಲು ಸಮರ್ಥನೇ ಆಗಿರುವೆಯೆಂದು ಭಾವಿಸಿದರೂ–ನೀನು ದಾನವಾಗಿ ಕೊಡುವ ಈ ಭೂಮಂಡಲವನ್ನು ಅನುಶಾಸನಮಾಡಲು ನಾನು ಅಪೇಕ್ಷಿಸುವುದಿಲ್ಲ.

ಅಧರ್ಮೇಣ ನ ಗೃಹ್ಣೀಯಾಂ ತ್ವಯಾ ದತ್ತಾಂ ಮಹೀಮಿಮಾಮ್ ।
ನ ಹಿ ಧರ್ಮಃ ಸ್ಮೃತೋ ರಾಜನ್ಕ್ಷತ್ರಿಯಸ್ಯ ಪ್ರತಿಗ್ರಹಃ ।।೫೭।।

ರಾಜನೇ! ನೀನು ದಾನವಾಗಿ ಕೊಡುವ ಈ ಭೂಮಿಯನ್ನು ನಾನು ಧರ್ಮಕ್ಕೆ ವಿರೋಧವೆನಿಸುವುದರಿಂದ ಪ್ರತಿಗ್ರಹಿಸುವುದಿಲ್ಲ. ಕ್ಷತ್ರಿಯನಾದವನು ದಾನವನ್ನು ಪ್ರತಿಗ್ರಹಿಸಬಹುದೆಂಬ ಧರ್ಮವಾಕ್ಯವು ಎಲ್ಲಿಯೂ ಹೇಳಲ್ಪಟ್ಟಿರುವುದಿಲ್ಲ.

ತ್ವಯಾ ದತ್ತಾಂ ನ ಚೇಚ್ಛೇಯಂ ಪೃಥಿವೀಮಖಿಲಾಮಹಮ್ ।
ತ್ವಾಂ ತು ಯುದ್ಧೇ ವಿನಿರ್ಜಿತ್ಯ ಭೋಕ್ತಾಸ್ಮಿ ವಸುಧಾಮಿಮಾಮ್ ।।

ಈ ಅಖಂಡಭೂಮಂಡಲವನ್ನೇ ಆದರೂ–ಅದು ನಿನ್ನಿಂದ ದಾನವಾಗಿ ಕೊಡಲ್ಪಡುವುದಾದರೆ–ಅದನ್ನು ನಾನು ಪಡೆದುಕೊಳ್ಳುವ ಇಚ್ಛೆಯುಳ್ಳವನಾಗಿಲ್ಲ. ನಿನ್ನನ್ನು ದ್ವಂದ್ವಯುದ್ಧದಲ್ಲಿ ಸೋಲಿಸಿದ ನಂತರವೇ ನಾನು ಈ ವಸುಂಧರೆಯನ್ನು ಉಪಭೋಗಿಸುತ್ತೇನೆ.

ಅನೀಶ್ವರಶ್ಚ ಪೃಥಿವೀಂ ಕಥಂ ತ್ವಂ ದಾತುಮಿಚ್ಛಸಿ ।
ತ್ವಯೇಯಂ ಪೃಥಿವೀಂ ರಾಜನ್ಕಿನ್ನ ದತ್ತಾ ತದೈವ ಹಿ ।
ಧರ್ಮತೋ ಯಾಚಮಾನಾನಾಂ ಪ್ರಶಮಾರ್ಥಂ ಕುಲಸ್ಯ ನಃ ।।೫೯।।

ಈ ಪೃಥ್ವಿಯು ವಲ್ಲಭನಿಂದ ವಿಹೀನವಾಗಿರುವುದೆಂದು ನೀನೇ ಈ ಹಿಂದೆ ಹೇಳಿರುವೆ. ನೀನು ಈಗ ಈ ಭೂಮಿಗೆ ಈಶ್ವರನಲ್ಲದೇ ಇರುವಾಗ ಈ ಭೂಮಂಡಲವನ್ನು ನೀನು ದಾನವಾಗಿ ಕೊಡಲು ಹೇಗೆ ಇಚ್ಛಿಸುವೆ? ನಮ್ಮ ಕುಲದಲ್ಲಿ ಶಾಂತಿಯು ನೆಲೆಸಿರಬೇಕೆಂಬ ಏಕೈಕವಾದ ಆಶಯದಿಂದ ಧರ್ಮದ ಹಿನ್ನೆಲೆಯಲ್ಲಿ ಈ ಪೃಥ್ವಿಯನ್ನು ಯಾಚಿಸಿದ ನಮಗೆ ನೀನು ಆ ಸಮಯದಲ್ಲಿಯೇ ನಮ್ಮ ಭಾಗದ ರಾಜ್ಯವನ್ನು ಏಕೆ ಬಿಟ್ಟುಕೊಡಲಿಲ್ಲ?

ವಾರ್ಷ್ಣೇಯಂ ಪ್ರಥಮಂ ರಾಜನ್ಪ್ರತ್ಯಾಖ್ಯಾಯ ಮಹಾಬಲಮ್ ।
ಕಿಮಿದಾನೀಂ ದದಾಸಿ ತ್ವಂ ಕೋ ಹಿ ತೇ ಚಿತ್ತವಿಭ್ರಮಃ ।।೬೦।।

ಈ ಮೊದಲು ಸಂಧಾನಕ್ಕಾಗಿಯೇ ಬಂದ ಮಹಾಬಲನಾದ ಶ್ರೀಕೃಷ್ಣನನ್ನು ತಿರಸ್ಕರಿಸಿ ಕಳುಹಿಸಿದ ನೀನು ಈಗ ರಾಜ್ಯವನ್ನು ದಾನವಾಗಿ ಕೊಡಲು ಇಚ್ಛಿಸಿರುವೆಯಾ? ನಿನಗೇನಾದರೂ ಬುದ್ಧಿಭ್ರಮಣವಾಗಿರುವುದೇ?

**ಅಭಿಯುಕ್ತಸ್ತು ಕೋ ರಾಜಾ ದಾತುಮಿಚ್ಛೇದ್ಧಿ ಮೇದಿನೀಮ್ ।**
**ನ ತ್ವಮದ್ಯ ಮಹೀಂ ದಾತುಮೀಶಃ ಕೌರವನನ್ದನ ।**
**ಆಚ್ಛೇತ್ತುಂ ವಾ ಬಲಾದ್ರಾಜನ್ಸ ಕಥಂ ದಾತುಮಿಚ್ಛಸಿ ॥೬೨॥**

ಶತ್ರುಗಳಿಂದ ಆಕ್ರಮಿಸಲ್ಪಟ್ಟಿರುವ ಯಾವ ರಾಜನು ತಾನೇ ಭೂಮಿಯನ್ನು ದಾನವಾಗಿ ಕೊಟ್ಟುಬಿಡಲು ಅಪೇಕ್ಷಿಸುತ್ತಾನೆ? ನೀನೀಗ ಈ ಭೂಮಿಯನ್ನು ಬಲಾತ್ಕಾರದಿಂದ ಕಿತ್ತುಕೊಳ್ಳುವುದಕ್ಕಾಗಲೀ ಮತ್ತೊಬ್ಬರಿಗೆ ದಾನಕೊಡುವುದಕ್ಕಾಗಲೀ ಸಮರ್ಥನಾಗಿಲ್ಲ. ಇಂತಹ ನೀನು ಈ ಭೂಮಂಡಲವನ್ನು ದಾನವಾಗಿ ಕೊಟ್ಟುಬಿಡಲು ಹೇಗೆ ಇಚ್ಛಿಸುವೆ?

ನೀನು ಈ ಭೂಮಂಡಲವನ್ನು ದಾನವಾಗಿ ಕೊಡುವ ಸಂಭವವೇ ಇಲ್ಲ.

**ಮಾಂ ತು ನಿರ್ಜಿತ್ಯ ಸಂಗ್ರಾಮೇ ಪಾಲಯೇಮಾಂ ವಸುನ್ಧರಾಮ್ ॥**

ನನ್ನನ್ನು ಯುದ್ಧದಲ್ಲಿ ಜಯಿಸಿ ನೀನೇ ಈ ಭೂಮಂಡಲವನ್ನು ಶಾಸನಮಾಡು.

ಹಿಂದೆ ನೀನು ಹೇಳಿದುದು ನೆನಪಿನಲ್ಲಿರುವುದೇ?

**ಸೂಚ್ಯಗ್ರೇಣಾಪಿ ಯದ್ಭೂಮೇರಪಿ ಭಿದ್ಯೇತ ಭಾರತ ।**
**ತನ್ಮಾತ್ರಮಪಿ ತನ್ಮಹ್ಯಂ ನ ದದಾತಿ ಪುರಾ ಭವಾನ್ ।**
**ಸ ಕಥಂ ಪೃಥಿವೀಮೇತಾಂ ಪ್ರದದಾಸಿ ವಿಶಾಮ್ಪತೇ ॥೬೪॥**

ಸೂಜಿಯ ಮೊನೆಯಷ್ಟು ಭೂಮಿಯನ್ನು ಭಾಗಮಾಡುವ ಸಾಧ್ಯತೆಯಿದ್ದರೆ - ಅಷ್ಟು ಭಾಗವನ್ನೂ ಹಿಂದೆ ನನಗೆ ಕೊಡಲು ಇಷ್ಟ ಪಡಲಿಲ್ಲ. (ಸೂಜಿಯ ಮೊನೆಯಷ್ಟು ಭೂಭಾಗವನ್ನೂ ಕೊಡುವುದಿಲ್ಲ ವೆಂದು ಉದ್ಘೋಷಿಸಿದೆ). ಅದೇ ನೀನೀಗ ಈ ಅಖಂಡಭೂಮಂಡಲವನ್ನೇ ನನಗೆ ಹೇಗೆ ಕೊಡುವೆ?

**ಸೂಚ್ಯಗ್ರಂ ನಾತ್ಯಜಃ ಪೂರ್ವಂ ಸ ಕಥಂ ತ್ಯಜಸಿ ಕ್ಷಿತಿಮ್ ।**
**ಏವಮೈಶ್ವರ್ಯಮಾಸಾದ್ಯ ಪ್ರಶಾಸ್ಯ ಪೃಥಿವೀಮಿಮಾಮ್ ।**
**ಕೋ ಹಿ ಮೂಢೋ ವ್ಯವಸ್ಯೇತ ಶತ್ರೋರ್ದಾತುಂ ವಸುನ್ಧರಾಮ್ ॥**

ಹಿಂದೆ ಸೂಜಿಯ ಮೊನೆಯಷ್ಟು ಭೂಭಾಗವನ್ನೂ ಪರಿತ್ಯಾಗಮಾಡಲು ಇಚ್ಛಿಸದಿದ್ದ ನೀನೀಗ ಈ ಭೂಮಂಡಲವನ್ನೇ ಹೇಗೆ ತ್ಯಾಗಮಾಡುವೆ? ಈ ರೀತಿಯಲ್ಲಿ (ಮೋಸದ ರೀತಿಯಲ್ಲಿ) ಐಶ್ವರ್ಯವನ್ನು ಪಡೆದುಕೊಂಡು, ಇಷ್ಟು ವರ್ಷಗಳವರೆಗೆ ಈ ಭೂಮಂಡಲವನ್ನು ಅನುಶಾಸನಮಾಡುತ್ತಿದ್ದು, ಯಾವ ಮೂರ್ಖನು ತಾನೇ ತನ್ನ ನಿತ್ಯಶತ್ರುವಿಗೆ ಭೂಮಂಡಲವನ್ನೊಪ್ಪಿಸಿಕೊಡಲು ಇಚ್ಛಿಸುತ್ತಾನೆ?

**ತ್ವಂ ತು ಕೇವಲಮೌರ್ಖ್ಯೇಣ ವಿಮೂಢೋ ನಾವಬುಧ್ಯಸೇ ।**
**ಪೃಥಿವೀಂ ದಾತುಕಾಮೋಽಪಿ ಜೀವಿತೇನ ವಿಮೋಕ್ಷ್ಯಸೇ ॥೬೬॥**

ನೀನು ಕೇವಲ ಮೂರ್ಖತ್ವದ ಕಾರಣದಿಂದ ವಿಮೂಢನಾಗಿರುವೆ. ನೀನೀಗ ಭೂಮಂಡಲವನ್ನು ಬಿಟ್ಟುಕೊಡುವ ಇಚ್ಛೆಯುಳ್ಳವನಾಗಿದ್ದರೂ ಜೀವಿತದಿಂದ ವಿಮುಕ್ತನಾಗಬೇಕಾಗಿದೆಯೆಂಬುದನ್ನು ನೀನು ತಿಳಿದವನಾಗಿಲ್ಲ. (ಅನಿವಾರ್ಯವಾಗಿ ನೀನು ಭೂಮಂಡಲವನ್ನು ಕೊಟ್ಟುಬಿಡುವೆನೆಂದು ಹೇಳಿದ ಮಾತ್ರದಿಂದಲೇ ನಿನ್ನ ಜೀವವುಳಿಯಲಾರದು. ಭೂಮಿಯನ್ನು ಉಪಭೋಗಿಸುವಂತೆ ನನಗೆ ಹೇಳಿ ನೀನು ಜೀವದಿಂದ ಉಳಿದುಕೊಳ್ಳಲು ಸಾಧ್ಯವಾಗುವುದಿಲ್ಲ.)

**ಅಸ್ಮಾನ್ವಾ ತ್ವಂ ಪರಾಜಿತ್ಯ ಪ್ರಶಾಧಿ ಪೃಥಿವೀಮಿಮಾಮ್ ।**
**ಅಥವಾ ನಿಹತೋಽಸ್ಮಾಭಿರ್ವ್ರಜ ಲೋಕಾನನುತ್ತಮಾನ್ ॥೬೭॥**

ನಮ್ಮನ್ನು ಪರಾಜಯಗೊಳಿಸಿ ಈ ಭೂಮಂಡಲವನ್ನಾದರೂ ಅನುಶಾಸನಮಾಡು. ಅಥವಾ ನಮ್ಮಿಂದ ಹತನಾಗಿ ಉತ್ತಮಲೋಕಗಳಿಗಾದರೂ ಹೋಗು. ನಿನಗೆ ಈಗ ಉಳಿದಿರುವ ಮಾರ್ಗಗಳು ಇವೆರಡೇ. ನಾವಿಬ್ಬರೂ ಒಟ್ಟಾಗಿ ಈ ಭೂಮಿಯಲ್ಲಿ ಬದುಕಿರಲು ಸಾಧ್ಯವೇ ಇಲ್ಲ.)

**ಆವಯೋರ್ಜೀವತೋ ರಾಜನ್ಮಯಿ ಚ ತ್ವಯಿ ಚ ಧ್ರುವಮ್ ।**
**ಸಂಶಯಃ ಸರ್ವಭೂತಾನಾಂ ವಿಜಯೇ ನೌ ಭವಿಷ್ಯತಿ ॥೬೮॥**

ನೀನೂ ಮತ್ತು ನಾನೂ ಇಬ್ಬರೂ ಜೀವಸಹಿತವಾಗಿಯೇ ಉಳಿದಿರುವುದಾದರೆ ಎಲ್ಲ ಪ್ರಾಣಿಗಳಿಗೂ ನಮ್ಮಿಬ್ಬರಲ್ಲಿ ಯಾರು ವಿಜಯಿಗಳಾದರೆಂಬ ವಿಷಯದಲ್ಲಿ ಸಂಶಯವುಂಟಾಗುವುದು ನಿಶ್ಚಯ. (ಯಾರನ್ನು ರಾಜನೆಂದು ಅಂಗೀಕರಿಸುವುದೆಂಬ ಸಂಶಯವುಂಟಾಗುವುದು.)

**ಜೀವಿತಂ ತವ ದುಷ್ಪ್ರಜ್ಞ ಮಯಿ ಸಮ್ಪ್ರತಿ ವರ್ತತೇ ।**
**ಜೀವಯೇಯಮಹಂ ಕಾಮಂ ನ ತು ತ್ವಂ ಜೀವಿತುಂ ಕ್ಷಮಃ ॥೧೯॥**

ದುರ್ಮತಿಯೇ! ನಿನ್ನ ಜೀವನವೀಗ ನನ್ನ ಅಧೀನದಲ್ಲಿದೆ. ನಾನೇನಾದರೂ ಇಚ್ಛಿಪಟ್ಟರೆ ಮಾತ್ರ ನಿನ್ನ ಜೀವವನ್ನುಳಿಸಬಹುದು. ಆದರೆ ಸ್ವೇಚ್ಛೆಯಿಂದ ನೀನು ಜೀವಿಸಿರಲಂತೂ ಸಾಧ್ಯವೇ ಇಲ್ಲ.

**ದಹನೇ ಹಿ ಕೃತೋ ಯತ್ನಸ್ತ್ವಯಾಸ್ಮಾಸು ವಿಶೇಷತಃ ॥೨೦॥**

**ಆಶೀವಿಷೈರ್ವಿಷೈಶ್ಚಾಪಿ ಜಲೇ ಚಾಪಿ ಪ್ರವೇಶನೈಃ ।**
**ತ್ವಯಾ ವಿನಿಕೃತಾ ರಾಜನ್ರಾಜ್ಯಸ್ಯ ಹರಣೇನ ಚ ॥೨೧॥**

**ಅಪ್ರಿಯಾಣಾಂ ಚ ವಚನೈರ್ದ್ರೌಪದ್ಯಾಃ ಕರ್ಷಣೇ ನ ಚ ।**
**ಏತಸ್ಮಾತ್ಕಾರಣಾತ್ಪಾಪ ಜೀವಿತಂ ತೇ ನ ವಿದ್ಯತೇ ।**
**ಉತ್ತಿಷ್ಠೋತ್ತಿಷ್ಠ ಯುಧ್ಯಸ್ವ ಯುದ್ಧೇ ಶ್ರೇಯೋ ಭವಿಷ್ಯತಿ ॥೨೨॥**

ಇದಕ್ಕೆ ಕಾರಣವಿಷ್ಟೇ ದುರ್ಯೋಧನ! ಹಿಂದೆ ನೀನು ನಮ್ಮೆಲ್ಲರನ್ನೂ ಸುಟ್ಟೇಹಾಕಬೇಕೆಂದು ವಿಶೇಷವಾಗಿ ಪ್ರಯತ್ನಿಸಿದೆ. ಭೀಮಸೇನನನ್ನು ಹಾವುಗಳಿಂದ ಕಚ್ಚಿಸಿದೆ. ಅವನಿಗೆ ವಿಷವುಣಿಸಿದೆ. ಆ ಸಮಯದಲ್ಲಿ ಅವನನ್ನು ನೀರಿಗೂ ತಳ್ಳಿಬಿಟ್ಟೆ. ನಮ್ಮನ್ನು ವಂಚಿಸಿ ನಮ್ಮ ರಾಜ್ಯವನ್ನು ಕಿತ್ತುಕೊಂಡೆ. ನಮ್ಮ ವಿಷಯದಲ್ಲಿ ಅಪ್ರಿಯವಾದ ಮಾತುಗಳನ್ನೇ ಆಡಿದೆ. ಅಷ್ಟೇ ಸಾಲದೆಂದು ದ್ರೌಪದಿಯನ್ನು ತುಂಬಿದ ಸಭೆಗೂ ಸೆಳೆದು ತಂದೆ. ಪಾಪಿಷ್ಠನೇ! ಈ ಎಲ್ಲ ಕಾರಣಗಳಿಂದಲೂ ನೀನು ಜೀವದಿಂದುಳಿಯುವ ಸಾಧ್ಯತೆಯೇ ಇಲ್ಲ. ನಿನ್ನ ಜೀವನವು ಈಗಾಗಲೇ ಮುಗಿದೇ ಹೋಗಿದೆ. ನೆಪಮಾತ್ರಕ್ಕೆ ಯುದ್ಧವು ನಡೆಯಬೇಕಾಗಿದೆ. ಎದ್ದೇಳು ಸುಯೋಧನ! ನಮ್ಮೊಡನೆ ಯುದ್ಧಮಾಡು. ಯುದ್ಧದಲ್ಲಿಯೇ ನಿನಗೆ ಶ್ರೇಯಸ್ಸುಂಟಾಗುತ್ತದೆ."

ಧೃತರಾಷ್ಟ್ರಮಹಾರಾಜ! ವಿಜಯಿಗಳಾದ ಪಾಂಡವರು ಇದೇ ರೀತಿಯಲ್ಲಿ ದುರ್ಯೋಧನನನ್ನು ಕೆರಳಿಸುವ ನಾನಾವಿಧವಾದ ಮಾತುಗಳನ್ನು ಪುನಃ ಪುನಃ ಹೇಳುತ್ತಲೇ ಇದ್ದರು.

ಉ೧ನೆಯ ಅಧ್ಯಾಯವು ಮುಗಿಯಿತು.

೩೨ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಯುಧಿಷ್ಠಿರನ ಮಾತಿನಂತೆ ದುರ್ಯೋಧನನು ಸರೋವರದಿಂದ ಮೇಲೆದ್ದು ಬಂದು ಗದಾಯುದ್ಧಕ್ಕೆ ಸಿದ್ಧನಾದುದು

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ಶತ್ರುತಾಪಕನಾದ, ಮಹೀಪತಿಯಾದ, ವೀರನಾದ ನನ್ನ ಮಗನನ್ನು ಯುಧಿಷ್ಠಿರನು ಚುಚ್ಚುಮಾತುಗಳಿಂದ ಭಯಪಡಿಸುತ್ತಿರುವಾಗ ಸ್ವಭಾವದಿಂದಲೇ ಕೋಪಿಷ್ಠನಾದ ನನ್ನ ಮಗನೇನು ಮಾಡಿದನು? ಅವನು ಈ ಹಿಂದೆ ಅಂತಹ ಬೆದರಿಕೆಯ ಮಾತುಗಳನ್ನು ಕೇಳಿದವನೇ ಅಲ್ಲ. ಅವನು ಯಾವಾಗಲೂ ರಾಜಭಾವದಿಂದಲೇ ಇರುತ್ತಾ ಸಮಸ್ತರಿಗೂ ಸಮ್ಮಾನ್ಯನಾಗಿದ್ದನು.

**ಯಸ್ಯಾತಪತ್ರಚ್ಛಾಯಾಪಿ ಸ್ವಕಾ ಭಾನೋಸ್ತಥಾ ಪ್ರಭಾ ।**
**ಖೇದಾಯೈವಾಭಿಮಾನಿತ್ವಾತ್ಸಹೇತ್ಸೈವಂ ಕಥಂ ಗಿರಃ ॥೩॥**

ತನ್ನದೇ ಆದ ಶ್ವೇತಚ್ಛತ್ರಿಯ ಛಾಯೆ ಮತ್ತು ಸೂರ್ಯನ ಪ್ರಭೆ ಇವೂ ಸಹ ಯಾವನ ಖೇದಕ್ಕೆ ಕಾರಣಗಳಾಗುತ್ತಿದ್ದುವೋ–(ಅಭಿಮಾನಿಯಾದ ದುರ್ಯೋಧನನು ಶ್ವೇತಚ್ಛತ್ರಿಯ ನೆರಳನ್ನೇ ಪರಾಶ್ರಯವೆಂದೂ, ಅದನ್ನು ಆಶ್ರಯಿಸಿದರೆ ಸೂರ್ಯನ ಪ್ರಭೆಗೆ ಹೆದರಿದಂತಾಯಿತೆಂದೂ ಭಾವಿಸುತ್ತಿದ್ದನೋ) ಅಂತಹ ಅಭಿಮಾನಿಯು ಯುಧಿಷ್ಠಿರನ ಶಲ್ಯದಂತಹ ಮಾತುಗಳನ್ನು ಹೇಗೆ ತಾನೇ ಸಹಿಸಿಯಾನು?

**ಇಯಂ ಚ ಪೃಥಿವೀ ಸರ್ವಾ ಸಮ್ಲೇಚ್ಛಾಟವಿಕಾ ಭೃಶಮ್ ।**
**ಪ್ರಸಾದಾದ್ಧ್ರಿಯತೇ ಯಸ್ಯ ಪ್ರತ್ಯಕ್ಷಂ ತವ ಸಂಜಯ ॥೪॥**

ಸಂಜಯ! ಮ್ಲೇಚ್ಛರಿಂದಲೂ ಕಾಡುಜನರಿಂದಲೂ ಕೂಡಿರುವ ಈ ಅಖಂಡಭೂಮಂಡಲವೂ ದುರ್ಯೋಧನನ ಪ್ರಸನ್ನತೆಯಿಂದಲೇ ಜೀವಧಾರಣೆಯನ್ನು ಮಾಡಿಕೊಂಡಿದ್ದಿತು. ಈ ವಿಷಯವು ನಿನಗೆ ಪ್ರತ್ಯಕ್ಷ ಪ್ರಮಾಣವೇ ಆಗಿರುತ್ತದೆ.

ಅಂತಹ ಅತುಲಪರಾಕ್ರಮಿಯಾದ ಮತ್ತು ಅಭಿಮಾನಿಯಾದ

ದುರ್ಯೋಧನನನ್ನು ಅವನ ಪ್ರಬಲವೈರಿಗಳು – ಅದರಲ್ಲಿಯೂ ವಿಶೇಷವಾಗಿ ಪಾಂಡುವಿನ ಮಕ್ಕಳಾದ ಯುಧಿಷ್ಠಿರಾದಿಗಳು ಭಯ ಪಡಿಸುತ್ತಿದ್ದರು. ಆ ನಿರ್ಜನಪ್ರದೇಶದಲ್ಲಿ ಏಕಾಕಿಯಾಗಿದ್ದ, ತನ್ನ ಕಡೆಯ ಸೇವಕರಿಂದ ವಿಹೀನನಾಗಿದ್ದ, ಶತ್ರುಗಳಿಂದ ಆವೃತನಾಗಿದ್ದ ದುರ್ಯೋಧನನು ವಿಜಯಿಗಳಾಗಿದ್ದ ಪಾಂಡವರು ಪುನಃ ಪುನಃ ಆಡುತ್ತಿದ್ದ ಕರ್ಣಕಠೋರವಾದ ಮಾತುಗಳನ್ನು ಕೇಳಿದನಂತರ ಅವರನ್ನು ಕುರಿತು ಏನೆಂದನು? ಈ ವಿಷಯವನ್ನು ನನ್ನೊಡನೆ ಹೇಳು, ಸಂಜಯ!"

"ಮಹಾರಾಜ! ನೀರಿನ ಕೆಳಭಾಗದಲ್ಲಿದ್ದ ನಿನ್ನ ಮಗನನ್ನು ಯುಧಿಷ್ಠಿರನೂ ಮತ್ತು ಅವನ ಸಹೋದರರೂ ಬಹುವಾಗಿ ನಿಂದಿಸುತ್ತಿದ್ದರು. ಆ ಸಮಯದಲ್ಲಿ ದುರ್ಯೋಧನನು ಅತ್ಯಂತ ವಿಷಮಸ್ಥಿತಿಯಲ್ಲಿದ್ದನು. ನೀರಿನ ತಳಭಾಗದಲ್ಲಿದ್ದ ಅವನು ಯುಧಿಷ್ಠಿರಾದಿಗಳಾಡುತ್ತಿದ್ದ ಕರ್ಣಕಠೋರವಾದ ಮಾತುಗಳನ್ನು ಕೇಳಿ ಸುದೀರ್ಘವಾದ ಮತ್ತು ಬಿಸಿ-ಬಿಸಿಯಾದ ನಿಟ್ಟುಸಿರನ್ನು ಬಾರಿ-ಬಾರಿಗೂ ಬಿಡುತ್ತಿದ್ದನು. ತನ್ನ ಕೈಗಳೆರಡನ್ನೂ ಹಿಂದಕ್ಕೂ-ಮುಂದಕ್ಕೂ, ಮೇಲಕ್ಕೂ-ಕೆಳಕ್ಕೂ ಒದರುತ್ತಿದ್ದನು. ಕಟ್ಟಕಡೆಗೆ ಪಾಂಡವರೊಡನೆ ಯುದ್ಧಮಾಡಲು ನಿಶ್ಚಯಿಸಿದವನಾಗಿ ಯುಧಿಷ್ಠಿರನೊಡನೆ ಹೇಳಿದನು :

**ಯೂಯಂ ಸಸುಹೃದಃ ಪಾರ್ಥಾಃ ಸರ್ವೇ ಸರಥವಾಹನಾಃ ।**
**ಅಹಮೇಕಃ ಪರಿದ್ಯೂನೋ ವಿರಥೋ ಹತವಾಹನಃ ॥೧೦॥**

"ಯುಧಿಷ್ಠಿರ! ನೀನು ಯುದ್ಧಕ್ಕೆ ಕರೆಯುತ್ತಿರುವುದೇನೋ ಸರಿಯೆ. ಆದರೆ ನಮ್ಮಿಬ್ಬರಲ್ಲಿರುವ ಅಂತರವನ್ನೀಗ ಗಮನಿಸಬೇಕಾಗಿದೆ. ನೀವು ಸುಹೃದದಿಂದ ಕೂಡಿದವರಾಗಿದ್ದೀರಿ. ನಿಮ್ಮೆಲ್ಲರಿಗೂ ರಥಗಳೂ ಮತ್ತು ಗಜಾಶ್ವವಾಹನಗಳೂ ಇವೆ. ಇದಕ್ಕೆ ಪ್ರತಿಯಾಗಿ ನಾನು ಏಕಾಕಿಯಾಗಿದ್ದೇನೆ. ಬಹಳವಾಗಿ ಬಳಲಿದ್ದೇನೆ. ರಥಹೀನನಾಗಿದ್ದೇನೆ. ನನ್ನ ಕುದುರೆಯೂ ಸತ್ತುಹೋಗಿದೆ.

**ಆತ್ತಶಸ್ತ್ರೈರಥೋಪೇತೈರ್ಬಹುಭಿಃ ಪರಿವಾರಿತಃ ।**
**ಕಥಮೇಕಃ ಪದಾತಿಃ ಸನ್ನಶಸ್ತ್ರೋ ಯೋದ್ಧುಮುತ್ಸಹೇ ॥೧೧॥**

ಪದಾತಿಯಾಗಿರುವ (ವಾಹನರಹಿತನಾದ), ಶಸ್ತ್ರಾಸ್ತ್ರರಹಿತನಾದ, ಎಲ್ಲಕ್ಕಿಂತಲೂ ಮಿಗಿಲಾಗಿ ಏಕಾಕಿಯಾಗಿರುವ ನಾನು–ರಥದಲ್ಲಿ ಕುಳಿತಿರುವ, ಶಸ್ತ್ರಪಾಣಿಗಳಾಗಿರುವ, ಸುತ್ತುವರಿದು ನಿಂತಿರುವ ಬಹುಸಂಖ್ಯಾತರಾದ ಯೋಧರೊಡನೆ ಹೇಗೆ ಯುದ್ಧಮಾಡಲಿ?

ಏಕೈಕೇನ ತು ಮಾಂ ಯೂಯಂ ಯೋಧಯಧ್ವಂ ಯುಧಿಷ್ಠಿರ ।
ನ ಹ್ಯೇಕೋ ಬಹುಭಿರ್ವೀರೈರ್ನ್ಯಾಯ್ಯೋ ಯೋಧಯಿತುಂ ಯುಧಿ ॥

ಯುಧಿಷ್ಠಿರ! ನಿಮ್ಮಲ್ಲಿರುವ ಒಬ್ಬೊಬ್ಬರೂ ಪ್ರತ್ಯೇಕ-ಪ್ರತ್ಯೇಕವಾಗಿ ನನ್ನೊಡನೆ ಯುದ್ಧಮಾಡಿರಿ. ಅನೇಕಯೋಧರೊಡನೆ ಏಕಾಕಿ ಯಾದವನೊಬ್ಬನನ್ನು ಯುದ್ಧದಲ್ಲಿ ತೊಡಗಿಸುವುದು ಖಂಡಿತವಾಗಿಯೂ ನ್ಯಾಯಸಮ್ಮತವಲ್ಲ.

ವಿಶೇಷತೋ ವಿಕವಚಃ ಶ್ರಾನ್ತಶ್ಚಾಪಸ್ಸಮಾಶ್ರಿತಃ ।
ಭೃಶಂ ವಿಕ್ಷತಗಾತ್ರಶ್ಚ ಹತವಾಹನಸೈನಿಕಃ ॥೧೩॥

ಅದರಲ್ಲಿಯೂ ವಿಶೇಷವಾಗಿ ಬಹುಸಂಖ್ಯಾತರಾದ ಯೋಧರೊಡನೆ ಯುದ್ಧಮಾಡಬೇಕಾಗಿರುವ ಏಕಾಕಿಯಾದ ನನ್ನ ಸ್ಥಿತಿಯು ಹೀಗಿದೆ. ನಾನೀಗ ಕವಚದಿಂದ ವಿಹೀನನಾಗಿದ್ದೇನೆ. ಬಹಳವಾಗಿ ಬಳಲಿದ್ದೇನೆ. ನೀರಿನಲ್ಲಿ ಆಶ್ರಯವನ್ನು ಹೊಂದಿ ಕುಳಿತಿದ್ದೇನೆ. ನನ್ನ ಶರೀರವು ನಖಾದಿ ಶಿಖಾಂತವಾಗಿ ಗಾಯಗೊಂಡಿದೆ. ನನ್ನ ವಾಹನ ಮತ್ತು ಸೈನಿಕರೂ ಹತರಾಗಿಹೋಗಿದ್ದಾರೆ. ಇಂತಹವನನ್ನು ಬಹುಸಂಖ್ಯಾತರಾದ ಯೋಧರೊಡನೆ ಯುದ್ಧದಲ್ಲಿ ತೊಡಗಿಸುವುದು ಸರಿಯಲ್ಲ.

ನ ಮೇ ತ್ವತ್ತೋ ಭಯಂ ರಾಜನ್ನ ಚ ಪಾರ್ಥಾದ್ವೃಕೋದರಾತ್ ।
ಫಾಲ್ಗುನಾದ್ವಾಸುದೇವಾದ್ವಾ ಪಞ್ಚಾಲೇಭ್ಯೋಽಥವಾ ಪುನಃ ॥೧೪॥

ಯಮಾಭ್ಯಾಂ ಯುಯುಧಾನಾದ್ವಾ ಯೇ ಚಾನ್ಯೇ ತವ ಸೈನಿಕಾಃ ।
ಏಕಃ ಸರ್ವಾನಹಂ ಕ್ರುದ್ಧೋ ವಾರಯಿಷ್ಯೇ ಯುಧಿ ಸ್ಥಿತಃ ॥೧೫॥

ನಾನು ನ್ಯಾಯಸಮ್ಮತವಾದ ಮಾತನ್ನು ಆಡುತ್ತಿರುವೆನೇ ಹೊರತು ಭಯದಿಂದ ಈ ಮಾತುಗಳನ್ನಾಡುತ್ತಿಲ್ಲ. ನನಗೆ ನಿನ್ನಿಂದಾಗಲೀ, ಕುಂತಿಯ

ಮಗನಾದ ಭೀಮಸೇನನಿಂದಾಗಲೀ, ಅರ್ಜುನನಿಂದಾಗಲೀ, ವಾಸುದೇವ ನಿಂದಾಗಲೀ, ಪಾಂಚಾಲರಾಜಕುಮಾರರಾದ ಧೃಷ್ಟದ್ಯುಮ್ನ-ಶಿಖಂಡಿ ಗಳಿಂದಾಗಲೀ, ನಕುಲ-ಸಹದೇವರಿಂದಾಗಲೀ, ಸಾತ್ಯಕಿಯಿಂದಾಗಲೀ ಕಿಂಚಿತ್ತಾದರೂ ಭಯವಿಲ್ಲ. ಯುದ್ಧದಲ್ಲಿ ಕ್ರುದ್ಧನಾದ ನಾನೊಬ್ಬನೇ ನಿಂತು ನಿಮ್ಮೆಲ್ಲರನ್ನೂ ತಡೆಯಬಲ್ಲೆನು.

**ಧರ್ಮಮೂಲಾ ಸತಾಂ ಕೀರ್ತಿರ್ಮನುಷ್ಯಾಣಾಂ ಜನಾಧಿಪ ।**
**ಧರ್ಮಂ ಚೈವೇಹ ಕೀರ್ತಿಂ ಚ ಪಾಲಯನ್ಪ್ರಬ್ರವೀಮ್ಯಹಮ್ ॥೧೬॥**

ಯುಧಿಷ್ಠಿರ! ಸತ್ಪುರುಷರ ಕೀರ್ತಿಗೆ ಮೂಲಕಾರಣವು ಧರ್ಮವೇ ಆಗಿರುತ್ತದೆ. ಈ ಸಮಯದಲ್ಲಿ ನಾನು ಧರ್ಮವನ್ನೂ ಮತ್ತು ಕೀರ್ತಿಯನ್ನೂ ಪರಿಪಾಲಿಸುತ್ತಾ ಈ ಮಾತನ್ನು ನಿನಗೆ ಹೇಳುತ್ತಿದ್ದೇನೆ.

**ಅಹಮುತ್ಥಾಯ ಸರ್ವಾನ್ವೈ ಪ್ರತಿಯೋತ್ಸ್ಯಾಮಿ ಸಂಯುಗೇ ।**
**ಅನುಗಮ್ಯಾಗತಾನ್ಸರ್ವಾನೃತೂನ್ಸಂವತ್ಸರೋ ಯಥಾ ॥೧೭॥**

ಸಂವತ್ಸರವು ಒಂದಾದ ಮೇಲೊಂದಾಗಿ ಬರುವ ಋತುಗಳನ್ನು ಪ್ರತಿಗ್ರಹಿಸುವಂತೆ–ನಾನು ಈ ಸರೋವರದಿಂದ ಮೇಲೆದ್ದು ಬಂದು ಅನುಕ್ರಮವಾಗಿ ಬರುವ ಎಲ್ಲರನ್ನೂ ಎದುರಿಸಿ ಯುದ್ಧಮಾಡುತ್ತೇನೆ.

**ಅದ್ಯ ವಃ ಸರಥಾನ್ಸಾಶ್ವಾನಶಸ್ತ್ರೋ ವಿರಥೋಽಪಿ ಸನ್ ।**
**ನಕ್ಷತ್ರಾಣೀವ ಸರ್ವಾಣಿ ಸವಿತಾ ರಾತ್ರಿಸಂಕ್ಷಯೇ ।**
**ತೇಜಸಾ ನಾಶಯಿಷ್ಯಾಮಿ ಸ್ಥಿರೀಭವತ ಪಾಣ್ಡವಾಃ ॥೧೮॥**

ಈಗ ನಾನು ಶಸ್ತ್ರಾಸ್ತ್ರಗಳಿಂದಲೂ ಮತ್ತು ರಥದಿಂದಲೂ ವಿಹೀನ ನಾಗಿದ್ದರೂ ರಥಾಶ್ವಗಳಲ್ಲಿ ಕುಳಿತಿರುವ ಮತ್ತು ಶಸ್ತ್ರಪಾಣಿಗಳಾಗಿರುವ ನಿಮ್ಮನ್ನು–ರಾತ್ರಿಯು ಮುಗಿದೊಡನೆಯೇ ಸೂರ್ಯದೇವನು ಎಲ್ಲ ನಕ್ಷತ್ರ ಗಳನ್ನೂ ತನ್ನ ತೇಜಸ್ಸಿನಿಂದಲೇ ಅದೃಶ್ಯಗೊಳಿಸುವಂತೆ–ನನ್ನ ತೇಜಸ್ಸಿ ನಿಂದಲೇ ವಿನಾಶಗೊಳಿಸುತ್ತೇನೆ. ಪಾಂಡವರೇ! ನೀವೆಲ್ಲರೂ ಸ್ಥಿರವಾಗಿ ನಿಲ್ಲಿರಿ. ಯುಧಿಷ್ಠಿರ! ನಿನ್ನನ್ನಿಂದು ಸಹೋದರಸಮೇತನಾಗಿಯೇ ಸಂಹರಿಸಿ ನಾನು ಯಶೋವಂತರಾದ ಕ್ಷತ್ರಿಯರ, ಬಾಹ್ಲೀಕ-ದ್ರೋಣ-ಭೀಷ್ಮರ, ಮಹಾತ್ಮನಾದ ಕರ್ಣನ, ಶೂರನಾದ ಜಯದ್ರಥನ, ಭಗದತ್ತನ, ಮದ್ರರಾಜ

ನಾದ ಶಲ್ಯನ, ಭೂರಿಶ್ರವಸನ, ನನ್ನ ಮಕ್ಕಳ, ಸುಬಲಪುತ್ರನಾದ ಶಕುನಿಯ, ಅನೇಕಾನೇಕ ಮಿತ್ರರ, ಸುಹೃದರ ಮತ್ತು ಬಂಧುಗಳ ಋಣಗಳಿಂದ ವಿಮುಕ್ತನಾಗುತ್ತೇನೆ. ನಿಮ್ಮನ್ನು ಸಂಹರಿಸುವುದರಿಂದ ನನಗೆ ಸಹಾಯ ವನ್ನೆಸಗಿದ ಆ ಮಹಾಶೂರರ ಋಣವನ್ನು ತೀರಿಸಿದಂತಾಗುತ್ತದೆ."

ಮಹಾರಾಜ! ಹೀಗೆ ಹೇಳಿ ನಿನ್ನ ಮಗನು ವಿರಮಿಸಿದನು. (ಮುಂದೆ ಮಾತನ್ನಾಡಲಿಲ್ಲ.)

**ದಿಷ್ಟ್ಯಾ ತ್ವಮಪಿ ಜಾನೀಷೇ ಕ್ಷತ್ರಧರ್ಮಂ ಸುಯೋಧನ ।**
**ದಿಷ್ಟ್ಯಾ ತೇ ವರ್ತತೇ ಬುದ್ಧಿರ್ಯುದ್ಧಾಯೈವ ಮಹಾಭುಜ ।**
**ದಿಷ್ಟ್ಯಾ ಶೂರೋಽಸಿ ಕೌರವ್ಯ ದಿಷ್ಟ್ಯಾ ಜಾನಾಸಿ ಸಂಗರಮ್ ॥೨೪॥**

"ಸುಯೋಧನ! ಸೌಭಾಗ್ಯವಶಾತ್ ನೀನೂ ಕ್ಷತ್ರಧರ್ಮವನ್ನು ತಿಳಿದುಕೊಂಡಂತಾಯಿತು. ಮಹಾಭುಜನೇ! ಅದೃಷ್ಟದ ಕಾರಣದಿಂದಲೇ ನಿನ್ನ ಬುದ್ಧಿಯು ಯುದ್ಧಮಾಡುವುದರಲ್ಲಿಯೇ ಆಸಕ್ತವಾಗಿದೆ. ಸೌಭಾಗ್ಯ ವಶಾತ್ ನೀನು ಶೂರನೂ ಆಗಿರುವೆ ಮತ್ತು ಯುದ್ಧಮಾಡುವುದು ಹೇಗೆಂಬುದನ್ನೂ ತಿಳಿದುಕೊಂಡಿರುವೆ.

**ಯಸ್ತ್ವಮೇಕೋ ಹಿ ನಃ ಸರ್ವಾನ್ಸಂಗರೇ ಯೋದ್ಧುಮಿಚ್ಛಸಿ ।**
**ಏಕ ಏಕೇನ ಸಂಗಮ್ಯ ಯತ್ತೇ ಸಮ್ಮತಮಾಯುಧಮ್ ।**
**ತತ್ತ್ವಮಾದಾಯ ಯುಧ್ಯಸ್ವ ಪ್ರೇಕ್ಷಕಾಸ್ತೇ ವಯಂ ಸ್ಥಿತಾಃ ॥೨೫॥**

ನೀನೊಬ್ಬನೇ ನಮ್ಮೆಲ್ಲರನ್ನೂ ಒಬ್ಬೊಬ್ಬರನ್ನಾಗಿ ಎದುರಿಸಿ ಯುದ್ಧ ಮಾಡಲು ಇಚ್ಛಿಸಿರುವೆ. ಹಾಗೆಯೇ ಆಗಲಿ. ಏಕಾಕಿಯಾಗಿರುವ ನೀನು ನಿನಗೆ ಸಮ್ಮತವೆನಿಸುವ ಆಯುಧವನ್ನು ತೆಗೆದುಕೊಂಡು ನಮ್ಮ ಪಕ್ಷದಲ್ಲಿರುವ ಒಬ್ಬನೊಡನೆ ಯುದ್ಧಮಾಡು. ಆ ಸಮಯದಲ್ಲಿ ಉಳಿದ ನಾವೆಲ್ಲರೂ ಪ್ರೇಕ್ಷಕರಾಗಿರುತ್ತೇವೆ.

**ಸ್ವಯಮಿಷ್ಟಂ ಚ ತೇ ಕಾಮಂ ವೀರ ಭೂಯೋ ದದಾಮ್ಯಹಮ್ ।**
**ಹತ್ವೈಕಂ ಭವತೋ ರಾಜ್ಯಂ ಹತೋ ವಾ ಸ್ವರ್ಗಮಾಪ್ನುಹಿ ॥೨೬॥**

ವೀರನೇ! ನಿನಗೆ ಹೆಚ್ಚು ಇಷ್ಟವಾದ ಮತ್ತೊಂದು ಅವಕಾಶವನ್ನೂ

ನಾನಾಗಿಯೇ ಪುನಃ ನಿನಗೆ ಒದಗಿಸಿಕೊಡುತ್ತೇನೆ. ನಮ್ಮೈವರಲ್ಲಿ ಒಬ್ಬನನ್ನು ಸಂಹರಿಸಿದರೂ ರಾಜ್ಯವು ನಿನ್ನದಾಗುತ್ತದೆ. ಒಂದು ವೇಳೆ ನೀನೇ ಹತನಾದರೆ ಸ್ವರ್ಗವನ್ನೇ ಹೊಂದುವೆ."

**ಏಕಶ್ಚೇದ್ಯೋದ್ಧುಮಾಕ್ರನ್ದೇ ಶೂರೋಽದ್ಯ ಮಮ ದೀಯತಾಮ್ ।**
**ಆಯುಧಾನಾಮಿಯಂ ಚಾಪಿ ವೃತಾ ತ್ವತ್ಸಮ್ಮತೇ ಗದಾ ॥೨೭॥**

"ಧರ್ಮಜ! ರಣಾಂಗಣದಲ್ಲಿ ನಾನು ಒಬ್ಬನೊಡನೆ ಯುದ್ಧಮಾಡ ಬಹುದೆನ್ನುವುದಾದರೆ ನಿನಗೆ ಒಪ್ಪಿಗೆಯಾಗುವಂತಹ ಶೂರನೊಬ್ಬನನ್ನು ನನ್ನೊಡನೆ ಯುದ್ಧಮಾಡಲು ಕಳುಹಿಸಿಕೊಡು. ನಿನ್ನ ಅಭಿಪ್ರಾಯಕ್ಕೆ ಅನುಸಾರವಾಗಿಯೇ ಎಲ್ಲ ಆಯುಧಗಳ ಮಧ್ಯದಲ್ಲಿ ಈ ಗದೆಯೊಂದನ್ನೇ ನಾನು ನನ್ನ ಆಯುಧವನ್ನಾಗಿ ಪರಿಗ್ರಹಿಸಿದ್ದೇನೆ.

**ಹನ್ತ್ವೈಕಂ ಭವತಾಮೇಕಃ ಶಕ್ಯಂ ಮಾಂ ಯೋಽಭಿಮನ್ಯತೇ ।**
**ಪದಾತಿರ್ಗದಯಾ ಸಂಖ್ಯೇ ಸ ಯುಧ್ಯತು ಮಯಾ ಸಹ ॥೨೮॥**

ನಿಮ್ಮಲ್ಲಿರುವ ಅನೇಕ ಶೂರರಲ್ಲಿ ಯಾರಾದರೂ ಒಬ್ಬ ವೀರನು ಏಕಾಕಿಯಾಗಿ ಯುದ್ಧಮಾಡುವ, ನನ್ನೊಡನೆ ಯುದ್ಧಮಾಡಿ ನನ್ನನ್ನು ಜಯಿಸುವ ಅಭಿಮಾನವನ್ನು ಇಟ್ಟುಕೊಂಡಿರುವುದಾದರೆ, ಅವನೂ ಸಹ ನನ್ನಂತೆಯೇ ಪದಾತಿಯಾಗಿ ಗದೆಯನ್ನೇ ಆಯುಧವನ್ನಾಗಿ ಮಾಡಿಕೊಂಡು ನನ್ನೊಡನೆ ಯುದ್ಧಮಾಡಲಿ. ಇದು ನನಗೆ ಅತ್ಯಂತ ಸಂತೋಷಕರವಾದ ವಿಷಯವೇ ಆಗಿದೆ.

ರಥಕ್ಕೆ ಸಂಬಂಧಿಸಿದ ವಿಚಿತ್ರವಾದ ಯುದ್ಧಗಳು ಪದೇ-ಪದೇ ನಡೆಯುತ್ತಲೇ ಇರುತ್ತದೆ. ಮಹತ್ತಾದ ಮತ್ತು ಅದ್ಭುತವಾದ ಗದಾಯುದ್ಧವೂ ಈಗ ನಡೆದುಹೋಗಲಿ. ಮನುಷ್ಯರು (ಯೋಧರು) ಸಾಮಾನ್ಯವಾಗಿ ಒಂದು ವಿಧವಾದ ಅಸ್ತ್ರವನ್ನು ಬಿಟ್ಟನಂತರ ಮತ್ತೊಂದು ವಿಧವಾದ ಅಸ್ತ್ರವನ್ನು ಬಿಡಲು ಇಚ್ಛಿಸುತ್ತಾರೆ. (ಅಸ್ತ್ರಗಳ ಪ್ರಯೋಗದಲ್ಲಿ ಬದಲಾವಣೆಯನ್ನು ಮಾಡುತ್ತಾ ಹೋಗುತ್ತಾರೆ. ಒಂದೇ ವಿಧವಾದ ಅಸ್ತ್ರವನ್ನು ಎಲ್ಲ ಸಮಯಗಳಲ್ಲಿಯೂ ಬಿಡಲು ಇಚ್ಛಿಸುವುದಿಲ್ಲ.)

ಯುಧಿಷ್ಠಿರ! ಈ ಸಮಯದಲ್ಲಿ ನಿನ್ನ ಅನುಮತಿಯಿಂದ ಯುದ್ಧಗಳ ಪರ್ಯಾಯವೂ ನಡೆದುಹೋಗಲಿ.

ಮಹಾಬಾಹುವೇ! ಯುಧಿಷ್ಠಿರ! ಕೇವಲ ಗದೆಯಿಂದಲೇ ನಾನು ಅನುಜರಿಂದ ಕೂಡಿದ ನಿನ್ನನ್ನು ಜಯಿಸುತ್ತೇನೆ. ಇಷ್ಟು ಮಾತ್ರವಲ್ಲ ; ಪಾಂಚಾಲರನ್ನೂ, ಸೃಂಜಯರನ್ನೂ, ನಿನ್ನ ಪಕ್ಷದಲ್ಲಿ ಅಳಿದುಳಿದಿರುವ ಇತರ ಎಲ್ಲ ಸೈನಿಕರನ್ನೂ ಗೆಲ್ಲುತ್ತೇನೆ. ಇಂದ್ರನೇ ಸಾಕ್ಷಾತ್ ಎದುರಾಗಿ ಬಂದರೂ ನನಗೆ ಗಾಬರಿಯೆಂಬುದೇ ಇಲ್ಲ. (ಹೀಗಿರುವಾಗ ಮನುಷ್ಯಮಾತ್ರದವರಾದ ನಿಮ್ಮ ವಿಷಯದಲ್ಲಿ ಹೇಳತಕ್ಕದ್ದೇನಿದೆ?)"

"ಏಳು ; ಎದ್ದೇಳು ; ದುರ್ಯೋಧನ! ನನ್ನೊಡನೆ ಯುದ್ಧಮಾಡು. ನೀನು ಬಹಳ ಬಲಿಷ್ಠನಾಗಿರುವೆ. ಗದೆಯನ್ನೇ ಆಯುಧವನ್ನಾಗಿಟ್ಟುಕೊಂಡು ನಮ್ಮ ಪಕ್ಷದಲ್ಲಿರುವ ಒಬ್ಬ ಯೋಧನೊಡನೆ ಯುದ್ಧದಲ್ಲಿ ತೊಡಗು. ಏಕಾಗ್ರಚಿತ್ತನಾಗಿ ಯುದ್ಧಮಾಡು. ನಿನ್ನ ಪೌರುಷವನ್ನು ತೋರಿಸು. ಆದರೆ ಇಂದಿನ ದಿನ ಇಂದ್ರನೇ ನಿನಗೆ ಆಶ್ರಯವನ್ನು ನೀಡಲು ಬಂದರೂ ನೀನು ಮಾತ್ರ ಜೀವದಿಂದ ಉಳಿಯಲಾರೆ."

ಮಹಾರಾಜ! ಯುಧಿಷ್ಠಿರನಾಡಿದ ಮಾತುಗಳನ್ನು ಮಾನಿಷ್ಠನಾದ ನಿನ್ನ ಮಗನಿಂದ ಸಹಿಸಿಕೊಳ್ಳಲಾಗಲಿಲ್ಲ. ನೀರಿನ ಕೆಳಭಾಗದಲ್ಲಿದ್ದ ದುರ್ಯೋಧನನು–ಬಿಲದಲ್ಲಿರುವ ಮಹಾಸರ್ಪದಂತೆ–ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದನು. ಶ್ರೇಷ್ಠವಾದ ಕುದುರೆಯು ಚಾವಟಿಯ ಪ್ರಹಾರವನ್ನು ಸಹಿಸಿಕೊಳ್ಳದಂತೆ–ಮಾತೆಂಬ ಚಾವಟಿಯಿಂದ ಬಾರಿ-ಬಾರಿಗೂ ಪ್ರಹರಿಸಲ್ಪಡುತ್ತಿದ್ದ ನಿನ್ನ ಮಗನು ಯುಧಿಷ್ಠಿರನಾಡಿದ ಮಾತನ್ನು ಸಹಿಸಿಕೊಳ್ಳಲಿಲ್ಲ. ವೀರ್ಯವಂತನಾದ ದುರ್ಯೋಧನನು ಬಹಳ ವೇಗದಿಂದ ಸರೋವರದ ನೀರನ್ನು ಅಲ್ಲೋಲ-ಕಲ್ಲೋಲಗೊಳಿಸುತ್ತಾ ಸರ್ಪರಾಜನಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ–ಬಹುಭಾರವಾಗಿದ್ದ, ಲೋಹಮಯವಾಗಿದ್ದ, ಸುವರ್ಣಮಯವಾದ ಆಭರಣಗಳಿಂದ ಭೂಷಿತವಾಗಿದ್ದ ಗದೆಯನ್ನೆತ್ತಿಕೊಂಡು ಸರೋವರದಿಂದ ಮೇಲಕ್ಕೆ ಬಂದನು. ಮಾಯೆಯಿಂದ ಸ್ತಂಭಿಸಿದ್ದ

ನೀರನ್ನು ಭೇದಿಸಿಕೊಂಡು ಲೋಹಮಯವಾದ ಗದೆಯನ್ನು ಹೆಗಲಿನ ಮೇಲಿಟ್ಟುಕೊಂಡಿದ್ದ ನಿನ್ನ ಮಗನು ಪ್ರಜ್ವಲಿಸುವ ಸೂರ್ಯನೋಪಾದಿಯಲ್ಲಿ ಸರೋವರದಿಂದ ಮೇಲೆ ಬಂದನು. ಅನಂತರ ಮಹಾಬಲನಾದ, ಧೀಮಂತನಾದ ದುರ್ಯೋಧನನು, ಲೋಹಮಯವಾಗಿದ್ದ ಸುವರ್ಣಾ ಭರಣಗಳಿಂದ ಭೂಷಿತವಾಗಿದ್ದ ಆ ಮಹಾಗದೆಯನ್ನು ಕೈಗೆತ್ತಿಕೊಂಡನು. ಮಹಾರಾಜ! ಆ ಸಮಯದಲ್ಲಿ ಗದಾಪಾಣಿಯಾಗಿದ್ದ ಭರತವಂಶಶಿರೋ



ಮಣಿಯಾದ ದುರ್ಯೋಧನನು ತಾಪವನ್ನುಂಟುಮಾಡುವ ಭಾಸ್ಕರನಂತೆಯೇ ಪ್ರಕಾಶಿಸುತ್ತಿದ್ದನು. ಸರೋವರದ ಕೆಳಭಾಗದಿಂದ ಮೇಲೆದ್ದು ಬಂದ, ಮಹಾ ಬಾಹುವಾದ, ಗದಾಪಾಣಿಯಾದ, ಶತ್ರುದಮನನಾದ ದುರ್ಯೋಧನನನ್ನು ಆ

ಸಮಯದಲ್ಲಿ ಎಲ್ಲ ಪ್ರಾಣಿಗಳೂ ದಂಡಪಾಣಿಯಾದ ಯಮನೆಂದೇ ಭಾವಿಸಿದುವು. ಆ ಸಮಯದಲ್ಲಿ ವಜ್ರಪಾಣಿಯಾದ ಇಂದ್ರನಂತೆಯೂ, ಶೂಲಪಾಣಿಯಾದ ರುದ್ರನಂತೆಯೂ ಇದ್ದ ಗದಾಪಾಣಿಯಾದ ನಿನ್ನ ಮಗ ದುರ್ಯೋಧನನು ಸರೋವರದಿಂದ ಮೇಲೆದ್ದು ಬಂದುದನ್ನು ಎಲ್ಲ ಪಾಂಚಾಲಯೋಧರೂ ನೋಡಿದರು. ಬಳಿಕ ಎಲ್ಲ ಕಡೆಗಳಲ್ಲಿಯೂ ಎಲ್ಲರೂ ಸಂತೋಷಪಟ್ಟರು. ಪಾಂಡು-ಪಾಂಚಾಲಯೋಧರು ಪರಸ್ಪರವಾಗಿ ಚಪ್ಪಾಳೆತಟ್ಟುತ್ತಾ ಸಂತೋಷವನ್ನು ವ್ಯಕ್ತಪಡಿಸಿದರು. ಪಾಂಡವರ ಆ ಚೇಷ್ಟೆಯನ್ನು ತನಗೆ ಮಾಡುತ್ತಿರುವ ಅಪಹಾಸ್ಯವೆಂದೇ ಭಾವಿಸಿದ ದುರ್ಯೋಧನನು ತನ್ನ ಕಣ್ಣುಗಳೆರಡನ್ನೂ ಮೇಲಕ್ಕೆ ಮಾಡಿ ಅವರನ್ನು ದೃಷ್ಟಿಪಾತದಿಂದಲೇ ಸುಟ್ಟುಬಿಡುವನೋ ಎಂಬಂತೆ ದುರುಗುಟ್ಟಿಕೊಂಡು ನೋಡಿದನು. ಹುಬ್ಬನ್ನು ತ್ರಿರೇಖೆಯನ್ನಾಗಿಸಿ (ಹುಬ್ಬನ್ನು ಗಂಟಿಕ್ಕಿ) ಅವುಡುಗಚ್ಚುತ್ತಾ ಕೇಶವಸಹಿತರಾದ ಪಾಂಡವರೊಡನೆ ಹೇಳಿದನು :

**ಅಸ್ಯಾವಹಾಸಸ್ಯ ಫಲಂ ಪ್ರತಿಭೋಕ್ಷ್ಯಥ ಪಾಣ್ಡವಾಃ ।**
**ಗಮಿಷ್ಯಥ ಹತಾಃ ಸದ್ಯಃ ಸಪಞ್ಚಾಲಾ ಯಮಕ್ಷಯಮ್ ॥೪೭॥**

"ಪಾಂಡವರೇ! ನೀವೀಗ ಮಾಡುತ್ತಿರುವ ಅಪಹಾಸ್ಯಕ್ಕೆ ತಕ್ಕುದಾದ ಫಲವನ್ನೇ ಅನುಭವಿಸುವಿರಿ. ಪಾಂಚಾಲಸಹಿತರಾದ ನೀವು ಈ ಕ್ಷಣದಲ್ಲಿಯೇ ನನ್ನಿಂದ ಹತರಾಗಿ ಯಮರಾಜನ ಅರಮನೆಗೆ ತೆರಳುವಿರಿ."

ಮಹಾರಾಜ! ಆ ದ್ವೈಪಾಯನಸರೋವರದಿಂದ ಮೇಲೆದ್ದು ಬಂದ ನಿನ್ನ ಮಗ ದುರ್ಯೋಧನನು ಗದಾಪಾಣಿಯಾಗಿ ಸರೋವರದ ತೀರಪ್ರದೇಶ ದಲ್ಲಿಯೇ ನಿಂತಿದ್ದನು. ಅವನ ಶರೀರವೆಲ್ಲವೂ ರಕ್ತದಿಂದ ವ್ಯಾಪ್ತವಾಗಿದ್ದಿತು. ದುರ್ಯೋಧನನ ಆ ಶರೀರವು ನೀರಿನಿಂದಲೂ ನೆನೆದುಹೋಗಿದ್ದು ಧಾತುಮಿಶ್ರ ವಾದ ನೀರನ್ನು ಸ್ರವಿಸುವ ಪರ್ವತದಂತೆಯೇ ಕಾಣುತ್ತಿದ್ದಿತು. ಗದೆಯನ್ನು ಮೇಲೆತ್ತಿ ನಿಂತಿದ್ದ ವೀರನಾದ ದುರ್ಯೋಧನನನ್ನು ಕಂಡು–ಕ್ರೋಧಾವಿಷ್ಟ ನಾದ ಯಮರಾಜನೇ ನಿಂತಿರುವನೆಂದು ಪಾಂಡವರು ಭಾವಿಸಿದರು. ಮತ್ತೆ ಕೆಲವರು ಶೂಲಪಾಣಿಯಾದ ರುದ್ರನೇ ನಿಂತಿರುವನೆಂದು ತಿಳಿದರು. ವೀರ್ಯ ವಂತನಾದ ದುರ್ಯೋಧನನು ಹರ್ಷದಿಂದ–ಗೂಳಿಯಂತೆ ಮೇಘಕ್ಕೆ

ಸಮಾನವಾಗಿ ಗರ್ಜನೆಮಾಡುತ್ತಾ ಗದಾಯುದ್ಧಕ್ಕೆ ಪಾರ್ಥರನ್ನು ಆಹ್ವಾನಿಸಿದನು.

**ಏಕೈಕೇನ ಚ ಮಾಂ ಯೂಯಮಾಸೀದತ ಯುಧಿಷ್ಠಿರ ।**
**ನ ಹ್ಯೇಕೋ ಬಹುಭಿರ್ನ್ಯಾಯ್ಯೋ ವೀರೋ ಯೋಧಯಿತುಂ ಯುಧಿ ॥**

“ಯುಧಿಷ್ಠಿರ! ನೀವು ಒಬ್ಬೊಬ್ಬರಾಗಿಯೇ ನನ್ನೊಡನೆ ಯುದ್ಧಕ್ಕೆ ಬನ್ನಿರಿ. ರಣರಂಗದಲ್ಲಿ ಒಬ್ಬನೇ ವೀರನೊಡನೆ ಬಹುಸಂಖ್ಯಾತರಾದ ಯೋಧರು ಯುದ್ಧದಲ್ಲಿ ತೊಡಗುವುದು ನ್ಯಾಯಸಮ್ಮತವಲ್ಲ.

**ನ್ಯಸ್ತವರ್ಮಾ ವಿಶೇಷೇಣ ಶ್ರಾನ್ತಶ್ಚಾಪ್ಸು ಪರಿಪ್ಲುತಃ ।**
**ಭೃಶಂ ವಿಕ್ಷತಗಾತ್ರಶ್ಚ ಹತವಾಹನಸೈನಿಕಃ ॥೫೩॥**

ಏಕಾಕಿಯಾಗಿರುವುದು ಮಾತ್ರವಲ್ಲ, ಧರ್ಮಜ! ನಾನು ಕವಚವನ್ನು ಬಿಚ್ಚಿಟ್ಟಿದ್ದೇನೆ. ಬಹಳವಾಗಿ ಬಳಲಿದ್ದೇನೆ. ನೀರಿನಲ್ಲಿ ಮುಳುಗಿ ಎದ್ದಿದ್ದೇನೆ. ಶರೀರಾದ್ಯಂತವಾಗಿ ಬಹಳವಾಗಿ ಗಾಯಗೊಂಡಿರುತ್ತೇನೆ. ನನ್ನೆಲ್ಲ ಸೈನಿಕರೂ ಯುದ್ಧದಲ್ಲಿ ಹತರಾಗಿದ್ದಾರೆ. ನನ್ನ ವಾಹನವೂ ಹತವಾಗಿದೆ. ಇಂತಹವನೊಡನೆ ಅನೇಕವೀರರು ಯುದ್ಧದಲ್ಲಿ ತೊಡಗುವುದು ನ್ಯಾಯಸಮ್ಮತವಲ್ಲ.

**ಅವಶ್ಯಮೇವ ಯೋದ್ಧವ್ಯಂ ಸರ್ವೈರೇವ ಮಯಾ ಸಹ ।**
**ಯುಕ್ತಂ ತ್ವಯುಕ್ತಮಿತ್ಯೇತದ್ವೇತ್ಸಿ ತ್ವಂ ಚೈವ ಸರ್ವದಾ ॥೫೪॥**

ನನ್ನ ವಿಷಯವಾಗಿ ಹೇಳುವುದಾದರೆ ನಾನು ನಿಮ್ಮೆಲ್ಲರೊಡನೆಯೂ ಅವಶ್ಯವಾಗಿ ಯುದ್ಧಮಾಡಲೇಬೇಕು. ಆದರೆ ಈ ಸಮಯದಲ್ಲಿ ನಾನು ಒಬ್ಬೊಬ್ಬರೊಡನೆ ಪ್ರತ್ಯೇಕವಾಗಿ ಯುದ್ಧಮಾಡುವುದು ಯುಕ್ತವೇ ಅಥವಾ ಅಯುಕ್ತವೇ ಎಂಬುದನ್ನು ನೀನೂ ಸರ್ವಾತ್ಮನಾ ತಿಳಿದಿರುವೆ.”

**ಮಾ ಭೂದಿಯಂ ತವ ಪ್ರಜ್ಞಾ ಕಥಮೇವಂ ಸುಯೋಧನ ।**
**ಯದಾಭಿಮನ್ಯುಂ ಬಹವೋ ಜಘ್ನುರ್ಯುಧಿ ಮಹಾರಥಾಃ ॥೫೫॥**

“ಸುಯೋಧನ! ಅನೇಕ ಮಹಾರಥರು ಸೇರಿ ಬಾಲನಾದ ಅಭಿಮನ್ಯು

ವೊಬ್ಬನನ್ನೇ ಆಕ್ರಮಿಸಿ ಸಂಹರಿಸಿದ ಸಮಯದಲ್ಲಿ ನಿನಗೆ ಈ ವಿಧವಾದ ಧರ್ಮಪ್ರಜ್ಞೆಯೇಕೆ ಉಂಟಾಗಲಿಲ್ಲ?

**ಕ್ಷತ್ರಧರ್ಮಂ ಭೃಶಂ ಕ್ರೂರಂ ನಿರಪೇಕ್ಷಂ ಸುನಿರ್ಘೃಣಮ್ ।**
**ಅನ್ಯಥಾ ತು ಕಥಂ ಹನ್ಯುರಭಿಮನ್ಯುಂ ತಥಾ ಗತಮ್ ।**
**ಸರ್ವೇ ಭವನ್ತೋ ಧರ್ಮಜ್ಞಾಃ ಸರ್ವೇ ಶೂರಾಸ್ತನುಸ್ತ್ಯಜಃ ॥೫೬॥**

ನಿಶ್ಚಯವಾಗಿ ಹೇಳುವುದಾದರೆ ಕ್ಷತ್ರಧರ್ಮವು ಅತ್ಯಂತ ಕ್ರೂರವಾದುದು. ಪ್ರಾಣದ ಮೇಲಿನ ಆಸೆಯನ್ನೇ ತೊರೆದಿರತಕ್ಕುದು. ದಯಾರಹಿತವಾದುದು. ಹಾಗಿಲ್ಲದಿದ್ದರೆ ಧರ್ಮಜ್ಞರಾದ, ಶೂರರಾದ, ಶರೀರದ ಹಂಗನ್ನೇ ತೊರೆದಿರುವ ನೀವೆಲ್ಲರೂ ಸೇರಿ ಏಕಾಕಿಯಾಗಿ ರಣರಂಗಕ್ಕೆ ಬಂದ ಅಭಿಮನ್ಯುವನ್ನು ಹೇಗೆ ಕೊಲ್ಲುತ್ತಿದ್ದಿರಿ?

**ನ್ಯಾಯೇನ ಯುಧ್ಯತಾಂ ಪ್ರೋಕ್ತಾ ಶಕ್ರಲೋಕಗತಿಃ ಪರಾ ॥೫೭॥**

**ಯದ್ಯೇಕಸ್ತು ನ ಹನ್ತವ್ಯೋ ಬಹುಭಿರ್ಧರ್ಮ ಏವ ತು ।**

**ತದಾಭಿಮನ್ಯುಂ ಬಹವೋ ನಿಜಘ್ನುಸ್ತ್ವನ್ಮತೇ ಕಥಮ್ ॥೫೮॥**

ನ್ಯಾಯಪೂರ್ವಕವಾಗಿ ಯುದ್ಧಮಾಡುವ ವೀರರಿಗೆ ಪರಮಶ್ರೇಷ್ಠವಾದ ಇಂದ್ರಲೋಕದ ಪ್ರಾಪ್ತಿಯಾಗುವುದೆಂದು ಹೇಳಲ್ಪಟ್ಟಿರುವುದು ಸರಿಯೇ. ಅನೇಕರು ಸೇರಿ ಏಕಾಕಿಯಾದವನೊಬ್ಬನನ್ನು ಸಂಹರಿಸಕೂಡದೆಂಬುದು ಯುದ್ಧಧರ್ಮವೇ ಆಗಿದೆ. ಆದರೆ ಆ ಸಮಯದಲ್ಲಿ ನಿನ್ನ ಅಭಿಪ್ರಾಯಾನುಸಾರವಾಗಿಯೇ ಅನೇಕವೀರರು ಸೇರಿ ಏಕಾಕಿಯಾದ ಅಭಿಮನ್ಯುವನ್ನು ಹೇಗೆ ಕೊಂದರು?

**ಸರ್ವೋ ವಿಮೃಶತೇ ಜನ್ತುಃ ಕೃಚ್ಛ್ರಸ್ಥೋ ಧರ್ಮದರ್ಶನಮ್ ।**
**ಪದಸ್ಥಃ ಪಿಹಿತಂ ದ್ವಾರಂ ಪರಲೋಕಸ್ಯ ಪಶ್ಯತಿ ॥೫೯॥**

ಪ್ರಾಯಶಃ ಎಲ್ಲ ಪ್ರಾಣಿಗಳೂ (ಮನುಷ್ಯರೂ) ತಾವು ಸಂಕಟದಲ್ಲಿ ಸಿಲುಕಿದಾಗ ಆ ಸಂಕಟದಿಂದ ಪಾರಾಗಲು ಧರ್ಮಶಾಸ್ತ್ರವನ್ನು ಉಲ್ಲೇಖಿಸುತ್ತಾರೆ. ಆದರೆ ಅದೇ ಮನುಷ್ಯರು ಉತ್ತಮಪದವಿಯಲ್ಲಿದ್ದಾಗ ಅಥವಾ ಉತ್ತಮಸ್ಥಿತಿಯಲ್ಲಿದ್ದಾಗ ಪರಲೋಕದ ದ್ವಾರವು ಸರ್ವಕಾಲದಲ್ಲಿಯೂ ಮುಚ್ಚಿರುವುದೆಂದೇ ಭಾವಿಸುತ್ತಾರೆ. ಪರಲೋಕವೆಂಬುದೊಂದು ಇದೆ

ಯೆಂದೇ ಅವರು ಆ ಸಮಯದಲ್ಲಿ ಭಾವಿಸುವುದಿಲ್ಲ. ಧರ್ಮಾಧರ್ಮಗಳನ್ನು ವಿವೇಚಿಸಹೋಗುವುದಿಲ್ಲ.

ವೀರ ದುರ್ಯೋಧನ! ಕವಚವನ್ನು ಧರಿಸು. ತಲೆಗೂದಲುಗಳನ್ನು ಬಂಧಿಸು. ಯುದ್ಧಮಾಡಲು ಬೇಕಾಗಬಹುದಾದ ಮತ್ತಾವ ವಸ್ತುವಾದರೂ ನಿನ್ನಲ್ಲಿಲ್ಲದಿದ್ದರೆ ಅವನ್ನೂ ನೀನೂ ಪಡೆದುಕೊಳ್ಳಬಹುದು.

**ಇಮಮೇಕಂ ಚ ತೇ ಕಾಮಂ ವೀರ ಭೂಯೋ ದದಾಮ್ಯಹಮ್ ।**
**ಪಞ್ಚಾನಾಂ ಪಾಣ್ಡವೇಯಾನಾಂ ಯೇನ ತ್ವಂ ಯೋದ್ಧುಮಿಚ್ಛಸಿ ॥**

**ತಂ ಹತ್ವಾ ವೈ ಭವಾನ್ರಾಜಾ ಹತೋ ವಾ ಸ್ವರ್ಗಮಾಪ್ನುಹಿ ।**
**ಋತೇ ಚ ಜೀವಿತಾದ್ವೀರ ಯುದ್ಧೇ ಕಿಂ ಕರ್ಮ ತೇ ಪ್ರಿಯಮ್ ॥**

ದುರ್ಯೋಧನ! ನಾನು ಪುನಃ ನಿನಗೆ ಪ್ರಿಯವಾದ ವರವೊಂದನ್ನು ಕೊಡುತ್ತಿದ್ದೇನೆ. ಐವರು ಪಾಂಡವರಲ್ಲಿ ನೀನು ಯಾರೊಡನೆಯಾದರೂ ಯುದ್ಧವನ್ನು ಮಾಡಲು ಅಪೇಕ್ಷಿಸಬಹುದು. ಐವರಲ್ಲಿ ಒಬ್ಬನನ್ನು ಸಂಹರಿಸಿದರೂ ಈ ಭೂಮಂಡಲಕ್ಕೆ ನೀನೇ ರಾಜನಾಗುವೆ. ಒಂದು ವೇಳೆ ಆ ಒಬ್ಬ ಪಾಂಡವನಿಂದಲೇ ನೀನು ಹತನಾದರೆ ಸ್ವರ್ಗವನ್ನು ಪಡೆಯುವೆ. ವೀರನೇ! ಪ್ರಾಣವೊಂದರ ಹೊರತಾಗಿ ನಾವು ಯುದ್ಧದಲ್ಲಿ ನಿನ್ನ ಸಲುವಾಗಿ ಇದಕ್ಕಿಂತಲೂ ಪ್ರಿಯವಾದ ಯಾವ ಕಾರ್ಯವನ್ನು ತಾನೇ ಮಾಡಲು ಸಾಧ್ಯವಿದೆ? (ನಾವು ನಿನಗೆ ಜೀವದಾನಮಾಡದೇ ಇದ್ದರೂ ನಿನ್ನ ಮನಸ್ಸಿನ ಅಭಿಲಾಷೆಯಂತೆ ನಡೆದುಕೊಂಡಿರುತ್ತೇವೆ. ನಮ್ಮ ಈ ಉದಾರನೀತಿಯು ನಿನಗೆ ಅತ್ಯಂತಪ್ರಿಯಕರವಾಗಿರುವುದೆಂಬುದರಲ್ಲಿ ಸಂದೇಹವೇ ಇಲ್ಲ.")

ಧೃತರಾಷ್ಟ್ರಮಹಾರಾಜ! ಅನಂತರ ನಿನ್ನ ಮಗನು ಸುವರ್ಣ ಮಯವಾದ ಕವಚವನ್ನೂ, ಸುವರ್ಣದಿಂದ ಚಿತ್ರಿತವಾಗಿ ಮಾಡಲ್ಪಟ್ಟಿದ್ದ ವಿಚಿತ್ರವಾದ ಶಿರಸ್ತ್ರಾಣವನ್ನೂ ತೊಟ್ಟುಕೊಂಡನು. ಶಿರಸ್ತ್ರಾಣವನ್ನು ತಲೆಯಲ್ಲಿ ಧರಿಸಿದ್ದ, ಸುವರ್ಣಮಯವಾಗಿದ್ದ ಕವಚವನ್ನು ತೊಟ್ಟುಕೊಂಡಿದ್ದ ನಿನ್ನ ಮಗನು–ಸುವರ್ಣಮಯವಾಗಿದ್ದ, ಪರ್ವತಗಳಿಗೆ ಒಡೆಯನಾದ ಮೇರು ಪರ್ವತರಾಜನಂತೆಯೇ ಪ್ರಕಾಶಿಸಿದನು. ಯುದ್ಧರಂಗದಲ್ಲಿ ಸಜ್ಜಾಗಿ ನಿಂತಿದ್ದ

ಕವಚವನ್ನು ತೊಟ್ಟು ಯುದ್ಧಸನ್ನದ್ಧನಾಗಿದ್ದ, ಗದಾಪಾಣಿಯಾದ ನಿನ್ನ ಮಗ ದುರ್ಯೋಧನನು ಎಲ್ಲ ಪಾಂಡವರನ್ನೂ ಕುರಿತು ಹೇಳಿದನು :

**ಭ್ರಾತೄಣಾಂ ಭವತಾಮೇಕೋ ಯುಧ್ಯತಾಂ ಗದಯಾ ಮಯಾ ।**
**ಸಹದೇವೇನ ವಾ ಯೋತ್ಸ್ಯೇ ಭೀಮೇನ ನಕುಲೇನ ವಾ ।**
**ಅಥವಾ ಫಾಲ್ಗುನೇನಾದ್ಯ ತ್ವಯಾ ವಾ ಭರತರ್ಷಭ ॥೬೬॥**

"ಯುಧಿಷ್ಠಿರ! ಭ್ರಾತೃಗಳಾದ ನಿಮ್ಮೈವರಲ್ಲಿ ಯಾವೊಬ್ಬನಾದರೂ ಮುಂದೆ ಬಂದು ಗದೆಯನ್ನೇ ಆಯುಧವನ್ನಾಗಿ ಮಾಡಿಕೊಂಡು ನನ್ನೊಡನೆ ಯುದ್ಧಮಾಡಲಿ. ನಾನಂತೂ ನಿಮ್ಮೈವರಲ್ಲಿ ಯಾರೊಡನೆಯಾದರೂ ಯುದ್ಧಮಾಡಲು ಸಿದ್ಧನಾಗಿದ್ದೇನೆ. ಸಹದೇವನೊಡನೆಯಾದರೂ ಯುದ್ಧ ಮಾಡುತ್ತೇನೆ. ಭೀಮನೊಡನೆ ಅಥವಾ ನಕುಲನೊಡನೆಯಾದರೂ ಯುದ್ಧ ಮಾಡುತ್ತೇನೆ. ಈ ಸಮಯದಲ್ಲಿ ಅರ್ಜುನನೊಡನೆಯಾದರೂ ಯುದ್ಧ ಮಾಡುತ್ತೇನೆ. ಅಥವಾ ನಿನ್ನೊಡನೆಯಾದರೂ ಯುದ್ಧಮಾಡುತ್ತೇನೆ. (ಯುಧಿಷ್ಠಿರನು ಹಿಂದಿನ ಪ್ರಕರಣದಲ್ಲಿ ನಮ್ಮೈವರಲ್ಲಿ ಯಾರೊಡನೆ ಯಾದರೂ ನೀನು ಯುದ್ಧಮಾಡಬಹುದು–ಎಂದು ಹೇಳಿದ್ದರೂ ದುರ್ಯೋಧನನು ತನಗೆ ಅಸಮಾನರನ್ನು ಯುದ್ಧಕ್ಕೆ ಆರಿಸಿಕೊಳ್ಳದೇ ಯಾರೊಡನೆಯಾದರೂ ಯುದ್ಧಮಾಡುವೆನೆಂದು ಹೇಳಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ.)

ಸಮರಾಂಗಣಕ್ಕೆ ಹೋಗಿ ನೀನು ಸಮ್ಮತಿಸಿ ಕಳುಹಿಸಿಕೊಟ್ಟ ಒಬ್ಬನೊಡನೆ ಯುದ್ಧಮಾಡುತ್ತೇನೆ ಮತ್ತು ವಿಜಯವನ್ನು ಗಳಿಸುವೆನೆಂಬ ವಿಶ್ವಾಸವೂ ನನಗಿದೆ. ಪುರುಷಸಿಂಹನೇ! ಸುವರ್ಣಮಯವಾದ ಪಟ್ಟಿಯಿಂದ ಕೂಡಿರುವ ಈ ಗದೆಯಿಂದ ಸುದುರ್ಗಮವಾದ, ಇದುವರೆಗೂ ಬೆಳೆದು ಬಂದಿರುವ ನಮ್ಮಿಬ್ಬರ ವೈರದ ಪಾರವನ್ನು ಹೊಂದುತ್ತೇನೆ. (ಇಂದಿಗೆ ನಮ್ಮಿಬ್ಬರ ವೈರದ ಅಂತ್ಯವಾಗುತ್ತದೆ.)

**ಗದಾಯುದ್ಧೇ ನ ಮೇ ಕಶ್ಚಿತ್ಸದೃಶೋಽಸ್ತೀತಿ ಚಿನ್ತಯೇ ।**
**ಗದಯಾ ವೋ ಹನಿಷ್ಯಾಮಿ ಸರ್ವಾನೇವ ಸಮಾಗತಾನ್ ॥೬೯॥**

ಧರ್ಮಜ! ಗದಾಯುದ್ಧದಲ್ಲಿ ನನಗೆ ಸಮಾನರಾದವರು ಯಾರೂ

ಇಲ್ಲವೆಂಬುದನ್ನು ನಾನು ಹಲವು ಬಾರಿ ಚಿಂತಿಸಿದ್ದೇನೆ. ನನ್ನೊಡನೆ ಯುದ್ಧಕ್ಕೆ ಬರಲಿರುವ ನಿಮ್ಮೆಲ್ಲರನ್ನೂ ಒಬ್ಬೊಬ್ಬರನ್ನಾಗಿ ಈ ಗದೆಯಿಂದಲೇ ಸಂಹಾರಮಾಡುತ್ತೇನೆ.

**ನ ಮೇ ಸಮರ್ಥಾಃ ಸರ್ವೇ ವೈ ಯೋದ್ಧುಂ ನ್ಯಾಯೇನ ಕೇಚನ ।**
**ನ ಯುಕ್ತಮಾತ್ಮನಾ ವಕ್ತುಮೇವಂ ಗರ್ವೋದ್ಧತಂ ವಚಃ ।**
**ಅಥವಾ ಸಫಲಂ ಹ್ಯೇತತ್ಕರಿಷ್ಯೇ ಭವತಾಂ ಪುರಃ ॥೭೦॥**

ನೀವೆಲ್ಲರೂ ಸೇರಿಯೇ ಆಗಲೀ, ನಿಮ್ಮಲ್ಲಿರುವ ವೀರರಲ್ಲಿ ಒಬ್ಬೊಬ್ಬ ವೀರನೇ ಆಗಲೀ – ಯಾರೂ ನನ್ನೊಡನೆ ನ್ಯಾಯಸಮ್ಮತವಾದ ರೀತಿಯಲ್ಲಿ ಯುದ್ಧಮಾಡುವ ಸಾಮರ್ಥ್ಯವನ್ನು ಹೊಂದಿರುವುದಿಲ್ಲ. ಆದರೆ ಗರ್ವದಿಂದ ಉದ್ಧತವಾಗಿರುವಂತೆ ಕಾಣುವ ಇಂತಹ ಮಾತನ್ನು ನಾನೇ ಹೇಳುವುದು ಯುಕ್ತವಾಗಿಯೂ ಕಾಣುವುದಿಲ್ಲ. ಒಂದು ವೇಳೆ ಹೇಳಿದರೂ ತಪ್ಪೇನೂ ಇಲ್ಲ. ಏಕೆಂದರೆ : ನಾನು ಹೇಳಿದ ಈ ಮಾತನ್ನು ಸ್ವಲ್ಪ ಹೊತ್ತಿನಲ್ಲಿಯೇ ನಿಮ್ಮ ಸಮಕ್ಷದಲ್ಲಿಯೇ ಸಫಲವನ್ನಾಗಿ ಮಾಡುತ್ತೇನೆ. ನಾನು ಹೇಳಿದುದನ್ನು ಕಾರ್ಯತಃ ಮಾಡಿ ತೋರಿಸುತ್ತೇನೆ. ಆಗ ನನ್ನ ಈ ಮಾತು ಗರ್ವದಿಂದ ಕೂಡಿದ ಉದ್ಧತವಾದ ಮಾತಾಗುವುದಿಲ್ಲ. ಯಥಾರ್ಥವಾದ ಮಾತೇ ಆಗುತ್ತದೆ.

**ಅಸ್ಮಿನ್ಮುಹೂರ್ತೇ ಸತ್ಯಂ ವಾ ಮಿಥ್ಯಾ ವೈತದ್ಭವಿಷ್ಯತಿ ।**
**ಗೃಹ್ಣಾತು ಚ ಗದಾಂ ಯೋ ವೈ ಯೋತ್ಸ್ಯತೇಽದ್ಯ ಮಯಾ ಸಹ ॥**

ನಾನು ಹೇಳಿದುದು ಸತ್ಯವೋ-ಸುಳ್ಳೋ ಎಂಬುದು ಈ ಮುಹೂರ್ತದಲ್ಲಿಯೇ ತಿಳಿದುಹೋಗುತ್ತದೆ. ಯುಧಿಷ್ಠಿರ! ನನ್ನೊಡನೆ ಯುದ್ಧಮಾಡುವ ವೀರನು ಗದೆಯನ್ನೆತ್ತಿಕೊಂಡು ಮುಂದೆ ಬರಲಿ.”

ಇ೨ನೆಯ ಅಧ್ಯಾಯವು ಮುಗಿಯಿತು.

೩೩ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಯುಧಿಷ್ಠಿರನನ್ನು ಆಕ್ಷೇಪಿಸಿದುದು: ಭೀಮಸೇನನ ಪ್ರಶಂಸೆ: ಭೀಮ-ದುರ್ಯೋಧನರ ವಾಗ್ಯುದ್ಧ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಹೀಗೆ ದುರ್ಯೋಧನನು ಆತ್ಮಶ್ಲಾಘನೆಮಾಡಿ ಕೊಳ್ಳುತ್ತಾ ಬಾರಿ-ಬಾರಿಗೂ ಗರ್ಜಿಸುತ್ತಿರಲಾಗಿ, ಯುಧಿಷ್ಠಿರನ ವಿಷಯದಲ್ಲಿ ಪರಮಕ್ರುದ್ಧನಾಗಿದ್ದ ಶ್ರೀಕೃಷ್ಣನು ಧರ್ಮಜನೊಡನೆ ಹೇಳಿದನು :

**ಯದಿ ನಾಮ ಹ್ಯಯಂ ಯುದ್ಧೇ ವರಯೇತ್ತ್ವಾಂ ಯುಧಿಷ್ಠಿರ ।**
**ಅರ್ಜುನಂ ನಕುಲಂ ಚೈವ ಸಹದೇವಮಥಾಪಿ ವಾ ॥೨॥**

"ಯುಧಿಷ್ಠಿರ! ಎಂತಹ ವರವನ್ನು ಈ ದುರ್ಯೋಧನನಿಗೆ ನೀನು ಕೊಟ್ಟುಬಿಟ್ಟೆ? ಈ ಸಮಯದಲ್ಲಿ ಒಂದು ವೇಳೆ ಅವನು ನಿನ್ನನ್ನೋ, ಅರ್ಜುನ-ನಕುಲ-ಸಹದೇವರನ್ನೋ ಯುದ್ಧಮಾಡಲು ಆರಿಸಿಕೊಂಡು ಬಿಟ್ಟಿದ್ದರೆ ಪರ್ಯವಸಾನವೇನಾಗುತ್ತಿತ್ತು?

**ಕಿಮಿದಂ ಸಾಹಸಂ ರಾಜಂಸ್ತ್ವಯಾ ವ್ಯಾಹೃತಮೀದೃಶಮ್ ।**
**ಏಕಮೇವ ನಿಹತ್ಯಾಜೌ ಭವ ರಾಜಾ ಕುರುಷ್ವಿತಿ ॥೩॥**

ಸಂಭವಿಸಬಹುದಾದ ಅಪಾಯವನ್ನು ಸ್ವಲ್ಪವಾದರೂ ವಿಚಾರ ಮಾಡದೇ – 'ನಮ್ಮೈವರಲ್ಲಿ ಒಬ್ಬನೇ ಒಬ್ಬನನ್ನು ಸಂಹರಿಸಿದರೂ ನೀನು ಕುರುಗಳಿಗೆ ರಾಜನಾಗಬಹುದು'–ಎಂದು ದುರ್ಯೋಧನನೊಡನೆ ಏಕೆ ಹೇಳಿದೆ?

**ನ ಸಮರ್ಥಾನಹಂ ಮನ್ಯೇ ಗದಾಹಸ್ತಸ್ಯ ಸಂಯುಗೇ ।**
**ಏತೇನ ಹಿ ಕೃತಾ ಯೋಗ್ಯಾ ವರ್ಷಾಣೀಹ ತ್ರಯೋದಶ ।**
**ಆಯಸೇ ಪುರುಷೇ ರಾಜನ್ಭೀಮಸೇನಜಿಘಾಂಸಯಾ ॥೪॥**

ಯುದ್ಧದಲ್ಲಿ ಗದಾಪಾಣಿಯಾಗಿ ಬರುವ ದುರ್ಯೋಧನನನ್ನು ಎದುರಿಸಲು ನಿಮ್ಮಲ್ಲಿ ಯಾರೂ ಸಮರ್ಥರಲ್ಲವೆಂಬುದೇ ನನ್ನ ಭಾವನೆಯಾಗಿದೆ.

ಭೀಮಸೇನನನ್ನು ಸಂಹರಿಸುವ ಇಚ್ಛೆಯಿಂದಲೇ ಈ ದುರ್ಯೋಧನನು ಭೀಮಸೇನನ ಲೋಹದ ಮೂರ್ತಿಯನ್ನು ನಿರ್ಮಿಸಿಕೊಂಡು ಹದಿಮೂರು ವರ್ಷಗಳಿಂದಲೂ ನಿರಂತರವಾಗಿ ಆ ಪ್ರತಿಮೆಯೊಡನೆಯೇ ಗದಾಯುದ್ಧವನ್ನು ಅಭ್ಯಾಸಮಾಡಿರುತ್ತಾನೆ.

**ಕಥಂ ನಾಮ ಭವೇತ್ಕಾರ್ಯಮಸ್ಮಾಭಿರ್ಭರತರ್ಷಭ ।**
**ಸಾಹಸಂ ಕೃತವಾಂಸ್ತ್ವಂ ತು ಹ್ಯನುಕ್ರೋಶಾನ್ನೃಪೋತ್ತಮ ॥೫॥**

ಈಗ ನಾವು ನಿನ್ನ ಕಾರ್ಯವನ್ನು ಪೂರೈಸಿಕೊಡುವುದಾದರೂ ಹೇಗೆ? (ನಿನಗೆ ವಿಜಯವನ್ನು ಸಾಧಿಸಿಕೊಡುವ ಮಾರ್ಗವು ಯಾವುದಿದೆ?) ಕೇವಲ ದಯಾಪರನಾಗಿ ದುಃಸಾಹಸಪೂರ್ಣವಾದ ಕಾರ್ಯವನ್ನು ಮಾಡಿರುವೆ.

**ನಾನ್ಯಮಸ್ಯಾನುಪಶ್ಯಾಮಿ ಪ್ರತಿಯೋದ್ಧಾರಮಾಹವೇ ।**
**ಋತೇ ವೃಕೋದರಾತ್ಪಾರ್ಥಾತ್ಸ ಚ ನಾತಿಕೃತಶ್ರಮಃ ॥೬॥**

ಕುಂತಿಯ ಮಗನಾದ ಭೀಮಸೇನನೊಬ್ಬನನ್ನು ಬಿಟ್ಟು ಯುದ್ಧದಲ್ಲಿ ದುರ್ಯೋಧನನಿಗೆದುರಾಗಿ ನಿಂತು ಯುದ್ಧಮಾಡುವ ಸಾಮರ್ಥ್ಯವಿರುವ ಅನ್ಯಯೋಧನನ್ನೇ ನಾನು ಕಾಣುತ್ತಿಲ್ಲ. ಆದರೆ ಭೀಮಸೇನನಾದರೋ (ಇತ್ತೀಚಿನ ವರ್ಷಗಳಲ್ಲಿ) ಗದಾಯುದ್ಧದಲ್ಲಿ ಹೆಚ್ಚಿನ ಪರಿಶ್ರಮವನ್ನು ಪಡೆದುಕೊಂಡಿರುವುದಿಲ್ಲ. (ದುರ್ಯೋಧನನೊಡನೆ ಯುದ್ಧಮಾಡಲು ಪ್ರಕೃತ ಇವನಿಗಿರುವ ಪರಿಶ್ರಮವು ಸಾಲದು.)

**ತದಿದಂ ದ್ಯೂತಮಾರಬ್ಧಂ ಪುನರೇವ ಯಥಾ ಪುರಾ ।**
**ವಿಷಮಂ ಶಕುನೇಶ್ಚೈವ ತವ ಚೈವ ವಿಶಾಮ್ಪತೇ ॥೭॥**

ಯುಧಿಷ್ಠಿರ! ಹಿಂದಿನಂತೆಯೇ ಈಗಲೂ ಪುನಃ ಜೂಜಾಟವೇ ಪ್ರಾರಂಭವಾಗಿಬಿಟ್ಟಿತು. ಇಂದಿನ ನಿನ್ನ ಜೂಜಾಟವು ಹಿಂದೆ ಶಕುನಿಯೊಡನೆ ಆಡಿದ ಜೂಜಾಟದಂತೆಯೇ ವಿಷಮವಾದುದು.

**ಬಲೀ ಭೀಮಃ ಸಮರ್ಥಶ್ಚ ಕೃತೀ ರಾಜಾ ಸುಯೋಧನಃ ।**
**ಬಲವಾನ್ವಾ ಕೃತೀ ವೇತಿ ಕೃತೀ ರಾಜನ್ವಿಶಿಷ್ಯತೇ ॥೮॥**

ಭೀಮಸೇನನು ಬಲಿಷ್ಠನು ಮತ್ತು ಸಮರ್ಥನು. ಸುಯೋಧನ

ರಾಜನು ಕುಶಲನು. ಗದಾಯುದ್ಧದ ಅಭ್ಯಾಸವನ್ನು ಅಧಿಕವಾಗಿ ಮಾಡಿರುತ್ತಾನೆ. ಬಲಿಷ್ಠನಾದವನು - ಕುಶಲನಾದವನು ಅಥವಾ ಚೆನ್ನಾಗಿ ಅಭ್ಯಾಸ ಮಾಡಿರುವವನು–ಈ ಇಬ್ಬರಲ್ಲಿ ಯಾರು ಅಧಿಕರು ಎಂಬುದನ್ನು ಜಿಜ್ಞಾಸೆಮಾಡಿ ಹೇಳುವುದಾದರೆ ಕೃತೀ ಅಥವಾ ಕುಶಲನೇ ಅಧಿಕನೆಂಬುದು ಸ್ಪಷ್ಟವಾಗಿ ಕಾಣುತ್ತದೆ.

**ಸೋಽಯಂ ರಾಜಂಸ್ತ್ವಯಾ ಶತ್ರುಃ ಸಮೇ ಪಥಿ ನಿವೇಶಿತಃ ।**
**ನ್ಯಸ್ತಶ್ಚಾತ್ಮಾ ಸುವಿಷಮೇ ಕೃಚ್ಛ್ರಮಾಪಾದಿತಾ ವಯಮ್ ॥೯॥**

ಯುಧಿಷ್ಠಿರ! ನೀನೀಗ ಕಷ್ಟದಲ್ಲಿ ಬಿದ್ದು ತೊಳಲುತ್ತಿದ್ದ ಶತ್ರುವನ್ನು ಸಮಮಾರ್ಗದಲ್ಲಿ ನಿಲ್ಲಿಸಿದೆ. ಸಮಮಾರ್ಗದಲ್ಲಿದ್ದ ನೀನು ವಿಷಮಸ್ಥಾನದಲ್ಲಿ ಬಿದ್ದಿರುವೆ. ಈ ಸಮಯದಲ್ಲಿ (ನಿಮ್ಮನ್ನುದ್ಧರಿಸಲು ಸಂಕಲ್ಪಿಸಿರುವ) ನಮ್ಮನ್ನೂ ಮಹಾಕಷ್ಟದಲ್ಲಿ ಸಿಕ್ಕಿಸಿದೆ.

**ಕೋ ನು ಸರ್ವಾನ್ವಿನಿರ್ಜಿತ್ಯ ಶತ್ರೂನೇಕೇನ ವೈರಿಣಾ ।**
**ಕೃಚ್ಛ್ರಪ್ರಾಪ್ತೇನ ನ ತಥಾ ಹಾರಯೇದ್ರಾಜ್ಯಮಾಗತಮ್ ।**
**ಪಣಿತ್ವಾ ಚೈಕಪಾಣೇನ ರೋಚಯೇದೇವಮಾಹವಮ್ ॥೧೧॥**

ಯುಧಿಷ್ಠಿರ! ಯಾವನು ತಾನೇ ಸರ್ವಶತ್ರುಗಳನ್ನೂ ಜಯಿಸಿ ಉಳಿದಿರುವ, ಕಷ್ಟದಲ್ಲಿ ಸಿಕ್ಕಿರುವ ಒಬ್ಬನೇ ಒಬ್ಬ ವೈರಿಗೆ ತನ್ನ ಕೈಗೆ ಸಿಕ್ಕಿದಂತಿರುವ ರಾಜ್ಯವನ್ನು ಒಪ್ಪಿಸುವನು? ಹಿಂದೆ ಒಂದೇ ಪಣದಲ್ಲಿ ರಾಜ್ಯವನ್ನು ಕಳೆದುಕೊಂಡು ಅನೇಕ ಕಷ್ಟಗಳನ್ನು ಅನುಭವಿಸಿದ ಯಾವನು ತಾನೇ ಈಗ ಇಂತಹ ಯುದ್ಧಕ್ಕೆ ಇಷ್ಟಪಡುತ್ತಾನೆ? (ಎಲ್ಲ ಶತ್ರುಗಳನ್ನೂ ಜಯಿಸಿಯಾಗಿದೆ. ಒಬ್ಬ ಶತ್ರುವು ಮಾತ್ರ ಉಳಿದಿದ್ದಾನೆ. ಅವನಾದರೋ ಎಲ್ಲವನ್ನೂ ಕಳೆದುಕೊಂಡಿರುತ್ತಾನೆ. ರಥವಾಗಲೀ ವಾಹನವಾಗಲೀ ಅವನ ಬಳಿಯಲ್ಲಿಲ್ಲ. ಅವನನ್ನು ಸಂಹರಿಸಬೇಕಾದುದು ಅಥವಾ ಜಯಿಸಬೇಕಾದುದು ಕರ್ತವ್ಯವೇ ಸರಿ. ಇಂತಹ ಸಮಯದಲ್ಲಿ ಉಪಾಯದಿಂದ ವರ್ತಿಸಬೇಕು. ಉಳಿದಿರುವ ಶತ್ರುವನ್ನು ಉಪಾಯದಿಂದ ಸಂಹರಿಸಬೇಕು. ಇದು ರಾಜನೀತಿ. ಆದರೆ ಯುಧಿಷ್ಠಿರನು ಇದಕ್ಕೆ ವ್ಯತಿರಿಕ್ತವಾಗಿ ವರ್ತಿಸಿದ್ದಾನೆಂಬುದು ಶ್ರೀಕೃಷ್ಣನ ಅಭಿಪ್ರಾಯ. ದುರ್ಯೋಧನನ ವಿಷಯದಲ್ಲಿ ಯಾವ

ವಿಧವಾದ ದಯಾಪರತೆಯೂ ಸಲ್ಲದು. ಇದು ಎರಡು ರೀತಿಗಳಿಂದಲೂ ಸಾಧುವಾಗಿದೆ. ಏಕೈಕ ಶತ್ರುವು ಉಳಿದಿರುವುದರಿಂದ ಅವನನ್ನು ಯಾವುದಾದರೂ ರೀತಿಯಲ್ಲಿ ಕೊನೆಗಾಣಿಸಬೇಕಾದುದು ಕರ್ತವ್ಯವೇ ಹೊರತು ಅವನ ವಿಷಯದಲ್ಲಿ ದಯೆತೋರಬಾರದು – ಎಂಬುದು ಮೊದಲನೆಯ ಕಾರಣ. ಅವನು ಇದುವರೆಗೆ ಪಾಂಡವರ ವಿಷಯದಲ್ಲಿ ವಂಚನೆಯನ್ನೇ ಮಾಡುತ್ತಾ ಬಂದಿರುವುದರಿಂದ ಅಂತಹವನ ವಿಷಯದಲ್ಲಿ ದಯಾಪರತೆಯು ಅಸಾಧು–ಎಂಬುದು ಎರಡನೆಯ ಕಾರಣ. ಕಷ್ಟಪಟ್ಟು ಹದಿನೆಂಟು ದಿವಸಗಳ ಕಾಲ ಯುದ್ಧಮಾಡಿ ಎಲ್ಲ ಶತ್ರುಗಳನ್ನೂ ಸಂಹರಿಸಿ ಉಳಿದಿರುವ ಒಬ್ಬ ಪ್ರಬಲ ಶತ್ರುವಿನ ವಿಷಯದಲ್ಲಿ ಯುಧಿಷ್ಠಿರನು ತೋರಿಸಿದ ದಯಾಪರತೆಯು ಬಹಳ ಅಪಾಯಕಾರಿಯಾದುದು. ಸ್ವಲ್ಪ ವ್ಯತ್ಯಾಸವಾಯಿತೆಂದರೆ ಇದುವರೆಗೂ ಮಾಡಿದುದು ನೀರಿನಲ್ಲಿ ಹೋಮ ಮಾಡಿದಂತೆ ನಿಷ್ಪ್ರಯೋಜಕವೇ ಆಗುತ್ತದೆ. 'ಐವರಲ್ಲಿ ಯಾರನ್ನಾದರೂ ಯುದ್ಧಕ್ಕೆ ಆರಿಸಿಕೊಳ್ಳಬಹುದು; ಹಾಗೆ ಆರಿಸಿಕೊಂಡವನನ್ನು ಸಂಹರಿಸಿದರೆ ಕುರುಚಕ್ರಾಧಿಪತ್ಯವು ದುರ್ಯೋಧನನಿಗೇ ಸೇರುತ್ತದೆ'–ಇದೇ ಅಭಿಪ್ರಾಯವು ದುರ್ಯೋಧನನ ಮನಸ್ಸಿನಲ್ಲಿಯೂ ಇದ್ದಿತೆಂಬುದನ್ನು ಧರ್ಮರಾಜನೇ ಹೇಳುತ್ತಾನೆ. ಯುದ್ಧದಲ್ಲಿ ಇಂತಹ ಯುದ್ಧನಿಯಮವನ್ನು ತಾನಾಗಿಯೇ ಯಾರೂ ಮಾಡಿಕೊಳ್ಳುವುದಿಲ್ಲ. ಹಿಂದೆ ಶಕುನಿಯೊಡನೆ ಆಡಿದ ಜೂಜಾಟಕ್ಕಿಂತಲೂ ಇದು ಅತಿತೀಕ್ಷ್ಣವಾದುದೆಂಬುದು ಶ್ರೀಕೃಷ್ಣನ ಅಭಿಪ್ರಾಯ.)

**ನ ಹಿ ಪಶ್ಯಾಮಿ ತಂ ಲೋಕೇ ಯೋಽದ್ಯ ದುರ್ಯೋಧನಂ ರಣೇ ।**
**ಗದಾಹಸ್ತಂ ವಿಜೇತುಂ ವೈ ಶಕ್ತಃ ಸ್ಯಾದಮರೋಽಪಿ ಹಿ ॥೧೨॥**

ಯುಧಿಷ್ಠಿರ! ಈ ವಿಶ್ವದಲ್ಲಿ ಗದಾಪಾಣಿಯಾದ ದುರ್ಯೋಧನನನ್ನು ಯುದ್ಧದಲ್ಲಿ ಜಯಿಸುವ ಯಾವ ಒಬ್ಬ ವೀರನನ್ನೂ ನಾನು ಕಾಣುತ್ತಿಲ್ಲ. ಮನುಷ್ಯರಲ್ಲಿ ಮಾತ್ರವೇ ಅಲ್ಲ ; ದೇವತೆಗಳಲ್ಲಿಯೂ ಇವನೊಡನೆ ಯುದ್ಧ ಮಾಡಿ ಗೆಲ್ಲುವವರು ಯಾರೂ ಇರುವುದಿಲ್ಲ.

ಗದಾಯುದ್ಧದಲ್ಲಿ ದುರ್ಯೋಧನನು ಮಹಾಕುಶಲನು. ಚೆನ್ನಾಗಿ ಅಭ್ಯಾಸಮಾಡಿರತಕ್ಕವನು. ಆದುದರಿಂದ ಭೀಮಾರ್ಜುನ-ನಕುಲ-ಸಹ

ದೇವರಾಗಲೀ, ನೀನೇ ಆಗಲೀ ನ್ಯಾಯಸಮ್ಮತವಾದ ಯುದ್ಧದಲ್ಲಿ ದುರ್ಯೋಧನನನ್ನು ಖಂಡಿತವಾಗಿಯೂ ಜಯಿಸಲು ಸಾಧ್ಯವಾಗುವುದಿಲ್ಲ.

ಯುಧಿಷ್ಠಿರ! ಹೀಗಿರುವಾಗ ಶತ್ರುವನ್ನು ಕುರಿತು – 'ಗದೆಯಿಂದಲೇ ಯುದ್ಧಮಾಡು' – ಎಂದೇಕೆ ಹೇಳಿದೆ? 'ನಮ್ಮೈವರಲ್ಲಿ ಒಬ್ಬರನ್ನು ಸಂಹರಿಸಿದರೂ ರಾಜನಾಗುವೆ'–ಎಂದು ಹೇಳಿ ಅವನಿಗೇಕೆ ಧೈರ್ಯ ತುಂಬಿದೆ? ಒಂದು ವೇಳೆ ನಾವು ಯುದ್ಧಮಾಡಲು ಭೀಮಸೇನನನ್ನೇ ಆರಿಸಿ ಕಳುಹಿಸಿದರೂ ನ್ಯಾಯರೀತಿಯಲ್ಲಿ ಯುದ್ಧಮಾಡುವ ನಮಗೆ ಜಯವು ಲಭಿಸುವುದರಲ್ಲಿ ಸಂದೇಹವೇ ಇದೆ. ಏಕೆಂದರೆ : ಮಹಾಬಲನಾದ ದುರ್ಯೋಧನನು ಗದಾಯುದ್ಧದಲ್ಲಿ ಪರಿಣತನಾಗಿದ್ದಾನೆ.

**ಏಕಂ ವಾಸ್ಮಾನ್ನಿಹತ್ಯ ತ್ವಂ ಭವ ರಾಜೇತಿ ವೈ ಪುನಃ ।**
**ನೂನಂ ನ ರಾಜ್ಯಭಾಗೇಷಾ ಪಾಣ್ಡೋಃ ಕುನ್ತ್ಯಾಶ್ಚ ಸಂತತಿಃ ।**
**ಅತ್ಯನ್ತವನವಾಸಾಯ ಸೃಷ್ಟಾ ಭೈಕ್ಷ್ಯಾಯ ವಾ ಪುನಃ ॥೧೬॥**

ನೀನು–'ಏಕಂ ನಿಹತ್ಯ ತ್ವಂ ಭವ ರಾಜಾ' – 'ನಮ್ಮಲ್ಲಿ ಒಬ್ಬನನ್ನಾದರೂ ಸಂಹರಿಸಿ ನೀನೇ ರಾಜನಾಗು'–ಎಂದು ಪುನಃ ಪುನಃ ಹೇಳುತ್ತಿರುವುದನ್ನು ನೋಡಿದರೆ ಪಾಂಡು-ಕುಂತಿಯರಿಗೆ ಸಂಬಂಧಿಸಿದ ಈ ಸಂತತಿಗೆ ರಾಜ್ಯವನ್ನು ಹೊಂದುವ ಯೋಗವೇ ಇಲ್ಲವೆಂಬುದು ನಿಶ್ಚಯವಾಗಿ ಕಾಣುತ್ತಿದೆ. ನಿರಂತರವನವಾಸಮಾಡಲು ಅಥವಾ ಭಿಕ್ಷೆಮಾಡಿಕೊಂಡು ಹೊಟ್ಟೆಹೊರೆಯಲು ಮಾತ್ರವೇ ಈ ರಾಜಕುಮಾರರ ಸೃಷ್ಟಿಯಾಗಿದೆ."

ಶ್ರೀಕೃಷ್ಣನ ಮಾತುಗಳನ್ನು ಕೇಳಿದ ಭೀಮಸೇನನು ಶ್ರೀಕೃಷ್ಣನೊಡನೆ ಹೇಳಿದನು :

**ಮಧುಸೂದನ ಮಾ ಕಾರ್ಷೀರ್ವಿಷಾದಂ ಯದುನನ್ದನ ।**
**ಅದ್ಯ ಪಾರಂ ಗಮಿಷ್ಯಾಮಿ ವೈರಸ್ಯ ಭೃಶದುರ್ಗಮಮ್ ॥೧೭॥**

"ಮಧುಸೂದನ! ಯುಧಿಷ್ಠಿರನು ಹೇಳಿದುದಕ್ಕೆ ನೀನು ವಿಷಾದಿಸುವ ಕಾರಣವಿಲ್ಲ. ಅತ್ಯಂತ ದುರ್ಗಮವಾದ ವೈರದ ದಡವನ್ನು ನಾನು ಈಗಲೇ ಸೇರುತ್ತೇನೆ.

**ಅಹಂ ಸುಯೋಧನಂ ಸಂಖ್ಯೇ ಹನಿಷ್ಯಾಮಿ ನ ಸಂಶಯಃ ।**
**ವಿಜಯೋ ವೈ ಧ್ರುವಃ ಕೃಷ್ಣ ಧರ್ಮರಾಜಸ್ಯ ದೃಶ್ಯತೇ ॥೧೮॥**

ಯುದ್ಧದಲ್ಲಿ ನಾನು ದುರ್ಯೋಧನನನ್ನು ನಿಃಸಂಶಯವಾಗಿ ಸಂಹರಿಸುತ್ತೇನೆ. ಧರ್ಮರಾಜನಿಗೆ ವಿಜಯವು ನಿಶ್ಚಯವೆಂಬುದು ಬಹಳ ಸ್ಪಷ್ಟವಾಗಿ ಕಾಣುತ್ತಿದೆ.

**ಅಧ್ಯರ್ಧೇನ ಗುಣೇನೇಯಂ ಗದಾ ಗುರುತರೀ ಮಮ ॥೧೯॥**

**ನ ತಥಾ ಧಾರ್ತರಾಷ್ಟ್ರಸ್ಯ ಮಾ ಕಾರ್ಷೀರ್ಮಾಧವ ವ್ಯಥಾಮ್ ।**
**ಅಹಮೇನಂ ಹಿ ಗದಯಾ ಸಂಯುಗೇ ಯೋದ್ಧುಮುತ್ಸಹೇ ॥೨೦॥**

ನನ್ನ ಈ ಗದೆಯು ದುರ್ಯೋಧನನ ಗದೆಗಿಂತಲೂ ಒಂದೂವರೆ ಯಷ್ಟು ಹೆಚ್ಚು ಭಾರಯುಕ್ತವಾಗಿದೆ. ದುರ್ಯೋಧನನಲ್ಲಿರುವ ಗದೆಯು ನನ್ನ ಗದೆಗೆ ಸಮಾನವಾಗಿಲ್ಲ. ಮಾಧವ! ಆದುದರಿಂದ ನೀನು ವ್ಯಥೆಪಡುವ ಕಾರಣವಿಲ್ಲ. ನಾನೂ ಈ ಗದೆಯಿಂದಲೇ ರಣರಂಗದಲ್ಲಿ ಈ ದುರ್ಯೋಧನ ನೊಡನೆ ಯುದ್ಧಮಾಡಲು ಉತ್ಸುಕನಾಗಿದ್ದೇನೆ. (ಸಮರ್ಥನಾಗಿದ್ದೇನೆ.)

ಜನಾರ್ದನ! ನಾನು ದುರ್ಯೋಧನನೊಡನೆ ಮಾಡುವ ಯುದ್ಧವನ್ನು ನೀವೆಲ್ಲರೂ ನೋಡುತ್ತಿರಿ. ನಾನಾವಿಧವಾದ ಶ್ರೇಷ್ಠವಾದ ಆಯುಧಗಳನ್ನು ಧರಿಸಿರುವ, ದೇವತೆಗಳಿಂದ ಕೂಡಿದ ಮೂರು ಲೋಕದವರನ್ನೂ ಎದುರಿಸಿ ನಾನು ಯುದ್ಧಮಾಡಬಲ್ಲೆನು. ಹೀಗಿರುವಾಗ ದುರ್ಯೋಧನನ ವಿಷಯದಲ್ಲಿ ಹೇಳುವುದೇನಿದೆ?"

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಹೀಗೆ ವೀರೋಚಿತವಾದ ಮಾತುಗಳನ್ನಾಡಿದ ವೃಕೋದರನನ್ನು ಪರಮಹೃಷ್ಟನಾದ ಶ್ರೀಕೃಷ್ಣನು ಬಹುವಾಗಿ ಪ್ರಶಂಸೆ ಮಾಡುತ್ತಾ ಅವನೊಡನೆ ಈ ಮಾತುಗಳನ್ನು ಹೇಳಿದನು :

**ತ್ವಾಮಾಶ್ರಿತ್ಯ ಮಹಾಬಾಹೋ ಧರ್ಮರಾಜೋ ಯುಧಿಷ್ಠಿರಃ ।**
**ನಿಹತಾರಿಃ ಸ್ವಕಾಂ ದೀಪ್ತಾ ಶ್ರಿಯಂ ಪ್ರಾಪ್ತೋ ನ ಸಂಶಯಃ ।**
**ತ್ವಯಾ ವಿನಿಹತಾಃ ಸರ್ವೇ ಧೃತರಾಷ್ಟ್ರಸುತಾ ರಣೇ ॥೨೪॥**

"ಮಹಾಬಾಹುವೇ! ವೃಕೋದರ! ಧರ್ಮಪುತ್ರನಾದ ಯುಧಿಷ್ಠಿರನು ನಿನ್ನನ್ನೇ ಆಶ್ರಯಿಸಿ ಹತಶತ್ರುವಾಗಿ ತನ್ನ ಉಜ್ಜ್ವಲವಾದ ರಾಜ್ಯಲಕ್ಷ್ಮಿಯನ್ನು ಪಡೆದುಕೊಳ್ಳುತ್ತಾನೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ. ಯುದ್ಧದಲ್ಲಿ ನೀನೊಬ್ಬನೇ ಧೃತರಾಷ್ಟ್ರನ ಮಕ್ಕಳೆಲ್ಲರನ್ನೂ ಸಂಹರಿಸಿದೆ. ರಾಜರು, ರಾಜಪುತ್ರರು, ಮಹಾಗಜಸೈನಿಕರು–ಎಲ್ಲರೂ ನಿನ್ನಿಂದಲೇ ಹತರಾದರು. ಕಲಿಂಗರು, ಮಾಗಧರು, ಪ್ರಾಚ್ಯರು, ಗಾಂಧಾರರು, ಕುರುದೇಶದವರು–ಈ ಎಲ್ಲರೂ ನಿನ್ನೊಡನೆ ಯುದ್ಧಮಾಡಲು ಬಂದು ಮಹಾಸಮರದಲ್ಲಿ ಹತರಾಗಿಹೋದರು.

**ಹತ್ವಾ ದುರ್ಯೋಧನಂ ಚಾಪಿ ಪ್ರಯಚ್ಛೋರ್ವೀಂ ಸಸಾಗರಾಮ್ ।**
**ಧರ್ಮರಾಜಾಯ ಕೌನ್ತೇಯ ಯಥಾ ವಿಷ್ಣುಃ ಶಚೀಪತೇಃ ॥೨೬॥**

"ಕೌಂತೇಯ! ಶತ್ರುಪಕ್ಷದಲ್ಲಿ ಏಕಾಕಿಯಾಗಿ ಉಳಿದಿರುವ ದುರ್ಯೋಧನನನ್ನೂ ಸಂಹರಿಸಿ–ವಿಷ್ಣುವು ಶಚೀಪತಿಯಾದ ಇಂದ್ರನಿಗೆ ಮೂರು ಲೋಕಗಳನ್ನೂ ಒಪ್ಪಿಸಿದಂತೆ–ನೀನು ಕುಂತಿಯ ಮಗನಾದ ಧರ್ಮರಾಜನಿಗೆ ಸಾಗರಮೇಖಲೆಯಾದ ಭೂಮಿಯನ್ನು ಸಮರ್ಪಿಸು.

**ತ್ವಾಂ ಚ ಪ್ರಾಪ್ಯ ರಣೇ ಪಾಪೋ ಧಾರ್ತರಾಷ್ಟ್ರೋ ವಿನಂಕ್ಷ್ಯತಿ ।**
**ತ್ವಮಸ್ಯ ಸಕ್ಥಿನೀ ಭಂಕ್ತ್ವಾ ಪ್ರತಿಜ್ಞಾಂ ಪಾಲಯಿಷ್ಯಸಿ ॥೨೭॥**

ಪಾಪಿಷ್ಠನಾದ ದುರ್ಯೋಧನನು ನಿನ್ನೊಡನೆ ಯುದ್ಧದಲ್ಲಿ ತೊಡಗಿ ವಿನಾಶಹೊಂದುತ್ತಾನೆ. ಈ ಗದಾಯುದ್ಧದಲ್ಲಿ ನೀನವನ ಎರಡು ತೊಡೆಗಳನ್ನೂ ಮುರಿದು ನಿನ್ನ ಪ್ರತಿಜ್ಞೆಯನ್ನು ಪೂರ್ಣಮಾಡಿಕೊಳ್ಳುವೆ.

ಆದರೆ ಅವನೊಡನೆ ಯುದ್ಧಮಾಡುವಾಗ ಬಹಳ ಎಚ್ಚರಿಕೆಯಿಂದಿರಬೇಕು.

**ಯತ್ನೇನ ತು ಸದಾ ಪಾರ್ಥ ಯೋದ್ಧವ್ಯೋ ಧೃತರಾಷ್ಟ್ರಜಃ ।**
**ಕೃತೀ ಚ ಬಲವಾಂಶ್ಚೈವ ಯುದ್ಧಶೌಣ್ಡಶ್ಚ ನಿತ್ಯದಾ ॥೨೮॥**

ಪ್ರಯತ್ನಪೂರ್ವಕವಾಗಿ (ಸದಾ ಅಪ್ರಮತ್ತನಾಗಿ) ದುರ್ಯೋಧನನೊಡನೆ ನೀನು ಯುದ್ಧಮಾಡಬೇಕು. ಏಕೆಂದರೆ : ಅವನು ಕುಶಲನು ; ಬಲಿಷ್ಠನು. ಮೇಲಾಗಿ ಯುದ್ಧದ ಕಲೆಯನ್ನು ಸಂಪೂರ್ಣವಾಗಿ ತಿಳಿದಿರತಕ್ಕವನು."

ಧೃತರಾಷ್ಟ್ರ ಮಹಾರಾಜ! ಶ್ರೀಕೃಷ್ಣನು ಭೀಮಸೇನನಿಗೆ ಪ್ರೋತ್ಸಾಹಕರವಾದ ಈ ಮಾತುಗಳನ್ನು ಹೇಳಿದನಂತರ ಸಾತ್ಯಕಿಯು ಭೀಮಸೇನನನ್ನು ಬಹಳವಾಗಿ ಪ್ರಶಂಸಿಸಿದನು. ಧರ್ಮರಾಜಪ್ರಮುಖರಾದ ಪಾಂಚಾಲರೂ, ಅರ್ಜುನ-ನಕುಲ-ಸಹದೇವರೂ ಮತ್ತು ಇತರ ಎಲ್ಲ ರಾಜರೂ ಭೀಮಸೇನನು ಹೇಳಿದ ಆ ಮಾತುಗಳನ್ನು ಬಹಳವಾಗಿ ಪ್ರಶಂಸಿಸಿದರು. ಅನಂತರ ಸೃಂಜಯರೊಡನೆ ನಿಂತಿದ್ದ, ಸೂರ್ಯನಂತೆಯೇ ಪ್ರಜ್ವಲಿಸುತ್ತಿದ್ದ ಯುಧಿಷ್ಠಿರನನ್ನು ಕುರಿತು ಭೀಮಬಲನಾದ ಭೀಮಸೇನನು ಹೇಳಿದನು :

**ಅಹಮೇತೇನ ಸಂಗಮ್ಯ ಸಂಯುಗೇ ಯೋದ್ಧುಮುತ್ಸಹೇ ।**
**ನ ಹಿ ಶಕ್ತೋ ರಣೇ ಜೇತುಂ ಮಾಮೇಷ ಪುರುಷಾಧಮಃ ॥೩೨॥**

"ಅಣ್ಣ! ಈ ದುರ್ಯೋಧನನೊಡನೆ ನಾನೇ ಯುದ್ಧದಲ್ಲಿ ತೊಡಗಿ ಅವನೊಡನೆ ಕಾದಾಡಲು ಉತ್ಸುಕನಾಗಿರುತ್ತೇನೆ. ಈ ಪುರುಷಾಧಮನು ಯುದ್ಧದಲ್ಲಿ ನನ್ನನ್ನು ಜಯಿಸಲು ಖಂಡಿತವಾಗಿಯೂ ಶಕ್ತನಲ್ಲ.

**ಅದ್ಯ ಕ್ರೋಧಂ ವಿಮೋಕ್ಷ್ಯಾಮಿ ನಿಹಿತಂ ಹೃದಯೇ ಭೃಶಮ್ ।**
**ಸುಯೋಧನೇ ಧಾರ್ತರಾಷ್ಟ್ರೇ ಖಾಣ್ಡವೇಽಗ್ನಿಮಿವಾರ್ಜುನಃ ॥೩೩॥**

ಅರ್ಜುನನು ಖಾಂಡವವನದಲ್ಲಿ ಅಗ್ನಿಯನ್ನು ಸುರಿಸಿದಂತೆ ಬಹಳ ಕಾಲದಿಂದ ನನ್ನ ಹೃದಯದಲ್ಲಡಗಿರುವ ಕ್ರೋಧಾಗ್ನಿಯನ್ನು ಧೃತರಾಷ್ಟ್ರನ ಮಗನಾದ ಸುಯೋಧನನ ಮೇಲೆ ಸುರಿಸುತ್ತೇನೆ.

**ಶಲ್ಯಮದ್ಯೋದ್ಧರಿಷ್ಯಾಮಿ ತವ ಪಾಣ್ಡವ ಹೃಚ್ಛಯಮ್ ।**
**ನಿಹತ್ಯ ಗದಯಾ ಪಾಪಮದ್ಯ ರಾಜನ್ಸುಖೀ ಭವ ॥೩೪॥**

ಪಾಂಡವ! ಪಾಪಿಷ್ಠನಾದ ದುರ್ಯೋಧನನನ್ನು ಗದೆಯಿಂದ ಸಂಹರಿಸಿ ನಿನ್ನ ಹೃದಯದಲ್ಲಿ ಬಹಳ ದಿವಸಗಳಿಂದಲೂ ನೆಟ್ಟುಕೊಂಡಿರುವ ಮುಳ್ಳನ್ನಿಂದು ತೆಗೆದುಹಾಕುತ್ತೇನೆ ; ಸುಖಿಯಾಗು.

**ಅದ್ಯ ಕೀರ್ತಿಮಯೀಂ ಮಾಲಾಂ ಪ್ರತಿಮೋಕ್ಷ್ಯೇ ತವಾನಘ ।**
**ಪ್ರಾಣಾಞ್ಶ್ರಿಯಂ ಚ ರಾಜ್ಯಂ ಚ ಮೋಕ್ಷ್ಯತೇಽದ್ಯ ಸುಯೋಧನಃ ॥೩೫॥**

ಪಾಪರಹಿತನೇ! ಇಂದು ನಿನ್ನ ಕುತ್ತಿಗೆಗೆ ಕೀರ್ತಿಮಯವಾದ ವಿಜಯ ಮಾಲಿಕೆಯನ್ನು ನಾನೇ ಹಾಕುತ್ತೇನೆ. ಇಂದು ಸುಯೋಧನನು ರಾಜ್ಯವನ್ನೂ, ಲಕ್ಷ್ಮಿಯನ್ನೂ, ಪ್ರಾಣಗಳನ್ನೂ ಪರಿತ್ಯಜಿಸುವಂತಾಗುತ್ತದೆ. ಧೃತರಾಷ್ಟ್ರರಾಜನು ತನ್ನ ಮಗನು ನನ್ನಿಂದ ಹತನಾದುದನ್ನು ಕೇಳಿ ಶಕುನಿಯ ಸಲಹೆಯಂತೆ ನಮ್ಮ ವಿಷಯದಲ್ಲಿ ಆಚರಿಸಿದ ದುಷ್ಕರ್ಮಗಳನ್ನು ಸ್ಮರಿಸಿಕೊಳ್ಳುವನು.”

ಮಹಾರಾಜ! ಭರತಶ್ರೇಷ್ಠನಾದ, ವೀರ್ಯವಂತನಾದ ಭೀಮಸೇನನು ಹೀಗೆ ಹೇಳಿ ಗದೆಯನ್ನೆತ್ತಿಕೊಂಡು ದುರ್ಯೋಧನನೊಡನೆ ಯುದ್ಧಮಾಡುವ ಸಲುವಾಗಿ ಮೇಲೆದ್ದು–ಇಂದ್ರನು ವೃತ್ರಾಸುರನನ್ನು ಯುದ್ಧಕ್ಕೆ ಆಹ್ವಾನಿಸಿದಂತೆ–ದುರ್ಯೋಧನನನ್ನು ಯುದ್ಧಕ್ಕೆ ಆಹ್ವಾನಿಸಿದನು.

ಮಹಾವೀರನಾದ ನಿನ್ನ ಮಗನು ಭೀಮಸೇನನ ಆ ಆಹ್ವಾನವನ್ನು ಸಹಿಸಲಾರದೆ–ಮದಿಸಿದ ಆನೆಯು ಮತ್ತೊಂದು ಮದಿಸಿದ ಆನೆಯನ್ನು ಎದುರಿಸುವಂತೆ–ಬಹಳ ಬೇಗ ಭೀಮನನ್ನು ಎದುರಿಸಿದನು. ಶಿಖರದಿಂದ ಕೂಡಿದ ಕೈಲಾಸಪರ್ವತದೋಪಾದಿಯಲ್ಲಿ ಗದಾಪಾಣಿಯಾಗಿ ಯುದ್ಧ ಮಾಡಲು ನಿಂತಿರುವ ದುರ್ಯೋಧನನನ್ನು ಪಾಂಡವರೆಲ್ಲರೂ ನೋಡಿದರು. ಹಿಂಡಿನಿಂದ ಬೇರ್ಪಟ್ಟ ಸಲಗದಂತೆ–ಏಕಾಕಿಯಾಗಿ ತಮ್ಮೊಡನೆ ಯುದ್ಧಮಾಡಲು ಬಂದ ಮಹಾಬಲನಾದ ದುರ್ಯೋಧನನನ್ನು ನೋಡಿ ಪಾಂಡವರೆಲ್ಲರೂ ಪ್ರಹೃಷ್ಟರಾದರು.

**ನ ಸಮ್ಭ್ರಮೋ ನ ಚ ಭಯಂ ನ ಚ ಗ್ಲಾನಿರ್ನ ಚ ವ್ಯಥಾ ।**
**ಆಸೀದ್ದುರ್ಯೋಧನಸ್ಯಾಪಿ ಸ್ಥಿತಃ ಸಿಂಹ ಇವಾಹವೇ ॥೪೧॥**

ಶತ್ರುಸಮೂಹದಲ್ಲಿ ಏಕಾಕಿಯಾಗಿ ನಿಂತಿದ್ದುದರಿಂದ ದುರ್ಯೋಧನನ ಮನಸ್ಸಿನಲ್ಲಿ ಯಾವ ವಿಧವಾದ ಗಾಬರಿಯಾಗಲೀ, ಭಯವಾಗಲೀ ಇರಲಿಲ್ಲ. ಅವನ ಮುಖವೂ ಕುಂದಿರಲಿಲ್ಲ. ಅವನಿಗೆ ಯಾವ ವಿಧವಾದ ವ್ಯಥೆಯೂ ಇರಲಿಲ್ಲ. ದುರ್ಯೋಧನನು ಸಿಂಹದೋಪಾದಿಯಲ್ಲಿ ಭಯರಹಿತನಾಗಿ

ರಣಾಂಗಣದಲ್ಲಿ ನಿಂತಿದ್ದನು. ಶಿಖರಯುಕ್ತವಾದ ಕೈಲಾಸಪರ್ವತದೋಪಾದಿಯಲ್ಲಿ ಗದೆಯನ್ನೆತ್ತಿಕೊಂಡು ನಿಂತಿದ್ದ ದುರ್ಯೋಧನನನ್ನು ನೋಡಿ ಭೀಮಸೇನನು ಹೇಳಿದನು :

"ದುರ್ಯೋಧನ! ನೀನೂ ಮತ್ತು ನಿನ್ನ ತಂದೆಯಾದ ಧೃತರಾಷ್ಟ್ರರಾಜನೂ ಸೇರಿ ನಮ್ಮ ವಿಷಯದಲ್ಲಿ ಎಂತಹ ದುಷ್ಕರ್ಮಗಳನ್ನೆಸಗಿದಿರಿ–ಎಂಬುದನ್ನು ಸ್ಮರಿಸು. ವಾರಣಾವತದಲ್ಲಿ ನಮ್ಮನ್ನು ವಿನಾಶ ಮಾಡುವ ಸಲುವಾಗಿ ಯಾವ ಪಾಪಕಾರ್ಯವನ್ನೆಸಗಿದಿರಿ–ಎಂಬುದನ್ನೂ ಸ್ಮರಿಸು. ರಜಸ್ವಲೆಯಾಗಿದ್ದ ದ್ರೌಪದಿಯನ್ನು ತುಂಬಿದ ಸಭೆಗೆ ಸೆಳೆದು ತಂದು ಕ್ಲೇಶಗೊಳಿಸಿದಿರಿ. ಶಕುನಿಯ ಸಲಹೆಯಂತೆ ಯುಧಿಷ್ಠಿರರಾಜನನ್ನು ಕಪಟ ದ್ಯೂತದಲ್ಲಿ ಪರಾಜಯಗೊಳಿಸಿದಿರಿ. ದುಷ್ಟಾತ್ಮನೇ! ನಿರಪರಾಧಿಗಳಾದ ಪಾರ್ಥರ ವಿಷಯದಲ್ಲಿ ಇನ್ನೂ ಯಾವ-ಯಾವ ಪಾಪಕರ್ಮಗಳನ್ನು ಮಾಡಿರುವೆಯೋ–ಆ ಎಲ್ಲ ಪಾಪಕಾರ್ಯಗಳ ಮಹಾಫಲವನ್ನೂ ಈಗಲೇ ಕಾಣುವೆ. ಮಹಾಯಶೋವಂತನಾದ, ಗಂಗಾಪುತ್ರನಾದ, ಪಿತಾಮಹನಾದ, ಭರತಶ್ರೇಷ್ಠನಾದ ಭೀಷ್ಮನು ನಿನ್ನ ಸಲುವಾಗಿಯೇ ಯುದ್ಧಮಾಡಿ ಇಂದು ಶರತಲ್ಪದಲ್ಲಿ ಮಲಗಿದ್ದಾನೆ. ದ್ರೋಣರು, ಕರ್ಣ, ಪ್ರತಾಪವಂತನಾದ ಶಲ್ಯ, ವೈರಕ್ಕೆ ಮೂಲಕಾರಣನಾದ ಶಕುನಿ–ಇವರೆಲ್ಲರೂ ನಿನ್ನ ಸಲುವಾಗಿಯೇ ಯುದ್ಧಮಾಡುತ್ತಾ ರಣರಂಗದಲ್ಲಿ ಅಸುನೀಗಿದರು. ನಿನ್ನ ಅನುಜರೆಲ್ಲರೂ ಹತರಾದರು. ಯುದ್ಧದಲ್ಲಿ ಹಿಂದಿರುಗದೇ ಇದ್ದ ಶೂರರಾದ ರಾಜರೆಲ್ಲರೂ ನಿನ್ನ ಸಲುವಾಗಿಯೇ ಯುದ್ಧಮಾಡಿ ಹತರಾದರು. ಅವರೇ ಅಲ್ಲದೇ ಇನ್ನೂ ಅನೇಕ ಕ್ಷತ್ರಿಯಶ್ರೇಷ್ಠರೂ ಹತರಾದರು. ದ್ರೌಪದಿಗೆ ಕ್ಲೇಶವನ್ನುಂಟುಮಾಡಿದ ಪಾಪಿಷ್ಠನಾದ, ದುರುಳನಾದ ಪ್ರಾತಿಕಾಮಿಯೂ ಹತನಾದನು. ಕುಲಘ್ನನಾದ, ಪುರುಷಾಧಮನಾದ ನೀನೊಬ್ಬನು ಮಾತ್ರವೇ ಈಗ ಉಳಿದುಕೊಂಡಿರುವೆ. ಈಗ ನಿನ್ನನ್ನೂ ಈ ಗದೆಯಿಂದಲೇ ಸಂಹರಿಸುತ್ತೇನೆ. ಇದರಲ್ಲಿ ಸಂಶಯವೇ ಇಲ್ಲ. ನಾನಿಂದು ಯುದ್ಧದಲ್ಲಿ ನಿನ್ನ ದರ್ಪವನ್ನು ಸಂಪೂರ್ಣವಾಗಿ ವಿನಾಶಗೊಳಿಸುತ್ತೇನೆ ನಿನಗಿರುವ ರಾಜ್ಯದ ಮೇಲಿನ ಅತ್ಯಾಶೆಯನ್ನೂ ಹೋಗಲಾಡಿಸುತ್ತೇನೆ. ಅಂತೆಯೇ ಪಾಂಡವರ ವಿಷಯದಲ್ಲಿ

ಮಾಡಿದ ದುಷ್ಕೃತ್ಯಗಳಿಗೂ ಪೂರ್ಣವಿರಾಮವು ಬೀಳುವಂತೆ (ಪ್ರತೀಕಾರವನ್ನು) ಮಾಡುತ್ತೇನೆ.”

ಭೀಮಸೇನನ ಮಾತುಗಳನ್ನು ಕೇಳಿ ದುರ್ಯೋಧನನು ಅಸಹನೆಯಿಂದ ಹೇಳಿದನು :

**ಕಿಂ ಕತ್ಥಿತೇನ ಬಹುನಾ ಯುಧ್ಯಸ್ವಾದ್ಯ ಮಯಾ ಸಹ ।**
**ಅದ್ಯ ತೇಽಹಂ ವಿನೇಷ್ಯಾಮಿ ಯುದ್ಧಶ್ರದ್ಧಾಂ ವೃಕೋದರ ॥೫೨॥**

“ವೃಕೋದರ! ವೃಥಾ ಬೊಗಳುವುದರಿಂದೇನು ಪ್ರಯೋಜನ? ನನ್ನೊಡನೆ ಯುದ್ಧವನ್ನಾರಂಭಿಸು. ನಿನಗಿರುವ ಯುದ್ಧಶ್ರದ್ಧೆಯನ್ನು ಕ್ಷಣ ಮಾತ್ರದಲ್ಲಿ ಹೋಗಲಾಡಿಸುತ್ತೇನೆ. ಪಾಪಿಷ್ಠನೇ! ಹಿಮಾಲಯದ ಉತ್ತುಂಗಶಿಖರದಂತಿರುವ ಈ ಮಹಾಗದೆಯನ್ನು ಹಿಡಿದು ಯುದ್ಧಸನ್ನದ್ಧ ನಾಗಿಯೇ ನಿಂತಿರುವ ನನ್ನನ್ನು ನೀನು ನೋಡುತ್ತಿಲ್ಲವೇ? ಪಾಪಿಯೇ! ಗದೆಯನ್ನು ಹಿಡಿದು ನಿಂತಿರುವ ನನ್ನನ್ನು ಯಾವ ಶತ್ರುವು ತಾನೇ ಸಂಹರಿಸ ಬಲ್ಲನು? ನ್ಯಾಯಸಮ್ಮತವಾದ ರೀತಿಯಲ್ಲಿ ಯುದ್ಧಮಾಡುವ ನನ್ನನ್ನು ದೇವತೆ ಗಳೊಡೆಯನಾದ ಇಂದ್ರನೇ ಆದರೂ ಸಂಹರಿಸಲಾರನು. (ಹೀಗಿರುವಾಗ ಹುಲುಮನುಜನಾದ ನಿನ್ನ ವಿಷಯದಲ್ಲಿ ಹೇಳುವುದೇನಿದೆ?)

**ಮಾ ವೃಥಾ ಗರ್ಜ ಕೌನ್ತೇಯ ಶಾರದಾಭ್ರಮಿವಾಜಲಮ್ ।**
**ದರ್ಶಯಸ್ವ ಬಲಂ ಯುದ್ಧೇ ಯಾವತ್ತತ್ತೇಽದ್ಯ ವಿದ್ಯತೇ ॥೫೫॥**

ಕೌಂತೇಯ! ಶರತ್ಕಾಲದ ನಿರ್ಜಲವಾದ ಮೇಘದಂತೆ ವ್ಯರ್ಥವಾಗಿ ಗರ್ಜಿಸಬೇಡ. ನಿನ್ನಲ್ಲಿ ಎಷ್ಟರಮಟ್ಟಿನ ಬಲವಿರುವುದೋ ಅದನ್ನು ಯುದ್ಧದಲ್ಲಿ ಪ್ರದರ್ಶಿಸು.”

ಧೃತರಾಷ್ಟ್ರಮಹಾರಾಜ! ದುರ್ಯೋಧನನು ಹೇಳಿದ ಆ ಮಾತುಗಳನ್ನು ಕೇಳಿ ವಿಜಯೇಚ್ಛುಗಳಾದ ಪಾಂಡವರು ಸೃಂಜಯರೊಡನೆ ಆ ಮಾತುಗಳನ್ನು ಪ್ರಶಂಸಿಸಿದರು.

ಮಾನವರು ಚಪ್ಪಾಳೆಶಬ್ದಗಳಿಂದ ಮದಿಸಿದ ಆನೆಯನ್ನು ಉದ್ರೇಕ ಗೊಳಿಸುವಂತೆ–ಪಾಂಡವ-ಸೃಂಜಯಸೈನಿಕರು ದುರ್ಯೋಧನನು ಹೇಳಿದ

ಮಾತುಗಳನ್ನು ಪ್ರಶಂಸೆಮಾಡುತ್ತಾ ಅವನನ್ನು ಬಹಳವಾಗಿ ಸಂತೋಷ ಗೊಳಿಸಿದರು. ಆ ಸಮಯದಲ್ಲಿ ಪಾಂಡವರ ಪಕ್ಷದಲ್ಲಿದ್ದ ದೊಡ್ಡ-ದೊಡ್ಡ ಆನೆಗಳು ಘೀಂಕರಿಸುತ್ತಿದ್ದುವು. ಕುದುರೆಗಳು ಬಾರಿ-ಬಾರಿಗೂ ಕೆನೆ ಯುತ್ತಿದ್ದುವು. ವಿಜಯೇಚ್ಛುಗಳಾದ ಪಾಂಡವರ ಶಸ್ತ್ರಾಸ್ತ್ರಗಳು ಪ್ರಜ್ವಲಿಸುತ್ತಿದ್ದುವು.

ಐ೩ನೆಯ ಅಧ್ಯಾಯವು ಮುಗಿಯಿತು.

ಐ೪ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಬಲರಾಮನ ಆಗಮನ: ಪಾಂಡವರಿಂದ ಸ್ವಾಗತ: ಭೀಮ-ದುರ್ಯೋಧನರ ಯುದ್ಧಾರಂಭ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಸುದಾರುಣವಾದ ಭೀಮ-ದುರ್ಯೋಧನರ ಗದಾ ಯುದ್ಧವು ಪ್ರಾರಂಭವಾಗುವುದರಲ್ಲಿದ್ದಾಗ, ಯುದ್ಧವನ್ನು ನೋಡಲು ಮಹಾತ್ಮರಾದ ಪಾಂಡವರು ಉಪಸ್ಥಿತರಾಗಿದ್ದಾಗ, ತನ್ನ ಇಬ್ಬರು ಶಿಷ್ಯರಿಗೂ ಪರಸ್ಪರವಾಗಿ ಯುದ್ಧವು ನಡೆಯಲಿದೆಯೆಂಬುದನ್ನು ಕೇಳಿ ತಾಲಧ್ವಜನಾದ, ಹಲಾಯುಧನಾದ ಬಲರಾಮನು ಅಲ್ಲಿಗೆ ಆಗಮಿಸಿದನು. ಬಲರಾಮನನ್ನು ನೋಡಿದೊಡನೆಯೇ ಕೇಶವಪ್ರಮುಖರಾದ ಪಾಂಡವರು ಪರಮಹೃಷ್ಟ ರಾಗಿ, ಅವನನ್ನು ಎದುರ್ಗೊಂಡು, ಅವನ ಪಾದಕಮಲಗಳಿಗೆರಗಿ ಯಥಾ ವಿಧಿಯಾಗಿ ಸ್ವಾಗತಿಸಿ ಸತ್ಕರಿಸಿದರು. ಬಲರಾಮನನ್ನು ಯಥೋಚಿತವಾಗಿ ಸತ್ಕರಿಸಿದನಂತರ ಕೇಶವಾದಿಗಳು ಅವನನ್ನು ಕುರಿತು ಹೇಳಿದರು :

"ರಾಮ! ಯುದ್ಧದಲ್ಲಿ ನಿನ್ನ ಶಿಷ್ಯರಿಬ್ಬರ ಕೌಶಲವನ್ನು ನೋಡು."

ಅನಂತರ ಬಲರಾಮನು ಪಾಂಡವಸಹಿತನಾದ ಶ್ರೀಕೃಷ್ಣನನ್ನೂ ಗದೆಯನ್ನು ಹಿಡಿದು ನಿಂತಿದ್ದ ಕುರುಪತಿಯಾದ ದುರ್ಯೋಧನನನ್ನೂ ನೋಡಿ ಹೇಳಿದನು :

"ಮಾಧವ! ನಾನು ತೀರ್ಥಯಾತ್ರೆಗೆಂದು ಹೊರಟು ಇಂದಿಗೆ

ನಲವತ್ತೆರಡು ದಿನಗಳಾದುವು. ಪುಷ್ಯನಕ್ಷತ್ರದಲ್ಲಿ ತೀರ್ಥಯಾತ್ರೆಗಾಗಿ ಹೊರಟ ನಾನು ಶ್ರವಣನಕ್ಷತ್ರದಲ್ಲಿ ಹಿಂದಿರುಗಿದ್ದೇನೆ.* ನಾನು ನನ್ನ ಇಬ್ಬರು ಶಿಷ್ಯರ ಗದಾಯುದ್ಧವನ್ನು ನೋಡಲು ಕುತೂಹಲಿಯಾಗಿದ್ದೇನೆ."



ಅನಂತರ ಗದಾಪಾಣಿಗಳಾದ ವೀರರಾದ ದುರ್ಯೋಧನ-ವೃಕೋದರರು ಯುದ್ಧಭೂಮಿಗೆ ಹೋಗಿ ಅಲ್ಲಿ ಇಬ್ಬರೂ ಬಹುವಾಗಿ ವಿರಾಜಿಸಿದರು. ಬಳಿಕ ಯುಧಿಷ್ಠಿರರಾಜನು ಬಲರಾಮನನ್ನು ಗಾಢವಾಗಿ ಆಲಿಂಗಿಸಿಕೊಂಡು ಅವನಿಗೆ ಸ್ವಾಗತವನ್ನು ಬಯಸಿ ಯಥೋಚಿತವಾಗಿ ಕುಶಲವನ್ನು ಪ್ರಶ್ನಿ

*ಪುಷ್ಯನಕ್ಷತ್ರದಿಂದ ದಿನಕ್ಕೊಂದು ನಕ್ಷತ್ರದಂತೆ ಎಣಿಸಿದರೆ ಎರಡನೆಯ ಬಾರಿಗೆ ಶ್ರವಣನಕ್ಷತ್ರವು ಬರುವ ದಿನಕ್ಕೆ ನಲವತ್ತೆರಡು ದಿನಗಳಾಗುತ್ತವೆ.

ಸಿದನು. ಯಶೋವಂತರಾದ, ಮಹಾಧನುರ್ಧರರಾದ ಕೃಷ್ಣಾರ್ಜುನರೂ ಬಲರಾಮನಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಅತ್ಯಂತಪ್ರಸನ್ನರಾಗಿ ಪ್ರೇಮಪೂರ್ವಕವಾಗಿ ಆಲಿಂಗಿಸಿಕೊಂಡರು. ಮಾದ್ರಿಯ ಮಕ್ಕಳಾದ



ನಕುಲ-ಸಹದೇವರೂ ಮತ್ತು ದ್ರೌಪದಿಯ ಐವರು ಮಕ್ಕಳೂ ಮಹಾಬಲನಾದ ರೋಹಿಣೇನಂದನನಾದ ಬಲರಾಮನಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಅತ್ಯಂತವಿನೀತರಾಗಿ ಅವನ ಸಮೀಪದಲ್ಲಿಯೇ ನಿಂತುಕೊಂಡರು. ಅನಂತರ ಭೀಮಸೇನನು ಮತ್ತು ನಿನ್ನ ಮಗನಾದ ದುರ್ಯೋಧನನೂ ತಮ್ಮ-ತಮ್ಮ ಗದೆಗಳನ್ನು ಮೇಲಕ್ಕೆತ್ತಿಕೊಂಡು ಬಲರಾಮನ ಸಮೀಪಕ್ಕೆ ಬಂದು ಅವನನ್ನು ಯಥೋಚಿತವಾಗಿ ಗೌರವಿಸಿದರು. ಹೀಗೆ ಅವರೆಲ್ಲರೂ

ಎಲ್ಲ ಕಡೆಗಳಿಂದಲೂ ಬಲರಾಮನನ್ನು ಸ್ವಾಗತಿಸಿ ಯಥೋಚಿತವಾಗಿ ಸತ್ಕರಿಸಿ 'ಮಹಾಬಾಹುವೇ! ನಿನ್ನ ಶಿಷ್ಯರು ಮಾಡುವ ಯುದ್ಧವನ್ನು ನೋಡು'– ಎಂಬುದಾಗಿ ಹೇಳಿದರು. ಆಗ ಬಲರಾಮನು ಪಾಂಡವರನ್ನೂ, ಸೃಂಜಯರನ್ನೂ ಮತ್ತು ಅಮಿತತೇಜಸ್ವಿಗಳಾಗಿದ್ದ ಎಲ್ಲ ರಾಜರನ್ನೂ ಆಲಿಂಗನಮಾಡಿಕೊಂಡು ಎಲ್ಲರ ಕುಶಲವನ್ನೂ ಪ್ರಶ್ನಿಸಿದನು. ಅದೇ ರೀತಿಯಲ್ಲಿ ಅವರೂ ಸಹ ಬಲರಾಮನ ಯೋಗ-ಕ್ಷೇಮಗಳನ್ನು ವಿಚಾರಿಸಿದರು. ಹಲಾಯುಧನು ಮಹಾತ್ಮರಾದ ಎಲ್ಲ ಕ್ಷತ್ರಿಯವೀರರನ್ನೂ ಆದರಿಸುತ್ತಾ ಅವರವರ ವಯಸ್ಸಿಗೆ ತಕ್ಕಂತೆ ಕುಶಲಪ್ರಶ್ನೆಗಳಿಂದ ಕೂಡಿದ ಮಾತುಗಳನ್ನಾಡಿ, ಜನಾರ್ದನನನ್ನೂ ಮತ್ತು ಸಾತ್ಯಕಿಯನ್ನೂ ಪ್ರೇಮ ಪೂರ್ವಕವಾಗಿ ಆಲಿಂಗಿಸಿಕೊಂಡನು. ಬಳಿಕ ಅವರ ನೆತ್ತಿಯನ್ನು ಆಘ್ರಾಣಿಸಿ ಕುಶಲವನ್ನು ಪ್ರಶ್ನಿಸಿದನು. ಹರ್ಷಯುಕ್ತರಾದ ಇಂದ್ರೋಪೇಂದ್ರರು ದೇವೇಶನಾದ ಬ್ರಹ್ಮನನ್ನು ಪೂಜಿಸುವಂತೆ–ಶ್ರೀಕೃಷ್ಣ-ಸಾತ್ಯಕಿಗಳು ಗುರುವಾದ ಬಲರಾಮನನ್ನು ವಿಧಿವತ್ತಾಗಿ ಪೂಜಿಸಿದರು. ಅನಂತರ ಧರ್ಮರಾಜನು ಅರಿಂದಮನಾದ, ರೋಹಿಣಿಯ ನಂದನನಾದ ಬಲರಾಮನಿಗೆ ಸಹೋದರರ ನಡುವೆ ನಡೆಯಲಿರುವ ಈ ಮಹಾಯುದ್ಧವನ್ನು ನೋಡುವಂತೆ ಹೇಳಿದನು. ಮಹಾರಥರಿಂದ ಗೌರವಿಸಲ್ಪಟ್ಟ ಕೇಶವಾಗ್ರಜನಾದ ಬಲರಾಮನು ಪಾಂಡವ-ಸೃಂಜಯರ ಮಧ್ಯದಲ್ಲಿ ಪರಮಪ್ರೀತನಾಗಿ ಕುಳಿತುಕೊಂಡನು. ರಾತ್ರಿಯ ಕಾಲದಲ್ಲಿ ನಕ್ಷತ್ರಗಳ ಸಮೂಹಗಳಿಂದ ಪರಿವೃತನಾದ ಚಂದ್ರನು ಪ್ರಕಾಶಿಸುವಂತೆ–ನೀಲವರ್ಣದ ಬಟ್ಟೆಯನ್ನುಟ್ಟಿದ್ದ (ನೀಲಾಂಬರನಾದ) ಬಿಳುಪಾದ ಶರೀರಕಾಂತಿಯಿಂದ ಕೂಡಿದ್ದ ಬಲರಾಮನು ಆ ರಾಜರ ಮಧ್ಯದಲ್ಲಿ ಪ್ರಕಾಶಿಸಿದನು. ಬಳಿಕ ನಿನ್ನ ಇಬ್ಬರು ಮಕ್ಕಳ ವೈರವನ್ನೂ ಕೊನೆಗಾಣಿಸುವುದಾಗಿದ್ದ, ಭಯಂಕರವಾಗಿದ್ದ ಮತ್ತು ರೋಮಾಂಚಕಾರಿಯಾಗಿದ್ದ ಯುದ್ಧವು ಪ್ರಾರಂಭವಾಯಿತು."

೩೪ನೆಯ ಅಧ್ಯಾಯವು ಮುಗಿಯಿತು.

# ಬಲರಾಮನ ತೀರ್ಥಯಾತ್ರೆಯ ವಿವರಣೆ: ಪ್ರಭಾಸಕ್ಷೇತ್ರದ ಪ್ರಭಾವವರ್ಣನೆ: ಪ್ರಸಂಗವಶದಿಂದ ಚಂದ್ರನ ಶಾಪವಿಮೋಚನೆಯ ಕಥೆ

ಜನಮೇಜಯಮಹಾರಾಜನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ವೈಶಂಪಾಯನರೇ! ಕೌರವ-ಪಾಂಡವರಿಗೆ ಯುದ್ಧವು ಪ್ರಾರಂಭವಾಗುವ ಮೊದಲೇ ಬಲರಾಮನು ಶ್ರೀಕೇಶವನ ಅನುಮತಿಯನ್ನು ಪಡೆದು ಅನೇಕ ವೃಷ್ಣಿಬಂಧುಗಳೊಡನೆ ತೀರ್ಥಯಾತ್ರೆಗಾಗಿ ಹೊರಟುಹೋಗಿದ್ದನು. ಆ ಸಮಯದಲ್ಲವನು ಶ್ರೀಕೃಷ್ಣನೊಡನೆ 'ದುರ್ಯೋಧನನಿಗೂ ಸಹಾಯ ಮಾಡುವುದಿಲ್ಲ ; ಪಾಂಡವರಿಗೂ ಸಹಾಯ ಮಾಡುವುದಿಲ್ಲ'–ಎಂದು ಹೇಳಿಯೇ ಹೋಗಿದ್ದನು. ಕ್ಷತ್ರಿಯಮರ್ದನನಾದ ಬಲರಾಮನು ಶ್ರೀಕೃಷ್ಣನೊಡನೆ ಹಾಗೆ ಹೇಳಿ ಹೊರಟನಂತರ ಎಲ್ಲೆಲ್ಲಿಗೆ ಹೋಗಿದ್ದನು? ಪುನಃ ಅವನು ಯಾವಾಗ ಬಂದನು? ಎಲ್ಲಿಂದ ಬಂದನು? – ಈ ಎಲ್ಲ ವಿಷಯಗಳನ್ನೂ ದಯಮಾಡಿ ತಿಳಿಸಿರಿ. ನೀವು ಕಥೆಯನ್ನು ಹೇಳುವುದರಲ್ಲಿ ಬಹಳ ಕುಶಲರಾಗಿರುತ್ತೀರಿ. ಆದುದರಿಂದ ಬಲರಾಮನು ರಣರಂಗದಲ್ಲಿ ಉಪಸ್ಥಿತನಾದುದು ಹೇಗೆ? ಯುದ್ಧವನ್ನು ಹೇಗೆ ನೋಡಿದನು?–ಈ ಎಲ್ಲ ವಿಷಯಗಳನ್ನೂ ತಾವು ವಿಶದವಾಗಿ ಹೇಳಿರಿ."

ವೈಶಂಪಾಯನರು ಹೇಳುತ್ತಾರೆ :

"ಯುದ್ಧಾರಂಭಕ್ಕೆ ಮೊದಲು ಮಹಾತ್ಮರಾದ ಪಾಂಡವರು ಉಪಪ್ಲವ್ಯವೆಂಬ ನಗರದಲ್ಲಿ ವಾಸವಾಗಿದ್ದರು. ಸರ್ವಪ್ರಾಣಿಗಳ ಹಿತಾರ್ಥವಾಗಿ ಯುಧಿಷ್ಠಿರನು ಮಧುಸೂದನನನ್ನು ಸಂಧಿಯ ಕಾರ್ಯಕ್ಕಾಗಿ ಧೃತರಾಷ್ಟ್ರನ ಬಳಿಗೆ ಕಳುಹಿಸಿಕೊಟ್ಟನು. ಶ್ರೀಕೃಷ್ಣನು ಹಸ್ತಿನಾಪುರಕ್ಕೆ ಹೋಗಿ ಧೃತರಾಷ್ಟ್ರನನ್ನು ಸಂಧಿಸಿ ಯಥಾರ್ಥವಾದ (ಸತ್ಯವಾದ) ಅದರಲ್ಲಿಯೂ ವಿಶೇಷವಾಗಿ ಸರ್ವರಿಗೂ ಹಿತಕರವಾದ ಮಾತುಗಳನ್ನೇ ಅವನೊಡನೆ ಹೇಳಿದನು. ನಿನಗೂ ತಿಳಿದಿರುವಂತೆಯೇ ಧೃತರಾಷ್ಟ್ರಮಹಾ

ರಾಜನು ಶ್ರೀಕೃಷ್ಣನ ಸಲಹೆಯಂತೆ ಪಾಂಡವರೊಡನೆ ಶಾಂತಿಸಂಧಾನಕ್ಕೆ ಒಪ್ಪಲಿಲ್ಲ. ಮಹಾಬಾಹುವಾದ, ಜನಾಧಿಪನಾದ, ಪುರುಷಶ್ರೇಷ್ಠನಾದ ಶ್ರೀಕೃಷ್ಣನು ಕೌರವರೊಡನೆ ಸಂಧಿಯನ್ನು ಸಾಧಿಸಲಾಗದೇ ಉಪಪ್ಲವ್ಯಕ್ಕೆ ಹಿಂದಿರುಗಿದನು. ಸಂಧಿಕಾರ್ಯವು ಫಲಿತವಾಗದಿರಲಾಗಿ ಶ್ರೀಕೃಷ್ಣನು ದುರ್ಯೋಧನನಿಂದ ಬೀಳ್ಕೊಂಡವನಾಗಿ ಪಾಂಡವರ ಬಳಿಗೆ ಬಂದು ಹೇಳಿದನು :

"ಪಾಂಡವರೇ! ಕಾಲಚೋದಿತರಾದ ಕೌರವರು ಸರ್ವಹಿತಕರವಾದ ನನ್ನ ಮಾತನ್ನು ಕೇಳಲಿಲ್ಲ. ಸಂಧಿಯ ಮಾತುಕತೆಗಳು ಬಿದ್ದುಹೋದುವು. ಆದುದರಿಂದ ನೀವೆಲ್ಲರೂ ಪುಷ್ಯನಕ್ಷತ್ರದಂದು ಯುದ್ಧದ ಸಲುವಾಗಿ ನನ್ನೊಡನೆ ಇಲ್ಲಿಂದ ಹೊರಡಿರಿ."

ಸೈನಿಕರೆಲ್ಲರೂ ತುಕ್ಕಡಿಗಳಾಗಿ ವಿಭಾಗಗೊಂಡು ಹೊರಡಲು ಸಿದ್ಧರಾಗುತ್ತಿದ್ದಾಗ–ಬಲಿಷ್ಠರಲ್ಲಿ ಶ್ರೇಷ್ಠನಾದ, ರೋಹಿಣಿಯ ಪುತ್ರನಾದ, ಮಹಾತ್ಮನಾದ ಬಲರಾಮನು ತಮ್ಮನಾದ ಶ್ರೀಕೃಷ್ಣನೊಡನೆ 'ನೀನು ಕೌರವರಿಗೂ ಸಹಾಯಮಾಡಬೇಕು'–ಎಂದು ಹೇಳಿದನು. ಆದರೆ ಬಲರಾಮನ ಮಾತಿಗೆ ಶ್ರೀಕೃಷ್ಣನು ಸಮ್ಮತಿಸಲಿಲ್ಲ. ಯದುನಂದನನಾದ, ಹಲಧರನಾದ, ಯಶೋವಂತನಾದ ಬಲರಾಮನು ಅದರಿಂದ ಬಹಳ ಕೋಪಗೊಂಡು ಸರಸ್ವತೀನದಿಯ ತೀರಕ್ಕೆ ತೀರ್ಥಯಾತ್ರೆಗಾಗಿ ಹೊರಟು ಬಿಟ್ಟನು. ಬಳಿಕ ಅರಿಂದಮನಾದ ಕೃತವರ್ಮನು ಎಲ್ಲ ಯಾದವಸೈನಿಕ ರೊಡನೆ ಅನೂರಾಧಾನಕ್ಷತ್ರದಂದು ಪ್ರಯಾಣಹೊರಟು ದುರ್ಯೋಧನನ ಪಕ್ಷವನ್ನು ಸೇರಿದನು. ಸಾತ್ಯಕಿಯೊಡನೆ ಶ್ರೀಕೃಷ್ಣನು ಪಾಂಡವರ ಪಕ್ಷವನ್ನು ಸೇರಿದನು. ಶೂರನಾದ ರೌಹಿಣೇಯನು ತೀರ್ಥಯಾತ್ರೆಗೆ ಸರಸ್ವತೀನದಿಯ ಕಡೆಗೆ ಪ್ರಯಾಣಮಾಡಿದನಂತರ ಶ್ರೀಕೃಷ್ಣನು ಪುಷ್ಯ ನಕ್ಷತ್ರದಲ್ಲಿ ಪಾಂಡುವಿನ ಮಕ್ಕಳನ್ನು ಮುಂದೆಮಾಡಿಕೊಂಡು ಕುರುಕ್ಷೇತ್ರಾಭಿಮುಖವಾಗಿ ಪ್ರಯಾಣಮಾಡಿದನು.

ತೀರ್ಥಯಾತ್ರೆಗೆಂದು ಹೊರಟಿದ್ದ ಬಲರಾಮನು ತಾನು ಮಾರ್ಗ ದಲ್ಲಿಯೇ ನಿಂತು ದ್ವಾರಕಾಪಟ್ಟಣದಿಂದ ತೀರ್ಥಯಾತ್ರೆಗೆ ಬೇಕಾಗುವ

ಸಕಲಸಂಭಾರಗಳನ್ನೂ, ಸರ್ವೋಪಕರಣಗಳನ್ನೂ, ಅಗ್ನಿಹೋತ್ರಾಗ್ನಿಗಳನ್ನೂ ತರುವಂತೆಯೂ—ಯಾಜಕರನ್ನೂ ಕರೆತರುವಂತೆಯೂ ಸೇವಕರಿಗೆ ಆಜ್ಞಾಪಿಸಿದನು.

ಚಿನ್ನ-ಬೆಳ್ಳಿ, ಗೋವುಗಳು, ವಸ್ತ್ರಗಳು, ಕುದುರೆಗಳು, ಆನೆಗಳು, ರಥಗಳು, ಕತ್ತೆಗಳು, ಒಂಟೆಗಳು, ವಾಹನಗಳು—ಈ ಎಲ್ಲವನ್ನೂ ತೀರ್ಥ ಯಾತ್ರೆಯ ಸಲುವಾಗಿ ಬಹಳ ಬೇಗ ತರುವಂತೆ ಸೇವಕರಿಗೆ ಹೇಳಿದನು.

ವೇಗವಾಗಿ ಪ್ರಯಾಣಮಾಡಲು ಸಮರ್ಥರಾದ ಕೆಲವು ಸೇವಕ ರೊಡನೆ ಸರಸ್ವತೀನದಿಯ ತೀರಕ್ಕೆ ಶೀಘ್ರವಾಗಿ ಪ್ರಯಾಣಮಾಡಬೇಕೆಂದೂ ಅಲ್ಲಿಗೆ ನೂರಾರು ಬ್ರಾಹ್ಮಣರನ್ನೂ ಮತ್ತು ಋತ್ವಿಜರನ್ನೂ ಕರೆತರಬೇಕೆಂದೂ ಹೇಳಿಕಳುಹಿಸಿದನು.

ಮಹಾಬಲನಾದ ಬಲರಾಮನು ಸೇವಕರಿಗೆ ಹೀಗೆ ಆಜ್ಞೆಮಾಡಿ ಕುರು-ಪಾಂಡವರ ಯುದ್ಧಸಮಯದಲ್ಲಿ ಯಾತ್ರೆಗಾಗಿ ಹೊರಟನು. ಋತ್ವಿಜ ರಿಂದಲೂ, ಸೇವಕರಿಂದಲೂ, ಎತ್ತು, ಕತ್ತೆ ಮತ್ತು ಒಂಟೆ—ಇವುಗಳಿಂದ ಯುಕ್ತವಾದ ಯಾನಗಳಿಂದಲೂ ಪರಿವೃತನಾಗಿ ಸರಸ್ವತೀನದಿಯ ತೀರವನ್ನು ಸೇರಿದನು. ಬಲರಾಮನು ಯಾತ್ರೆಹೋಗುವಾಗ ದೇಶ-ವಿದೇಶಗಳಲ್ಲಿರುವ ರೋಗಿಗಳಿಗೂ, ವೃದ್ಧರಿಗೂ, ಚಿರಂಜೀವಿಗಳಾದ ಶಿಶುಗಳಿಗೂ, ಬಳಲಿದವರಿಗೂ ಕೊಡಲು ಬೇಕಾಗುವ ವಸ್ತುಗಳನ್ನು ಸಂಗ್ರಹಿಸಿಕೊಂಡು ಹೋಗಿದ್ದನು. ಯಾಚಕರನ್ನು ಸತ್ಕರಿಸುವ ಸಲು ವಾಗಿಯೂ ನಾನಾವಿಧವಾದ ಶ್ರೇಷ್ಠವಸ್ತುಗಳನ್ನು ಸಿದ್ಧಪಡಿಸಿಕೊಂಡು ಹೋಗಿದ್ದನು. ವಿಭಿನ್ನ ಪುಣ್ಯಕ್ಷೇತ್ರಗಳಲ್ಲಿ ಅಲ್ಲಿಯ ಜನರು ಯಾವ-ಯಾವ ವಸ್ತುಗಳನ್ನು ಅಪೇಕ್ಷಿಸುತ್ತಿದ್ದರೋ—ಆ ವಸ್ತುಗಳನ್ನೇ ಅವರಿಗೆ ಅಲ್ಲಿ ಬಲ ರಾಮನು ದಾನವಾಗಿ ಕೊಡುತ್ತಿದ್ದನು. ಆ ಪುಣ್ಯಕ್ಷೇತ್ರಗಳಲ್ಲಿ ಹಸಿದು ಬಂದವರಿಗೆ ಭೋಜನ ಮಾಡಿಸಲೂ ಬಲರಾಮನು ವ್ಯವಸ್ಥೆಮಾಡಿದ್ದನು. ವಿಭಿನ್ನ ಪುಣ್ಯಕ್ಷೇತ್ರಗಳಲ್ಲಿ ಇರುತ್ತಿದ್ದ ಒಬ್ಬೊಬ್ಬ ಬ್ರಾಹ್ಮಣನೂ ಯಾವ-ಯಾವ ಭೋಜ್ಯವಸ್ತುವನ್ನು ಅಪೇಕ್ಷಿಸುತ್ತಿದ್ದನೋ—ಆ ಭೋಜ್ಯವಸ್ತುವನ್ನೇ ಬಲ ರಾಮನ ಸೇವಕರು ಸಿದ್ಧಪಡಿಸಿ ಬ್ರಾಹ್ಮಣರಿಗೆ ಅರ್ಪಿಸುತ್ತಿದ್ದರು. ವಿಭಿನ್ನ ತೀರ್ಥ

ಕ್ಷೇತ್ರಗಳಲ್ಲಿ ಬಲರಾಮನು ತಂಗುತ್ತಿದ್ದಾಗ ಅವನ ಆಜ್ಞೆಯಂತೆ ಅವನ ಪಾಚಕರು ಅತಿಥಿ-ಅಭ್ಯಾಗತರ ಸಲುವಾಗಿ ರಾಶಿ-ರಾಶಿಯಾಗಿ ಅನ್ನ-ಪಾನೀಯಾದಿಗಳನ್ನು ಸಿದ್ಧಗೊಳಿಸುತ್ತಿದ್ದರು. ಸುಖಾಪೇಕ್ಷಿಗಳಾದ ಬ್ರಾಹ್ಮಣರ ಸತ್ಕಾರಾರ್ಥವಾಗಿ ಬಹುಮೂಲ್ಯವಾದ ವಸ್ತ್ರಗಳೂ, ಮಂಚಗಳೂ, ರತ್ನ ಗಂಬಳಿಗಳೂ ಸರ್ವದಾ ಸಿದ್ಧವಾಗಿರುತ್ತಿದ್ದುವು. ಬಲರಾಮನು ತೀರ್ಥಕ್ಷೇತ್ರಗಳಲ್ಲಿ ತಂಗಿರುತ್ತಿದ್ದಾಗ ಯಾವ ಬ್ರಾಹ್ಮಣರು ಮಲಗಲು ಬರಲಿ, ವಿಶ್ರಮಿಸಿಕೊಳ್ಳಲು ಬರಲಿ–ಅವರಿಗೆ ಬೇಕಾಗುತ್ತಿದ್ದ ಎಲ್ಲ ಪದಾರ್ಥಗಳೂ ಸದಾಕಾಲದಲ್ಲಿಯೂ ಸಿದ್ಧವಾಗಿರುತ್ತಿದ್ದುವು. ಬಲರಾಮನ ಆ ತೀರ್ಥಯಾತ್ರೆಯ ಸಮಯದಲ್ಲಿ ಎಲ್ಲ ಜನರೂ ಸುಖದಿಂದ ಪ್ರಯಾಣ ಮಾಡುತ್ತಿದ್ದರು. ಯಥಾಸುಖವಾಗಿ ವಿಶ್ರಮಿಸಿಕೊಳ್ಳುತ್ತಿದ್ದರು. ಪ್ರಯಾಣ ಮಾಡುವವರಿಗೆ ಯಾನಗಳು ಸಿದ್ಧವಾಗಿರುತ್ತಿದ್ದುವು. ಬಾಯಾರಿದವರಿಗೆ ತಂಪಾದ ಪಾನೀಯಗಳು ಸಿದ್ಧವಾಗಿರುತ್ತಿದ್ದುವು. ಹಸಿದು ಬಂದವರಿಗೆ ರುಚಿಕರವಾದ ಮೃಷ್ಟಾನ್ನವು ಸಿದ್ಧವಾಗಿರುತ್ತಿದ್ದಿತು. ಬಲರಾಮನ ಸೇವಕರು ವಸ್ತ್ರಾಭರಣಗಳನ್ನೂ ಅತಿಥಿ-ಅಭ್ಯಾಗತರಿಗೆ ಉಡುಗೊರೆಯಾಗಿ ಕೊಡುತ್ತಿದ್ದರು. ಬಲರಾಮನೊಡನೆ ಯಾತ್ರೆಯಲ್ಲಿ ಭಾಗವಹಿಸಿದ್ದವರೆಲ್ಲರಿಗೂ ಆ ಪ್ರಯಾಣಮಾರ್ಗವು ಸ್ವರ್ಗಮಾರ್ಗದಂತೆ ಸುಖಾವಹವಾಗಿದ್ದಿತು. ಅವರ ಪ್ರಯಾಣಮಾರ್ಗವು ಸದಾಕಾಲದಲ್ಲಿಯೂ ಆನಂದದಾಯಕವಾಗಿದ್ದಿತು. ಶುಭಾವಹವಾಗಿದ್ದಿತು. ರುಚಿಕರವಾದ ಭಕ್ಷ್ಯ-ಭೋಜ್ಯಗಳು ಸದಾ ಸಿದ್ಧವಾಗಿದ್ದುವು. ಬಲರಾಮನ ಯಾತ್ರೆಯ ಜೊತೆಯಲ್ಲಿ ವಸ್ತುಗಳನ್ನು ವಿಕ್ರಯಿಸುವ ಅಂಗಡಿ-ಮುಂಗಟ್ಟುಗಳೂ ಹೋಗುತ್ತಿದ್ದುವು. ಆ ಅಂಗಡಿಗಳಲ್ಲಿ ನೂರಾರು ಜನರು ಪದಾರ್ಥಗಳನ್ನು ಕೊಳ್ಳಲು ಯಾವಾಗಲೂ ತುಂಬಿರುತ್ತಿದ್ದರು. ಆ ಮಾರ್ಗವು ವೃಕ್ಷಗಳಿಂದಲೂ ಲತೆಗಳಿಂದಲೂ ಸಮಲಂಕೃತವಾಗಿರುತ್ತಿದ್ದಿತು. ನಾನಾವಿಧವಾದ ರತ್ನಹಾರಗಳಿಂದ ವಿಭೂಷಿತವಾಗಿರುತ್ತಿದ್ದಿತು. ಯದುಕುಲಪ್ರಮುಖನಾದ, ಪ್ರಖ್ಯಾತನಾದ, ವೀರನಾದ, ಮಹಾತ್ಮನಾದ ಹಲಧರನು ತೀರ್ಥಕ್ಷೇತ್ರಗಳಲ್ಲಿ ನಿಯಮಸ್ಥನಾಗಿದ್ದು ಬ್ರಾಹ್ಮಣರಿಗೆ ಅಪಾರಧನವನ್ನೂ–ಯಜ್ಞದಕ್ಷಿಣೆಗಳನ್ನೂ ದಾನಮಾಡಿದನು. ಶ್ರೇಷ್ಠರಾದ ಬ್ರಾಹ್ಮಣರಿಗೆ ಹಾಲುಕರೆಯಲು ಸಾವಿರಾರು

ಹಸುಗಳನ್ನು ದಾನವಾಗಿ ಕೊಟ್ಟನು. ಆ ಗೋವುಗಳನ್ನು ವಸ್ತ್ರಗಳಿಂದ ಆಚ್ಛಾದಿಸಿದ್ದರು. ಅವುಗಳ ಕೊಂಬುಗಳಿಗೆ ಸುವರ್ಣಮಯವಾದ ಕಲಶ ಗಳನ್ನಿಟ್ಟು ಅಲಂಕರಿಸಿದ್ದರು. ನಾನಾದೇಶಗಳಲ್ಲಿ ಹುಟ್ಟಿದ ನಾನಾಜಾತಿಯ ನೂರಾರು ಕುದುರೆಗಳನ್ನೂ ಬಲರಾಮನು ಪುಣ್ಯಕ್ಷೇತ್ರಗಳಲ್ಲಿ ದಾನವಾಗಿ ಕೊಟ್ಟನು. ಯಾನಗಳನ್ನೂ (ರಥಗಳನ್ನೂ,) ಸುಂದರವಾದ ವೇಷ-ಭೂಷಣ ಗಳನ್ನು ಧರಿಸಿದ್ದ ಸೇವಕರನ್ನೂ, ರತ್ನಗಳನ್ನೂ, ಮುತ್ತು-ಹವಳಗಳನ್ನೂ, ಶ್ರೇಷ್ಠವಾದ ಸುವರ್ಣವನ್ನೂ, ಪರಿಶುದ್ಧವಾದ ಬೆಳ್ಳಿಯನ್ನೂ, ಲೋಹ ಮಯವಾದ ಮತ್ತು ತಾಮ್ರಮಯವಾದ ಭಾಂಡಗಳನ್ನೂ ಬಲರಾಮನು ಪುಣ್ಯಕ್ಷೇತ್ರಗಳಲ್ಲಿ ಶ್ರೇಷ್ಠರಾದ ಶ್ರೋತ್ರಿಯರಾದ ಕರ್ತವ್ಯಾನುಷ್ಠಾನಪರರಾದ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ಹೀಗೆ ಮಹಾತ್ಮನಾದ ಬಲರಾಮನು ಸರಸ್ವತೀನದಿಯ ತೀರಪ್ರದೇಶದಲ್ಲಿದ್ದ ನೂರಾರು ಪುಣ್ಯತೀರ್ಥಗಳಲ್ಲಿ ಅಪಾರವಾದ ಐಶ್ವರ್ಯವನ್ನು ಬ್ರಾಹ್ಮಣರಿಗೆ ದಾನಮಾಡಿದನು. ಅನಂತರ ಉದಾರಚರಿತನಾದ, ಅಪ್ರತಿಮಪ್ರಭಾವನಾದ ಬಲರಾಮನು ಅನುಕ್ರಮವಾಗಿ ಅನೇಕ ಪುಣ್ಯತೀರ್ಥಗಳನ್ನೂ, ಕ್ಷೇತ್ರಗಳನ್ನೂ ಸಂದರ್ಶಿಸುತ್ತಾ ಕುರುಕ್ಷೇತ್ರಕ್ಕೂ ಆಗಮಿಸಿದನು."

ಜನಮೇಜಯನು ಹೇಳುತ್ತಾನೆ :

"ದ್ವಿಜಶ್ರೇಷ್ಠರೇ! ಬ್ರಹ್ಮವಿದರಲ್ಲಿ ಶ್ರೇಷ್ಠರಾದವರೇ! ಈಗ ನನಗೆ ಸರಸ್ವತೀನದಿಯ ತೀರಪ್ರದೇಶದಲ್ಲಿರುವ ತೀರ್ಥಕ್ಷೇತ್ರಗಳ ಗುಣ, ಪ್ರಭಾವ ಮತ್ತು ಅವುಗಳು ಉತ್ಪತ್ತಿಯಾದ ಬಗೆ–ಇವುಗಳನ್ನು ಸವಿಸ್ತರವಾಗಿ ಹೇಳಿರಿ. ಅನಂತರ ಅನುಕ್ರಮವಾಗಿ ಆ ತೀರ್ಥಗಳ ಸೇವನೆಯಿಂದ ಪ್ರಾಪ್ತವಾಗುವ ಫಲ, ಯಾವ-ಯಾವ ತೀರ್ಥಕ್ಷೇತ್ರದಲ್ಲಿ ಯಾವ-ಯಾವ ಕರ್ಮಗಳನ್ನು ಮಾಡಿದರೆ ಸಿದ್ಧಿಯನ್ನು ಪಡೆಯಬಹುದು? ಆ ಕರ್ಮಗಳ ಅನುಷ್ಠಾನ ಕ್ರಮ–ಇವುಗಳೆಲ್ಲವನ್ನೂ ವಿಶದವಾಗಿ ಹೇಳಿರಿ. ಈ ಎಲ್ಲ ವಿಷಯಗಳನ್ನೂ ಕೇಳಲು ನನಗೆ ಅತ್ಯಂತ ಕುತೂಹಲವಿದೆ."

"ಜನಮೇಜಯ! ತೀರ್ಥಗಳ ಸೇವನೆಯಿಂದ ಲಭಿಸುವ ಫಲ, ತೀರ್ಥ

ಕ್ಷೇತ್ರಗಳ ಗುಣಗಳು ಮತ್ತು ಅವುಗಳು ಉತ್ಪತ್ತಿಯಾದ ಬಗೆ–ಎಲ್ಲವನ್ನೂ ಹೇಳುವ ಈ ಪುಣ್ಯಕಥನವನ್ನು ಸಂಪೂರ್ಣವಾಗಿ ಕೇಳು :

ಯದುಶ್ರೇಷ್ಠನಾದ ಬಲರಾಮನು ಋತ್ವಿಕ್ಸುಹೃದ್ಬ್ರಾಹ್ಮಣಸಮೂಹಗಳೊಡನೆ ಮೊದಲು ಪುಣ್ಯಪ್ರದವಾದ ಪ್ರಭಾಸಕ್ಷೇತ್ರಕ್ಕೆ ಹೋದನು. ಈ ಕ್ಷೇತ್ರದ ಮಹಿಮೆಯನ್ನು ಹೇಳುವೆನು ಕೇಳು : ಹಿಂದೆ ನಕ್ಷತ್ರಗಳಿಗೆ ಒಡೆಯನಾದ ಚಂದ್ರನು ಶಾಪಗ್ರಸ್ತನಾಗಿ ರಾಜಯಕ್ಷ್ಮರೋಗದಿಂದ ನರಳುತ್ತಿದ್ದನು. ಅವನು ಆ ಕ್ಷೇತ್ರಕ್ಕೆ ಬರಲಾಗಿ ಶಾಪದಿಂದ ವಿಮುಕ್ತನಾಗಿ ಪುನಃ ತನ್ನ ಹಿಂದಿನ ತೇಜಸ್ಸನ್ನು ಪಡೆದುಕೊಂಡನು. ಆ ದಿವ್ಯತೇಜಸ್ಸಿನಿಂದಲೇ ಚಂದ್ರನು ಇಂದಿಗೂ ಸಂಪೂರ್ಣಜಗತ್ತನ್ನೂ ಪ್ರಕಾಶಗೊಳಿಸುತ್ತಿದ್ದಾನೆ. ಈ ಕಾರಣದಿಂದಲೇ ಪೃಥಿವಿಯಲ್ಲಿ ಅದು ಎಲ್ಲ ತೀರ್ಥಗಳಿಗೂ ಶ್ರೇಷ್ಠವಾದ ತೀರ್ಥವೆನಿಸಿಕೊಂಡಿದೆ. ಅಂತೆಯೇ ಪ್ರಭಾಸನಾತ್ತಸ್ಯ ತತಃ ಪ್ರಭಾಸಃ – ಶಾಪಗ್ರಸ್ತನಾಗಿದ್ದ ಚಂದ್ರನನ್ನು ಅತ್ಯಂತಕಾಂತಿಯುಕ್ತನನ್ನಾಗಿ ಮಾಡಿದುದರಿಂದ ಆ ಕ್ಷೇತ್ರಕ್ಕೆ ಪ್ರಭಾಸಕ್ಷೇತ್ರವೆಂದೇ ಹೆಸರಾಯಿತು."

"ವೈಶಂಪಾಯನರೇ! ಭಗವಂತನಾದ ಸೋಮನಿಗೆ ಯಕ್ಷ್ಮರೋಗವು ಬಂದುದು ಹೇಗೆ? ಶ್ರೇಷ್ಠವಾದ ಆ ತೀರ್ಥದಲ್ಲಿ ಚಂದ್ರನು ಯಾವ ರೀತಿಯಲ್ಲಿ ಸ್ನಾನಮಾಡಿದನು? ಆ ತೀರ್ಥದಲ್ಲಿ ಸ್ನಾನಮಾಡಿದೊಡನೆಯೇ ಅವನು ಹೇಗೆ ಹೃಷ್ಟ-ಪುಷ್ಟನಾದನು? ಮಹಾಮುನಿಗಳೇ! ಈ ಎಲ್ಲ ವಿಷಯಗಳನ್ನೂ ನನಗೆ ವಿಶದವಾಗಿಯೇ ಹೇಳಿರಿ."

"ಜನಮೇಜಯಮಹಾರಾಜ! ದಕ್ಷಬ್ರಹ್ಮನಿಗೆ ಅನೇಕ ಕನ್ಯೆಯರಿದ್ದರು. ಅವರಲ್ಲಿ ಇಪ್ಪತ್ತೇಳು ಕನ್ಯೆಯರನ್ನು ದಕ್ಷನು ಚಂದ್ರನಿಗೆ ಮದುವೆ ಮಾಡಿಕೊಟ್ಟನು. ಶುಭಕರ್ಮನಾದ ಚಂದ್ರನ ಆ ಪತ್ನಿಯರು ಕಾಲದ ಗಣನೆಯ ಸಲುವಾಗಿ ನಕ್ಷತ್ರಗಳೊಡನೆ ಸಂಬಂಧವನ್ನಿಟ್ಟುಕೊಂಡಿದ್ದುದರಿಂದ ಅವರೆಲ್ಲರೂ ಆ ನಕ್ಷತ್ರಗಳ ಹೆಸರುಗಳಿಂದಲೇ ವಿಖ್ಯಾತರಾದರು. ಅವರೆಲ್ಲರೂ ವಿಶಾಲವಾದ ಕಣ್ಣುಗಳುಳ್ಳವರಾಗಿದ್ದರು. ರೂಪದಲ್ಲಿ ಅಪ್ರತಿಮರಾಗಿದ್ದರು. ಆದರೆ ರೋಹಿಣೀ ಎಂಬುವಳು ರೂಪಸಂಪತ್ತಿನಲ್ಲಿ ಉಳಿದವರೆಲ್ಲರನ್ನೂ ಮೀರಿಸಿದ್ದಳು. ಆ ಕಾರಣದಿಂದಲೇ ಭಗವಾನ್

ಚಂದ್ರನು ರೋಹಿಣಿಯನ್ನು ಹೆಚ್ಚು ಪ್ರೀತಿಸತೊಡಗಿದನು. ರೋಹಿಣಿಯು ಚಂದ್ರನಿಗೆ ಹೃದಯವಲ್ಲಭೆಯಾಗಿದ್ದಳು. ಆದುದರಿಂದ ಚಂದ್ರನು ಸದಾಕಾಲದಲ್ಲಿಯೂ ಅವಳ ಜೊತೆಯಲ್ಲಿಯೇ ವಿಹರಿಸುತ್ತಿದ್ದನು. ಉಳಿದ ಇಪ್ಪತ್ತಾರು ಮಂದಿ ಪತ್ನಿಯರ ಹತ್ತಿರಕ್ಕೂ ಹೋಗುತ್ತಿರಲಿಲ್ಲ. ನಕ್ಷತ್ರಗಳ ಹೆಸರುಗಳಿಂದ ವಿಖ್ಯಾತರಾಗಿದ್ದ ಸೋಮನ ಉಳಿದ ಮಡದಿಯರು ಮಹಾತ್ಮನಾದ ಚಂದ್ರನ ವಿಷಯದಲ್ಲಿ ಅತ್ಯಂತಕುಪಿತರಾದರು. ಸ್ವಲ್ಪವಾದರೂ ಆಲಸ್ಯಗೊಳ್ಳದೇ (ತಡಮಾಡದೇ) ಅವರೆಲ್ಲರೂ ತಮ್ಮ ತಂದೆಯ ಬಳಿಗೆ ಹೋಗಿ '**ಸೋಮೋ ವಸತಿ ನಾಸ್ಮಾಸು ರೋಹಿಣೀಂ ಭಜತೇ ಸದಾ ॥** ಸೋಮನು ನಮ್ಮಲ್ಲಿಗೆ ಬರುವುದೇ ಇಲ್ಲ. ಯಾವಾಗಲೂ ರೋಹಿಣಿಯನ್ನೇ ಸೇವಿಸುತ್ತಿರುತ್ತಾನೆ'–ಎಂದು ದೂರಿತ್ತರು.

'ಪ್ರಜೇಶ್ವರ! ನಾವೆಲ್ಲರೂ ನಿನ್ನ ಮನೆಗೇ ಬಂದು ಇದ್ದುಬಿಡುತ್ತೇವೆ ಮತ್ತು ನಿಯತವಾದ ಆಹಾರವನ್ನು ಸೇವಿಸುತ್ತಾ ತಪಶ್ಚರಣೆಯಲ್ಲಿಯೇ ನಿರತರಾಗಿರುತ್ತೇವೆ'–ಎಂಬುದಾಗಿಯೂ ಅವರು ತಮ್ಮ ತಂದೆಗೆ ಹೇಳಿದರು.

ತನ್ನ ಹೆಣ್ಣುಮಕ್ಕಳ ಮಾತನ್ನು ಕೇಳಿ ದಕ್ಷಪ್ರಜಾಪತಿಯು ಸೋಮನನ್ನು ಕರೆಯಿಸಿ ಹೇಳಿದನು :

**ಸಮಂ ವರ್ತಸ್ವ ಭಾರ್ಯಾಸು**
**ಮಾತ್ವಾಧರ್ಮೋ ಮಹಾನ್ ಸ್ಪೃಶೇತ್ ॥೫೨॥**

"ಸೋಮದೇವ! ಎಲ್ಲ ಪತ್ನಿಯರ ವಿಷಯದಲ್ಲಿಯೂ ಒಂದೇ ರೀತಿ ಯಲ್ಲಿ ವರ್ತಿಸು. ಇಲ್ಲದಿದ್ದರೆ ನಿನಗೆ ಮಹಾಪಾಪವು ಪ್ರಾಪ್ತವಾಗುತ್ತದೆ. (ನಿನಗೆ ಮಹತ್ತಾದ ಅಧರ್ಮವು ಬರದಿರಲಿ.)"

ಹೀಗೆ ಸೋಮನಿಗೆ ತಿಳಿಯಹೇಳಿದನಂತರ ದಕ್ಷನು ತನ್ನ ಹೆಣ್ಣು ಮಕ್ಕಳನ್ನು ಕುರಿತು ಹೇಳಿದನು :

"ನೀವೆಲ್ಲರೂ ಪುನಃ ನಿಮ್ಮ ಪತಿಯಾದ ಸೋಮನ ಬಳಿಗೆ ಹೋಗಿರಿ. ಚಂದ್ರನು ನನ್ನ ಅನುಶಾಸನದಂತೆ ನಿಮ್ಮೆಲ್ಲರನ್ನೂ ಸಮನಾಗಿ ನೋಡಿಕೊಳ್ಳುತ್ತಾನೆ. ನಿಮ್ಮಲ್ಲಿಗೂ ಅವನು ಬಂದುಹೋಗುತ್ತಾನೆ."

ದಕ್ಷನು ಹೇಳಿದ ಮಾತನ್ನು ಕೇಳಿ ಅವನ ಅನುಮತಿಯನ್ನು ಪಡೆದು ದಕ್ಷಕನ್ಯೆಯರು ಪುನಃ ಸೋಮನ ಅರಮನೆಗೆ ತೆರಳಿದರು. ರೋಹಿಣಿಯಲ್ಲಿ ಅಧಿಕಾಧಿಕವಾಗಿ ಅನುರಕ್ತನಾಗಿದ್ದ ಚಂದ್ರನು, ದಕ್ಷನು ಹೇಳಿದನಂತರವೂ ರೋಹಿಣಿಯ ಜೊತೆಯಲ್ಲಿಯೇ ಇರುತ್ತಿದ್ದನೇ ಹೊರತು ಉಳಿದವರನ್ನು ಕಣ್ಣೆತ್ತಿಯೂ ನೋಡುತ್ತಿರಲಿಲ್ಲ.

ಉಳಿದ ಇಪ್ಪತ್ತಾರು ಮಂದಿ ದಕ್ಷಕನ್ಯೆಯರು ಒಟ್ಟಾಗಿ ತಮ್ಮ ತಂದೆಯ ಸಮೀಪಕ್ಕೆ ಪುನಃ ಬಂದು ಹೇಳಿದರು :

**ತವ ಶುಶ್ರೂಷಣೇ ಯುಕ್ತಾ ವತ್ಸ್ಯಾಮೋ ಹಿ ತವಾನ್ತಿಕೇ ।**
**ಸೋಮೋ ವಸತಿ ನಾಸ್ಮಾಸು ನಾಕರೋದ್ವಚನಂ ತವ ॥೫೬॥**

"ತಂದೆಯೇ! ನಾವೆಲ್ಲರೂ ನಿನ್ನ ಶುಶ್ರೂಷೆಯನ್ನು ಮಾಡಿಕೊಂಡು ನಿನ್ನ ಸಮೀಪದಲ್ಲಿಯೇ ಇದ್ದುಬಿಡುತ್ತೇವೆ. ಸೋಮನು ಒಮ್ಮೆಯಾದರೂ ನಮ್ಮ ಹತ್ತಿರಕ್ಕೂ ಬರುವುದಿಲ್ಲ. ನೀನು ಹೇಳಿದ ಮಾತನ್ನು ಅವನು ನಡೆಸಿಕೊಡಲಿಲ್ಲ."

ಹೆಣ್ಣುಮಕ್ಕಳು ಹೇಳಿದ ಮಾತನ್ನು ಕೇಳಿದ ದಕ್ಷನು ಪುನಃ ಸೋಮನಿಗೆ ಹೇಳಿದನು :

**ಸಮಂ ವರ್ತಸ್ವ ಭಾರ್ಯಾಸು ಮಾ ತ್ವಾಂ ಶಪ್ಸ್ಯೇ ವಿರೋಚನ ॥**

"ವಿರೋಚನ! ನೀನು ನಿನ್ನ ಎಲ್ಲ ಪತ್ನಿಯರಲ್ಲಿಯೂ ಒಂದೇ ಸಮನಾಗಿ ವರ್ತಿಸು. ಒಬ್ಬರಿಗೊಬ್ಬರಿಗೆ ತಾರತಮ್ಯವನ್ನು ತೋರಬೇಡ. ನನ್ನ ಈ ಮಾತನ್ನು ಉಲ್ಲಂಘಿಸಿ ನನ್ನಿಂದ ಶಾಪಗ್ರಸ್ತನಾಗುವುದು ಬೇಡ. ತಿಳಿಯಿತೇ!"

ಜನಮೇಜಯ! ದಕ್ಷನು ಹೀಗೆ ಎಚ್ಚರಿಸಿದರೂ ಚಂದ್ರನು ದಕ್ಷನ ಮಾತನ್ನು ಅನಾದರಿಸಿದನು. ಹಿಂದಿನಂತೆಯೇ ರೋಹಿಣಿಯ ಜೊತೆಯಲ್ಲಿಯೇ ಸದಾಕಾಲದಲ್ಲಿಯೂ ಇದ್ದುಬಿಡುತ್ತಿದ್ದನು. ಉಳಿದ ಮಡದಿಯರು ಅತ್ಯಂತ ಕುಪಿತರಾದರು. ಪುನಃ ಎಲ್ಲರೂ ಒಟ್ಟಾಗಿ ತಂದೆಯ ಬಳಿಗೆ ಹೋಗಿ ತಲೆಬಾಗಿ ನಮಸ್ಕರಿಸಿ ಹೇಳಿದರು :

**ಸೋಮೋ ವಸತಿ ನಾಸ್ಮಾಸು ತಸ್ಮಾನ್ನಃ ಶರಣಂ ಭವ ॥೫೯॥**

"ಸೋಮನು ನಮ್ಮ ಜೊತೆಯಲ್ಲಿ ವಾಸಮಾಡುವುದಿಲ್ಲ. ಆದುದರಿಂದ ನೀನೇ ನಮಗೆ ರಕ್ಷಕನಾಗು. ಸರ್ವದಾ ಚಂದ್ರನು ರೋಹಿಣಿಯ ಮನೆಯಲ್ಲಿಯೇ ವಾಸಮಾಡುತ್ತಿರುತ್ತಾನೆ. ನಿನ್ನ ಮಾತನ್ನು ಅವನು ಗಣನೆಗೇ ತೆಗೆದುಕೊಳ್ಳುವುದಿಲ್ಲ. ನಮ್ಮೊಡನೆ ಅವನು ಸ್ನೇಹವನ್ನು ಬಯಸುವುದಿಲ್ಲ. ಆದುದರಿಂದ ನಮ್ಮೆಲ್ಲರನ್ನೂ ನೀನೇ ಕಾಪಾಡಬೇಕು. ಸೋಮನು ನಮ್ಮ ಸಮೀಪಕ್ಕೂ ಬರುವಂತೆ, ನಮ್ಮೊಡನೆಯೂ ಸಂಬಂಧವಿಟ್ಟುಕೊಳ್ಳುವಂತೆ ಮಾಡಬೇಕು."

ಜನಮೇಜಯ! ಹೆಣ್ಣುಮಕ್ಕಳು ಹೇಳಿದ ಮಾತನ್ನು ಕೇಳಿ ದಕ್ಷನು ಪರಮಕ್ರುದ್ಧನಾದನು. ಒಡನೆಯೇ ಚಂದ್ರನಿಗಾಗಿ ರಾಜಯಕ್ಷ್ಮರೋಗವನ್ನು ಸೃಷ್ಟಿಸಿದನು. ಅದು ಒಡನೆಯೇ ದಕ್ಷನು ಆಶಿಸಿದ್ದಂತೆ ಚಂದ್ರನ ಶರೀರವನ್ನು ವ್ಯಾಪಿಸಿತು. ರಾಜಯಕ್ಷ್ಮದಿಂದ (ಕ್ಷಯರೋಗದಿಂದ) ಗ್ರಸ್ತನಾದ ಶಶಿಯು ದಿನ-ದಿನಕ್ಕೂ ಕ್ಷಯಿಸುತ್ತಾ ಬಂದನು. ಯಕ್ಷ್ಮರೋಗವನ್ನು ಪರಿಹರಿಸಿ ಕೊಳ್ಳಲು ಚಂದ್ರನು ಬಹಳವಾಗಿ ಪ್ರಯತ್ನಿಸಿದನು. ನಾನಾವಿಧವಾದ ಯಜ್ಞ-ಯಾಗಾದಿಗಳನ್ನು ಮಾಡಿದರೂ ಸೋಮನು ದಕ್ಷನ ಶಾಪದಿಂದ ವಿಮುಕ್ತನಾಗಲಿಲ್ಲ. ಯಕ್ಷ್ಮರೋಗವು ಪರಿಹಾರವಾಗಲಿಲ್ಲ. ಬಹಳವಾಗಿ ಕ್ಷಯಿಸಿದನು. ಓಷಧಿಗಳ ರಾಜನಾದ ಸೋಮನೇ ಕ್ಷಯಿಸಿಹೋಗುತ್ತಿರಲಾಗಿ ಓಷಧಿಲತೆಗಳೂ ಕ್ಷಯಿಸತೊಡಗಿದುವು. ಬೀಜಾವಾಪಮಾಡಿದರೂ ಓಷಧಿ ಲತೆಗಳು ಹುಟ್ಟುತ್ತಲೇ ಇರಲಿಲ್ಲ. ಆ ಔಷಧಿಗಳಲ್ಲಿದ್ದ ರುಚಿ, ರಸ, ಮತ್ತು ಶಕ್ತಿಗಳೆಲ್ಲವೂ ನಷ್ಟವಾಗಿಹೋದುವು. ನಿಶಾಕರನು ಕ್ಷಯಿಸುತ್ತಿರಲಾಗಿ ಓಷಧಿಗಳೆಲ್ಲವೂ ಕ್ಷಯಿಸಿಹೋದುವು. ಅದೇ ಕಾರಣದಿಂದ ಪ್ರಾಣಿಗಳ ಕ್ಷಯವೂ ಆಯಿತು. ಎಲ್ಲ ಪ್ರಜೆಗಳೂ ಆಹಾರವಿಲ್ಲದೇ ಕ್ಷಯಿಸತೊಡಗಿದರು. ಅನಂತರ ದೇವತೆಗಳೆಲ್ಲರೂ ಚಂದ್ರನ ಬಳಿಗೆಬಂದು ಅವನನ್ನು ಪ್ರಶ್ನಿಸಿದರು : "ಇದೇನಿದು ? ಸೋಮದೇವ! ನಿನ್ನ ರೂಪವು ಸ್ವಲ್ಪವಾದರೂ ಪ್ರಕಾಶಿಸುತ್ತಲೇ ಇಲ್ಲ. ಇದಕ್ಕೆ ಕಾರಣವನ್ನು ನಮ್ಮೊಡನೆ ಹೇಳು. ಈ ಮಹಾಭಯವು ಯಾರ ಮೂಲಕವಾಗಿ ಪ್ರಾಪ್ತವಾಯಿತೆಂಬುದನ್ನು ಹೇಳು. ನಿನ್ನಿಂದ ವಿಷಯವನ್ನು ತಿಳಿದುಕೊಂಡು ಮುಂದೆ ಈ ರೋಗದ ಪರಿಹಾರಕ್ಕಾಗಿ ಮಾಡಬೇಕಾದುದನ್ನು ನಾವು ಮಾಡುತ್ತೇವೆ."

ದೇವತೆಗಳು ಹೀಗೆ ಪ್ರಶ್ನಿಸಿದನಂತರ ಶಶಲಕ್ಷಣನಾದ ಚಂದ್ರನು ಅವರೆಲ್ಲರಿಗೂ ಶಾಪದ ಲಕ್ಷಣವನ್ನೂ (ಕಾರಣವನ್ನೂ) ಮತ್ತು ಅದೇ ಶಾಪದ ಫಲವಾಗಿ ತನಗೆ ಕ್ಷಯರೋಗವು ಪ್ರಾಪ್ತವಾದುದನ್ನೂ ಹೇಳಿದನು. ಸೋಮನು ಹೇಳಿದ ಮಾತನ್ನು ಕೇಳಿ ದೇವತೆಗಳೆಲ್ಲರೂ ದಕ್ಷನ ಸಮೀಪಕ್ಕೆ ಹೋಗಿ ವಿನೀತರಾಗಿ ಹೇಳಿದರು :

**ಪ್ರಸೀದ ಭಗವನ್ಸೋಮೇ ಶಾಪೋಽಯಂ ವಿನಿವರ್ತ್ಯತಾಮ್ ।**
**ಅಸೌ ಹಿ ಚನ್ದ್ರಮಾಃ ಕ್ಷೀಣಃ ಕಿಂಚಿಚ್ಛೇಷೋ ಹಿ ಲಕ್ಷ್ಯತೇ ॥೭೦॥**

**ಕ್ಷಯಾಚ್ಚೈವಾಸ್ಯ ದೇವೇಶ ಪ್ರಜಾಶ್ಚೈವ ಗತಾಃ ಕ್ಷಯಮ್ ।**
**ವೀರುದೋಷಧಯಶ್ಚೈವ ಬೀಜಾನಿ ವಿವಿಧಾನಿ ಚ ॥೭೧॥**

**ತೇಷಾಂ ಕ್ಷಯೇ ಕ್ಷಯೋಽಸ್ಮಾಕಂ ವಿನಾಸ್ಮಾಭಿರ್ಜಗಚ್ಚ ಕಿಮ್ ।**
**ಇತಿ ಜ್ಞಾತ್ವಾ ಲೋಕಗುರೋ ಪ್ರಸಾದಂ ಕರ್ತುಮರ್ಹಸಿ ॥೭೨॥**

"ಭಗವನ್! ಪ್ರಜಾಪತೇ! ಸೋಮನ ವಿಷಯದಲ್ಲಿ ಪ್ರಸನ್ನನಾಗು. ಅವನಿಗೆ ಪ್ರಾಪ್ತವಾಗಿರುವ ಶಾಪವನ್ನು ಹೋಗಲಾಡಿಸು. ಚಂದ್ರನಾದರೋ ಈಗ ಬಹಳವಾಗಿ ಕ್ಷಯಿಸಿಹೋಗಿದ್ದಾನೆ. ಸೋಮನಲ್ಲೀಗ ಸತ್ತ್ವಾಂಶವು ಸ್ವಲ್ಪಮಾತ್ರವೇ ಉಳಿದಿರುವಂತೆ ಕಾಣುತ್ತಿದೆ. ದೇವೇಶ! ಚಂದ್ರನ ಕ್ಷಯಿಸುವಿಕೆಯಿಂದಾಗಿ ಪ್ರಜೆಗಳೆಲ್ಲರೂ ಕ್ಷಯಿಸುತ್ತಿದ್ದಾರೆ. ಬಳ್ಳಿಗಳು, ಓಷಧೀಲತೆಗಳು, ವಿಧ-ವಿಧವಾದ ಧಾನ್ಯಗಳ ಬೀಜಗಳು–ಎಲ್ಲವೂ ಕ್ಷಯಿಸುತ್ತಿವೆ. ಈ ಎಲ್ಲದರ ಕ್ಷಯವಾಯಿತೆಂದರೆ ನಾವೆಲ್ಲರೂ ಕ್ಷಯಿಸಿದಂತೆಯೇ ಸರಿ. (ಲೋಕದ ಪ್ರಜೆಗಳನ್ನೇ ಅವಲಂಬಿಸಿ ನಾವಿದ್ದೇವೆ.) ನಾವೂ ಕ್ಷಯಿಸಿಹೋದೆವೆಂದರೆ ಜಗತ್ತಾದರೂ ಉಳಿಯುವುದೆಂತು? ಲೋಕಗುರುವೇ! ಈ ಎಲ್ಲ ವಿಷಯಗಳನ್ನೂ ಪರಾಮರ್ಶಿಸಿ ನೀನು ಸೋಮನ ವಿಷಯದಲ್ಲಿ ಪ್ರಸನ್ನನಾಗುವುದು ಯುಕ್ತವಾಗಿದೆ."

ಜನಮೇಜಯ! ದೇವತೆಗಳು ಹೀಗೆ ಹೇಳಿದನಂತರ ಪ್ರಜಾಪತಿಯು ಈ ವಾಕ್ಯವನ್ನು ಅವರೊಡನೆ ಹೇಳಿದನು : "ದೇವತೆಗಳೇ! ನನ್ನ ಮಾತನ್ನು

(ಶಾಪವನ್ನು ) ಬದಲಾಯಿಸುವ ಸಾಧ್ಯತೆಯೇ ಇಲ್ಲ. ಆದರೆ ಮಹಾಭಾಗರೇ! ಯಾವುದೋ ವಿಶೇಷ ಕಾರಣದಿಂದ ಅದು ತಾನಾಗಿಯೇ ಪರಿಹಾರವಾಗುತ್ತದೆ.

**ಸಮಂ ವರ್ತತು ಸರ್ವಾಸು ಶಶೀ ಭಾರ್ಯಾಸು ನಿತ್ಯಶಃ ।**
**ಸರಸ್ವತ್ಯಾ ವರೇ ತೀರ್ಥೇ ಉನ್ಮಜ್ಜಞ್ಶಶಲಕ್ಷಣಃ ।**
**ಪುನರ್ವರ್ಧಿಷ್ಯತೇ ದೇವಾಸ್ತದ್ವೈ ಸತ್ಯಂ ವಚೋ ಮಮ ॥೭೫॥**

ಸೋಮನಿಗೆ ಬಂದಿರುವ ಶಾಪವು ಪರಿಹಾರವಾಗಬೇಕಾದರೆ ಅವನು ಹೀಗೆ ನಡೆದುಕೊಳ್ಳಲೇಬೇಕು : ತನ್ನ ಎಲ್ಲ ಪತ್ನಿಯರಲ್ಲಿಯೂ ತಾರತಮ್ಯ ಮಾಡದೇ ಅನುದಿನವೂ ಒಂದೇ ಸಮನಾದ ವರ್ತನೆಯನ್ನಿಟ್ಟುಕೊಳ್ಳಲಿ. ಅನಂತರ ಚಂದ್ರನು ಸರಸ್ವತಿಯ ಶ್ರೇಷ್ಠತೀರ್ಥದಲ್ಲಿ ಮುಳುಗಿ ಸ್ನಾನ ಮಾಡಿದರೆ ಪುನಃ ಅವನು ವೃದ್ಧಿಹೊಂದುತ್ತಾನೆ. ದೇವತೆಗಳೇ! ಈ ನನ್ನ ಮಾತು ಸತ್ಯವಾಗಿ ಪರಿಣಮಿಸುತ್ತದೆ.

**ಮಾಸಾರ್ಧಂ ಚ ಕ್ಷಯಂ ಸೋಮೋ ನಿತ್ಯಮೇವ ಗಮಿಷ್ಯತಿ ।**
**ಮಾಸಾರ್ಧಂ ತು ಸದಾ ವೃದ್ಧಿಂ ಸತ್ಯಮೇತದ್ವಚೋ ಮಮ ॥೭೬॥**

ಅರ್ಧಮಾಸಪರ್ಯಂತವಾಗಿ (ಕೃಷ್ಣಪಕ್ಷದಲ್ಲಿ) ಚಂದ್ರನು ದಿನ- ದಿನಕ್ಕೂ ಕ್ಷಯಿಸುತ್ತಲೇ ಹೋಗುತ್ತಾನೆ. ಮತ್ತೊಂದು ಮಾಸಾರ್ಧದಲ್ಲಿ (ಶುಕ್ಲಪಕ್ಷದಲ್ಲಿ) ಶಶಾಂಕನು ದಿನ-ದಿನಕ್ಕೂ ವರ್ಧಿಸುತ್ತಾ ಹೋಗುತ್ತಾನೆ. ಈ ನನ್ನ ಮಾತು ಸತ್ಯವಾದುದು."

**ಸಮುದ್ರಂ ಪಶ್ಚಿಮಂ ಗತ್ವಾ ಸರಸ್ವತ್ಯಬ್ಧಿಸಙ್ಗಮಮ್ ।**
**ಆರಾಧಯತು ದೇವೇಶಂ ತತಃ ಕಾನ್ತಿಮವಾಪ್ಸ್ಯತಿ ॥೭೭॥**

ಚಂದ್ರನು ಪಶ್ಚಿಮಸಮುದ್ರಕ್ಕೆ ಹೋಗಿ ಸರಸ್ವತಿಯ ಸಂಗಮಸ್ಥಾನದಲ್ಲಿ (ಸರಸ್ವತೀನದಿಯು ಸಮುದ್ರಕ್ಕೆ ಸೇರುವ ಸ್ಥಳದಲ್ಲಿ) ದೇವೇಶನಾದ ಮಹಾದೇವನನ್ನು ಆರಾಧಿಸಲಿ. ಅವನ ಪರಮಾನುಗ್ರಹದಿಂದ ಚಂದ್ರನು ತನ್ನ ಹಿಂದಿನ ಕಾಂತಿಯನ್ನು ಪಡೆದುಕೊಳ್ಳುತ್ತಾನೆ."

ಮಹಾಮಹಿಮನಾದ ದಕ್ಷಪ್ರಜಾಪತಿಯ ಶಾಸನದಂತೆ ಸೋಮನು

ಸರಸ್ವತೀನದಿಯ ಸಮೀಪಕ್ಕೆ ಹೋದನು. ಅನಂತರ ಸರಸ್ವತೀನದಿಯ ಶ್ರೇಷ್ಠತೀರ್ಥವಾದ ಪ್ರಭಾಸತೀರ್ಥದ ಬಳಿಗೂ ಹೋದನು.

**ಅಮಾವಾಸ್ಯಾಂ ಮಹಾತೇಜಾಸ್ತತ್ರೋನ್ಮಜ್ಜನ್ಮಹಾದ್ಯುತಿಃ ।**
**ಲೋಕಾನ್ಪ್ರಭಾಸಯಾಮಾಸ ಶೀತಾಂಶುತ್ವಮವಾಪ ಚ ॥೭೯॥**

ಮಹಾತೇಜಸ್ವಿಯಾದ ಸೋಮನು ಅಮಾವಾಸ್ಯೆಯ ದಿನದಂದು ಪ್ರಭಾಸತೀರ್ಥದಲ್ಲಿ ಮುಳುಗಿ ಸ್ನಾನಮಾಡುತ್ತಾ ಕಾಂತಿಮಂತನಾಗಿ ಸಕಲಲೋಕಗಳನ್ನೂ ಪ್ರಕಾಶಗೊಳಿಸಿದನು. ಈ ಅವಗಾಹನದಿಂದಾಗಿ ಅವನ ಕಿರಣಗಳೂ ತಣ್ಣಗಾದುವು.

ಸೋಮನು ಸರ್ವಲೋಕಗಳನ್ನೂ ಪ್ರಕಾಶಗೊಳಿಸಲಾಗಿ ಎಲ್ಲ ದೇವತೆಗಳೂ ಪುಷ್ಕಳವಾದ ಪ್ರಕಾಶವನ್ನು ಪಡೆದು ಸೋಮನೊಡನೆ ದಕ್ಷನ ಬಳಿಗೆ ಬಂದರು. ಸುಪ್ರೀತನಾದ ಭಗವಾನ್ ದಕ್ಷಪ್ರಜಾಪತಿಯು ದೇವತೆಗಳೆಲ್ಲರನ್ನೂ ಅವರವರ ಸ್ಥಾನಗಳಿಗೆ ಕಳುಹಿಸಿಕೊಟ್ಟು, ಚಂದ್ರನನ್ನು ಕುರಿತು ಪುನಃ ಈ ಮಾತುಗಳನ್ನು ಹೇಳಿದನು :

**ಮಾವಮಂಸ್ಥಾಃ ಸ್ತ್ರಿಯಃ ಪುತ್ರ ಮಾ ಚ ವಿಪ್ರಾನ್ಕದಾಚನ ।**
**ಗಚ್ಛ ಯುಕ್ತಃ ಸದಾ ಭೂತ್ವಾ ಕುರು ವೈ ಶಾಸನಂ ಮಮ ॥೮೦॥**

“ಮಗು! ಸ್ತ್ರೀಯರನ್ನೆಂದಿಗೂ ಅವಮಾನಗೊಳಿಸಬೇಡ. ಅದೇ ರೀತಿಯಲ್ಲಿ ಬ್ರಾಹ್ಮಣರನ್ನೂ ಅವಹೇಳನಮಾಡಬೇಡ. ನೀನಿನ್ನು ಹೋಗಿ ಬಾ. ಯಾವಾಗಲೂ ಸಾವಧಾನದಿಂದಿರುತ್ತಾ ನನ್ನ ಆಜ್ಞೆಯನ್ನು ಪರಿಪಾಲಿಸಿಕೊಂಡಿರು.”

ಜನಮೇಜಯ! ಹೀಗೆ ಮಹಾತ್ಮನಾದ ದಕ್ಷನಿಂದ ಬೀಳ್ಕೊಡಲ್ಪಟ್ಟ ಚಂದ್ರನು ತನ್ನ ಅರಮನೆಗೆ ತೆರಳಿದನು. ಪ್ರಜೆಗಳೂ ಸಹ ಸಂತೋಷಭರಿತ ರಾಗಿ ಹಿಂದಿನಂತೆಯೇ ತಮ್ಮ-ತಮ್ಮ ಕಾರ್ಯಗಳಲ್ಲಿ ನಿರತರಾದರು. ಮಹಾರಾಜ! ಚಂದ್ರನು ದಕ್ಷನಿಂದ ಶಪಿಸಲ್ಪಟ್ಟುದು, ಪ್ರಭಾಸತೀರ್ಥವು ಎಲ್ಲ ತೀರ್ಥಗಳಿಗಿಂತಲೂ ಹೇಗೆ ಶ್ರೇಷ್ಠವಾಯಿತೆಂಬುದು - ಈ ಎಲ್ಲ ಪ್ರಸಂಗಗಳನ್ನೂ ನಾನು ನಿನ್ನ ಇಷ್ಟದಂತೆ ಸವಿಸ್ತರವಾಗಿಯೇ ಹೇಳಿರುತ್ತೇನೆ.

ಶಶಲಕ್ಷಣನಾದ, ಶ್ರೀಮಂತನಾದ ಚಂದ್ರನು ಪ್ರತಿಯೊಂದು ಅಮಾವಾಸ್ಯೆಯಲ್ಲಿಯೂ ಉತ್ತಮೋತ್ತಮವಾದ ಪ್ರಭಾಸತೀರ್ಥದಲ್ಲಿ ಸ್ನಾನಮಾಡಿ ಕಾಂತಿಯುಕ್ತನೂ ಪುಷ್ಟನೂ ಆಗುತ್ತಾನೆ.

**ಅತಶ್ಚೈತತ್ಪ್ರಜಾನನ್ತಿ ಪ್ರಭಾಸಮಿತಿ ಭೂಮಿಪ ।**
**ಪ್ರಭಾಂ ಹಿ ಪರಮಾಂ ಲೇಭೇ ತಸ್ಮಿನ್ನುನ್ಮಜ್ಜ್ಯ ಚನ್ದ್ರಮಾಃ ॥**

ಚಂದ್ರನು ಸರಸ್ವತೀನದಿಯ ತೀರದಲ್ಲಿರುವ ಆ ಪವಿತ್ರ ಸರೋವರದಲ್ಲಿ ಮುಳುಗಿ ಶ್ರೇಷ್ಠವಾದ ಪ್ರಭೆಯನ್ನು ಪಡೆದುಕೊಂಡ ಕಾರಣದಿಂದಲೇ ಜನರು ಆ ಶ್ರೇಷ್ಠಸರೋವರವನ್ನು 'ಪ್ರಭಾಸ' ಎಂಬ ಹೆಸರಿನಿಂದ ತಿಳಿದುಕೊಳ್ಳುತ್ತಾರೆ.

ಅನಂತರ ಬಲರಾಮನು ಚಮಸೋದ್ಭೇದವೆಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಿದನು. ಆ ಪುಣ್ಯತೀರ್ಥವನ್ನು ಜನರು 'ಚಮಸೋದ್ಭೇದ' ಎಂಬ ಹೆಸರಿನಿಂದಲೇ ಕರೆಯುತ್ತಾರೆ. ಕೇಶವಾಗ್ರಜನಾದ, ಹಲಾಯುಧನಾದ ಬಲರಾಮನು ಚಮಸೋದ್ಭೇದದಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿ ಶ್ರೇಷ್ಠವಾದ ದಾನಗಳನ್ನು ಕೊಟ್ಟು ಅಲ್ಲಿ ಒಂದು ರಾತ್ರಿ ತಂಗಿದ್ದು, ಮಂಗಲಕರವಾದ ಮತ್ತು ಆದಿತೀರ್ಥವೆಂದು ಪ್ರಸಿದ್ಧವಾಗಿದ್ದ ಉದಪಾನ ತೀರ್ಥಕ್ಷೇತ್ರಕ್ಕೆ ಅತ್ಯಂತತ್ವರೆಯಿಂದ ಪ್ರಯಾಣಮಾಡಿದನು.

ಜನಮೇಜಯ! ಉದಪಾನತೀರ್ಥಕ್ಷೇತ್ರದಲ್ಲಿ ಕಾಲಿಟ್ಟ ಮಾತ್ರದಿಂದಲೇ ಮಹಾಫಲವು ಲಭ್ಯವಾಗುತ್ತದೆ. ಸಿದ್ಧಪುರುಷರು ಅಲ್ಲಿರುವ ವೃಕ್ಷಗಳ ಮತ್ತು ಲತೆಗಳ ಸ್ನಿಗ್ಧತೆಯನ್ನೂ (ಮಾರ್ದವವನ್ನೂ) ಭೂಮಿಯ ಆರ್ದ್ರತೆಯನ್ನೂ ನೋಡಿ ಸರಸ್ವತೀನದಿಯು ಅಲ್ಲಿಯೇ ಅದೃಶ್ಯಳಾಗಿ ಹರಿಯುತ್ತಿರುವಳೆಂದು ಭಾವಿಸುತ್ತಾರೆ."

ಽ೫ನೆಯ ಅಧ್ಯಾಯವು ಮುಗಿಯಿತು.

೩೬ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

# ಉದಪಾನತೀರ್ಥದ ಉತ್ಪತ್ತಿ: ತ್ರಿತಮುನಿಯು ಕೂಪದಲ್ಲಿ ಬಿದ್ದುದು : ಅಲ್ಲಿ ಅವನು ಯಜ್ಞಮಾಡಿದುದು ಮತ್ತು ಸಹೋದರರಿಗೆ ಶಾಪವನ್ನಿತ್ತುದು

ವೈಶಂಪಾಯನರು ಕಥೆಯನ್ನು ಮುಂದುವರಿಸಿ ಹೇಳುತ್ತಾರೆ :

"ಜನಮೇಜಯ! ಚಮಸೋದ್ಭೇದತೀರ್ಥಕ್ಷೇತ್ರದಿಂದ ಹೊರಟ ಹಲಾಯುಧನು ಸಪರಿವಾರನಾಗಿ ಸರಸ್ವತೀನದಿಯ ಮಧ್ಯದಲ್ಲಿದ್ದ ಯಶೋವಂತನಾದ ತ್ರಿತಮುನಿಯ ಉದಪಾನತೀರ್ಥವನ್ನು ಸೇರಿದನು. ಮುಸಲಾಯುಧನಾದ ಬಲರಾಮನು ಉದಪಾನತೀರ್ಥವನ್ನು ಸ್ಪರ್ಶಿಸಿ, ಆ ಮಹಾತೀರ್ಥದಲ್ಲಿ ಆಚಮನ-ಸ್ನಾನಾದಿಗಳನ್ನು ಮಾಡಿ, ಬ್ರಾಹ್ಮಣರನ್ನು ಯಥೋಚಿತವಾಗಿ ಪೂಜಿಸಿ ಅಪಾರದ್ರವ್ಯವನ್ನು ದಾನಮಾಡಿ ಅತ್ಯಂತಪ್ರಹೃಷ್ಟನಾದನು.

ಮಹಾತಪಸ್ವಿಯಾದ ತ್ರಿತಮುನಿಯು ಧರ್ಮಪರಾಯಣನಾಗಿ ಆ ತೀರ್ಥಕ್ಷೇತ್ರದಲ್ಲಿಯೇ ಇದ್ದನು. ಆ ಮಹಾತ್ಮನು ಉದಪಾನತೀರ್ಥದ ಕೂಪದಲ್ಲಿಯೇ ಇದ್ದು ಸೋಮಪಾನಮಾಡಿದನು. ಅವನನ್ನು ಆ ಕೂಪದಲ್ಲಿಯೇ ಬಿಟ್ಟು ಅವನ ಇಬ್ಬರು ಸಹೋದರರೂ ತಮ್ಮ ಮನೆಗಳಿಗೆ ಹೊರಟುಹೋದರು. ಅನಂತರ ಬ್ರಾಹ್ಮಣಸತ್ತಮನಾದ ತ್ರಿತನು ಆ ಇಬ್ಬರನ್ನೂ ಶಪಿಸಿದನು."

ಜನಮೇಜಯನು ಪ್ರಶ್ನಿಸುತ್ತಾನೆ :

"ಬ್ರಾಹ್ಮಣೋತ್ತಮರೇ! ಆ ತೀರ್ಥಕ್ಕೆ ಉದಪಾನವೆಂದೇಕೆ ಹೆಸರು ಬಂದಿತು? ಮಹಾತಪಸ್ವಿಯಾದ ತ್ರಿತನು ಅದರೊಳಗೆ ಬಿದ್ದುದು ಹೇಗೆ? ಅವನ ಸಹೋದರರಿಬ್ಬರೂ ಅವನನ್ನೇಕೆ ಬಿಟ್ಟುಹೋದರು? ಬಾವಿಯಲ್ಲಿಯೇ ಅವನನ್ನು ಬಿಟ್ಟು ಅವರು ಹೇಗೆತಾನೇ ತಮ್ಮ ಮನೆಗಳಿಗೆ ತೆರಳಿದರು? ಅವನು ಆ ಕೂಪದಲ್ಲಿಯೇ ಯಾಗಮಾಡಿದುದು ಹೇಗೆ? ಸೋಮರಸವನ್ನು ಪಾನಮಾಡಿದುದು ಹೇಗೆ? ಆ ದಿವ್ಯಪ್ರಸಂಗವನ್ನು ನಾನು ಕೇಳಬಹುದೆಂದು ನೀವು ಭಾವಿಸುವುದಾದರೆ ಆ ಕಥೆಯನ್ನು ಸವಿಸ್ತರವಾಗಿ ಹೇಳಿರಿ."

"ಮಹಾರಾಜ! ಹಿಂದಿನ ಯುಗದಲ್ಲಿ ಮೂವರು ಮುನಿ ಸಹೋದರರಿದ್ದರು. ಅವರ ಹೆಸರು ಅನುಕ್ರಮವಾಗಿ ಏಕತ, ದ್ವಿತ ಮತ್ತು ತ್ರಿತ ಎಂಬುದಾಗಿದ್ದಿತು. ಆ ಮೂವರು ಮಹರ್ಷಿಗಳೂ ಸೂರ್ಯಸಮಾನ ತೇಜಸ್ವಿಗಳಾಗಿಯೂ ಪ್ರಜಾಪತಿಗೆ ಸಮರಾಗಿ ಪ್ರಜಾವಂತರಾಗಿಯೂ ಇದ್ದರು. ಬ್ರಹ್ಮವಾದಿಗಳಾಗಿದ್ದ ಅವರು ಬ್ರಹ್ಮಲೋಕವನ್ನೂ ಜಯಿಸಿದ್ದರು. (ಬ್ರಹ್ಮಸಾಕ್ಷಾತ್ಕಾರವನ್ನೂ ಮಾಡಿಕೊಂಡಿದ್ದರು.) ಅವರ ತಂದೆಯಾದ ಗೌತಮನು ಸದಾಕಾಲದಲ್ಲಿಯೂ ಧರ್ಮನಿರತನಾಗಿದ್ದನು. ತನ್ನ ಮಕ್ಕಳ ತಪಸ್ಸು, ನಿಯಮ ಮತ್ತು ಜಿತೇಂದ್ರಿಯತೆಗಳಿಂದ ಗೌತಮನು ಸುಪ್ರೀತನಾಗಿದ್ದನು.

ತನ್ನ ಮಕ್ಕಳ ನಿಯಮ, ದಮ ಮತ್ತು ತಪಸ್ಯೆಗಳಿಂದ ಸಂತುಷ್ಟನಾಗಿದ್ದ ಪೂಜನೀಯನಾದ, ಮಹಾತ್ಮನಾದ ಗೌತಮನು ಬಹಳ ದಿವಸಗಳು ಕಳೆದನಂತರ ತನಗೆ ಅನುರೂಪವಾದ ಸ್ಥಾನಕ್ಕೆ (ಸ್ವರ್ಗಕ್ಕೆ) ಹೊರಟು ಹೋದನು. ಮಹಾತ್ಮನಾದ ಗೌತಮನ ಪೌರೋಹಿತ್ಯದಲ್ಲಿ ಯಜ್ಞಗಳನ್ನು ಮಾಡುತ್ತಿದ್ದ ರಾಜರು ಗೌತಮನು ಸ್ವರ್ಗಕ್ಕೆ ಹೋದನಂತರ ಅವನ ಮಕ್ಕಳನ್ನೇ ಆದರಿಸಿ ಸತ್ಕರಿಸತೊಡಗಿದರು. ಆ ಮೂವರು ಋಷಿಗಳಲ್ಲಿಯೂ ತ್ರಿತನು ಕರ್ಮಾನುಷ್ಠಾನಗಳಿಂದಲೂ ಮತ್ತು ಅಧ್ಯಯನದಿಂದಲೂ ಶ್ರೇಷ್ಠ ನೆನಿಸಿಕೊಂಡನು. ಗೌತಮನು ಸರ್ವರಿಗೂ ಮಾನ್ಯನಾಗಿದ್ದಂತೆ ತ್ರಿತನೂ ಸರ್ವರಿಗೂ ಮಾನ್ಯನಾಗಿದ್ದನು. ಮಹಾಬಲಶಾಲಿಗಳಾದ ಪುಣ್ಯಲಕ್ಷಣರಾದ (ಪುಣ್ಯಾತ್ಮರಾದ) ಎಲ್ಲ ಮಹರ್ಷಿಗಳೂ ಗೌತಮರನ್ನು ಗೌರವಿಸುತ್ತಿದ್ದಂತೆಯೇ ತ್ರಿತನನ್ನೂ ಗೌರವಿಸುತ್ತಿದ್ದರು.

ಒಂದಾನೊಂದು ದಿನ ತ್ರಿತನ ಸಹೋದರರಾದ ಏಕತ ದ್ವಿತರು ಧನದ ವಿಷಯವಾಗಿಯೂ-ಯಜ್ಞದ ವಿಷಯವಾಗಿಯೂ ಚಿಂತಿಸತೊಡಗಿದರು. ಸ್ವಲ್ಪಹೊತ್ತು ಚಿಂತಿಸಿ ಈ ನಿರ್ಧಾರಕ್ಕೆ ಬಂದರು. 'ತ್ರಿತನನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ ಯಜ್ಞಮಾಡುವ ಯಜಮಾನರನ್ನು ಒಡಂಬಡಿಸಿ ಅವರಿಂದ ಯಜ್ಞಮಾಡಿಸುವುದು ; ದಕ್ಷಿಣಾರೂಪವಾಗಿ ಗೋವು ಗಳನ್ನು ಪ್ರತಿಗ್ರಹಮಾಡುವುದು ; ಮಹಾಫಲವಾದ ಯಜ್ಞವನ್ನು ಮಾಡಿ

ಆ ಯಾಗದಲ್ಲಿ ಹೃಷ್ಟರಾಗಿ ಸೋಮಪಾನಮಾಡುವುದು'–ಹೀಗೆಂಬುದಾಗಿ ನಿರ್ಧರಿಸಿ ಅದರಂತೆಯೇ ಆ ಮೂವರು ಸಹೋದರರೂ ಮಾಡಿದರು. ಪಶುಗಳನ್ನು (ಗೋವುಗಳನ್ನು) ಪಡೆದುಕೊಳ್ಳುವ ಉದ್ದೇಶದಿಂದಲೇ ಅವರು ಯಾಗಮಾಡುವವರ ಬಳಿಗೆ ಹೋದರು. ಅವರಿಂದ ವಿಧಿವತ್ತಾಗಿ ಯಜ್ಞವನ್ನು ಮಾಡಿಸಿ ಆ ಯಜ್ಞಕರ್ಮಗಳ ಮೂಲಕವಾಗಿ ಅವರು ಅನೇಕ ಗೋವುಗಳನ್ನು ಪಡೆದುಕೊಂಡರು. ಅನಂತರ ಆ ಮಹಾತ್ಮರಾದ ಮಹರ್ಷಿಗಳು ಪೂರ್ವದಿಕ್ಕಿನತ್ತ ಪ್ರಯಾಣಮಾಡಿದರು. ಆ ಮೂವರಲ್ಲಿ ತ್ರಿತನು ಅತ್ಯಂತ ಹೃಷ್ಟನಾದವನಂತೆ ಮುಂದುಗಡೆ ಹೋಗುತ್ತಿದ್ದನು. ಏಕತ ಮತ್ತು ದ್ವಿತರು ಅವನ ಹಿಂದುಗಡೆ ಗೋವುಗಳನ್ನು ಹೊಡೆದುಕೊಂಡು ಹೋಗುತ್ತಿದ್ದರು. ಹೀಗೆಯೇ ಪ್ರಯಾಣಮಾಡುತ್ತಿದ್ದಾಗ ತ್ರಿತನ ಹಿಂಬದಿಯಲ್ಲಿ ಹೋಗುತ್ತಿದ್ದ ಏಕತ ಮತ್ತು ದ್ವಿತರಿಗೆ ತಾವು ಹೊಡೆದುಕೊಂಡು ಹೋಗುತ್ತಿದ್ದ ಪಶುಗಳ ಸಮುದಾಯವನ್ನು ನೋಡಿ, ಆ ಪಶುಗಳ ಸಮುದಾಯದಲ್ಲಿ ತ್ರಿತನಿಗೆ ಭಾಗವೇ ಸಿಗದಂತೆ ಮಾಡುವುದು ಹೇಗೆಂಬ ಬಗೆಗೆ ಯೋಚನೆಯುಂಟಾಯಿತು. ಪಾಪಿಷ್ಠರಾದ ಏಕತ ಮತ್ತು ದ್ವಿತರು ಪರಸ್ಪರವಾಗಿ ರಹಸ್ಯದಲ್ಲಿ ಸಂಭಾಷಣೆಮಾಡುತ್ತಾ ಏನು ಹೇಳಿದರೆಂಬುದನ್ನು ಹೇಳುವೆನು; ಕೇಳು, ಜನಮೇಜಯ!

"ತ್ರಿತನು ಯಜ್ಞಮಾಡಿಸುವುದರಲ್ಲಿ ಕುಶಲನು. ವೇದಗಳಲ್ಲಿ ಪರಿನಿಷ್ಠಿತನು (ವಿದ್ವಾಂಸನು). ಆದುದರಿಂದ ಅವನು ಇನ್ನೂ ಅನೇಕ ಯಜ್ಞಗಳನ್ನು ಮಾಡಿಸಿ ಅಪಾರವಾದ ಗೋಧನವನ್ನು ಸಂಪಾದಿಸಿಕೊಳ್ಳುವನು. ಆದುದರಿಂದ ನಾವಿಬ್ಬರೂ ಸೇರಿಕೊಂಡು ನಮ್ಮ ಅಧೀನದಲ್ಲಿಯೇ ಇರುವ ಈ ಗೋವುಗಳೆಲ್ಲವನ್ನೂ ಹೊಡೆದುಕೊಂಡು ನಮ್ಮ ಪಾಡಿಗೆ ನಾವು ಹೊರಟು ಹೋಗೋಣ. ನಮ್ಮಿಂದ ಬೇರ್ಪಟ್ಟ ತ್ರಿತನು ಬೇಕಾದ ಕಡೆಗೆ ಹೋಗಲಿ"–ಹೀಗವರು ಪರಸ್ಪರವಾಗಿ ಮಾತನಾಡಿಕೊಂಡರು. ರಾತ್ರಿಯ ಸಮಯವಾಗಿತ್ತು. ಮೂವರೂ ಯಾವುದೋ ದಾರಿಯನ್ನು ಹಿಡಿದು ಹೋಗುತ್ತಿದ್ದರು. ಅವರು ಹೋಗುತ್ತಿದ್ದ ಮಾರ್ಗದಲ್ಲಿಯೇ ಒಂದು ತೋಳವಿದ್ದಿತು. ಅಲ್ಲಿಗೆ ಸ್ವಲ್ಪದೂರದಲ್ಲಿಯೇ ಸರಸ್ವತೀನದಿಯ ತೀರದಲ್ಲಿ ಒಂದು ದೊಡ್ಡ ಬಾವಿಯೂ ಇದ್ದಿತು. ಮುಂದೆ ಹೋಗುತ್ತಿದ್ದ ತ್ರಿತನು ತನಗೆದುರಾಗಿ

ನಿಂತಿರುವ ತೋಳವನ್ನು ನೋಡಿ ಭಯಪಟ್ಟುಕೊಂಡು ಓಡತೊಡಗಿದನು. ಹಾಗೆಯೇ ಓಡಿಹೋಗುತ್ತಿದ್ದಾಗ ರಾತ್ರಿಯ ಕತ್ತಲಿನಲ್ಲಿ ಅಗಾಧವಾದ, ಮಹಾಘೋರವಾಗಿದ್ದ, ಸರ್ವಪ್ರಾಣಿಗಳಿಗೂ ಭಯವನ್ನುಂಟುಮಾಡುತ್ತಿದ್ದ, ಸರಸ್ವತೀತೀರದಲ್ಲಿದ್ದ ಆ ಮಹಾಕೂಪದಲ್ಲಿ ಬಿದ್ದುಬಿಟ್ಟನು. ಬಾವಿಯಲ್ಲಿ ಬಿದ್ದಿದ್ದ ಮುನಿಶ್ರೇಷ್ಠನಾದ ತ್ರಿತನು ಆರ್ತನಾದಮಾಡಿದನು. ಅವನು ಮಾಡಿದ ಆರ್ತನಾದವನ್ನು ಅವನ ಸಹೋದರರಿಬ್ಬರೂ ಕೇಳಿಸಿಕೊಂಡರು. ತ್ರಿತನು ಬಾವಿಯಲ್ಲಿ ಬಿದ್ದಿರುವನೆಂಬುದನ್ನು ತಿಳಿದೂ ಸಹ ಸಹೋದರರಾದ ಏಕತ-ದ್ವಿತರು, ತೋಳವು ತಮ್ಮನ್ನೂ ಅಟ್ಟಿಸಿಕೊಂಡು ಬರಬಹುದೆಂಬ ಭಯದಿಂದಲೂ–ಅವನೇನಾದರೂ ತಮ್ಮ ಸಹಾಯದಿಂದ ಮೇಲೆದ್ದು ಬಂದರೆ ತಾವು ಹೊಡೆದುಕೊಂಡು ಬರುತ್ತಿರುವ ಗೋಸಮೂಹದಲ್ಲಿ ಅವನಿಗೂ ಪಾಲು ಕೊಡಬೇಕಾಗುತ್ತದೆಂಬ ಲೋಭದಿಂದಲೂ ತ್ರಿತನನ್ನು ಮಾತನಾಡಿಸಲೂ ಹೋಗದೆ ಗೋವುಗಳನ್ನು ಹೊಡೆದುಕೊಂಡು ಮುನ್ನಡೆದರು. ಪಶುಲುಬ್ಧರಾದ ಅಣ್ಣಂದಿರಿಂದ ಪರಿತ್ಯಕ್ತನಾದ ಮಹಾತಪಸ್ವಿಯಾದ ತ್ರಿತನು ನೀರಿನಿಂದ ರಹಿತವಾಗಿದ್ದ, ಧೂಳಿನಿಂದ ಮುಚ್ಚಿಹೋಗಿದ್ದ ಆ ಕೂಪದಲ್ಲಿಯೇ ಒದ್ದಾಡುತ್ತಿದ್ದನು. ಪಾಪಕಾರ್ಯಗಳನ್ನು ಮಾಡಿದವನು ನರಕದಲ್ಲಿ ಬೀಳುವಂತೆ–ಬಳ್ಳಿಗಳಿಂದಲೂ, ಗರಿಕೆಹುಲ್ಲುಗಳಿಂದಲೂ, ಧೂಳಿನಿಂದಲೂ ವ್ಯಾಪ್ತವಾಗಿದ್ದ ಕೂಪದಲ್ಲಿ ಬಿದ್ದಿರುವ ತನ್ನ ದುಃಸ್ಥಿತಿಯನ್ನು ನೆನೆಯುತ್ತಾ ಮೃತ್ಯುವಿನಿಂದ ಭೀತನಾದ ಮತ್ತು ಸೋಮಪಾನದಿಂದ ವಂಚಿತನಾದ ತ್ರಿತನು ಆ ಕೂಪದಲ್ಲಿಯೇ ಕುಳಿತು ತನ್ನ ಬುದ್ಧಿಯಿಂದ ಆಲೋಚಿಸಿದನು :

**ಸೋಮಃ ಕಥಂ ತು ಪಾತವ್ಯ ಇಹಸ್ಥೇನ ಮಯಾ ಭವೇತ್ ॥೩೧॥**

'ನಾನು ಇಲ್ಲಿಯೇ ಇದ್ದುಕೊಂಡು ಸೋಮರಸವನ್ನು ಯಾವ ರೀತಿಯಲ್ಲಿ ಪಾನಮಾಡಲಿ?' ಹೀಗೆಯೇ ಮನಸ್ಸಿನಲ್ಲಿ ಯೋಚಿಸುತ್ತಿದ್ದಾಗ ಮಹಾತಪಸ್ವಿಯಾದ ತ್ರಿತನು ಆ ಕೂಪದಲ್ಲಿ ದೈವಯೋಗದಿಂದ ಜೋತುಬಿದ್ದಿದ್ದ ಬಳ್ಳಿಯೊಂದನ್ನು ನೋಡಿದನು. ಒಡನೆಯೇ ತ್ರಿತನು ಧೂಳಿನಿಂದ ಆವೃತವಾಗಿದ್ದ ಆ ಕೂಪದಲ್ಲಿಯೇ ಕುಳಿತು ನೀರನ್ನು ಸ್ಮರಿಸಿ

ಕೊಂಡನು. ಅನಂತರ ಅಗ್ನಿತ್ರಯಗಳನ್ನು ಸ್ಮರಿಸಿಕೊಂಡನು. ಹೋತೃ, ಉದ್ಗಾತೃ ಮತ್ತು ಅಧ್ವರ್ಯುಗಳನ್ನು ತನ್ನಲ್ಲಿಯೇ ಆವಾಹನೆಮಾಡಿ ಕೊಂಡನು. ಮಹಾತಪಸ್ವಿಯಾದ ತ್ರಿತನು ಆ ಕೂಪದಲ್ಲಿ ಜೋಲಾಡುತ್ತಿದ್ದ ಬಳ್ಳಿಯನ್ನೇ ಸೋಮಲತೆಯನ್ನಾಗಿ ಕಲ್ಪಿಸಿಕೊಂಡನು. ತ್ರಿತಮುನಿಯು ಋಗ್ಯಜುಃಸಾಮಮಂತ್ರಗಳನ್ನು ಮನಸ್ಸಿನಲ್ಲಿಯೇ ಜಪಿಸಿದನು. ಕೂಪದಲ್ಲಿದ್ದ ಕಲ್ಲುಗಳನ್ನೇ ಅಭಿಷವಕ್ಕೆ ಉಪಯೋಗಿಸುವ ಗ್ರಾವಾಣಗಳನ್ನಾಗಿ ಮಾಡಿಕೊಂಡು ಸೋಮರಸವನ್ನು ಸಿದ್ಧಪಡಿಸಿದನು. ನೀರನ್ನೇ ಆಜ್ಯವನ್ನಾಗಿ ಕಲ್ಪಿಸಿಕೊಂಡು ದೇವತೆಗಳಿಗೆ ಸೋಮಭಾಗಗಳನ್ನು ಕಲ್ಪಿಸಿದನು. ಅನಂತರ ದೇವತೆಗಳನ್ನು ಆಹ್ವಾನಿಸಿ, ಅವರನ್ನು ಉದ್ದೇಶಿಸಿ ಮನಸ್ಸಂಕಲ್ಪಿತವಾಗಿದ್ದ ಅಗ್ನಿಯಲ್ಲಿ ಹೋಮಮಾಡಿದನು. ವೇದಮಂತ್ರಗಳನ್ನು ಗಟ್ಟಿಯಾಗಿ ಉಚ್ಚರಿಸಿದನು. ಬ್ರಹ್ಮವಾದಿಗಳು ಹೇಳುತ್ತಿದ್ದಂತೆ ವೇದಮಂತ್ರಗಳನ್ನು ಹೇಳಿ ಯಜ್ಞವನ್ನು ವಿಧಿವಿಹಿತವಾದ ರೀತಿಯಲ್ಲಿ ಮಾಡಿ, ಸೋಮರಸವನ್ನು ಸಿದ್ಧಗೊಳಿಸಿದನು. ತ್ರಿತನು ಮಾಡಿದ ವೇದಘೋಷವು ಸ್ವರ್ಗವನ್ನೂ ಆವರಿಸಿತು. ಮಹಾತ್ಮನಾದ ತ್ರಿತನ ಯಜ್ಞವು ಈ ರೀತಿಯಲ್ಲಿ ನಡೆಯುತ್ತಿರಲಾಗಿ ಸ್ವರ್ಗಲೋಕದಲ್ಲಿ ಉದ್ವೇಗವುಂಟಾಯಿತು. ಆದರೆ ಆ ಉದ್ವಿಗ್ನತೆಗೆ ಕಾರಣವು ಮಾತ್ರ ತಿಳಿಯಲಿಲ್ಲ. ಸ್ವಲ್ಪಹೊತ್ತಿನನಂತರ ದೇವಗುರುವಾದ ಬೃಹಸ್ಪತಿಯು ವೇದಮಂತ್ರಗಳ ಉಗ್ರವಾದ ಶಬ್ದವನ್ನು ಕೇಳಿ ದೇವತೆಗಳನ್ನು ಕುರಿತು ಹೇಳಿದನು :

"ದೇವತೆಗಳೇ! ತ್ರಿತನ ಯಜ್ಞವು ನಡೆಯುತ್ತಿದೆ. ನಾವೆಲ್ಲರೂ ಅಲ್ಲಿಗೆ ಹೋಗೋಣ. ನಾವೇನಾದರೂ ಈಗ ಅಲ್ಲಿಗೆ ಹೋಗದಿದ್ದರೆ ಆ ಮಹಾತಪಸ್ವಿಯು ಕುಪಿತನಾಗಿ ಅನ್ಯದೇವತೆಗಳನ್ನೇ ಸೃಷ್ಟಿಸಿಬಿಡಬಹುದು."

ದೇವಪುರೋಹಿತನಾದ ಬೃಹಸ್ಪತಿಯು ಹೇಳಿದ ಮಾತುಗಳನ್ನು ಕೇಳಿ ಬೃಹಸ್ಪತಿಪುರೋಗರಾದ ಎಲ್ಲ ದೇವತೆಗಳೂ ತ್ರಿತನ ಯಜ್ಞವು ನಡೆಯುತ್ತಿದ್ದ ಸ್ಥಳಕ್ಕೆ ಧಾವಿಸಿದರು. ದೇವತೆಗಳೂ ತ್ರಿತನಿದ್ದ ಕೂಪದ ಸಮೀಪಕ್ಕೆ ಬಂದು ಯಜ್ಞಕರ್ಮದಲ್ಲಿ ದೀಕ್ಷಿತನಾಗಿದ್ದ ತ್ರಿತನನ್ನು ನೋಡಿದರು. ಜಾಜ್ವಲ್ಯಮಾನವಾದ ಕಾಂತಿಯಿಂದ ಕೂಡಿದ್ದ ಮಹಾಸೌಭಾಗ್ಯಶಾಲಿಯಾದ ಮಹಾತ್ಮನಾದ ತ್ರಿತನೊಡನೆ ಹೇಳಿದರು :

'ದ್ವಿಜೋತ್ತಮ! ಯಜ್ಞದ ಹವಿರ್ಭಾಗವನ್ನು ಪಡೆದುಕೊಳ್ಳಲು ನಾವಿಲ್ಲಿಗೆ ಬಂದಿರುತ್ತೇವೆ.' ದೇವತೆಗಳು ಹೇಳಿದ ಮಾತನ್ನು ಕೇಳಿ ತ್ರಿತಮುನಿಯು–'ದೇವತೆಗಳೇ! ಭಯಂಕರವಾದ ಈ ಕೂಪದಲ್ಲಿ ಬಿದ್ದು ಬುದ್ಧಿಗೆಟ್ಟವನಂತಾಗಿರುವ ನನ್ನ ಅವಸ್ಥೆಯನ್ನು ನೋಡಿರಿ'–ಎಂಬುದಾಗಿ ಹೇಳಿ ಯಥಾವಿಧಿಯಾಗಿ ಮಂತ್ರಯುಕ್ತವಾದ ಭಾಗಗಳನ್ನು ದೇವತೆಗಳಿಗೆ ಸಮರ್ಪಿಸಿದನು. ತ್ರಿತನಿಂದ ಯಜ್ಞದ ಹವಿರ್ಭಾಗಗಳನ್ನು ಪಡೆದುಕೊಂಡ ದೇವತೆಗಳೂ ಪರಮಪ್ರೀತರಾದರು. ಯಥಾವಿಧಿಯಾಗಿ ಸಿಕ್ಕಿದ ಹವಿರ್ಭಾಗ ಗಳನ್ನು ಪಡೆದುಕೊಂಡು ಪ್ರೀತಾತ್ಮರಾದ ದೇವತೆಗಳು ತ್ರಿತನ ಮನೋ ವಾಂಛಿತವಾದ ಎಲ್ಲ ವರಗಳನ್ನೂ ದಯಪಾಲಿಸಿದರು. ತ್ರಿತಮಹರ್ಷಿಯು ದೇವತೆಗಳನ್ನು ಕುರಿತು ಈ ವರಗಳನ್ನು ಕೇಳಿಕೊಂಡನು.

**ಸ ತು ವವ್ರೇ ವರಂ ದೇವಾಂಸ್ತ್ರಾತುಮರ್ಹಥ ಮಾಮಿತಃ ।**
**ಯಶ್ಚೇಹೋಪಸ್ಪೃಶೇತ್ಕೂಪೇ ಸ ಸೋಮಪಗತಿಂ ಲಭೇತ್ ॥೪೬॥**

"ದೇವತೆಗಳೇ! ನನ್ನನ್ನು ಈ ಕೂಪದಿಂದ ಉದ್ಧರಿಸಿರಿ. ಈ ಕೂಪದಲ್ಲಿ ಯಾರು ಆಚಮನಮಾಡುವರೋ ಅವರಿಗೆ ಮಹಾಯಜ್ಞದಲ್ಲಿ ಸೋಮಪಾನವನ್ನು ಮಾಡಿದವರಿಗೆ ಪ್ರಾಪ್ತವಾಗುವ ಸದ್ಗತಿಯು ಲಭಿಸಲಿ."

ತ್ರಿತಮಹರ್ಷಿಯು ಹೀಗೆಂದು ಹೇಳುತ್ತಿದ್ದಂತೆಯೇ ಅಲೆಗಳಿಂದ ಕೂಡಿದ ಸರಸ್ವತೀನದಿಯು ಆ ಕೂಪದಲ್ಲಿ ಆವಿರ್ಭವಿಸಿ ಮೇಲಕ್ಕೆ ಉಕ್ಕಿತು. ಸರಸ್ವತೀನದಿಯ ಪ್ರವಾಹದಿಂದ ಮೇಲಕ್ಕೆತ್ತಲ್ಪಟ್ಟ ತ್ರಿತನು ದೇವತೆಗಳಿಗೆ ಅಭಿಮುಖವಾಗಿ ನಿಂತು ಅವರನ್ನು ಯಥೋಚಿತವಾದ ಪೂಜೆಗಳಿಂದ ಸತ್ಕರಿಸಿದನು. ದೇವತೆಗಳು ತ್ರಿತನು ಅಪೇಕ್ಷಿಸಿದ ಎಲ್ಲ ವರಗಳನ್ನೂ ದಯಪಾಲಿಸಿ ತಮ್ಮ-ತಮ್ಮ ಸ್ಥಾನಗಳಿಗೆ ತೆರಳಿದರು. ಸುಪ್ರೀತನಾದ ತ್ರಿತನೂ ತನ್ನ ಆಶ್ರಮಕ್ಕೆ ತೆರಳಿದನು.

ಆದರೆ ತನ್ನ ಅಣ್ಣಂದಿರು ಮಾಡಿದ್ದ ದ್ರೋಹವನ್ನು ತ್ರಿತನು ಮರೆತಿರಲಿಲ್ಲ. ಮಹಾತಪಸ್ವಿಯಾದ ತ್ರಿತನು ಏಕತ-ದ್ವಿತರು ಇದ್ದಲ್ಲಿಗೆ ಹೋಗಿ ಪರಮಕ್ರುದ್ಧನಾಗಿ ಕರ್ಣಕಠೋರವಾದ ಮಾತುಗಳನ್ನಾಡಿ ಅವರಿಗೆ ಶಾಪವನ್ನು ಕೊಟ್ಟನು.

**ಪಶುಲುಬ್ಧೌ ಯುವಾಂ ಯಸ್ಮಾನ್ಮಾಮುತ್ಸೃಜ್ಯ ಪ್ರಧಾವಿತೌ ।**
**ತಸ್ಮಾದ್ವೃಕಾಕೃತೀ ರೌದ್ರೌ ದಂಷ್ಟ್ರಿಣಾವಭಿತಶ್ಚರೌ ॥೫೦॥**

**ಭವಿತಾರೌ ಮಯಾ ಶಪ್ತೌ ಪಾಪೇನಾನೇನ ಕರ್ಮಣಾ ।**
**ಪ್ರಸವಶ್ಚೈವ ಯುವಯೋರ್ಗೋಲಾಂಗೂಲರ್ಕ್ಷವಾನರಾಃ ॥೫೧॥**

"ಮೂರು ಜನರೂ ಸಂಪಾದಿಸಿದ ಪಶುಗಳನ್ನು ನೀವಿಬ್ಬರೇ ಹಂಚಿಕೊಳ್ಳಬೇಕೆಂಬ ದುರಾಶೆಯಿಂದ ಕೂಪದಲ್ಲಿ ಬಿದ್ದ ನನ್ನನ್ನು ಅಲ್ಲಿಯೇ ಬಿಟ್ಟು ಉದ್ದೇಶಪೂರ್ವಕವಾಗಿಯೇ ಪಶುಗಳೊಡನೆ ಪಲಾಯನ ಮಾಡಿರುವಿರಿ. ಈ ಪಾಪಕರ್ಮಕ್ಕಾಗಿ ನನ್ನಿಂದ ಶಪಿಸಲ್ಪಡುವ ನೀವು ಕೋರೆ ದಾಡೆಗಳನ್ನು ಹೊಂದಿರುವ ಭಯಂಕರವಾದ ತೋಳಗಳ ಆಕಾರಗಳನ್ನು ಹೊಂದಿ ಎಲ್ಲೆಡೆಯಲ್ಲಿಯೂ ಸಂಚರಿಸುತ್ತಿರಿ. ನಿಮ್ಮ ಸಂತತಿಯಲ್ಲಿ ಗೋಲಾಂಗೂಲಗಳೂ, ಕರಡಿಗಳೂ ಮತ್ತು ಕಪಿಗಳೂ ಹುಟ್ಟುತ್ತವೆ."

ತ್ರಿತಮಹರ್ಷಿಯು ಹೀಗೆ ಹೇಳುತ್ತಿದ್ದಂತೆಯೇ ಕ್ಷಣಮಾತ್ರದಲ್ಲಿ ಸತ್ಯವಾದಿಯಾದ ತ್ರಿತನ ಶಾಪದ ಪ್ರಭಾವದಿಂದಾಗಿ ಏಕತ ಮತ್ತು ದ್ವಿತರು ತೋಳಗಳಾಗಿ ಪರಿವರ್ತನೆ ಹೊಂದಿದರು.

ಅಮಿತಪರಾಕ್ರಮಿಯಾದ ಬಲರಾಮನು ಆ ತೀರ್ಥದಲ್ಲಿಯೂ ಸ್ನಾನಾಚಮನಗಳನ್ನು ಮಾಡಿ ಬ್ರಾಹ್ಮಣರನ್ನು ಸಂಪೂಜಿಸಿ ನಾನಾವಿಧವಾದ ದಾನಗಳನ್ನು ಕೊಟ್ಟನು. ಉದಾರಮನಸ್ಕನಾದ ಬಲರಾಮನು ಸರಸ್ವತೀ ನದಿಯಲ್ಲಿಯೇ ಇದ್ದ ಉದಪಾನತೀರ್ಥವನ್ನು ಸಂದರ್ಶಿಸಿ ಪುನಃ ಪುನಃ ಆ ಮಹಾತೀರ್ಥವನ್ನು ಪ್ರಶಂಸೆಮಾಡುತ್ತಾ ಅಲ್ಲಿಂದ ಮುಂದೆ ವಿನಶನತೀರ್ಥಕ್ಕೆ ತೆರಳಿದನು."

೩೬ನೆಯ ಅಧ್ಯಾಯವು ಮುಗಿಯಿತು.

## ವಿನಶನ, ಸುಭೂಮಿಕ, ಗಂಧರ್ವ, ಗರ್ಗಸ್ರೋತ, ಶಂಖ, ದ್ವೈತವನ ಮತ್ತು ನೈಮಿಷೇಯತೀರ್ಥಕ್ಷೇತ್ರಗಳ ಯಾತ್ರೆಯನ್ನು ಮಾಡಿಕೊಂಡು ಬಲರಾಮನು ಸಪ್ತಸರಸ್ವತೀ ತೀರ್ಥಕ್ಷೇತ್ರವನ್ನು ಪ್ರವೇಶಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಮಹಾರಾಜ! ಬಲರಾಮನು ಉದಪಾನತೀರ್ಥಯಾತ್ರೆಯನ್ನು ಮುಗಿಸಿಕೊಂಡು 'ವಿನಶನ' ಎಂಬ ತೀರ್ಥದ ಸಮೀಪಕ್ಕೆ ಪ್ರಯಾಣ ಮಾಡಿದನು. ಹಿಂದೆ ಅಲ್ಲಿದ್ದ ದುಷ್ಕರ್ಮಿಗಳಾದ ಶೂದ್ರರ ಮತ್ತು ಬೇಡರ ಮೇಲಿನ ದ್ವೇಷದಿಂದ ಸರಸ್ವತಿಯು ಅದೃಶ್ಯಳಾಗಿ ಹೋಗಿದ್ದಳು. ಆ ಕಾರಣ ದಿಂದಲೇ ಋಷಿಗಳು ಆ ಸ್ಥಳವನ್ನು 'ವಿನಶನತೀರ್ಥ' ಎಂದೇ ಕರೆಯುತ್ತಾರೆ. ಮಹಾಬಲನಾದ ಬಲರಾಮನು ಅಲ್ಲಿದ್ದ ಸರಸ್ವತಿಯಲ್ಲಿ ಸ್ನಾನಾಚಮನಾದಿ ಗಳನ್ನು ಮಾಡಿ ಸರಸ್ವತೀನದಿಯ ಸುಂದರವಾದ ತೀರಪ್ರದೇಶದಲ್ಲಿದ್ದ 'ಸುಭೂಮಿಕಾ' ಎಂಬ ತೀರ್ಥಕ್ಕೆ ಪ್ರಯಾಣಮಾಡಿದನು. ಆ ತೀರ್ಥದಲ್ಲಿ ಗೌರವರ್ಣದವರಾದ, ನಿರ್ಮಲಮುಖಿಯರಾದ, ಸುಂದರಿಯರಾದ ಅಪ್ಸರೆಯರು ಆಲಸ್ಯವನ್ನು ಬಿಟ್ಟು ದೋಷರಹಿತವಾದ ನಾನಾವಿಧವಾದ ಕ್ರೀಡೆಗಳನ್ನು ಆಡುತ್ತಿರುತ್ತಾರೆ. ಬ್ರಾಹ್ಮಣಸೇವಿತವಾದ, ಪುಣ್ಯಕರವಾದ ಆ ತೀರ್ಥಕ್ಕೆ ಗಂಧರ್ವರಿಂದ ಒಡಗೂಡಿದ ದೇವತೆಗಳು ಪ್ರತಿಮಾಸವೂ ಬರುತ್ತಿರುತ್ತಾರೆ. ಆ ಪವಿತ್ರತೀರ್ಥದ ಸಮೀಪದಲ್ಲಿ ಗಂಧರ್ವರೂ ಮತ್ತು ಅಪ್ಸರೆಯರೂ ಒಟ್ಟಾಗಿ ಸೇರಿ ಆನಂದದಿಂದ ಸಂಚರಿಸುತ್ತಿರುವುದನ್ನು ನಾವೂ ಕಾಣಬಹುದು. ಆ ತೀರ್ಥಕ್ಷೇತ್ರದಲ್ಲಿ ದೇವತೆಗಳೂ ಮತ್ತು ಬಳ್ಳಿ ಗಳನ್ನಾಶ್ರಯಿಸಿರುವ ಪಿತೃಗಳೂ ಆನಂದಪಡುತ್ತಾರೆ. ಆ ಕ್ಷೇತ್ರದಲ್ಲಿ ದೇವ– ಪಿತೃಗಳ ಮೇಲೆ ದಿವ್ಯವಾದ ಮತ್ತು ಪುಣ್ಯೋಪೇತವಾದ ಪುಷ್ಪಗಳು ಸದಾ ಕಾಲದಲ್ಲಿಯೂ ಸುರಿಯುತ್ತಲೇ ಇರುತ್ತವೆ. ಸರಸ್ವತೀನದಿಯ ಸುಂದರ ವಾದ ಆ ದಡವು ಅಪ್ಸರಸ್ತ್ರೀಯರ ಮಂಗಳಮಯವಾದ ಕ್ರೀಡಾಭೂಮಿ ಯಾಗಿದೆ. ಆದುದರಿಂದಲೇ ಆ ಪ್ರದೇಶಕ್ಕೆ 'ಸುಭೂಮಿಕಾ' ಎಂದೇ ಹೆಸ

ರಾಗಿದೆ. ಆ ಸುಭೂಮಿಕಾತೀರ್ಥಕ್ಷೇತ್ರದಲ್ಲಿ ಬಲರಾಮನು ಸ್ನಾನಮಾಡಿ ಹೇರಳವಾದ ಧನವನ್ನು ಬ್ರಾಹ್ಮಣರಿಗೆ ದಾನಮಾಡಿ, ದಿವ್ಯವಾದ ಗಾಯನ ವನ್ನೂ ಮತ್ತು ವಾದ್ಯಗಳ ಧ್ವನಿಯನ್ನೂ ಕೇಳುತ್ತಾ, ಅನೇಕ ದೇವ-ಗಂಧರ್ವ-ರಾಕ್ಷಸರ ಛಾಯಾಮೂರ್ತಿಗಳನ್ನೂ ಸಂದರ್ಶಿಸಿ, ಅಲ್ಲಿಂದ ಮುಂದೆ ಗಂಧರ್ವತೀರ್ಥಕ್ಕೆ ಪ್ರಯಾಣಮಾಡಿದನು. ಗಂಧರ್ವತೀರ್ಥ ಕ್ಷೇತ್ರದಲ್ಲಿ ತಪಸ್ಸಿನಲ್ಲಿ ನಿರತರಾಗಿದ್ದ ವಿಶ್ವಾವಸುಪ್ರಮುಖರಾದ ಗಂಧರ್ವರು ಸುಮನೋಹರವಾದ ನೃತ್ಯಗಳನ್ನು ಮಾಡುತ್ತಿರುತ್ತಾರೆ. ಅದಕ್ಕೆ ತಕ್ಕಂತೆ ವಾದ್ಯಗಳನ್ನು ಬಾರಿಸುತ್ತಾ ಗೀತೆಗಳನ್ನೂ ಹಾಡುತ್ತಿರುತ್ತಾರೆ. ಆ ಗಂಧರ್ವ ತೀರ್ಥಕ್ಷೇತ್ರದಲ್ಲಿಯೂ ಹಲಧರನು ಸ್ನಾನಾಚಮನಾದಿಗಳನ್ನು ಮಾಡಿ ಬ್ರಾಹ್ಮಣರಿಗೆ ಆಡು-ಕುರಿ-ಹಸು-ಕತ್ತೆ ಮತ್ತು ಒಂಟೆಗಳನ್ನೂ, ಚಿನ್ನ-ಬೆಳ್ಳಿ ಗಳನ್ನೂ ದಾನಮಾಡಿ, ಅವರಿಗೆ ಬೇಕುಬೇಕಾದ ಭಕ್ಷ್ಯಗಳಿಂದ ಕೂಡಿದ ಭೋಜನ ಮಾಡಿಸಿ ಅಪಾರವಾದ ಧನವನ್ನೂ ಕೊಟ್ಟು ಅವರನ್ನು ಸಂತೋಷ ಗೊಳಿಸಿದನು. ಬಲರಾಮನ ಧರ್ಮಶ್ರದ್ಧೆಯನ್ನೂ ಉದಾರತೆಯನ್ನೂ ಬ್ರಾಹ್ಮಣರು ಶ್ಲಾಘಿಸುತ್ತಿರಲಾಗಿ ಅವರೊಡನೆಯೇ ಬಲರಾಮನು ಮುಂದೆ ಪ್ರಯಾಣಮಾಡಿದನು.

ಜನಮೇಜಯ! ಗಂಧರ್ವತೀರ್ಥದಿಂದ ಮುಂದಕ್ಕೆ ಬ್ರಾಹ್ಮಣರ ಸಂಗಡ ಪ್ರಯಾಣಮಾಡಿದ ಅರಿಂದಮನಾದ, ಮಹಾಬಾಹುವಾದ, ಒಂದೇ ಕಿವಿಯಲ್ಲಿ ಕುಂಡಲವನ್ನು ಧರಿಸಿದ್ದ (ಏಕಕುಂಡಲಿಯಾದ) ಬಲರಾಮನು ಮಹಾತೀರ್ಥವೆಂದು ವಿಖ್ಯಾತವಾದ ಗರ್ಗಸ್ರೋತಸ್ತೀರ್ಥಕ್ಕೆ ಪ್ರಯಾಣಮಾಡಿದನು. ಅಲ್ಲಿ ಅನವರತವಾದ ತಪಸ್ಸಿನಿಂದ ಪವಿತ್ರಾಂತಃ ಕರಣನಾಗಿದ್ದ ಮಹಾತ್ಮನಾದ ವೃದ್ಧಗರ್ಗನು, ಸರಸ್ವತೀತೀರ್ಥದಲ್ಲಿ ಮಾಡಿದ ತಪಸ್ಸಿನಿಂದಾಗಿ ಕಾಲಜ್ಞಾನವನ್ನೂ (ಯಾವಾಗ ಏನಾಗುತ್ತದೆಂಬುದನ್ನೂ), ಯಾವಾಗ ನಕ್ಷತ್ರಗಳ ಗತಿಯು ವಕ್ರವಾಗುತ್ತದೆಂಬುದನ್ನೂ, ದಾರುಣವಾದ ಉತ್ಪಾತಗಳು ಯಾವಾಗ ಸಂಭವಿಸುತ್ತವೆಯೆಂಬುದನ್ನೂ, ಶುಭಲಕ್ಷಣ ಗಳನ್ನೂ ತಿಳಿದುಕೊಂಡಿದ್ದನು.

**ತಸ್ಯ ನಾಮ್ನಾ ಚ ತತ್ತೀರ್ಥಂ ಗರ್ಗಸ್ರೋತ ಇತಿ ಸ್ಮೃತಮ್ ॥೧೬॥**

ಅವನ ಸಂಬಂಧದಿಂದಾಗಿಯೇ ಸರಸ್ವತೀನದಿಯ ತೀರದಲ್ಲಿದ್ದ ಆ

ಮಹಾತೀರ್ಥವು ಗರ್ಗಸ್ರೋತವೆಂಬ ಹೆಸರನ್ನೇ ಪಡೆಯಿತು. ಕಾಲಜ್ಞಾನ ವನ್ನು ತಿಳಿದುಕೊಳ್ಳುವ ಸಲುವಾಗಿ ಸುವ್ರತರಾದ, ಮಹಾಭಾಗ್ಯಶಾಲಿಗಳಾದ ಋಷಿಗಳು ಗರ್ಗಮುನಿಯನ್ನು ನಿರಂತರವಾಗಿಯೂ ಸೇವಿಸುತ್ತಿದ್ದರು. ಗರ್ಗಸ್ರೋತಸ್ತೀರ್ಥಕ್ಕೆ ಪ್ರಯಾಣಮಾಡಿದನಂತರ ಬಿಳಿಯ ಚಂದನದಿಂದ ಲೇಪಿತನಾಗಿದ್ದ, ನೀಲಾಂಬರನಾಗಿದ್ದ, ಯಶೋವಂತನಾಗಿದ್ದ ಬಲರಾಮನು ವಿಶುದ್ಧಾಂತಃಕರಣರಾದ ಮಹರ್ಷಿಗಳಿಗೆ ಅಪಾರವಾದ ಧನವನ್ನು ದಾನಮಾಡಿ, ಬ್ರಾಹ್ಮಣರಿಗೆ ನಾನಾವಿಧವಾದ ಭಕ್ಷ್ಯ-ಭೋಜ್ಯಗಳಿಂದ ಯುಕ್ತವಾದ ಭೋಜನವನ್ನು ಮಾಡಿಸಿ, ಅಲ್ಲಿಂದ ಮುಂದೆ ಸಪರಿವಾರನಾಗಿ ಶಂಖತೀರ್ಥಕ್ಕೆ ಪ್ರಯಾಣಮಾಡಿದನು. ತಾಲಧ್ವಜನಾದ, ಬಲಿಷ್ಠನಾದ ಬಲರಾಮನು, ಮಹಾಮೇರುಪರ್ವತದಂತೆ ಎತ್ತರವಾಗಿದ್ದ, ಶ್ವೇತಪರ್ವತ ದಂತೆ ಉಜ್ಜ್ವಲವಾಗಿದ್ದ, ಋಷಿಗಳ ಸಮೂಹಗಳಿಂದ ಸೇವಿಸಲ್ಪಡುತ್ತಿದ್ದ, ಸರಸ್ವತೀನದಿಯ ತೀರಪ್ರದೇಶದಲ್ಲಿ ಹುಟ್ಟಿದ್ದ ಮಹಾಶಂಖವೆಂಬ ಹೆಸರಿನ ವೃಕ್ಷವನ್ನು ನೋಡಿದನು. ಆ ಶಂಖವೃಕ್ಷದ ಸಮೀಪದಲ್ಲಿ ಯಕ್ಷರೂ, ವಿದ್ಯಾಧರರೂ, ಮಹಾತೇಜಸ್ಸಿನಿಂದ ಕೂಡಿದ್ದ ರಾಕ್ಷಸರೂ, ಮಹಾಬಲಿಷ್ಠ ರಾದ ಪಿಶಾಚರೂ, ಸಿದ್ಧರೂ ಸಾವಿರಾರು ಸಂಖ್ಯೆಯಲ್ಲಿದ್ದರು. ಅವರೆಲ್ಲರೂ ಆಹಾರವನ್ನು ಪರಿತ್ಯಜಿಸಿ, ನಿಯಮವ್ರತಾನುಷ್ಠಾನಪರರಾಗಿ ಆ ಮಹಾಶಂಖವೃಕ್ಷದ ಫಲವನ್ನು ಆಯಾಕಾಲಗಳಲ್ಲಿ (ಫಲವು ಲಭ್ಯವಾದಾಗ) ಉಪಭುಂಜಿಸುತ್ತಿದ್ದರು. ತಾವಾಗಿಯೇ ಸಂಕಲ್ಪಿಸಿಕೊಂಡಿದ್ದ ಆಯಾ ನಿಯಮಗಳ ಅನುಸಾರವಾಗಿ ನಡೆದುಕೊಳ್ಳುತ್ತಾ, ಯಕ್ಷ-ವಿದ್ಯಾಧರಾದಿಗಳು ಪ್ರತ್ಯೇಕ-ಪ್ರತ್ಯೇಕವಾಗಿಯೇ ಇರುತ್ತಾ, ಮನುಷ್ಯರ ಕಣ್ಣಿಗೆ ಕಾಣಿಸಿಕೊಳ್ಳದೇ ಆ ಶಂಖವೃಕ್ಷದ ಸಮೀಪದಲ್ಲಿಯೇ ಸಂಚರಿಸುತ್ತಿದ್ದರು.

ಜನಮೇಜಯ! ಈ ರೀತಿ ಆ ಮಹಾಶಂಖವೃಕ್ಷವು ಲೋಕದಲ್ಲಿ ವಿಖ್ಯಾತವಾಗಿದೆ. ಆ ಮಹಾಶಂಖವೃಕ್ಷದ ಸಮೀಪದಲ್ಲಿರುವ ಸರಸ್ವತಿಯು ಪಾವನವಾದ ತೀರ್ಥವೆಂದು ಲೋಕಪ್ರಸಿದ್ಧವಾಗಿದೆ. ಆದುದರಿಂದ ಅಲ್ಲಿನ ಸರಸ್ವತೀತೀರ್ಥಕ್ಕೆ ಮಹಾಶಂಖತೀರ್ಥವೆಂದೇ ಹೆಸರಾಗಿದೆ. ಆ ತೀರ್ಥ ದಲ್ಲಿಯೂ ಬಲರಾಮನು ಮಿಂದು ಬ್ರಾಹ್ಮಣರನ್ನು ಸಂಪೂಜಿಸಿ ಹಾಲು ಕರೆಯುವ ಹಸುಗಳನ್ನೂ, ತಾಮ್ರಮಯವಾದ ಮತ್ತು ಲೋಹಮಯವಾದ

ಭಾಂಡಗಳನ್ನೂ, ವಿಧ-ವಿಧವಾದ ವಸ್ತ್ರಗಳನ್ನೂ ದಾನಮಾಡಿದನು. ಅಲ್ಲಿದ್ದ ತಪೋಧನರೂ ಬಲರಾಮನನ್ನು ಆದರಿಸಿ ಸತ್ಕರಿಸಿದರು. ಅನಂತರ ಹಲಾಯುಧನು ಪುಣ್ಯೋಪೇತವಾದ ದ್ವೈತವನಕ್ಕೆ ಬಂದನು. ಅಲ್ಲಿಗೆ ಹೋದನಂತರ ಬಲರಾಮನು ಅಲ್ಲಿ ನಾನಾವಿಧವಾದ ಮುನಿವೇಷಗಳನ್ನು ಧರಿಸಿದ್ದ ಋಷಿಗಳನ್ನು ಸಂದರ್ಶಿಸಿ ದ್ವೈತಸರೋವರದಲ್ಲಿ ಮಿಂದು ಬ್ರಾಹ್ಮಣರನ್ನು ಸಂಪೂಜಿಸಿದನು. ಅನಂತರ ಬ್ರಾಹ್ಮಣರಿಗೆ ಅಪಾರವಾದ ಭೋಗಸಾಮಗ್ರಿಗಳನ್ನು ದಾನವಾಗಿ ಕೊಟ್ಟು ಅಲ್ಲಿಂದ ಮುಂದೆ ಸರಸ್ವತೀನದಿಯ ದಕ್ಷಿಣತೀರಪ್ರವಾಸವನ್ನು ಪ್ರಾರಂಭಿಸಿದನು.

ಸರಸ್ವತೀನದಿಯ ದಕ್ಷಿಣತೀರದಲ್ಲಿ ಸ್ವಲ್ಪದೂರ ಪ್ರಯಾಣಮಾಡಿದ ನಂತರ ಮಹಾಬಾಹುವಾದ, ಯಶೋವಂತನಾದ, ಧರ್ಮಾತ್ಮನಾದ ಭಗವಾನ್ ಬಲರಾಮನು 'ನಾಗಧನ್ವಾ' ಎಂಬ ಹೆಸರಿನ ತೀರ್ಥಕ್ಷೇತ್ರಕ್ಕೆ ಹೋದನು. ನಾಗಧನ್ವತೀರ್ಥಕ್ಷೇತ್ರದಲ್ಲಿ ಅಗಣಿತವಾದ ಸರ್ಪಗಳಿಂದ ಪರಿವೃತ ನಾದ, ಮಹಾದ್ಯುತಿಮಂತನಾದ, ಸರ್ಪರಾಜನಾದ ವಾಸುಕಿಯ ಮಹಾ ಸಾನ್ನಿಧ್ಯವಿದೆ. ಹದಿನಾಲ್ಕು ಸಾವಿರ ಋಷಿಗಳು ಅಲ್ಲಿ ವಾಸಮಾಡುತ್ತಿದ್ದಾರೆ. ದೇವತೆಗಳೆಲ್ಲರೂ ಬಂದು ಪನ್ನಗಶ್ರೇಷ್ಠನಾದ ವಾಸುಕಿಯನ್ನು ಸರ್ವಸರ್ಪಗಳ ರಾಜನನ್ನಾಗಿ ಆ ಸ್ಥಳದಲ್ಲಿಯೇ ಯಥಾವಿಧಿಯಾಗಿ ಅಭಿಷೇಚಿಸಿದರು. ಅಲ್ಲಿ ಅನೇಕಸರ್ಪಗಳಿದ್ದರೂ ಮನುಷ್ಯರಿಗೆ ಆ ಸ್ಥಳದಲ್ಲಿ ಸರ್ಪಗಳಿಂದ ಯಾವ ಭಯವೂ ಇರುವುದಿಲ್ಲ. ಆ ನಾಗಧನ್ವತೀರ್ಥಕ್ಷೇತ್ರದಲ್ಲಿಯೂ ಬಲರಾಮನು ವಿಧಿಪೂರ್ವಕವಾಗಿ ಬ್ರಾಹ್ಮಣರಿಗೆ ರತ್ನಗಳ ರಾಶಿಗಳನ್ನೇ ದಾನಮಾಡಿ ಮುಂದೆ ಪೂರ್ವದಿಕ್ಕಿಗೆ ಪ್ರಯಾಣಮಾಡಿದನು. ಅಲ್ಲಿ ಹೆಜ್ಜೆ-ಹೆಜ್ಜೆಗೂ ನೂರಾರು-ಸಾವಿರಾರು ಸುವಿಖ್ಯಾತವಾದ ತೀರ್ಥಕ್ಷೇತ್ರಗಳಿದ್ದುವು. ಬಲರಾಮನು ಆ ಎಲ್ಲ ತೀರ್ಥಗಳಲ್ಲಿಯೂ ಸ್ನಾನಮಾಡುತ್ತಾ ಅಲ್ಲಿರುತ್ತಿದ್ದ ಋಷಿಗಳ ನಿರ್ದೇಶನದಂತೆ ವ್ರತೋಪವಾಸಾದಿಗಳನ್ನು ಮಾಡಿ, ಎಲ್ಲ ಕಡೆ ಗಳಲ್ಲಿಯೂ ಬ್ರಾಹ್ಮಣರಿಗೆ ಯಥೇಚ್ಛವಾಗಿ ದಾನಗಳನ್ನು ಕೊಟ್ಟು, ತೀರ್ಥ ಕ್ಷೇತ್ರಗಳಲ್ಲಿದ್ದ ಮುನಿಗಳೆಲ್ಲರಿಗೂ ಅಭಿವಾದನಪೂರ್ವಕವಾಗಿ ನಮಸ್ಕಾರ ಮಾಡಿ, ಮುನಿಗಳು ಹೇಳಿದ ಮಾರ್ಗವನ್ನು ಹಿಡಿದು ಮುಂದೆ ಪ್ರಯಾಣ ಮಾಡುತ್ತಿದ್ದನು. ಅಲ್ಲಿ ಒಂದು ಸ್ಥಳದಲ್ಲಿ, ಸುರಿಯುತ್ತಿರುವ ಮಳೆಯು

ಗಾಳಿಯ ಹೊಡೆತದಿಂದ ಮತ್ತೊಂದು ಕಡೆಗೆ ತಿರುಗಿಬಿಡುವಂತೆ– ಸರಸ್ವತಿಯು ಇದ್ದಕ್ಕಿದ್ದಂತೆಯೇ ಪೂರ್ವಕ್ಕೆ ಹಿಂತಿರುಗಿದ್ದಳು. ನೈಮಿಷಾರಣ್ಯ ವಾಸಿಗಳಾದ, ಮಹಾತ್ಮರಾದ ಋಷಿಗಳು ಸಂದರ್ಶಿಸಲೆಂದೇ ಪೂರ್ವಕ್ಕೆ ತಿರುಗಿ ಹರಿಯುತ್ತಿದ್ದ, ಎಲ್ಲ ಸರಿತ್ತುಗಳಿಗೂ ಶ್ರೇಷ್ಠಳಾದ ಸರಸ್ವತೀನದಿ ಯನ್ನು ನೋಡಿ ಶ್ವೇತಗಂಧಾನುಲಿಪ್ತನಾದ ಹಲಾಯುಧನು ಆಶ್ಚರ್ಯಭರಿತನಾದನು.”

ವೈಶಂಪಾಯನರ ಮಾತನ್ನು ಕೇಳಿ ಜನಮೇಜಯನೂ ಆಶ್ಚರ್ಯ ಚಕಿತನಾಗಿ ಪ್ರಶ್ನಿಸುತ್ತಾನೆ :

“ಅಧ್ವರ್ಯುಸತ್ತಮರೇ (ಯಜುರ್ವೇದಪಂಡಿತರೇ!) ದ್ವಿಜಶ್ರೇಷ್ಠರೇ! ಸರಸ್ವತೀನದಿಯು ಯಾವ ಕಾರಣದಿಂದ ಹಿಂದಕ್ಕೆ ತಿರುಗಿ ಪೂರ್ವಾಭಿಮುಖವಾಗಿ ಹರಿಯತೊಡಗಿತು? ಬಲರಾಮನೂ ಆಶ್ಚರ್ಯ ಯುಕ್ತನಾಗಲು ಅಂತಹ ಮಹತ್ತರವಾದ ಕಾರಣವೇನಿದ್ದಿತು? ಈ ಎಲ್ಲ ವಿಷಯಗಳನ್ನೂ ನಿಮ್ಮ ಮುಖಾರವಿಂದದಿಂದ ತಿಳಿದುಕೊಳ್ಳುವ ಇಚ್ಛೆಯುಳ್ಳವನಾಗಿರುತ್ತೇನೆ. ದಯಮಾಡಿ ಹೇಳಿರಿ.”

“ಮಹಾರಾಜ! ಕೃತಯುಗದ ಕಥೆಯಿದು. ದ್ವಾದಶವಾರ್ಷಿಕವಾದ (ಹನ್ನೆರಡು ವರ್ಷಗಳ ಪರ್ಯಂತವಾಗಿ ನಡೆಯಬೇಕಾದ) ಮಹಾಸತ್ರ ಯಾಗದ ಅನುಷ್ಠಾನವು ಆರಂಭವಾಯಿತು. ಆ ಯಜ್ಞದಲ್ಲಿ ನೈಮಿಷಾರಣ್ಯ ವಾಸಿಗಳಾದ ತಪಸ್ವಿಜನರೂ ಮತ್ತು ಇತರ ಹಲವು ಋಷಿಗಳೂ ಭಾಗವಹಿ ಸಿದ್ದರು. ನೈಮಿಷಾರಣ್ಯವಾಸಿಗಳಾದ ತಪಸ್ವಿಗಳಿಂದ ಆಚರಿಸಲ್ಪಡುತ್ತಿದ್ದ ದ್ವಾದಶವಾರ್ಷಿಕವಾದ ಆ ಮಹಾಯಜ್ಞದಲ್ಲಿ ಭಾಗವಹಿಸುತ್ತಿದ್ದ ಮಹಾ ಭಾಗರಾದ ಋಷಿಗಳು ಬಹಳ ಕಾಲದವರೆಗೂ ಅಲ್ಲಿಯೇ ವಾಸಮಾಡಿ ಕೊಂಡಿದ್ದರು. ದೀರ್ಘಕಾಲದ ಯಜ್ಞವು ಮುಗಿದ ನಂತರ ಆ ಮಹರ್ಷಿ ಗಳೆಲ್ಲರೂ ತೀರ್ಥಸ್ನಾನಮಾಡಲು ಸರಸ್ವತೀನದಿಯ ದಕ್ಷಿಣತೀರಕ್ಕೆ ಬಂದರು. ಋಷಿಗಳ ಸಂಖ್ಯೆಯು ಅಧಿಕವಾಗಿದ್ದುದರಿಂದ ಸರಸ್ವತೀನದಿಯ ದಕ್ಷಿಣ ತೀರದಲ್ಲಿದ್ದ ತೀರ್ಥಕ್ಷೇತ್ರಗಳೆಲ್ಲವೂ ತುಂಬಿಹೋಗಿ ಮಹಾನಗರಗಳಂತೆಯೇ ಕಾಣುತ್ತಿದ್ದುವು. ಸರಸ್ವತೀತೀರ್ಥಗಳಲ್ಲಿ ಸ್ನಾನಮಾಡಬೇಕೆಂಬ ಅಭಿಲಾಷೆ ಯಿಂದಾಗಿ ಯಜ್ಞದಲ್ಲಿ ಭಾಗವಹಿಸಿದ್ದ ಬ್ರಾಹ್ಮಣಶ್ರೇಷ್ಠರು ಸಮಂತ

ಪಂಚಕತೀರ್ಥದವರೆಗೂ ಸರಸ್ವತೀನದಿಯ ತೀರದಲ್ಲಿ ಆಶ್ರಯವನ್ನು ಪಡೆದರು. ಹೋಮಕಾರ್ಯದಲ್ಲಿ ನಿರತರಾಗಿದ್ದ, ಶುದ್ಧಾಂತಃಕರಣರಾಗಿದ್ದ ಮುನಿಗಳು ಉಚ್ಚಸ್ವರದಿಂದ ಹೇಳುತ್ತಿದ್ದ ವೇದಘೋಷಗಳ ಧ್ವನಿಯು ಎಲ್ಲ ದಿಕ್ಕುಗಳನ್ನೂ ವ್ಯಾಪಿಸಿತು. ಮಹಾತ್ಮರಾದ ಮಹರ್ಷಿಗಳು ಸುತ್ತಲೂ ಮಾಡುತ್ತಿದ್ದ ಪ್ರದೀಪ್ತವಾದ ಅಗ್ನಿಹೋತ್ರಗಳಿಂದ ನದಿಗಳಲ್ಲಿಯೇ ಶ್ರೇಷ್ಠ ವೆಂದು ವಿಖ್ಯಾತವಾಗಿದ್ದ ಸರಸ್ವತೀನದಿಯು ಆ ಸಮಯದಲ್ಲಿ ಬಹಳವಾಗಿ ಶೋಭಿಸುತ್ತಿದ್ದಿತು. ಸರಸ್ವತೀನದಿಯ ಸಮೀಪದ ಆ ತೀರಪ್ರದೇಶದಲ್ಲಿ ಸುಪ್ರಸಿದ್ಧರಾದ ವಾಲಖಿಲ್ಯರು, ಆಶ್ಮಕುಟ್ಟರು, ದಂತೋಲೂಖಲಿಗಳು, ಪ್ರಸಂಖ್ಯಾನರು, ವಾಯುಭಕ್ಷರು, ಜಲಾಹಾರಿಗಳು, ಪರ್ಣಭಕ್ಷರು, ನಾನಾವಿಧವಾದ ನಿಯಮಾನುಷ್ಠಾನಗಳನ್ನಿಟ್ಟುಕೊಂಡಿದ್ದ ತಪಸ್ವಿಗಳು, ನೆಲದ ಮೇಲೆಯೇ ಮಲಗುವವರು–ಇವರೇ ಮುಂತಾದ ಮಹರ್ಷಿಗಳು ಆಶ್ರಯವನ್ನು ಪಡೆದಿದ್ದರು. ದೇವತೆಗಳು ತಮ್ಮ ಸಾನ್ನಿಧ್ಯದಿಂದ ಗಂಗಾನದಿ ಯನ್ನು ಶೋಭಾಯಮಾನಗೊಳಿಸುತ್ತಿದ್ದಂತೆ–ವಾಲಖಿಲ್ಯಾದಿ ಮಹರ್ಷಿಗಳು ಸರಸ್ವತೀನದಿಯನ್ನು ತಮ್ಮ ಸಾನ್ನಿಧ್ಯದಿಂದ ಶೋಭಾಯಮಾನವನ್ನಾಗಿ ಮಾಡಿದ್ದರು. ದೀರ್ಘಸತ್ರದಲ್ಲಿ ಭಾಗವಹಿಸಿದ್ದ ನೂರಾರು ಋಷಿಗಳು ಸಾಲು-ಸಾಲಾಗಿ ತೀರ್ಥಸ್ನಾನಕ್ಕೆಂದು ಬರುತ್ತಲೇ ಇದ್ದರು. ಆದರೆ ಆ ಮಹಾವ್ರತರಿಗೆ ಸರಸ್ವತೀನದಿಯ ದಕ್ಷಿಣತೀರದಲ್ಲಿದ್ದ ತೀರ್ಥಗಳಲ್ಲಿ ಸ್ನಾನ ಮಾಡಲು ಅವಕಾಶವೇ ಸಿಗಲಿಲ್ಲ. ಅಲ್ಲಿ ಅಷ್ಟು ನಿಬಿಡವಾದ ಋಷಿಸ್ತೋಮ ವಿದ್ದಿತು. ಆಗ ಆ ಮಹಾಭಾಗರಾದ ಋಷಿಗಳು ತಮ್ಮ ಯಜ್ಞೋಪವೀತ ಗಳಿಂದಲೇ ತೀರ್ಥಗಳನ್ನು ಪ್ರಕಲ್ಪಿಸಿ, ಆ ತೀರ್ಥಗಳ ಸಮೀಪದಲ್ಲಿ ಅಗ್ನಿಹೋತ್ರಕ್ಕೆ ಸಂಬಂಧಿಸಿದಂತೆ ಆಹುತಿಗಳನ್ನು ಯಜ್ಞೇಶ್ವರನಿಗೆ ಅರ್ಪಿಸಿದರು ಮತ್ತು ಇನ್ನೂ ಅನೇಕಪ್ರಕಾರವಾದ ಕರ್ಮಾನುಷ್ಠಾನಗಳನ್ನೂ ಮಾಡಿದರು. ತಾತ್ಕಾಲಿಕವಾಗಿ ಕರ್ಮಲೋಪವಾಗದ ರೀತಿಯಲ್ಲಿ ಅವರು ಹಾಗೆ ಮಾಡಿದರೇ ಹೊರತು ಅವರಿಗೆ ಅದರಿಂದ ತೃಪ್ತಿಯುಂಟಾಗಲಿಲ್ಲ. ತೀರ್ಥಕ್ಷೇತ್ರಗಳಲ್ಲಿ ಸ್ಥಳವು ಸಿಕ್ಕದೇ ನಿರಾಶೆಯಿಂದ ಚಿಂತಿಸುತ್ತಿದ್ದ ಋಷಿಗಳ ಸಮೂಹಕ್ಕೆ ಸರಸ್ವತೀನದಿಯು ಅವರ ಅಭೀಷ್ಟಸಿದ್ಧಿಗಾಗಿ ದರ್ಶನವನ್ನಿತ್ತಳು.

ಪುಣ್ಯೋಪೇತರಾದ ಋಷಿ-ತಪಸ್ವಿಗಳ ಮೇಲಿನ ಕಾರುಣ್ಯದಿಂದ ಸರಸ್ವತಿಯು ತನ್ನ ತೀರದಲ್ಲಿಯೇ ಅನೇಕಾನೇಕ ಬಳ್ಳಿಗಳ ಪೊದರುಗಳನ್ನು ಅವರ ವಿಶ್ರಾಮಾರ್ಥವಾಗಿ ಕಲ್ಪಿಸಿಕೊಟ್ಟು ಹಿಂದಿರುಗಿದಳು. ಋಷಿ- ತಪಸ್ವಿಗಳ ಮೇಲಿನ ಕಾರುಣ್ಯದಿಂದ ಹಿಂದಿರುಗಿ ಬಂದ ಸರಿದ್ವರಳಾದ ಸರಸ್ವತಿಯು ಪುನಃ ಪಶ್ಚಿಮದಿಕ್ಕಿಗೆ ಅಭಿಮುಖವಾಗಿ ಪ್ರವಹಿಸತೊಡಗಿದಳು. 'ಮಹರ್ಷಿಗಳ ಆಗಮನವನ್ನು ಸಫಲಗೊಳಿಸಿ ಅನಂತರ ನಾನು ಪುನಃ ಪಶ್ಚಿಮಮಾರ್ಗದಿಂದಲೇ ಹಿಂದಿರುಗುತ್ತೇನೆ'–ಎಂದು ಯೋಚಿಸಿದ ಮಹಾನದಿಯಾದ ಸರಸ್ವತಿಯು ತಾನು ಯೋಚಿಸಿದಂತೆಯೇ ಅತ್ಯದ್ಭುತ ವಾದ ಕಾರ್ಯವನ್ನು ಮಾಡಿದಳು. ಈ ಕಾರಣದಿಂದಲೇ ಅಲ್ಲಿರುವ ಕುಂಜಗಳಿಗೆ ನೈಮಿಷೀಯ ಕುಂಜಗಳೆಂದು ಹೆಸರು. ಜನಮೇಜಯ! ನೀನೂ ಸಹ ಕುರುಕ್ಷೇತ್ರಕ್ಕೆ ಹೋದಾಗ ಅಲ್ಲಿ ಧರ್ಮಕಾರ್ಯಗಳನ್ನು ಮಾಡು.

ಸರಸ್ವತೀನದಿಯ ತೀರದಲ್ಲಿದ್ದ ಅನೇಕ ಲತಾಗೃಹಗಳನ್ನೂ ಮತ್ತು ಸರಸ್ವತೀನದಿಯು ಇದ್ದಕ್ಕಿದ್ದಂತೆ ತಿರುಗಿಕೊಂಡಿರುವುದನ್ನೂ ನೋಡಿ ಮಹಾತ್ಮನಾದ ಬಲರಾಮನಿಗೆ ಅಚ್ಚರಿಯುಂಟಾಯಿತು. ಯದುನಂದನ ನಾದ ಬಲರಾಮನು ಅಲ್ಲಿಯೂ ವಿಧಿವತ್ತಾಗಿ ಸ್ನಾನಾಚಮನೀಯಗಳನ್ನು ಮಾಡಿ ಬ್ರಾಹ್ಮಣರಿಗೆ ವಿಧ-ವಿಧವಾದ ಭಾಂಡಗಳನ್ನೂ, ಧನವನ್ನೂ ದಾನವಾಗಿ ಕೊಟ್ಟನು. ನಾನಾವಿಧವಾದ ಭಕ್ಷ್ಯ-ಭೋಜ್ಯಗಳಿಂದ ಬ್ರಾಹ್ಮಣರಿಗೆ ಭೋಜನಮಾಡಿಸಿದನು. ಬ್ರಾಹ್ಮಣರಿಂದ ಪ್ರತಿಪೂಜಿತನಾದ ಬಲರಾಮನು ಮುಂದಕ್ಕೆ ಪ್ರಯಾಣಮಾಡಿದನು. ಅನಂತರ ಬಲರಾಮನು ಸರಸ್ವತೀನದಿಯ ತೀರ್ಥಗಳಲ್ಲಿಯೇ ಶ್ರೇಷ್ಠವಾದ ಸಪ್ತಸಾರಸ್ವತ ಎಂಬ ಹೆಸರಿನ ತೀರ್ಥಕ್ಷೇತ್ರಕ್ಕೆ ಸಪರಿವಾರನಾಗಿ ಹೋದನು. ಆ ಪವಿತ್ರವಾದ ತೀರ್ಥಕ್ಷೇತ್ರದಲ್ಲಿ ಅನೇಕಬ್ರಾಹ್ಮಣರು ಆಶ್ರಯವನ್ನು ಪಡೆದಿದ್ದರು. ಆ ಕ್ಷೇತ್ರವು ಬದರ, ಇಂಗುದ, ಕಾಶ್ಮರ್ಯ, ಪ್ಲಕ್ಷ, ಅಶ್ವತ್ಥ, ವಿಭೀತಕ, ಬಿಲ್ವ, ಕಂಕೋಲ, ಪಲಾಶ, ಕರೀರ, ಪೀಲು, ಕರೂಷ, ಆಮ್ರ, ಅತಿಮುಕ್ತ, ಪಾರಿಜಾತ-ಇವೇ ಮೊದಲಾದ ವೃಕ್ಷಗಳಿಂದಲೂ ಮತ್ತು ಸರಸ್ವತೀನದಿಯ ತೀರದಲ್ಲಿ ಹುಟ್ಟುವ ಇನ್ನೂ ಅನೇಕವಿಧವಾದ ವೃಕ್ಷಗಳಿಂದಲೂ ಆವೃತವಾಗಿದ್ದು ಕಣ್ಣುಗಳಿಗೆ ಹಬ್ಬವನ್ನುಂಟುಮಾಡುವುದಾಗಿಯೂ-ಮನ

ಮೋಹಕವಾಗಿಯೂ ಇದ್ದಿತು. ಆ ತೀರ್ಥದ ಸಮೀಪದಲ್ಲಿ ಹಲವು ಬಾಳೆಯ ತೋಟಗಳಿದ್ದುವು. ಆ ತೀರ್ಥಕ್ಷೇತ್ರವೂ ವಾಯುಭಕ್ಷರಿಂದಲೂ, ಅಬ್ಭಕ್ಷರಿಂದಲೂ, ತರಗೆಲೆಗಳನ್ನು ತಿನ್ನುವ ಮುನಿಗಳಿಂದಲೂ, ಫಲಾಹಾರಿಗಳಿಂದಲೂ, *ದಂತೋಲೂಖಲಿಕರು-ಅಶ್ಮಕುಟ್ಟರು ಇವರೇ ಮುಂತಾದ ವಾನಪ್ರಸ್ಥರಿಂದಲೂ, ಋಷಿ-ಮುನಿಗಳಿಂದಲೂ ನಿಬಿಡವಾಗಿದ್ದಿತು. ವೇದಘೋಷಗಳ ಗಂಭೀರಧ್ವನಿಯು ಆ ತೀರ್ಥಕ್ಷೇತ್ರದಲ್ಲಿ ಸರ್ವತ್ರ ವ್ಯಾಪ್ತವಾಗಿದ್ದಿತು. ಜಿಂಕೆಗಳ ನೂರಾರು ಗುಂಪುಗಳು ತೀರ್ಥಕ್ಷೇತ್ರದ ಸುತ್ತಲೂ ಸಂಚರಿಸುತ್ತಿದ್ದುವು. ಅಹಿಂಸಾವ್ರತನಿಷ್ಠರಾದ ಧರ್ಮನಿಷ್ಠರಾದ ಅನೇಕ ಜನರು ಆ ಸಪ್ತಸಾರಸ್ವತತೀರ್ಥವನ್ನು ನಿರಂತರವಾಗಿ ಸೇವಿಸುತ್ತಿದ್ದರು. ಅಲ್ಲಿಯೇ ಮಹಾಮುನಿಯಾದ, ಸಿದ್ಧನಾದ ಮಂಕಣಕನು ತಪಸ್ಸನ್ನು ಮಾಡುತ್ತಿದ್ದನು."

ಇ೭ನೆಯ ಅಧ್ಯಾಯವು ಮುಗಿಯಿತು.

ಇ೮ನೆಯ ಅಧ್ಯಾಯ — ಗದಾಪರ್ವ (ಮುಂದುವರಿದಿದೆ.)

## ಸಪ್ತಸಾರಸ್ವತತೀರ್ಥದ ಉತ್ಪತ್ತಿ ಮತ್ತು ಮಹಿಮೆ: ಮಂಕಣಕಮುನಿಯ ಚರಿತ್ರೆ

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ವಿಪ್ರಶ್ರೇಷ್ಠರೇ! ಸಪ್ತಸಾರಸ್ವತತೀರ್ಥದ ಉತ್ಪತ್ತಿಯು ಯಾವ ಕಾರಣದಿಂದಾಯಿತು? ಪೂಜ್ಯನಾದ ಮಂಕಣಕಮುನಿಯು ಯಾರು? ಅವನು ಹೇಗೆ ಸಿದ್ಧನಾದನು? ಅವನ ನಿಯಮಗಳಾವುವು? ಅವನು ಯಾವ ವಂಶದಲ್ಲಿ ಹುಟ್ಟಿದವನು? ಅವನು ಯಾವ ಶಾಸ್ತ್ರವನ್ನು ಅಧ್ಯಯನಮಾಡಿದ್ದನು?–ಈ ಎಲ್ಲ ವಿಷಯಗಳನ್ನೂ ನಾನು ವಿಧಿಪೂರ್ವಕವಾಗಿಯೇ ಕೇಳಲಿಚ್ಛಿಸಿದ್ದೇನೆ. ದಯಮಾಡಿ ಹೇಳಿರಿ."

---

* ದಂತೋಲೂಖಲಿಕರು = ವಾನಪ್ರಸ್ಥಾಶ್ರಮದವರು. ಧಾನ್ಯದ ಹೊಟ್ಟುಗಳನ್ನು ಹಲ್ಲಿನಿಂದಲೇ ತೆಗೆದು ಆಹಾರವನ್ನು ತೆಗೆದುಕೊಳ್ಳುವುದರಿಂದ ಈ ಹೆಸರು ಬಂದಿದೆ. ಅಶ್ಮಕುಟ್ಟರು = ಕಲ್ಲಿನಲ್ಲಿ ಕುಟ್ಟಿ ಧಾನ್ಯದ ಹೊಟ್ಟನ್ನು ಪ್ರತ್ಯೇಕಿಸುವವರು. ವಾನಪ್ರಸ್ಥಾಶ್ರಮದ ನಿಯಮವನ್ನು ಹೇಳುವಾಗ ಮನುವಿನ ವಚನವು ಹೀಗಿದೆ :

'ಅಶ್ಮಕುಟ್ಟೋ ಭವೇದ್ವಾಪಿ ದನ್ತೋಲೂಖಲಿಕೋಽಪಿ ವಾ ೬-೧೭.'

“ಮಹಾರಾಜ! ಸರಸ್ವತೀ ಎಂಬ ಹೆಸರಿನ ಏಳು ನದಿಗಳಿಂದ ಈ ಜಗತ್ತೇ ವ್ಯಾಪ್ತವಾಗಿದೆ. ತಪೋಬಲಸಂಪನ್ನರಾದ ಮಹರ್ಷಿಗಳು ಎಲ್ಲೆಲ್ಲಿಗೆ ಆಹ್ವಾನಿಸಿರುವರೋ ಅಲ್ಲಲ್ಲಿಗೆ ಈ ಸರಸ್ವತಿಯು ಹೋಗಿದ್ದಾಳೆ.

**ಸುಪ್ರಭಾ ಕಾಞ್ಚನಾಕ್ಷೀ ಚ ವಿಶಾಲಾ ಚ ಮನೋರಮಾ ।**
**ಸರಸ್ವತೀ ಚೌಘವತೀ ಸುರೇಣುರ್ವಿಮಲೋದಕಾ ॥೪॥**

ಹಾಗೆ ಹೋದಾಗ ಸರಸ್ವತಿಯು ಈ ಏಳು ನಾಮಧೇಯಗಳನ್ನು ಪಡೆದುಕೊಂಡಳು. ನಾಮಧೇಯಗಳು ಹೀಗಿವೆ–ಸುಪ್ರಭಾ, ಕಾಂಚನಾಕ್ಷೀ, ವಿಶಾಲಾ, ಮನೋರಮಾ, ಓಘವತೀ, ಸುರೇಣು ಮತ್ತು ವಿಮಲೋದಕಾ.*

ಹಿಂದೊಂದು ಸಮಯದಲ್ಲಿ ಪುಷ್ಕರತೀರ್ಥದಲ್ಲಿ ಬ್ರಹ್ಮದೇವನು ಮಹಾಯಜ್ಞವೊಂದನ್ನು ಮಾಡುತ್ತಿದ್ದನು. ಅವನ ವಿಶಾಲವಾದ ಯಜ್ಞಶಾಲೆಯಲ್ಲಿ ಸಿದ್ಧರಾದ ಬ್ರಾಹ್ಮಣರು ವಿರಾಜಿಸುತ್ತಿದ್ದರು. ನಿರ್ದುಷ್ಟವಾದ ಪುಣ್ಯಾಹಘೋಷಗಳಿಂದಲೂ, ವೇದಘೋಷಗಳ ಸುಮಧುರನಾದಗಳಿಂದಲೂ ಆ ಯಜ್ಞವಾಟವು ತುಂಬಿಹೋಗಿದ್ದಿತು. ದೇವತೆಗಳೂ ಸಹ ಬ್ರಹ್ಮದೇವನ ಆ ಯಜ್ಞವಿಧಿಯಲ್ಲಿ ಆಸಕ್ತರಾಗಿದ್ದರು.

ಪಿತಾಮಹನು ಯಜ್ಞದೀಕ್ಷಿತನಾಗಿ ಸರ್ವಸಂಭಾರಗಳಿಂದಲೂ ಸಮೃದ್ಧವಾದ ಸತ್ರಯಾಗಮಾಡುತ್ತಿದ್ದನು. ಅವನು ಯಜ್ಞಮಾಡುತ್ತಿದ್ದ ಸಮಯದಲ್ಲಿ ಧರ್ಮಾರ್ಥಕುಶಲರಾದ ಬ್ರಾಹ್ಮಣರು ಮನಸ್ಸಿನಲ್ಲಿ ಯಾವ ಯಾವ ಕಾಮನೆಗಳನ್ನು ಚಿಂತಿಸುತ್ತಿದ್ದರೋ, ಆ ಎಲ್ಲ ಕಾಮನೆಗಳೂ ಆ ಮಹಾಯಜ್ಞದ ಮೂಲಕವಾಗಿ ಪೂರ್ಣಗೊಳ್ಳುತ್ತಿದ್ದುವು. ಆ ಯಜ್ಞದ ಸಮಯದಲ್ಲಿ ಗಂಧರ್ವರು ಗಾನಮಾಡುತ್ತಿದ್ದರು. ಅಪ್ಸರೆಯರು ನೃತ್ಯ ಮಾಡುತ್ತಿದ್ದರು. ದಿವ್ಯವಾದ ವಾದ್ಯಗಳನ್ನೂ ಹಿತಕರವಾಗಿ ಬಾರಿಸುತ್ತಿದ್ದರು. ಆ ಯಜ್ಞದ ವೈಭವವನ್ನು ನೋಡಿ ದೇವತೆಗಳು ಕೂಡ ಸಂತುಷ್ಟರಾಗಿ ಅಂತಹ ಅದ್ಭುತವಾದ ಯಜ್ಞವು ನಡೆದುದಕ್ಕೆ ತಮ್ಮ ವಿಸ್ಮಯವನ್ನು ವ್ಯಕ್ತಪಡಿಸಿದರು. ದೇವತೆಗಳೇ ಅಚ್ಚರಿಪಟ್ಟಿರುವಾಗ ಮನುಷ್ಯರ ವಿಷಯದಲ್ಲಿ ಹೇಳತಕ್ಕದ್ದೇನಿದೆ?

---

* ಇದರ ವಿವರಣೆಯನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

ಜನಮೇಜಯ! ಹೀಗೆ ಪಿತಾಮಹನು ಪುಷ್ಕರಕ್ಷೇತ್ರದಲ್ಲಿದ್ದುಕೊಂಡು ಯಜ್ಞವನ್ನು ಮಾಡುತ್ತಿರುವಾಗ ಋಷಿಗಳು ಪಿತಾಮಹನೊಡನೆ ಹೇಳಿದರು :

"ಭಗವನ್! ನೀನು ಮಾಡುತ್ತಿರುವ ಈ ಮಹಾಯಜ್ಞವು ಈಗಲೂ ಎಲ್ಲ ಮಹಾಗುಣಗಳಿಂದಲೂ ಯುಕ್ತವಾಗಿಲ್ಲ. ಎಲ್ಲ ಸರಿತ್ತುಗಳಿಗೂ ಶ್ರೇಷ್ಠಳಾದ ಸರಸ್ವತಿಯು ಈ ಯಜ್ಞವಾಟದಲ್ಲಿ ಕಾಣದಿರುವುದೇ ಇದಕ್ಕೆ ಕಾರಣವಾಗಿದೆ." ಋಷಿಗಳು ಹೇಳಿದ ಮಾತನ್ನು ಕೇಳಿ ಸುಪ್ರೀತನಾದ ಭಗವಾನ್ ಬ್ರಹ್ಮನು ಪುಷ್ಕರಕ್ಷೇತ್ರದಲ್ಲಿ ಯಜ್ಞಮಾಡುತ್ತಿದ್ದ ಕಾಲದಲ್ಲಿ ಸರಸ್ವತೀದೇವಿಯನ್ನು ಸ್ಮರಿಸುತ್ತಾ ಮಂತ್ರಪೂರ್ವಕವಾಗಿ ಆಹ್ವಾನಿಸಿದನು. ಆ ಸಮಯದಲ್ಲಿ ಸರಸ್ವತಿಯು 'ಸುಪ್ರಭಾ' ಎಂಬ ಹೆಸರಿನಿಂದ ಪ್ರತ್ಯಕ್ಷಳಾದಳು. ಬ್ರಹ್ಮನು ಆಹ್ವಾನಿಸಿದೊಡನೆಯೇ ಅವನ ಆಹ್ವಾನವನ್ನು ಗೌರವಿಸಿ ತ್ವರೆಯಿಂದ ಬಂದ ಸರಸ್ವತಿಯನ್ನು ನೋಡಿ ಮುನಿಗಳೆಲ್ಲರೂ ಸಂತುಷ್ಟರಾದರು ಮತ್ತು ಆ ಮಹಾಯಜ್ಞವು ಸಕಲಗುಣಪರಿಪೂರ್ಣವಾದುದೆಂಬುದನ್ನು ಒಪ್ಪಿಕೊಂಡರು. ಹೀಗೆ ಎಲ್ಲ ಸರಿತ್ತುಗಳಿಗೂ ಶ್ರೇಷ್ಠಳಾದ ಸರಸ್ವತಿಯು ಪಿತಾಮಹನ ಸಲುವಾಗಿಯೂ ಮತ್ತು ಮನೀಷಿಗಳಾದ ಮಹರ್ಷಿಗಳ ತುಷ್ಟ್ಯರ್ಥವಾಗಿಯೂ ಪುಷ್ಕರತೀರ್ಥದಲ್ಲಿ 'ಸುಪ್ರಭಾ' ಎಂಬ ಹೆಸರಿನಿಂದ ಆವಿರ್ಭೂತಳಾದಳು.

ಅನೇಕಮಹರ್ಷಿಗಳು ನೈಮಿಷಾರಣ್ಯಕ್ಕೆ ಬಂದು ಅಲ್ಲಿಯೇ ಸತ್ರ ಯಾಗಮಾಡಿದರು. ಅಲ್ಲಿ ನೆರೆದಿದ್ದ ಋಷಿಗಳ ಮಧ್ಯದಲ್ಲಿ ವೇದಗಳ ವಿಷಯ ವಾಗಿ ವಿಚಿತ್ರವಾದ ಕಥೆಗಳಿಂದ ಕೂಡಿದ ಸಂಭಾಷಣೆಗಳು ನಡೆಯುತ್ತಿದ್ದುವು. ಆ ಮುನಿಗಳೆಲ್ಲರೂ ನಾನಾಪ್ರಕಾರವಾದ ಸ್ವಾಧ್ಯಾಯಗಳನ್ನು (ವೇದಗಳನ್ನು) ತಿಳಿದವರಾಗಿದ್ದರು. ಆ ಮುನಿಪುಂಗವರೆಲ್ಲರೂ ಸಮಾವೇಶಗೊಂಡು ಸರಸ್ವತಿಯನ್ನು ಸ್ಮರಿಸಿದರು. ಸತ್ರಗಳನ್ನು ಮಾಡುವ ಋಷಿಗಳಿಂದ ಚಿಂತಿಸಲ್ಪಟ್ಟ ಮಹಾಭಾಗ್ಯಶಾಲಿನಿಯಾದ, ಪುಣ್ಯೋಪೇತಳಾದ ಸರಸ್ವತಿಯು ಅಲ್ಲಿ ಸಮಾವೇಶಗೊಂಡಿದ್ದ ಮಹಾತ್ಮರ ಸಹಾಯಾರ್ಥವಾಗಿ ಕೂಡಲೇ ಅಲ್ಲಿಗೆ ಆಗಮಿಸಿದಳು. ನೈಮಿಷಾರಣ್ಯದಲ್ಲಿ ಸತ್ರಯಾಜಿಗಳಾದ ಮುನಿ ಗಳ ಸಮಕ್ಷದಲ್ಲಿ ಬಂದು ನಿಂತ, ಎಲ್ಲ ಸರಿತ್ತುಗಳಿಗೂ ಶ್ರೇಷ್ಠಳಾದ

ಸರಸ್ವತಿಯು 'ಕಾಂಚನಾಕ್ಷೀ' ಎಂಬ ನಾಮಧೇಯದಿಂದ ಕೂಡಿದವಳಾಗಿ ಆ ಋಷಿಪುಂಗವರಿಂದ ಸಮ್ಮಾನಿತಳಾದಳು.

ಗಯರಾಜನು ಗಯದೇಶದಲ್ಲಿಯೇ ಒಂದು ಮಹಾಯಜ್ಞದ ಅನುಷ್ಠಾನವನ್ನು ಮಾಡುತ್ತಿದ್ದನು. ಗಯನೂ ಯಜ್ಞಸಮಯದಲ್ಲಿ ಸರಿತ್ತುಗಳಲ್ಲಿ ಶ್ರೇಷ್ಠಳಾದ ಸರಸ್ವತಿಯನ್ನು ಮಹಾಮಂತ್ರಗಳಿಂದ ಆಹ್ವಾನಿಸಿದನು. ಕಠೋರವ್ರತನಿಷ್ಠರಾದ ಮಹರ್ಷಿಗಳು–ಗಯನ ಯಜ್ಞದ ಸಮಯದಲ್ಲಿ ಆಹೂತೆಯಾಗಿ ಬಂದ ಸರಸ್ವತಿಯನ್ನು - 'ವಿಶಾಲಾ' ಎಂಬ ಹೆಸರಿನಿಂದ ಕರೆದರು.

ಯಜ್ಞಪರಾಯಣನಾದ ಉದ್ದಾಲಕಮಹರ್ಷಿಯು ತಾನು ಮಾಡುತ್ತಿದ್ದ ಯಜ್ಞದ ಸಮಯದಲ್ಲಿಯೂ ಸರಸ್ವತಿಯನ್ನು ಆಹ್ವಾನಿಸಿದನು. ಶೀಘ್ರಗಾಮಿನಿಯಾದ ಸರಸ್ವತಿಯು ಹಿಮಾಲಯದ ಪಾರ್ಶ್ವಭಾಗದಿಂದ ಹೊರಟು ಉದ್ದಾಲಕಮುನಿಯ ಯಜ್ಞವಾಟಕ್ಕೆ ಹರಿದುಬಂದಳು. ಸಂಪತ್ಸಮೃದ್ಧವಾದ ಮತ್ತು ಪುಣ್ಯೋಪೇತವಾದ ಉತ್ತರಕೋಸಲ ಪ್ರದೇಶದಲ್ಲಿ ಎಲ್ಲ ಕಡೆಗಳಿಂದಲೂ ಬಂದ ಮುನಿಗಳ ಸಮೂಹಗಳು ಏಕತ್ರ ಸಮಾವೇಶಗೊಂಡಿದ್ದುವು. ಅಲ್ಲಿಯೇ ಯಜ್ಞಮಾಡುತ್ತಿದ್ದಾಗ ಮಹಾತ್ಮನಾದ ಉದ್ದಾಲಕನು ಸರಸ್ವತೀನದಿಯನ್ನು ಸ್ಮರಿಸಿದನು. ಎಲ್ಲ ನದಿಗಳಿಗೂ ಶ್ರೇಷ್ಠಳಾದ ಸರಸ್ವತಿಯು ಉದ್ದಾಲಕಮುನಿಯ ಸಲುವಾಗಿ ಆ ದೇಶಕ್ಕೂ ಆಗಮಿಸಿದಳು. ವಲ್ಕಲಾಜಿನಗಳನ್ನು ಧರಿಸಿದ್ದ ಮುನಿಗಳ ಸಮೂಹಗಳಿಂದ ಸಂಪೂಜಿತಳಾದ ಸರಸ್ವತೀದೇವಿಯು 'ಮನೋರಮಾ' ಎಂಬ ಹೆಸರಿನಿಂದ ವಿಖ್ಯಾತಿಯನ್ನು ಪಡೆದಳು. ಋಷಿಗಳು ಸರಸ್ವತಿಯ ಮನೋಹರವಾದ ರೂಪವನ್ನು ಕಲ್ಪಿಸಿಕೊಂಡು ಚಿಂತಿಸಿದುದರಿಂದ ಅವಳಿಗೆ 'ಮನೋರಮಾ' ಎಂದೇ ನಾಮಕರಣಮಾಡಿದರು. ರಾಜರ್ಷಿಗಳಿಂದ ಸಂಸೇವಿತವಾದ ಪುಣ್ಯೋಪೇತವಾದ ಋಷಭದ್ವೀಪದಲ್ಲಿಯೂ, ಮಹಾತ್ಮನಾದ ಕುರುರಾಜನು ಯಾಜಮಾನ್ಯವನ್ನು ವಹಿಸಿ ಯಜ್ಞಮಾಡುತ್ತಿದ್ದ ಕುರುಕ್ಷೇತ್ರದಲ್ಲಿಯೂ ಎಲ್ಲ ಸರಿತ್ತುಗಳಿಗೂ ಶ್ರೇಷ್ಠಳಾದ ಭಾಗ್ಯಶಾಲಿನಿಯಾದ ಸರಸ್ವತಿಯು ಹರಿಯುತ್ತಿದ್ದಳು. ಅಲ್ಲಿ ಸರಸ್ವತಿಯನ್ನು ಋಷಿಗಳು 'ಸುರೇಣು' ಎಂದು ಕರೆದರು. ದಕ್ಷನು ಗಂಗಾದ್ವಾರದಲ್ಲಿ ಯಾಗ

ಮಾಡುತ್ತಿದ್ದಾಗ ಸರಸ್ವತಿಯನ್ನು ಆಹ್ವಾನಿಸಿದನು. ದಕ್ಷಬ್ರಹ್ಮನ ಆಹ್ವಾನದಂತೆ ಯಜ್ಞಮಾಡುತ್ತಿದ್ದ ಸ್ಥಳಕ್ಕೆ ಶೀಘ್ರವಾಗಿ ಹರಿದುಬಂದ ಸರಸ್ವತಿಯು 'ಸುರೇಣು' ಎಂಬ ಇದೇ ಹೆಸರಿನಿಂದಲೇ ವಿಖ್ಯಾತಳಾದಳು. ಇದೇ ರೀತಿಯಲ್ಲಿ ಮಹಾತ್ಮರಾದ ವಸಿಷ್ಠರು ಕುರುಕ್ಷೇತ್ರದಲ್ಲಿ ಯಜ್ಞಮಾಡುತ್ತಿದ್ದಾಗ ದಿವ್ಯಜಲಳಾದ ಸರಸ್ವತಿಯನ್ನು ಆಹ್ವಾನಿಸಿದರು. ಮಹರ್ಷಿಯ ಮೇಲಿನ ಪ್ರೀತಿಯಿಂದ ಯಜ್ಞಶಾಲೆಗೆ ಆಗಮಿಸಿದ ಸರಸ್ವತಿಯನ್ನು ಅಲ್ಲಿದ್ದ ಬ್ರಾಹ್ಮಣಶ್ರೇಷ್ಠರು 'ಓಘವತೀ' ಎಂದು ಕರೆದರು. ಪಿತಾಮಹನು ಪುಣ್ಯತಮವಾದ ಹಿಮವತ್ಪರ್ವತದಲ್ಲಿ ಪುನಃ ಯಜ್ಞಮಾಡುತ್ತಿದ್ದಾಗ ಸರಸ್ವತಿಯನ್ನು ಆಹ್ವಾನಿಸಿದನು. ಬ್ರಹ್ಮನ ಆಹ್ವಾನವನ್ನು ಗೌರವಿಸಿ ಅಲ್ಲಿಗೆ ಬಂದ ಸರಸ್ವತಿಯನ್ನು ಯಜ್ಞದ ಸದಸ್ಯರು 'ವಿಮಲೋದಾ' ಎಂದು ಕರೆದರು.

ಪುನಃ ಸಪ್ತಸರಸ್ವತಿಯರು ಏಕೀಭೂತರಾಗಿ ಆ ತೀರ್ಥದಲ್ಲಿ ಸೇರಿಕೊಂಡರು. ಅಲ್ಲಿಂದ ಮುಂದೆ ಆ ತೀರ್ಥವು ಭೂಮಿಯಲ್ಲಿ ಸಪ್ತಸಾರಸ್ವತ ತೀರ್ಥವೆಂದೇ ಪ್ರಸಿದ್ಧಿಯನ್ನು ಹೊಂದಿತು.

ಜನಮೇಜಯ! ಹೀಗೆ ಏಳು ಸರಸ್ವತಿಯರನ್ನೂ ಅವರವರ ನಾಮ ಧೇಯಗಳೊಡನೆ ವರ್ಣಿಸಿದ್ದಾಯಿತು. ಪುಣ್ಯತಮವಾದ ಸಪ್ತಸಾರಸ್ವತ ತೀರ್ಥವು ಹೇಗೆ ಪ್ರಾದುರ್ಭೂತವಾಯಿತೆಂಬುದನ್ನು ಹೇಳಿದೆನು. ಮುಂದೆ ಕೌಮಾರಾವಸ್ಥೆಯಿಂದಲೇ ಬ್ರಹ್ಮಚರ್ಯವ್ರತವನ್ನು ಪರಿಪಾಲಿಸುತ್ತಿದ್ದ, ಸರಸ್ವತೀನದಿಯಲ್ಲಿಯೇ ಅನುದಿನವೂ ಸ್ನಾನಮಾಡುತ್ತಿದ್ದ ಮಂಕಣಕ ಮುನಿಯ ಮಹಾಲೀಲಾಪ್ರಸಂಗವನ್ನು ಹೇಳುವೆನು ; ಕೇಳು :

ಭರತನಂದನ! ಜನಮೇಜಯ! ಹಿಂದೊಮ್ಮೆ ಸುಂದರವಾದ ಕಡೆಗಣ್ಣಿನಿಂದ ಕೂಡಿದ್ದ, ಅಕಳಂಕಳಾಗಿದ್ದ, ದಿಕ್ಕುಗಳನ್ನೇ ಬಟ್ಟೆಯನ್ನಾಗಿ ಹೊಂದಿದ್ದ (ವಿವಸ್ತ್ರಳಾಗಿದ್ದ,) ಸುಂದರಿಯಾದ ಸ್ತ್ರೀಯೊಬ್ಬಳು ಸರಸ್ವತೀ ನದಿಯಲ್ಲಿ ಸ್ವೇಚ್ಛೆಯಿಂದ ಸ್ನಾನಮಾಡುತ್ತಿದ್ದುದನ್ನು ನೋಡಿ ಮಂಕಣಕ ಮುನಿಯ ವೀರ್ಯವು ಸ್ಖಾಲಿತ್ಯವನ್ನು ಹೊಂದಿ ನೀರಿನಲ್ಲಿ ಬಿದ್ದಿತು. ಮಹಾತಪಸ್ವಿಯಾದ ಮಂಕಣಕಮುನಿಯು ಆ ವೀರ್ಯವನ್ನು ವ್ಯರ್ಥಗೊಳಿ

ಸದೆ ಕಲಶದಲ್ಲಿ ಸಂಗ್ರಹಿಸಿದನು. ಕಲಶದಲ್ಲಿದ್ದ ಆ ದಿವ್ಯರೇತಸ್ಸು ಏಳು ಭಾಗಗಳಾಗಿ ಒಡೆಯಿತು. ಸ್ವಲ್ಪಕಾಲಾನಂತರ ಆ ಕಲಶದಿಂದ ಏಳು ಋಷಿಗಳು ಹುಟ್ಟಿದರು. ಮರುದ್ಗಣಗಳ ಉತ್ಪತ್ತಿಗೆ ಮುಂದೆ ಅವರೇ ಕಾರಣರಾದರು. ಮರುತ್ತುಗಳಿಗೆ ಜನ್ಮವಿತ್ತ ವಾಯುವೇಗ, ವಾಯುಬಲ, ವಾಯುಹಾ, ವಾಯುಮಂಡಲ, ವಾಯುಜ್ವಾಲ, ವಾಯುರೇತ, ವೀರ್ಯವಂತನಾದ ವಾಯುಚಕ್ರ - ಈ ಏಳು ಮಂದಿ ಮಹರ್ಷಿಗಳು ಕಲಶದಿಂದ ಹುಟ್ಟಿದರು. ಪರಮಾದ್ಭುತವಾದ, ಆಶ್ಚರ್ಯಕರವಾದ, ಮೂರು ಲೋಕಗಳಲ್ಲಿಯೂ ವಿಖ್ಯಾತನಾದ ಮಂಕಣಕಮಹರ್ಷಿಯ ಚರಿತ್ರೆಯನ್ನು ಸಾವಧಾನಚಿತ್ತನಾಗಿ ಕೇಳು. ಹಿಂದೊಮ್ಮೆ ಸಿದ್ಧಪುರುಷನಾದ ಮಂಕಣಕನು ದರ್ಭೆಯ ಅಗ್ರಭಾಗವು ಕೈಗೆ ತಗುಲಿದುದರಿಂದ ಗಾಯಗೊಂಡನು. ಆ ಗಾಯದಿಂದ ರಕ್ತಕ್ಕೆ ಬದಲಾಗಿ ಶಾಕರಸವು ಸ್ರವಿಸಿತು. ತನ್ನ ಹಸ್ತದಿಂದ ಶಾಕರಸವು ಹರಿಯುತ್ತಿರುವುದನ್ನು ನೋಡಿ ಹರ್ಷಾವಿಷ್ಟನಾದ ಮಂಕಣಕನು ಕುಣಿಯತೊಡಗಿದನು. ಅವನು ಕುಣಿಯುತ್ತಿದ್ದಾಗ ಅವನ ತೇಜಸ್ಸಿನಿಂದ ಮೋಹಗೊಂಡ (ಪ್ರಭಾವಗೊಂಡ) ಸ್ಥಾವರ-ಜಂಗಮಗಳೆರಡೂ ಕುಣಿಯತೊಡಗಿದುವು. ಅದನ್ನು ನೋಡಿ ತಪೋಧನರಾದ ಋಷಿಗಳು ಸಂಭ್ರಾಂತರಾಗಿ ಬ್ರಹ್ಮನೇ ಮೊದಲಾದ ದೇವತೆಗಳ ಸಮೇತರಾಗಿ ಮಂಕಣಕಮುನಿಯ ಸಲುವಾಗಿ ಮಹಾದೇವನಲ್ಲಿ ಪ್ರಾರ್ಥನೆಮಾಡಿಕೊಂಡರು.

**ನಾಯಂ ನೃತ್ಯೇದ್ಯಥಾ ದೇವ ತಥಾ ತ್ವಂ ಕರ್ತುಮರ್ಹಸಿ ॥೪೨॥**

"ದೇವ! ಈ ಮಂಕಣಕನು ನೃತ್ಯಮಾಡದಂತೆ ಏನಾದರೊಂದು ಉಪಾಯವನ್ನು ಸೂಚಿಸು. (ಮಾಡು.") ಹೀಗೆ ದೇವತೆಗಳಿಂದ ಸಂಪ್ರಾರ್ಥಿತನಾದ ಮಹಾದೇವನು ಅತ್ಯಂತಹರ್ಷಾವಿಷ್ಟನಾಗಿ ಕುಣಿಯುತ್ತಿದ್ದ ಮಂಕಣಕನನ್ನು ನೋಡಿ ದೇವತೆಗಳಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ (ಬ್ರಾಹ್ಮಣರೂಪವನ್ನು ಧರಿಸಿ) ಮಂಕಣಕನೊಡನೆ ಹೇಳಿದನು :

"ಧರ್ಮಜ್ಞನಾದ ಬ್ರಾಹ್ಮಣನೇ! ನೀನೇಕೆ ಹೀಗೆ ನೃತ್ಯಮಾಡುತ್ತಿರುವೆ? ನಿನಗೆ ಇಷ್ಟೊಂದು ಅತ್ಯಧಿಕವಾದ ಹರ್ಷವುಂಟಾಗಲು ಕಾರಣವಾದರೂ ಏನಿದೆ? ದ್ವಿಜಶ್ರೇಷ್ಠನೇ! ನೀನು ತಪಸ್ವಿಯಾಗಿರುವೆ. ಸದಾ

ಕಾಲದಲ್ಲಿಯೂ ಧರ್ಮದ ಮಾರ್ಗದಲ್ಲಿಯೇ ನಡೆದುಕೊಳ್ಳುತ್ತಿರುವೆ. ಆದರೂ ನೀನು ಹರ್ಷದಿಂದ ಏಕಿಷ್ಟು ಉನ್ಮತ್ತನಾಗಿರುವೆ?"

"ಬ್ರಾಹ್ಮಣ! ಗಾಯಗೊಂಡಿರುವ ನನ್ನ ಕೈಯಿಂದ ಶಾಕರಸವು ಹೊರಬರುತ್ತಿರುವುದನ್ನು ನೀನು ಕಾಣುತ್ತಿಲ್ಲವೇ? ಇದನ್ನೇ ನಾನು ನೋಡಿ ಅತ್ಯಂತ ಹರ್ಷಾವಿಷ್ಟನಾಗಿ ಕುಣಿದಾಡುತ್ತಿದ್ದೇನೆ."

ಮಂಕಣಕನ ಮಾತನ್ನು ಕೇಳಿ ಮಹಾದೇವನು ನಗುತ್ತಾ ಶರೀರದಲ್ಲುಂಟಾದ ಆಶ್ಚರ್ಯಕರವಾದ ಘಟನೆಯಿಂದ ವಿಮೋಹಿತನಾಗಿದ್ದ ಋಷಿಯನ್ನು ಕುರಿತು ಹೇಳಿದನು :

"ಗಾಯಗೊಂಡ ಸ್ಥಳದಿಂದ ಶಾಕರಸವು ಸ್ರವಿಸುತ್ತಿರುವುದನ್ನು ನೋಡಿ ನನಗೆ ಸ್ವಲ್ಪವಾದರೂ ಆಶ್ಚರ್ಯವೆನಿಸುವುದಿಲ್ಲ. ವಿಪ್ರೋತ್ತಮ! ಈಗ ನನ್ನನ್ನು ನೋಡು." ಮಹಾದೇವನು ಹೀಗೆ ಮುನಿಶ್ರೇಷ್ಠನಾದ ಮಂಕಣಕನಿಗೆ ಹೇಳಿ ಬೆರಳಿನ ಅಗ್ರಭಾಗದಿಂದ ತನ್ನ ಎಡಗೈಯಿನ ಹೆಬ್ಬೆಟ್ಟನ್ನು ಪ್ರಹರಿಸಿದನು. ಗಾಯಗೊಂಡ ಆ ಹೆಬ್ಬೆಟ್ಟಿನಿಂದ ಹಿಮಸದೃಶವಾದ ಭಸ್ಮವು ಹೊರಬಂದಿತು. ಅದನ್ನು ನೋಡಿದೊಡನೆಯೇ ನಾಚಿಕೆಗೊಂಡ ಮಂಕಣಕನು ಮಹಾದೇವನ ಕಾಲುಗಳಲ್ಲಿ ಬಿದ್ದನು. ತನ್ನೊಡನೆ ಮಾತನಾಡುತ್ತಿರುವವನು ಸಾಕ್ಷಾತ್ ಮಹಾದೇವನೆಂದು ಮಂಕಣಕನು ಅರಿತುಕೊಂಡನು. ವಿಸ್ಮಿತನಾದ ಋಷಿಯು ಮಹಾದೇವನೊಡನೆ ಹೇಳಿದನು :

**ನಾನ್ಯಂ ದೇವಾದಹಂ ಮನ್ಯೇ ರುದ್ರಾತ್ಪರತರಂ ಮಹತ್ ।**
**ಸುರಾಸುರಸ್ಯ ಜಗತೋ ಗತಿಸ್ತ್ವಮಸಿ ಶೂಲಧೃತ್ ॥೫೦॥**

"ಭಗವನ್! ನಾನು ರುದ್ರದೇವನೊಬ್ಬನನ್ನು ಬಿಟ್ಟು ಬೇರೆ ಯಾವ ದೇವತೆಯನ್ನೂ ರುದ್ರನಿಗಿಂತಲೂ ಅಧಿಕನೆಂದಾಗಲೀ, ಪರಮಶ್ರೇಷ್ಠನೆಂದಾಗಲೀ, ಮಹತ್ತ್ವಪೂರ್ಣನೆಂದಾಗಲೀ, ಭಾವಿಸುವುದಿಲ್ಲ. ದೇವತೆಗಳಿಂದಲೂ ಮತ್ತು ಅಸುರರಿಂದಲೂ ವ್ಯಾಪ್ತವಾಗಿರುವ ಈ ಸಂಪೂರ್ಣಜಗತ್ತಿಗೂ ಶೂಲಧರನಾದ ನೀನೇ ಆಶ್ರಯನಾಗಿರುವೆ.

**ತ್ವಯಾ ಸೃಷ್ಟಮಿದಂ ವಿಶ್ವಂ ವದನ್ತೀಹ ಮನೀಷಿಣಃ ।**
**ತ್ವಾಮೇವ ಸರ್ವಂ ವ್ರಜತಿ ಪುನರೇವ ಯುಗಕ್ಷಯೇ ॥೫೧॥**

ದೇವ! ನಿನ್ನಿಂದಲೇ ಈ ವಿಶ್ವವು ಸೃಷ್ಟವಾಯಿತೆಂದು ಮನೀಷಿಗಳಾದ ಮಹರ್ಷಿಗಳು ಹೇಳುತ್ತಾರೆ. ಯುಗಕ್ಷಯವಾದನಂತರ ಪುನಃ ಈ ಎಲ್ಲ ವಿಶ್ವವೂ ನಿನ್ನೊಳಗೇ ಸೇರಿಕೊಳ್ಳುತ್ತದೆ.

**ದೇವೈರಪಿ ನ ಶಕ್ಯಸ್ತ್ವಂ ಪರಿಜ್ಞಾತುಂ ಕುತೋ ಮಯಾ ।**
**ತ್ವಯಿ ಸರ್ವೇ ಸ್ಮ ದೃಶ್ಯನ್ತೇ ಭಾವಾ ಯೇ ಜಗತಿ ಸ್ಥಿತಾಃ ॥೫೨॥**

ದೇವತೆಗಳಿಂದಲೂ ನಿನ್ನ ನಿಜಸ್ವರೂಪವನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ಹೀಗಿರುವಾಗ ನನ್ನಂತಹ ಅಲ್ಪಪ್ರಜ್ಞನು ನಿನ್ನ ನಿಜಸ್ವರೂಪವನ್ನು ಹೇಗೆ ತಾನೇ ತಿಳಿಯುವನು? ಯಾವ ಯಾವ ಪದಾರ್ಥಗಳು ಈ ಬಾಹ್ಯಜಗತ್ತಿನಲ್ಲಿ ಕಾಣುತ್ತಿವೆಯೋ-ಆ ಎಲ್ಲ ಪದಾರ್ಥಗಳೂ ನಿನ್ನ ಈ ದಿವ್ಯಶರೀರದಲ್ಲಿಯೇ ಕಾಣಿಸಿಕೊಳ್ಳುತ್ತವೆ.

**ತ್ವಾಮುಪಾಸನ್ತ ವರದಂ ದೇವಾ ಬ್ರಹ್ಮಾದಯೋಽನಘ ।**
**ಸರ್ವಸ್ತ್ವಮಸಿ ದೇವಾನಾಂ ಕರ್ತಾ ಕಾರಯಿತಾ ಚ ಹ ।**
**ತ್ವತ್ಪ್ರಸಾದಾತ್ಸುರಾಃ ಸರ್ವೇ ಮೋದನ್ತೀಹಾಕುತೋಭಯಾಃ ॥೫೩॥**

ಮಹಾದೇವ! ವರದನಾದ ನಿನ್ನನ್ನು ಬ್ರಹ್ಮನೇ ಮೊದಲಾದ ದೇವತೆಗಳೂ ಉಪಾಸನೆಮಾಡಿದರು. ದೇವತೆಗಳಿಗೆ ನೀನೇ ಸರ್ವಸ್ವವೂ ಆಗಿರುವೆ. ಕಾರ್ಯಮಾಡತಕ್ಕವನೂ ಮತ್ತು ಕಾರ್ಯವನ್ನು ಮಾಡಿಸತಕ್ಕವನೂ ನೀನೇ ಆಗಿರುವೆ. ನಿನ್ನ ಅನುಗ್ರಹದಿಂದಲೇ ದೇವತೆಗಳೆಲ್ಲರೂ ಭಯವೇ ಇಲ್ಲದವರಾಗಿ ಆನಂದಪಡುತ್ತಿರುತ್ತಾರೆ."

ಜನಮೇಜಯ! ಮಂಕಣಕನು ಮಹಾದೇವನನ್ನು ಹೀಗೆ ಸ್ತೋತ್ರ ಮಾಡಿ ಅಭಿವಾದನಪೂರ್ವಕವಾಗಿ ನಮಸ್ಕಾರಮಾಡಿ ಪುನಃ ಹೇಳಿದನು : "ಮಹಾದೇವ! ನನ್ನ ಶರೀರದಲ್ಲಿ ಸ್ರವಿಸುತ್ತಿರುವ ಶಾಕರಸವನ್ನು ನೋಡಿ ಕೇವಲ ಚಾಪಲ್ಯದಿಂದ ನಾನು ನಗುತ್ತಿದ್ದೆನು ಮತ್ತು ಕುಣಿಯುತ್ತಿದ್ದೆನು. ನನ್ನ ಈ ಅಪರಾಧವನ್ನು ಕ್ಷಮಿಸಿ ಪ್ರಸನ್ನನಾಗುವಂತೆ ನಾನು ನಿನ್ನನ್ನು ಕೇಳಿಕೊಳ್ಳುತ್ತೇನೆ. ನನ್ನ ಈ ಚೆಲ್ಲಾಟದಿಂದಾಗಿ ನನ್ನ ತಪಸ್ಸು ನಷ್ಟವಾಗದಿರುವಂತೆ ಅನುಗ್ರಹಿಸು."

ಮಂಕಣಕನ ಮಾತಿನಿಂದ ಸುಪ್ರೀತನಾದ ಮಹಾದೇವನು ಋಷಿಯೊಡನೆ ಹೇಳಿದನು :

“ವಿಪ್ರೋತ್ತಮ! ನನ್ನ ಅನುಗ್ರಹದಿಂದಾಗಿ ನಿನ್ನ ತಪಸ್ಸು ಸಾವಿರ ಪಟ್ಟು ವರ್ಧಿಸಲಿ. ನಿನ್ನೊಡನೆಯೇ ನಾನು ಈ ನಿನ್ನ ಆಶ್ರಮದಲ್ಲಿಯೇ ಇದ್ದುಬಿಡುತ್ತೇನೆ.

**ಸಪ್ತಸಾರಸ್ವತೇ ಚಾಸ್ಮಿನ್ಯೋ ಮಾಮರ್ಚಿಷ್ಯತೇ ನರಃ ।**
**ನ ತಸ್ಯ ದುರ್ಲಭಂ ಕಿಂಚಿದ್ಭವಿತೇಹ ಪರತ್ರ ವಾ ।**
**ಸಾರಸ್ವತಂ ಚ ತೇ ಲೋಕಂ ಗಮಿಷ್ಯನ್ತಿ ನ ಸಂಶಯಃ ॥೫೮॥**

ಮಂಕಣಕ! ಈ ಸಪ್ತಸಾರಸ್ವತತೀರ್ಥಕ್ಷೇತ್ರದಲ್ಲಿ ಯಾವ ಮನುಷ್ಯನು ನನ್ನನ್ನು ಅನನ್ಯಭಕ್ತಿಯಿಂದ ಅರ್ಚಿಸುತ್ತಾನೆಯೋ–ಅವನಿಗೆ ಈ ಲೋಕದಲ್ಲಿಯೇ ಆಗಲೀ ಪರಲೋಕದಲ್ಲಿಯೇ ಆಗಲೀ – ದುರ್ಲಭವಾದ ವಸ್ತುವು ಯಾವುದೊಂದೂ ಇರುವುದಿಲ್ಲ. (ಅವನು ಅಪೇಕ್ಷಿಸುವ ಎಲ್ಲ ವಸ್ತುಗಳೂ ಲಭಿಸುತ್ತವೆ.) ಈ ಲೋಕದಲ್ಲಿ ಮನುಷ್ಯರು ಸಕಲ ಕಾಮನೆಗಳನ್ನೂ ಪಡೆದುಕೊಂಡು ಅವಸಾನಾನಂತರದಲ್ಲಿ ಪುಣ್ಯತಮವಾದ ಸಾರಸ್ವತಲೋಕಕ್ಕೆ ಹೋಗುತ್ತಾರೆ. ಈ ವಿಷಯದಲ್ಲಿ ಸಂಶಯವೇ ಇಲ್ಲ.”

ಜನಮೇಜಯ! ಇದು ಮಹಾತೇಜಸ್ವಿಯಾದ ಮಂಕಣಕನ ದಿವ್ಯ ಚರಿತ್ರೆಯಾಗಿದೆ.

**ಸ ಹಿ ಪುತ್ರಃ ಸುಕನ್ಯಾಯಾಮುತ್ಪನ್ನೋ ಮಾತರಿಶ್ವನಾ ॥೫೯॥**

ಮಂಕಣಕನು ವಾಯುವಿನ ಔರಸಪುತ್ರನು. ವಾಯುವಿನಿಂದ ಸುಕನ್ಯೆಯಲ್ಲಿ ಹುಟ್ಟಿದವನು.”

ಽ೮ನೆಯ ಅಧ್ಯಾಯವು ಮುಗಿಯಿತು.

೩೯ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

# ಔಶನಸ ಅಥವಾ ಕಪಾಲಮೋಚನತೀರ್ಥಕ್ಷೇತ್ರದ ಮಾಹಾತ್ಮ್ಯ: ರುಷಂಗುವಿನ ಆಶ್ರಮವರ್ಣನೆ: ಪೃಥೂದಕತೀರ್ಥದ ಮಹಿಮೆ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯಮಹಾರಾಜ! ಬಲರಾಮನು ಆ ಸಪ್ತಸಾರಸ್ವತ ಕ್ಷೇತ್ರದಲ್ಲಿ ತಂಗಿದ್ದು ಆಶ್ರಮವಾಸಿಗಳಾದ ಋಷಿಗಳನ್ನು ಅರ್ಘ್ಯ-ಪಾದ್ಯಾದಿ ಗಳಿಂದ ಯಥಾವಿಧಿಯಾಗಿ ಸತ್ಕರಿಸಿ, ಮಂಕಣಕಮಹರ್ಷಿಯ ವಿಷಯದಲ್ಲಿ ತನ್ನ ಪ್ರೀತಿ-ವಿಶ್ವಾಸಗಳನ್ನು ವ್ಯಕ್ತಪಡಿಸಿದನು. ಬ್ರಾಹ್ಮಣರಿಗೆ ಯಥೋಚಿತ ವಾದ ದಾನಗಳನ್ನಿತ್ತು, ಆ ರಾತ್ರಿಯನ್ನು ಅಲ್ಲಿಯೇ ಕಳೆದು ಪ್ರಾತಃಕಾಲದಲ್ಲಿ ಜಾಗ್ರತನಾಗಿ ಸ್ನಾನಾಚಮನಗಳನ್ನು ಮಾಡಿಕೊಂಡು, ಮುನಿಗಳ ಸಮೂಹ ಗಳಿಂದ ಸಮ್ಮಾನಿತನಾಗಿ ಅವರೆಲ್ಲರ ಅನುಜ್ಞೆಯನ್ನೂ ಪಡೆದು, ಮುಂದಿನ ತೀರ್ಥವನ್ನು ಸಂದರ್ಶಿಸುವ ಸಲುವಾಗಿ ಬಹಳ ತ್ವರೆಯಿಂದ ಪ್ರಯಾಣಮಾಡಿದನು.

ಅನಂತರ ಹಲಾಯುಧನು ಔಶನಸತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಿ ದನು. ಆ ತೀರ್ಥಕ್ಕೆ ಕಪಾಲಮೋಚನವೆಂಬ ಅನ್ವರ್ಥನಾಮವೂ ಇದೆ. ಹಿಂದೆ ಭಗವಾನ್ ಶ್ರೀರಾಮನು ಒಬ್ಬ ರಾಕ್ಷಸನನ್ನು ಸಂಹರಿಸಿ ಅವನ ಶಿರಸ್ಸನ್ನು ಬಾಣದ ಮೂಲಕವಾಗಿ ಬಹಳ ದೂರಕ್ಕೆ ಎಸೆದುಬಿಟ್ಟನು. ಆ ರಾಕ್ಷಸನ ವಿಶಾಲವಾದ ಶಿರಸ್ಸು ಮಹಾಮುನಿಯಾದ ಮಹೋದರನ ತೊಡೆಯ ಮೇಲೆ ಬಿದ್ದು ಮೊಣಕಾಲಿಗೆ ಅಂಟಿಕೊಂಡುಬಿಟ್ಟಿತು. ಅನಂತರ ಮಹೋದರಮುನಿಯು ಔಶನಸತೀರ್ಥದಲ್ಲಿ ಸ್ನಾನಮಾಡಲಾಗಿ ಶಿರಸ್ಸು ಕಳಚಿ ಕೆಳಕ್ಕೆ ಬಿದ್ದಿತು. ಈ ಕಾರಣದಿಂದಲೇ ಆ ತೀರ್ಥವನ್ನು ಕಪಾಲ ಮೋಚನತೀರ್ಥವೆಂಬ ಅನ್ವರ್ಥನಾಮದಿಂದಲೂ ಕರೆಯುತ್ತಾರೆ.

ಔಶನಸತೀರ್ಥವೆಂದು ಹೆಸರು ಬರಲು ಒಂದು ಐತಿಹ್ಯವಿದೆ.

**ಅತ್ರ ಪೂರ್ವಂ ತಪಸ್ತಪ್ತಂ ಕಾವ್ಯೇನ ಸುಮಹಾತ್ಮನಾ ।**
**ಯತ್ರಾಸ್ಯ ನೀತಿರಖಿಲಾ ಪ್ರಾದುರ್ಭೂತಾ ಮಹಾತ್ಮನಃ ॥೬॥**

ಮಹಾತ್ಮನಾದ ಶುಕ್ರನು ಹಿಂದೆ ಅಲ್ಲಿಯೇ ತಪಸ್ಸುಮಾಡುತ್ತಿದ್ದನು. ತಪಸ್ಸಿನ ಫಲವಾಗಿ ಸಂಪೂರ್ಣನೀತಿಶಾಸ್ತ್ರವೂ ಮಹಾತ್ಮನಾದ ಶುಕ್ರನ ಮನಸ್ಸಿನಲ್ಲಿ ಸ್ಫುರಿಸಿತು. ಅಲ್ಲಿಯೇ ಕುಳಿತುಕೊಂಡು ಶುಕ್ರನು ದೈತ್ಯರ ಮತ್ತು ದಾನವರ ಯುದ್ಧದ ವಿಷಯವಾಗಿ ಚಿಂತಿಸುತ್ತಿದ್ದನು. ಆದುದರಿಂದಲೇ ಆ ತೀರ್ಥಕ್ಕೆ ಮೊದಲು ಔಶನಸತೀರ್ಥವೆಂದು ಹೆಸರು ಬಂದಿತು.

ಎಲ್ಲ ತೀರ್ಥಗಳಿಗೂ ಶ್ರೇಷ್ಠವಾದ ಔಶನಸತೀರ್ಥಕ್ಷೇತ್ರಕ್ಕೆ ಹೋದ ನಂತರ ಬಲರಾಮನು ಮಹಾತ್ಮರಾದ ಬ್ರಾಹ್ಮಣರಿಗೆ ವಿಧಿವತ್ತಾಗಿ ಐಶ್ವರ್ಯ ವನ್ನು ದಾನಮಾಡಿದನು."

ಜನಮೇಜಯನು ಮತ್ತೊಮ್ಮೆ ಕಪಾಲಮೋಚನದ ವಿಷಯವಾಗಿಯೇ ಪ್ರಶ್ನಿಸುತ್ತಾನೆ :

**ಕಪಾಲಮೋಚನಂ ಬ್ರಹ್ಮನ್ಕಥಂ ತತ್ರ ಮಹಾಮುನಿಃ ।**
**ಮುಕ್ತಃ ಕಥಂ ಚಾಸ್ಯ ಶಿರೋ ಲಗ್ನಂ ಕೇನ ಚ ಹೇತುನಾ ॥೮॥**

"ವೈಶಂಪಾಯನರೇ! ಆ ತೀರ್ಥಕ್ಕೆ ಕಪಾಲಮೋಚನವೆಂಬ ಹೆಸರು ಹೇಗೆ ಬಂದಿತು? ಮಹಾಮುನಿಯಾದ ಮಹೋದರನು ತನ್ನ ಮೊಣಕಾಲಿಗೆ ಅಂಟಿಕೊಂಡಿದ್ದ ಶಿರಸ್ಸಿನಿಂದ ಮುಕ್ತನಾದುದು ಹೇಗೆ?–ಈ ಎಲ್ಲ ವಿಷಯಗಳನ್ನೂ ನನಗೆ ವಿಶದವಾಗಿ ಹೇಳಿರಿ."

"ಮಹಾರಾಜ! ಪೂರ್ವಕಾಲದಲ್ಲಿ ರಘುಕುಲನಂದನನಾದ, ಮಹಾತ್ಮನಾದ ಶ್ರೀರಾಮನು ದಂಡಕಾರಣ್ಯದಲ್ಲಿ ವಾಸಮಾಡುತ್ತಿರುವಾಗ ಅನೇಕ ರಾಕ್ಷಸರನ್ನು ಸಂಹಾರಮಾಡಿದನು. ಹೀಗೆಯೇ ಒಮ್ಮೆ ಜನಸ್ಥಾನ ದಲ್ಲಿದ್ದ ದುರಾತ್ಮನಾದ ರಾಕ್ಷಸನೊಬ್ಬನ ತಲೆಯನ್ನು ನಿಶಿತವಾದ ಅಲುಗಿನಿಂದ ಕೂಡಿದ್ದ ಕ್ಷುರವೆಂಬ ಬಾಣದಿಂದ ಕತ್ತರಿಸಲಾಗಿ ಆ ತಲೆಯು ಮಹಾವನದಲ್ಲಿ ಹಾರುತ್ತಾಹೋಗಿ ಅಲ್ಲಿಯೇ ಸಂಚರಿಸುತ್ತಿದ್ದ ಮಹೋದರನೆಂಬ ಮುನಿಯ ಮೊಣಕಾಲಿಗೆ ದೈವಯೋಗದಿಂದ ಅಂಟಿಕೊಂಡಿತು. ಆ ತಲೆಯು ಮಹೋದರಮುನಿಯ ಮೊಣಕಾಲನ್ನು ಹೊಕ್ಕಿದ್ದುದರಿಂದ ಮಹಾಪ್ರಾಜ್ಞನಾದ ಆ ಬ್ರಾಹ್ಮಣನು ತೀರ್ಥಕ್ಷೇತ್ರಗಳಿಗಾಗಲೀ–ದೇವಾಲಯ ಗಳಿಗಾಗಲೀ ಹೋಗಲು ಅಸಮರ್ಥನಾದನು.

ರಾಕ್ಷಸನ ಶಿರಸ್ಸು ಅಂಟಿಕೊಂಡಿದ್ದ ಮೊಣಕಾಲಿನ ಭಾಗದಿಂದ ದುರ್ಗಂಧಯುಕ್ತವಾದ ಕೀವು ಹರಿಯುತ್ತಿದ್ದಿತು. ಮಹಾಮುನಿಯಾದ ಮಹೋದರನು ವೇದನೆಯಿಂದ ಬಹಳವಾಗಿ ಸಂಕಟಪಡುತ್ತಿದ್ದನು. ಅಂತಹ ಸ್ಥಿತಿಯಲ್ಲಿಯೇ ಮಹೋದರನು ಪೃಥ್ವಿಯಲ್ಲಿರುವ ಸರ್ವತೀರ್ಥಗಳ ಯಾತ್ರೆಯನ್ನೂ ಮಾಡಿದನು. ಮಹೋದರನು ಎಲ್ಲ ಪುಣ್ಯನದಿಗಳಿಗೂ ಹೋಗಿ ಸ್ನಾನಮಾಡುತ್ತಿದ್ದನು. ಸಮುದ್ರಗಳ ಯಾತ್ರೆಯನ್ನು ಮಾಡಿ ಅವುಗಳಲ್ಲಿಯೂ ಸ್ನಾನಮಾಡುತ್ತಿದ್ದನು. ಶುದ್ಧಾಂತಃಕರಣರಾದ ಋಷಿಗಳೊಡನೆ ತನ್ನ ಕಷ್ಟಗಳನ್ನು ಹೇಳಿಕೊಳ್ಳುತ್ತಿದ್ದನು. ಪೃಥ್ವಿಯಲ್ಲಿದ್ದ ಎಲ್ಲ ಪುಣ್ಯತೀರ್ಥಗಳಲ್ಲಿಯೂ ಮುಳುಗಿದನು. ಇಷ್ಟಾದರೂ ಮಹೋದರನು ರಾಕ್ಷಸನ ತಲೆಯಿಂದ ಬಿಡುಗಡೆಯನ್ನು ಹೊಂದಲಿಲ್ಲ. ಹೀಗೆಯೇ ಪರ್ಯಟನಮಾಡುತ್ತಿದ್ದಾಗ–'ಸರಸ್ವತೀನದಿಯ ತೀರದಲ್ಲಿ ಔಶನಸವೆಂಬ ಶ್ರೇಷ್ಠವಾದ ತೀರ್ಥವಿದೆ. ಆ ತೀರ್ಥವು ಸಕಲಪಾಪಗಳನ್ನೂ ಹೋಗಲಾಡಿಸುವುದು ಮತ್ತು ಆ ಪ್ರದೇಶವು ಉತ್ತಮೋತ್ತಮವಾದ ಸಿದ್ಧಕ್ಷೇತ್ರ'– ಎಂಬ ಮಹತ್ತ್ವಪೂರ್ಣವಾದ ಮಾತನ್ನು ಮುನಿಗಳ ಮುಖಾರವಿಂದದಿಂದ ಕೇಳಿದನು. ಒಡನೆಯೇ ಆ ಬ್ರಾಹ್ಮಣನು ಔಶನಸತೀರ್ಥಕ್ಷೇತ್ರಕ್ಕೆ ಪ್ರಯಾಣ ಮಾಡಿ ಔಶನಸತೀರ್ಥದಲ್ಲಿ ಯಥಾವಿಧಿಯಾಗಿ ಸ್ನಾನಾಚಮನಾದಿಗಳನ್ನು ಮಾಡುತ್ತಲೇ ರಾಕ್ಷಸನ ಶಿರಸ್ಸು ಬ್ರಾಹ್ಮಣನ ಮೊಣಕಾಲನ್ನು ಬಿಟ್ಟು ನೀರಿನ ತಳಭಾಗದಲ್ಲಿ ಬಿದ್ದುಹೋಯಿತು. ರಾಕ್ಷಸನ ಆ ಶಿರಸ್ಸಿನಿಂದ ವಿಮುಕ್ತನಾದ ಮಹೋದರನು ಪರಮಸುಖಿಯಾದನು. ನದಿಯೊಳಗೆ ಬಿದ್ದ ಆ ಶಿರಸ್ಸೂ ಅದೃಶ್ಯವಾಗಿ ಹೋಯಿತು. ಬಳಿಕ ರಾಕ್ಷಸನ ಶಿರಸ್ಸಿನಿಂದ ಮುಕ್ತನಾದ, ಪೂತಾತ್ಮನಾದ, ಕಲ್ಮಷರಹಿತನಾದ ಮಹೋದರನು ಕೃತಕೃತ್ಯನಾಗಿ ಪರಮಪ್ರೀತನಾಗಿ ತನ್ನ ಆಶ್ರಮಕ್ಕೆ ಆಗಮಿಸಿದನು. ಸಂಕಟದಿಂದ ಮುಕ್ತನಾದ, ಮಹಾತಪಸ್ವಿಯಾದ ಮಹೋದರಮುನಿಯು ತನ್ನ ಪವಿತ್ರವಾದ ಆಶ್ರಮವನ್ನು ಪ್ರವೇಶಿಸಿ ಅಲ್ಲಿದ್ದ ಶುದ್ಧಾಂತಃಕರಣರಾದ ಎಲ್ಲ ಋಷಿಗಳಿಗೂ ನಡೆದ ವೃತ್ತಾಂತವನ್ನು ಯಥಾವತ್ತಾಗಿ ಹೇಳಿದನು. ಅಲ್ಲಿಗೆ ಆಗಮಿಸಿದ್ದ ಋಷಿಗಳು ಮಹೋದರಮುನಿಯ ಮಾತನ್ನು ಕೇಳಿ ಔಶನಸತೀರ್ಥಕ್ಕೆ ಕಪಾಲಮೋಚನವೆಂದು ನಾಮಕರಣವನ್ನು ಮಾಡಿದರು. ಅನಂತರ ಮಹೋದರ

ಮಹರ್ಷಿಯು ಪುನಃ ಶ್ರೇಷ್ಠವಾದ ಆ ತೀರ್ಥದ ಬಳಿಗೆ ಹೋಗಿ ಯಥೇಚ್ಛವಾಗಿ ಜಲಪಾನಮಾಡಿ ಉತ್ತಮವಾದ ಸಿದ್ಧಿಯನ್ನು ಪಡೆದನು.

ವೃಷ್ಣಿಶ್ರೇಷ್ಠನಾದ ಮಾಧವನು (ಬಲರಾಮನು) ಕಪಾಲಮೋಚನ ತೀರ್ಥಕ್ಷೇತ್ರದಲ್ಲಿ ಬ್ರಾಹ್ಮಣರನ್ನು ಸಂಪೂಜಿಸಿ ಹೇರಳವಾದ ಧನವನ್ನು ಅವರಿಗೆ ದಾನಮಾಡಿದನು. ಅನಂತರ ಅವನು ಸಪರಿವಾರನಾಗಿ ರುಷಂಗು ಮುನಿಯ ಆಶ್ರಮಕ್ಕೆ ಪ್ರಯಾಣಮಾಡಿದನು. ರುಷಂಗುಮುನಿಯ ಆಶ್ರಮವು ಸುಪ್ರಸಿದ್ಧವಾದ ಆಶ್ರಮವಾಗಿದ್ದಿತು. ಆರ್ಷ್ಟಿಷೇಣಮುನಿಯು ಆ ಆಶ್ರಮ ದಲ್ಲಿಯೇ ಮಹಾಘೋರವಾದ ತಪಸ್ಸುಮಾಡಿದ್ದನು. ಅದೇ ಆಶ್ರಮದಲ್ಲಿಯೇ ವಿಶ್ವಾಮಿತ್ರಮಹರ್ಷಿಯು ಘೋರವಾದ ತಪಸ್ಸಿನಿಂದ ಬ್ರಾಹ್ಮಣ್ಯವನ್ನು ಪಡೆದುಕೊಂಡನು. ಆ ದಿವ್ಯಾಶ್ರಮವು ಸಕಲವಿಧವಾದ ಕಾಮನಾವಸ್ತು ಗಳಿಂದಲೂ ಸಮೃದ್ಧವಾಗಿದ್ದಿತು. ಆ ದಿವ್ಯಾಶ್ರಮವನ್ನು ಮುನಿಗಳೂ ಮತ್ತು ಬ್ರಾಹ್ಮಣರೂ ನಿರಂತರವಾಗಿ ಸೇವಿಸುತ್ತಿದ್ದರು. ಬಳಿಕ ಶ್ರೀಮಂತನಾದ ಹಲಧರನು ಬ್ರಾಹ್ಮಣರಿಂದ ಪರಿವೃತನಾಗಿ ರುಷಂಗುಮಹರ್ಷಿಯು ದೇಹ ತ್ಯಾಗಮಾಡಿದ್ದ ಸ್ಥಳಕ್ಕೆ (ಪೃಥೂದಕಕ್ಕೆ) ಹೋದನು. ರುಷಂಗುಬ್ರಾಹ್ಮಣನು ವೃದ್ಧನಾಗಿದ್ದನು. ಯಾವಾಗಲೂ ತಪಸ್ಸಿನಲ್ಲಿಯೇ ನಿರತನಾಗಿರುತ್ತಿದ್ದನು. ಒಮ್ಮೆ ಅವನು ಬಹಳವಾಗಿ ಚಿಂತಿಸಿ ದೇಹವನ್ನು ಪರಿತ್ಯಜಿಸಿಬಿಡಬೇಕೆಂದು ನಿಶ್ಚಯಿಸಿದನು. ಮಹಾತಪಸ್ವಿಯಾಗಿದ್ದ ರುಷಂಗುವು ತನ್ನ ಎಲ್ಲ ಮಕ್ಕಳನ್ನೂ ಹತ್ತಿರಕ್ಕೆ ಕರೆದು ಅವರೊಡನೆ ತನ್ನನ್ನು ಪೃಥೂದಕತೀರ್ಥಕ್ಷೇತ್ರಕ್ಕೆ ಒಯ್ಯು ವಂತೆ ಹೇಳಿದನು. ತಪೋಧನರಾಗಿದ್ದ ಅವನ ಮಕ್ಕಳು ತಮ್ಮ ತಂದೆಯು ಅತ್ಯಂತವೃದ್ಧನಾಗಿರುವುದನ್ನು ಮನಗಂಡು ತಂದೆಯ ಇಚ್ಛೆಯಂತೆ ಸರಸ್ವತಿಯ ತೀರದಲ್ಲಿದ್ದ ಉತ್ತಮೋತ್ತಮವಾದ ಪೃಥೂದಕತೀರ್ಥಕ್ಕೆ ಕರೆದುಕೊಂಡು ಹೋದರು. ಪುಣ್ಯವತಿಯಾದ, ನೂರಾರು ತೀರ್ಥಗಳಿಂದ ಯುಕ್ತಳಾಗಿದ್ದ, ಬ್ರಾಹ್ಮಣರ ಸಮೂಹಗಳಿಂದ ಸಂಸೇವಿತಳಾಗಿದ್ದ ಸರಸ್ವತೀನದಿಯಲ್ಲಿದ್ದ ಪೃಥೂದಕತೀರ್ಥಕ್ಕೆ ತನ್ನ ಮಕ್ಕಳೊಡನೆ ಹೋದನಂತರ ಧೀಮಂತನಾದ ಮಹಾತಪಸ್ವಿಯಾದ, ಋಷಿಶ್ರೇಷ್ಠನಾದ ರುಷಂಗುಋಷಿಯು ವಿಧಿಪೂರ್ವಕ ವಾಗಿ ಪೃಥೂದಕತೀರ್ಥದಲ್ಲಿ ಮುಳುಗಿ ಆ ತೀರ್ಥದಲ್ಲಿದ್ದ ಅಪಾರವಾದ

ಗುಣಗಳನ್ನು ಗ್ರಹಿಸಿ ಪರಮಪ್ರೀತನಾಗಿ ತನ್ನ ಸಮೀಪದಲ್ಲಿದ್ದ ಎಲ್ಲ ಮಕ್ಕಳನ್ನೂ ಕುರಿತು ಹೇಳಿದನು :

**ಸರಸ್ವತ್ಯುತ್ತರೇ ತೀರೇ ಯಸ್ತ್ಯಜೇದಾತ್ಮನಸ್ತನುಮ್ ।**
**ಪೃಥೂದಕೇ ಜಪ್ಯಪರೋ ನೈನಂ ಶ್ವೋ ಮರಣಂ ತಪೇತ್ ॥೩೩॥**

"ಯಾರು ಸರಸ್ವತೀನದಿಯ ಉತ್ತರತೀರದಲ್ಲಿರುವ ಪೃಥೂದಕ ತೀರ್ಥಕ್ಷೇತ್ರದಲ್ಲಿ ಮಂತ್ರಜಪದಲ್ಲಿಯೇ ನಿರತನಾಗಿದ್ದುಕೊಂಡು ದೇಹಪರಿತ್ಯಾಗಮಾಡುತ್ತಾರೆಯೋ–ಅವರಿಗೆ ಮುಂದೆ ಮರಣದ ಸಂಕಟವಿರುವುದಿಲ್ಲ. (ಪುನರ್ಜನ್ಮವಿಲ್ಲ.)"

ಜನಮೇಜಯಮಹಾರಾಜ! ಅಂತಹ ಶ್ರೇಷ್ಠವಾದ ಪೃಥೂದಕ ತೀರ್ಥದಲ್ಲಿ ಧರ್ಮಾತ್ಮನಾದ ವಿಪ್ರವತ್ಸಲನಾದ ಬಲರಾಮನು ಸ್ನಾನಾಚಮನಗಳನ್ನು ಮಾಡಿ ಬ್ರಾಹ್ಮಣರಿಗೆ ಅನೇಕಪ್ರಕಾರವಾದ ದಾನಗಳನ್ನು ಕೊಟ್ಟನು.

ಪ್ರತಾಪವಂತನಾದ, ಮಹಾಬಲಿಷ್ಠನಾದ ಬಲರಾಮನು ಅಲ್ಲಿಂದ ಮುಂದೆ ಸಪರಿವಾರನಾಗಿ ಮತ್ತೊಂದು ಉತ್ತಮೋತ್ತಮವಾದ (ಬ್ರಹ್ಮಯೋನಿ) ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಿದನು. ಶ್ರೇಷ್ಠವಾದ ಆ ತೀರ್ಥದ ಸಮೀಪದಲ್ಲಿಯೇ ಲೋಕಪಿತಾಮಹನಾದ ಭಗವಾನ್ ಬ್ರಹ್ಮನು ಜಗತ್ತನ್ನು ಸೃಷ್ಟಿಮಾಡಿದನು. ಕಠೋರವ್ರತನಿಷ್ಠನಾದ ಋಷಿಶ್ರೇಷ್ಠನಾದ ಆರ್ಷ್ಟಿಷೇಣನು ಆ ಬ್ರಹ್ಮಯೋನಿತೀರ್ಥದ ಸಮೀಪದಲ್ಲಿಯೇ ಮಹಾತಪಸ್ಸನ್ನು ಮಾಡಿ ಬ್ರಾಹ್ಮಣ್ಯವನ್ನು ಪಡೆದುಕೊಂಡನು. ಅದೇ ರೀತಿಯಲ್ಲಿ ರಾಜರ್ಷಿಯಾದ ಸಿಂಧುದ್ವೀಪ, ಮಹಾತಪಸ್ವಿಯಾದ ದೇವಾಪಿ ಮತ್ತು ಮಹಾಯಶಸ್ವಿಯೂ, ಮಹಾತಪಸ್ವಿಯೂ ಮತ್ತು ಉಗ್ರತೇಜಸ್ವಿಯೂ ಆದ ಭಗವಾನ್ ವಿಶ್ವಾಮಿತ್ರ–ಈ ಮೂವರೂ ಶ್ರೇಷ್ಠವಾದ ಆ ತೀರ್ಥದ ಬಳಿಯಲ್ಲಿಯೇ ಬ್ರಾಹ್ಮಣ್ಯವನ್ನು ಪಡೆದುಕೊಂಡರು."

೩೯ನೆಯ ಅಧ್ಯಾಯವು ಮುಗಿಯಿತು.

೪೦ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಆರ್ಷ್ಟಿಷೇಣ, ಸಿಂಧುದ್ವೀಪ, ದೇವಾಪಿ ಮತ್ತು ವಿಶ್ವಾಮಿತ್ರರು ತಪಸ್ಸುಮಾಡಿ ಇಷ್ಟಾರ್ಥಗಳನ್ನು ಪಡೆದುಕೊಂಡುದು

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ಮುನಿಶ್ರೇಷ್ಠರೇ! ಪರಮಪೂಜ್ಯನಾದ ಆರ್ಷ್ಟಿಷೇಣಮಹರ್ಷಿಯು ಯಾವ ರೀತಿಯಲ್ಲಿ ವಿಪುಲವಾದ ತಪಸ್ಸುಮಾಡಿದನು? ಸಿಂಧುದ್ವೀಪನು ಬ್ರಾಹ್ಮಣ್ಯವನ್ನು ಹೇಗೆ ಪಡೆದುಕೊಂಡನು? ದೇವಾಪಿ ಮತ್ತು ವಿಶ್ವಾಮಿತ್ರರು ಯಾವ ತಪಸ್ಸಿನ ಅನುಷ್ಠಾನದಿಂದ ಬ್ರಾಹ್ಮಣರಾದರು?–ಈ ಎಲ್ಲ ವಿಷಯಗಳನ್ನೂ ನನಗೆ ಹೇಳಿರಿ. ಈ ವಿಷಯಗಳನ್ನು ತಮ್ಮಿಂದ ತಿಳಿದುಕೊಳ್ಳಬೇಕೆಂದು ನನಗೆ ಅತಿಯಾದ ಕುತೂಹಲವುಂಟಾಗಿದೆ."

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯಮಹಾರಾಜ! ಹಿಂದೆ ಕೃತಯುಗದಲ್ಲಿ ಆರ್ಷ್ಟಿಷೇಣ ನೆಂಬ ಬ್ರಾಹ್ಮಣಶ್ರೇಷ್ಠನು ಗುರುಗಳ ಮನೆಯಲ್ಲಿಯೇ ವಾಸಮಾಡುತ್ತಾ ನಿರಂತರವಾಗಿ ವೇದ-ಶಾಸ್ತ್ರಗಳನ್ನು ಅಧ್ಯಯನಮಾಡುತ್ತಿದ್ದನು. ಅವನು ನಿರಂತರವಾಗಿ ಗುರುಕುಲದಲ್ಲಿಯೇ ಇದ್ದು ವಿದ್ಯಾಭ್ಯಾಸಮಾಡುತ್ತಿದ್ದರೂ ಅವನ ಶಾಸ್ತ್ರವಿದ್ಯೆಯಾಗಲೀ–ವೇದವಿದ್ಯೆಯಾಗಲೀ ಪೂರ್ಣವಾಗಲೇ ಇಲ್ಲ. ಅದರಿಂದ ಅತ್ಯಂತಖಿನ್ನನಾದ ಆರ್ಷ್ಟಿಷೇಣನು ಗುರುಕುಲವನ್ನು ಬಿಟ್ಟು ಸರಸ್ವತೀನದಿಯ ತೀರದಲ್ಲಿದ್ದ (ಬ್ರಹ್ಮಯೋನಿ) ಮಹಾತೀರ್ಥದ ಬಳಿಗೆ ಹೋಗಿ ಅಲ್ಲಿ ಅನೇಕವರ್ಷಗಳ ಕಾಲ ತಪಸ್ಸುಮಾಡಿದನು. ಮಹಾತಪಸ್ವಿ ಯಾದ ಆರ್ಷ್ಟಿಷೇಣನು ತಾನು ಮಾಡಿದ ತಪಸ್ಸಿನ ಫಲವಾಗಿ ಶ್ರೇಷ್ಠವಾದ ವೇದಗಳನ್ನು ಸ್ವಾಧೀನಪಡಿಸಿಕೊಂಡನು. ಋಷಿಶ್ರೇಷ್ಠನಾದ ಆರ್ಷ್ಟಿಷೇಣನು ತಪಃಪ್ರಭಾವದಿಂದ ವಿದ್ವಾಂಸನೂ, ವೇದವಿದನೂ ಮತ್ತು ಸಿದ್ಧನೂ ಆದನು. ಅನಂತರ ಆ ಮಹಾತಪಸ್ವಿಯು ತಾನು ಸಿದ್ಧಿಪಡೆದ ಆ ತೀರ್ಥಕ್ಷೇತ್ರಕ್ಕೆ ಮೂರು ವರಗಳನ್ನು ದಯಪಾಲಿಸಿದನು :

**ಅಸ್ಮಿಂಸ್ತೀರ್ಥೇ ಮಹಾನದ್ಯಾ ಅದ್ಯಪ್ರಭೃತಿ ಮಾನವಃ ।**
**ಆಪ್ಲುತೋ ವಾಜಿಮೇಧಸ್ಯ ಫಲಂ ಪ್ರಾಪ್ಸ್ಯತಿ ಪುಷ್ಕಲಮ್ ॥೭॥**

**ಅದ್ಯಪ್ರಭೃತಿ ನೈವಾತ್ರ ಭಯಂ ವ್ಯಾಲಾದ್ಭವಿಷ್ಯತಿ ।**
**ಅಪಿ ಚಾಲ್ಪೇನ ಕಾಲೇನ ಫಲಂ ಪ್ರಾಪ್ಸ್ಯತಿ ಪುಷ್ಕಲಮ್ ॥೮॥**

"ಇಂದು ಮೊದಲ್ಗೊಂಡು ಯಾವ ಮಾನವನು ಮಹಾನದಿಯಾದ ಸರಸ್ವತಿಯ ಈ ದಿವ್ಯತೀರ್ಥದಲ್ಲಿ ಸ್ನಾನಮಾಡುತ್ತಾನೆಯೋ-ಅವನು ಅಶ್ವಮೇಧಯಾಗವನ್ನು ಮಾಡುವುದರಿಂದ ಪ್ರಾಪ್ತವಾಗಬಹುದಾದ ಸಂಪೂರ್ಣಫಲವನ್ನು ಸ್ನಾನಮಾತ್ರದಿಂದಲೇ ಪಡೆದುಕೊಳ್ಳುತ್ತಾನೆ. ಇಂದು ಮೊದಲ್ಗೊಂಡು ಈ ತೀರ್ಥದ ಸಮೀಪದಲ್ಲಿ ಸರ್ಪಗಳಿಂದ ಭಯ ವಿರುವುದಿಲ್ಲ. ಈ ತೀರ್ಥದ ಸಾನ್ನಿಧ್ಯದಲ್ಲಿ ಅಲ್ಪಕಾಲ ವಾಸಮಾಡಿದರೂ ಯಥೇಚ್ಛವಾದ ಫಲವನ್ನು ಪಡೆದುಕೊಳ್ಳುತ್ತಾನೆ."

ಹೀಗೆ ಆ ತೀರ್ಥಕ್ಕೆ ವರದಾನಮಾಡಿದ ಮಹಾತೇಜಸ್ವಿಯಾದ ಆರ್ಷ್ಟಿಷೇಣನು ಸ್ವರ್ಗಕ್ಕೆ ತೆರಳಿದನು. ಪ್ರತಾಪವಂತನಾದ, ಪೂಜ್ಯನಾದ ಆರ್ಷ್ಟಿಷೇಣನು ಹೀಗೆ ಆ (ಬ್ರಹ್ಮಯೋನಿ) ಮಹಾತೀರ್ಥದ ಸಮೀಪದಲ್ಲಿ ತಪಸ್ಸಿನಿಂದಲೇ ಸಿದ್ಧಿಯನ್ನು ಪಡೆದನು.

ಸರಸ್ವತೀನದಿಯಲ್ಲಿದ್ದ ಅದೇ ಮಹಾತೀರ್ಥದ ಸಾನ್ನಿಧ್ಯದಲ್ಲಿಯೇ ಪ್ರತಾಪವಂತನಾದ ಸಿಂಧುದ್ವೀಪನೂ ಮತ್ತು ದೇವಾಪಿಯೂ ತಪಸ್ಸುಮಾಡಿ ಶ್ರೇಷ್ಠವಾದ ಬ್ರಾಹ್ಮಣತ್ವವನ್ನು ಪಡೆದುಕೊಂಡರು. ಅದೇ ರೀತಿಯಲ್ಲಿ ಜಿತೇಂದ್ರಿಯನಾದ, ನಿತ್ಯತಪಸ್ವಿಯಾದ ಕೌಶಿಕನೂ ಮಹಾತೀರ್ಥದ ಸಮೀಪದಲ್ಲಿಯೇ ಯಮ-ನಿಯಮಾದಿಗಳ ಪೂರ್ವಕವಾಗಿ ಮಾಡಿದ ಮಹಾತಪಸ್ಸಿನಿಂದ ಬ್ರಾಹ್ಮಣ್ಯವನ್ನು ಪಡೆದುಕೊಂಡನು.

ಮಹಾರಾಜ! ವಿಶ್ವಾಮಿತ್ರನ ಪೂರ್ವೇತಿಹಾಸವನ್ನು ಹೇಳುವೆನು, ಕೇಳು. ವಿಶ್ವವಿಖ್ಯಾತನಾದ ಗಾಧಿ ಎಂಬ ಮಹಾಕ್ಷತ್ರಿಯನಿದ್ದನು. ಅವನಿಗೆ ವಿಶ್ವಾಮಿತ್ರನೆಂಬ ಹೆಸರಿನ ಪ್ರತಾಪವಂತನಾದ ಮಗನಿದ್ದನು. ಕುಶಿಕವಂಶೀಯನಾದ ಗಾಧಿಯು ಮಹಾಯೋಗಿಯೂ ಮಹಾತಪಸ್ವಿಯೂ ಆಗಿದ್ದನು. ಅವನು ತನ್ನ ಮಗನಾದ ವಿಶ್ವಾಮಿತ್ರನಿಗೆ ಪಟ್ಟಗಟ್ಟಿ ತಾನು ದೇಹ

ತ್ಯಾಗಮಾಡಬೇಕೆಂಬ ಆಲೋಚನೆಯಲ್ಲಿದ್ದನು. ಆ ವಿಷಯವನ್ನು ತಿಳಿದ ಅವನ ಪ್ರಜೆಗಳು ರಾಜನಿಗೆ ನಮಸ್ಕರಿಸುತ್ತಾ ಬೇಡಿಕೊಂಡರು :

**ನ ಗನ್ತವ್ಯಂ ಮಹಾಪ್ರಾಜ್ಞ ತ್ರಾಹಿ ಚಾಸ್ಮಾನ್ಮಹಾಭಯಾತ್ ॥೧೪॥**

"ಮಹಾಪ್ರಾಜ್ಞನೇ! ನೀನು ಹೋಗಕೂಡದು. ಈ ರಾಜ್ಯದಲ್ಲಿಯೇ ರಾಜನಾಗಿದ್ದುಕೊಂಡು ಮುಂದೆ ಒದಗಬಹುದಾದ ಮಹಾಭಯದಿಂದ ನಮ್ಮನ್ನು ರಕ್ಷಿಸು." ಹೀಗೆ ಪ್ರಾರ್ಥಿಸಿದ ಪ್ರಜೆಗಳನ್ನು ಕುರಿತು ಗಾಧಿಯು ಹೇಳಿದನು :

**ವಿಶ್ವಸ್ಯ ಜಗತೋ ಗೋಪ್ತಾ ಭವಿಷ್ಯತಿ ಸುತೋ ಮಮ ॥೧೫॥**

"ಪ್ರಜೆಗಳೇ! ನನ್ನ ಪುತ್ರನು ಸಂಪೂರ್ಣಜಗತ್ತನ್ನೇ ರಕ್ಷಿಸುವವನಾಗುತ್ತಾನೆ. (ಆದುದರಿಂದ ನಮ್ಮ ರಾಜ್ಯದ ರಕ್ಷಣೆಯ ವಿಷಯದಲ್ಲಿ ನೀವು ಸ್ವಲ್ಪವೂ ಭಯಪಡಬೇಕಾದ ಕಾರಣವಿಲ್ಲ.)"

ಗಾಧಿಯು ಹೀಗೆ ಪ್ರಜೆಗಳಿಗೆ ಆಶ್ವಾಸನೆಯನ್ನಿತ್ತು ವಿಶ್ವಾಮಿತ್ರನನ್ನು ರಾಜಗದ್ದುಗೆಯ ಮೇಲೆ ಕುಳ್ಳಿರಿಸಿ ದೇಹನ್ಯಾಸಮಾಡಿ ಸ್ವರ್ಗಕ್ಕೆ ಹೊರಟು ಹೋದನು. ಮುಂದೆ ವಿಶ್ವಾಮಿತ್ರನು ರಾಜನಾದನು. ಆದರೆ ವಿಶ್ವಾಮಿತ್ರನು ಎಷ್ಟೇ ಪ್ರಯತ್ನಶೀಲನಾದರೂ ಅಖಂಡಭೂಮಂಡಲವನ್ನೂ ಅವನಿಂದ ರಕ್ಷಿಸಲು ಸಾಧ್ಯವಾಗಲೇ ಇಲ್ಲ. ಹೀಗೆಯೇ ಇರುತ್ತಿರಲಾಗಿ ಒಂದು ದಿನ ವಿಶ್ವಾಮಿತ್ರನು ತನ್ನ ರಾಜ್ಯಕ್ಕೆ ರಾಕ್ಷಸರಿಂದ ಮಹಾಭಯವು ಪ್ರಾಪ್ತವಾಗಿದೆಯೆಂಬ ವಾರ್ತೆಯನ್ನು ಕೇಳಿದನು. ಒಡನೆಯೇ ವಿಶ್ವಾಮಿತ್ರನು ಚತುರಂಗ ಬಲವನ್ನು ತೆಗೆದುಕೊಂಡು ರಾಜಧಾನಿಯಿಂದ ಹೊರಟನು. ಬಹಳದೂರ ಹೋದನಂತರ ವಿಶ್ವಾಮಿತ್ರನು ವಸಿಷ್ಠರ ಆಶ್ರಮವನ್ನು ಸೇರಿದನು. ಆಶ್ರಮದ ಸಮೀಪದಲ್ಲಿ ವಿಶ್ವಾಮಿತ್ರನ ಸೈನಿಕರು ಅನೀತಿಯಿಂದ ವರ್ತಿಸಿ ಅಪಚಾರವನ್ನೆಸಗಿದರು. ಆ ವೇಳೆಗೆ ಹೊರಗೆ ಹೋಗಿದ್ದ ವಸಿಷ್ಠರು ಆಶ್ರಮಕ್ಕೆ ಆಗಮಿಸಿದರು. ಆಶ್ರಮದ ಸುತ್ತಲೂ ಇದ್ದ ಸುಂದರವಾದ ಮಹಾವನವು ವಿಶ್ವಾಮಿತ್ರನ ಸೈನಿಕರಿಂದ ಧ್ವಂಸವಾಗಿರುವುದನ್ನು ನೋಡಿ ಮುನಿಶ್ರೇಷ್ಠರಾದ ವಸಿಷ್ಠರು ಬಹಳ ಕೋಪಗೊಂಡರು. ಒಡನೆಯೇ ತಮ್ಮ ಯಜ್ಞಧೇನುವಾದ ನಂದಿನಿಗೆ ಘೋರರೂಪಿಗಳಾದ ಶಬರರನ್ನು

ಸೃಷ್ಟಿಸುವಂತೆ ಹೇಳಿದರು. ವಸಿಷ್ಠರು ಹಾಗೆ ಹೇಳುತ್ತಲೇ ನಂದಿನಿಯು ಘೋರದರ್ಶನರಾದ ಪುರುಷರನ್ನು ಸೃಷ್ಟಿಸಿದಳು. ಶಬರಸೈನಿಕರು ವಿಶ್ವಾಮಿತ್ರನ ಸೈನ್ಯದ ಮೇಲೆ ಆಕ್ರಮಣನಡೆಸಿ ಎಲ್ಲ ಕಡೆಗಳಿಂದಲೂ ಅವರನ್ನು ಧ್ವಂಸಮಾಡಿಬಿಟ್ಟರು. ತನ್ನ ಚತುರಂಗಸೈನ್ಯವೆಲ್ಲವೂ ಶಬರಸೈನ್ಯದಿಂದ ವಿಧ್ವಂಸಿತವಾಗಿ ಪಲಾಯನಮಾಡಿದುದನ್ನು ಕೇಳಿ ಗಾಧಿಯ ಮಗನಾದ ವಿಶ್ವಾಮಿತ್ರನು ತಪೋಬಲವೇ ಹೆಚ್ಚಿನದೆಂದು ಮನಗಂಡವನಾಗಿ ತಪೋನಿರತನಾಗಿಯೇ ಇರಲು ನಿಶ್ಚಯಮಾಡಿದನು. ಅನಂತರ ಕೌಶಿಕನು ಸರಸ್ವತೀನದಿಯ ಶ್ರೇಷ್ಠವಾದ ಆ ಬ್ರಹ್ಮಯೋನಿತೀರ್ಥದ ಸಮೀಪದಲ್ಲಿಯೇ ಏಕಾಗ್ರಚಿತ್ತನಾಗಿ ನಿಯಮೋಪವಾಸಾದಿಗಳಿಂದ ದೇಹವನ್ನು ದಂಡಿಸುತ್ತಾ ತಪಸ್ಸನ್ನು ಮಾಡುತ್ತಿದ್ದನು. ವಿಶ್ವಾಮಿತ್ರನು ಕೆಲವು ದಿನಗಳು ಜಲಾಹಾರನಾಗಿಯೂ, ಕೆಲವು ದಿನಗಳು ವಾಯುಭಕ್ಷನಾಗಿಯೂ, ಕೆಲವು ದಿನಗಳು ಕೇವಲ ತರಗೆಲೆಗಳನ್ನೇ ತಿನ್ನುತ್ತಲೂ ತಪಸ್ಸುಮಾಡುತ್ತಿದ್ದನು. ನೆಲದ ಮೇಲೆಯೇ ಮಲಗುತ್ತಿದ್ದನು. ತಪಸ್ಸಿಗೆ ಸಂಬಂಧಿಸಿದಂತೆ ಇನ್ನೂ ಯಾವ-ಯಾವ ಕಠೋರನಿಯಮಗಳಿದ್ದುವೋ, ಆ ಎಲ್ಲ ನಿಯಮಗಳನ್ನೂ ಪ್ರತ್ಯೇಕ-ಪ್ರತ್ಯೇಕವಾಗಿ ಪರಿಪಾಲಿಸುತ್ತಿದ್ದನು. ದೇವತೆಗಳು ಅವನ ತಪಸ್ಸಿಗೆ ಹಲವು ಬಾರಿ ವಿಘ್ನಗಳನ್ನು ತಂದೊಡ್ಡಿದರು. ಆದರೂ ಮಹಾತ್ಮನಾದ ವಿಶ್ವಾಮಿತ್ರನ ಬುದ್ಧಿಯು ವ್ರತ-ನಿಯಮಾದಿಗಳಿಂದ ಚ್ಯುತವಾಗಲಿಲ್ಲ. ಎಷ್ಟೇ ವಿಘ್ನಗಳು ಬಂದೊದಗುತ್ತಿದ್ದರೂ ವಿಶ್ವಾಮಿತ್ರನು ತಪಸ್ಸನ್ನು ಮುಂದುವರಿಸುತ್ತಲೇ ಇದ್ದನು. ವಿಶ್ವಾಮಿತ್ರನು ಮಹಾಪ್ರಯತ್ನದಿಂದ ಬಹುವಿಧವಾದ ತಪಸ್ಸುಗಳನ್ನು ಮಾಡಿ ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಬೆಳಗಿದನು. ಮಹಾತೇಜಸ್ಸಿನಿಂದ ಕೂಡಿದ್ದ, ವರದನಾದ ಪಿತಾಮಹನು, ಮಹಾತಪೋನಿಷ್ಠನಾಗಿದ್ದ ವಿಶ್ವಾಮಿತ್ರನನ್ನು ನೋಡಿ ವಿಶ್ವಾಮಿತ್ರನಿಗೆ ವರವನ್ನು ದಯಪಾಲಿಸುವುದು ಯುಕ್ತವಾಗಿದೆಯೆಂದು ಭಾವಿಸಿದನು. ವಿಶ್ವಾಮಿತ್ರನು, ಪ್ರತ್ಯಕ್ಷನಾಗಿ ವರವನ್ನು ದಯಪಾಲಿಸಲು ಬಂದ ಬ್ರಹ್ಮನಿಗೆ ಪ್ರಣಾಮಮಾಡಿ ತಾನು ಬ್ರಾಹ್ಮಣನಾಗಬೇಕೆಂಬ ವರವನ್ನು ಬೇಡಿದನು. ಸರ್ವಲೋಕಪಿತಾಮಹನಾದ ಬ್ರಹ್ಮನು ಹಾಗೆಯೇ ಆಗಲೆಂದು ಹೇಳಿ ವಿಶ್ವಾಮಿತ್ರನಿಗೆ ಬ್ರಾಹ್ಮಣತ್ವವನ್ನು ದಯಪಾಲಿಸಿದನು.

ಮಹಾಯಶೋವಂತನಾದ ವಿಶ್ವಾಮಿತ್ರನು ಉಗ್ರವಾದ ತಪಸ್ಸಿನಿಂದ ಬ್ರಾಹ್ಮಣತ್ವವನ್ನು ಪಡೆದು ಕೃತಕೃತ್ಯನಾಗಿ ದೇವೋಪಮನಾಗಿ ಅಖಂಡ ಭೂಮಂಡಲದ ಎಲ್ಲ ಭಾಗಗಳಲ್ಲಿಯೂ ಸಂಚಾರಮಾಡಿದನು. ಅಂತಹ ಉತ್ತಮೋತ್ತಮವಾದ ಬ್ರಹ್ಮಯೋನಿತೀರ್ಥದಲ್ಲಿ ಬಲರಾಮನು ಶ್ರೇಷ್ಠರಾದ ಬ್ರಾಹ್ಮಣರನ್ನು ಸಂಪೂಜಿಸಿ ಅವರಿಗೆ ಹಾಲುಕರೆಯುವ ಹಸುಗಳನ್ನೂ, ವಾಹನಗಳನ್ನೂ, ಹಾಸಿಗೆಗಳನ್ನೂ, ವಸ್ತ್ರಗಳನ್ನೂ, ಧನವನ್ನೂ, ಅಲಂಕಾರವಸ್ತುಗಳನ್ನೂ ದಾನವಾಗಿಕೊಟ್ಟು, ಭಕ್ಷ್ಯ-ಭೋಜ್ಯಾದಿಗಳಿಂದಲೂ, ಶ್ರೇಷ್ಠವಾದ ಪಾನೀಯಗಳಿಂದಲೂ ಉತ್ತಮವಾದ ಭೋಜನವನ್ನು ಮಾಡಿಸಿದನು. ಅನಂತರ ಬಲರಾಮನು ಅಲ್ಲಿಂದ ಮುಂದೆ ದಾಲ್ಭ್ಯಪುತ್ರನಾದ ಬಕನು ತೀವ್ರವಾಗಿ ತಪಸ್ಸುಮಾಡಿದ ಪವಿತ್ರವಾದ ಆಶ್ರಮದ ಸಮೀಪಕ್ಕೆ ಸಪರಿವಾರನಾಗಿ ತೆರಳಿದನು.”

ಳ೦ನೆಯ ಅಧ್ಯಾಯವು ಮುಗಿಯಿತು.

ಳ೧ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಅವಾಕೀರ್ಣ ಮತ್ತು ಯಾಯಾತತೀರ್ಥಗಳ ಮಹಿಮಾ ಪ್ರಸಂಗದಲ್ಲಿ ದಾಲ್ಭ್ಯರ ಕಥೆ : ಯಯಾತಿಯ ಯಜ್ಞದ ವರ್ಣನೆ

ವೈಶಂಪಾಯನರು ಕಥೆಯನ್ನು ಮುಂದುವರಿಸಿ ಹೇಳುತ್ತಾರೆ :

“ಮಹಾರಾಜ! ಬ್ರಹ್ಮಯೋನಿತೀರ್ಥದಿಂದ ಬಲರಾಮನು ಅವಾಕೀರ್ಣತೀರ್ಥಕ್ಕೆ ಪ್ರಯಾಣಮಾಡಿದನು. ಆ ಆಶ್ರಮದಲ್ಲಿದ್ದ ಮಹಾತಪಸ್ವಿಯಾದ, ಧರ್ಮಾತ್ಮನಾದ, ಪ್ರತಾಪವಂತನಾದ ಬಕದಾಲ್ಭ್ಯನು ಅತ್ಯಂತಕೋಪಾವಿಷ್ಟನಾಗಿ ದಾರುಣವಾದ ತಪಸ್ಸಿನಿಂದ ಶರೀರವನ್ನು ಕೃಶಗೊಳಿಸುತ್ತಾ, ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರನ ರಾಜ್ಯವನ್ನೇ ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ಹೋಮಮಾಡಿದನು. ಹಿಂದೆ ನೈಮಿಷಾರಣ್ಯವಾಸಿಗಳಾದ ಋಷಿಗಳು ದ್ವಾದಶವಾರ್ಷಿಕವಾದ ಮಹಾ ಯಜ್ಞವನ್ನು ನಡೆಸುತ್ತಿದ್ದರು. ವಿಶ್ವಜಿದ್ಯಾಗವೂ ಮುಗಿದನಂತರ ಮನನ ಶೀಲರಾದ ಋಷಿಗಳು ಪಾಂಚಾಲದೇಶಕ್ಕೆ ಹೋಗಿ ಅಲ್ಲಿಯ ರಾಜನಿಂದ ಯಜ್ಞದ ದಕ್ಷಿಣಾರ್ಥವಾಗಿ ಧನವನ್ನು ಯಾಚಿಸಿದರು. ಆ ಋಷಿಗಳು

ಪಾಂಚಾಲರಾಜನಿಂದ ಯಜ್ಞದ ದಕ್ಷಿಣಾರ್ಥವಾಗಿ ಬಲಿಷ್ಠವಾಗಿದ್ದ, ರೋಗ ರಹಿತವಾಗಿದ್ದ ಇಪ್ಪತ್ತೊಂದು ಹೋರಿಕರುಗಳನ್ನು ಪಡೆದರು. ಅದನ್ನು ನೋಡಿದ ಬಕದಾಲ್ಭ್ಯನು ಹೋರಿಕರುಗಳನ್ನು ತಂದ ಋಷಿಗಳೊಡನೆ ಹೇಳಿದನು : 'ನೀವೇ ಈ ಪಶುಗಳನ್ನು ಹಂಚಿಕೊಳ್ಳಿರಿ. ನನ್ನ ಪಾಲಿಗೆ ಬರುವ ಪಶುಗಳನ್ನು ನಾನು ಪರಿತ್ಯಜಿಸಿ ಮತ್ತೊಬ್ಬ ಶ್ರೇಷ್ಠನಾದ ರಾಜನ ಬಳಿಗೆ ಹೋಗಿ ಯಜ್ಞದಕ್ಷಿಣೆಯನ್ನು ಯಾಚಿಸುತ್ತೇನೆ'–ಹೀಗೆಂಬುದಾಗಿ ಎಲ್ಲ ಋಷಿಗಳಿಗೂ ಹೇಳಿ ಪ್ರತಾಪವಂತನಾದ, ಬ್ರಾಹ್ಮಣೋತ್ತಮನಾದ ಬಕದಾಲ್ಭ್ಯನು ಧೃತರಾಷ್ಟ್ರನ ಅರಮನೆಗೆ ತೆರಳಿದನು. ದಾಲ್ಭ್ಯನು ಜನೇಶ್ವರನಾದ ಧೃತರಾಷ್ಟ್ರನ ಸಮೀಪಕ್ಕೆ ಹೋಗಿ ಯಜ್ಞದ ದಕ್ಷಿಣೆಗಾಗಿ ಪಶುಗಳನ್ನು ಬೇಡಿದನು. ಅದೇ ಸಮಯಕ್ಕೆ ಸರಿಯಾಗಿ ಧೃತರಾಷ್ಟ್ರನ ಗೋಶಾಲೆಯಲ್ಲಿ ದೈವೇಚ್ಛೆಯಿಂದ ಕೆಲವು ಹಸುಗಳು ಸತ್ತುಹೋಗಿದ್ದುವು. ಆ ಸಮಯದಲ್ಲಿಯೇ ದಾಲ್ಭ್ಯನು ಪಶುಗಳ ಯಾಚನೆಗೆ ಬಂದುದರಿಂದ ರಾಜನಿಗೆ ಕೋಪವು ಉಕ್ಕೇರಿಬಂದಿತು. ಆ ಕೋಪದಲ್ಲಿಯೇ ರಾಜನು ದಾಲ್ಭ್ಯನೊಡನೆ ಹೇಳಿದನು : 'ಬ್ರಹ್ಮಬಂಧೋ! ಪಶುಗಳನ್ನು ನೀನು ಯಾಚಿಸಲು ಬಂದಿರುವೆಯಲ್ಲವೇ? ನೀನು ಇಚ್ಛಿಪಡುವುದಾದರೆ ಸತ್ತುಹೋಗಿರುವ ಈ ಪಶುಗಳನ್ನೇ ಶೀಘ್ರವಾಗಿ ತೆಗೆದುಕೊಂಡುಹೋಗು.' ಧರ್ಮವಿದನಾದ ಬಕದಾಲ್ಭ್ಯನು ಧೃತರಾಷ್ಟ್ರನಾಡಿದ ಕ್ರೂರವಾದ ಮಾತನ್ನು ಕೇಳಿ ಖಿನ್ನನಾಗಿ ಚಿಂತಿಸತೊಡಗಿದನು : 'ಅಯ್ಯೋ! ಏನೆಂದು ಹೇಳಲಿ! ತುಂಬಿದ ಸಭೆಯಲ್ಲಿ ರಾಜನಿಂದ ಇಂತಹ ಕಠೋರವಾದ ಮಾತನ್ನು ಕೇಳಬೇಕಾಯಿತಲ್ಲ!' ಮುಹೂರ್ತಕಾಲ ಹೀಗೆಯೇ ಚಿಂತಿಸುತ್ತಿದ್ದ ಬ್ರಾಹ್ಮಣೋತ್ತಮನಾದ ದಾಲ್ಭ್ಯನು ಕೋಪಾವಿಷ್ಟನಾಗಿ ಧೃತರಾಷ್ಟ್ರ ರಾಜನನ್ನೇ ವಿನಾಶಮಾಡಿಬಿಡಬೇಕೆಂದು ನಿರ್ಧರಿಸಿದನು. ಮುನಿಶ್ರೇಷ್ಠನಾದ ಬಕದಾಲ್ಭ್ಯನು ಸತ್ತುಹೋಗಿದ್ದ ಪಶುಗಳನ್ನೇ ಸ್ವೀಕರಿಸಿ ಅವುಗಳ ಮಾಂಸವನ್ನೇ ಕತ್ತರಿಸಿ ಆ ಮಾಂಸದ ಮೂಲಕವಾಗಿ ಧೃತರಾಷ್ಟ್ರರಾಜನ ರಾಜ್ಯವನ್ನೇ ಯಜ್ಞೇಶ್ವರನಲ್ಲಿ ಹೋಮಮಾಡಿದನು. ಮಹಾತಪಸ್ವಿಯಾದ ಬಕದಾಲ್ಭ್ಯನು ಸರಸ್ವತೀನದಿಯಲ್ಲಿದ್ದ ಅವಾಕೀರ್ಣತೀರ್ಥಕ್ಷೇತ್ರದಲ್ಲಿಯೇ ನಿಯಮಾನುಷ್ಠಾನಪರನಾಗಿದ್ದು ಯಜ್ಞೇಶ್ವರನನ್ನು ಉಜ್ಜ್ವಲಗೊಳಿಸಿ

ಧೃತರಾಷ್ಟ್ರನಿಂದ ತಂದ ಸತ್ತ ಪಶುಗಳ ಮಾಂಸದಿಂದಲೇ ಅವನ ರಾಜ್ಯವನ್ನು ಧಗ-ಧಗಿಸುತ್ತಿದ್ದ ಯಜ್ಞೇಶ್ವರನಲ್ಲಿ ಹೋಮಮಾಡಿದನು.

ಸುದಾರುಣವಾದ ಆ ಮಹಾಯಜ್ಞವು ವಿಧಿಪೂರ್ವಕವಾಗಿ ನಡೆಯುತ್ತಿರಲಾಗಿ, ಧೃತರಾಷ್ಟ್ರನ ರಾಜ್ಯವು ಅನುಕ್ರಮವಾಗಿ ಕ್ಷೀಣಿಸತೊಡಗಿತು. ಕೊಡಲಿಯಿಂದ ಕತ್ತರಿಸಲ್ಪಡುವ ಮಹಾರಣ್ಯವು ಅನುಕ್ರಮವಾಗಿ ವಿನಾಶಹೊಂದುವಂತೆ–ಬಕದಾಲ್ಭ್ಯನು ಸರಸ್ವತೀನದಿಯ ತೀರ್ಥಕ್ಷೇತ್ರದಲ್ಲಿ ಮಾಡುತ್ತಿದ್ದ ಮಾಂಸಹೋಮದಿಂದ ಧೃತರಾಷ್ಟ್ರನ ರಾಜ್ಯವು ಅನುಕ್ರಮವಾಗಿ ಕ್ಷೀಣಿಸುತ್ತಾ ಆಪತ್ತಿನಲ್ಲಿ ಮುಳುಗಿಹೋಯಿತು. ರಾಜ್ಯವು ಅಸ್ತವ್ಯಸ್ತವಾಯಿತು ; ಅಲ್ಲದೇ ಸತ್ತ್ವಹೀನವೂ ಆಯಿತು. ತನ್ನ ರಾಜ್ಯವ್ಯವಸ್ಥೆಯೇ ಅಸ್ತವ್ಯಸ್ತವಾದುದನ್ನು ಕಂಡು ಮನುಜಾಧಿಪನಾದ ಧೃತರಾಷ್ಟ್ರನು ಪರಮ ದುಃಖಿತನಾಗಿ ಚಿಂತಿಸತೊಡಗಿದನು. ಬ್ರಾಹ್ಮಣರೊಡನೆ ಕೂಡಿಕೊಂಡು ಸಂಕಟಪರಿಹಾರಕ್ಕಾಗಿ ಪ್ರಯತ್ನಿಸಿದನು. ಆದರೆ ಅವನು ಮಾಡಿದ ಪ್ರಯತ್ನದಿಂದ (ಪೂಜೆ-ಜಪ-ತಪ-ಹೋಮಗಳಿಂದ) ಯಾವ ಪ್ರಯೋಜನವೂ ಆಗಲಿಲ್ಲ. ರಾಷ್ಟ್ರಕ್ಕೆ ಯಾವ ವಿಧವಾದ ಶ್ರೇಯಸ್ಸೂ ಉಂಟಾಗಲಿಲ್ಲ. ಯಥಾಪೂರ್ವವಾಗಿ ದಿನ-ದಿನಕ್ಕೂ ರಾಷ್ಟ್ರವು ಕ್ಷೀಣಿಸುತ್ತಲೇ ಇದ್ದಿತು. ಆಗ ಧೃತರಾಷ್ಟ್ರರಾಜನೂ ಮತ್ತು ಬ್ರಾಹ್ಮಣರೂ ಅತ್ಯಂತಖಿನ್ನರಾದರು. ಅನೇಕ ಪ್ರಕಾರದ ಪ್ರಯತ್ನಗಳಿಂದಲೂ ರಾಷ್ಟ್ರವನ್ನು ಆಪತ್ತಿನಿಂದ ತಪ್ಪಿಸಲು ಸಾಧ್ಯವಾಗದೇ ಇದ್ದಾಗ ಧೃತರಾಷ್ಟ್ರರಾಜನು *ಪ್ರಾಶ್ನಿಕರನ್ನು ಕರೆಯಿಸಿ ತನ್ನ ರಾಷ್ಟ್ರವು ಅನುಕ್ರಮವಾಗಿ ಕ್ಷಯಿಸಿಹೋಗುತ್ತಿರುವುದಕ್ಕೆ ಕಾರಣವೇನೆಂದು ಪ್ರಶ್ನಿಸಿದನು. ಪ್ರಾಶ್ನಿಕರು ಗುಣಿಸಿ, ಭಾಗಿಸಿ, ಕೂಡಿ, ಕಳೆದು ಉತ್ತರವನ್ನು ಹೇಳಿದರು : “ಮಹಾರಾಜ! ನೀನು ಪಶುಗಳನ್ನು ಯಾಚಿಸಲು ಬಂದ ಬಕದಾಲ್ಭ್ಯಮುನಿಯನ್ನು ಅಪಮಾನಗೊಳಿಸಿರುವೆ. ಸತ್ತುಹೋದ ಪಶುಗಳನ್ನು ತೆಗೆದುಕೊಂಡುಹೋಗಲು ಅವನಿಗೆ ನೀನು ತುಂಬಿದ ಸಭೆಯಲ್ಲಿ ಹೇಳಿದೆ. ಕುಪಿತನಾದ ಋಷಿಯು ಆ ಸತ್ತ ಪಶು

---

*ಪ್ರಾಶ್ನಿಕರು (ಜ್ಯೋತಿಶ್ಶಾಸ್ತ್ರದಲ್ಲಿ ಪ್ರಶ್ನಭಾಗವನ್ನು ಬಲ್ಲವರು.) ಪ್ರಶ್ನೆಗಳನ್ನು ಕೇಳಿ ಪರಿಹಾರ ಸೂಚಿಸುವವರು. ಪ್ರಶ್ನೆಗಳನ್ನು ಕೇಳಿ ಕಷ್ಟದ ವಿವರಗಳನ್ನು ತಿಳಿದುಕೊಂಡು ಅದರ ಮೂಲಕಾರಣಗಳನ್ನು ಹೇಳುವವರು.

ಗಳಿಂದಲೇ ಮಾಂಸವನ್ನು ಕಿತ್ತು ನಿನ್ನ ರಾಷ್ಟ್ರದ ವಿನಾಶವನ್ನು ಸಂಕಲ್ಪಿಸಿ ಹೋಮಮಾಡುತ್ತಿದ್ದಾನೆ. ಅವನು ನಿನ್ನ ರಾಷ್ಟ್ರವನ್ನೇ ಮಾಂಸದ ಮೂಲಕವಾಗಿ ಹೋಮಮಾಡುತ್ತಿದ್ದಾನೆ. ಆದುದರಿಂದಲೇ ನಿನ್ನ ರಾಜ್ಯವು ಅನುಕ್ರಮವಾಗಿ ವಿನಾಶಹೊಂದುತ್ತಿದೆ. ಇವುಗಳೆಲ್ಲವೂ ಆ ಮಹಾಮುನಿಯ ತಪಸ್ಸಿನ ಪ್ರಭಾವದಿಂದಲೇ ನಡೆಯುತ್ತಿವೆ. ನಿನ್ನ ರಾಷ್ಟ್ರವಿಂದು ಬಹಳವಾಗಿ ಕ್ಷಯಿಸುತ್ತಿದೆ. ಸರಸ್ವತೀನದಿಯ ತೀರದಲ್ಲಿರುವ ಲತೆಯ ಪೊದರಿನಲ್ಲಿ ಕುಳಿತು ನಿನ್ನ ರಾಷ್ಟ್ರದ ವಿನಾಶಾರ್ಥವಾಗಿ ಹೋಮಮಾಡುತ್ತಿರುವ ಋಷಿಯನ್ನು ಪ್ರಸನ್ನಗೊಳಿಸು.” ಪ್ರಾಶ್ನಿಕರು ಹೀಗೆ ಹೇಳಿದೊಡನೆಯೇ ಧೃತರಾಷ್ಟ್ರರಾಜನು ಸರಸ್ವತೀತೀರದಲ್ಲಿದ್ದ ಅವಾಕೀರ್ಣತೀರ್ಥಕ್ಷೇತ್ರಕ್ಕೆ ಹೋಗಿ ಅಲ್ಲಿ ಮಹಾಯಾಗದಲ್ಲಿ ತೊಡಗಿದ್ದ ಬಕದಾಲ್ಭ್ಯನ ಬಳಿಗೆ ಹೋಗಿ ಅಡ್ಡಬಿದ್ದು ನಮಸ್ಕಾರಮಾಡಿ ಬದ್ಧಾಂಜಲಿಯಾಗಿ ಹೇಳಿದನು :

**ಪ್ರಸಾದಯೇ ತ್ವಾಂ ಭಗವನ್ನಪರಾಧಂ ಕ್ಷಮಸ್ವ ಮೇ ।**
**ಮಮ ದೀನಸ್ಯ ಲುಬ್ಧಸ್ಯ ಮೌರ್ಖ್ಯೇಣ ಹತಚೇತಸಃ ।**
**ತ್ವಂ ಗತಿಸ್ತ್ವಂ ಚ ಮೇ ನಾಥಃ ಪ್ರಸಾದಂ ಕರ್ತುಮರ್ಹಸಿ ॥೨೪॥**

“ಭಗವನ್! ನನ್ನ ಅಪರಾಧವನ್ನು ಕ್ಷಮಿಸು. ನಿನ್ನನ್ನು ಕೈಮುಗಿದು ಕೇಳಿಕೊಳ್ಳುತ್ತೇನೆ. ಪ್ರಸನ್ನನಾಗು. ದೀನನಾದ, ಲುಬ್ಧನಾದ, ಮೂರ್ಖತ್ವದಿಂದಾಗಿ ಬುದ್ಧಿಗೆಟ್ಟು ಮಾಡಿರುವ ನನ್ನ ಅಪರಾಧವನ್ನು ಕ್ಷಮಿಸು. ನೀನೇ ನನಗೆ ಆಶ್ರಯನು. ನೀನೇ ನನ್ನ ಸ್ವಾಮಿಯು. ನನ್ನ ಮೇಲೆ ಕೃಪೆದೋರು.”

ಮಹಾರಾಜ! ಹೀಗೆ ಕೇಳಿಕೊಂಡು ಗೋಳಿಡುತ್ತಿದ್ದ, ಶೋಕದಿಂದ ಪರಿತಪ್ತವಾದ ಬುದ್ಧಿಯಿಂದ ಕೂಡಿದ್ದ ರಾಜನನ್ನು ನೋಡಿ ಬಕದಾಲ್ಭ್ಯ ಮುನಿಗೆ ಕೃಪೆಯುಂಟಾಯಿತು. ಧೃತರಾಷ್ಟ್ರನ ರಾಜ್ಯವನ್ನು ವಿನಾಶದಿಂದ ವಿಮುಕ್ತಿಗೊಳಿಸಿದನು. ಋಷಿಯು ಕೋಪವನ್ನು ತ್ಯಜಿಸಿ, ಪ್ರಸನ್ನನಾಗಿ ರಾಷ್ಟ್ರವಿನಾಶದ ವಿಮುಕ್ತಿಗಾಗಿ ಯಜ್ಞೇಶ್ವರನಲ್ಲಿ ಪುನಃ ಹೋಮ ಮಾಡಿದನು. ಧೃತರಾಷ್ಟ್ರನ ರಾಷ್ಟ್ರವನ್ನು ವಿನಾಶದಿಂದ ಪಾರುಮಾಡಿ ಯಥೇಚ್ಛವಾಗಿ ಪಶುಗಳನ್ನು ಪ್ರತಿಗ್ರಹಿಸಿ ಹೃಷ್ಟಾತ್ಮನಾಗಿ ಪುನಃ

ನೈಮಿಷಾರಣ್ಯವನ್ನು ಸೇರಿದನು. ಧರ್ಮಾತ್ಮನಾದ ಧೃತರಾಷ್ಟ್ರನೂ ಸಮಾಧಾನಹೊಂದಿದವನಾಗಿ ಸಮೃದ್ಧವಾಗಿದ್ದ ತನ್ನ ನಗರಕ್ಕೆ ಪ್ರಯಾಣ ಮಾಡಿದನು.

ಅದೇ ತೀರ್ಥಕ್ಷೇತ್ರದಲ್ಲಿಯೇ ಉದಾರಬುದ್ಧಿಯಾದ, ದೇವಗುರುವಾದ ಬೃಹಸ್ಪತಿಯು ಅಸುರರ ವಿನಾಶಾರ್ಥವಾಗಿಯೂ–ದೇವತೆಗಳ ಉನ್ನತಿಗಾಗಿಯೂ (ಆಭಿಚಾರಿಕವಾದ) ಯಜ್ಞವನ್ನು ಮಾಡಿ ಮಾಂಸಗಳಿಂದಲೇ ಆಹುತಿಯನ್ನು ಕೊಟ್ಟನು. ತತ್ಫಲವಾಗಿ ಅಸುರರು ಕ್ಷೀಣಿಸತೊಡಗಿದರು. ಯುದ್ಧದಲ್ಲಿ ವಿಜಯೋಲ್ಲಸಿತರಾದ ದೇವತೆಗಳಿಂದ ಅಸುರರು ಭಗ್ನರಾದರು.

ಮಹಾಯಶೋವಂತನಾದ, ಮಹಾಬಾಹುವಾದ ಬಲರಾಮನು ಆ ಅವಾಕೀರ್ಣತೀರ್ಥಕ್ಷೇತ್ರದಲ್ಲಿಯೂ ಬ್ರಾಹ್ಮಣರಿಗೆ ವಿಧಿಪೂರ್ವಕವಾಗಿ ಆನೆಗಳನ್ನೂ, ಕುದುರೆಗಳನ್ನೂ, ಹೇಸರಗತ್ತೆಗಳಿಂದ ಸಜ್ಜಾಗಿರುವ ರಥಗಳನ್ನೂ, ಬಹುಮೂಲ್ಯವಾದ ರತ್ನಗಳನ್ನೂ, ಧನವನ್ನೂ, ಧಾನ್ಯವನ್ನೂ ದಾನವಾಗಿ ಕೊಟ್ಟು ಯಾಯಾತತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಿದನು.

ಜನಮೇಜಯ! ಹಿಂದೆ ನಹುಷನ ಮಗನಾದ ಯಯಾತಿಯು ಆ ಕ್ಷೇತ್ರದಲ್ಲಿಯೇ ಯಜ್ಞಮಾಡಿದನು. ಆ ಮಹಾಯಜ್ಞದ ಸಲುವಾಗಿ ಸರಸ್ವತಿಯು ಹಾಲನ್ನೂ ಮತ್ತು ತುಪ್ಪವನ್ನೂ ನೀರಿನ ರೂಪದಲ್ಲಿ ಹರಿಸಿದಳು. ಪುರುಷವ್ಯಾಘ್ರನಾದ, ಪೃಥಿವೀಪತಿಯಾದ ಯಯಾತಿಯು ಆ ಮಹಾಕ್ಷೇತ್ರದಲ್ಲಿ ಯಾಗಮಾಡಿ ಪ್ರಮುದಿತನಾಗಿ ಊರ್ಧ್ವಲೋಕಗಳಿಗೆ ಹೋದನು. ಅಲ್ಲಿ ಪುಷ್ಕಳವಾದ ಪುಣ್ಯಲೋಕಗಳನ್ನು ಪಡೆದುಕೊಂಡನು. ಮತ್ತೊಂದು ವಿಶೇಷವೇನೆಂದರೆ : ಪ್ರಭುವಾದ ಯಯಾತಿಯು ಸರಸ್ವತೀನದಿಯ ತೀರದಲ್ಲಿ ಯಜ್ಞಮಾಡುತ್ತಿದ್ದಾಗ ರಾಜನ ಶ್ರೇಷ್ಠವಾದ ಔದಾರ್ಯವನ್ನೂ ಮತ್ತು ತನ್ನಲ್ಲಿಟ್ಟಿದ್ದ ಅಪಾರವಾದ ಭಕ್ತಿಯನ್ನೂ ಮನಗಂಡ ಸರಸ್ವತಿಯು ಅವನ ಯಜ್ಞದಲ್ಲಿ ಭಾಗವಹಿಸಿದ್ದ ಎಲ್ಲ ಬ್ರಾಹ್ಮಣರಿಗೂ ಅವರವರು ಇಚ್ಛಿಸಿದ ಸಕಲಕಾಮನೆಗಳನ್ನೂ ದಯಪಾಲಿಸಿದಳು. ಯಯಾತಿಯಿಂದ ಆಹ್ವಾನಿತರಾಗಿ ಯಜ್ಞಮಂಟಪಕ್ಕೆ ಯಾರು-ಯಾರು ಬಂದು ಎಲ್ಲೆಲ್ಲಿ ತಂಗಿದ್ದರೋ–ಅವರೆಲ್ಲರಿಗೂ ಅಲ್ಲಲ್ಲಿಯೇ–ನದಿಗಳಲ್ಲಿ ಶ್ರೇಷ್ಠಳಾದ ಸರಸ್ವತಿಯು ಪ್ರತ್ಯೇಕ-

ಪ್ರತ್ಯೇಕವಾದ ಮನೆಗಳನ್ನೂ, ಹಾಸಿಗೆಗಳನ್ನೂ, ಆಸನಗಳನ್ನೂ ಒದಗಿಸಿ ಕೊಟ್ಟಳು. ಷಡ್ರಸೋಪೇತವಾದ ಭೋಜನವನ್ನು ಮಾಡಿಸಿದಳು. ನಾನಾ ವಿಧವಾದ ದಾನಗಳನ್ನೂ ಕೊಟ್ಟಳು. ಅವುಗಳೆಲ್ಲವನ್ನೂ ಸ್ವೀಕರಿಸಿದ ಬ್ರಾಹ್ಮಣರು ಆ ಉತ್ತಮದಾನಗಳೆಲ್ಲವನ್ನೂ ಯಯಾತಿರಾಜನೇ ಕೊಡಲು ವ್ಯವಸ್ಥೆಮಾಡಿರುವನೆಂದು ಭಾವಿಸಿ ಪರಮಪ್ರೀತರಾಗಿ ಶುಭಾಶಂಸನೆಗಳನ್ನು ಹೇಳಿ ಯಯಾತಿಯನ್ನು ಬಹಳವಾಗಿ ಸ್ತೋತ್ರಮಾಡಿದರು. ಗಂಧರ್ವರೂ-ದೇವತೆಗಳೂ ಯಜ್ಞದ ಸಾಮಗ್ರಿಗಳನ್ನು ನೋಡಿ ಪರಮಪ್ರೀತರಾದರು. ಯಜ್ಞಕ್ಕಾಗಿ ಸಂಗ್ರಹಿಸಿದ್ದ ಅಪಾರವಾದ ಸಂಪತ್ತನ್ನು (ಯಜ್ಞಸಮೃದ್ಧಿಯನ್ನು) ನೋಡಿ ಮನುಷ್ಯರೂ ವಿಸ್ಮಿತರಾದರು.

ತತಸ್ತಾಲಕೇತುರ್ಮಹಾಧರ್ಮಕೇತು-
ರ್ಮಹಾತ್ಮಾ ಕೃತಾತ್ಮಾ ಮಹಾದಾನನಿತ್ಯಃ ।
ವಸಿಷ್ಠಾಪವಾಹಂ ಮಹಾಭೀಮವೇಗಂ
ಧೃತಾತ್ಮಾ ಜಿತಾತ್ಮಾ ಸಮಭ್ಯಾಜಗಾಮ ॥೪೦॥

ಅನಂತರ ಧರ್ಮಕೇತುವಾದ, ತಾಲಧ್ವಜನಾದ, ಮಹಾತ್ಮನಾದ, ಕೃತಾತ್ಮನಾದ, ಧೃತಾತ್ಮನಾದ, ಜಿತಾತ್ಮನಾದ, ನಿತ್ಯವೂ ದಾನಮಾಡುವ ಸ್ವಭಾವವುಳ್ಳ ಬಲರಾಮನು ಯಾಯಾತತೀರ್ಥಕ್ಷೇತ್ರದಿಂದ ಹೊರಟು ಭಯಂಕರವಾದ ಪ್ರವಾಹವೇಗದಿಂದ ಕೂಡಿದ್ದ ಸರಸ್ವತೀನದಿಯಲ್ಲಿದ್ದ ವಸಿಷ್ಠಾಪವಾಹವೆಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಿದನು."

ಛ೧ನೆಯ ಅಧ್ಯಾಯವು ಮುಗಿಯಿತು.

ಛ೨ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ವಸಿಷ್ಠಾಪವಾಹತೀರ್ಥದ ಉತ್ಪತ್ತಿ: ವಿಶ್ವಾಮಿತ್ರನ ಕ್ರೋಧ: ವಸಿಷ್ಠರ ಸಹನಶೀಲತೆ

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ಬ್ರಾಹ್ಮಣೋತ್ತಮರೇ! ವಸಿಷ್ಠಾಪವಾಹತೀರ್ಥವಿರುವ ಸ್ಥಳದಲ್ಲಿ ಸರಸ್ವತೀನದಿಯು ಭಯಂಕರವೇಗದಿಂದ ಪ್ರವಹಿಸಲು ಕಾರಣವೇನು? ಎಲ್ಲ

ಸರಿತ್ತುಗಳಿಗೂ ಶ್ರೇಷ್ಠಳಾದ ಸರಸ್ವತೀನದಿಯು ವಸಿಷ್ಠಮಹರ್ಷಿಗಳನ್ನು ಏಕೆ ತೇಲಿಸಿಕೊಂಡು ಹೋದಳು? ಯಾವ ಕಾರಣದಿಂದ ವಸಿಷ್ಠ-ವಿಶ್ವಾಮಿತ್ರರ ನಡುವೆ ವೈರವುಂಟಾಯಿತು? ಮಹಾಪ್ರಾಜ್ಞರೇ! ಈ ಎಲ್ಲ ವಿಷಯಗಳನ್ನೂ ನನಗೆ ವಿಶದವಾಗಿ ಹೇಳಿರಿ. ನಿಮ್ಮ ಮಾತನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯೆಂಬುದೇ ಇಲ್ಲ."

"ಜನಮೇಜಯಮಹಾರಾಜ! ತಪಸ್ಸಿನಲ್ಲಿ ಪರಸ್ಪರವಾಗಿ ಸ್ಪರ್ಧೆಯುಂಟಾದುದರಿಂದ ವಿಶ್ವಾಮಿತ್ರನಿಗೂ ಮತ್ತು ವಿಪ್ರರ್ಷಿಗಳಾದ ವಸಿಷ್ಠರಿಗೂ ಅತಿತೀಕ್ಷ್ಣವಾದ ವೈರವು ಬೆಳೆಯಿತು. ಸರಸ್ವತೀನದಿಯಲ್ಲಿದ್ದ ಸ್ಥಾಣುತೀರ್ಥದ ಪೂರ್ವದಿಕ್ಕಿನ ದಡದಲ್ಲಿ ವಸಿಷ್ಠರ ದೊಡ್ಡ ಆಶ್ರಮವಿದ್ದಿತು. ಧೀಮಂತನಾದ ವಿಶ್ವಾಮಿತ್ರನ ಆಶ್ರಮವು ಪಶ್ಚಿಮದಿಕ್ಕಿನ ದಡದಲ್ಲಿದ್ದಿತು. ಹಿಂದೆ ಆ ತೀರ್ಥದ ಸಮೀಪದಲ್ಲಿಯೇ ಸ್ಥಾಣುವು ಶ್ರೇಷ್ಠವಾದ ತಪಸ್ಸನ್ನು ಮಾಡಿದ್ದನು. ಮನೀಷಿಗಳಾದ (ವಿದ್ವಾಂಸರಾದ) ಪುರುಷರು ಸ್ಥಾಣುವು ಮಾಡಿದ ಘೋರತಪಸ್ಸಿನ ವರ್ಣನೆಯನ್ನು ಈಗಲೂ ಮಾಡುತ್ತಾರೆ. ಸ್ಥಾಣುವು ಅಲ್ಲಿಯೇ ಯಾಗಮಾಡಿ ಸರಸ್ವತಿಯನ್ನು ಸಂಪೂಜಿಸಿ ಆ ತೀರ್ಥವನ್ನು ಸ್ಥಾಪಿಸಿದನು. ಆದುದರಿಂದಲೇ ಆ ತೀರ್ಥಕ್ಕೆ ಸ್ಥಾಣುತೀರ್ಥವೆಂದು ಹೆಸರಾಯಿತು. ಆ ಸ್ಥಾಣುತೀರ್ಥದ ಸಮೀಪದಲ್ಲಿಯೇ ದೇವತೆಗಳು ದೇವಶತ್ರುಗಳ ವಿನಾಶಕನಾದ ಸ್ಕಂದನನ್ನು ಮಹಾಸೇನಾಪತಿಯ ಸ್ಥಾನದಲ್ಲಿ ಕುಳ್ಳಿರಿಸಿ ಅಭಿಷೇಚಿಸಿದರು. ಮಹಾಮುನಿಯಾದ ವಿಶ್ವಾಮಿತ್ರನು ಆ ಸಾರಸ್ವತತೀರ್ಥದಲ್ಲಿ ಉಗ್ರವಾದ ತಪಸ್ಸನ್ನು ಮಾಡಿ ವಸಿಷ್ಠರನ್ನು ವಿಚಲಿತರನ್ನಾಗಿ ಮಾಡಿದನು. ಆ ಕಥೆಯನ್ನು ಹೇಳುವೆನು ; ಕೇಳು :

ವಸಿಷ್ಠ-ವಿಶ್ವಾಮಿತ್ರರಿಬ್ಬರೂ ತಪೋಧನರಾಗಿದ್ದರು. ಅವರು ತಪಶ್ಚರಣೆಯಲ್ಲಿಯೇ ಪರಸ್ಪರವಾಗಿ ಸ್ಪರ್ಧಿಸುತ್ತಾ ಅತ್ಯಂತಕಠೋರವಾದ ತಪಸ್ಸಿನಲ್ಲಿ ಇಬ್ಬರೂ ಅನುದಿನವೂ ತೊಡಗಿರುತ್ತಿದ್ದರು. ಆ ಇಬ್ಬರಲ್ಲಿ ಯದ್ಯಪಿ ವಿಶ್ವಾಮಿತ್ರನು ಅಧಿಕವಾಗಿ ತಪಸ್ಸುಮಾಡುತ್ತಿದ್ದರೂ ವಸಿಷ್ಠರಲ್ಲಿದ್ದ ದಿವ್ಯವಾದ ಬ್ರಹ್ಮತೇಜಸ್ಸನ್ನು ನೋಡಿ ಚಿಂತಾಮಗ್ನನಾದನು. ಧರ್ಮನಿತ್ಯನಾದ ವಿಶ್ವಾಮಿತ್ರನ ಮನಸ್ಸಿನಲ್ಲಿ ಈ ವಿಧವಾದ ವಿಚಾರಧಾರೆಯು ಸುಳಿದಾಡಿತು :

**ಇಯಂ ಸರಸ್ವತೀ ತೂರ್ಣಂ ಮತ್ಸಮೀಪಂ ತಪೋಧನಮ್ ।**
**ಆನಯಿಷ್ಯತಿ ವೇಗೇನ ವಸಿಷ್ಠಂ ತಪತಾಂ ವರಮ್ ।**
**ಇಹಾಗತಂ ದ್ವಿಜಶ್ರೇಷ್ಠಂ ಹನಿಷ್ಯಾಮಿ ನ ಸಂಶಯಃ ॥೧೨॥**

"ಈ ಸರಸ್ವತಿಯು ತಪೋಧನನಾದ ವಸಿಷ್ಠನನ್ನು ತನ್ನ ಪ್ರವಾಹ ವೇಗದಲ್ಲಿ ಕೊಚ್ಚಿಸಿಕೊಂಡು ನನ್ನ ಸಮೀಪಕ್ಕೆ ಬಹಳ ಶೀಘ್ರವಾಗಿ ತರುತ್ತಾಳೆ. ಇಲ್ಲಿಗೆ ಬಂದನಂತರ ಆ ವಿಪ್ರಶ್ರೇಷ್ಠನನ್ನು ನಾನು ಸಂಹರಿಸುವೆನು. ಇದರಲ್ಲಿ ಸಂಶಯವೇ ಇಲ್ಲ."

ಜನಮೇಜಯ! ಮಹಾಮುನಿಯಾದ ಭಗವಾನ್ ವಿಶ್ವಾಮಿತ್ರನು ಹೀಗೆ ನಿಶ್ಚಯಿಸಿ ಕೋಪದಿಂದ ಕೆಂಗಣ್ಣನಾಗಿ ಎಲ್ಲ ಸರಿತ್ತುಗಳಿಗೂ ಶ್ರೇಷ್ಠಳಾದ ಸರಸ್ವತಿಯನ್ನು ಸ್ಮರಿಸಿಕೊಂಡನು. ವಿಶ್ವಾಮಿತ್ರನು ತನ್ನನ್ನು ಸ್ಮರಿಸಿ ಕೊಳ್ಳುತ್ತಿರುವನೆಂಬುದನ್ನೂ ಮತ್ತು ಅವನು ಸ್ಮರಿಸುತ್ತಿರುವುದಕ್ಕೆ ಕಾರಣ ವನ್ನೂ ತಿಳಿದುಕೊಂಡ ಸರಸ್ವತಿಯು ವ್ಯಾಕುಲೆಯಾದಳು. ವಿಶ್ವಾಮಿತ್ರನು ಮಹಾವೀರ್ಯನೆಂಬುದನ್ನೂ ಮತ್ತು ಅವನು ಈ ಸಮಯದಲ್ಲಿ ಮಹಾಕೋಪಿಷ್ಠನಾಗಿರುವನೆಂಬುದನ್ನೂ ಸರಸ್ವತಿಯು ಅರಿತುಕೊಂಡಳು. ಸರಸ್ವತಿಯು ಗಡ-ಗಡನೆ ನಡುಗುತ್ತಾ ಕುಂದಿದ ಮುಖಭಾವದಿಂದ ಕೂಡಿದವಳಾಗಿ ಬದ್ಧಾಂಜಲಿಯಾಗಿ ಮುನಿಶ್ರೇಷ್ಠನಾದ ವಿಶ್ವಾಮಿತ್ರನನ್ನು ಸಮೀಪಿಸಿ ನಿಂತಳು. ವೀರನಾದ ಪತಿಯನ್ನು ಕಳೆದುಕೊಂಡ ಸ್ತ್ರೀಯಂತೆ–ಸರಸ್ವತಿಯು ಅತ್ಯಂತದುಃಖಿತಳಾಗಿದ್ದಳು. ಮುನಿಶ್ರೇಷ್ಠನಾದ ವಿಶ್ವಾಮಿತ್ರ ನನ್ನು–'ನಾನು ನಿನಗೆ ಏನು ಮಾಡಿಕೊಡಬೇಕಾಗಿದೆ? ಹೇಳು'–ಎಂದು ಪ್ರಾರ್ಥಿಸಿಕೊಂಡಳು. ಅದಕ್ಕೆ ಉತ್ತರವಾಗಿ ಕ್ರುದ್ಧನಾಗಿದ್ದ ವಿಶ್ವಾಮಿತ್ರ ಮುನಿಯು–"ವಸಿಷ್ಠನನ್ನು ಶೀಘ್ರಾತಿಶೀಘ್ರವಾಗಿ ನಾನಿರುವ ಈ ಸ್ಥಳಕ್ಕೆ ಕೊಚ್ಚಿಸಿಕೊಂಡು ಬಾ. ನಾನಿಂದು ಅವನನ್ನು ಸಂಹಾರಮಾಡಿಬಿಡುತ್ತೇನೆ"–ಎಂದು ಹೇಳಿದನು. ವಿಶ್ವಾಮಿತ್ರನ ಆ ಮಾತನ್ನು ಕೇಳಿ ಸರಸ್ವತಿಯು ಅತ್ಯಂತ ದುಃಖಿತೆಯಾದಳು. ಕಮಲದಳಸದೃಶವಾದ ಕಣ್ಣುಗಳನ್ನು ಹೊಂದಿದ್ದ ಸರಸ್ವತಿಯು ಕೈಗಳೆರಡನ್ನೂ ಜೋಡಿಸಿಕೊಂಡು ನಿಂತಳು. ಸುಂಟರಗಾಳಿಯ ಬಡಿತಕ್ಕೆ ಸಿಕ್ಕಿದ ಲತೆಯೋಪಾದಿಯಲ್ಲಿ ಭೀತಳಾಗಿದ್ದ ಸರಸ್ವತಿಯು ಗಡ-

ಗಡನೆ ನಡುಗತೊಡಗಿದಳು. ಅವಳ ಅಂತಹ ಸ್ಥಿತಿಯನ್ನು ನೋಡಿ ವಿಶ್ವಾಮಿತ್ರನು ಪುನಃ ಹೇಳಿದನು :

"ಅವನನ್ನಿಲ್ಲಿಗೆ ತೇಲಿಸಿಕೊಂಡು ಬರುವುದರಲ್ಲಿ ಯಾವ ಯುಕ್ತಾಯುಕ್ತತೆಗಳನ್ನೂ ವಿಚಾರಿಸಹೋಗದೇ ಅವನನ್ನು ಈಗಲೇ ನನ್ನ ಸಮೀಪಕ್ಕೆ ಕರೆತರಲೇಬೇಕು."

ಸರಸ್ವತಿಯು ಆ ಮಾತನ್ನು ಕೇಳಿ ವಿಶ್ವಾಮಿತ್ರನು ಸ್ವತಃ ಮಾಡಲಿಚ್ಛಿಸಿರುವ ಪಾಪಕಾರ್ಯಕ್ಕೆ ತನ್ನ ನೆರವನ್ನು ಅಪೇಕ್ಷಿಸುತ್ತಿರುವನೆಂಬುದನ್ನು ತಿಳಿದುಕೊಂಡಳು. ವಸಿಷ್ಠರು ಜಗತ್ತಿನಲ್ಲಿಯೇ ಅಪ್ರತಿಮವಾದ ತಪಃಪ್ರಭಾವವುಳ್ಳವರೆಂಬುದನ್ನೂ ಸರಸ್ವತಿಯು ಅರಿತಿದ್ದಳು. ಅನಂತರ ಅವಳು ವಸಿಷ್ಠರ ಬಳಿಗೆ ಹೋಗಿ ವಿಶ್ವಾಮಿತ್ರನು ಹೇಳಿದುದೆಲ್ಲವನ್ನೂ ವಸಿಷ್ಠರಿಗೆ ತಿಳಿಸಿದಳು.

ಆ ಸಮಯದಲ್ಲಿ ಸರಸ್ವತಿಯು ತನ್ನನ್ನು ಇಬ್ಬರೂ ಶಪಿಸಿಬಿಡುವರೆಂದು ಭಯಪಟ್ಟುಕೊಂಡು ಪುನಃ-ಪುನಃ ನಡುಗುತ್ತಿದ್ದಳು. ವಿಶ್ವಾಮಿತ್ರನು ಕೊಡಬಹುದಾದ ಮಹಾಶಾಪದ ವಿಷಯವಾಗಿಯೇ ಸರಸ್ವತಿಯು ಬಹಳವಾಗಿ ಚಿಂತಿಸುತ್ತಿದ್ದಳು. ವಿಶ್ವಾಮಿತ್ರನಿಗೇ ಅವಳು ಬಹಳವಾಗಿ ಹೆದರಿದ್ದಳು.

ಕೃಶಳಾಗಿದ್ದ, ವಿವರ್ಣಳಾಗಿದ್ದ, ಚಿಂತಾಮಗ್ನಳಾಗಿದ್ದ ಸರಸ್ವತಿಯನ್ನು ನೋಡಿ ಮಾನವಶ್ರೇಷ್ಠರಾದ ಧರ್ಮಾತ್ಮರಾದ ವಸಿಷ್ಠರು ಹೇಳಿದರು :

**ಪಾಹ್ಯಾತ್ಮಾನಂ ಸರಿಚ್ಛ್ರೇಷ್ಠೇ ವಹ ಮಾಂ ಶೀಘ್ರಗಾಮಿನೀ ।**
**ವಿಶ್ವಾಮಿತ್ರಃ ಶಪೇದ್ಧಿ ತ್ವಾಂ ಮಾ ಕೃಥಾಸ್ತ್ವಂ ವಿಚಾರಣಾಮ್ ॥**

"ಸುರಶ್ರೇಷ್ಠಳೇ! ನೀನೀಗ ಮೊದಲು ಆತ್ಮಸಂರಕ್ಷಣೆಯನ್ನು ಮಾಡಿಕೊಳ್ಳಬೇಕು. ವಿಶ್ವಾಮಿತ್ರನು ಹೇಳಿದಂತೆ ಶೀಘ್ರಗಾಮಿನಿಯಾಗಿ ನನ್ನನ್ನು ನಿನ್ನ ಪ್ರವಾಹದ ಮೂಲಕವಾಗಿ ಅವನಿರುವೆಡೆಗೆ ತೇಲಿಸಿಕೊಂಡು ಹೋಗು. ಹಾಗೆ ಮಾಡದಿದ್ದರೆ ವಿಶ್ವಾಮಿತ್ರನು ನಿನ್ನನ್ನು ಶಪಿಸಿಬಿಡುವನು.

ಇಂತಹ ಸಂದರ್ಭದಲ್ಲಿ ನೀನು ಕಾರ್ಯಾಕಾರ್ಯವಿವೇಚನೆಯನ್ನು ಮಾಡುವ ಅಗತ್ಯವಿಲ್ಲ."

ಜನಮೇಜಯ! ಕೃಪಾಶೀಲರಾದ ವಸಿಷ್ಠರ ಮಾತುಗಳನ್ನು ಕೇಳಿ ಸರಸ್ವತಿಯು–'ಈ ಸಮಯದಲ್ಲಿ ನಾನು ಹೇಗೆ ವರ್ತಿಸುವುದರಿಂದ ಎಲ್ಲರಿಗೂ ಒಳ್ಳೆಯದಾದೀತು?'–ಎಂಬುದನ್ನೇ ಪುನಃ ಯೋಚಿಸ ತೊಡಗಿದಳು. ಅವಳ ಮನಸ್ಸಿನ ವಿಚಾರಧಾರೆಯು ಹೀಗಿದ್ದಿತು : 'ವಸಿಷ್ಠರು ನನ್ನ ವಿಷಯದಲ್ಲಿ ಅತಿಯಾದ ದಯೆತೋರಿದ್ದಾರೆ. ಆದುದರಿಂದ ಅವರಿಗೆ ಹಿತವಾಗುವುದನ್ನು ನಾನು ಮಾಡಲೇಬೇಕು. ಇದು ನನ್ನ ಕರ್ತವ್ಯವಾಗಿದೆ'– ಹೀಗೆ ಯೋಚಿಸಿದ ಸರಸ್ವತಿಯು ತನ್ನ ತೀರದಲ್ಲಿ ಜಪಿಸುತ್ತಲೂ, ಹೋಮಮಾಡುತ್ತಲೂ ಇದ್ದ ಋಷಿಸತ್ತಮನಾದ ಕೌಶಿಕನನ್ನು ನೋಡಿ ಜಪ-ಹೋಮಗಳನ್ನು ಮಾಡುವಾಗ ವಿಶ್ವಾಮಿತ್ರನಿಗೆ ವಸಿಷ್ಠರನ್ನು ಹೊಡೆದು ಕೊಲ್ಲಲು ಸಾಧ್ಯವಾಗುವುದಿಲ್ಲವೆಂದು ಚಿಂತಿಸಿ ಮತ್ತು ಇದೇ ಸಮಯವೇ ವಸಿಷ್ಠರನ್ನು ಪ್ರಹಾರದಿಂದ ತಪ್ಪಿಸಲು ಸರಿಯಾದ ಅವಕಾಶವೆಂತಲೂ ಭಾವಿಸಿ, ವೇಗದಿಂದ ವಸಿಷ್ಠರಿದ್ದ ಪೂರ್ವತೀರವನ್ನೇ ಕೊಚ್ಚಿಸಿಕೊಂಡು ಹೊರಟುಹೋದಳು. ತೀರದ ಮೇಲಿದ್ದ ವಸಿಷ್ಠರು ಪ್ರವಾಹದ ಜೊತೆಯಲ್ಲಿ ಹೋಗುತ್ತಿದ್ದರೂ ಅವರಿಗದರಿಂದ ಯಾವ ತೊಂದರೆಯೂ ಆಗಲಿಲ್ಲ. ಹಾಗೆಯೇ ಹೋಗುತ್ತಿದ್ದಾಗ ವಸಿಷ್ಠರು ಸರಸ್ವತಿಯನ್ನು ಸ್ತೋತ್ರಮಾಡಿದರು :

ಪಿತಾಮಹಸ್ಯ ಸರಸಃ ಪ್ರವೃತ್ತಾಸಿ ಸರಸ್ವತಿ ।
ವ್ಯಾಪ್ತಂ ಚೇದಂ ಜಗತ್ಸರ್ವಂ ತವೈವಾಮ್ಭೋಭಿರುತ್ತಮೈಃ ॥೩೦॥

ತ್ವಮೇವಾಕಾಶಗಾ ದೇವಿ ಮೇಘೇಷು ಸೃಜಸೇ ಪಯಃ ।
ಸರ್ವಾಶ್ಚಾಪಸ್ತ್ವಮೇವೇತಿ ತ್ವತ್ತೋ ವಯಮಧೀಮಹಿ ॥೩೧॥

ಪುಷ್ಟಿರ್ದ್ಯುತಿಸ್ತಥಾ ಕೀರ್ತಿಃ ಸಿದ್ಧಿರ್ಬುದ್ಧಿರುಮಾ ತಥಾ ।
ತ್ವಮೇವ ವಾಣೀ ಸ್ವಾಹಾ ತ್ವಂ ತವಾಯತ್ತಮಿದಂ ಜಗತ್ ।
ತ್ವಮೇವ ಸರ್ವಭೂತೇಷು ವಸಸೀಹ ಚತುರ್ವಿಧಾ ॥೩೨॥

"ದೇವಿ! ನೀನು ಪಿತಾಮಹನಾದ ಬ್ರಹ್ಮನ ಸರೋವರದಿಂದಲೇ

ಹೊರಬಂದಿರುವೆ. ಅವನ ಸರಸ್ಸಿನಿಂದ ಪ್ರವೃತ್ತಳಾದುದರಿಂದ ನೀನು ಸರಸ್ವತೀ ಎಂಬ ನಾಮಧೇಯವನ್ನೂ ಪಡೆದಿರುವೆ. ನಿನ್ನ ಉತ್ತಮೋತ್ತಮವಾದ ಜಲರಾಶಿಯಿಂದಲೇ ಈ ಜಗತ್ತೆಲ್ಲವೂ ವ್ಯಾಪ್ತವಾಗಿದೆ. ನೀನೇ ಆಕಾಶದಲ್ಲಿಯೂ ಇದ್ದು ಮೇಘಗಳಲ್ಲಿ ಜಲವನ್ನು ಸೃಷ್ಟಿಸುವೆ. ಆದುದರಿಂದ ಸಂಪೂರ್ಣಜಲರಾಶಿಯೇ ನೀನಾಗಿರುವೆ. ನಿನ್ನ ದಯೆಯಿಂದಲೇ ನಾವು ವೇದಗಳನ್ನು ಅಧ್ಯಯನಮಾಡುತ್ತಿದ್ದೇವೆ. ಪುಷ್ಟಿ, ಕೀರ್ತಿ, ದ್ಯುತಿ, ಸಿದ್ಧಿ, ಉಮಾ, ವಾಣೀ, ಮತ್ತು ಸ್ವಾಹಾ–ಈ ಎಲ್ಲ ಸ್ವರೂಪಗಳೂ ನೀನೇ ಆಗಿರುವೆ. ಈ ಎಲ್ಲ ಸ್ವರೂಪಗಳಲ್ಲಿಯೂ ನೀನೇ ವ್ಯಾಪಿಸಿರುವೆ. ಈ ಸಂಪೂರ್ಣ ಜಗತ್ತೂ ನಿನ್ನ ಅಧೀನದಲ್ಲಿಯೇ ಇದೆ. ನೀನೇ ಎಲ್ಲ ಪ್ರಾಣಿಗಳಲ್ಲಿಯೂ ಪರಾ, ಪಶ್ಯಂತೀ, ಮಧ್ಯಮಾ ಮತ್ತು ವೈಖರೀ–ಈ ನಾಲ್ಕು ರೂಪಗಳಿಂದ ಆವಿರ್ಭೂತಳಾಗಿರುವೆ.”

ಜನಮೇಜಯ! ಹೀಗೆ ಮಹರ್ಷಿಗಳಾದ ವಸಿಷ್ಠರಿಂದ ಸ್ತೋತ್ರ ಮಾಡಲ್ಪಡುತ್ತಿದ್ದ ಸರಸ್ವತಿಯು ವಸಿಷ್ಠರಿದ್ದ ತೀರವನ್ನು ಹೊತ್ತುಕೊಂಡು ವಿಶ್ವಾಮಿತ್ರನ ಆಶ್ರಮದ ಕಡೆಗೆ ಬಹಳ ವೇಗದಿಂದ ಹೋಗುತ್ತಿದ್ದಳು. ವಿಶ್ವಾಮಿತ್ರನ ಆಶ್ರಮದ ಸಮೀಪಕ್ಕೆ ಹೋಗುತ್ತಲೇ ಸರಸ್ವತಿಯು–ವಸಿಷ್ಠರು ಉಪಸ್ಥಿತರಾಗಿರುವರೆಂದು ಹಲವು ಬಾರಿ ವಿಶ್ವಾಮಿತ್ರನಿಗೆ ಹೇಳಿದಳು. ಸರಸ್ವತಿಯು ತನ್ನ ಪ್ರವಾಹದ ಮೂಲಕವಾಗಿ ವಸಿಷ್ಠರನ್ನು ಹೊತ್ತು ತಂದುದನ್ನು ನೋಡಿ ಕೋಪಾವಿಷ್ಟನಾಗಿದ್ದ ವಿಶ್ವಾಮಿತ್ರನು ವಸಿಷ್ಠರ ಜೀವನವನ್ನು ಅಂತ್ಯಗೊಳಿಸಲು ತಕ್ಕುದಾದ ಆಯುಧಕ್ಕಾಗಿ ಹುಡುಕಾಡುತ್ತಿದ್ದನು.

(ಆ ಸದವಕಾಶವನ್ನೇ ಸರಸ್ವತಿಯು ಅಪೇಕ್ಷಿಸಿದ್ದಳು. ವಿಶ್ವಾಮಿತ್ರನು ಆಯುಧವನ್ನು ಹುಡುಕುವವರೆಗೂ ನೀರಿನ ಪ್ರವಾಹವು ನಿಂತಿರುವುದಿಲ್ಲವೆಂಬುದು ಸ್ವಾಭಾವಿಕವೇ ಆಗಿದೆ. ನೀರು ಬಂದ ವೇಗದಲ್ಲಿಯೇ ಮುಂದೆಯೂ ಸಾಗುತ್ತಿರುತ್ತದೆ.)

ಸರಸ್ವತಿಯು, ವಿಶ್ವಾಮಿತ್ರನು ಬಹಳ ಕ್ರುದ್ಧನಾಗಿರುವನೆಂಬುದನ್ನು ಗಮನಿಸಿದಳು. ಪ್ರವಾಹವೇಗವನ್ನು ಕಡಿಮೆ ಮಾಡಿದಲ್ಲಿ ಬ್ರಹ್ಮಹತ್ಯಾ

ಪಾಪದಲ್ಲಿ ತಾನೂ ಭಾಗಿಯಾಗಬೇಕಾಗುವುದೆಂದು ಭಯಪಟ್ಟಳು. ಆದುದರಿಂದಲೇ ಸ್ವಲ್ಪವಾದರೂ ಆಲಸ್ಯಮಾಡದೇ ವಸಿಷ್ಠರನ್ನು ವಿಶ್ವಾಮಿತ್ರನ ಆಶ್ರಮಕ್ಕೆ ತೇಲಿಸಿಕೊಂಡು ಬಂದ ಮಹಾವೇಗದಿಂದಲೇ ಪೂರ್ವದಿಕ್ಕಿನ ಕಡೆಗೆ ತೇಲಿಸಿಕೊಂಡು ಹೊರಟುಹೋದಳು. ಆ ಸಮಯದಲ್ಲಿ ಸರಸ್ವತಿಯು ಇಬ್ಬರು ಋಷಿಗಳೂ ಹೇಳಿದಂತೇನೋ ಮಾಡಿದಳು. ಆದರೆ ವಿಶ್ವಾಮಿತ್ರನು ಮಾತ್ರ ವಂಚಿತನಾದನು. ಸರಸ್ವತಿಯು ಋಷಿಶ್ರೇಷ್ಠರಾದ ವಸಿಷ್ಠರನ್ನು ತನ್ನಿಂದ ಬಹಳ ದೂರಕ್ಕೆ ಒಯ್ದುದನ್ನು ಕಂಡು ದುಃಖದಿಂದಲೂ ಮತ್ತು ಕೋಪದಿಂದಲೂ ಕೂಡಿದ್ದ ಅಸಹನಶೀಲನಾದ ವಿಶ್ವಾಮಿತ್ರನು ಹೇಳಿದನು :

**ಯಸ್ಮಾನ್ಮಾಂ ತ್ವಂ ಸರಿಚ್ಛ್ರೇಷ್ಠೇ ವಞ್ಚಯಿತ್ವಾ ಪುನರ್ಗತಾ ।**
**ಶೋಣಿತಂ ವಹ ಕಲ್ಯಾಣಿ ರಕ್ಷೋಗ್ರಾಮಣಿಸಮ್ಮತಮ್ ॥೩೮॥**

"ಸರಿತ್ತುಗಳಲ್ಲಿ ಶ್ರೇಷ್ಠಳಾದವಳೇ! ಕಲ್ಯಾಣಮಯಿಯಾದ ಸರಸ್ವತಿಯೇ! ನೀನು ನನ್ನನ್ನು ವಂಚಿಸಿ ಪುನಃ ಹೊರಟುಹೋದೆಯಾದ ಕಾರಣ ನೀನು ರಕ್ತವಾಹಿನಿಯಾಗು. ನಿನ್ನ ತೀರ್ಥವು ರಾಕ್ಷಸಗಣಕ್ಕೆ ಅತ್ಯಂತಪ್ರಿಯವಾಗಲಿ."

ಜನಮೇಜಯ! ಧೀಮಂತನಾದ ವಿಶ್ವಾಮಿತ್ರನು ಸರಸ್ವತಿಗೆ ಶಾಪವಿತ್ತನಂತರ ಸರಸ್ವತೀನದಿಯ ಪ್ರವಾಹವು ಆ ಸ್ಥಳದಲ್ಲಿ ಒಂದು ಸಂವತ್ಸರಪರ್ಯಂತವಾಗಿ ರಕ್ತಮಿಶ್ರವಾದ ನೀರಿನಿಂದ ಕೂಡಿದ್ದಿತು.

ಅನಂತರ ಋಷಿಗಳೂ, ದೇವತೆಗಳೂ, ಗಂಧರ್ವಾಪ್ಸರೆಯರೂ ಸರಸ್ವತೀನದಿಯ ಆ ಸ್ವರೂಪವನ್ನು ನೋಡಿ ಅತ್ಯಂತದುಃಖಿತರಾದರು.

ಈ ಕಾರಣದಿಂದ ಆ ಕ್ಷೇತ್ರವು ಜಗತ್ತಿನಲ್ಲಿ 'ವಸಿಷ್ಠಾಪವಾಹ' ಎಂಬ ಹೆಸರಿನಿಂದಲೇ ಪ್ರಸಿದ್ಧಿಯನ್ನು ಹೊಂದಿತು. ಸರಸ್ವತಿಯು (ವಸಿಷ್ಠರನ್ನು ಪ್ರವಾಹದ ಮೂಲಕವಾಗಿ ಅವರಿದ್ದ ಸ್ಥಳಕ್ಕೇ ಒಯ್ದು ) ಪುನಃ ತನ್ನ ಮೊದಲಿನ ಮಾರ್ಗದಲ್ಲಿಯೇ ಹರಿಯತೊಡಗಿದಳು."

೪೨ನೆಯ ಅಧ್ಯಾಯವು ಮುಗಿಯಿತು.

೪೩ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಋಷಿಗಳ ಪ್ರಯತ್ನದಿಂದ ಸರಸ್ವತಿಯ ಶಾಪವಿಮೋಚನೆ: ಜಲದ ಶುದ್ಧಿ: ಅರುಣಾಸಂಗಮಸ್ನಾನದಿಂದ ರಾಕ್ಷಸರಿಗೂ ಮತ್ತು ಇಂದ್ರನಿಗೂ ಸಂಕಟವು ಪರಿಹಾರವಾದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಮಹಾರಾಜ! ಕೋಪಗೊಂಡ ಧೀಮಂತನಾದ ವಿಶ್ವಾಮಿತ್ರನಿಂದ ಶಪ್ತಳಾದ ಸರಸ್ವತಿಯು ಉಜ್ಜ್ವಲವಾಗಿದ್ದ, ಶುಭ್ರವಾಗಿದ್ದ ಮತ್ತು ಶ್ರೇಷ್ಠ ವಾಗಿದ್ದ ಆ ತೀರ್ಥದಲ್ಲಿ ರಕ್ತಧಾರೆಗಳೊಡನೆ ಹರಿಯತೊಡಗಿದಳು. ಅನಂತರ ಆ ರಕ್ತತೀರ್ಥಕ್ಕೆ ಅನೇಕ ರಾಕ್ಷಸರು ಬರತೊಡಗಿದರು ಮತ್ತು ಅಲ್ಲಿ ಹರಿಯುತ್ತಿದ್ದ ರಕ್ತವನ್ನು ಕುಡಿದು ಆನಂದತುಂದಿಲರಾಗುತ್ತಿದ್ದರು. ಆ ರಕ್ತಪಾನದಿಂದ ರಾಕ್ಷಸರು ತೃಪ್ತರಾಗುತ್ತಿದ್ದರಲ್ಲದೇ ಅತ್ಯಂತಸುಖಿಗಳೂ ಆಗಿದ್ದರು. ಅವರಿಗೆ ಯಾವ ವಿಧವಾದ ಈತಿಬಾಧೆಗಳೂ ಇರುತ್ತಿರಲಿಲ್ಲ. ಸ್ವರ್ಗವನ್ನೇ ಜಯಿಸಿದವರಂತೆ ನರ್ತನಮಾಡುತ್ತಾ ಮತ್ತು ನಗುತ್ತಾ ಸುಖ ವಾಗಿದ್ದರು. ಸ್ವಲ್ಪಕಾಲಾನಂತರದಲ್ಲಿ ತಪೋಧನರಾದ ಋಷಿಗಳು ತೀರ್ಥ ಯಾತ್ರೆಗಾಗಿ ಸರಸ್ವತೀನದಿಯ ತೀರಕ್ಕೆ ಆಗಮಿಸಿದರು. ತಪೋಲೋಭಿ ಗಳಾದ (ತಪಸ್ಸಿನಲ್ಲಿಯೇ ವಿಶೇಷವಾದ ಆಸಕ್ತಿಯನ್ನು ಹೊಂದಿದ್ದ), ಸಕಲವಿದ್ಯಾವಿಶಾರದರಾದ ಮುನಿಪುಂಗವರು ಈ ಹಿಂದೆ ವರ್ಣಿಸಿದ, ಸರಸ್ವತೀನದಿಯಲ್ಲಿದ್ದ ಎಲ್ಲ ತೀರ್ಥಗಳಿಗೂ ಹೋಗಿ ಅಲ್ಲಿ ಸ್ನಾನಾಚಮನ ಗಳನ್ನು ಮಾಡಿ ಪ್ರಸನ್ನವಾದ ಮನಸ್ಸುಳ್ಳವರಾದರು. ಅನಂತರ ಅವರು ರಕ್ತವನ್ನೇ ನೀರಿನ ರೂಪದಲ್ಲಿ ಹರಿಸುತ್ತಿದ್ದ ರಕ್ತತೀರ್ಥಕ್ಕೂ ತೆರಳಿದರು. ಮಹಾಭಾಗ್ಯಶಾಲಿಗಳಾಗಿದ್ದ ಆ ಋಷಿಪುಂಗವರು ರಕ್ತದಿಂದ ಕೂಡಿ ಹರಿಯು ತ್ತಿದ್ದ, ಅತಿದಾರುಣವಾಗಿ ಕಾಣುತ್ತಿದ್ದ, ಸರಸ್ವತೀನದಿಯ ಆ ತೀರ್ಥವನ್ನೂ ಮತ್ತು ಅನೇಕರಾಕ್ಷಸರು ಅದನ್ನು ಅತ್ಯಾನಂದದಿಂದ ಪಾನಮಾಡುತ್ತಿರುವುದನ್ನೂ ನೋಡಿದರು. ಕಠೋರವ್ರತನಿಷ್ಠರಾದ ಆ ಋಷಿಗಳು ಸರಸ್ವತೀನದಿಯ ಆ ತೀರ್ಥದ ಸುತ್ತಲೂ ರಾಕ್ಷಸರು ಸೇರಿಕೊಂಡಿದ್ದುದನ್ನು ನೋಡಿ ಅವಳನ್ನು

ಆ ರಾಕ್ಷಸರಿಂದ ರಕ್ಷಿಸಲು ಸಂಪೂರ್ಣವಾಗಿ ಪ್ರಯತ್ನಿಸಿದರು. ಮಹಾಭಾಗ್ಯಶಾಲಿಗಳಾದ ಮಹಾವ್ರತರಾದ ಆ ಮುನಿಶ್ರೇಷ್ಠರೆಲ್ಲರೂ ಒಂದೆಡೆಯಲ್ಲಿ ಸೇರಿ ಎಲ್ಲ ಸರಿತ್ತುಗಳಿಗೂ ಶ್ರೇಷ್ಠಳಾದ ಸರಸ್ವತಿಯನ್ನು ಆಹ್ವಾನಿಸಿ ಅವಳೊಡನೆ ಈ ಮಾತುಗಳನ್ನು ಹೇಳಿದರು :

"ಕಲ್ಯಾಣಿ! ಈ ನಿನ್ನ ಹ್ರದವು (ತೀರ್ಥವು) ಯಾವ ಕಾರಣದಿಂದಾಗಿ ರಾಕ್ಷಸರಿಂದ ಸಮಾಕುಲವಾಗಿದೆ? ಇದನ್ನು ನಮ್ಮೊಡನೆ ಹೇಳು. ಇದಕ್ಕೆ ಕಾರಣವನ್ನು ನಿನ್ನಿಂದ ತಿಳಿದುಕೊಂಡನಂತರ ಪರಿಹಾರೋಪಾಯವನ್ನು ಕುರಿತು ಪರ್ಯಾಲೋಚಿಸುತ್ತೇವೆ."

ಅನಂತರ ಸರಸ್ವತಿಯು ಭಯದಿಂದ ನಡುಗುತ್ತಾ ಎಲ್ಲ ವಿಷಯಗಳನ್ನೂ ಹೇಗೆ ನಡೆಯಿತೋ ಹಾಗೆಯೇ ಹೇಳಿದಳು. ಸರಸ್ವತಿಯು ಆ ಶಾಪದಿಂದ ಅತ್ಯಂತದುಃಖಿತಳಾಗಿದ್ದುದನ್ನು ಕಂಡು ಆ ತಪೋಧನರು ಅವಳನ್ನು ಆಶ್ವಸಿಸುತ್ತಾ ಹೇಳಿದರು :

"ಅನಘಳೇ! ನಿಷ್ಪಾಪಳೇ! ನಾವು ನಿನಗೆ ಪ್ರಾಪ್ತವಾಗಿರುವ ಶಾಪವನ್ನೂ ಮತ್ತು ಅದಕ್ಕೆ ಕಾರಣವನ್ನೂ ಕೇಳಿ ತಿಳಿದುಕೊಂಡೆವು. ಈ ಎಲ್ಲ ತಪೋಧನರೂ ಶಾಪವಿಮೋಚನಾರ್ಥವಾಗಿ ಸಮಯೋಚಿತವಾದ ಕಾರ್ಯವನ್ನು ಮಾಡುತ್ತಾರೆ."

ಜನಮೇಜಯ! ಮಹರ್ಷಿಗಳು ಸರಿಚ್ಛ್ರೇಷ್ಠಳಾದ ಸರಸ್ವತಿಯೊಡನೆ ಹೀಗೆ ಹೇಳಿ ತಮ್ಮ-ತಮ್ಮಲ್ಲಿಯೇ ಮಾತನಾಡಿಕೊಂಡರು.

**ವಿಮೋಚಯಾಮಹೇ ಸರ್ವೇ ಶಾಪಾದೇತಾಂ ಸರಸ್ವತೀಮ್ ॥೧೩॥**

"ನಾವೆಲ್ಲರೂ ಸೇರಿ ಈ ಸರಸ್ವತಿಯನ್ನು ಶಾಪದಿಂದ ಬಿಡುಗಡೆ ಮಾಡೋಣ."

ಜನಮೇಜಯ! ಹೀಗೆ ಆ ಬ್ರಾಹ್ಮಣರೆಲ್ಲರೂ ಏಕಮುಖವಾಗಿ ಸಂಕಲ್ಪಿಸಿ ತಪಸ್ಸುಗಳಿಂದಲೂ, ವಿಧಿ-ನಿಯಮಗಳಿಂದಲೂ, ಉಪವಾಸ ಗಳಿಂದಲೂ, ನಾನಾಪ್ರಕಾರವಾದ ಸಂಯಮಗಳಿಂದಲೂ, ಕಷ್ಟಸಾಧ್ಯವಾದ ವ್ರತಗಳಿಂದಲೂ–ಪಶುಪತಿಯಾದ, ಜಗತ್ಪತಿಯಾದ ಮಹಾದೇವನನ್ನು

ಆರಾಧಿಸಿ ಅವನ ಅನುಗ್ರಹದಿಂದ ಸರಿಚ್ಛ್ರೇಷ್ಠಳಾದ ಸರಸ್ವತಿಯನ್ನು ವಿಶ್ವಾಮಿತ್ರನಿಂದ ಪ್ರಾಪ್ತವಾಗಿದ್ದ ಶಾಪದಿಂದ ಬಿಡುಗಡೆಮಾಡಿದರು. ಸರಸ್ವತಿಯು ಆ ತಪಸ್ವಿಗಳ ತಪಃಪ್ರಭಾವದಿಂದಾಗಿ ಪೂರ್ವರೂಪವನ್ನು ತಾಳಿದಳು. ಹಿಂದಿನಂತೆಯೇ ಪ್ರಸನ್ನವಾದ ಮತ್ತು ಶುಭ್ರವಾದ ತೀರ್ಥವುಳ್ಳವಳಾದಳು. ಶಾಪದಿಂದ ನಿರ್ಮುಕ್ತಳಾದ ಸರಿಚ್ಛ್ರೇಷ್ಠಳಾದ ಸರಸ್ವತಿಯು ಮೊದಲಿನಂತೆಯೇ ವಿರಾಜಮಾನಳಾದಳು. ಮಹರ್ಷಿಗಳ ಪ್ರಭಾವದಿಂದ ಸರಸ್ವತಿಯ ಜಲವು ಪೂರ್ವರೂಪವನ್ನು ಪಡೆದುದನ್ನು ಕಂಡು ಹಸಿವಿನಿಂದ ಬಳಲಿದ್ದ ರಾಕ್ಷಸರು ಕೃಪಾವಿಷ್ಟರಾಗಿದ್ದ ಋಷಿಗಳನ್ನೇ ಶರಣು ಹೊಂದಿದರು ಮತ್ತು ಬದ್ಧಾಂಜಲಿಗಳಾಗಿ ಪುನಃ ಪುನಃ ಪ್ರಾರ್ಥಿಸಿಕೊಳ್ಳುತ್ತಿದ್ದರು :

**ವಯಂ ಚ ಕ್ಷುಧಿತಾಶ್ಚೈವ ಧರ್ಮಾದ್ಧೀನಾಶ್ಚ ಶಾಶ್ವತಾತ್ ।**
**ನ ಚ ನಃ ಕಾಮಕಾರೋಽಯಂ ಯದ್ವಯಂ ಪಾಪಕಾರಿಣಃ ॥೧೯॥**

**ಯುಷ್ಮಾಕಂ ಚಾಪ್ರಸಾದೇನ ದುಷ್ಕೃತೇನ ಚ ಕರ್ಮಣಾ ।**
**ಯತ್ಪಾಪಂ ವರ್ಧತೇಽಸ್ಮಾಕಂ ತತಃ ಸ್ಮೋ ಬ್ರಹ್ಮರಾಕ್ಷಸಾಃ ॥೨೦॥**

"ಮಹಾತ್ಮರೇ! ನಾವು ಹಸಿವಿನಿಂದ ಸಂಕಟಪಡುತ್ತಿದ್ದೇವೆ. ಸನಾತನ ಧರ್ಮದಿಂದ ಭ್ರಷ್ಟರೂ ಆಗಿದ್ದೇವೆ. ನಾವೀಗ ಮಾಡುತ್ತಿರುವ ಪಾಪ ಕಾರ್ಯಗಳು ಸ್ವೇಚ್ಛೆಯಿಂದ ಮಾಡುತ್ತಿರುವ ಕಾರ್ಯಗಳಲ್ಲ. ನಿಮ್ಮಂತಹ ಮಹಾತ್ಮರು ನಮ್ಮಂತಹವರ ವಿಷಯದಲ್ಲಿ ಪ್ರಸನ್ನರಾಗದೇ ಇರುವುದರಿಂದ ನಾವು ದುಷ್ಕರ್ಮಗಳನ್ನೇ ಮಾಡುತ್ತಾ ಹೋಗುತ್ತಿದ್ದೇವೆ. ಇದರಿಂದಾಗಿ ನಮ್ಮ ಪಾಪವು ಅನವರತವಾಗಿ ವರ್ಧಿಸುತ್ತಲೇ ಹೋಗುತ್ತಿದೆ. ಈ ಕಾರಣದಿಂದಲೇ ನಾವೀಗ ಬ್ರಹ್ಮರಾಕ್ಷಸರಾಗಿದ್ದೇವೆ.

**ಯೋಷಿತಾಂ ಚೈವ ಪಾಪೇನ ಯೋನಿದೋಷಕೃತೇನ ಚ ।**
**ಏವಂ ಹಿ ವೈಶ್ಯಶೂದ್ರಾಣಾಂ ಕ್ಷತ್ರಿಯಾಣಾಂ ತಥೈವ ಚ ।**
**ಯೇ ಬ್ರಾಹ್ಮಣಾನ್ಪ್ರದ್ವಿಷನ್ತಿ ತೇ ಭವನ್ತೀಹ ರಾಕ್ಷಸಾಃ ॥೨೧॥**

ಸ್ತ್ರೀಯರ ಯೋನಿದೋಷಜನಿತವಾದ (ವ್ಯಭಿಚಾರದ) ಪಾಪದಿಂದ (ಅವರಲ್ಲಿ ಜನ್ಮತಾಳಿದವರು) ರಾಕ್ಷಸರಾಗುತ್ತಾರೆ. ಅದೇ ರೀತಿಯಲ್ಲಿ

ವೈಶ್ಯ-ಶೂದ್ರ-ಕ್ಷತ್ರಿಯರಲ್ಲಿ ಯಾರು ಬ್ರಾಹ್ಮಣರನ್ನು ದ್ವೇಷಿಸುತ್ತಾರೆಯೋ ಅವರು ಇಲ್ಲಿ ರಾಕ್ಷಸರಾಗಿ ಜನ್ಮತಾಳುತ್ತಾರೆ.

**ಆಚಾರ್ಯಮೃತ್ವಿಜಂ ಚೈವ ಗುರುಂ ವೃದ್ಧಜನಂ ತಥಾ ।**
**ಪ್ರಾಣಿನೋ ಯೇಽವಮನ್ಯನ್ತೇ ತೇ ಭವನ್ತೀಹ ರಾಕ್ಷಸಾಃ ॥೨೩॥**

ಯಾವ ಮನುಷ್ಯರು–ಆಚಾರ್ಯರನ್ನೂ, ಋತ್ವಿಜರನ್ನೂ, ಗುರುಗಳನ್ನೂ, ವೃದ್ಧಜನರನ್ನೂ, ಪ್ರಾಣಿಗಳನ್ನೂ ಅಪಮಾನಗೊಳಿಸುತ್ತಾರೆಯೋ ಅವರಿಲ್ಲಿ ರಾಕ್ಷಸರಾಗಿ ಹುಟ್ಟುತ್ತಾರೆ.

ದ್ವಿಜಸತ್ತಮರೇ! ನಮ್ಮ ಉದ್ಧಾರವನ್ನು ಮಾಡಿರಿ. ಎಲ್ಲ ಲೋಕಗಳಲ್ಲಿರುವ ಪಾಪಿಷ್ಠರನ್ನೂ ಉದ್ಧಾರಮಾಡಲು ನೀವು ಸಮರ್ಥರಾಗಿರುವಿರಿ."

ಜನಮೇಜಯ! ರಾಕ್ಷಸರು ಹೇಳಿದ ಮಾತುಗಳನ್ನು ಕೇಳಿ ಮಹಾತ್ಮರಾದ ಋಷಿಗಳು ರಾಕ್ಷಸರ ಮೋಕ್ಷಾರ್ಥವಾಗಿ ಚಿತ್ತೈಕಾಗ್ರತೆಯಿಂದ ಸರಸ್ವತಿಯನ್ನೇ ಸ್ತೋತ್ರಮಾಡಿದರು. ಅನಂತರ ಪ್ರಸನ್ನಮನಸ್ಕರಾದ ಋಷಿಗಳು ರಾಕ್ಷಸರೊಡನೆ ಹೇಳಿದರು :

**ಕ್ಷುತಂ ಕೀಟಾವಪನ್ನಂ ಚ ಯಚ್ಚೋಚ್ಛಿಷ್ಟಾಚಿತಂ ಭವೇತ್ ।**
**ಸಕೇಶಮವಧೂತಂ ಚ ರುದಿತೋಪಹತಂ ಚ ಯತ್ ॥೨೬॥**

**ಶ್ವಭಿಃ ಸಂಸೃಷ್ಟಮನ್ನಂ ಚ ಭಾಗೋಽಸೌ ರಕ್ಷಸಾಮಿಹ ।**
**ತಸ್ಮಾಜ್ಜ್ಞಾತ್ವಾ ಸದಾ ವಿದ್ವಾನೇತಾನ್ಯತ್ನಾದ್ವಿವರ್ಜಯೇತ್ ॥೨೭॥**

**ರಾಕ್ಷಸಾನ್ನಮಸೌ ಭುಙ್ಕ್ತೇ ಯೋ ಭುಙ್ಕ್ತೇ ಹ್ಯನ್ನಮೀದೃಶಮ್॥೨೮॥**

"ಯಾವ ಅನ್ನದ ಮೇಲೆ ಉಗುಳುಬಿದ್ದಿರುವುದೋ, ಯಾವುದಾದರೂ ಹುಳುವು ಯಾವ ಅನ್ನದ ಮೇಲೆ ಬಿದ್ದಿರುವುದೋ, ಯಾವುದು ತಿಂದು ಮಿಕ್ಕ ಅನ್ನವೋ, ಯಾವ ಅನ್ನದಲ್ಲಿ ಕೂದಲಿರುವುದೋ, ಯಾವ ಅನ್ನವು ತಿರಸ್ಕಾರಪೂರ್ವಕವಾಗಿ ಕೊಡಲ್ಪಟ್ಟಿರುವುದೋ, ಯಾವ ಅನ್ನದ ಮೇಲೆ ಅಳುವಿನ ಕಣ್ಣೀರು ಬಿದ್ದಿರುವುದೋ, ಯಾವ ಅನ್ನವನ್ನು ನಾಯಿಯು ಮುಟ್ಟಿರುವುದೋ–ಈ ವಿಧವಾದ ಅನ್ನಗಳೆಲ್ಲವೂ ರಾಕ್ಷಸರು ಭಕ್ಷಿಸಲು

ಯೋಗ್ಯವಾದುವುಗಳು. ಆದುದರಿಂದ ವಿದ್ವಾಂಸನಾದವನು ಅಂತಹ ದೋಷಗಳಿರುವ ಅನ್ನವನ್ನು ಯಾವುದೇ ಸಂದರ್ಭದಲ್ಲಿಯೂ ಪ್ರಯತ್ನಪೂರ್ವಕವಾಗಿ ವರ್ಜಿಸಬೇಕು. ಇಂತಹ ದೋಷಗಳಿಂದ ಕೂಡಿದ ಅನ್ನವನ್ನು ತಿನ್ನುವವನು ರಾಕ್ಷಸಾನ್ನವನ್ನು ತಿಂದಂತೆಯೇ ಆಗುತ್ತದೆ.”

ಹೀಗೆ ಹೇಳಿ ತಪೋಧನರಾದ ಋಷಿಗಳು ಆ ತೀರ್ಥವನ್ನು ಶುದ್ಧಿಗೊಳಿಸಿ ರಾಕ್ಷಸರ ಮೋಕ್ಷಾರ್ಥವಾಗಿ ಪುನಃ ಸರಸ್ವತೀನದಿಯನ್ನು ಪ್ರಚೋದಿಸಿದರು.

ಮಹರ್ಷಿಗಳ ಅಭಿಪ್ರಾಯವನ್ನು ತಿಳಿದ ಸರಿಚ್ಛ್ರೇಷ್ಠಳಾದ ಸರಸ್ವತಿಯು ತನ್ನ ಶರೀರವನ್ನೇ (ನೀರನ್ನೇ) ಎಣೆಗೆಂಪಾಗಿ ಪರಿವರ್ತಿಸಿಕೊಂಡಳು. ಆ ಅರುಣಾತೀರ್ಥದಲ್ಲಿ ರಾಕ್ಷಸರೆಲ್ಲರೂ ಸ್ನಾನಮಾಡಿ ರಾಕ್ಷಸಶರೀರವನ್ನು ಪರಿತ್ಯಜಿಸಿ ಸ್ವರ್ಗಕ್ಕೆ ಹೋದರು. ಆ ಮಹಾತೀರ್ಥವು ಬ್ರಹ್ಮಹತ್ಯಾ ಪಾಪವನ್ನೂ ಹೋಗಲಾಡಿಸತಕ್ಕುದಾಗಿದೆ. ಜನಮೇಜಯ! ಈ ರಹಸ್ಯವನ್ನೇ ತಿಳಿದ ಶತಕ್ರತುವಾದ ದೇವರಾಜನೂ ಶ್ರೇಷ್ಠವಾದ ಆ ಅರುಣಾತೀರ್ಥದಲ್ಲಿ ಸ್ನಾನಮಾಡಿ ಬ್ರಹ್ಮಹತ್ಯಾಪಾಪದಿಂದ ವಿಮುಕ್ತನಾದನು.”

ಜನಮೇಜಯನು ಪ್ರಶ್ನಿಸುತ್ತಾನೆ :

“ವೈಶಂಪಾಯನರೇ! ಯಾವ ಕಾರಣದಿಂದಾಗಿ ಇಂದ್ರನು ಬ್ರಹ್ಮಹತ್ಯಾ ಪಾಪವನ್ನು ಪಡೆದುಕೊಂಡನು? ಅರುಣಾತೀರ್ಥದಲ್ಲಿ ಸ್ನಾನಮಾಡಿ ಅವನು ಹೇಗೆ ಬ್ರಹ್ಮಹತ್ಯಾಪಾಪವನ್ನು ಕಳೆದುಕೊಂಡು ಪರಿಶುದ್ಧನಾದನು? ಆ ಕಥೆಯನ್ನು ವಿಸ್ತಾರವಾಗಿ ಹೇಳಿರಿ.”

“ಜನೇಶ್ವರ! ಈ ಉಪಾಖ್ಯಾನವನ್ನು ಕೇಳು. ಹೇಗೆ ನಡೆಯಿತೋ ಹಾಗೆಯೇ ಹೇಳುತ್ತೇನೆ. ಹಿಂದೆ ಇಂದ್ರನು ನಮುಚಿಯೊಡನೆ ಮಾಡಿ ಕೊಂಡಿದ್ದ ಪ್ರತಿಜ್ಞೆಯನ್ನು ಹೇಗೆ ಮುರಿದನೆಂಬುದನ್ನು ವಿಸ್ತಾರವಾಗಿ ಹೇಳುತ್ತೇನೆ.

ಇಂದ್ರನಿಂದ ಭಯಗೊಂಡ ನಮುಚಿಯು ಸೂರ್ಯರಶ್ಮಿಯಲ್ಲಿ ಸೇರಿಕೊಂಡುಬಿಟ್ಟನು. ಆದರೆ ನಮುಚಿಯನ್ನು ಸಂಹರಿಸುವ ಉದ್ದೇಶವೇ ಇಂದ್ರನಿಗಿದ್ದಿತು. ಆದುದರಿಂದ ನಮುಚಿಯು ಸೂರ್ಯರಶ್ಮಿಯಲ್ಲಿ

ಸೇರಿಕೊಂಡು ತಪ್ಪಿಸಿಕೊಳ್ಳಲು ಸಾಧ್ಯವಾಗದಂತೆ ಇಂದ್ರನು ನಮುಚಿಯೊಡನೆ ಮೈತ್ರಿಯನ್ನೇ ಬೆಳೆಸಿದನು ಮತ್ತು ಅವನೊಡನೆ ಈ ಒಪ್ಪಂದವನ್ನು ಮಾಡಿಕೊಂಡನು :

**ನ ಚಾರ್ದ್ರೇಣ ನ ಶುಷ್ಕೇಣ ನ ರಾತ್ರೌ ನಾಪಿ ಚಾಹನಿ ।**
**ವಧಿಷ್ಯಾಮ್ಯಸುರಶ್ರೇಷ್ಠ ಸಖೇ ಸತ್ಯೇನ ತೇ ಶಪೇ ॥೩೫॥**

"ಅಸುರಶ್ರೇಷ್ಠನೇ! ಮಿತ್ರನೇ! ನಾನು ನಿನ್ನನ್ನು ಹಸಿಯಾಗಿರುವ ಪದಾರ್ಥದಿಂದಾಗಲೀ–ಒಣಗಿರುವ ಪದಾರ್ಥದಿಂದಾಗಲೀ, ರಾತ್ರಿಯಲ್ಲಾಗಲೀ–ಹಗಲಿನಲ್ಲಾಗಲೀ ಸಂಹಾರಮಾಡುವುದಿಲ್ಲ. ಈ ಮಾತನ್ನು ನಾನು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ."

ಜನಮೇಜಯ! ಇಂದ್ರನು ಹೀಗೆಂಬುದಾಗಿ ನಮುಚಿಗೆ ಮಾತು ಕೊಟ್ಟಿದ್ದರೂ ಸುತ್ತಲೂ ಹಿಮವು ಬಿದ್ದಿರುವುದನ್ನು ನೋಡಿ ನೀರಿನ ನೊರೆಯಿಂದಲೇ ನಮುಚಿಯ ಶಿರಸ್ಸನ್ನು ಕತ್ತರಿಸಿಬಿಟ್ಟನು. ಇಂದ್ರನಿಂದ ಕತ್ತರಿಸಲ್ಪಟ್ಟ ನಮುಚಿಯ ಆ ಶಿರಸ್ಸು - 'ಭೋ ಭೋ! ಮಿತ್ರಘ್ನ! ಮಿತ್ರಹಂತಕನೇ! ಪಾಪಿಷ್ಠನೇ! ಎಲ್ಲಿಗೆ ಹೋಗುತ್ತಿರುವೆ?'–ಎಂದು ನಿಂದಿಸುತ್ತಾ ಇಂದ್ರನನ್ನೇ ಅನುಸರಿಸಿ ಹೋಗುತ್ತಿದ್ದಿತು. ಹೀಗೆ ನಮುಚಿಯ ಶಿರಸ್ಸು ಇಂದ್ರನನ್ನು ನಿಂದಿಸುತ್ತಾ ಬೆನ್ನಟ್ಟುತ್ತಿರಲಾಗಿ ಸಂತಾಪಗೊಂಡ ಇಂದ್ರನು ಪಿತಾಮಹನ ಸಮೀಪಕ್ಕೆ ಹೋಗಿ ಎಲ್ಲ ವಿಷಯಗಳನ್ನೂ ಹೇಳಿದನು. ಲೋಕಗುರುವಾದ ಬ್ರಹ್ಮನು ಇಂದ್ರನು ಹೇಳಿದುದನ್ನು ಕೇಳಿ, ಪಾಪಭಯವನ್ನು ಹೋಗಲಾಡಿಸಲು ಸಮರ್ಥವಾದ ಸರಸ್ವತೀ ನದಿಯಲ್ಲಿರುವ ಅರುಣಾತೀರ್ಥದಲ್ಲಿ ಸ್ನಾನಾಚಮನೀಯಗಳನ್ನು ಮಾಡಿ ಅದರ ತೀರದಲ್ಲಿ ಯಥಾವಿಧಿಯಾಗಿ ಯಜ್ಞವನ್ನು ಮಾಡುವಂತೆ ಇಂದ್ರನಿಗೆ ಹೇಳಿದನು :

**ಏಷಾ ಪುಣ್ಯಜಲಾ ಶಕ್ರ ಕೃತಾ ಮುನಿಭಿರೇವ ತು ।**
**ನಿಗೂಢಮಸ್ಯಾಗಮನಮಿಹಾಸೀತ್ಪೂರ್ವಮೇವ ತು ।**
**ತತೋಽಭ್ಯೇತ್ಯಾರುಣಾಂ ದೇವೀಂ ಪ್ಲಾವಯಾಮಾಸ ವಾರಿಣಾ ॥**

"ಶಕ್ರ! ಈ ಅರುಣಾತೀರ್ಥವು ಮುನಿಗಳಿಂದ ನಿರ್ಮಿಸಲ್ಪಟ್ಟಿರುವುದು.

ಪುಣ್ಯಜಲಯುಕ್ತವಾದುದು. ಆ ತೀರ್ಥದಲ್ಲಿ ಅರುಣಾದೇವಿಯ ಆಗಮನವು ಆ ಮೊದಲೇ ನಿಗೂಢವಾಗಿ (ಅದೃಶ್ಯವಾಗಿ) ಆಗಿದ್ದಿತು. ಪುನಃ ಸರಸ್ವತಿಯು ತೀರ್ಥಸ್ಥಳಾಗಿದ್ದ ಅರುಣಾದೇವಿಯ ಬಳಿಗೆ ಬಂದು ಅವಳನ್ನು (ಆ ತೀರ್ಥವನ್ನು) ಶುಭಜಲದಿಂದ ಮುಳುಗಿಸಿದಳು.

ಆದುದರಿಂದ ಆ ಪುಣ್ಯತೀರ್ಥವು ಸರಸ್ವತೀ ಮತ್ತು ಅರುಣೆಯರ ಸಂಗಮಸ್ಥಾನವೂ ಆಗಿದೆ. ದೇವೇಂದ್ರ! ನನ್ನ ಮಾತಿನಂತೆ ನೀನಲ್ಲಿಗೆ ಹೋಗಿ ಯಜ್ಞವನ್ನು ಮಾಡು. ಅನೇಕಪ್ರಕಾರವಾದ ದಾನಗಳನ್ನು ಮಾಡು. ಆ ತೀರ್ಥದಲ್ಲಿ ಸ್ನಾನಮಾಡುವುದರಿಂದಲೇ ನೀನು ಸುಘೋರವಾದ ಪಾತಕದಿಂದ ವಿಮುಕ್ತಿಯನ್ನು ಹೊಂದುವೆ."

ಜನಮೇಜಯ! ಪಿತಾಮಹನು ಹೀಗೆ ಹೇಳಿದನಂತರ ಇಂದ್ರನು ಸರಸ್ವತೀನದಿಯ ತೀರಕ್ಕೆ ಹೋಗಿ ಅಲ್ಲಿದ್ದ ಲತೆಯ ಪೊದರಿನಲ್ಲಿ ಯಥಾವಿಧಿಯಾಗಿ ಯಜ್ಞಮಾಡಿ, ಅನೇಕವಿಧವಾದ ದಾನಗಳನ್ನು ಕೊಟ್ಟು, ಅರುಣಾತೀರ್ಥದಲ್ಲಿ ಸ್ನಾನಾಚಮನಾದಿಗಳನ್ನು ಮಾಡಿದನು. ಒಡನೆಯೇ ಅವನು ಬ್ರಹ್ಮಹತ್ಯೆಯಿಂದ ಪ್ರಾಪ್ತವಾಗಿದ್ದ ಮಹಾಪಾಪದಿಂದ ವಿಮುಕ್ತನಾದನು. ಅನಂತರ ತ್ರಿದಶೇಶ್ವರನಾದ ಇಂದ್ರನು ಹೃಷ್ಟವಾದ ಮನಸ್ಸಿನಿಂದ ಕೂಡಿದವನಾಗಿ ಸ್ವರ್ಗಕ್ಕೆ ತೆರಳಿದನು.

ಇಂದ್ರನನ್ನು ಬೆನ್ನಟ್ಟಿ ಬರುತ್ತಿದ್ದ ನಮುಚಿಯ ಶಿರಸ್ಸು ಆ ಅರುಣಾತೀರ್ಥದಲ್ಲಿಯೇ ಮುಳುಗಿತು. ಅದರಿಂದಾಗಿ ನಮುಚಿಯು, ವಾಂಛಿತವಾದ ಫಲಗಳನ್ನು ಕೊಡುವ ಅಕ್ಷಯವಾದ ಲೋಕಗಳನ್ನು ಪಡೆದನು.

ಜನಮೇಜಯ! ಪಾರಮಾರ್ಥಿಕವಾದ ಕರ್ಮಗಳನ್ನು ಮಾಡುವುದರಲ್ಲಿಯೇ ಆಸಕ್ತನಾದ ಮಹಾತ್ಮನಾದ ಬಲರಾಮನೂ ಆ ಅರುಣಾತೀರ್ಥದಲ್ಲಿ ಸ್ನಾನಮಾಡಿ, ನಾನಾವಿಧವಾದ ಅನರ್ಘವಸ್ತುಗಳನ್ನು ಬ್ರಾಹ್ಮಣರಿಗೆ ದಾನಮಾಡಿ, ಧರ್ಮದ ಫಲವನ್ನು (ಪುಣ್ಯಫಲವನ್ನು) ಪಡೆದುಕೊಂಡು ಸೋಮನ ಮಹಾತೀರ್ಥಕ್ಕೆ ಪ್ರಯಾಣಮಾಡಿದನು.

ಈ ತೀರ್ಥಕ್ಷೇತ್ರದಲ್ಲಿ ಹಿಂದೆ ರಾಜಾಧಿರಾಜನಾದ ಸೋಮನೇ

ಸಾಕ್ಷಾತ್ತಾಗಿ ವಿಧಿಪೂರ್ವಕವಾಗಿ ರಾಜಸೂಯಯಜ್ಞವನ್ನು ಮಾಡಿದ್ದನು. ಆ ಶ್ರೇಷ್ಠವಾದ ಯಜ್ಞದಲ್ಲಿ ಧೀಮಂತನಾದ, ವಿಪ್ರಶ್ರೇಷ್ಠನಾದ, ಮಹಾತ್ಮನಾದ ಅತ್ರಿಯೇ ಹೋತೃವಾಗಿದ್ದನು. ಆ ಮಹಾಯಾಗವು ಮುಗಿಯುವುದ ರಲ್ಲಿದ್ದಾಗ ದೇವತೆಗಳಿಗೂ ಮತ್ತು ದೈತ್ಯ-ದಾನವ-ರಾಕ್ಷಸರಿಗೂ ತಾರಕಾಮಯವೆಂಬ ಅಥವಾ ತಾರಕಾಖ್ಯವೆಂಬ ಸುತೀವ್ರವಾದ ಯುದ್ಧವು ನಡೆಯಿತು. ಅದೇ ಸ್ಥಳದಲ್ಲಿಯೇ ಸ್ಕಂದನು ತಾರಕಾಸುರನನ್ನು ಸಂಹರಿಸಿ ದನು. ಆ ಸ್ಥಳದಲ್ಲಿಯೇ ದೈತ್ಯವಿನಾಶಕನಾದ, ಮಹಾಸೇನನಾದ ಕಾರ್ತಿಕೇ ಯನು ದೇವತೆಗಳ ಸೈನ್ಯಾಧಿಪತ್ಯವನ್ನು ಸ್ವೀಕರಿಸಿದನು. ಅಶ್ವತ್ಥವೃಕ್ಷವಿರುವ ಆ ತೀರ್ಥಕ್ಷೇತ್ರದಲ್ಲಿಯೇ ಕುಮಾರನಾದ ಕಾರ್ತಿಕೇಯನು ಸಾಕ್ಷಾತ್ತಾಗಿ ನೆಲೆಸಿದ್ದಾನೆ."

೪೩ನೆಯ ಅಧ್ಯಾಯವು ಮುಗಿಯಿತು.

೪೪ನೆಯ ಅಧ್ಯಾಯ — ಗದಾಪರ್ವ (ಮುಂದುವರಿದಿದೆ.)

## ಕುಮಾರ ಕಾರ್ತಿಕೇಯನ ಆವಿರ್ಭಾವ: ಕುಮಾರನನ್ನು ದೇವಸೇನಾಪತಿಯನ್ನಾಗಿ ಮಾಡಲು ಅಭಿಷೇಕದ ಸಿದ್ಧತೆ

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ಬ್ರಾಹ್ಮಣೋತ್ತಮರೇ! ತಾವು ಇದುವರೆಗೆ ಸರಸ್ವತೀನದಿಯ ಪ್ರಭಾವವನ್ನೂ–ಪಾವಿತ್ರ್ಯವನ್ನೂ ವಿಶದವಾಗಿ ಹೇಳಿದಿರಿ. ಇನ್ನು ಮುಂದೆ ತಾವು ಕುಮಾರನ ಪಟ್ಟಾಭಿಷೇಕದ ವಿಷಯವನ್ನು ಸವಿಸ್ತರವಾಗಿ ಹೇಳಿರಿ. ವಾಗ್ಮಿಗಳಲ್ಲಿ ಶ್ರೇಷ್ಠರಾದವರೇ! ಯಾವ ದೇಶದಲ್ಲಿ, ಯಾವ ಕಾಲದಲ್ಲಿ, ಯಾವ ರೀತಿಯಲ್ಲಿ, ಯಾರು, ಯಾವ ವಿಧಿಯಿಂದ ಕುಮಾರಸ್ವಾಮಿಯನ್ನು ದೇವಸೇನಾಪತಿಯ ಸ್ಥಾನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕ ಮಾಡಿದರು? ಎಂಬುದನ್ನು ಹೇಳಿರಿ. ಸ್ಕಂದನು ದೈತ್ಯರ ಸಂಹಾರವನ್ನು ಹೇಗೆ ಮಾಡಿದನು? ಈ ಎಲ್ಲವನ್ನೂ ಹೇಳಿರಿ. ಸ್ಕಂಧನ ಕಥೆಯನ್ನು ಕೇಳಲು ನನಗೆ ಅತ್ಯಂತ ಕುತೂಹಲವಾಗಿದೆ."

"ಜನಮೇಜಯ! ನಿನ್ನ ಈ ಕುತೂಹಲವು ಕುರುವಂಶೋತ್ಪನ್ನ

ನಾಗಿರುವ ನಿನಗೆ ಅನುರೂಪವಾಗಿಯೇ ಇದೆ. ನಿನ್ನ ಈ ಮಾತು ನನಗೂ ಸಹ ಹರ್ಷವನ್ನುಂಟುಮಾಡುವುದಾಗಿದೆ. ಏಕಾಗ್ರಚಿತ್ತನಾಗಿ ಕೇಳುತ್ತಿರುವ ನಿನಗೆ ಮಹಾತ್ಮನಾದ ಕುಮಾರನ ಅಭಿಷೇಕಪ್ರಕರಣವನ್ನೂ ಮತ್ತು ಅವನ ಪ್ರಭಾವವನ್ನೂ ಸಂತೋಷದಿಂದ ಹೇಳುತ್ತೇನೆ. ಹಿಂದೊಮ್ಮೆ ಮಹೇಶ್ವರನ ತೇಜಸ್ಸು (ವೀರ್ಯವು) ಸ್ಖಲಿಸಿ ಅಗ್ನಿಯಲ್ಲಿ ಬಿದ್ದಿತು. ಯದ್ಯಪಿ ಯಜ್ಞೇಶ್ವರನು ಸರ್ವಭಕ್ಷಕನಾದರೂ ಮಹಾದೇವನ ಅಕ್ಷಯ ವಾದ ದಿವ್ಯತೇಜಸ್ಸನ್ನು ದಹಿಸಲು ಸಮರ್ಥನಾಗಲಿಲ್ಲ. ಆ ಮಹಾ ತೇಜಸ್ಸನ್ನು ಧಾರಣೆಮಾಡಿಕೊಂಡಿದ್ದುದರಿಂದಲೇ ಅಗ್ನಿಯು ಅಮಿತತೇಜ ಸ್ವಿಯೂ, ಅತಿಕಾಂತಿಮಂತನೂ ಆದನು. ಆದರೆ ಹೆಚ್ಚು ಕಾಲ ತೇಜೋ ಮಯವಾದ ಆ ಗರ್ಭವನ್ನು ಧರಿಸಿಕೊಂಡಿರಲು ಹವ್ಯವಾಹನನಿಗೂ ಸಾಧ್ಯ ವಾಗಲಿಲ್ಲ. ಬ್ರಹ್ಮದೇವನ ನಿರ್ದೇಶನದಂತೆ ಅಗ್ನಿಯು ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಆ ದಿವ್ಯಗರ್ಭವನ್ನು ಗಂಗಾನದಿಯ ಬಳಿಗೆ ಹೋಗಿ ಆ ನದಿಯಲ್ಲಿ ಹಾಕಿಬಿಟ್ಟನು. ತೇಜೋಮಯವಾದ ಆ ಗರ್ಭ ವನ್ನು ಧರಿಸಿಕೊಂಡಿರಲು ಗಂಗಾದೇವಿಗೂ ಸಾಧ್ಯವಾಗಲಿಲ್ಲ. ಅನಂತರ ಅವಳು ಆ ಗರ್ಭವನ್ನು ದೇವಪೂಜಿತವಾದ ಹಿಮಾಲಯಪರ್ವತದ ರಮ್ಯವಾದ ತಪ್ಪಲಿನಲ್ಲಿ ವಿಸರ್ಜಿಸಿದಳು. ಆ ಅಗ್ನಿಪುತ್ರನು ತನ್ನ ದಿವ್ಯ ತೇಜಸ್ಸಿನಿಂದ ಎಲ್ಲ ಲೋಕಗಳನ್ನೂ ವ್ಯಾಪಿಸುತ್ತಾ ದೊಡ್ಡವನಾಗತೊಡಗಿ ದನು. ಜೊಂಡುಹುಲ್ಲಿನ ಮಧ್ಯದಲ್ಲಿ ಯಜ್ಞೇಶ್ವರನಂತೆಯೇ ಪ್ರಜ್ವಲಿಸು ತ್ತಿದ್ದ, ಮಹಾತ್ಮನಾದ, ಅಗ್ನಿಪುತ್ರನಾದ, ಪ್ರಭುವಾದ, ಆಗ ತಾನೇ ಹುಟ್ಟಿದ ಮಗುವಿನಂತಿದ್ದ ಕುಮಾರನನ್ನು ಕೃತ್ತಿಕಾದೇವತೆಗಳು ನೋಡಿದರು. 'ಇವನು ನನ್ನ ಮಗ – ಇವನು ನನ್ನ ಪುತ್ರ' ಎಂಬುದಾಗಿ ಪುತ್ರಾಭಿಲಾಷಿಣಿ ಯರಾಗಿದ್ದ ಆ ಆರು ಮಂದಿ ಕೃತ್ತಿಕಾದೇವತೆಗಳೂ ಕೂಗಿಕೊಂಡರು. ಪ್ರಭುವಾದ ಭಗವಾನ್ ಸ್ಕಂದನು ಆರು ಮಂದಿ ತಾಯಂದಿರೂ ತನ್ನ ಮೇಲಿಟ್ಟಿದ್ದ ವಾತ್ಸಲ್ಯಭಾವವನ್ನು ಅರಿತುಕೊಂಡು ಅವರ ಸ್ತನಗಳಿಂದ ಸ್ರವಿಸುತ್ತಿದ್ದ ಹಾಲನ್ನು ತನ್ನ ಆರು ಮುಖಗಳಿಂದಲೂ ಕುಡಿದನು. ದಿವ್ಯರೂಪವನ್ನು ಧರಿಸಿದ್ದ ಆರು ಮಂದಿ ಕೃತ್ತಿಕಾದೇವತೆಗಳು ಬಾಲಕನ ಅದ್ಭುತಪ್ರಭಾವವನ್ನು ಕಂಡು ಅಚ್ಚರಿಗೊಂಡರು. ಗಂಗಾದೇವಿಯು–

ಯಾವ ಪರ್ವತದ ಶಿಖರದ ಮೇಲೆ ಸ್ಕಂದನನ್ನು ಇಟ್ಟಿದ್ದಳೋ–ಆ ಪರ್ವತಶಿಖರವು ಸಂಪೂರ್ಣವಾಗಿ ಸುವರ್ಣಮಯವಾಗಿ ಪರಿವರ್ತನೆ ಹೊಂದಿತು. ಗರ್ಭವು ವರ್ಧಿಸುತ್ತಿದ್ದಂತೆ ಆ ಗರ್ಭದ ಪ್ರಕಾಶಾಧಿಕ್ಯದಿಂದ ಪೃಥ್ವಿಯೂ ಪ್ರಕಾಶಗೊಂಡಿತು. ಸುತ್ತಲೂ ಇದ್ದ ಎಲ್ಲ ಪರ್ವತಗಳೂ ಅವನ ಪ್ರಭಾವದಿಂದಲೇ ಚಿನ್ನದ ಖನಿಗಳಾಗಿ ಪರಿವರ್ತನಗೊಂಡುವು. ಮಹಾಶಕ್ತಿಶಾಲಿಯಾದ ಕುಮಾರನು ಮುಂದೆ ಕಾರ್ತಿಕೇಯನೆಂಬ ಹೆಸರಿನಿಂದ ಪ್ರಸಿದ್ಧನಾದನು. ಮಹಾಯೋಗಬಲಸಂಪನ್ನನಾಗಿದ್ದ ಆ ಬಾಲಕನು ಮೊದಲು ಗಾಂಗೇಯನೆಂಬ (ಗಂಗಾಪುತ್ರನೆಂಬ) ಹೆಸರನ್ನು ಪಡೆದಿದ್ದನು. ಶಮ, ತಪಸ್ಸು ಮತ್ತು ವೀರ್ಯಗಳಿಂದ ಸಂಪನ್ನನಾಗಿದ್ದ ಕಾರ್ತಿಕೇಯನು ಬಹಳ ಬೇಗ ದೊಡ್ಡವನಾದನು. ಅವನು ಚಂದ್ರನಂತೆ ಎಲ್ಲರಿಗೂ ಪ್ರಿಯದರ್ಶನನಾಗಿದ್ದನು. ಕಾಂತಿಮಂತನಾದ ಕುಮಾರ ಸ್ವಾಮಿಯು ಸುವರ್ಣಮಯವಾದ, ದಿವ್ಯವಾದ ಆ ಜೊಂಡುಹುಲ್ಲಿನ ಮಧ್ಯದಲ್ಲಿ ಗಂಧರ್ವರಿಂದಲೂ ಮುನಿಗಳಿಂದಲೂ ನಿರಂತರವಾಗಿ ಸಂಸ್ತೂಯಮಾನನಾಗಿ ಮಲಗಿದ್ದನು. ದಿವ್ಯವಾದ ವಾದ್ಯಗಳಲ್ಲಿಯೂ ಮತ್ತು ನೃತ್ಯದಲ್ಲಿಯೂ ಪರಿಣತೆಯರಾಗಿದ್ದ ಸುಂದರಿಯರಾದ ಸಾವಿರಾರು ದೇವಕನ್ಯೆಯರು ಕುಮಾರನನ್ನು ಸ್ತುತಿಮಾಡುತ್ತಾ ಅವನ ಸಮೀಪದಲ್ಲಿ ನೃತ್ಯಮಾಡುತ್ತಿದ್ದರು. ಸರಿಚ್ಛ್ರೇಷ್ಠಳಾದ ಗಂಗೆಯೂ ದಿವ್ಯಬಾಲಕನ ಸಮೀಪದಲ್ಲಿ ಕುಳಿತುಕೊಳ್ಳುತ್ತಿದ್ದಳು. ಪೃಥಿವೀದೇವಿಯು ಉತ್ತಮೋತ್ತಮ ವಾದ ರೂಪವನ್ನು ಧರಿಸಿ ಕುಮಾರನನ್ನೆತ್ತಿಕೊಂಡಳು. ಜಾತಕರ್ಮಾದಿ ಕರ್ಮಗಳನ್ನು ಬೃಹಸ್ಪತಿಯೇ ಮಾಡಿದನು. ಚತುರ್ಮೂರ್ತಿಸ್ವರೂಪವನ್ನು ಧರಿಸಿದ್ದ ವೇದವು ಬದ್ಧಾಂಜಲಿಯಾಗಿ ಕುಮಾರನನ್ನು ಉಪಾಸನೆ ಮಾಡತೊಡಗಿತು. ನಾಲ್ಕು ಪಾದಗಳಿಂದ ಕೂಡಿದ ಧನುರ್ವೇದವೂ, ಸಂಗ್ರಹಸಹಿತವಾದ ಶಸ್ತ್ರಗಳ ಸಮೂಹವೂ ಮತ್ತು ಸಾಕ್ಷಾದ್ವಾಣಿಯೂ ಕುಮಾರನ ಪರಿಚರ್ಯೆಯಲ್ಲಿ ನಿರತವಾಗಿದ್ದುವು. ನೂರಾರು ಭೂತಗಳ ಸಮೂಹಗಳಿಂದ ಸಮಾವೃತನಾಗಿದ್ದ, ಶೈಲಪುತ್ರಿಯಾದ ಉಮಾದೇವಿ ಯೊಡನೆ ಸುಖಾಸೀನನಾಗಿದ್ದ, ಮಹಾವೀರ್ಯನಾದ, ದೇವದೇವನಾದ ಉಮಾಪತಿಯನ್ನು ಸ್ಕಂದನು ನೋಡಿದನು.

ಉಮಾಪತಿಯನ್ನು ಅನುಸರಿಸಿ ನಿಂತಿದ್ದ ಭೂತಸಂಘಗಳ ಶರೀರಗಳು

ನೋಡುವುದಕ್ಕೆ ಪರಮಾದ್ಭುತಗಳಾಗಿ ಕಾಣುತ್ತಿದ್ದುವು. ಅವರ ಮುಖಗಳೂ ವಿಕಟವಾಗಿದ್ದುವು. ಅವರು ವಿಕೃತವಾದ (ವಕ್ರವಾದ) ಶರೀರ ವುಳ್ಳವರಾಗಿದ್ದರು. ವಿಕೃತವಾದ ಆಭರಣಗಳನ್ನು ತೊಟ್ಟುಕೊಂಡಿದ್ದರು. ವಿಕೃತವಾದ ಧ್ವಜಗಳುಳ್ಳವರಾಗಿದ್ದರು. ಈಶ್ವರನ ಗಣದಲ್ಲಿ ಕೆಲವರಿಗೆ ವ್ಯಾಘ್ರದ ಮುಖಗಳಿದ್ದುವು. ಕೆಲವರಿಗೆ ಸಿಂಹದ ಮುಖಗಳಿದ್ದುವು. ಕೆಲವರಿಗೆ ಕರಡಿಯ ಮುಖಗಳಿದ್ದುವು. ಕೆಲವರು ಬೆಕ್ಕಿನ ಮುಖವುಳ್ಳವರಾಗಿದ್ದರು. ಕೆಲವರು ಮೊಸಳೆಯ ಮುಖವನ್ನು ಹೊಂದಿದ್ದರು. ಕೆಲವರು ಚೇಳಿನ ಮುಖವನ್ನು ಹೊಂದಿದ್ದರು. ಆನೆ, ಒಂಟೆ, ಗೂಬೆ, ರಣಹದ್ದು, ಗುಳ್ಳೇನರಿ, ಕ್ರೌಂಚ, ಪಾರಿವಾಳ, ಜಿಂಕೆ–ಇವೇ ಮೊದಲಾದ ಪಶು-ಪಕ್ಷಿಗಳ ಮುಖಗಳನ್ನು ಹೊಂದಿದ್ದ ಅನೇಕಗಣಗಳು ಈಶ್ವರನನ್ನು ಅನುಸರಿಸಿ ನಿಂತಿದ್ದುವು. ಅನೇಕ ಭೂತಗಣಗಳು ನಾಯಿ, ಮುಳ್ಳುಹಂದಿ, ನೀರುಡ, ಆಡು, ಕುರಿ, ಹಸು–ಇವೇ ಮೊದಲಾದ ಪ್ರಾಣಿಗಳ ಶರೀರವನ್ನು ಹೊಂದಿದ್ದುವು. ಕೆಲವು ಭೂತಗಳು ಪರ್ವತಗಳಂತೆಯೂ, ಕೆಲವು ಮೇಘಗಳಂತೆಯೂ ಇದ್ದುವು. ಅವರು ತಮ್ಮ ಕೈಗಳಲ್ಲಿ ಚಕ್ರ, ಗದೆಯೇ ಮೊದಲಾದ ಆಯುಧಗಳನ್ನು ಎತ್ತಿಹಿಡಿದಿದ್ದರು. ಅವರಲ್ಲಿ ಹಲವರು ಅಂಜನದ ರಾಶಿಯಂತೆ ಕಪ್ಪಾಗಿದ್ದರು. ಮತ್ತೆ ಕೆಲವರು ಶ್ವೇತಪರ್ವತದ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದರು.

*ಸಪ್ತಮಾತೃಕೆಯರೂ ಅಲ್ಲಿಗೆ ಆಗಮಿಸಿದರು. ಸಾಧ್ಯರು, ವಿಶ್ವೇದೇವತೆಗಳು, ಸಪ್ತಮರುತ್ತುಗಳು, ಅಷ್ಟವಸುಗಳು, ಪಿತೃದೇವತೆಗಳು, ಏಕಾದಶರುದ್ರರು, ದ್ವಾದಶಾದಿತ್ಯರು, ಸಿದ್ಧರು, ಭುಜಂಗರು, ದಾನವರು, ಪಕ್ಷಿಗಳು, ಮಕ್ಕಳೊಡನೆಯೂ ವಿಷ್ಣುವಿನೊಡನೆಯೂ ಕೂಡಿದ ಭಗವಾನ್ ಸ್ವಯಂಭೂಬ್ರಹ್ಮಾ, ಇಂದ್ರ–ಇವರೆಲ್ಲರೂ ಅಚ್ಯುತನಾದ ಕುಮಾರನನ್ನು ಸಂದರ್ಶಿಸಲು ಆಗಮಿಸಿದರು. ನಾರದಪ್ರಮುಖರಾದ ದೇವರ್ಷಿಗಳು, ದೇವಗಂಧರ್ವಶ್ರೇಷ್ಠರು, ಬೃಹಸ್ಪತಿಪ್ರಮುಖರಾದ ಸಿದ್ಧರು, ಸಂಪೂರ್ಣ

*ಸಪ್ತಮಾತೃಕೆಯರು : ಬ್ರಾಹ್ಮೀ, ಮಾಹೇಶ್ವರೀ, ವೈಷ್ಣವೀ, ಕೌಮಾರೀ, ಇಂದ್ರಾಣೀ, ವಾರಾಹೀ, ಚಾಮುಂಡಾ–ಇವರೇ ಸಪ್ತಮಾತೃಕೆಯರು.

ಜಗತ್ತಿಗೂ ಶ್ರೇಷ್ಠರಾದ–ದೇವತೆಗಳಿಗೂ ದೇವತೆಗಳಾದ ಪಿತೃಗಣಗಳು, ಯಾಮಗಣಗಳು, ಎಲ್ಲ ಧಾಮಗಣಗಳು – ಇವರೆಲ್ಲರೂ ಕುಮಾರನನ್ನು ನೋಡಲು ಆಗಮಿಸಿದರು. ಬಾಲಕನಾಗಿದ್ದರೂ ಕಾರ್ತಿಕೇಯನು ಮಹಾ ಯೋಗಬಲಯುಕ್ತನಾಗಿದ್ದು ಮಹಾಬಲಿಷ್ಠನಾಗಿದ್ದನು. ಆ ಬಾಲಕನು ಶೂಲಹಸ್ತನಾದ, ಪಿನಾಕಪಾಣಿಯಾದ, ದೇವೇಶನಾದ ಉಮಾಪತಿಯ ಕಡೆಗೆ ಹೊರಟನು. ಕಾರ್ತಿಕೇಯನು ಬರುತ್ತಿರುವುದನ್ನು ನೋಡಿ ಈಶ್ವರನಿಗೂ, ಪಾರ್ವತಿಗೂ, ಗಂಗೆಗೂ, ಅಗ್ನಿಗೂ ಏಕಕಾಲದಲ್ಲಿ 'ಈ ಬಾಲಕನು ಜನ್ಮಕೊಟ್ಟುದಕ್ಕೆ ಗೌರವತೋರಿಸುವ ಸಲುವಾಗಿ ಯಾರ ಬಳಿಗೆ ಮೊದಲು ಬರುತ್ತಾನೆ?' ಎಂಬ ಜಿಜ್ಞಾಸೆಯುಂಟಾಯಿತು. 'ನನ್ನ ಬಳಿಗೆ ಬರುತ್ತಾನೆ. ಮೊದಲು ನನ್ನ ಬಳಿಗೆ ಬರುತ್ತಾನೆ.' ಹೀಗೆ ಅವರೆಲ್ಲರೂ ಭಾವಿಸಿಕೊಂಡು ಸಂಭ್ರಮದಿಂದ ಕಾರ್ತಿಕೇಯನನ್ನು ಎವೆಯಿಕ್ಕದೇ ನೋಡುತ್ತಿದ್ದರು.

**ತೇಷಾಮೇತಮಭಿಪ್ರಾಯಂ ಚತುರ್ಣಾಮುಪಲಕ್ಷ್ಯ ಸಃ ।**
**ಯುಗಪದ್ಯೋಗಮಾಸ್ಥಾಯ ಸಸರ್ಜ ವಿವಿಧಾಸ್ತನೂಃ ॥೩೬॥**

**ತತೋಽಭವಚ್ಚತುರ್ಮೂರ್ತಿಃ ಕ್ಷಣೇನ ಭಗವಾನ್ಪ್ರಭುಃ ।**
**ತಸ್ಯ ಶಾಖೋ ವಿಶಾಖಶ್ಚ ನೈಗಮೇಯಶ್ಚ ಪೃಷ್ಠತಃ ॥೩೭॥**

ಕುಮಾರನು ಆ ಎಲ್ಲರ ಮನೋಭಿಪ್ರಾಯಗಳನ್ನೂ ಗ್ರಹಿಸಿದವನಾಗಿ ಯೋಗಬಲವನ್ನಾಶ್ರಯಿಸಿ ಒಂದೇಬಾರಿಗೆ ಅನೇಕ ಶರೀರಗಳನ್ನು ಸೃಷ್ಟಿಸಿದನು. ಕ್ಷಣಮಾತ್ರದಲ್ಲಿ ಪ್ರಭುವಾದ ಕುಮಾರನು ನಾಲ್ಕು ಮೂರ್ತಿಗಳಾಗಿ ಪರಿವರ್ತಿತನಾದನು. ಯೋಗಬಲದಿಂದ ಹುಟ್ಟಿದ ಶಾಖ, ವಿಶಾಖ ಮತ್ತು ನೈಗಮೇಯ ಈ ಮೂರು ಶರೀರಗಳು ಕುಮಾರನನ್ನು ಅನುಸರಿಸಿದುವು.

**ಏವಂ ಸ ಕೃತ್ವಾ ಹ್ಯಾತ್ಮಾನಂ ಚತುರ್ಧಾ ಭಗವಾನ್ಪ್ರಭುಃ ॥೩೮॥**

**ಯತೋ ರುದ್ರಸ್ತತಸ್ಕನ್ದೋ ಜಗಾಮಾದ್ಭುತದರ್ಶನಃ ।**
**ವಿಶಾಖಸ್ತು ಯಯೌ ಯೇನ ದೇವೀ ಗಿರಿವರಾತ್ಮಜಾ ॥೩೯॥**

**ಶಾಖೋ ಯಯೌ ಸ ಭಗವಾನ್ವಾಯುಮೂರ್ತಿರ್ವಿಭಾವಸುಮ್ ।**
**ನೈಗಮೇಯೋಽಗಮದ್ಗಙ್ಗಾಂ ಕುಮಾರಃ ಪಾವಕಪ್ರಭಃ ॥೪೦॥**

ಜನಮೇಜಯ! ಪ್ರಭುವಾದ ಭಗವಾನ್ ಕುಮಾರನು ಯೋಗ ಮಾಯೆಯನ್ನಾಶ್ರಯಿಸಿ ತನ್ನನ್ನು ನಾಲ್ಕು ಮೂರ್ತಿಗಳನ್ನಾಗಿ ವಿಭಾಗಿಸಿ ಕೊಂಡನು. ಅನಂತರ ಅದ್ಭುತದರ್ಶನನಾದ ಸ್ಕಂದನು ರುದ್ರನಿದ್ದೆಡೆಗೆ ಹೋದನು. ವಿಶಾಖನು ಪರ್ವತಶ್ರೇಷ್ಠನಾದ ಹಿಮವಂತನ ಮಗಳಾದ ಪಾರ್ವತಿಯ ಬಳಿಗೆ ಹೋದನು. ವಾಯುಮೂರ್ತಿಯಾದ ಭಗವಾನ್ ಶಾಖನು ಅಗ್ನಿದೇವನ ಬಳಿಗೆ ಹೋದನು. ಅಗ್ನಿಸಮಪ್ರಭಾವನಾದ ಭಗವಾನ್ ನೈಗಮೇಯನು ಗಂಗಾದೇವಿಯ ಬಳಿಗೆ ಹೋದನು.

ಆ ನಾಲ್ವರ ದೇಹಗಳೂ ಒಂದೇಸಮನಾಗಿದ್ದುವು. ಆ ಎಲ್ಲರ ದೇಹಗಳೂ ಉಜ್ಜ್ವಲವಾದ ಕಾಂತಿಯಿಂದ ಪ್ರಕಾಶಿಸುತ್ತಿದ್ದುವು. ನಾಲ್ವರು ಕುಮಾರರೂ ಏಕಕಾಲದಲ್ಲಿ ಶಿವ-ಪಾರ್ವತಿ-ಗಂಗಾಗ್ನಿಗಳ ಸಮೀಪಕ್ಕೆ ಹೋದರು. ಪರಮಾದ್ಭುತವಾದ ಮತ್ತು ರೋಮಾಂಚಕರವಾದ ಆ ದೃಶ್ಯವನ್ನು ನೋಡಿ ದೇವ-ದಾನವ-ರಾಕ್ಷಸರ ಮಧ್ಯದಲ್ಲಿ ದೊಡ್ಡ ಹಾಹಾಕಾರವುಂಟಾಯಿತು.

ಅನಂತರ ಶಿವ, ಪಾರ್ವತಿ ಅಗ್ನಿ ಮತ್ತು ಗಂಗೆ–ಇವರು ಒಟ್ಟಾಗಿ ಸೇರಿ ಜಗತ್ಪತಿಯಾದ ಪಿತಾಮಹನಿಗೆ ನಮಸ್ಕರಿಸಿದರು. ಎಲ್ಲರೂ ವಿಧಿಪೂರ್ವಕ ವಾಗಿ ಪಿತಾಮಹನಿಗೆ ನಮಸ್ಕರಿಸಿ ಕಾರ್ತಿಕೇಯನಿಗೆ ಪ್ರೀತಿಯನ್ನುಂಟು ಮಾಡುವ ಇಚ್ಛೆಯಿಂದ ಅವನೊಡನೆ ಈ ಮಾತುಗಳನ್ನು ಹೇಳಿದರು :

**ಅಸ್ಯ ಬಾಲಸ್ಯ ಭಗವನ್ನಾಧಿಪತ್ಯಂ ಯಥೇಪ್ಸಿತಮ್ ।**
**ಅಸ್ಮತ್ಪ್ರಿಯಾರ್ಥಂ ದೇವೇಶ ಸದೃಶಂ ದಾತುಮರ್ಹಸಿ ॥೪೫॥**

“ದೇವೇಶ್ವರನೇ! ನಮ್ಮ ಪ್ರೀತ್ಯರ್ಥವಾಗಿ ಈ ನಮ್ಮ ಬಾಲಕನಿಗೆ ಯಥಾಯೋಗ್ಯವಾದ ನಿನಗೆ ಇಷ್ಟವಾದ ಯಾವುದಾದರೂ ಅಧಿಕಾರವನ್ನು ವಹಿಸಿಕೊಡುವುದು ಯೋಗ್ಯವಾಗಿದೆ.”

ಗೌರೀ-ಶಂಕರ-ಗಂಗಾಗ್ನಿಗಳು ಹೀಗೆ ಪ್ರಾರ್ಥಿಸಿದನಂತರ ಧೀಮಂತ ನಾದ, ಸರ್ವಲೋಕಪಿತಾಮಹನಾದ ಭಗವಾನ್ ಪ್ರಜಾಪತಿಯು ಕುಮಾರ ನಿಗೆ ಯಾವ ಅಧಿಕಾರವನ್ನು ವಹಿಸಿಕೊಡುವುದೆಂಬುದರ ಬಗೆಗೆ ಯೋಚಿಸ

ತೊಡಗಿದನು. ಮಹಾಮತಿಯಾದ ಬ್ರಹ್ಮನು ಆ ಮೊದಲೇ ವಿಶ್ವದಲ್ಲಿರುವ ಭಿನ್ನ-ಭಿನ್ನವಾದ ಎಲ್ಲ ಪದಾರ್ಥಗಳಿಗೂ (ಐಶ್ವರ್ಯಗಳಿಗೂ) ಮಹಾತ್ಮರಾದ ದೇವ-ಗಂಧರ್ವ-ರಾಕ್ಷಸರನ್ನೂ, ಭೂತ-ಯಕ್ಷ-ಪಕ್ಷಿಗಳನ್ನೂ, ಸರ್ಪಗಳನ್ನೂ ಸಾಮೂಹಿಕವಾಗಿ ಅಧಿಪತಿಗಳನ್ನಾಗಿ ಮಾಡಿಬಿಟ್ಟಿದ್ದನು. (ವಿಶ್ವದ ಅಧಿಕಾರವನ್ನು ಒಬ್ಬೊಬ್ಬರಿಗೂ ಹಂಚಿಕೊಟ್ಟುಬಿಟ್ಟಿದ್ದನು.) ಸ್ಕಂದನನ್ನು ನೋಡಿ ಇವನು ಯಾವುದಾದರೂ ಅಧಿಕಾರವನ್ನು (ಐಶ್ವರ್ಯದ ಮೇಲಿನ ಆಧಿಪತ್ಯವನ್ನು) ವಹಿಸಿಕೊಳ್ಳಲು ಸಮರ್ಥನಾಗಿರುವನೆಂದು ಬ್ರಹ್ಮನು ಭಾವಿಸಿದನು. ದೇವತೆಗಳ ಶ್ರೇಯಸ್ಸಿನಲ್ಲಿಯೇ ಆಸಕ್ತನಾಗಿದ್ದ ಬ್ರಹ್ಮನು ಸ್ವಲ್ಪಹೊತ್ತು ಯೋಚಿಸಿ ಸರ್ವಪ್ರಾಣಿಗಳಲ್ಲಿಯೂ ಶ್ರೇಷ್ಠತಮವಾದ ದೇವಸೇನಾಪತ್ಯದ ಸ್ಥಾನವನ್ನು ದಯಪಾಲಿಸಿದನು. ಸಮಸ್ತದೇವತೆಗಳ ಸಮೂಹಗಳಲ್ಲಿ ಯಾರು ರಾಜರೆಂದು ಪ್ರಸಿದ್ಧರಾಗಿದ್ದರೋ–ಅವರೆಲ್ಲರನ್ನೂ ಸರ್ವಭೂತಪಿತಾಮಹನಾದ ಬ್ರಹ್ಮನು ಕುಮಾರನ ವಶಕ್ಕೊಪ್ಪಿಸಿದನು. ಅನಂತರ ಬ್ರಹ್ಮಪುರಃಸರರಾದ ದೇವತೆಗಳು ಕುಮಾರಸ್ವಾಮಿಯನ್ನು ಕರೆದುಕೊಂಡು ಅವನ ಅಭಿಷೇಕಾರ್ಥವಾಗಿ ಹಿಮವತ್ಪರ್ವತಕ್ಕೆ ತೆರಳಿದರು. ಅಲ್ಲಿಂದ ಮುಂದಕ್ಕೆ ಎಲ್ಲರೂ ಒಟ್ಟಾಗಿ ಸೇರಿ ಸಮಂತಪಂಚಕತೀರ್ಥದಲ್ಲಿ ಪ್ರವಹಿಸಿ ಮೂರು ಲೋಕಗಳಲ್ಲಿಯೂ ವಿಖ್ಯಾತಳಾಗಿದ್ದ, ಹಿಮವತ್ಪರ್ವತದಲ್ಲಿ ಹುಟ್ಟಿದ ಸರಿಚ್ಛ್ರೇಷ್ಠಳಾದ, ಪುಣ್ಯೋಪೇತಳಾದ ಸರಸ್ವತಿಯ ತೀರಕ್ಕೆ ಹೋದರು.

ಸಮಸ್ತಗುಣಗಳಿಂದ ಕೂಡಿದ ಸರಸ್ವತಿಯ ಪುಣ್ಯತಮವಾದ ತೀರದಲ್ಲಿ ಎಲ್ಲ ದೇವ-ಗಂಧರ್ವರೂ ಪೂರ್ಣಮನಸ್ಸಿನಿಂದ ಕುಮಾರಸ್ವಾಮಿಯ ಅಭಿಷೇಕಾರ್ಥವಾಗಿ ಉಪಸ್ಥಿತರಾದರು.”

ಳಳನೆಯ ಅಧ್ಯಾಯವು ಮುಗಿಯಿತು.

೪೫ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಸ್ಕಂದನ ಅಭಿಷೇಕ: ಅವನ ಮಹಾಪಾರ್ಷದರ (ಸಭಿಕರ) ನಾಮಧೇಯಗಳ ಮತ್ತು ರೂಪಾದಿಗಳ ವರ್ಣನೆ

“ಜನಮೇಜಯಮಹಾರಾಜ! ಅನಂತರ ಬೃಹಸ್ಪತಿಯು ಕುಮಾರ ಸ್ವಾಮಿಯ ಪಟ್ಟಾಭಿಷೇಕಕ್ಕಾಗಿ ಶಾಸ್ತ್ರಗಳಲ್ಲಿ ಹೇಳಿರುವ ಪ್ರಕಾರ ಅಭಿಷೇಕ ಸಾಮಗ್ರಿಗಳೆಲ್ಲವನ್ನೂ ಸಂಗ್ರಹಿಸಿ, ಚೆನ್ನಾಗಿ ಹುತಮಾಡಿದ ಅಗ್ನಿಯಲ್ಲಿ ಪಟ್ಟಾಭಿಷೇಕಾಂಗವಾದ ಹವಿಸ್ಸುಗಳನ್ನು ಯಥಾವಿಧಿಯಾಗಿ ಹೋಮ ಮಾಡಿದನು. ಬಳಿಕ ಹಿಮವಂತನು ಕೊಟ್ಟಿದ್ದ ಶ್ರೇಷ್ಠವಾದ ಮಣಿಗಳಿಂದ ಸುಶೋಭಿತವಾಗಿದ್ದ, ದಿವ್ಯವಾದ ರತ್ನಗಳಿಂದ ಖಚಿತವಾಗಿದ್ದ, ಪುಣ್ಯತಮ ವಾದ, ಶ್ರೇಷ್ಠವಾದ ಸಿಂಹಾಸನದಲ್ಲಿ ಕುಳಿತಿದ್ದ ಕುಮಾರಸ್ವಾಮಿಗೆ ಅಭಿಷೇಕ ಮಾಡಲು ಸಮಸ್ತವಾದ ಮಂಗಳದ್ರವ್ಯಗಳೊಡನೆ ವಿಧ್ಯುಕ್ತವಾದ ಮಂತ್ರೋಚ್ಚಾರಣಪೂರ್ವಕವಾಗಿ ಅಭಿಷೇಕಕ್ಕೆ ಸಂಬಂಧಿಸಿದ ಎಲ್ಲ ದ್ರವ್ಯ ಗಳನ್ನೂ ತೆಗೆದುಕೊಂಡು ದೇವತೆಗಳು ಆಗಮಿಸಿದರು. ಮಹಾಪರಾಕ್ರಮಿ ಗಳಾದ ಇಂದ್ರಾ, ವಿಷ್ಣುಗಳೂ, ಸೂರ್ಯ-ಚಂದ್ರರೂ, ಧಾತೃ, ವಿಧಾತೃ ಗಳೂ, ವಾಯ್ವಗ್ನಿಗಳೂ, ಪೂಷ-ಭಗಾರ್ಯಮರೂ, ಅಂಶ- ವಿವಸ್ವಂತರೂ, ಧೀಮಂತನಾದ ರುದ್ರನೂ, ಮಿತ್ರಾವರುಣರೂ, ಏಕಾದಶರುದ್ರರೂ, ಅಷ್ಟವಸುಗಳೂ, ದ್ವಾದಶಾದಿತ್ಯರೂ, ಅಶ್ವಿನೀದೇವತೆಗಳೂ–ಪ್ರಭುವಾದ ಕುಮಾರಸ್ವಾಮಿಯನ್ನು ಅಭಿಷೇಕಾರ್ಥವಾಗಿ ಸುತ್ತುವರಿದು ನಿಂತರು. ವಿಶ್ವೇದೇವತೆಗಳು, ಮರುದ್ಗಣಗಳು, ಯಕ್ಷರು, ರಾಕ್ಷಸರು, ನಾಗರು, ದೇವರ್ಷಿಗಳು, ಬ್ರಹ್ಮರ್ಷಿಗಳು, ವೈಖಾನಸ-ವಾಲಖಿಲ್ಯರು, ಸಾಧ್ಯರು, ಪಿತೃಗಣ ಗಳು, ಗಂಧರ್ವರು, ಅಪ್ಸರೆಯರು, ವಾಯುಭಕ್ಷರು, ಮರೀಚಿಪರು, ಭೃಗ್ವಂಗಿರಸರು, ಮಹಾತ್ಮರಾದ ಯತಿಗಳು, ಸರ್ಪಗಳು, ವಿದ್ಯಾಧರರು, ಯೋಗದಲ್ಲಿ ಸಿದ್ಧಿಯನ್ನು ಪಡೆದ ಪುಣ್ಯಾತ್ಮರಾದ ಮುನಿಗಳು–ಇವರೆಲ್ಲರೂ ಕುಮಾರನನ್ನು ಸುತ್ತುವರಿದು ಅವನ ಅಭಿಷೇಕಾರ್ಥವಾಗಿ ನಿಂತಿದ್ದರು. ಪಿತಾಮಹ, ಪುಲಸ್ತ್ಯ, ಮಹಾತಪಸ್ವಿಯಾದ ಪುಲಹ, ಅಂಗಿರಸ, ಕಶ್ಯಪ, ಅತ್ರಿ, ಮರೀಚಿ, ಭೃಗು, ಕ್ರತು, ಹರ, ವರುಣ, ಮನು, ದಕ್ಷ, ಋತು ಗಳು, ಗ್ರಹಗಳು, ನಕ್ಷತ್ರಗಳು, ಮೂರ್ತಿಮತ್ತಾಗಿ ಬಂದ ಸರಿತ್ತುಗಳು,

ಚತುರ್ವೇದಗಳು, ಸಮುದ್ರಗಳು, ಸರೋವರಗಳು, ನಾನಾಪ್ರಕಾರವಾದ ತೀರ್ಥಗಳು, ಪೃಥಿವೀ, ದ್ಯುಲೋಕ, ದಿಕ್ಕುಗಳು, ವೃಕ್ಷಗಳು, ದೇವಮಾತೆಯಾದ ಅದಿತಿ, ಹ್ರೀ, ಶ್ರೀ, ದೇವತೆಗಳು, ಸ್ವಾಹಾ, ಸರಸ್ವತೀ, ಉಮಾ, ಶಚೀ, ಸಿನೀವಾಲೀ, ಅನುಮತಿ, ಕುಹೂ, ರಾಕಾ, ಧಿಷಣಾ, ಇತರ ದೇವತೆಗಳ ಪತ್ನಿಯರು, ಹಿಮವಂತ, ವಿಂಧ್ಯ, ಅನೇಕ ಶಿಖರಗಳಿಂದ ಸುಶೋಭಿತವಾದ ಮೇರುಪರ್ವತ, ಅನುಚರರಿಂದ ಯುಕ್ತವಾದ ಐರಾವತ ಗಜ, ಕಲಾ, ಕಾಷ್ಠ, ಮಾಸ, ಪಕ್ಷ, ಋತು, ರಾತ್ರಿ, ದಿನ, ಕುದುರೆಗಳಲ್ಲಿ ಶ್ರೇಷ್ಠವಾದ ಉಚ್ಚೈಶ್ರವಸ್ಸು, ನಾಗರಾಜನಾದ ವಾಸುಕಿ, ಅರುಣ, ಗರುಡ, ಓಷಧಿಲತೆಗಳಿಂದ ಸಹಿತವಾದ ವೃಕ್ಷಗಳು, ಭಗವಾನ್ ಧರ್ಮದೇವ, ಕಾಲ, ಯಮ, ಮೃತ್ಯು, ಯಮನ ಅನುಯಾಯಿಗಳು–ಇವರೆಲ್ಲರೂ ಕುಮಾರನ ಅಭಿಷೇಕಾರ್ಥವಾಗಿ ಅಲ್ಲಿ ನೆರೆದಿದ್ದರು.

ಅನೇಕರೀತಿಯ ದೇವತೆಗಳು ಕುಮಾರನ ಅಭಿಷೇಕದಲ್ಲಿ ಪಾಲ್ಗೊಳ್ಳುವ ಸಲುವಾಗಿ ಅಲ್ಲಿಗೆ ಆಗಮಿಸಿದ್ದರು. ಪ್ರೇಕ್ಷಕರು ಬಹು ಸಂಖ್ಯಾತರಾಗಿದ್ದುದರಿಂದ ಅವರ ನಾಮಧೇಯಗಳನ್ನು ಇಲ್ಲಿ ಹೇಳಿರುವುದಿಲ್ಲ ಮತ್ತು ಹೇಳಲೂ ಸಾಧ್ಯವಾಗುವುದಿಲ್ಲ. ಅಭಿಷೇಕವಾಗಲಿದ್ದ ಆ ದಿವ್ಯಮುಹೂರ್ತದಲ್ಲಿ ಎಲ್ಲ ದೇವತೆಗಳೂ ಅಭಿಷೇಕಕ್ಕೆ ಸಂಬಂಧಿಸಿದ ಭಾಂಡಗಳನ್ನೂ ಮತ್ತು ಇತರ ಮಂಗಳದ್ರವ್ಯಗಳನ್ನೂ ಕೈಗಳಲ್ಲೆತ್ತಿಕೊಂಡು ನಿಂತಿದ್ದರು.

**ದಿವ್ಯಸಮ್ಭಾರಸಂಯುಕ್ತೈಃ ಕಲಶೈಃ ಕಾಞ್ಚನೈರ್ನೃಪ ।**
**ಸರಸ್ವತೀಭಿಃ ಪುಣ್ಯಾಭಿರ್ದಿವ್ಯತೋಯಾಭಿರೇವ ತು ॥೨೦॥**

**ಅಭ್ಯಷಿಞ್ಚನ್ಕುಮಾರಂ ವೈ ಸಮ್ಪ್ರಹೃಷ್ಟಾ ದಿವೌಕಸಃ ।**
**ಸೇನಾಪತಿಂ ಮಹಾತ್ಮಾನಮಸುರಾಣಾಂ ಭಯಂಕರಮ್ ॥೨೧॥**

ಹರ್ಷೋಲ್ಲಸಿತರಾದ ದೇವತೆಗಳು ಪವಿತ್ರವಾದ ಮತ್ತು ದಿವ್ಯವಾದ ಸಪ್ತಸರಸ್ವತೀನದಿಗಳ ಪುಣ್ಯತೀರ್ಥಗಳಿಂದಲೂ, ದಿವ್ಯಸಂಭಾರಗಳಿಂದ ಯುಕ್ತವಾದ ಸುವರ್ಣಮಯವಾದ ಕಲಶಗಳಿಂದಲೂ, ಅಸುರರಿಗೆ ಭಯಂಕರನಾದ, ಮಹಾತ್ಮನಾದ ಸ್ಕಂದನನ್ನು ಸೇನಾಪತಿಯ ಸ್ಥಾನದಲ್ಲಿ ಅಭಿಷೇಕಮಾಡಿದರು.

ಹಿಂದೆ ವರುಣನನ್ನು ಜಲೇಶ್ವರನ ಪದವಿಯಲ್ಲಿ ಪಟ್ಟಾಭಿಷೇಕ ಮಾಡಿದಂತೆ–ಸರ್ವಲೋಕಪಿತಾಮಹನಾದ ಬ್ರಹ್ಮನೂ, ಮಹಾತೇಜಸ್ವಿಗಳಾದ ಕಶ್ಯಪರೂ, ಲೋಕವಿಖ್ಯಾತರಾದ ಇತರ ಮಹರ್ಷಿಗಳೂ ಕುಮಾರಸ್ವಾಮಿಯನ್ನು ದೇವಸೇನಾಧಿಪತಿಯ ಸ್ಥಾನದಲ್ಲಿ ಕುಳ್ಳಿರಿಸಿ ಪುಣ್ಯತೀರ್ಥಗಳಿಂದ ಅಭಿಷೇಕಮಾಡಿದರು.

ಆ ಸಮಯದಲ್ಲಿ ಪರಮಸಂತುಷ್ಟನಾದ ಪ್ರಭುವಾದ ಬ್ರಹ್ಮನು ವಾಯುವಿನಂತೆ ವೇಗಶಾಲಿಗಳಾಗಿದ್ದ, ಸ್ವೇಚ್ಛೆಯಿಂದ ವೀರ್ಯಸಂಪತ್ತನ್ನು ಪಡೆದುಕೊಳ್ಳಲು ಸಮರ್ಥರಾಗಿದ್ದ, ಬಲಿಷ್ಠರಾಗಿದ್ದ, ನಾಲ್ಕು ಮಂದಿ ಸಿದ್ಧ ಪುರುಷರನ್ನು ಕುಮಾರಸ್ವಾಮಿಗೆ ಅನುಚರರನ್ನಾಗಿ ಕಳುಹಿಸಿಕೊಟ್ಟನು. ನಂದಿಸೇನ, ಲೋಹಿತಾಕ್ಷ, ಪರಮಪ್ರಿಯನಾದ ಘಂಟಾಕರ್ಣ, ಕುಮುದಮಾಲೀ–ಈ ನಾಲ್ವರೇ ಬ್ರಹ್ಮನಿಂದ ಕಳುಹಿಸಲ್ಪಟ್ಟ ಕುಮಾರಸ್ವಾಮಿಯ ಮಹಾಪಾರಿಷದರಾಗಿದ್ದರು. ಮಹಾತೇಜಸ್ವಿಯಾದ ಸ್ಥಾಣುವೂ ಕಾಮನೆಂಬ ಮಹಾಪಾರಿಷದನೊಬ್ಬನನ್ನು ಕುಮಾರಸ್ವಾಮಿಯ ಸೇವೆಗಾಗಿ ಕಳುಹಿಸಿಕೊಟ್ಟನು. ರುದ್ರನು ಕಳುಹಿಸಿಕೊಟ್ಟ ಆ ಮಹಾಸುರನು ನೂರಾರು ಮಾಯಾವಿದ್ಯೆಗಳನ್ನು ತಿಳಿದವನಾಗಿದ್ದನು. ಇಚ್ಛಾನುಸಾರವಾಗಿ ವೀರ್ಯಸಂಪತ್ತನ್ನು ಹೊಂದುವ ಸಾಮರ್ಥ್ಯವನ್ನು ಪಡೆದಿದ್ದನು. ಅತ್ಯಂತ ಬಲಿಷ್ಠನಾಗಿದ್ದನು. ದೇವತೆಗಳ ಶತ್ರುಗಳಾದ ದೈತ್ಯ-ದಾನವರನ್ನು ವಿನಾಶಗೊಳಿಸುವವನಾಗಿದ್ದನು. ಹರನಿಂದ ಪ್ರೇಷಿತನಾದ ಆ ಮಹಾಸುರನು ದೇವಾಸುರಯುದ್ಧವು ನಡೆಯುತ್ತಿದ್ದ ಸಮಯದಲ್ಲಿ ಅತ್ಯಂತಕುಪಿತನಾಗಿ ಘೋರಕರ್ಮರಾದ ಹದಿನಾಲ್ಕು ದಶಲಕ್ಷ ದೈತ್ಯರನ್ನು ತನ್ನ ಎರಡು ಭುಜಗಳ ಸಹಾಯದಿಂದಲೇ ಸಂಹರಿಸಿದನು. ಅದೇ ರೀತಿಯಲ್ಲಿ ದೇವತೆಗಳೂ ದೇವಶತ್ರುಗಳನ್ನು ವಿನಾಶಗೊಳಿಸಲು ಸಮರ್ಥವಾಗಿದ್ದ, ಇತರರಿಂದ ಜಯಿಸಲು ಅಸಾಧ್ಯವಾಗಿದ್ದ, ನೈರ್ಋತರಿಂದ (ರಾಕ್ಷಸರಿಂದ) ಸಮಾಕುಲವಾಗಿದ್ದ, ವೈಷ್ಣವರೂಪಿಯಾದ ಸೈನ್ಯವನ್ನು ಕುಮಾರಸ್ವಾಮಿಗೆ ಒಪ್ಪಿಸಿದರು. ಇಂದ್ರ ಪ್ರಮುಖರಾದ ದೇವತೆಗಳೂ, ಗಂಧರ್ವ-ಯಕ್ಷ-ರಾಕ್ಷಸರೂ, ಮುನಿಗಳೂ

ಮತ್ತು ಪಿತೃದೇವತೆಗಳೂ 'ಸ್ಕಂದನಿಗೆ ಜಯವಾಗಲಿ! ಕುಮಾರಸ್ವಾಮಿಗೆ ಜಯವಾಗಲಿ! ಕಾರ್ತಿಕೇಯನಿಗೆ ಜಯವಾಗಲಿ!'–ಎಂದು ಜಯಘೋಷ ಗಳನ್ನು ಉದ್ಘೋಷಿಸಿದರು. ಯಮನು ಕಾಲೋಪಮರಾದ, ಮಹಾ ವೀರ್ಯರಾದ, ಮಹಾದ್ಯುತಿಮಂತರಾದ ಉನ್ಮಾಥ ಮತ್ತು ಪ್ರಮಾಥರೆಂಬ ಇಬ್ಬರು ಅನುಚರರನ್ನು ಕುಮಾರಸ್ವಾಮಿಗೆ ಒಪ್ಪಿಸಿಕೊಟ್ಟನು. ಕಾರ್ತಿಕೇ ಯನ ವಿಷಯದಲ್ಲಿ ಪರಮಪ್ರೀತನಾದ ಪ್ರತಾಪವಂತನಾದ ಸೂರ್ಯನು ಸ್ಕಂದನಿಗೆ ತನ್ನ ಅನುಯಾಯಿಗಳೇ ಆಗಿದ್ದ ಸುಭ್ರಾಜ ಮತ್ತು ಭಾಸ್ವರ ಎಂಬ ಇಬ್ಬರನ್ನು ಒಪ್ಪಿಸಿಕೊಟ್ಟನು. ಸೋಮನೂ ಸಹ ಕೈಲಾಸಶಿಖರಸದೃಶ ರಾಗಿದ್ದ, ಬಿಳಿಯ ಮಾಲೆಗಳನ್ನು ಹಾಕಿಕೊಂಡು ಬಿಳಿಯ ಚಂದನವನ್ನು ಪೂಸಿಕೊಂಡಿದ್ದ ಮಣಿ ಮತ್ತು ಸುಮಣಿ ಎಂಬ ತನ್ನ ಇಬ್ಬರು ಅನುಚರರನ್ನು ಕುಮಾರಸ್ವಾಮಿಗೆ ಒಪ್ಪಿಸಿದನು. ಹುತಾಶನನು ಮಗನಾದ ಸ್ಕಂದನಿಗೆ ತನ್ನ ಅನುಚರರಾಗಿದ್ದ, ಮಹಾಶೂರರಾದ, ಶತ್ರುಸೈನ್ಯ ಧ್ವಂಸಕರಾದ ಜ್ವಾಲಾಜಿಹ್ವ ಮತ್ತು ಜ್ಯೋತಿ ಎಂಬ ಇಬ್ಬರನ್ನು ಒಪ್ಪಿಸಿ ಕೊಟ್ಟನು. ಅಂಶನೂ ಧೀಮಂತನಾದ ಸ್ಕಂದನಿಗೆ ಪರಿಘ, ವಟ, ಮಹಾ ಬಲಿಷ್ಠನಾದ ಭೀಮ, ದಹತಿ, ದಹನ–ಎಂಬ ಐವರು ಅನುಚರರನ್ನು ಒಪ್ಪಿಸಿದನು. ಅವರೈವರಲ್ಲಿ ದಹತಿ ಮತ್ತು ದಹನರು ಅತ್ಯಂತ ಪ್ರಚಂಡರೂ ಮತ್ತು ವೀರ್ಯಸಮ್ಮತರೂ ಆಗಿದ್ದರು. ಶತ್ರುವೀರಹಂತಕನಾದ ವಾಸವನು ಅಗ್ನಿಪುತ್ರನಿಗೆ ವಜ್ರಾಯುಧವನ್ನೂ ಮತ್ತು ದಂಡವನ್ನೂ ಧರಿಸಿದ್ದ ಉತ್ಕ್ರೋಶ ಮತ್ತು ಪಂಚಕರನ್ನು ಒಪ್ಪಿಸಿಕೊಟ್ಟನು. ಅವರಿಬ್ಬರೂ ಯುದ್ಧದಲ್ಲಿ ಅಸಂಖ್ಯಾತರಾದ ಇಂದ್ರಶತ್ರುಗಳನ್ನು ಸಂಹರಿಸುತ್ತಿದ್ದರು. ಮಹಾಯಶೋವಂತನಾದ ವಿಷ್ಣುವು ಸ್ಕಂದನಿಗೆ ಚಕ್ರ, ವಿಕ್ರಮಕ ಮತ್ತು ಮಹಾಬಲಿಷ್ಠನಾದ ಸಂಕ್ರಮ–ಎಂಬ ಮೂವರು ಅನುಚರರನ್ನು ಒಪ್ಪಿಸಿಕೊಟ್ಟನು. ಸ್ಕಂದನ ವಿಷಯದಲ್ಲಿ ಪರಮಪ್ರೀತರಾಗಿದ್ದ, ವೈದ್ಯ ಶ್ರೇಷ್ಠರಾದ ಅಶ್ವಿನೀದೇವತೆಗಳು ಆಗ್ನೇಯನಿಗೆ ಸರ್ವವಿದ್ಯಾವಿಶಾರದರಾದ ವರ್ಧನ ಮತ್ತು ನಂದನರೆಂಬ ಇಬ್ಬರು ಅನುಚರರನ್ನು ಒಪ್ಪಿಸಿ ಕೊಟ್ಟರು. ಮಹಾಯಶಸ್ವಿಯಾದ ಧಾತೃವು ಮಹಾತ್ಮನಾದ ಸ್ಕಂದನಿಗೆ ಕುಂದ, ಕುಸುಮ, ಕುಮುದ, ಡಂಬರ ಮತ್ತು ಆಡಂಬರರೆಂಬ ಐವರು ಅನುಯಾಯಿಗಳನ್ನು ಒಪ್ಪಿಸಿದನು. ತ್ವಷ್ಟೃವು ಮಹಾ

ಬಲಿಷ್ಠರಾದ, ಬಲೋನ್ಮತ್ತರಾದ, ಮಹಾಮಾಯಾವಿಗಳಾದ ಮತ್ತು ಮೇಘ ಚಕ್ರಗಳನ್ನು ಧರಿಸಿದ್ದ ಚಕ್ರ ಮತ್ತು ಅನುಚಕ್ರ ಎಂಬಿಬ್ಬರನ್ನು ಸ್ಕಂದನ ಸೇವೆಗಾಗಿ ಕಳುಹಿಸಿಕೊಟ್ಟನು. ಭಗವಾನ್ ಮಿತ್ರನು ತಪೋಧನರಾದ, ವಿದ್ಯಾವಂತರಾದ, ಬಹಳ ಸುಂದರರಾಗಿದ್ದ, ವರದಾನಶೀಲರಾಗಿದ್ದ ಮೂರು ಲೋಕಗಳಲ್ಲಿಯೂ ವಿಖ್ಯಾತರಾಗಿದ್ದ, ಮಹಾತ್ಮರಾದ ಸುವ್ರತ ಮತ್ತು ಸತ್ಯಸಂಧರನ್ನು ಮಹಾತ್ಮನಾದ ಕುಮಾರಸ್ವಾಮಿಯ ಸೇವೆಗೆ ಕಳುಹಿಸಿಕೊಟ್ಟನು. ವಿಧಾತನು ಲೋಕವಿಖ್ಯಾತರಾದ ಮತ್ತು ಮಹಾತ್ಮರಾದ ಸುವ್ರತ-ಶುಭಕರ್ಮರನ್ನು ಕಾರ್ತಿಕೇಯನ ಸೇವೆಗೆ ಕಳುಹಿಸಿದನು. ಪೂಷನು ಮಹಾಮಾಯಾವಿಗಳಾದ ಪಾಣೀತಕ-ಕಾಲಿಕರೆಂಬ ಇಬ್ಬರು ಪಾರ್ಷದರನ್ನು (ಸಭಾಸದರನ್ನು) ಕಾರ್ತಿಕೇಯನಿಗೆ ಒಪ್ಪಿಸಿಕೊಟ್ಟನು. ವಾಯುದೇವನು ವಿಶಾಲಮುಖರಾದ, ಮಹಾಬಲಿಷ್ಠರಾದ ಬಲ ಮತ್ತು ಅತಿಬಲ ಎಂಬುವರನ್ನು ಕಾರ್ತಿಕೇಯನ ಸೇವೆಗಾಗಿ ಕಳುಹಿಸಿದನು. ಸತ್ಯಪ್ರತಿಜ್ಞ ನಾದ, ನೀರುಗಳಿಗೆ ಒಡೆಯನಾದ ವರುಣನು ತಿಮಿಯಂತೆ ಮುಖಗಳನ್ನು ಹೊಂದಿದ್ದ ಮಹಾಬಲಿಷ್ಠರಾದ ಯಮ ಮತ್ತು ಅತಿಯಮರೆಂಬುವರನ್ನು ಸ್ಕಂದನ ಸೇವೆಗಾಗಿ ಕಳುಹಿಸಿಕೊಟ್ಟನು. ಹಿಮವಂತನು ಮಹಾತ್ಮನಾದ ಸುವರ್ಚಸನನ್ನೂ ಮತ್ತು ಅತಿವರ್ಚಸನನ್ನೂ ಅಗ್ನಿಸುತನ ಸೇವೆಗಾಗಿ ಕಳುಹಿಸಿದನು. ಮೇರುವು ಕಾಂಚನನೆಂಬುವನನ್ನೂ–ಮಹಾತ್ಮನಾದ ಮೇಘಮಾಲಿಯನ್ನೂ ಅಗ್ನಿಯ ಮಗನ ಬಳಿಗೆ ಅವನ ಅನುಚರರನ್ನಾಗಿ ಕಳುಹಿಸಿಕೊಟ್ಟನು. ಆ ಇಬ್ಬರನ್ನೇ ಅಲ್ಲದೇ ಮೇರುವು ಅಗ್ನಿಯ ಮಗನಾದ ಆಗ್ನೇಯನ ಸೇವೆಗಾಗಿ ಮಹಾಬಲಪರಾಕ್ರಮಿಗಳಾದ ಸ್ಥಿರ ಮತ್ತು ಅತಿಸ್ಥಿರರೆಂಬುವರನ್ನೂ ಕಳುಹಿಸಿಕೊಟ್ಟನು. ಮಹಾತ್ಮನಾದ ವಿಂಧ್ಯನು ದೊಡ್ಡ-ದೊಡ್ಡ ಬಂಡೆಗಳಿಂದಲೇ ಯುದ್ಧಮಾಡುವ ಉಚ್ಛೃಂಗ ಮತ್ತು ಅತಿಶೃಂಗ ಎಂಬುವರನ್ನು ಅಗ್ನಿಪುತ್ರನಿಗೆ ಪಾರ್ಷದರನ್ನಾಗಿ ಕಳುಹಿಸಿ ಕೊಟ್ಟನು. ಸಮುದ್ರರಾಜನು ಗದಾಧಾರಿಗಳಾಗಿದ್ದ ಸಂಗ್ರಹ-ವಿಗ್ರಹರನ್ನು ಅಗ್ನಿಪುತ್ರನಾದ ಕಾರ್ತಿಕೇಯನಿಗೆ ಒಪ್ಪಿಸಿದನು. ಅವರಿಬ್ಬರೂ ಸ್ಕಂದನ ಮಹಾಪಾರ್ಷದರಾದರು. (ಸಭೆಯ ಮಹಾಸದಸ್ಯರಾದರು). ಶುಭದರ್ಶನೆ ಯಾದ ಪಾರ್ವತೀದೇವಿಯು ಉನ್ಮಾದ, ಶಂಕುಕರ್ಣ ಮತ್ತು ಪುಷ್ಪದಂತ–

ಎಂಬ ಮೂವರನ್ನು ಅಗ್ನಿಪುತ್ರನ ಪಾರ್ಷದರನ್ನಾಗಿ ಮಾಡಿದಳು. ಸರ್ಪ ರಾಜನಾದ ವಾಸುಕಿಯು ಜಯ ಮತ್ತು ಮಹಾಜಯ ಎಂಬಿಬ್ಬರು ನಾಗರನ್ನು ಅಗ್ನಿಪುತ್ರನಿಗೆ ಒಪ್ಪಿಸಿಕೊಟ್ಟನು.

ಪುರುಷವ್ಯಾಘ್ರನೇ! ಜನಮೇಜಯಮಹಾರಾಜ! ಇದೇ ರೀತಿಯಲ್ಲಿ ಸಾಧ್ಯರೂ, ಏಕಾದಶರುದ್ರರೂ, ಅಷ್ಟವಸುಗಳೂ, ಪಿತೃದೇವತೆಗಳೂ, ಸಮುದ್ರಾಧಿದೇವತೆಗಳೂ, ನದ್ಯಧಿದೇವತೆಗಳೂ, ಮಹಾಬಲಿಷ್ಠರಾದ ಪರ್ವತಾಧಿದೇವತೆಗಳೂ,–ಶೂಲ, ಪಟ್ಟಿಶ ಮೊದಲಾದ ಶತ್ರುಪ್ರಹಾರ ಯೋಗ್ಯವಾದ ದಿವ್ಯಾಯುಧಗಳನ್ನು ಹಿಡಿದಿದ್ದ, ನಾನಾವಿಧವಾದ ವೇಷ-ಭೂಷಣಗಳಿಂದ ವಿಭೂಷಿತರಾಗಿದ್ದ ಸೇನಾಗಣಾಧ್ಯಕ್ಷರನ್ನು ಕುಮಾರ ಸ್ವಾಮಿಗೆ ಒಪ್ಪಿಸಿದರು. ಅನೇಕವಿಧವಾದ ಆಯುಧಗಳಿಂದ ಸಂಪನ್ನರಾಗಿದ್ದ, ವಿಚಿತ್ರವಾದ ಆಭರಣಗಳಿಂದ ಸಮಲಂಕೃತರಾಗಿದ್ದ, ಸ್ಕಂದನ ಉಳಿದ ಸೈನಿಕರ ನಾಮಧೇಯಗಳನ್ನು ಹೇಳುವೆನು ; ಕೇಳು :

ಶಂಕುಕರ್ಣ, ನಿಕುಂಭ, ಪದ್ಮ, ಕುಮುದ, ಅನಂತ, ದ್ವಾದಶಭುಜ, ಕೃಷ್ಣ, ಉಪಕೃಷ್ಣ, ಘ್ರಾಣಶ್ರವಸ, ಕಪಿಸ್ಕಂಧ, ಕಾಂಚನಾಕ್ಷ, ಜಲಂಧಮ, ಅಕ್ಷ, ಸಂತರ್ಜನ, ಕುನದೀಕ, ತಮೋಽಂತಕೃತ್, ಏಕಾಕ್ಷ, ದ್ವಾದಶಾಕ್ಷ, ಏಕಜಟ, ಪ್ರಭು, ಸಹಸ್ರಬಾಹು, ವಿಕಟ, ವ್ಯಾಘ್ರಾಕ್ಷ, ಕ್ಷಿತಿಕಂಪನ, ಪುಣ್ಯನಾಮಾ, ಸುನಾಮಾ, ಸುಚಕ್ರ, ಪ್ರಿಯದರ್ಶನ, ಪರಿಶ್ರುತ, ಕೋಕನದ, ಪ್ರಿಯಮಾಲ್ಯಾನುಲೇಪನ, ಅಜೋದರ, ಗಜಶಿರಸ, ಸ್ಕಂಧಾಕ್ಷ ಶತಲೋಚನ, ಜ್ವಾಲಾಜಿಹ್ವ, ಕರಾಲಾಕ್ಷ, ಶಿತಿಕೇಶ, ಜಟೀ, ಹರಿ, ಪರಿಶ್ರುತ, ಕೋಕನದ, ಕೃಷ್ಣಕೇಶ, ಜಟಾಧರ, ಚತುರ್ದಂಷ್ಟ್ರ, ಅಷ್ಟಜಿಹ್ವ, ಮೇಘನಾದ, ಪೃಥುಶ್ರವಸ, ವಿದ್ಯುತಾಕ್ಷ, ಧನುರ್ವಕ್ತ್ರ, ಜಾಠರ, ಮಾರುತಾಶನ, ಉದಾರಾಕ್ಷ, ರಥಾಕ್ಷ, ವಜ್ರನಾಭ, ವಸುಪ್ರಭ, ಸಮುದ್ರವೇಗ, ಶೈಲಕಂಪೀ, ವೃಷ, ಮೇಷ, ಪ್ರವಾಹ, ನಂದಕ, ಉಪನಂದಕ, ಧೂಮ್ರ, ಶ್ವೇತ, ಕಲಿಂಗ, ಸಿದ್ಧಾರ್ಥ, ವರದ, ಪ್ರಿಯಕ, ನಂದ, ಪ್ರತಾಪವಂತನಾದ ಗೋನಂದ, ಆನಂದ, ಪ್ರಮೋದ, ಸ್ವಸ್ತಿಕ, ಧ್ರುವಕ, ಕ್ಷೇಮವಾಹ, ಸುವಾಹ, ಸಿದ್ಧಪಾತ್ರ, ಗೋವ್ರಜ, ಕನಕಾಪೀಡ, ಮಹಾಪಾರಿಷದೇಶ್ವರ, ಗಾಯನ, ಹಸನ, ಬಾಣ, ಪರಾಕ್ರಮಿಯಾದ ಖಡ್ಗ, ವೈತಾಲೀ, ಗತಿತಾಲೀ, ಕಥಕ,

ವಾತಿಕ, ಹಂಸಜ, ಪಂಕದಿಗ್ಧಾಂಗ, ಸಮುದ್ರೋನ್ಮಾದನ, ರಣೋತ್ಕಟ, ಪ್ರಹಾರ, ಶ್ವೇತಸಿದ್ಧ, ನಂದನ, ಕಾಲಕಂಠ, ಪ್ರಭಾಸ, ಕುಂಭಾಂಡಕೋದರ, ಕಾಲಕಕ್ಷ, ಸಿತ, ಭೂತಮಥನ, ಯಜ್ಞವಾಹ, ಸುವಾಹ, ದೇವಯಾಜೀ, ಸೋಮಪ, ಮಜ್ಜಾನ, ಮಹಾತೇಜಸ, ಕ್ರಥ, ಕ್ರಾಥ, ತುಹರ, ತುಹಾರ, ಪರಾಕ್ರಮಿಯಾದ ಚಿತ್ರದೇವ, ಮಧುರ, ಸುಪ್ರಸಾದ, ಕಿರೀಟೀ, ಮಹಾಬಲ, ವತ್ಸಲ, ಮಧುವರ್ಣ, ಕಲಶೋದರ, ಧರ್ಮದ, ಮನ್ಮಥಕರ, ಶಕ್ತಿಶಾಲಿಯಾದ ಸೂಚೀವಕ್ತ್ರ, ಶ್ವೇತವಕ್ತ್ರ, ಸುವಕ್ತ್ರ, ಚಾರುವಕ್ತ್ರ, ಪಾಂಡುರ, ದಂಡಬಾಹು, ಸುಬಾಹು, ರಜ, ಕೋಕಿಲಕ, ಅಚಲ, ಕನಕಾಕ್ಷ, ಬಾಲಸ್ವಾಮೀ, ಸಂಚಾರಕ, ಕೋಕನದ, ಗೃಧ್ರಪತ್ರ, ಜಂಬುಕ, ಲೋಹಾಜವಕ್ತ್ರ, ಜವನ, ಕುಂಭವಕ್ತ್ರ, ಕುಂಭಕ, ಸ್ವರ್ಣಗ್ರೀವ, ಕೃಷ್ಣೌಜಸ, ಹಂಸವಕ್ತ್ರ, ಚಂದ್ರಭ, ಪಾಣಿಕೂರ್ಚ, ಶಂಭೂಕ, ಪಂಚವಕ್ತ್ರ, ಶಿಕ್ಷಕ, ಚಾಪವಕ್ತ್ರ, ಜಂಬೂಕ, ಶಾಕವಕ್ತ್ರ ಮತ್ತು ಕುಂಜಲ–ಇವರೆಲ್ಲರೂ ಸ್ಕಂದನ ಪಾರ್ಷದರಾಗಿದ್ದರು.

ಆ ಎಲ್ಲ ಪಾರ್ಷದರೂ ಯೋಗಯುಕ್ತರೂ, ಮಹಾತ್ಮರೂ, ಬ್ರಾಹ್ಮಣಪ್ರಿಯರೂ ಆಗಿದ್ದರು. ಅವರೇ ಅಲ್ಲದೆ ಪಿತಾಮಹನಾದ ಬ್ರಹ್ಮನಿಂದ ಪ್ರೇಷಿತರಾದ ಮಹಾತ್ಮರಾದ ಮಹಾಪಾರಿಷದರೂ, ಬಾಲ-ಯುವಕ-ವೃದ್ಧಪಾರಿಷದರೂ ಸಾವಿರಾರು ಸಂಖ್ಯೆಯಲ್ಲಿ ಕುಮಾರನ ಸೇವೆಯಲ್ಲಿ ನಿರತರಾಗಿದ್ದರು. ಮಹಾರಾಜ! ಅವರೆಲ್ಲರಿಗೂ ನಾನಾವಿಧವಾದ ಮುಖಗಳಿದ್ದುವು. ಯಾವ-ಯಾವ ಮುಖದವರು ಕುಮಾರನ ಪರಿಷದ್ಗಣದಲ್ಲಿದ್ದರೆಂಬುದನ್ನು ಹೇಳುವೆನು ; ಕೇಳು. ಆಮೆಯ ಮುಖದವರಿದ್ದರು. ಕೋಳಿಯ ಮುಖದವರಿದ್ದರು. ಮೊಲದ ಮುಖದವರಿದ್ದರು. ಗೂಬೆಯ ಮುಖದವರಿದ್ದರು. ಕತ್ತೆಯ ಮುಖದವರೂ, ಒಂಟೆಯ ಮುಖದವರೂ ಅಲ್ಲಿದ್ದರು. ಹಂದಿಯ ಮುಖದವರೂ ಇದ್ದರು. ಬೆಕ್ಕಿನ ಮುಖದವರೂ, ಮೊಲದ ಮುಖದವರೂ, ದೀರ್ಘಮುಖರೂ, ಮುಂಗುಸಿಯ ಮುಖದವರೂ, ಗೂಬೆಯ ಮುಖದವರೂ, ಕಾಗೆಯ ಮುಖದವರೂ, ಇಲಿಯ ಮುಖದವರೂ, ದೊಡ್ಡ ಆಕಾರದ ಮುಂಗುಸಿಯ ಮುಖದವರೂ, ನವಿಲಿನ ಮುಖದವರೂ, ಕುಮಾರಸ್ವಾಮಿಯ ಪರಿಷದ್ವರ್ಗದಲ್ಲಿದ್ದರು. ಮೀನಿನ ಮುಖದವರೂ, ಆಡಿನ ಮುಖ

ದವರೂ, ಮೇಕೆಯ ಮುಖದವರೂ, ಕುರಿಯ ಮುಖದವರೂ, ಎಮ್ಮೆಯ ಮುಖದವರೂ, ಕರಡಿಯ ಮುಖದವರೂ, ಹುಲಿಯ ಮುಖದವರೂ, ತೋಳದ ಮುಖದವರೂ, ಸಿಂಹದ ಮುಖದವರೂ, ಕುಮಾರಸ್ವಾಮಿಯ ಸೇವೆಯಲ್ಲಿ ನಿರತರಾಗಿದ್ದರು. ಕೆಲವರು ಆನೆಯ ಮುಖಗಳನ್ನು ಧರಿಸಿದ್ದು ಬಹಳ ಭಯಂಕರವಾಗಿ ಕಾಣುತ್ತಿದ್ದರು. ಕೆಲವರಿಗೆ ಮೊಸಳೆಯ ಮುಖ ವಿದ್ದಿತು. ಗರುಡಮುಖರೂ, ರಣಹದ್ದಿನ ಮುಖವನ್ನು ಧರಿಸಿದ್ದವರೂ, ವೃಕ-ಕಾಕಮುಖರೂ ಕುಮಾರಸ್ವಾಮಿಯ ಸಭಾಸದಸ್ಯರಾಗಿದ್ದರು. ಹಸುವಿನ ಮುಖದವರೂ, ಕತ್ತೆಯ ಮುಖದವರೂ, ಒಂಟೆಯ ಮುಖದವರೂ, ಕಾಡುಬೆಕ್ಕಿನ ಮುಖದವರೂ ಕುಮಾರಸ್ವಾಮಿಯ ಸೇವೆಗಾಗಿ ಬಂದಿದ್ದರು. ಅವರಲ್ಲಿ ಕೆಲವರಿಗೆ ದೊಡ್ಡ-ದೊಡ್ಡ ಹೊಟ್ಟೆಗಳಿದ್ದುವು. ಕೆಲವರಿಗೆ ಆನೆಯ ಕಾಲುಗಳಿದ್ದುವು. ಕೆಲವರಿಗೆ ಕೆಲವು ಅಂಗಗಳು ಬಹಳ ದಪ್ಪವಾಗಿದ್ದುವು. ಕೆಲವರಿಗೆ ನಕ್ಷತ್ರಗಳಂತೆ ಫಳ-ಫಳಿಸುವ ಕಣ್ಣುಗಳಿದ್ದುವು. ಅಲ್ಲಿ ಬಂದಿದ್ದ ಕೆಲವರಿಗೆ ಪಾರಿವಾಳದ ಮುಖಗಳಿದ್ದುವು. ಕೆಲವರು ಎತ್ತಿನ ಮುಖವನ್ನು ಹೊಂದಿದ್ದರು. ಕೋಗಿಲೆಯ ಮುಖದವರೂ, ಗಿಡಗಪಕ್ಷಿಯ ಮುಖದವರೂ, ಅಗ್ನಿಪಕ್ಷಿಯ ಮುಖದವರೂ ಕುಮಾರನ ಪರಿಷ ದ್ವರ್ಗದಲ್ಲಿದ್ದರು. ಓತೀಕೇತ ಅಥವಾ ಹೆಂಟೇಗೊದ್ದದ ಮುಖದವರೂ ಅಲ್ಲಿದ್ದರು. ಕೆಲವರು ಧೂಳಿನಿಂದ ರಹಿತವಾದ ಬಿಳಿಯ ಬಟ್ಟೆಗಳನ್ನು ಧರಿಸಿದ್ದರು. ಕೆಲವರಿಗೆ ಹಾವಿನ ಮುಖದಂತಹ ಮುಖಗಳಿದ್ದುವು. ಕೆಲವರು ಶೂಲಮುಖರಾಗಿದ್ದರು. ಕೆಲವರು ಕ್ರೋಧಮುಖರು. ಕೆಲವರು ಸೌಮ್ಯಮುಖರು. ಅವರೆಲ್ಲರೂ ಕುಮಾರಸ್ವಾಮಿಯ ಸೇವೆಯಲ್ಲಿ ತೊಡಗಿದ್ದರು. ಕೆಲವರಿಗೆ ನಾಗರಹಾವಿನ ಮುಖಗಳಿದ್ದುವು. ಕೆಲವರು ನಾರುಮಡಿಯನ್ನು ಧರಿಸಿದ್ದರು. ಕೆಲವರಿಗೆ ಹಸುವಿನ ಮೂಗಿನಂತೆ ಮೂಗುಗಳಿದ್ದುವು. ಕೆಲವರಿಗೆ ಹಸುವಿನ ಮೂತಿಯಂತಹ ಮೂತಿ ಗಳಿದ್ದುವು. ಕೆಲವರಿಗೆ ಅಂಗಾಂಗಗಳೆಲ್ಲವೂ ಸಣ್ಣಗಿದ್ದು ದಪ್ಪವಾದ ಹೊಟ್ಟೆ ಯಿದ್ದಿತು. ಕೆಲವರಿಗೆ ಅಂಗಾಂಗಗಳೆಲ್ಲವೂ ದಪ್ಪವಾಗಿದ್ದುವು. ಆದರೆ ಹೊಟ್ಟೆಯು ಬಹಳ ತೆಳ್ಳಗಿದ್ದಿತು. ಕೆಲವರಿಗೆ ಕತ್ತು ಬಹಳ ಗಿಡ್ಡವಾಗಿದ್ದಿತು. ಕೆಲವರ ಕಿವಿಗಳು ಬಹಳ ಅಗಲವಾಗಿದ್ದುವು. ಕೆಲವರು ಹಾವು ಗಳಿಂದಲೇ ಅಲಂಕರಿಸಿಕೊಂಡಿದ್ದರು. ಕೆಲವರು ಗಜಚರ್ಮವನ್ನು

ಹೊದೆದುಕೊಂಡಿದ್ದರು. ಕೆಲವರು ಕೃಷ್ಣಾಜಿನವನ್ನು ಧರಿಸಿಕೊಂಡಿದ್ದರು. ಆ ಪಾರ್ಷದರಲ್ಲಿ ಕೆಲವರಿಗೆ ಹೆಗಲಿನಲ್ಲಿ ಮುಖವಿದ್ದಿತು. ಕೆಲವರಿಗೆ ಹೊಟ್ಟೆಯಲ್ಲಿ ಮುಖವಿದ್ದಿತು. ಬೆನ್ನಿನಲ್ಲಿ ಮುಖಗಳನ್ನು ಹೊಂದಿದ್ದವರೂ ಇದ್ದರು. ಕೆಲವರಿಗೆ ಬಾಯಿಯ ಪಕ್ಕದಲ್ಲಿ ಮುಖಗಳಿದ್ದುವು. ಕೆಲವರಿಗೆ ಮೊಣಕಾಲಿನಲ್ಲಿಯೂ ಕೆಲವರಿಗೆ ಪಕ್ಕೆಗಳಲ್ಲಿಯೂ ಮುಖಗಳಿದ್ದುವು. ಕೆಲವರಿಗೆ ಶರೀರದ ನಾನಾಪ್ರದೇಶಗಳಲ್ಲಿ ಮುಖಗಳಿದ್ದುವು. ಕೆಲವು ಗಣೇಶ್ವರರು ಹುಳು-ಚಿಟ್ಟೆಗಳ ಮುಖಗಳನ್ನು ಹೊಂದಿದ್ದರು. ಕೆಲವರಿಗೆ ನಾನಾಜಾತಿಯ ಸರ್ಪಗಳ ಮುಖಗಳಿದ್ದುವು. ಕೆಲವರಿಗೆ ಹಲವಾರು ತೋಳುಗಳಿದ್ದುವು. ಕೆಲವರಿಗೆ ಹಲವಾರು ಕುತ್ತಿಗೆಗಳಿದ್ದುವು. ಕೆಲವರ ತೋಳುಗಳು ವೃಕ್ಷಗಳಂತೆ ಕಾಣುತ್ತಿದ್ದುವು. ಕೆಲವರಿಗೆ ಸೊಂಟದ ಪ್ರದೇಶಗಳಲ್ಲಿ ತಲೆಗಳಿರುತ್ತಿದ್ದುವು. ಹಲವು ಪಾರ್ಷದರಿಗೆ ನಾಗರಹಾವಿನ ಹೆಡೆಯಂತಹ ಮುಖಗಳಿದ್ದುವು. ಆ ಪಾರ್ಷದರಲ್ಲಿ ಕೆಲವರು ನಾನಾವಿಧವಾದ ಲತೆಗಳ ಪೊದರುಗಳಲ್ಲಿಯೇ ವಾಸಮಾಡುವವರಾಗಿದ್ದರು. ಕೆಲವರು ನಾರುಬಟ್ಟೆಗಳಿಂದಲೇ ತಮ್ಮ ಶರೀರಗಳನ್ನು ಮುಚ್ಚಿಕೊಂಡಿದ್ದರು. ಕೆಲವರು ಸುವರ್ಣಮಯವಾದ ವಸ್ತ್ರಗಳನ್ನೇ ತೊಟ್ಟುಕೊಂಡಿದ್ದರು. ಕುಮಾರಸ್ವಾಮಿಯ ಸಭಿಕರು ನಾನಾವಿಧವಾದ ವೇಷಗಳನ್ನು ಧರಿಸಿದ್ದರು. ನಾನಾವಿಧವಾದ ಮಾಲೆಗಳಿಂದ ಅಲಂಕರಿಸಿಕೊಂಡಿದ್ದರು. ನಾನಾವಿಧವಾದ ಗಂಧಗಳನ್ನು ಲೇಪಿಸಿಕೊಂಡಿದ್ದರು. ನಾನಾವಿಧವಾದ ವಸ್ತ್ರಗಳನ್ನು ಧರಿಸಿದ್ದರು. ನಾನಾಮೃಗಗಳ ಚರ್ಮಗಳನ್ನು ಹೊದೆದುಕೊಂಡಿದ್ದರು. ಕೆಲವರು ಉಷ್ಣೀಶಗಳನ್ನು ಧರಿಸಿದ್ದರು. ಕೆಲವರು ಕಿರೀಟಗಳನ್ನು ಧರಿಸಿಕೊಂಡಿದ್ದರು. ಕೆಲವರಿಗೆ ಸುಂದರವಾದ ಕಂಠಗಳಿದ್ದುವು. ಕೆಲವರು ಒಳ್ಳೆಯ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದರು. ಕೆಲವರ ತಲೆಯ ಮೇಲೆ ಕಿರೀಟಗಳಿದ್ದುವು. ಕೆಲವರ ತಲೆಯ ಮೇಲೆ ಐದು ಶಿಖೆಗಳಿದ್ದುವು. ಕೆಲವರ ತಲೆಯಲ್ಲಿ ಸುವರ್ಣಮಯವಾದ ಕೂದಲುಗಳಿದ್ದುವು.

ಕುಮಾರಸ್ವಾಮಿಯ ಕೆಲವು ಪಾರ್ಷದರಿಗೆ ಎರಡು ಶಿಖೆಗಳೂ, ಕೆಲವರಿಗೆ ಮೂರು ಶಿಖೆಗಳೂ, ಕೆಲವರಿಗೆ ಏಳು ಶಿಖೆಗಳೂ ಇದ್ದುವು. ಕೆಲವರ

ತಲೆಗಳ ಮೇಲೆ ನವಿಲಿನ ಗರಿಗಳಿದ್ದುವು. ಕೆಲವರು ಕಿರೀಟಗಳನ್ನು ಧರಿಸಿ ಕೊಂಡಿದ್ದರು. ಕೆಲವರ ತಲೆಗಳು ಬೋಳು-ಬೋಳಾಗಿದ್ದುವು. ಕೆಲವರು ಶಿರಸ್ಸಿನಲ್ಲಿ ಜಟೆಯನ್ನು ಹೊಂದಿದ್ದರು. ಕೆಲವು ಪಾರ್ಷದರು ವಿಚಿತ್ರವಾದ ಮಾಲೆಗಳನ್ನು ಧರಿಸಿದ್ದರು. ಕೆಲವರ ಮುಖದ ತುಂಬ ಕೂದಲುಗಳಿದ್ದುವು. ಕುಮಾರಸ್ವಾಮಿಯ ಆ ಪಾರ್ಷದರೆಲ್ಲರೂ ಸಾಮಾನ್ಯವಾಗಿ ಯುದ್ಧ ಮಾಡುವುದರಲ್ಲಿಯೇ ಹೆಚ್ಚಿನ ಅಭಿರುಚಿಯುಳ್ಳವರಾಗಿದ್ದರು. ಶ್ರೇಷ್ಠರಾದ ದೇವತೆಗಳಿಂದಲೂ ಅವರು ಜಯಿಸಲ್ಪಡತಕ್ಕವರಾಗಿರಲಿಲ್ಲ. ಕೆಲವರು ಕೃಷ್ಣ ವರ್ಣದವರಾಗಿದ್ದರು. ಕೆಲವರ ಮುಖದಲ್ಲಿ ಮಾಂಸಖಂಡವೇ ಇರಲಿಲ್ಲ. ಕೆಲವರು ದೀರ್ಘವಾದ ಪೃಷ್ಠಭಾಗವುಳ್ಳವರಾಗಿದ್ದರು. ಕೆಲವರಿಗೆ ದೀರ್ಘ ವಾದ ಶರೀರವಿದ್ದಿತು. ಮತ್ತೆ ಕೆಲವರಿಗೆ ಹೊಟ್ಟೆಯು ಕೃಶವಾಗಿದ್ದಿತು. ಕೆಲವರ ಪೃಷ್ಠಭಾಗಗಳು ಬಹಳ ದಪ್ಪವಾಗಿದ್ದುವು. ಕೆಲವರ ಪೃಷ್ಠಭಾಗವು ಅತಿ ಚಿಕ್ಕದಾಗಿದ್ದಿತು. ಕೆಲವರಿಗೆ ಅತಿನೀಳವಾದ ಹೊಟ್ಟೆಯೂ ಮತ್ತು ಜನನೇಂದ್ರಿಯವೂ ಇದ್ದಿತು. ಕೆಲವರ ಭುಜಗಳು ಬಹಳ ದೊಡ್ಡ ದಾಗಿದ್ದುವು. ಕೆಲವರ ಭುಜಗಳು ಬಹಳ ಚಿಕ್ಕದಾಗಿದ್ದುವು. ಕೆಲವರ ಅಂಗಾಂಗಗಳೆಲ್ಲವೂ ಬಹಳ ಚಿಕ್ಕದಾಗಿ ಕಾಣುತ್ತಿದ್ದುವು. ಕೆಲವರು ಕುಳ್ಳಾಗಿದ್ದರು. ಕೆಲವರು ಬಹಳ ಕುಳ್ಳರಾಗಿದ್ದರು. ಕೆಲವರ ಮೊಣಕಾಲಿನ ಪ್ರದೇಶವು ಬಹಳ ಚಿಕ್ಕದಾಗಿದ್ದಿತು. ಕೆಲವರು ಆನೆಯ ಕಿವಿಗಳನ್ನು ಹೊಂದಿದ್ದರು. ಮತ್ತೆ ಕೆಲವರಿಗೆ ಆನೆಯ ಶಿರಸ್ಸುಗಳೇ ಇದ್ದುವು. ಕೆಲವರಿಗೆ ಆನೆಯ (ಮೂಗು) ಸೊಂಡಿಲಿದ್ದಿತು. ಕೆಲವರಿಗೆ ಆಮೆಯ ಮೂಗಿನಂತೆ ಮೂಗುಗಳಿದ್ದುವು. ಕೆಲವರಿಗೆ ತೋಳದ ಮೂಗಿದ್ದಿತು. ಕೆಲವು ಪಾರ್ಷದರು ಸುದೀರ್ಘವಾಗಿ ಉಸಿರನ್ನು ಮೇಲಕ್ಕೆ ಎಳೆದುಕೊಳ್ಳುತ್ತಿದ್ದರು. ಕೆಲವರ ಮೊಣಕಾಲುಗಳು ಬಹಳ ನೀಳವಾಗಿದ್ದುವು. ಕೆಲವರ ಮುಖಗಳು ಕೆಳಭಾಗದಲ್ಲಿರುತ್ತಿದ್ದುವು. ಅವರು ನೋಡಲು ಬಹಳ ವಿಕಾರವಾಗಿ ಕಾಣುತ್ತಿದ್ದರು. ಕೆಲವರಿಗೆ ದೊಡ್ಡದಾದ ಕೋರೆದಾಡೆಗಳಿದ್ದುವು. ಕೆಲವರಿಗೆ ಬಹಳ ಚಿಕ್ಕದಾದ ಕೋರೆದಾಡೆಗಳಿದ್ದುವು. ಕೆಲವರಿಗೆ ನಾಲ್ಕು ಕೋರೆದಾಡೆ ಗಳಿದ್ದುವು. ಸಾವಿರಾರು ಪಾರ್ಷದರು ಗಜರಾಜಸದೃಶರಾಗಿದ್ದು ಮಹಾಭಯಂಕರ ರಾಗಿ ಕಾಣುತ್ತಿದ್ದರು. ಕೆಲವರ ಅಂಗಾಂಗಗಳು ಸುಂದರವಾಗಿ ವಿಭಾಗಿಸಲ್ಪಟ್ಟಿದ್ದುವು.

(ಯಾವ ಅವಯವಗಳು ಲಕ್ಷಣಶಾಸ್ತ್ರದ ಪ್ರಕಾರ ಯಾವ ಪ್ರಮಾಣ ದಲ್ಲಿರಬೇಕೋ ಅದೇ ಪ್ರಮಾಣದಲ್ಲಿಯೇ ಇದ್ದುವು.) ಕೆಲವರು ಅತ್ಯಂತ ಕಾಂತಿಯುಕ್ತರಾಗಿದ್ದರು. ತಮ್ಮ ಶರೀರಗಳನ್ನು ಚೆನ್ನಾಗಿ ಅಲಂಕರಿಸಿ ಕೊಂಡಿದ್ದರು. ಕೆಲವರ ಕಣ್ಣುಗಳು ಪಿಂಗಳವರ್ಣದಿಂದ (ಹೊಂಬಣ್ಣದಿಂದ) ಕೂಡಿದ್ದುವು. ಕೆಲವರಿಗೆ ಶಂಕುಗಳಂತಹ ಕಿವಿಗಳಿದ್ದುವು. ಕೆಂಪುಬಣ್ಣದ ಮೂಗುಗಳಿದ್ದುವು. ಕೆಲವರಿಗೆ ಅಗಲವಾದ ಹಲ್ಲುಗಳಿದ್ದುವು. ಮತ್ತೆ ಕೆಲವರಿಗೆ ದೊಡ್ಡ ದೊಡ್ಡ ಹಲ್ಲುಗಳಿದ್ದುವು. ಕೆಲವರಿಗೆ ದಪ್ಪವಾದ ತುಟಿಗಳಿದ್ದುವು. ಕೆಲವರ ಕೂದಲುಗಳು ಹಸಿರುಬಣ್ಣದಿಂದ ಕೂಡಿದ್ದುವು. ಕೆಲವರಿಗೆ ಕಾಲುಗಳು, ತುಟಿ ಮತ್ತು ಹಲ್ಲುಗಳು ನಾನಾಪ್ರಕಾರವಾಗಿದ್ದುವು. ಕೆಲವರಿಗೆ ಕೈಗಳು ಮತ್ತು ತಲೆಗಳು ನಾನಾರೀತಿಯಲ್ಲಿದ್ದುವು. ಅವರೆಲ್ಲರೂ ನಾನಾವಿಧವಾದ ಚರ್ಮಗಳನ್ನು ಹೊದೆದುಕೊಂಡಿದ್ದರು. ನಾನಾ ಭಾಷೆಗಳನ್ನು ತಿಳಿದವರಾಗಿದ್ದರು. ದೇಶಭಾಷೆಗಳಲ್ಲಿ ಎಲ್ಲರೂ ಮಹಾ ಕುಶಲರಾಗಿದ್ದರು. ಆದುದರಿಂದಲೇ ಆ ಗಣೇಶ್ವರರು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು. ಮಹಾಪಾರಿಷದಗಣಗಳು ಪರಮಹೃಷ್ಟರಾಗಿ ಎಲ್ಲ ಕಡೆಗಳಿಂದಲೂ ಬಂದು ಧುಮುಕುತ್ತಿದ್ದರು. ಅವರಲ್ಲನೇಕರು ಉದ್ದವಾದ ಕುತ್ತಿಗೆಯುಳ್ಳವರಾಗಿದ್ದರು. ಉದ್ದವಾದ ಉಗುರುಗಳನ್ನು ಹೊಂದಿದ್ದರು. ಕೆಲವರಿಗೆ ಉದ್ದವಾದ ಕಾಲುಗಳೂ, ಶಿರಸ್ಸುಗಳೂ ಮತ್ತು ಭುಜಗಳೂ ಇದ್ದುವು. ಕೆಲವರಿಗೆ ಕಂದುಹಳದೀಬಣ್ಣದ ಕಣ್ಣುಗಳಿದ್ದುವು. ಕೆಲವರಿಗೆ ಕುತ್ತಿಗೆಯು ಕಪ್ಪಾಗಿದ್ದಿತು. ಕೆಲವರ ಕಿವಿಗಳು ಜೋತು ಬಿದ್ದಿದ್ದುವು. ಕೆಲವರಿಗೆ ತೋಳದ ಹೊಟ್ಟೆಯಂತಹ ಹೊಟ್ಟೆಯಿದ್ದಿತು. ಕೆಲವರು ಕಾಡಿಗೆಯಂತೆ ಕಪ್ಪಾಗಿದ್ದರು. ಕೆಲವರ ಕಣ್ಣುಗಳು ಬಿಳುಪಾಗಿಯೇ ಇದ್ದುವು. ಕೆಂಪಾದ ಕುತ್ತಿಗೆಯನ್ನು ಹೊಂದಿದ್ದರು. ಅನೇಕಪಾರ್ಷದರು ಚಿತ್ರ-ವಿಚಿತ್ರವರ್ಣದವರಾಗಿದ್ದರು. ಕೆಲವರು ಪಿಂಗಾಕ್ಷರು. ಕೆಲವರು ಕಪ್ಪು-ಬಿಳುಪು ಮಿಶ್ರಿತವಾದ ಬಣ್ಣವುಳ್ಳವರಾಗಿದ್ದರು. ಹಲವು ಪಾರ್ಷದರು ಚಾಮರದಂತೆ ಮತ್ತು ಬಿಳಿಯ ಹೂವಿನ ಮಾಲೆಯಂತೆ ಶ್ವೇತ ವರ್ಣದವರಾಗಿದ್ದರು. ಕೆಲವರು ಬಿಳುಪು ಮತ್ತು ಕೆಂಪು ಬಣ್ಣಗಳಿಂದ ಮಿಶ್ರವಾದ ರೋಮರಾಜಿಯಿಂದ ಪ್ರಕಾಶಿಸುತ್ತಿದ್ದರು. ಕೆಲವು ಗಣ ಗಳಲ್ಲಿ ವಿಧ-ವಿಧವಾದ ಬಣ್ಣಗಳಿಂದ ಕೂಡಿದ ಪಾರ್ಷದರಿದ್ದರು. ಕೆಲ

ವರು ಸಮಾನವರ್ಣದವರಾಗಿದ್ದರು. ಕೆಲವು ಪಾರ್ಷದರು ನವಿಲಿನ ವರ್ಣದಿಂದ ಪ್ರಕಾಶಿಸುತ್ತಿದ್ದರು.

ಜನಮೇಜಯ! ಉಳಿದ ಪಾರ್ಷದರು ಹೇಗಿದ್ದರು ಮತ್ತು ಯಾವ ಯಾವ ಆಯುಧಗಳನ್ನು ಧರಿಸಿದ್ದರೆಂಬುದನ್ನು ಹೇಳುವೆನು; ಕೇಳು :

ಕೆಲವು ಪಾರ್ಷದರು ಕೈಯಲ್ಲಿ ಪಾಶಗಳನ್ನು ಹಿಡಿದಿದ್ದರು. ಕೆಲವರು ಬಾಯಿಗಳನ್ನು ಅಗಲವಾಗಿ ತೆರೆದುಕೊಂಡಿದ್ದರು. ಕೆಲವರಿಗೆ ಕತ್ತೆಯ ಮುಖಗಳಿದ್ದುವು. ಮತ್ತೆ ಕೆಲವರಿಗೆ ಹಿಂಭಾಗದಲ್ಲಿ ಕಣ್ಣುಗಳಿದ್ದುವು. ಕೆಲವರ ಕತ್ತುಗಳು ನೀಲವರ್ಣದ್ದಾಗಿದ್ದುವು. ಕೆಲವರ ತೋಳುಗಳು ಪರಿಘಾಯುಧಕ್ಕೆ ಸಮಾನವಾಗಿದ್ದುವು. ಕೆಲವರು ಬಾಹುಗಳಲ್ಲಿ ಪರಿಘಗಳನ್ನು ಧರಿಸಿದ್ದರು. ಕೆಲವರು ಶತಘ್ನಿಗಳನ್ನೂ ಮತ್ತೆ ಕೆಲವರು ಚಕ್ರಗಳನ್ನೂ ಹಿಡಿದಿದ್ದರು. ಕೆಲವರು ಒನಕೆಗಳನ್ನೂ, ಕೆಲವರು ಕತ್ತಿಗಳನ್ನೂ, ಕೆಲವರು ಮುದ್ಗರಗಳನ್ನೂ, ಕೆಲವರು ದಂಡಗಳನ್ನೂ, ಕೆಲವರು ಗದೆಗಳನ್ನೂ, ಕೆಲವರು ಭುಷುಂಡಿಗಳನ್ನೂ, ಕೆಲವರು ತೋಮರಗಳನ್ನೂ ಹಿಡಿದಿದ್ದರು. ಮಹಾವೇಗವಂತರಾಗಿದ್ದ, ಮಹಾತ್ಮರಾದ ಆ ಪಾರ್ಷದರು ವಿಧ-ವಿಧವಾದ ಆಯುಧಗಳಿಂದ ಪರಿಶೋಭಿಸುತ್ತಿದ್ದರು. ಮಹಾಬಲರಾದ, ಮಹಾವೇಗವಂತರಾದ, ರಣಪ್ರಿಯರಾದ ಮಹಾ ಪಾರ್ಷದರು ಕುಮಾರಸ್ವಾಮಿಯ ದಿವ್ಯಾಭಿಷೇಕವನ್ನು ನೋಡಿ ಪರಮಹೃಷ್ಟರಾದರು. ಮಹಾತೇಜಸ್ಸಿನಿಂದ ಕೂಡಿದ್ದ ಹಲವು ಪಾರ್ಷದರು ಗಂಟೆಗಳ ಬಲೆಯನ್ನೇ ತಮ್ಮ ಶರೀರಕ್ಕೆ ಸುತ್ತಿಕೊಂಡು ನೃತ್ಯಮಾಡುತ್ತಿದ್ದರು. ಇನ್ನೂ ಅನೇಕ ಮಹಾಪಾರಿಷದರು ಮಹಾತ್ಮನಾದ, ಯಶೋವಂತನಾದ ಕಾರ್ತಿಕೇಯನನ್ನು ಸೇವಿಸುತ್ತಾ ಅವನ ಸಮೀಪದಲ್ಲಿ ನಿಂತಿದ್ದರು. ಸ್ವರ್ಗಾಂತರಿಕ್ಷ–ಭೂಲೋಕಗಳ ವಾಯುಸದೃಶರಾದ ಪರಿಷದ್ವರ್ಗದವರು ದೇವತೆಗಳ ಆಜ್ಞಾನುಸಾರವಾಗಿ ಸ್ಕಂದನ ಅನುಚರರಾದರು. ಅಂತಹ ಸಾವಿರಾರು- ಲಕ್ಷೋಪಲಕ್ಷ, ಕೋಟ್ಯನುಕೋಟಿ ಮಹಾಪಾರ್ಷದರು ಅಭಿಷಿಕ್ತನಾದ ಮಹಾತ್ಮನಾದ ಕುಮಾರಸ್ವಾಮಿಯನ್ನು ಸುತ್ತುವರಿದು ನಿಂತಿದ್ದರು.”

ಳ೫ನೆಯ ಅಧ್ಯಾಯವು ಮುಗಿಯಿತು.

೪೬ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಮಾತೃಗಣಗಳ ಪರಿಚಯ : ಸ್ಕಂದನ ರಣಯಾತ್ರೆ : ತಾರಕಾಸುರ-ಮಹಿಷಾಸುರರೇ ಮೊದಲಾದ ದೈತ್ಯರನ್ನು ಸಂಹಾರಮಾಡಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಮಹಾರಾಜ! ನಾನು ಈಗ ಹೇಳಲಿರುವ ಶತ್ರುವಿನಾಶಿನಿಯರಾದ, ಕುಮಾರನ ಅನುಚಾರಿಣೆಯರಾದ ಮಾತೃದೇವತೆಗಳ ಪುಣ್ಯನಾಮಧೇಯ ಗಳನ್ನು ಕೇಳು. ಶುಭದಾಯಿನಿಯರಾದ ಯಾವ ಮಾತೃದೇವತೆಗಳಿಂದ ಈ ಮೂರು ಲೋಕಗಳೂ ವ್ಯಾಪ್ತವಾಗಿರುವುವೋ, ಯಶಸ್ವಿನಿಯರಾದ ಕಲ್ಯಾಣಿಯರಾದ ಆ ಮಾತೃದೇವತೆಗಳ ಪುಣ್ಯನಾಮಗಳನ್ನು ಕೇಳು :

ಪ್ರಭಾವತೀ ವಿಶಾಲಾಕ್ಷೀ ಪಾಲಿತಾ ಗೋಸ್ತನೀ ತಥಾ ।
ಶ್ರೀಮತೀ ಬಹುಲಾ ಚೈವ ತಥೈವ ಬಹುಪುತ್ರಿಕಾ ॥೩॥

ಅಪ್ಸುಜಾತಾ ಚ ಗೋಪಾಲೀ ಬೃಹದಮ್ಬಾಲಿಕಾ ತಥಾ ।
ಜಯಾವತೀ ಮಾಲತಿಕಾ ಧ್ರುವರತ್ನಾ ಭಯಂಕರೀ ॥೪॥

ವಸುದಾಮಾ ಚ ದಾಮಾ ಚ ವಿಶೋಕಾ ನನ್ದಿನೀ ತಥಾ ।
ಏಕಚೂಡಾ ಮಹಾಚೂಡಾ ಚಕ್ರನೇಮಿಶ್ಚ ಭಾರತ ॥೫॥

ಉತ್ತೇಜಿನೀ ಜಯತ್ಸೇನಾ ಕಮಲಾಕ್ಷ್ಯಥ ಶೋಭನಾ ।
ಶತ್ರುಂಜಯಾ ತಥಾ ಚೈವ ಕ್ರೋಧನಾ ಶಲಭೀ ಖರೀ ॥೬॥

ಮಾಧವೀ ಶುಭವಕ್ತ್ರಾ ಚ ತೀರ್ಥನೇಮಿಶ್ಚ ಭಾರತ ।
ಗೀತಪ್ರಿಯಾ ಚ ಕಲ್ಯಾಣೀ ರುದ್ರರೋಮಾಮಿತಾಶನಾ ॥೭॥

ಮೇಘಸ್ವನಾ ಭೋಗವತೀ ಸುಭ್ರೂಶ್ಚ ಕನಕಾವತೀ ।
ಅಲಾತಾಕ್ಷೀ ವೀರ್ಯವತೀ ವಿದ್ಯುಜ್ಜಿಹ್ವಾ ಚ ಭಾರತ ॥೮॥

ಪದ್ಮಾವತೀ ಸುನಕ್ಷತ್ರಾ ಕನ್ದರಾ ಬಹುಯೋಜನಾ ।
ಸಂತಾನಿಕಾ ಚ ಕೌರವ್ಯ ಕಮಲಾ ಚ ಮಹಾಬಲಾ ॥೯॥

ಸುದಾಮಾ ಬಹುದಾಮಾ ಚ ಸುಪ್ರಭಾ ಚ ಯಶಸ್ವಿನೀ ।
ನೃತ್ಯಪ್ರಿಯಾ ಚ ರಾಜೇನ್ದ್ರ ಶತೋಲೂಖಲಮೇಖಲಾ ॥೧೦॥

ಶತಘಣ್ಟಾ ಶತಾನನ್ದಾ ಭಗನನ್ದಾ ಚ ಭಾವಿನೀ ।
ವಪುಷ್ಮತೀ ಚನ್ದ್ರಸೀತಾ ಭದ್ರಕಾಲೀ ಚ ಭಾರತ ॥೧೧॥

ಋಕ್ಷಾಮ್ಬಿಕಾ ನಿಷ್ಕುಟಿಕಾ ವಾಮಾ ಚತ್ವರವಾಸಿನೀ ।
ಸುಮಙ್ಗಲಾ ಸ್ವಸ್ತಿಮತೀ ಬುದ್ಧಿಕಾಮಾ ಜಯಪ್ರಿಯಾ ॥೧೨॥

ಧನದಾ ಸುಪ್ರಸಾದಾ ಚ ಭವದಾ ಚ ಜಲೇಶ್ವರೀ ।
ಏಡೀ ಭೇಡೀ ಸಮೇಡೀ ಚ ವೇತಾಲಜನನೀ ತಥಾ ॥೧೩॥

ಕಣ್ಡೂತಿಃ ಕಾಲಿಕಾ ಚೈವ ದೇವಮಿತ್ರಾ ಚ ಭಾರತ ।
ವಸುಶ್ರೀಃ ಕೋಟರಾ ಚೈವ ಚಿತ್ರಸೇನಾ ತಥಾಚಲಾ ॥೧೪॥

ಕುಕ್ಕುಟಿಕಾ ಶಙ್ಖಲಿಕಾ ತಥಾ ಶಕುನಿಕಾ ನೃಪ ।
ಕುಣ್ಡಾರಿಕಾ ಕೌಕುಲಿಕಾ ಕುಮ್ಭಿಕಾಥ ಶತೋದರೀ ॥೧೫॥

ಉತ್ಕ್ರಾಥಿನೀ ಜಲೇಲಾ ಚ ಮಹಾವೇಗಾ ಚ ಕಙ್ಕಣಾ ।
ಮನೋಜವಾ ಕಣ್ಟಕಿನೀ ಪ್ರಘಸಾ ಪೂತನಾ ತಥಾ ॥೧೬॥

ಕೇಶಯನ್ತ್ರೀ ತ್ರುಟಿರ್ವಾಮಾ ಕ್ರೋಶನಾಥ ತಡಿತ್ಪ್ರಭಾ ।
ಮನ್ದೋದರೀ ಚ ಮುಣ್ಡೀ ಚ ಕೋಟರಾ ಮೇಘವಾಹಿನೀ ॥೧೭॥

ಸುಭಗಾ ಲಮ್ಬಿನೀ ಲಮ್ಬಾ ತಾಮ್ರಚೂಡಾ ವಿಕಾಶಿನೀ ।
ಊರ್ಧ್ವವೇಣೀಧರಾ ಚೈವ ಪಿಙ್ಗಾಕ್ಷೀ ಲೋಹಮೇಖಲಾ ॥೧೮॥

ಪೃಥುವಸ್ತ್ರಾ ಮಧುಲಿಕಾ ಮಧುಕುಮ್ಭಾ ತಥೈವ ಚ ।
ಪಕ್ಷಾಲಿಕಾ ಮತ್ಕುಲಿಕಾ ಜರಾಯುರ್ಜರ್ಜರಾನನಾ ॥೧೯॥

ಖ್ಯಾತಾ ದಹದಹಾ ಚೈವ ತಥಾ ಧಮಧಮಾ ನೃಪ ।
ಖಣ್ಡಖಣ್ಡಾ ಚ ರಾಜೇನ್ದ್ರ ಪೂಷಣಾ ಮಣಿಕುಟ್ಟಿಕಾ ॥೨೦॥

ಅಮೋಘಾ ಚೈವ ಕೌರವ್ಯ ತಥಾ ಲಮ್ಬಪಯೋಧರಾ ।
ವೇಣುವೀಣಾಧರಾ ಚೈವ ಪಿಙ್ಗಾಕ್ಷೀ ಲೋಹಮೇಖಲಾ ॥೨೧॥

ಶಶೋಲೂಕಮುಖೀ ಕೃಷ್ಣಾ ಖರಜಙ್ಘಾ ಮಹಾಜವಾ ।
ಶಿಶುಮಾರಮುಖೀ ಶ್ವೇತಾ ಲೋಹಿತಾಕ್ಷೀ ವಿಭೀಷಣಾ ॥೨೨॥

ಜಟಾಲಿಕಾ ಕಾಮಚರೀ ದೀರ್ಘಜಿಹ್ವಾ ಬಲೋತ್ಕಟಾ ।
ಕಾಲೇಹಿಕಾ ವಾಮನಿಕಾ ಮುಕುಟಾ ಚೈವ ಭಾರತ ॥೨೩॥

ಲೋಹಿತಾಕ್ಷೀ ಮಹಾಕಾಯಾ ಹರಿಪಿಣ್ಡಾ ಚ ಭೂಮಿಪ ।
ಏಕತ್ವಚಾ ಸುಕುಸುಮಾ ಕೃಷ್ಣಕರ್ಣೀ ಚ ಭಾರತ ॥೨೪॥

ಕ್ಷುರಕರ್ಣೀ ಚತುಷ್ಕರ್ಣೀ ಕರ್ಣಪ್ರಾವರಣಾ ತಥಾ ।
ಚತುಷ್ಪಥನಿಕೇತಾ ಚ ಗೋಕರ್ಣೀ ಮಹಿಷಾನನಾ ॥೨೫॥

ಖರಕರ್ಣೀ ಮಹಾಕರ್ಣೀ ಭೇರೀಸ್ವನಮಹಾಸ್ವನಾ ।
ಶಙ್ಖಕುಮ್ಭಶ್ರವಾಶ್ಚೈವ ಭಗದಾ ಚ ಮಹಾಬಲಾ ॥೨೬॥

ಗಣಾ ಚ ಸುಗಣಾ ಚೈವ ತಥಾಭೀತ್ಯಥ ಕಾಮದಾ ।
ಚತುಷ್ಪಥರತಾ ಚೈವ ಭೂತಿತೀರ್ಥಾನ್ಯಗೋಚರೀ ॥೨೭॥

ಪಶುದಾ ವಿತ್ತದಾ ಚೈವ ಸುಖದಾ ಚ ಮಹಾಯಶಾಃ ।
ಪಯೋದಾ ಗೋಮಹಿಷದಾ ಸುವಿಶಾಲಾ ಚ ಭಾರತ ॥೨೮॥

ಪ್ರತಿಷ್ಠಾ ಸುಪ್ರತಿಷ್ಠಾ ಚ ರೋಚಮಾನಾ ಸುರೋಚನಾ ।
ನೌಕರ್ಣೀ ಮುಖಕರ್ಣೀ ಚ ವಿಶಿರಾ ಮನ್ಥಿನೀ ತಥಾ ।
ಏಕಚನ್ದ್ರಾ ಮೇಘಕರ್ಣಾ ಮೇಘಮಾಲಾ ವಿರೋಚನಾ ॥೨೯॥

ಪ್ರಭಾವತೀ, ವಿಶಾಲಾಕ್ಷೀ, ಪಾಲಿತಾ, ಗೋಸ್ತನೀ, ಶ್ರೀಮತೀ, ಬಹುಲಾ, ಬಹುಪುತ್ರಿಕಾ, ಅಪ್ಸುಜಾತಾ, ಗೋಪಾಲೀ, ಬೃಹದಂಬಾಲಿಕಾ, ಜಯಾವತೀ, ಮಾಲತಿಕಾ, ಧ್ರುವರತ್ನಾ, ಭಯಂಕರೀ, ವಸುದಾಮಾ, ದಾಮಾ, ವಿಶೋಕಾ, ನಂದಿನೀ, ಏಕಚೂಡಾ, ಮಹಾಚೂಡಾ, ಚಕ್ರನೇಮಿ, ಉತ್ತೇಜನೀ, ಜಯತ್ಸೇನಾ, ಕಮಲಾಕ್ಷೀ, ಶೋಭನಾ, ಶತ್ರುಂಜಯಾ, ಕ್ರೋಧನಾ, ಶಲಭೀ, ಖರೀ, ಮಾಧವೀ, ಶುಭವಕ್ತ್ರಾ, ತೀರ್ಥನೇಮಿ, ಗೀತ ಪ್ರಿಯಾ, ಕಲ್ಯಾಣೀ, ರುದ್ರರೋಮಾ, ಅಮಿತಾಶನಾ, ಮೇಘಸ್ವನಾ, ಭೋಗ ವತೀ, ಸುಭ್ರೂ, ಕನಕಾವತೀ, ಅಲಾತಾಕ್ಷೀ, ವೀರ್ಯವತೀ, ವಿದ್ಯು

ಜ್ಜಿಹ್ವಾ, ಪದ್ಮಾವತೀ, ಸುನಕ್ಷತ್ರಾ, ಕಂದರಾ, ಬಹುಯೋಜನಾ, ಸಂತಾನಿಕಾ, ಕಮಲಾ, ಮಹಾಬಲಾ, ಸುದಾಮಾ, ಬಹುದಾಮಾ, ಸುಪ್ರಭಾ, ಯಶಸ್ವಿನೀ, ನೃತ್ಯಪ್ರಿಯಾ, ಶತೋಲೂಖಲಮೇಖಲಾ, ಶತಘಂಟಾ, ಶತಾನಂದಾ, ಭಗನಂದಾ, ಭಾವಿನೀ, ವಪುಷ್ಮತೀ, ಚಂದ್ರಸೀತಾ, ಭದ್ರಕಾಲೀ, ಖುಕ್ಷಾಂಬಿಕಾ, ನಿಷ್ಕುಟಿಕಾ, ವಾಮಾ, ಚತ್ವರವಾಸಿನೀ, ಸುಮಂಗಲಾ, ಸ್ವಸ್ತಿಮತೀ, ಬುದ್ಧಿಕಾಮಾ, ಜಯಪ್ರಿಯಾ, ಧನದಾ, ಸುಪ್ರಸಾದಾ, ಭವದಾ, ಜಲೇಶ್ವರೀ, ಏಡೀ, ಭೇಡಿ, ಸಮೇಡಿ, ವೇತಾಲಜನನೀ, ಕಂಡೂತಿ, ಕಾಲಿಕಾ, ದೇವಮಿತ್ರಾ, ವಸುಶ್ರೀ, ಕೋಟರಾ, ಚಿತ್ರಸೇನಾ, ಅಚಲಾ, ಕುಕ್ಕುಟಿಕಾ, ಶಂಖಲಿಕಾ, ಶಕುನಿಕಾ, ಕುಂಡಾರಿಕಾ, ಕೌಕುಲಿಕಾ, ಕುಂಭಿಕಾ, ಶತೋದರೀ, ಉತ್ಕ್ರಾಥಿನೀ, ಜಲೇಲಾ, ಮಹಾವೇಗಾ, ಕಂಕಣಾ, ಮನೋಜವಾ, ಕಂಟಕಿನೀ, ಪ್ರಘಸಾ, ಪೂತನಾ, ಕೇಶಯಂತ್ರೀ, ತ್ರುಟಿ, ವಾಮಾ, ಕ್ರೋಶನಾ, ತಟಿತ್ಪ್ರಭಾ, ಮಂದೋದರೀ, ಮುಂಡೀ, ಕೋಟರಾ, ಮೇಘವಾಹಿನೀ, ಸುಭಗಾ, ಲಂಬನೀ, ಲಂಬಾ, ತಾಮ್ರಚೂಡಾ, ವಿಕಾಶಿನೀ, ಊರ್ಧ್ವವೇಣೀಧರಾ, ಪಿಂಗಾಕ್ಷೀ, ಲೋಹಮೇಖಲಾ, ಪೃಥುವಸ್ತ್ರಾ, ಮಧುಲಿಕಾ, ಮಧುಕುಂಭಾ, ಪಕ್ಷಾಲಿಕಾ, ಮತ್ಕುಲಿಕಾ, ಜರಾಯು, ಜರ್ಜರಾನನಾ, ಖ್ಯಾತಾ, ದಹದಹಾ, ಧಮಧಮಾ, ಖಂಡಖಂಡಾ, ಪೂಷಣಾ, ಮಣಿಕುಟ್ಟಿಕಾ, ಅಮೋಘಾ, ಲಂಬಪಯೋಧರಾ, ವೇಣುವೀಣಾಧರಾ, ಪಿಂಗಾಕ್ಷೀ, ಲೋಹಮೇಖಲಾ, ಶಶೋಲುಕಮುಖೀ, ಕೃಷ್ಣಾ, ಖರಜಂಘಾ, ಮಹಾಜವಾ, ಶಿಶುಮಾರಮುಖೀ, ಶ್ವೇತಾ, ಲೋಹಿತಾಕ್ಷೀ, ವಿಭೀಷಣಾ, ಜಟಾಲಿಕಾ, ಕಾಮಚರೀ, ದೀರ್ಘಜಿಹ್ವಾ, ಬಲೋತ್ಕಟಾ, ಕಾಲೇಹಿಕಾ, ವಾಮನಿಕಾ, ಮುಕುಟಾ, ಲೋಹಿತಾಕ್ಷೀ, ಮಹಾಕಾಯಾ, ಹರಿಪಿಂಡಾ, ಏಕತ್ವಚಾ, ಸುಕುಸುಮಾ, ಕೃಷ್ಣಕರ್ಣೀ, ಕ್ಷುರಕರ್ಣೀ, ಚತುಷ್ಕರ್ಣೀ, ಕರ್ಣಪ್ರಾವರಣಾ, ಚತುಷ್ಪಥನಿಕೇತಾ, ಗೋಕರ್ಣೀ, ಮಹಿಷಾನನಾ, ಖರಕರ್ಣೀ, ಮಹಾಕರ್ಣೀ, ಭೇರೀಸ್ವನಾ, ಮಹಾಸ್ವನಾ, ಶಂಖಶ್ರವಾ, ಕುಂಭಶ್ರವಾ, ಭಗದಾ, ಮಹಾಬಲಾ, ಗಣಾ, ಸುಗಣಾ, ಅಭೀತಿ, ಕಾಮದಾ, ಚತುಷ್ಪಥರತಾ, ಭೂತಿತೀರ್ಥಾ, ಅನ್ಯಗೋಚರೀ, ಪಶುದಾ, ವಿತ್ತದಾ, ಸುಖದಾ, ಮಹಾಯಶಾ, ಪಯೋದಾ,

ಗೋದಾ, ಮಹಿಷದಾ, ಸುವಿಶಾಲಾ, ಪ್ರತಿಷ್ಠಾ, ಸುಪ್ರತಿಷ್ಠಾ, ರೋಚಮಾನಾ, ಸುರೋಚನಾ, ನೌಕರ್ಣೀ, ಮುಖಕರ್ಣೀ, ವಿಶಿರಾ, ಮಂಥಿನೀ, ಏಕಚಂದ್ರಾ, ಮೇಘಕರ್ಣಾ, ಮೇಘಮಾಲಾ ಮತ್ತು ವಿರೋಚನಾ– ಇವುಗಳೇ ಮಾತೃದೇವತೆಯರ ಪವಿತ್ರನಾಮಗಳು. ಇವರೇ ಅಲ್ಲದೇ ನಾನಾ ರೂಪಧಾರಿಣಿಯರಾದ ಇನ್ನೂ ಹಲವು ಸಾವಿರ ಮಾತೆಯರು ಕಾರ್ತೀಕೆಯನ ಅನುಯಾಯಿಗಳಾಗಿದ್ದರು. ಆ ಮಾತೃಕೆಯರೆಲ್ಲರೂ ನೀಳವಾದ ಉಗುರುಗಳನ್ನು ಹೊಂದಿದ್ದರು. ನೀಳವಾದ ಹಲ್ಲುಗಳನ್ನು ಹೊಂದಿದ್ದರು. ಅವರ ಮುಖಗಳೂ ನೀಳವಾಗಿದ್ದುವು. ಬಹು ಬಲಿಷ್ಠರಾಗಿದ್ದರು. ಅತ್ಯಂತ ಕೋಮಲೆಯರಾಗಿಯೂ ಇದ್ದರು. ಎಲ್ಲರೂ ಯುವತಿಯರಾಗಿದ್ದರು. ಚೆನ್ನಾಗಿ ಅಲಂಕಾರಮಾಡಿಕೊಂಡಿದ್ದರು. ಎಲ್ಲರೂ ಅಪಾರವಾದ ಮಹಿಮೆಯುಳ್ಳವರಾಗಿದ್ದರು. ಇಚ್ಛಾನುಸಾರವಾಗಿ ರೂಪಗಳನ್ನು ಬದಲಾಯಿಸಿಕೊಳ್ಳುವ ಸಾಮರ್ಥ್ಯವನ್ನೂ ಪಡೆದಿದ್ದರು. ಆ ಮಾತೃದೇವತೆಗಳಲ್ಲಿ ಕೆಲವರಿಗೆ ಮಾಂಸಖಂಡವೇ ಇಲ್ಲದೇ ಅವರ ಶರೀರಗಳು ಶುಷ್ಕವಾಗಿ ಹೋಗಿದ್ದುವು. ಕೆಲವರು ಬಿಳುಪಾಗಿದ್ದರು. ಕೆಲವರು ಸುವರ್ಣವರ್ಣದವರಾಗಿದ್ದರು. ಕೆಲವರು ಕಪ್ಪಾದ ಮೇಘಗಳಂತಿದ್ದರು. ಅವರಲ್ಲಿ ಧೂಮ್ರವರ್ಣದವರೂ ಇದ್ದರು. ಕೆಲವರು ನಸುಗೆಂಪಾಗಿದ್ದರು. ಮಹಾಭೋಗಿನಿಯರಾಗಿದ್ದರು. ನೀಳವಾದ ಕೂದಲುಗಳುಳ್ಳವರಾಗಿದ್ದರು. ಬಿಳುಪಾದ ವಸ್ತ್ರಗಳನ್ನುಟ್ಟಿದ್ದರು. ಕೆಲವರು ತಲೆಯ ಮೇಲೆ ಗೋಪುರದಂತಹ ಕೇಶರಾಶಿಯನ್ನು ಧರಿಸಿದ್ದರು. ಕೆಲವರು ಕಂದುಬಣ್ಣದ ಕಣ್ಣುಗಳುಳ್ಳವರಾಗಿದ್ದರು. ಉದ್ದವಾದ ಒಡ್ಯಾಣಗಳಿಂದ ಸಮಲಂಕೃತರಾಗಿದ್ದರು. ಕೆಲವರಿಗೆ ನೀಳವಾಗಿ ಜೋತುಬಿದ್ದ ಹೊಟ್ಟೆಗಳಿದ್ದುವು. ಕೆಲವರ ಕಿವಿಗಳು ಉದ್ದವಾಗಿ ಜೋತುಬಿದ್ದಿದ್ದುವು. ಕೆಲವರ ಸ್ತನಗಳು ನೀಳವಾಗಿ ಜೋತುಬಿದ್ದಿದ್ದುವು. ಕೆಲವರು ರಕ್ತಾಕ್ಷಿಯರಾಗಿಯೂ ರಕ್ತವರ್ಣದವರಾಗಿಯೂ ಇದ್ದರು. ಕೆಲವರು ಹಸಿರು ಬಣ್ಣದ ಕಣ್ಣುಗಳನ್ನು ಹೊಂದಿದ್ದರು.

**ವರದಾಃ ಕಾಮಚಾರಿಣ್ಯೋ ನಿತ್ಯಂ ಪ್ರಮುದಿತಾಸ್ತಥಾ ।**
**ಯಾಮ್ಯಾ ರೌದ್ರಾಸ್ತಥಾ ಸೌಮ್ಯಾಃ ಕೌಬೇರ್ಯೋಽಥ**
**ಮಹಾಬಲಾಃ ॥೩೬॥**

**ವಾರುಣ್ಯೋಽಥ ಚ ಮಾಹೇನ್ದ್ರ್ಯಸ್ತಥಾಗ್ನೇಯ್ಯಃ ಪರಂತಪ ।**
**ವಾಯವ್ಯಶ್ಚಾಥ ಕೌಮಾರ್ಯೋ ಬ್ರಾಹ್ಮ್ಯಶ್ಚ ಭರತರ್ಷಭ ॥೩೭॥**

**ವೈಷ್ಣವ್ಯಶ್ಚ ತಥಾ ಸೌರ್ಯೋ ವಾರಾಹ್ಯಶ್ಚ ಮಹಾಬಲಾಃ ।**
**ರೂಪೇಣಾಪ್ಸರಸಾಂ ತುಲ್ಯಾ ಮನೋಹಾರ್ಯೋ ಮನೋರಮಾಃ ॥**

ಆ ಮಾತೃಕೆಯರು ಭಕ್ತರಿಗೆ ವರಗಳನ್ನು ಕೊಡುವವರಾಗಿದ್ದರು. ತಮಗೆ ಇಚ್ಛೆಬಂದಲ್ಲಿಗೆ ಹೋಗುತ್ತಿದ್ದರು. ನಿತ್ಯವೂ ಆನಂದ ತುಂದಿಲರಾಗಿರುತ್ತಿದ್ದರು. ಆ ಮಾತೃಕೆಯರಲ್ಲಿ ಕೆಲವರು ಯಮನ ಶಕ್ತಿಗಳಾಗಿದ್ದರು. ಕೆಲವರು ರುದ್ರನ ಶಕ್ತಿಗಳಾಗಿದ್ದರು. ಕೆಲವರು ಸೋಮನ ಶಕ್ತಿಗಳಾಗಿದ್ದರು. ಕೆಲವರು ಕುಬೇರನ ಶಕ್ತಿಗಳಾಗಿದ್ದರು. ಅವರೆಲ್ಲರೂ ಮಹಾಬಲಸಂಪನ್ನೆಯರಾಗಿದ್ದರು. ಇದೇ ರೀತಿಯಲ್ಲಿ ವರುಣ, ಇಂದ್ರ, ಅಗ್ನಿ, ವಾಯು, ಕುಮಾರ, ಬ್ರಹ್ಮಾ, ವಿಷ್ಣು, ಸೂರ್ಯ ಮತ್ತು ಭಗವಾನ್ ವರಾಹ–ಇವರ ಶಕ್ತಿಗಳೂ ಅಪಾರಸಂಖ್ಯೆಯಲ್ಲಿದ್ದುವು. ಅವರೂ ಸಹ ಮಹಾಬಲಶಾಲಿನಿಯರಾಗಿಯೂ, ಅಪ್ಸರೆಯರ ರೂಪಿಗೆ ಸಮಾನವಾದ ರೂಪಸಂಪತ್ತಿಯನ್ನು ಹೊಂದಿದವರಾಗಿಯೂ, ನೋಡಿದವರ ಮನಸ್ಸುಗಳನ್ನು ಅಪಹರಿಸುವವರಾಗಿಯೂ, ಭಕ್ತರ ಮನಸ್ಸಿಗೆ ಆನಂದದಾಯಿನಿಯರಾಗಿಯೂ ಇದ್ದರು. ಆ ಮಾತೃದೇವತೆಗಳು ಮಾತನಾಡುವುದರಲ್ಲಿ ಕೋಗಿಲೆಯಂತೆ ಮಾಧುರ್ಯದಿಂದ ಮಾತನಾಡುತ್ತಿದ್ದರು. ಧನಸಂಪತ್ತಿಯಲ್ಲಿ ಕುಬೇರನಿಗೆ ಅನುರೂಪರಾಗಿದ್ದರು. ಯುದ್ಧದಲ್ಲಿ ಇಂದ್ರನಿಗೆ ಸಮಾನರಾಗಿದ್ದರು. ತೇಜಸ್ಸಿನಲ್ಲಿ ಅಗ್ನಿಗೆ ಸಮಾನರಾಗಿದ್ದರು. ಯುದ್ಧವು ಪ್ರಾರಂಭವಾದ ನಂತರ ತಮ್ಮ ಭಕ್ತರ ಶತ್ರುಗಳಿಗೆ ಭಯದಾಯಕರಾಗುತ್ತಿದ್ದರು. ವೇಗದಲ್ಲಿ ಅವರು ವಾಯುವಿಗೆ ಸಮಾನರು. ತಮಗೆ ಬೇಕು-ಬೇಕಾದ ರೂಪಗಳನ್ನು ಧರಿಸಲು ಸಾಮರ್ಥ್ಯವಿರುವವರು. ಮಾತೃದೇವತೆಯರ ಬಲ-ವೀರ್ಯಗಳು ಅಚಿಂತ್ಯವಾದುವುಗಳು. ಅಂತೆಯೇ ಅವರ ಪರಾಕ್ರಮವೂ ಸಹ ಊಹೆಗೆ ಮೀರಿದುದು. ಮಾತೃದೇವತೆಯರು ವೃಕ್ಷಗಳಲ್ಲಿಯೂ, ಮನೆಯ ಮುಂಭಾಗದ ಅಂಗಳಗಳಲ್ಲಿಯೂ ಮತ್ತು ನಾಲ್ಕು ದಾರಿಗಳು ಸೇರುವ ಚೌಕಗಳಲ್ಲಿಯೂ ವಾಸಮಾಡುವವರು. ಕೆಲವರು ಮಾತೃದೇವತೆಗಳು ಗುಹೆ

ಗಳಲ್ಲಿಯೂ, ಶ್ಮಶಾನಗಳಲ್ಲಿಯೂ, ಪರ್ವತಗಳಲ್ಲಿಯೂ ಮತ್ತು ಝರಿಗಳಿರುವ ಪ್ರದೇಶಗಳಲ್ಲಿಯೂ ವಾಸಮಾಡುತ್ತಿದ್ದರು. ಮಾತೃ ದೇವತೆಗಳು ನಾನಾವಿಧವಾದ ಆಭರಣಗಳನ್ನು ಧರಿಸಿದ್ದರು. ನಾನಾ ವಿಧವಾದ ಪುಷ್ಪಹಾರಗಳನ್ನೂ ಮತ್ತು ವಸ್ತ್ರಗಳನ್ನೂ ಧರಿಸಿದ್ದರು. ಅವರ ವೇಷ-ಭೂಷಣಗಳೂ ವಿಚಿತ್ರವಾಗಿದ್ದುವು. ಅವರು ನಾನಾವಿಧವಾದ ಭಾಷೆಗಳನ್ನು ಆಡುತ್ತಿದ್ದರು. ಅವರೇ ಅಲ್ಲದೇ ಶತ್ರುಭಯಂಕರರಾದ ಇನ್ನೂ ಅನೇಕ ಗಣಗಳವರು ತ್ರಿದಶೇಂದ್ರನಾದ ಇಂದ್ರನ ಅಭಿಪ್ರಾಯದಂತೆ ಮಹಾತ್ಮನಾದ ಸ್ಕಂದನನ್ನು ಅನುಸರಿಸಿ ಹೋದರು.

ಬಳಿಕ ಭಗವಾನ್ ಪಾಕಶಾಸನನು (ಇಂದ್ರನು) ದೇವತೆಗಳ ಶತ್ರುಗಳನ್ನು ನಿಗ್ರಹಿಸುವ ಸಲುವಾಗಿ ಗುಹನಿಗೆ 'ಶಕ್ತಿ' ಎಂಬ ಹೆಸರಿನ ಮಹಾಸ್ತ್ರವನ್ನೂ ಮಹಾಶಬ್ದವನ್ನುಂಟುಮಾಡುವ ಉಜ್ಜ್ವಲಪ್ರಭೆಯಿಂದ ಪ್ರಕಾಶಿತವಾದ ದೊಡ್ಡದಾದ ಘಂಟೆಯನ್ನೂ ಕೊಟ್ಟನು.

ಪಶುಪತಿಯು ಸ್ಕಂದನಿಗೆ–ಉದಯಿಸಿದ ಬಾಲಸೂರ್ಯನ ವರ್ಣಕ್ಕೆ (ನಸುಗೆಂಪಿಗೆ) ಸಮಾನವಾದ ವರ್ಣವನ್ನು ಹೊಂದಿದ್ದ ದಿವ್ಯವಾದ ಒಂದು ಪತಾಕೆಯನ್ನೂ ಮತ್ತು ಸರ್ವಭೂತಗಳಿಂದಲೂ ಸಂಪನ್ನವಾದ ಮಹಾ ಸೈನ್ಯವನ್ನೂ ದಯಪಾಲಿಸಿದನು. ಭಯಂಕರವಾಗಿದ್ದ ಆ ಮಹಾಸೈನ್ಯವು 'ಧನಂಜಯ' ಎಂಬ ಹೆಸರಿನಿಂದ ಖ್ಯಾತಿಯನ್ನು ಪಡೆದಿದ್ದಿತು. ಅದರಲ್ಲಿದ್ದ ಎಲ್ಲ ಸೈನಿಕರೂ ಅಸ್ತ್ರ-ಶಸ್ತ್ರಗಳಿಂದಲೂ, ಬಲ-ಪರಾಕ್ರಮಗಳಿಂದಲೂ, ತಪಸ್ಸಿನಿಂದಲೂ ಸಂಪನ್ನರಾಗಿದ್ದರು. ರುದ್ರನಿಗೆ ಸಮಾನವಾದ ಪರಾಕ್ರಮ ವನ್ನು ಹೊಂದಿದ್ದ ಮೂವತ್ತು ಸಾವಿರ ರುದ್ರಗಣಗಳಿಂದ ಕೂಡಿದ್ದ ಆ ಮಹಾಸೈನ್ಯವು ಶತ್ರುಗಳಿಗೆ ಅಜೇಯವಾಗಿದ್ದಿತು.

**ನ ಸಾ ವಿಜಾನಾತಿ ರಣಾತ್ಕದಾಚಿದ್ವಿನಿವರ್ತಿತುಮ್ ॥೪೮॥**

ಆ ಮಹಾಸೈನ್ಯಕ್ಕೆ ಜಯಗಳಿಸದೇ ಯುದ್ಧದಿಂದ ಹಿಂದಿರುಗುವುದೆಂಬ ವಿಷಯವೇ ತಿಳಿದಿರಲಿಲ್ಲ.

ಮಹಾವಿಷ್ಣುವು ಸ್ಕಂದನಿಗೆ ಬಲವನ್ನು ವರ್ಧಿಸುವ ವೈಜಯಂತೀ

ಮಾಲೆಯನ್ನು ದಯಪಾಲಿಸಿದನು. ಉಮಾದೇವಿಯು ಸೂರ್ಯನ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ನಿರ್ಮಲವಾದ ಎರಡು ವಸ್ತ್ರಗಳನ್ನು ದಯಪಾಲಿಸಿದಳು. ಗಂಗಾದೇವಿಯು ಕುಮಾರಸ್ವಾಮಿಗೆ ಅಮೃತ ವನ್ನೀಯುವ ಉತ್ತಮೋತ್ತಮವಾದ ಕಮಂಡಲುವನ್ನು ಪ್ರೀತಿಪೂರ್ವಕವಾಗಿ ಅನುಗ್ರಹಿಸಿದಳು. ಬೃಹಸ್ಪತಿಯು ಪ್ರೀತಿಪೂರ್ವಕವಾಗಿ ದಂಡವನ್ನು ದಯಪಾಲಿಸಿದನು. ಗರುಡನು ವಿಚಿತ್ರವಾದ ಗರಿಗಳಿಂದ ಕೂಡಿದ್ದ ತನ್ನ ಪ್ರಿಯಪುತ್ರನಾದ ಮಯೂರಕುಮಾರನನ್ನೇ ಕುಮಾರಸ್ವಾಮಿಗೆ ಒಪ್ಪಿಸಿದನು. ಅರುಣನು ಕೆಂಪಾದ ಶಿಖೆಯನ್ನು ಹೊಂದಿದ್ದ, ಕಾಲುಗಳ ಪಂಜಗಳೇ ಆಯುಧವಾಗಿರುವ ಹುಂಜವನ್ನು ಕುಮಾರಸ್ವಾಮಿಗೆ ಒಪ್ಪಿಸಿದನು. ವರುಣನು ಬಲ ಮತ್ತು ವೀರ್ಯಗಳಿಂದ ಸಂಪನ್ನವಾಗಿದ್ದ ಆನೆಯನ್ನು ದಯಪಾಲಿಸಿದನು. ಲೋಕಭಾವನನಾದ (ಲೋಕಕರ್ತನಾದ) ಬ್ರಹ್ಮನು ಬ್ರಾಹ್ಮಣಪ್ರಿಯನಾದ ಕುಮಾರನಿಗೆ ಕೃಷ್ಣಾಜಿನವನ್ನು ದಯಪಾಲಿಸಿ ಸಮರ ಗಳಲ್ಲಿ ವಿಜಯವು ಲಭಿಸುವಂತೆ ವರವನ್ನು ಅನುಗ್ರಹಿಸಿದನು. ದೇವಗಣದ ಸೇನಾಪತ್ಯವನ್ನು ವಹಿಸಿಕೊಂಡ ಸ್ಕಂದನು ತನ್ನ ದಿವ್ಯವಾದ ತೇಜಸ್ಸಿನಿಂದ ಪ್ರಜ್ವಲಿಸುತ್ತಾ ಎರಡನೆಯ ಅಗ್ನಿದೇವನಂತೆಯೇ ಬೆಳಗುತ್ತಿದ್ದನು.

ಬಳಿಕ ಕುಮಾರಸ್ವಾಮಿಯು ಪಾರ್ಷದರಿಂದಲೂ-ಮಾತೃಗಣ ಗಳಿಂದಲೂ ಕೂಡಿದವನಾಗಿ ಸುರೇಶ್ವರನಿಗೆ ಆನಂದವನ್ನುಂಟುಮಾಡುತ್ತಾ ದೈತ್ಯರ ವಿನಾಶಕ್ಕಾಗಿ ಹೊರಟನು. ಭೂತಗಣಗಳಿಂದ ಯುಕ್ತವಾಗಿದ್ದ ಭಯಂಕರವಾದ ಆ ನೈಋತಿಸೇನೆಯು ಘಂಟೆ, ಭೇರೀ, ಶಂಖ ಮತ್ತು ಮೃದಂಗಗಳ ನಿನಾದಗಳಿಂದ ಝೇಂಕರಿಸುತ್ತಿದ್ದಿತು. ಎತ್ತರವಾದ ಪತಾಕೆ ಗಳಿಂದ ಪರಿಶೋಭಿಸುತ್ತಿದ್ದಿತು. ಅಸ್ತ್ರ-ಶಸ್ತ್ರಗಳಿಂದಲೂ ಪತಾಕೆಗಳಿಂದಲೂ ಸಂಪನ್ನವಾಗಿದ್ದ ಆ ಮಹಾಸೈನ್ಯವು–ನಕ್ಷತ್ರಗಳಿಂದ ಸುಶೋಭಿತವಾದ ಶರತ್ಕಾಲದ ಆಕಾಶದಂತೆ–ಪ್ರಕಾಶಿಸುತ್ತಿದ್ದಿತು. ಅನಂತರ ದೇವತಾ ಸಮೂಹಗಳೂ ನಾನಾವಿಧವಾದ ಭೂತಗಣಗಳೂ ಶಾಂತಮನಸ್ಕರಾಗಿ ಭೇರಿಗಳನ್ನು ಬಾರಿಸಿದರು. ಅನೇಕ ಶಂಖಗಳನ್ನೂದಿದರು. ಪಟಹ, ಝರ್ಝರ, ಕ್ರಕಚ, ಗೋವಿಷಾಣ (ಕೊಂಬು), ಆಡಂಬರ, ಗೋಮುಖ,

ಮಹಾಧ್ವನಿಯನ್ನುಂಟುಮಾಡುವ ನಗಾರಿ–ಇವೇ ಮುಂತಾದ ರಣವಾದ್ಯಗಳನ್ನು ತಾಳ-ಲಯಬದ್ಧವಾಗಿ ಬಾರಿಸತೊಡಗಿದರು. ಇಂದ್ರಸಹಿತರಾದ ಎಲ್ಲ ದೇವತೆಗಳೂ ಕುಮಾರನನ್ನು ಸ್ತೋತ್ರಮಾಡಿದರು. ದೇವ- ಗಂಧರ್ವರು ಗಾಯನಮಾಡುತ್ತಿದ್ದರು. ಅದಕ್ಕೆ ಅನುಸಾರವಾಗಿ ಅಪ್ಸರೆಯರು ನೃತ್ಯಮಾಡುತ್ತಿದ್ದರು.

ಇದರಿಂದ ಸುಪ್ರೀತನಾದ ಮಹಾಸೇನನು ದೇವತೆಗಳಿಗೆ ವರವನ್ನು ದಯಪಾಲಿಸಿದನು :

**ರಿಪೂನ್ಹನ್ತಾಸ್ಮಿ ಸಮರೇ ಯೇ ವೋ ವಧಚಿಕೀರ್ಷವಃ ॥೬೦॥**

"ನಿಮ್ಮನ್ನು ಸಂಹರಿಸಲು ಉದ್ಯುಕ್ತರಾಗಿರುವ ಆ ನಿಮ್ಮ ಎಲ್ಲ ಶತ್ರುಗಳನ್ನೂ ನಾನು ಯುದ್ಧದಲ್ಲಿ ಸಂಹರಿಸುತ್ತೇನೆ."

ಮಹಾತ್ಮರಾದ ದೇವತೆಗಳು ಸುರಶ್ರೇಷ್ಠನಾದ ಕುಮಾರಸ್ವಾಮಿಯಿಂದ ಈ ವರವನ್ನು ಪಡೆದು ಪ್ರೀತಾತ್ಮರಾಗಿ ತಮ್ಮ ಶತ್ರುಗಳು ಸಂಪೂರ್ಣವಾಗಿ ನಾಶಹೊಂದಿದರೆಂದೇ ಭಾವಿಸಿದರು.

ಮಹಾತ್ಮನಾದ ಕುಮಾರಸ್ವಾಮಿಯು ವರವನ್ನು ದಯಪಾಲಿಸಲಾಗಿ ಪ್ರಾಣಿಗಳ ಸಮೂಹದಿಂದ ಸಮುತ್ಥಿತವಾದ ಹರ್ಷಧ್ವನಿಯು ಮೂರು ಲೋಕಗಳನ್ನೂ ವ್ಯಾಪಿಸಿತು. ಮಹಾಸೇನನು ಮಹಾಸೇನೆಯಿಂದ ಪರಿವೃತನಾಗಿ ದೇವತೆಗಳ ರಕ್ಷಣಾರ್ಥವಾಗಿಯೂ-ಯುದ್ಧದಲ್ಲಿ ರಾಕ್ಷಸರನ್ನು ಸಂಹರಿಸುವ ಸಲುವಾಗಿಯೂ ಪ್ರಯಾಣವನ್ನು ಮುಂದುವರಿಸಿದನು.

**ವ್ಯವಸಾಯೋ ಜಯೋ ಧರ್ಮಃ ಸಿದ್ಧಿರ್ಲಕ್ಷ್ಮೀರ್ಧೃತಿಃ ಸ್ಮೃತಿಃ ।**
**ಮಹಾಸೇನಸ್ಯ ಸೈನ್ಯಾನಾಮಗ್ರೇ ಜಗ್ಮುರ್ನರಾಧಿಪ ॥೬೪॥**

ವ್ಯವಸಾಯ (ಕಾರ್ಯತತ್ಪರತೆ), ಜಯ, ಧರ್ಮ, ಸಿದ್ಧಿ, ಲಕ್ಷ್ಮೀ, ಧೃತಿ, ಸ್ಮೃತಿ–ಇವುಗಳೆಲ್ಲವೂ ಮಹಾಸೇನನ ಮಹಾಸೈನ್ಯದ ಮುಂಭಾಗದಲ್ಲಿ ಹೊರಟುವು. ಮಹಾಸೇನನ ಆ ಸೈನ್ಯವು ಬಹಳ ಭಯಂಕರವಾಗಿದ್ದಿತು. ಶೂಲ, ಮುದ್ಗರ, ಗದೆ, ಮುಸಲ, ನಾರಾಚ, ಶಕ್ತಿ, ತೋಮರ–ಇವೇ ಮೊದಲಾದ ಆಯುಧಗಳನ್ನು ಕೈಗಳಲ್ಲಿ ಹಿಡಿದಿದ್ದಿತು. ಆ ಮಹಾಸೈನ್ಯವು

ಪ್ರಜ್ವಲಿಸುವ ಕೊಳ್ಳಿಗಳಿಂದ ಯುಕ್ತವಾಗಿದ್ದಿತು. ವಿಚಿತ್ರವಾದ ಆಭರಣ ಗಳಿಂದಲೂ, ಕವಚಗಳಿಂದಲೂ ಪರಿಶೋಭಿಸುತ್ತಿದ್ದಿತು. ಮದಿಸಿದ ಸಿಂಹ ದಂತೆಯೇ ಗರ್ಜಿಸುತ್ತಿದ್ದಿತು. ಅಂತಹ ಮಹಾಸೈನ್ಯದೊಡನೆ ಗುಹನು ಗರ್ಜನೆಮಾಡುತ್ತಾ ಹೊರಟನು. ಮಹಾಸೇನಾಸಹಿತನಾದ ಮಹಾಸೇನ ನನ್ನು ನೋಡಿದೊಡನೆಯೇ ಎಲ್ಲ ದೈತ್ಯ-ದಾನವ-ರಾಕ್ಷಸರು ಭಯದಿಂದ ಉದ್ವಿಗ್ನರಾಗಿ ಎಲ್ಲ ದಿಕ್ಕುಗಳಿಗೂ ಪಲಾಯನಮಾಡಿದರು. ದೇವತೆಗಳು ನಾನಾಪ್ರಕಾರವಾದ ಆಯುಧಗಳನ್ನು ಹಿಡಿದು ದೈತ್ಯ-ದಾನವ-ರಾಕ್ಷಸರನ್ನು ಬೆನ್ನಟ್ಟಿಹೋದರು. ದೇವಶತ್ರುಗಳು ತಪ್ಪಿಸಿಕೊಂಡು ಓಡಿಹೋಗುತ್ತಿರುವು ದನ್ನು ನೋಡಿ ತೇಜಸ್ಸಿನಿಂದಲೂ ಬಲದಿಂದಲೂ ಸಂಪನ್ನನಾಗಿದ್ದ ಕುಮಾರಸ್ವಾಮಿಯು ಕುಪಿತನಾಗಿ ಮಹಾಭಯಂಕರವಾದ ಶಕ್ತ್ಯಸ್ತ್ರವನ್ನು ಪುನಃ-ಪುನಃ ದೇವಶತ್ರುಗಳ ಮೇಲೆ ಪ್ರಯೋಗಿಸಿದನು. ಆಜ್ಯಾಹುತಿಯಿಂದ ಪ್ರಜ್ವಲಿಸುವ ಯಜ್ಞೇಶ್ವರನಂತೆ–ಕುಮಾರಸ್ವಾಮಿಯು ಆ ಸಮಯದಲ್ಲಿ ಉಜ್ಜ್ವಲತೇಜಸ್ಸನ್ನು ಪ್ರಕಟಪಡಿಸಿದನು. ಮಹಾತೇಜಸ್ವಿಯಾದ ಸ್ಕಂದನು ಶಕ್ತ್ಯಸ್ತ್ರವನ್ನು ಪ್ರಯೋಗಿಸುತ್ತಿರಲಾಗಿ ಪ್ರಜ್ವಲಿಸುತ್ತಿದ್ದ ಉಲ್ಕೆಯು ಭೂಮಿಯ ಮೇಲೆ ಬಿದ್ದಿತು. ಪ್ರಳಯಕಾಲದಲ್ಲಿ ಅತ್ಯಂತಭಯಂಕರವಾದ ಸಿಡಿಲು ಮಹಾಶಬ್ದದೊಡನೆ ಭೂಮಿಯ ಮೇಲೆ ಬೀಳುವಂತೆ–ಸ್ಕಂದನು ಶಕ್ತ್ಯಸ್ತ್ರವನ್ನು ಪ್ರಯೋಗಿಸುತ್ತಿರುವಾಗ ಭಯಂಕರಗರ್ಜನೆಯೊಡನೆ ಸಿಡಿಲುಗಳು ಭೂಮಿಯ ಮೇಲೆ ಬೀಳತೊಡಗಿದುವು. ಅಗ್ನಿಪುತ್ರನು ಒಂದೊಂದು ಬಾರಿ ಶಕ್ತ್ಯಸ್ತ್ರವನ್ನು ಪ್ರಯೋಗಿಸಿದಾಗಲೂ ಆ ಶಕ್ತ್ಯಸ್ತ್ರದಿಂದ ಅನೇಕಕೋಟಿ ಶಕ್ತ್ಯಸ್ತ್ರಗಳು ಹೊರಬರುತ್ತಿದ್ದುವು. ಅನಂತರ ಪರಮ ಪ್ರೀತನಾದ ಪ್ರಭುವಾದ ಭಗವಾನ್ ಮಹಾಸೇನನು ಮಹಾಬಲಿಷ್ಠನಾದ, ಅತುಲಪರಾಕ್ರಮಿಯಾದ, ಬಲಿಷ್ಠರಾದ ಒಂದು ಲಕ್ಷ ದೈತ್ಯರಿಂದ ಸಮಾವೃತನಾಗಿದ್ದ ತಾರಕನೆಂಬ ದೈತ್ಯರಾಜನನ್ನು ಸಂಹಾರಮಾಡಿದನು. ಬಳಿಕ ಕುಮಾರಸ್ವಾಮಿಯು ಎಂಟು *ಪದ್ಮಸಂಖ್ಯಾತರಾದ ಮಹಾ

---

*ಪದ್ಮ : ಒಂದರ ಮುಂದೆ ಹತ್ತೊಂಬತ್ತು ಸೊನ್ನೆಗಳನ್ನು ಬರೆದರೆ ಒಂದು ಪದ್ಮ ಎಂದು ಹೆಸರು. 10000000000000000000. ಬಹುಸಂಖ್ಯಾತರು ಎಂಬ ಅರ್ಥದಲ್ಲಿಟ್ಟುಕೊಳ್ಳಬಹುದು.

ದೈತ್ಯರಿಂದ ಪರಿವೃತನಾಗಿದ್ದ ಮಹಿಷನೆಂಬ ರಾಕ್ಷಸನನ್ನು ಸಂಹರಿಸಿದನು. ಅನಂತರ ಹತ್ತು ಲಕ್ಷ ಅಸುರರಿಂದ ಪರಿವೃತನಾಗಿದ್ದ ತ್ರಿಪಾದನನ್ನು ಸಂಹರಿಸಿದನು. ಬಳಿಕ ಸ್ಕಂದನು ಹತ್ತು *ನಿಖರ್ವದೈತ್ಯರಿಂದ ಸಂರಕ್ಷಿತನಾಗಿದ್ದ ಹ್ರದೋದರ ಎಂಬ ಮಹಾರಾಕ್ಷಸನನ್ನು ನಾನಾವಿಧವಾದ ಆಯುಧಗಳನ್ನು ಧರಿಸಿದ್ದ ಅವನ ಅನುಚರರ ಸಹಿತವಾಗಿ ಸಂಹರಿಸಿದನು. ದೇವಶತ್ರುಗಳು ಹೀಗೆ ಕುಮಾರಸ್ವಾಮಿಯಿಂದ ವಧಿಸಲ್ಪಡುತ್ತಿರಲಾಗಿ, ಕುಮಾರನ ಅನುಚರರು ಹತ್ತು ದಿಕ್ಕುಗಳನ್ನೂ ಜಯಘೋಷಗಳಿಂದ ತುಂಬಿಬಿಟ್ಟರು. ಇಷ್ಟುಮಾತ್ರವಲ್ಲ; ಸಂತೋಷಭರಿತರಾದ ಅವರೆಲ್ಲರೂ ಕುಣಿದಾಡಿದರು. ಅಟ್ಟಹಾಸಪೂರ್ವಕವಾಗಿ ನಗುತ್ತಿದ್ದರು.

ಮಹಾರಾಜ! ಸರ್ವತ್ರ ಪ್ರಸರಿಸುತ್ತಿದ್ದ ಶಕ್ತ್ಯಸ್ತ್ರದ ಮಹಾಜ್ವಾಲೆಗಳಿಂದಾಗಿ ಮೂರು ಲೋಕಗಳೂ ಭಯಗೊಂಡುವು. ಸಾವಿರಾರು ದೈತ್ಯರು ಆ ಶಕ್ತ್ಯಸ್ತ್ರದ ಜ್ವಾಲೆಗಳಿಗೆ ಸಿಕ್ಕಿ ಭಸ್ಮೀಭೂತರಾದರು. ಕೆಲವರು ಸ್ಕಂದನ ಸಿಂಹನಾದವನ್ನು ಕೇಳಿಯೇ ಮೃತರಾದರು. ಕೆಲವು ದೇವಶತ್ರುಗಳು ಸ್ಕಂದನ ಪತಾಕೆಯಿಂದ ತಳ್ಳಲ್ಪಟ್ಟವರಾಗಿ ಕೆಳಕ್ಕೆ ಬಿದ್ದು ಪ್ರಾಣಗಳನ್ನು ತೊರೆದರು. ಕೆಲವು ದೈತ್ಯರು ಪತಾಕೆಯಲ್ಲಿದ್ದ ಘಂಟೆಯ ಶಬ್ದವನ್ನು ಕೇಳಿಯೇ ಭಯಗೊಂಡವರಾಗಿ ಭೂಮಿಯ ಮೇಲೆ ಸ್ತಬ್ಧರಾಗಿ ಕುಳಿತುಬಿಟ್ಟರು. ಕೆಲವರು ಸ್ಕಂದನ ಆಯುಧಗಳಿಂದ ಛಿನ್ನ-ಭಿನ್ನರಾಗಿ ಪ್ರಾಣಗಳನ್ನು ತೊರೆದು ಕೆಳಗುರುಳಿದರು. ಮಹಾಬಲನಾದ, ವೀರನಾದ ಕಾರ್ತಿಕೇಯನು ಈ ರೀತಿಯಲ್ಲಿ ಪರಹಿಂಸೆಯಲ್ಲಿಯೇ ಆಸಕ್ತರಾದ ಅನೇಕ ದೇವದ್ರೋಹಿಗಳನ್ನು ಸಂಹರಿಸಿದನು.

ಬಲಿಯ ಮಗನಾದ ಮಹಾಬಲನಾದ ಬಾಣನೆಂಬ ಹೆಸರಿನ ದೈತ್ಯನು ಕ್ರೌಂಚಪರ್ವತವನ್ನು ಆಶ್ರಯಿಸಿ ದೇವತೆಗಳನ್ನು ಬಾಧಿಸತೊಡಗಿದನು. ಉದಾರಬುದ್ಧಿಯಾದ ಮಹಾಸೇನನು ಸುರಶತ್ರುವಾದ ಬಾಣನನ್ನು ಹಿಂಬಾಲಿಸಿ ಹೋದನು. ಆ ಬಾಣಾಸುರನು ಕಾರ್ತಿಕೇಯನ ಭಯದಿಂದಾಗಿ ಕ್ರೌಂಚಪರ್ವತವನ್ನೇ ಮರೆಹೊಕ್ಕನು. ಅದರಿಂದ ಬಹಳವಾಗಿ ಕೋಪಗೊಂಡ ಕಾರ್ತಿಕೇಯನು ತನ್ನ ತಂದೆಯಾದ ಅಗ್ನಿಯಿಂದ ಕೊಡಲ್ಪಟ್ಟಿದ್ದ

*ನಿಖರ್ವ = ಹತ್ತು ಸಾವಿರ ಕೋಟಿ.

ಶಕ್ತ್ಯಾಯುಧದಿಂದ ಕ್ರೌಂಚಪಕ್ಷಿಗಳ ಕಿಲ-ಕಿಲಧ್ವನಿಯಿಂದ ನಿನಾದಿತವಾಗಿದ್ದ ಕ್ರೌಂಚಪರ್ವತವನ್ನೇ ಸೀಳಿಬಿಟ್ಟನು. ಆ ಕ್ರೌಂಚಪರ್ವತವು ವಿಶಾಲ ವೃಕ್ಷಗಳಿಂದ ಸಮೃದ್ಧವಾಗಿದ್ದು ಹಚ್ಚಗೆ ಕಾಣುತ್ತಿದ್ದಿತು. ಕುಮಾರಸ್ವಾಮಿಯು ಶಕ್ತ್ಯಾಯುಧದಿಂದ ಪರ್ವತವನ್ನು ಭೇದಿಸಿದೊಡನೆಯೇ ಆ ಪರ್ವತದಲ್ಲಿ ವಾಸಮಾಡುತ್ತಿದ್ದ ಕಪಿಗಳೂ ಮತ್ತು ಆನೆಗಳೂ ಭಯಗೊಂಡುವು. ವೃಕ್ಷಗಳ ಮೇಲಿದ್ದ ಪಕ್ಷಿಗಳು ಭ್ರಾಂತಿಗೊಂಡು ಮೇಲಕ್ಕೆ ಹಾರಿದುವು. ವೃಕ್ಷಗಳ ಮೇಲಿದ್ದ ಹಾವುಗಳು ಕೆಳಗೆ ಬಿದ್ದುವು. ಗೋಲಾಂಗೂಲಗಳೆಂಬ ಕಪಿಗಳೂ ಮತ್ತು ಕರಡಿಗಳೂ ಚೀತ್ಕಾರಮಾಡುತ್ತಾ ಓಡಿಹೋಗುತ್ತಿದ್ದು ಆ ಧ್ವನಿಯಿಂದ ಪರ್ವತದಲ್ಲಿ ಪ್ರತಿಧ್ವನಿಯನ್ನುಂಟುಮಾಡಿದುವು. ಭಯ ಗೊಂಡು ಆರ್ತನಾದಮಾಡುತ್ತಾ ಓಡಿಹೋಗುತ್ತಿದ್ದ ಜಿಂಕೆಗಳ ಶಬ್ದದಿಂದ ಆ ಪರ್ವತದ ವನಪ್ರದೇಶವು ತುಂಬಿಹೋಯಿತು. ಗುಹೆಗಳಿಂದ ಹೊರಬಂದು ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದ ಶರಭಗಳಿಂದಲೂ ಮತ್ತು ಸಿಂಹಗಳಿಂದಲೂ ಆ ಪರ್ವತವು ಶೋಚನೀಯವಾದ ಸ್ಥಿತಿಯನ್ನು ಹೊಂದಿ ದ್ದರೂ ಶೋಭಾಯಮಾನವಾಗಿರುವಂತೆಯೇ ಕಾಣುತ್ತಿದ್ದಿತು. ಕ್ರೌಂಚ ಪರ್ವತದ ಶಿಖರದಲ್ಲಿ ವಾಸಮಾಡುತ್ತಿದ್ದ ವಿದ್ಯಾಧರರೂ ಮತ್ತು ಕಿನ್ನರರೂ ಶಕ್ತ್ಯಾಯುಧಪ್ರಹಾರದಿಂದ ಉಂಟಾದ ಶಬ್ದದಿಂದ ಭ್ರಾಂತರಾಗಿ ಆಕಾಶಕ್ಕೆ ಹಾರಿದರು. ಶಕ್ತ್ಯಾಯುಧಪ್ರಹಾರದಿಂದ ಪ್ರದೀಪ್ತವಾಗಿದ್ದ ಶ್ರೇಷ್ಠವಾದ ಆ ಕ್ರೌಂಚಪರ್ವತದಿಂದ ವಿಚಿತ್ರವಾದ ಆಭರಣಗಳನ್ನೂ ಮತ್ತು ಮಾಲೆಗಳನ್ನೂ ಧರಿಸಿದ್ದ ನೂರಾರು-ಸಾವಿರಾರು ದೈತ್ಯರು ಹೊರಬಂದರು. ಕುಮಾರನ ಅನುಚರರು ಹಾಗೆ ಹೊರಬಂದ ದೈತ್ಯರನ್ನು ಯುದ್ಧದಲ್ಲಿ ಆಕ್ರಮಿಸಿ ಸಂಹರಿಸಿದರು. ಭಗವಾನ್ ಕುಮಾರಸ್ವಾಮಿಯೂ ಪರಮಕ್ರುದ್ಧನಾಗಿ ದೈತ್ಯೇಂದ್ರನಾದ ಬಲಿಯ ಮಗನಾದ ಬಾಣನನ್ನು ಅವನ ತಮ್ಮನ ಸಹಿತವಾಗಿ–ದೇವಪತಿಯಾದ ಇಂದ್ರನು ವೃತ್ರಾಸುರನನ್ನು ಸಂಹರಿಸಿದಂತೆ–ಸಂಹರಿಸಿದನು. ಶತ್ರುವೀರಹಂತಕನಾದ, ಅಗ್ನಿಯ ಮಗನಾದ, ಮಹಾಬಲನಾದ ಪಾವಕಿಯು ತನ್ನ ಶರೀರವನ್ನು ಕೆಲವು ಸಮಯಗಳಲ್ಲಿ ನಾನಾರೂಪಗಳನ್ನಾಗಿ ಕಲ್ಪಿಸಿಕೊಂಡು ಕೆಲವು ಸಮಯಗಳಲ್ಲಿ ಏಕರೂಪ ವಾಗಿಯೇ ಇದ್ದುಕೊಂಡು ಕ್ರೌಂಚಪರ್ವತವನ್ನು ಶಕ್ತ್ಯಾಯುಧದಿಂದ ಸೀಳಿದನು.

ಜನಮೇಜಯ! ಕುಮಾರಸ್ವಾಮಿಯು ಬಿಡುತ್ತಿದ್ದ ಶಕ್ತ್ಯಾಯುಧವು ಶತ್ರುಗಳನ್ನು ಸಂಹರಿಸಿ ಪುನಃ ಅವನ ಕೈಯನ್ನೇ ಸೇರುತ್ತಿದ್ದಿತು. ಗುಹನು ಅಂತಹ ಪ್ರಭಾವಶಾಲಿಯಾಗಿದ್ದನು. ಮೇಲಾಗಿ ಪಾವಕಿಯು ಶೌರ್ಯಾದಿ ಗುಣಗಳಿಂದಲೂ, ತೇಜಸ್ಸಿನಿಂದಲೂ, ಯಶಸ್ಸಿನಿಂದಲೂ, ಕಾಂತಿ ಯಿಂದಲೂ ಸಂಪನ್ನನಾಗಿದ್ದನು. ಅಂತಹ ಅತುಲಪರಾಕ್ರಮಿಯಾದ ಭಗವಾನ್ ಕಾರ್ತಿಕೇಯನು ಕ್ರೌಂಚಪರ್ವತವನ್ನು ಧ್ವಂಸಮಾಡಿದನು. ಸಾವಿರಾರು ದೈತ್ಯರನ್ನೂ ಸಂಹರಿಸಿದನು. ಹೀಗೆ ದೇವಸೇನಾಪತಿಯಾದ ಭಗವಾನ್ ಕುಮಾರಸ್ವಾಮಿಯು ದೇವಶತ್ರುಗಳನ್ನು ಸಂಹರಿಸಿ ದೇವತೆ ಗಳಿಂದ ಸೇವಿಸಲ್ಪಡುತ್ತಾ ಆನಂದತುಂದಿಲನಾದನು. ಸರ್ವತ್ರ ದುಂದುಭಿ ಗಳು ಮೊಳಗಿದುವು. ಶಂಖಧ್ವನಿಗಳಾದುವು. ನೂರಾರು-ಸಾವಿರಾರು ದೇವಸ್ತ್ರೀಯರು ಯೋಗೀಶ್ವರನಾದ ಸ್ಕಂದದೇವನ ತಲೆಯ ಮೇಲೆ ಉತ್ತಮೋತ್ತಮವಾದ ಹೂವುಗಳ ಮಳೆಗರೆದರು. ದಿವ್ಯಗಂಧವನ್ನು ಹೊತ್ತು ಪವಿತ್ರನಾದ ವಾಯುದೇವನು ಸ್ಕಂದನ ಮೇಲೆ ಬೀಸುತ್ತಾ ಅವನನ್ನು ಉಪಚರಿಸಿದನು. ಗಂಧರ್ವರೂ ಮತ್ತು ಯಜ್ಞಪರಾಯಣರಾದ ಮಹರ್ಷಿಗಳೂ ಸ್ಕಂದನನ್ನು ಸ್ತೋತ್ರಮಾಡಿದರು.

**ಕೇಚಿದೇನಂ ವ್ಯವಸ್ಯನ್ತಿ ಪಿತಾಮಹಸುತಂ ಪ್ರಭುಮ್ ।**
***ಸನತ್ಕುಮಾರಂ ಸರ್ವೇಷಾಂ ಬ್ರಹ್ಮಯೋನಿಂ ತಮಗ್ರಜಮ್ ॥೯೮॥**

ಕೆಲವರು ಸ್ಕಂದನು ಬ್ರಹ್ಮನ ಪುತ್ರನೆಂದೂ, ಎಲ್ಲರಿಗೂ ಮೊದಲು ಹುಟ್ಟಿದ ಬ್ರಹ್ಮಯೋನಿಯಾದ ಸನತ್ಕುಮಾರನೆಂದೂ ಹೇಳುತ್ತಿದ್ದರು.

**ಕೇಚಿನ್ಮಹೇಶ್ವರಸುತಂ ಕೇಚಿತ್ಪುತ್ರಂ ವಿಭಾವಸೋಃ ।**
**ಉಮಾಯಾಃ ಕೃತ್ತಿಕಾನಾಂ ಚ ಗಂಗಾಯಾಶ್ಚ ವದನ್ತ್ಯುತ ॥೯೯॥**

ಕೆಲವರು ಅವನನ್ನು ಶಿವಸುತನೆಂದೂ, ಕೆಲವರು ಅಗ್ನಿಪುತ್ರನೆಂದೂ, ಕೆಲವರು ಉಮಾತನಯನೆಂದೂ, ಕೆಲವರು ಕಾರ್ತಿಕೇಯನೆಂದೂ (ಕೃತ್ತಿಕೆ

---

*'ಭಗವಾನ್ಸನತ್ಕುಮಾರಸ್ತಗ್ಂ ಸ್ಕನ್ದಂ ಇತ್ಯಾಚಕ್ಷತೇ'–ಎಂಬುದಾಗಿ ಛಾಂದೋಗ್ಯೋಪ ನಿಷತ್ತಿನಲ್ಲಿ ಸ್ಕಂದನನ್ನು ಸನತ್ಕುಮಾರನೆಂದು ಹೇಳಿದೆ.

ಯರ ಮಗನೆಂದೂ), ಕೆಲವರು ಗಾಂಗೇಯನೆಂದೂ (ಗಂಗಾಪುತ್ರನೆಂದೂ) ಹೇಳುತ್ತಿದ್ದರು.

ಮಹಾಬಲನಾದ, ಯೋಗೀಶ್ವರನಾದ ಸ್ಕಂದದೇವನನ್ನು ಅವನ ಭಕ್ತರು ಒಂದು ರೂಪದಲ್ಲಿ–ಎರಡು ರೂಪಗಳಲ್ಲಿ–ಮೂರು ರೂಪಗಳಲ್ಲಿ–ನಾಲ್ಕು ರೂಪಗಳಲ್ಲಿ–ನೂರಾರು ರೂಪಗಳಲ್ಲಿ–ಸಾವಿರಾರು ರೂಪಗಳಲ್ಲಿ ಭಾವಿಸುತ್ತಿದ್ದರು.

ಜನಮೇಜಯಮಹಾರಾಜ! ಕಾರ್ತಿಕೇಯನ ಅಭಿಷೇಕಕ್ಕೆ ಸಂಬಂಧಿಸಿದಂತೆ ನಿನಗೆ ಎಲ್ಲವನ್ನೂ ಹೇಳಿದ್ದಾಯಿತು. ಈಗ ನೀನು ಸರಸ್ವತೀನದಿಯಲ್ಲಿರುವ ಆ ಶ್ರೇಷ್ಠತೀರ್ಥದ ಪಾವನತೆಯನ್ನು ಕೇಳು :

ಎಲ್ಲ ದೇವಶತ್ರುಗಳೂ ಕುಮಾರಸ್ವಾಮಿಯಿಂದ ಹತರಾದನಂತರ ಆ ದಿವ್ಯತೀರ್ಥವು ಬೇರೊಂದು ಸ್ವರ್ಗದೋಪಾದಿಯಲ್ಲಿ ಸರ್ವರಿಗೂ ಅತ್ಯಂತ ಸುಖದಾಯಕವಾಯಿತು.

ಆ ತೀರ್ಥಕ್ಷೇತ್ರದಲ್ಲಿಯೇ ಇದ್ದ ಅಗ್ನಿಪುತ್ರನಾದ ಕುಮಾರಸ್ವಾಮಿಯು ಸಕಲೈಶ್ವರ್ಯಗಳನ್ನೂ–ಮೂರು ಲೋಕಗಳನ್ನೂ ಪ್ರತ್ಯೇಕ-ಪ್ರತ್ಯೇಕವಾಗಿ ವಿಭಾಗಿಸಿ ನೈರ್ಋತನೇ ಮೊದಲಾದ ಅಷ್ಟದಿಕ್ಪಾಲಕರಿಗೆ ಹಂಚಿಕೊಟ್ಟನು. ಹೀಗೆ ದೈತ್ಯಕುಲಾಂತಕನಾದ ಭಗವಾನ್ ಕುಮಾರಸ್ವಾಮಿಯು ಆ ತೀರ್ಥಕ್ಷೇತ್ರದಲ್ಲಿಯೇ ದೇವಸೇನಾಪತಿಯಾಗಿ ದೇವತೆಗಳಿಂದ ಅಭಿಷೇಚಿಸಲ್ಪಟ್ಟನು. ತೈಜಸವೆಂದು ಆ ಪುಣ್ಯತೀರ್ಥಕ್ಕೆ ಹೆಸರು. ಹಿಂದೆ ಆ ಪುಣ್ಯತೀರ್ಥದಲ್ಲಿಯೇ ದೇವತೆಗಳು ವರುಣನನ್ನು ಜಲಾಧಿಪತಿಯ ಸ್ಥಾನದಲ್ಲಿ ಪಟ್ಟಾಭಿಷೇಕಮಾಡಿದ್ದರು.

ಹಲಾಯುಧನಾದ ಬಲರಾಮನು ಆ ತೈಜಸತೀರ್ಥದಲ್ಲಿ ಸ್ನಾನಮಾಡಿ ಸ್ಕಂದನನ್ನು ಅರ್ಚಿಸಿ ಬ್ರಾಹ್ಮಣರಿಗೆ ಸುವರ್ಣವನ್ನೂ ವಸ್ತ್ರಾಭರಣಗಳನ್ನೂ ದಾನಮಾಡಿದನು. ಶತ್ರುವೀರಹಂತಕನಾದ, ಮಧುವಂಶೀಯನಾದ, ಮಧುವಂಶೀಯರಲ್ಲಿಯೇ ಶ್ರೇಷ್ಠನಾದ, ಕೃಷ್ಣಾಗ್ರಜನಾದ ಬಲರಾಮನು ಆ ತೀರ್ಥಕ್ಷೇತ್ರದಲ್ಲಿಯೇ ಆ ರಾತ್ರಿಯನ್ನು ಕಳೆದು ಬೆಳಗಾದೊಡನೆಯೇ

ಪುನಃ ಸ್ನಾನಾಚಮನೀಯಗಳನ್ನು ಮುಗಿಸಿ ಪರಮಹೃಷ್ಟನೂ, ಪ್ರಸನ್ನಾತ್ಮನೂ ಆದನು.

ಮಹಾರಾಜ! ನಿನ್ನ ಎಲ್ಲ ಪ್ರಶ್ನೆಗಳಿಗೂ ನಾನು ಉತ್ತರಿಸಿದ್ದೇನೆ. ಆ ಮಹಾತೀರ್ಥಕ್ಷೇತ್ರಕ್ಕೆ ಆಗಮಿಸಿದ ದೇವತೆಗಳು ಹೇಗೆ ಸ್ಕಂದನಿಗೆ ದೇವಸೇನಾಪತ್ಯವನ್ನು ವಹಿಸಿಕೊಟ್ಟರೆಂಬುದನ್ನೂ ವಿಸ್ತಾರವಾಗಿ ಹೇಳಿದ್ದೇನೆ."

ಳ೬ನೆಯ ಅಧ್ಯಾಯವು ಮುಗಿಯಿತು.

೪೭ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಜಲಾಧಿಪತಿಯಾಗಿ ವರುಣನಿಗೆ ಪಟ್ಟಾಭಿಷೇಕವಾದುದು : ಅಗ್ನಿತೀರ್ಥ, ಬ್ರಹ್ಮಯೋನಿ ಮತ್ತು ಕುಬೇರತೀರ್ಥಗಳ ಉತ್ಪತ್ತಿ ಕಥನ

ಜನಮೇಜಯನು ಹೇಳುತ್ತಾನೆ :

**ಅತ್ಯದ್ಭುತಮಿದಂ ಬ್ರಹ್ಮನ್ಶ್ರುತವಾನಸ್ಮಿ ತತ್ತ್ವತಃ ।**
**ಅಭಿಷೇಕಂ ಕುಮಾರಸ್ಯ ವಿಸ್ತರೇಣ ಯಥಾವಿಧಿ ॥೧॥**

"ಬ್ರಾಹ್ಮಣೋತ್ತಮರೇ! ಅತ್ಯದ್ಭುತವಾದ ಕುಮಾರನ ಪಟ್ಟಾಭಿಷೇಕದ ಕಥೆಯನ್ನು ಯಥಾವತ್ತಾಗಿ, ವಿಸ್ತಾರವಾಗಿ ಮತ್ತು ಯಥಾವಿಧಿಯಾಗಿ ಕೇಳಿದಂತಾಯಿತು.

**ಯಚ್ಛ್ರುತ್ವಾ ಪೂತಮಾತ್ಮಾನಂ ವಿಜಾನಾಮಿ ತಪೋಧನ ।**
**ಪ್ರಹೃಷ್ಟಾನಿ ಚ ರೋಮಾಣಿ ಪ್ರಸನ್ನಂ ಚ ಮನೋ ಮಮ ॥೨॥**

ತಪೋಧನರೇ! ಕುಮಾರನ ಪಟ್ಟಾಭಿಷೇಕದ ಈ ಆಖ್ಯಾನವನ್ನು ಕೇಳಿದನಂತರ ನಾನು ಪವಿತ್ರಾತ್ಮನಾದೆನೆಂದು ಭಾವಿಸಿದ್ದೇನೆ. ಕಥಾಶ್ರವಣದಿಂದುಂಟಾದ ಹರ್ಷದಿಂದಾಗಿ ನನ್ನ ರೋಮಗಳು ನಿಮಿರಿನಿಂತಿವೆ. ಈಗ ನನ್ನ ಮನಸ್ಸು ಅತ್ಯಂತಪ್ರಸನ್ನವಾಗಿದೆ.

ಕುಮಾರನ ಅಭಿಷೇಕ ಮತ್ತು ಅವನ ಮೂಲಕವಾಗಿ ದೈತ್ಯರ ವಧೆ

ಯಾದುದು–ಈ ವೃತ್ತಾಂತಗಳನ್ನು ಕೇಳಿ ನನಗೆ ಬಹಳ ಆನಂದವುಂಟಾಗಿದೆ. ಮುಂದಿನ ವಿಷಯವನ್ನು ಕೇಳಬೇಕೆಂಬ ಕೌತೂಹಲವೂ ಹೆಚ್ಚಾಗಿದೆ. ಆ ತೈಜಸತೀರ್ಥಕ್ಷೇತ್ರದಲ್ಲಿ ಹಿಂದೆ ದೇವತೆಗಳು ವರುಣನನ್ನು ನೀರುಗಳಿಗೆ ಒಡೆಯನನ್ನಾಗಿ ಹೇಗೆ ಅಭಿಷೇಕಮಾಡಿದರು? ಮಹಾಪ್ರಾಜ್ಞರೇ! ಬ್ರಾಹ್ಮಣೋತ್ತಮರೇ! ನೀವು ಆಖ್ಯಾನಗಳನ್ನು ಹೇಳುವುದರಲ್ಲಿ ಬಹಳ ಕುಶಲರಾಗಿರುವಿರಿ. ಆ ವಿಷಯವನ್ನು ದಯಮಾಡಿ ನನಗೆ ಹೇಳಿರಿ."

"ಜನಮೇಜಯಮಹಾರಾಜ! ವರುಣನ ಅಭಿಷೇಕದ ವಿಷಯವನ್ನು ಯಥಾವತ್ತಾಗಿ ಹೇಳುವೆನು, ಕೇಳು. ನಾನು ಹೇಳುತ್ತಿರುವುದು ಹಿಂದಿನ ಕಲ್ಪದಲ್ಲಿ ನಡೆದ ವಿಷಯವಾಗಿದೆ. ಕೃತಯುಗದ ಆದಿಭಾಗದಲ್ಲಿ ಎಲ್ಲ ದೇವತೆಗಳೂ ಒಟ್ಟಾಗಿ ಸೇರಿ ವರುಣನ ಸಮೀಪಕ್ಕೆ ಹೋಗಿ ಅವನನ್ನು ಯಥಾವಿಧಿಯಾಗಿ ಸಂಪೂಜಿಸಿ ಈ ಮಾತುಗಳನ್ನು ಹೇಳಿದರು :

**ಯಥಾಸ್ಮಾನ್ಸುರರಾಡ್ಶಕ್ರೋ ಭಯೇಭ್ಯಃ ಪಾತಿ ಸರ್ವದಾ ।**
**ತಥಾ ತ್ವಮಪಿ ಸರ್ವಾಸಾಂ ಸರಿತಾಂ ವೈ ಪತಿರ್ಭವ ॥೬॥**

"ಸುರೇಶ್ವರನಾದ ಇಂದ್ರನು ನಮ್ಮೆಲ್ಲರನ್ನೂ ಯಾವ ರೀತಿಯಲ್ಲಿ ಸಕಲವಿಧವಾದ ಭಯಗಳಿಂದಲೂ ರಕ್ಷಿಸುತ್ತಿರುವನೋ–ಅದೇ ರೀತಿಯಲ್ಲಿ ನೀನೂ ಎಲ್ಲ ಸರಿತ್ತುಗಳಿಗೂ ಒಡೆಯನಾಗಿ ಎಲ್ಲ ಜಲಚರಪ್ರಾಣಿಗಳನ್ನೂ ರಕ್ಷಿಸುವವನಾಗು.

**ವಾಸಶ್ಚ ತೇ ಸದಾ ದೇವ ಸಾಗರೇ ಮಕರಾಲಯೇ ।**
**ಸಮುದ್ರೋಽಯಂ ತವ ವಶೇ ಭವಿಷ್ಯತಿ ನದೀಪತಿಃ ।**
**ಸೋಮೇನ ಸಾರ್ಧಂ ಚ ತವ ಹಾನಿವೃದ್ಧೀ ಭವಿಷ್ಯತಃ ॥೮॥**

ದೇವ! ಜಲಚರಗಳಿಗೆ ವಾಸಸ್ಥಾನವಾದ ಸಮುದ್ರದಲ್ಲಿಯೇ ಸದಾ ಕಾಲದಲ್ಲಿಯೂ ನೀನು ವಾಸಮಾಡಿಕೊಂಡಿರು. ನದೀಪತಿಯಾದ ಸಮುದ್ರನು ನಿನಗೆ ಅಧೀನನಾಗುತ್ತಾನೆ. ನೀರಿನಿಂದಲೇ ಹುಟ್ಟಿರುವ ಚಂದ್ರನೊಡನೆ ನಿನಗೂ ಹಾನಿ-ವೃದ್ಧಿಗಳು ಉಂಟಾಗುತ್ತಿರುತ್ತವೆ."

ದೇವತೆಗಳ ಮಾತನ್ನು ಕೇಳಿ ವರುಣನು ಹಾಗೆಯೇ ಆಗಲೆಂದನು.

ವರುಣನ ಅನುಮತಿಯನ್ನು ಪಡೆದ ದೇವತೆಗಳೆಲ್ಲರೂ ತೈಜಸತೀರ್ಥಕ್ಕೆ ಬಂದು ಸಾಗರಾಲಯನಾದ ವರುಣನನ್ನು ವಿಧಿಯಲ್ಲಿ ಹೇಳಿರುವ ಕರ್ಮಾನುಸಾರವಾಗಿ ನೀರುಗಳಿಗೆ ಒಡೆಯನನ್ನಾಗಿ ಮಾಡಿದರು. ದೇವತೆಗಳು ವರುಣನನ್ನು ಜಲಾಧಿಪತಿಯ ಸ್ಥಾನದಲ್ಲಿ ಅಭಿಷೇಕಮಾಡಿ ಅವನನ್ನು ಯಥೋಚಿತವಾಗಿ ಗೌರವಿಸಿ ತಮ್ಮ-ತಮ್ಮ ಸ್ಥಾನಗಳಿಗೆ ತೆರಳಿದರು. ಹೀಗೆ ಅಪ್ಪತಿಯಾಗಿ ದೇವತೆಗಳಿಂದ ಅಭಿಷಿಕ್ತನಾದ ವರುಣನು–ಇಂದ್ರನು ದೇವತೆಗಳನ್ನು ಪರಿಪಾಲಿಸುವಂತೆ–ಸರಿತ್ತುಗಳನ್ನೂ, ಸಾಗರಗಳನ್ನೂ, ನದೀ-ನದ-ಸರೋವರಗಳನ್ನೂ ಯಥಾವಿಧಿಯಾಗಿ ಪರಿಪಾಲಿಸತೊಡಗಿದನು.

ಜನಮೇಜಯ! ಪ್ರಲಂಬಾಸುರನ ವಧೆಯನ್ನು ಮಾಡಿದ ಮಹಾಪ್ರಾಜ್ಞನಾದ ಬಲರಾಮನು ಆ ತೈಜಸತೀರ್ಥದಲ್ಲಿ ಸ್ನಾನಾಚಮನೀಯಗಳನ್ನು ಮಾಡಿ ವಿಧ-ವಿಧವಾದ ಐಶ್ವರ್ಯಗಳನ್ನು ಬ್ರಾಹ್ಮಣರಿಗೆ ದಾನಮಾಡಿ ಅನಂತರ ಪರಿವಾರಸಮೇತನಾಗಿ ಅಗ್ನಿತೀರ್ಥಕ್ಕೆ ಹೋದನು.

ಅನಘನೇ! ಅಗ್ನಿತೀರ್ಥದ ಮಹಿಮೆಯನ್ನು ಹೇಳುವೆನು; ಕೇಳು : ಒಮ್ಮೆ ಅಗ್ನಿದೇವನು ಬನ್ನೀಮರದ ಮಧ್ಯದಲ್ಲಿ ಸೇರಿಕೊಂಡುಬಿಟ್ಟನು. ಯಾರ ಕಣ್ಣಿಗೂ ಗೋಚರನಾಗಲೇ ಇಲ್ಲ. ಸಂಪೂರ್ಣವಾದ ಜಗತ್ತಿನಲ್ಲಿ ಪ್ರಕಾಶವೂ ನಷ್ಟವಾಯಿತು. ಪ್ರಜೆಗಳ ದೃಷ್ಟಿಪಟಲವೂ ವಿನಾಶವಾಗುವ ಸಮಯವೂ ಸಂಭವಿಸಿತು. ಆ ಸಮಯದಲ್ಲಿ ದೇವತೆಗಳೆಲ್ಲರೂ ಸೇರಿ ಸರ್ವಲೋಕಪಿತಾಮಹನಾದ ಬ್ರಹ್ಮನ ಬಳಿಗೆ ಹೋಗಿ ಅವನೊಡನೆ ಹೇಳಿದರು :

**ಅಗ್ನಿಃ ಪ್ರಣಷ್ಟೋ ಭಗವಾನ್ಕಾರಣಂ ಚ ನ ವಿದ್ಮಹೇ ।**
**ಸರ್ವಭೂತಕ್ಷಯೋ ಮಾ ಭೂತ್ಸಮ್ಪಾದಯ ಹುತಾಶನಮ್ ॥೧೫॥**

"ಬ್ರಹ್ಮದೇವ! ಭಗವಂತನಾದ ಅಗ್ನಿದೇವನು ಅಗೋಚರನಾಗಿಬಿಟ್ಟಿದ್ದಾನೆ. ಇದಕ್ಕೆ ಕಾರಣವನ್ನು ನಾವು ತಿಳಿಯದವರಾಗಿದ್ದೇವೆ. ಸರ್ವ ಪ್ರಾಣಿಗಳೂ ವಿನಾಶಹೊಂದುವ ಮೊದಲೇ ಅಗ್ನಿದೇವನನ್ನು ಕರೆತರಿಸು."

ಜನಮೇಜಯನು ಮಧ್ಯದಲ್ಲಿ ಪ್ರಶ್ನಿಸುತ್ತಾನೆ :

"ವೈಶಂಪಾಯನರೇ! ಲೋಕಭಾವನನಾದ ಭಗವಾನ್ ಅಗ್ನಿದೇವನು

ಯಾವ ಕಾರಣದಿಂದ ಅದೃಶ್ಯನಾದನು? ಅವನು ಇರುವ ಸ್ಥಳವು ದೇವತೆಗಳಿಗೆ ಹೇಗೆ ತಿಳಿಯಿತು? – ಈ ವಿಷಯವನ್ನು ನನಗೆ ವಿಸ್ತಾರವಾಗಿಯೇ ಹೇಳಿರಿ.”

“ಮಹಾರಾಜ! ಪ್ರತಾಪವಂತನಾದ ಅಗ್ನಿದೇವನು ಭೃಗುಮಹರ್ಷಿಯ ಶಾಪದಿಂದ ಅತ್ಯಂತಭಯಗೊಂಡವನಾಗಿ ಶಮೀವೃಕ್ಷದ ಮಧ್ಯಭಾಗದಲ್ಲಿ ಸೇರಿಕೊಂಡು ಎಲ್ಲರಿಗೂ ಅದೃಶ್ಯನಾಗಿಬಿಟ್ಟನು. ಅಗ್ನಿದೇವನು ಅದೃಶ್ಯನಾಗಲಾಗಿ, ಇಂದ್ರನಿಂದ ಕೂಡಿದ ಎಲ್ಲ ದೇವತೆಗಳೂ ಅತ್ಯಂತದುಃಖಿತರಾಗಿ ಅದೃಶ್ಯನಾಗಿಹೋಗಿದ್ದ ಅಗ್ನಿಯನ್ನು ಎಲ್ಲ ಕಡೆಗಳಲ್ಲಿಯೂ ಹುಡುಕಿದರು. ಬಳಿಕ ದೇವತೆಗಳೆಲ್ಲರೂ ಅಗ್ನಿತೀರ್ಥದ ಸಮೀಪಕ್ಕೆ ಬಂದು ಆ ಪುಣ್ಯತೀರ್ಥದ ಸಮೀಪದಲ್ಲಿಯೇ ಇದ್ದ ಶಮೀವೃಕ್ಷದ ಮಧ್ಯಭಾಗದಲ್ಲಿ ಪಾವಕನು ವಿಧಿಪೂರ್ವಕವಾಗಿ ವಾಸಮಾಡಿಕೊಂಡಿರುವುದನ್ನು ತಿಳಿದರು. ಇಂದ್ರಸಹಿತರಾದ ಎಲ್ಲ ದೇವತೆಗಳೂ ಬೃಹಸ್ಪತಿಯನ್ನು ಮುಂದೆಮಾಡಿಕೊಂಡು ಶಮೀಗರ್ಭದಲ್ಲಿದ್ದ ಯಜ್ಞೇಶ್ವರನ ಬಳಿಗೆ ಬಂದು ಅಲ್ಲಿ ಅವನನ್ನು ಕಂಡು ಸಂತೋಷಭರಿತರಾದರು. ಅನಂತರ ದೇವತೆಗಳೆಲ್ಲರೂ ತಮ್ಮ-ತಮ್ಮ ಸ್ಥಾನಗಳಿಗೆ ಹಿಂದಿರುಗಿದರು. ಬ್ರಹ್ಮವಾದಿಯಾದ ಭೃಗುಮಹರ್ಷಿಯ ಶಾಪದಿಂದಾಗಿ ಆ ಮಹರ್ಷಿಯು ಹೇಳಿದ್ದಂತೆ ಅಗ್ನಿಯು ಸರ್ವಭಕ್ಷಕನಾದನು.

ಜನಮೇಜಯಮಹಾರಾಜ! ಹೀಗೆ ತೀರ್ಥದ ಸಮೀಪದಲ್ಲಿದ್ದ ಶಮೀವೃಕ್ಷದಲ್ಲಿ ಅಗ್ನಿಯು ಅಡಗಿದ್ದುದರಿಂದ ಆ ಮಹಾತೀರ್ಥಕ್ಕೆ ಅಗ್ನಿತೀರ್ಥವೆಂದೇ ಹೆಸರಾಯಿತು. ಮಹಾಮೇಧಾವಿಯಾದ ಬಲರಾಮನು ಆ ಅಗ್ನಿತೀರ್ಥದಲ್ಲಿಯೂ ಸ್ನಾನಾಚಮನೀಯಗಳನ್ನು ಮಾಡಿ ಬ್ರಾಹ್ಮಣರಿಗೆ ದಾನಗಳನ್ನು ಕೊಟ್ಟು, ಅಲ್ಲಿಂದ ಮುಂದಕ್ಕೆ ಬ್ರಹ್ಮಯೋನಿ ಎಂಬ ತೀರ್ಥಕ್ಕೆ ಸಪರಿವಾರನಾಗಿ ತೆರಳಿದನು. ಆ ಬ್ರಹ್ಮಯೋನಿತೀರ್ಥದಲ್ಲಿಯೇ ಸರ್ವಲೋಕಪಿತಾಮಹನಾದ ಬ್ರಹ್ಮನು ಜಗತ್ತನ್ನು ಸೃಷ್ಟಿಸಿದನು. ಪೂರ್ವಕಾಲದಲ್ಲಿ ದೇವತೆಗಳಿಂದೊಡಗೂಡಿ ಬ್ರಹ್ಮನು ಆ ಬ್ರಹ್ಮಯೋನಿತೀರ್ಥದಲ್ಲಿ ಸ್ನಾನಮಾಡಿ ವಿಧಿಪೂರ್ವಕವಾಗಿ ದೇವತೀರ್ಥಗಳನ್ನು ಸೃಷ್ಟಿಸಿದನು.

ಬಲರಾಮನು ಆ ಬ್ರಹ್ಮಯೋನಿತೀರ್ಥದಲ್ಲಿ ಸ್ನಾನಮಾಡಿ ವಿಧ-ವಿಧವಾದ ಐಶ್ವರ್ಯಗಳನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟು ಸಪರಿವಾರನಾಗಿ ಕುಬೇರತೀರ್ಥಕ್ಕೆ ಪ್ರಯಾಣಮಾಡಿದನು. ಆ ಮಹಾತೀರ್ಥದ ಸಮೀಪದಲ್ಲಿಯೇ ಪ್ರಭುವಾದ ಐಲಬಿಲನು (ಕುಬೇರನು) ಮಹಾತಪಸ್ಸನ್ನು ಮಾಡಿ ಧನಾಧ್ಯಕ್ಷಪದವಿಯನ್ನು ಪಡೆದುಕೊಂಡನು. ಅವನ ತಪಸ್ಸಿನ ಪ್ರಭಾವದಿಂದಾಗಿ ಆ ತೀರ್ಥದ ಸಮೀಪದಲ್ಲಿಯೇ ಇದ್ದ ಕುಬೇರನ ಬಳಿಗೆ ಧನಗಳೂ ಮತ್ತು ನಿಧಿಗಳೂ ಹೋಗಿ ಅವನನ್ನು ಸೇವಿಸತೊಡಗಿದುವು. ಹಲಾಯುಧನಾದ ಬಲರಾಮನು ಆ ಕುಬೇರತೀರ್ಥಕ್ಕೂ ಹೋಗಿ ಆ ತೀರ್ಥದಲ್ಲಿ ವಿಧಿವತ್ತಾಗಿ ಸ್ನಾನಾಚಮನೀಯಗಳನ್ನು ಮಾಡಿ ಬ್ರಾಹ್ಮಣರಿಗೆ ಧನವನ್ನು ದಾನಮಾಡಿದನು. ಅನಂತರ ಬಲರಾಮನು ಆ ತೀರ್ಥದ ಸಮೀಪದಲ್ಲಿಯೇ ಇದ್ದ ಶ್ರೇಷ್ಠವಾದ ಕಾನನದಲ್ಲಿ ಯಕ್ಷರಾಜನಾದ ಕುಬೇರನು ಹಿಂದೆ ವಿಪುಲವಾಗಿ ತಪಸ್ಸುಮಾಡಿ ಅನೇಕವರಗಳನ್ನು ಪಡೆದುಕೊಂಡಿದ್ದ ಪುಣ್ಯಸ್ಥಳವನ್ನು ಸಂದರ್ಶಿಸಿದನು. ಕುಬೇರತೀರ್ಥದ ಸಮೀಪದಲ್ಲಿದ್ದ ಅರಣ್ಯದಲ್ಲಿಯೇ ಕುಬೇರನು ಧನಾಧ್ಯಕ್ಷಪದವಿಯನ್ನು ಪಡೆದುಕೊಂಡನು. ಅಮಿತತೇಜಸ್ವಿಯಾದ ರುದ್ರನೊಡನೆ ಸಖ್ಯಮಾಡಿಕೊಂಡನು. ಅನಾಯಾಸವಾಗಿ ಸುರತ್ವವನ್ನೂ, ಲೋಕಪಾಲತ್ವವನ್ನೂ ಪಡೆದುಕೊಂಡು ನಲಕೂಬರನೆಂಬ ಪುತ್ರನನ್ನೂ ಶೀಘ್ರವಾಗಿ ಪಡೆದುಕೊಂಡನು. ದೇವತೆಗಳೆಲ್ಲರೂ ಅಲ್ಲಿಗೆ ಬಂದು ಕುಬೇರನನ್ನು ಧನಾಧ್ಯಕ್ಷಪದವಿಯಲ್ಲಿ ಅಭಿಷೇಕಮಾಡಿದರು. ಮನೋವೇಗಯುಕ್ತವಾಗಿದ್ದ ಮತ್ತು ಹಂಸಪಕ್ಷಿಗಳಿಂದ ಸಜ್ಜುಗೊಳಿಸಲ್ಪಟ್ಟಿದ್ದ ದಿವ್ಯವಾದ ಪುಷ್ಪಕವಿಮಾನವನ್ನೂ, ಯಕ್ಷಾಧಿಪತ್ಯವನ್ನೂ, ಐಶ್ವರ್ಯವನ್ನೂ ದೇವತೆಗಳು ಕುಬೇರನಿಗೆ ದಯಪಾಲಿಸಿದರು.

ಶ್ವೇತಗಂಧಾನುಲಿಪ್ತನಾದ ಬಲರಾಮನು ಆ ಕೌಬೇರ ತೀರ್ಥದಲ್ಲಿಯೂ ಸ್ನಾನಮಾಡಿ ಬ್ರಾಹ್ಮಣರಿಗೆ ಯಥೇಚ್ಛವಾಗಿ ದಾನಮಾಡಿ ಅತ್ಯಂತತ್ವರೆಯಿಂದ ರಾಮತೀರ್ಥಕ್ಕೆ ಪ್ರಯಾಣಮಾಡಿದನು. ಆ ತೀರ್ಥವು ಎಲ್ಲ ರೀತಿಯ ಪ್ರಾಣಿಗಳಿಂದಲೂ ಸಂಸೇವಿಸಲ್ಪಡುತ್ತಿದ್ದಿತು. ಆ ತೀರ್ಥವು 'ಬದರಪಾಚನ' ಎಂಬ ಹೆಸರಿನಿಂದಲೂ ಪ್ರಸಿದ್ಧವಾಗಿದ್ದಿತು. ಬಲರಾಮನು, ಸದಾಕಾಲದಲ್ಲಿಯೂ ಪುಷ್ಪಗಳಿಂದಲೂ ಫಲಗಳಿಂದಲೂ

ಸಮೃದ್ಧವಾಗಿದ್ದ, ಎಲ್ಲ ಋತುಗಳ ಫಲ-ಪುಷ್ಪಗಳಿಂದ ಸಮಾಕುಲವಾಗಿದ್ದ ಅರಣ್ಯದಿಂದ ಸಮಾವೃತವಾಗಿದ್ದ ಆ ಶುಭತೀರ್ಥವನ್ನು ಸೇರಿದನು."

೪೭ನೆಯ ಅಧ್ಯಾಯವು ಮುಗಿಯಿತು.

೪೮ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಬದರಪಾಚನತೀರ್ಥದ ಮಹಿಮಾಪ್ರಸಂಗದಲ್ಲಿ ಶ್ರುತಾವತೀ ಮತ್ತು ಅರುಂಧತಿಯರ ತಪಸ್ಸಿನ ಕಥೆ

ವೈಶಂಪಾಯನರು ಜನಮೇಜಯನೊಡನೆ ಹೇಳುತ್ತಾರೆ :

"ಜನಮೇಜಯ! ನಾನು ಹಿಂದೆ ಹೇಳಿದಂತೆ ಬಲರಾಮನು ತಪಸ್ವಿಗಳಿಂದಲೂ–ಸಿದ್ಧಪುರುಷರಿಂದಲೂ ಸಂಸೇವಿತವಾಗಿದ್ದ ಬದರಪಾಚನವೆಂಬ ತೀರ್ಥಕ್ಷೇತ್ರಕ್ಕೆ ತೆರಳಿದನು. ಬದರಪಾಚನತೀರ್ಥದ ಸಮೀಪದಲ್ಲಿಯೇ ಹಿಂದೆ ವ್ರತಾನುಷ್ಠಾನಗಳಲ್ಲಿ ನಿರತಳಾಗಿದ್ದ, ಬ್ರಹ್ಮಚಾರಿಣಿಯಾಗಿದ್ದ, ಅಪ್ರತಿಮರೂಪವತಿಯಾಗಿದ್ದ, ಭರದ್ವಾಜನ ಮಗಳಾದ ಶ್ರುತಾವತೀ ಎಂಬ ಹೆಸರಿನ ಕುಮಾರಿಯಿದ್ದಳು. ಅವಳು ಆ ಪುಣ್ಯತೀರ್ಥದ ಸಮೀಪದಲ್ಲಿ ಅನೇಕವಾದ ನಿಯಮಾನುಷ್ಠಾನಗಳನ್ನು ಮಾಡುತ್ತಾ ಅತ್ಯುಗ್ರವಾದ ತಪಸ್ಸಿನಲ್ಲಿ ತೊಡಗಿದ್ದಳು. ಭಾಮಿನಿಯಾದ ಶ್ರುತಾವತಿಯು ದೇವರಾಜನೇ ತನಗೆ ಪತಿಯಾಗಬೇಕೆಂದು ನಿಶ್ಚಯಿಸಿ ಕಠೋರವಾದ ತಪಸ್ಸು ಮಾಡುತ್ತಿದ್ದಳು. ಸ್ತ್ರೀಯರಿಗೆ ಅನುಷ್ಠಾನಮಾಡಲು ದುಷ್ಕರವಾದ, ಅನೇಕ ನಿಯಮಾನುಷ್ಠಾನಗಳನ್ನು ಮಾಡುತ್ತಾ ಶ್ರುತಾವತಿಯು ಆ ಪುಣ್ಯತೀರ್ಥದ ಸಮೀಪದಲ್ಲಿಯೇ ಅನೇಕ ವರ್ಷಗಳನ್ನು ಕಳೆದಳು. ಅವಳ ಆ ವ್ರತಾಚರಣೆಗಳಿಂದಲೂ, ಕಠೋರವಾದ ತಪಸ್ಸಿನಿಂದಲೂ ಮತ್ತು ಶ್ರೇಷ್ಠವಾದ ಭಕ್ತಿಯಿಂದಲೂ ಭಗವಾನ್ ದೇವರಾಜನು ಸುಪ್ರೀತನಾದನು. ಪ್ರಭುವಾದ, ತ್ರಿದಶಾಧಿಪತಿಯಾದ ಇಂದ್ರನು–ಮಹಾತ್ಮರಾದ, ವಿಪ್ರರ್ಷಿಗಳಾದ ವಸಿಷ್ಠರ ರೂಪವನ್ನು ಧರಿಸಿ ಶ್ರುತಾವತಿಯ ಆಶ್ರಮಕ್ಕೆ ಬಂದನು. ಉಗ್ರತಪಸ್ಕರಾದ, ತಪಸ್ವಿಗಳಲ್ಲಿ ಶ್ರೇಷ್ಠರಾದ ವಸಿಷ್ಠರನ್ನು ಕಂಡೊಡನೆಯೇ ಶ್ರುತಾವತಿಯು ಮುನಿಜನೋಚಿತವಾದ ಆಚಾರ-ವ್ಯವಹಾರಗಳಿಂದ ವಸಿಷ್ಠರನ್ನು ಸಂಪೂಜಿ

ಸಿದಳು. ಮುನಿಜನರ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬ ನಿಯಮಗಳನ್ನು ತಿಳಿದುಕೊಂಡಿದ್ದ ಕಲ್ಯಾಣಮಯಿಯಾದ, ಪ್ರಿಯವಾದ ಮಾತುಗಳನ್ನು ಆಡುವ ಸ್ವಭಾವದವಳಾಗಿದ್ದ ಶ್ರುತಾವತಿಯು ವಸಿಷ್ಠರೊಡನೆ ಹೇಳಿದಳು :

**ಭಗವನ್ಮುನಿಶಾರ್ದೂಲ ಕಿಮಾಜ್ಞಾಪಯಸಿ ಪ್ರಭೋ ।**
**ಸರ್ವಮದ್ಯ ಯಥಾಶಕ್ತಿ ತವ ದಾಸ್ಯಾಮಿ ಸುವ್ರತ ।**
**ಶಕ್ರಭಕ್ತ್ಯಾ ಚ ತೇ ಪಾಣಿಂ ನ ದಾಸ್ಯಾಮಿ ಕಥಂಚನ ॥೯॥**

"ಭಗವನ್! ಮುನಿಶ್ರೇಷ್ಠನೇ! ಪ್ರಭುವೇ! ನನಗೆ ನಿನ್ನ ಅಪ್ಪಣೆಯೇನು? ನನ್ನಲ್ಲಿರುವುದೆಲ್ಲವನ್ನೂ ಶಕ್ತಿಮೀರಿ ನಿನಗೆ ಕೊಡುತ್ತೇನೆ. ಆದರೆ ನನ್ನ ಪಾಣಿಗ್ರಹಣವನ್ನು ಮಾತ್ರ ನೀನು ಅಪೇಕ್ಷಿಸಬೇಡ. ನಾನು ಇಂದ್ರನಲ್ಲಿಯೇ ಭಕ್ತಿಯುಳ್ಳವಳಾಗಿರುವುದರಿಂದ (ಅನುರಕ್ತಳಾಗಿರುವುದರಿಂದ) ನನ್ನ ಪಾಣಿಯನ್ನು ಮಾತ್ರ ನಾನು ಯಾವುದೇ ಕಾರಣದಿಂದಲೂ ನಿನಗೆ ಕೊಡಲಾರೆನು. ತಪೋಧನನೇ! ವ್ರತಗಳಿಂದಲೂ, ನಿಯಮಾನುಷ್ಠಾನಗಳಿಂದಲೂ, ತಪಸ್ಸಿನಿಂದಲೂ ನಾನು ಮೂರು ಲೋಕಗಳಿಗೂ ಒಡೆಯನಾದ ಇಂದ್ರನನ್ನೇ ಸಂತುಷ್ಟಿಗೊಳಿಸಬೇಕಾಗಿದೆ." ಮಹಾರಾಜ! ಶ್ರುತಾವತಿಯು ಹೀಗೆ ಹೇಳಿದನಂತರ ಇಂದ್ರದೇವನು ಮುಗುಳ್ನಗೆಯೊಡನೆ ಅವಳ ಕಡೆಗೆ ನೋಡಿದನು. ಅವಳ ನಿಯಮವೇನೆಂಬುದನ್ನು ತಿಳಿದುಕೊಂಡ ಶಕ್ರನು ಅವಳನ್ನು ಸಂತಯಿಸುತ್ತಿರುವನೋ ಎಂಬಂತೆ ಈ ಮಾತುಗಳನ್ನಾಡಿದನು :

**ಉಗ್ರಂ ತಪಶ್ಚರಸಿ ವೈ ವಿದಿತಾ ಮೇಽಸಿ ಸುವ್ರತೇ ।**
**ಯದರ್ಥಮಯಮಾರಮ್ಭಸ್ತವ ಕಲ್ಯಾಣಿ ಹೃದ್ಗತಃ ।**
**ತಚ್ಚ ಸರ್ವಂ ಯಥಾಭೂತಂ ಭವಿಷ್ಯತಿ ವರಾನನೇ ॥೧೨॥**

"ಸುವ್ರತಳೇ! ನೀನು ಅತ್ಯುಗ್ರವಾದ ತಪಸ್ಸನ್ನು ಮಾಡುತ್ತಿರುವುದು ನನಗೂ ತಿಳಿದಿದೆ. ಕಲ್ಯಾಣಿ! ಶ್ರೇಷ್ಠವಾದ ಮುಖದಿಂದ ಕೂಡಿರುವವಳೇ! ನೀನು ಈ ಉಗ್ರವಾದ ತಪಸ್ಸನ್ನು ಏಕೆ ಆರಂಭಿಸಿರುವೆಯೋ

ಮತ್ತು ನಿನ್ನ ಮನಸ್ಸಿನಲ್ಲಿ ಯಾವ ಆಕಾಂಕ್ಷೆಯಿರುವುದೋ–ಆ ಎಲ್ಲವೂ ಯಥಾರ್ಥರೂಪದಲ್ಲಿಯೇ ಸಿದ್ಧಿಸುತ್ತವೆ.

**ತಪಸಾ ಲಭ್ಯತೇ ಸರ್ವಂ ಯಥಾಭೂತಂ ಭವಿಷ್ಯತಿ ।**
**ಯಥಾ ಸ್ಥಾನಾನಿ ದಿವ್ಯಾನಿ ವಿಬುಧಾನಾಂ ಶುಭಾನನೇ ।**
**ತಪಸಾ ತಾನಿ ಪ್ರಾಪ್ಯಾಣಿ ತಪೋಮೂಲಂ ಮಹತ್ಸುಖಮ್ ॥೧೪॥**

ಶುಭಾನನೇ! ತಪಸ್ಸಿನಿಂದ ಎಲ್ಲ ಮನೋರಥಗಳೂ ಸಿದ್ಧಿಸುತ್ತವೆ. ನಿನ್ನ ಮನೋರಥವೂ ಫಲಿಸುತ್ತದೆ. ದೇವತೆಗಳ ಯಾವ ದಿವ್ಯಸ್ಥಾನಗಳಿವೆಯೋ–ಆ ದಿವ್ಯಸ್ಥಾನಗಳೆಲ್ಲವೂ ತಪಸ್ಸಿನಿಂದಲೇ ಪ್ರಾಪ್ತವಾಗುತ್ತವೆ. ಮಹಾಸುಖಕ್ಕೆ ಮೂಲಕಾರಣವು ತಪಸ್ಸೇ ಆಗಿದೆ.

**ಇತಿ ಕೃತ್ವಾ ತಪೋ ಘೋರಂ ದೇಹಂ ಸಂನ್ಯಸ್ಯ ಮಾನವಾಃ ।**
**ದೇವತ್ವಂ ಯಾನ್ತಿ ಕಲ್ಯಾಣಿ ಶೃಣುಷ್ವೈಕಂ ವಚೋ ಮಮ ॥೧೫॥**

ಕಲ್ಯಾಣಿ! ಮಹಾಸುಖವನ್ನು ತಪಸ್ಸಿನ ಮೂಲಕವಾಗಿ ಪಡೆಯುವ ಉದ್ದೇಶದಿಂದಲೇ ಮಾನವರು ಘೋರವಾದ ತಪಸ್ಸುಮಾಡಿ ತಮ್ಮ ಮಾನವದೇಹವನ್ನು ಪರಿತ್ಯಾಗಮಾಡಿ ದೇವತ್ವವನ್ನು ಪಡೆದುಕೊಳ್ಳುತ್ತಾರೆ. ಇವೆಲ್ಲವೂ ನಿಜ. ಆದರೆ ಈ ನನ್ನ ಒಂದು ಮಾತನ್ನು ಕೇಳು :

**ಪಞ್ಚ ಚೈತಾನಿ ಸುಭಗೇ ಬದರಾಣಿ ಶುಭವ್ರತೇ ಪಚ ।**

ಶುಭವ್ರತಳೇ! ಸೌಭಾಗ್ಯಶಾಲಿನಿಯೇ! ಇವು ಐದು ಎಲಚೀಹಣ್ಣುಗಳು. ಇವುಗಳನ್ನು ನೀನು ಬೇಯಿಸು"–ಎಂಬುದಾಗಿ ಹೇಳಿ ಇಂದ್ರನು ಕಲ್ಯಾಣಮಯಿಯಾದ ಶ್ರುತಾವತಿಯ ಅನುಮತಿಯನ್ನು ಪಡೆದುಕೊಂಡು, ಅವಳ ಆಶ್ರಮದಿಂದ ಸ್ವಲ್ಪದೂರ ಮುಂದೆ ಹೋಗಿ, ಅಲ್ಲಿದ್ದ ಶ್ರೇಷ್ಠವಾದ ತೀರ್ಥದಲ್ಲಿ ಮಿಂದು, ಜಪಮಾಡಲು ಯೋಗ್ಯವಾದ ಮಹಾಮಂತ್ರಗಳನ್ನು ಜಪಿಸಿದನು. ಇಂದ್ರನು ಜಪಮಾಡುತ್ತಿದ್ದ ಆ ತೀರ್ಥವು ಮೂರು ಲೋಕಗಳಲ್ಲಿಯೂ ಇಂದ್ರತೀರ್ಥವೆಂದೇ ಪ್ರಸಿದ್ಧಿಯನ್ನು ಹೊಂದಿತು. ಶ್ರುತಾವತಿಯ ಮನೋಭಾವವನ್ನು ಪರೀಕ್ಷಿಸುವ ಸಲುವಾಗಿಯೇ ದೇವತೆಗಳಿಗೆ ಒಡೆಯನಾದ ಭಗವಾನ್ ಪಾಕಶಾಸನನು ಎಲಚೀಹಣ್ಣುಗಳು ಬೇಯದಂತೆ ಮಾಡಿದನು.

ಅನಂತರ ಶೌಚಾಚಾರಸಂಪನ್ನೆಯಾದ, ತಪಸ್ವಿನಿಯಾದ, ಬಳಲಿಕೆ ಯಿಂದ ರಹಿತಳಾಗಿದ್ದ, ಮಹಾವ್ರತಳಾದ ಶ್ರುತಾವತಿಯು ವಾಙ್ನಿಯಮನ ವನ್ನು ಮಾಡಿ (ಮೌನವನ್ನು ಧರಿಸಿ), ಎಲಚೀಹಣ್ಣುಗಳನ್ನು ಬೇಯಿಸುವುದರಲ್ಲಿಯೇ ತತ್ಪರಳಾಗಿ, ಆ ಐದು ಹಣ್ಣುಗಳನ್ನೂ ಒಲೆಯ ಮೇಲಿಟ್ಟು ಬೇಯಿಸತೊಡಗಿದಳು. ಗಂಟೆಗಳು ಕಳೆದರೂ ಆ ಎಲಚೀ ಹಣ್ಣುಗಳು ಬೇಯಲಿಲ್ಲ ; ಹೊತ್ತು ಕಳೆದರೂ ಬೇಯಲಿಲ್ಲ. ಅವನ್ನು ಬೇಯಿಸುವುದರಲ್ಲಿ ಆ ದಿವಸವೇ ಕಳೆದುಹೋಯಿತು. ಆದರೂ ಆ ಹಣ್ಣುಗಳು ಬೇಯಲೇ ಇಲ್ಲ. ಆ ಐದು ಎಲಚೀಹಣ್ಣುಗಳನ್ನು ಬೇಯಿಸುವ ಸಲುವಾಗಿ ಶ್ರುತಾವತಿಯು ಸಂಚಯಿಸಿಟ್ಟಿದ್ದ ಕಟ್ಟಿಗೆಗಳೆಲ್ಲವೂ ಮುಗಿದು ಹೋದುವು. ಮುಂದೆ ಬೇಯಿಸಲು ಕಟ್ಟಿಗೆಗಳೇ ಇರಲಿಲ್ಲ. ಕಟ್ಟಿಗೆಯಿಲ್ಲದೇ ಬೆಂಕಿಯು ಆರಿಹೋಗುತ್ತಿರುವುದನ್ನು ಶ್ರುತಾವತಿಯು ಗಮನಿಸಿದಳು. ಆ ಹಣ್ಣುಗಳನ್ನು ಬೇಯಿಸುವ ಸಲುವಾಗಿ ತನ್ನ ಶರೀರವನ್ನೇ ಕಟ್ಟಿಗೆಯನ್ನಾಗಿ ಉಪಯೋಗಿಸಲು ಅವಳು ನಿರ್ಧರಿಸಿದಳು. ಮನಮೋಹಕವಾದ ರೂಪಿನಿಂದ ಕೂಡಿದ್ದ ಶ್ರುತಾವತಿಯು ಮೊದಲು ತನ್ನೆರಡು ಪಾದಗಳನ್ನೂ ಆರಿಹೋಗಲಿದ್ದ ಬೆಂಕಿಯಲ್ಲಿಟ್ಟು ಆ ಬೆಂಕಿಯಿಂದ ಹೊತ್ತಿಸಿ ಅದರ ಮೂಲಕವಾಗಿ ಎಲಚೀಹಣ್ಣುಗಳನ್ನು ಬೇಯಿಸತೊಡಗಿದಳು. ಆದರೆ ಇಂದ್ರನ ಆಶಯದಂತೆ ಎಲಚೀಹಣ್ಣುಗಳು ಬೇಯಲೇ ಇಲ್ಲ. ಪಾದಗಳು ಉರಿದುಹೋಗುತ್ತಿದ್ದಂತೆಲ್ಲಾ ತನ್ನ ಮೊಣಕಾಲು-ಮಂಡಿಗಳನ್ನೂ ಅಗ್ನಿಗೆ ಚಾಚುತ್ತಿದ್ದಳು.

**ಚರಣೌ ದಹ್ಯಮಾನೌ ಚ ನಾಚಿನ್ತಯದನಿನ್ದಿತಾ ।**
**ಕುರ್ವಾಣಾ ದುಷ್ಕರಂ ಕರ್ಮ ಮಹರ್ಷಿಪ್ರಿಯಕಾಮ್ಯಯಾ ॥೨೪॥**

ನಿಷ್ಕಳಂಕಳಾದ ಆ ಸಾಧ್ವೀಮಣಿಯು ತನ್ನ ಚರಣಗಳು ಹೊತ್ತಿಕೊಂಡು ಉರಿಯುತ್ತಿದ್ದರೂ ಸ್ವಲ್ಪವಾದರೂ ಚಿಂತಿಸಲೇ ಇಲ್ಲ. ಮಹರ್ಷಿಗಳಾದ ವಸಿಷ್ಠರಿಗೆ ಪ್ರಿಯವನ್ನುಂಟುಮಾಡಬೇಕೆನ್ನುವ (ವಸಿಷ್ಠರ ಮಾತನ್ನು ನಡೆಸಿಕೊಡಬೇಕೆಂಬ) ಏಕೈಕಧ್ಯೇಯದಿಂದ ಕೂಡಿದ್ದ ಶ್ರುತಾ

ವತಿಯು ದುಷ್ಕರವಾದ ಆ ಬೇಯಿಸುವ ಕಾರ್ಯವನ್ನು ಮುಂದುವರಿಸುತ್ತಲೇ ಇದ್ದಳು.

**ನ ವೈ ಮನಸ್ಯಂ ತಸ್ಯಾಸ್ತು ಮುಖಭೇದೋಽಥವಾಭವತ್ ।**
**ಶರೀರಮಗ್ನಿನಾದೀಪ್ಯ ಜಲಮಧ್ಯೇ ಯಥಾ ಸ್ಥಿತಾ ॥೨೫॥**

ಅಂತಹ ಸಂದರ್ಭದಲ್ಲಿಯೂ ಅವಳ ಮನಸ್ಸಿನಲ್ಲಿ ಸ್ವಲ್ಪವಾದರೂ ಖೇದವೆಂಬುದೇ ಇರಲಿಲ್ಲ. ಅವಳ ಮುಖಭಾವದಲ್ಲಿಯೂ ಸ್ವಲ್ಪವಾದರೂ ವ್ಯತ್ಯಾಸವಾಗಲಿಲ್ಲ. ತನ್ನ ಶರೀರವನ್ನೇ ಕಟ್ಟಿಗೆಯಂತೆ ಸುಡುತ್ತಿದ್ದರೂ ಅವಳು ನೀರಿನ ಮಧ್ಯದಲ್ಲಿರುವಂತೆಯೇ ಪ್ರಸನ್ನವಾದ ಮುಖ- ಮನಸ್ಸುಗಳಿಂದ ಯುಕ್ತಳಾಗಿದ್ದಳು.

ಆ ಕನ್ಯೆಯ ಮನಸ್ಸಿನಲ್ಲಿ ನಿರಂತರವಾದ ಚಿಂತೆಯಿದ್ದುದೆಂದರೆ : 'ಸರ್ವಥಾ ಬದರಾಣ್ಯೇವ ಪಕ್ತವ್ಯಾನಿ' – 'ಸರ್ವಪ್ರಕಾರದಿಂದಲೂ ಈ ಎಲಚೀಹಣ್ಣುಗಳನ್ನು ಬೇಯಿಸಲೇಬೇಕು' – ಎಂಬುದು. ಶುಭಲಕ್ಷಣಳಾದ ಕನ್ಯಾಮಣಿಯಾದ ಶ್ರುತಾವತಿಯು ಮಹರ್ಷಿಯ ರೂಪವನ್ನು ಧರಿಸಿ ಬಂದಿದ್ದ ಇಂದ್ರನು ಹೇಳಿದ ಮಾತುಗಳನ್ನೇ ಮನಸ್ಸಿನಲ್ಲಿಟ್ಟುಕೊಂಡು ತನ್ನ ಶರೀರದ ಅವಯವಗಳನ್ನೆಲ್ಲ ಕಟ್ಟಿಗೆಯನ್ನಾಗಿಸಿ ಎಲಚೀಹಣ್ಣುಗಳನ್ನು ಬೇಯಿಸುತ್ತಲೇ ಇದ್ದಳು. ಆದರೆ ಅವು ಮಾತ್ರ ಬೇಯಲೇ ಇಲ್ಲ.

**ತಸ್ಯಾಸ್ತು ಚರಣೌ ವಹ್ನಿರ್ದದಾಹ ಭಗವಾನ್ಸ್ವಯಮ್ ।**
**ನ ಚ ತಸ್ಯಾ ಮನೋದುಃಖಂ ಸ್ವಲ್ಪಮಪ್ಯಭವತ್ತದಾ ॥೨೬॥**

ಭಗವಾನ್ ಅಗ್ನಿದೇವನೇನೋ ಅವಳ ಎರಡು ಕಾಲುಗಳನ್ನೂ ಸುಟ್ಟು ಭಸ್ಮಮಾಡಿದನು. ಆದರೆ ಆ ಸಮಯದಲ್ಲಿ ಅವಳ ಮನಸ್ಸಿನಲ್ಲಿ ಸ್ವಲ್ಪವಾದರೂ ದುಃಖವೆಂಬುದೇ ಉಂಟಾಗಲಿಲ್ಲ. (ಅವಳ ಮನಸ್ಸು ಎಲಚೀಹಣ್ಣುಗಳನ್ನು ಬೇಯಿಸುವುದರಲ್ಲಿ ಕೇಂದ್ರೀಕೃತವಾಗಿದ್ದಿತೇ ಹೊರತು ತನ್ನ ಶರೀರಕ್ಕಾಗುತ್ತಿದ್ದ ಬಾಧೆಯು ಅವಳ ಮನಸ್ಸನ್ನು ಹೊಗಲೇ ಇಲ್ಲ.)

ಶ್ರುತಾವತಿಯ ಅಂತಹ ಅದ್ಭುತಕರ್ಮವನ್ನು ನೋಡಿದ ತ್ರಿಭುವನೇಶ್ವರನಾದ ಇಂದ್ರನು ಸುಪ್ರೀತನಾಗಿ ತನ್ನ ನಿಜಸ್ವರೂಪವನ್ನೇ

ಆ ಕನ್ಯಾಮಣಿಗೆ ಪ್ರಕಟಪಡಿಸಿದನು. ಬಹಳ ದೃಢವ್ರತಳಾದ ಆ ಕನ್ಯೆಯೊಡನೆ ಸುರಶ್ರೇಷ್ಠನಾದ ಇಂದ್ರನು ಹೇಳಿದನು :

**ಪ್ರೀತೋಽಸ್ಮಿ ತೇ ಶುಭೇ ಭಕ್ತ್ಯಾ ತಪಸಾ ನಿಯಮೇನ ಚ ।**
**ತಸ್ಮಾದ್ಯೋಽಭಿಮತಃ ಕಾಮಃ ಸ ತೇ ಸಂಪತ್ಸ್ಯತೇ ಶುಭೇ ।**
**ದೇಹಂ ತ್ಯಕ್ತ್ವಾ ಮಹಾಭಾಗೇ ತ್ರಿದಿವೇ ಮಯಿ ವತ್ಸ್ಯಸಿ ॥೩೧॥**

"ಶುಭಲಕ್ಷಣಳೇ! ಸೌಭಾಗ್ಯಶಾಲಿನಿಯೇ! ನೀನು ನನ್ನಲ್ಲಿಟ್ಟಿರುವ ಪರಾಭಕ್ತಿಯಿಂದಲೂ, ನೀನು ಮಾಡುತ್ತಿರುವ ತಪಸ್ಸಿನಿಂದಲೂ ಮತ್ತು ನಿನ್ನ ನಿಯಮಾನುಷ್ಠಾನಗಳಿಂದಲೂ ನಾನು ಸುಪ್ರೀತನಾಗಿದ್ದೇನೆ. ಆದುದರಿಂದ ನಿನ್ನ ಮನಸ್ಸಿನಲ್ಲಿರುವ ಅಭಿಲಾಷೆಯು ಕೈಗೂಡುತ್ತದೆ. ನೀನು ಈ ನಿನ್ನ ಮಾನವದೇಹವನ್ನು ಪರಿತ್ಯಜಿಸಿ ಸ್ವರ್ಗದಲ್ಲಿ ನನ್ನೊಡನೆ ವಾಸಮಾಡುವೆ.

**ಇದಂ ಚ ತೇ ತೀರ್ಥವರಂ ಸ್ಥಿರಂ ಲೋಕೇ ಭವಿಷ್ಯತಿ ।**
**ಸರ್ವಪಾಪಾಪಹಂ ಸುಭ್ರು ನಾಮ್ನಾ ಬದರಪಾಚನಮ್ ॥೩೨॥**

ನಿನ್ನ ಸಮೀಪದಲ್ಲಿರುವ ಶ್ರೇಷ್ಠವಾದ ಈ ತೀರ್ಥವು ಲೋಕದಲ್ಲಿ ಶಾಶ್ವತವಾಗಿರುತ್ತದೆ. ಸುಂದರವಾದ ಹುಬ್ಬುಗಳುಳ್ಳವಳೇ! ಬದರಪಾಚನ ವೆಂಬ ಹೆಸರಿನಿಂದಲೇ ಪ್ರಸಿದ್ಧಿಹೊಂದುವ ಈ ಸರೋವರದಲ್ಲಿ ಮಿಂದವರ ಸಮಸ್ತಪಾಪಗಳೂ ಪರಿಹಾರವಾಗುತ್ತವೆ.

ಪಾಪರಹಿತಳೇ! ಸೌಭಾಗ್ಯಶಾಲಿನಿಯೇ! ಈ ತೀರ್ಥವು ಹಿಂದಿ ನಿಂದಲೂ ಮೂರು ಲೋಕಗಳಲ್ಲಿಯೂ ವಿಖ್ಯಾತಿಯನ್ನು ಪಡೆದಿದೆ. ಅನೇಕ ಬ್ರಹ್ಮರ್ಷಿಗಳು ಶುಭದಾಯಕವಾದ ಮತ್ತು ಶ್ರೇಷ್ಠವಾದ ಈ ತೀರ್ಥದಲ್ಲಿ ಸ್ನಾನಮಾಡಿರುತ್ತಾರೆ. ಹಿಂದೊಮ್ಮೆ ಸಪ್ತರ್ಷಿಗಳು ಅರುಂಧತೀದೇವಿಯನ್ನು ಈ ತೀರ್ಥದ ಸಮೀಪದಲ್ಲಿಯೇ ಬಿಟ್ಟು ಹಿಮಾಲಯಕ್ಕೆ ಹೋಗಿದ್ದರು. ಕಠೋರವ್ರತನಿಷ್ಠರಾದ ಮಹಾಭಾಗ್ಯಶಾಲಿಗಳಾದ ಆ ಸಪ್ತರ್ಷಿಗಳು ಜೀವನ ನಿರ್ವಹಣೆಗಾಗಿ ಕಂದ-ಮೂಲ-ಫಲಾದಿಗಳನ್ನು ತರಲು ಹಿಮಾಲಯದ ಅರಣ್ಯಕ್ಕೆ ಹೋಗಿದ್ದರು. ಅವರು ಜೀವನಾರ್ಥವಾಗಿ ಹಿಮಾಲಯದ ಅರಣ್ಯ

ದಲ್ಲಿ ವಾಸಮಾಡುತ್ತಿರುವಾಗ ಹನ್ನೆರಡು ವರ್ಷಗಳ ಪರ್ಯಂತವಾಗಿ ಅನಾವೃಷ್ಟಿಯುಂಟಾಯಿತು. ತಪಸ್ವಿಗಳಾದ ಸಪ್ತರ್ಷಿಗಳು ಹಿಮಾಲಯದ ವನದಲ್ಲಿಯೇ ಒಂದು ಆಶ್ರಮವನ್ನು ಕಲ್ಪಿಸಿಕೊಂಡು ವಾಸಮಾಡುತ್ತಿದ್ದರು. ಇತ್ತ ಕಲ್ಯಾಣಮಯಿಯಾದ ಅರುಂಧತಿಯು ಅನುದಿನವೂ ತಪಶ್ಚರಣೆ ಯಲ್ಲಿಯೇ ನಿರತಳಾಗಿದ್ದಳು. ಅತಿಕಠೋರವಾದ ನಿಯಮಾನುಷ್ಠಾನಗಳನ್ನು ಮಾಡುತ್ತಾ ತಪಸ್ಸಿನಲ್ಲಿಯೇ ನಿರತಳಾಗಿದ್ದ ಅರುಂಧತಿಯನ್ನು ನೋಡಿ ವರದನಾದ ಶಂಕರನು ಸುಪ್ರೀತನಾಗಿ ಅವಳ ಸಮೀಪಕ್ಕೆ ಆಗಮಿಸಿದನು. ಮಹಾಯಶೋವಂತನಾದ ಮಹಾದೇವನು ಬ್ರಾಹ್ಮಣನ ರೂಪವನ್ನು ಧರಿಸಿ ಅವಳ ಸಮೀಪಕ್ಕೆ ಹೋಗಿ – 'ಶುಭಲಕ್ಷಣಳೇ! ನಾನು ನಿನ್ನಿಂದ ಭಿಕ್ಷೆಯನ್ನು ಅಪೇಕ್ಷಿಸುತ್ತೇನೆ'–ಎಂದು ಹೇಳಿದನು. ಸುಮನೋಹರವಾದ ರೂಪ ಸಂಪತ್ತಿನಿಂದ ಕೂಡಿದ್ದ ಅರುಂಧತಿಯು ಬ್ರಾಹ್ಮಣವೇಷದಲ್ಲಿದ್ದ ಶಂಕರನಿಗೆ ಹೇಳಿದಳು :

**ಕ್ಷೀಣೋಽನ್ನಸಂಚಯೋ ವಿಪ್ರ ಬದರಾಣೀಹ ಭಕ್ಷಯ ॥೩೯॥**

"ವಿಪ್ರೋತ್ತಮ! ನನ್ನ ಬಳಿಯಲ್ಲಿ ಅನ್ನಸಂಗ್ರಹವು ಮುಗಿದಿದೆ. (ಭಿಕ್ಷೆನೀಡಲು ನನ್ನ ಬಳಿಯಲ್ಲಿ ಅನ್ನವಿಲ್ಲ.) ಆದುದರಿಂದ ಇಲ್ಲಿರುವ ಎಲಚೀಹಣ್ಣುಗಳನ್ನೇ ಭಕ್ಷಿಸು."

ಮಹಾದೇವನು ಅವಳು ಕೊಟ್ಟ ಭಿಕ್ಷೆಯನ್ನೇ ಅಂಗೀಕರಿಸುತ್ತಾ ಹೇಳಿದನು : 'ಪಚಸ್ವೈತಾನಿ ಸುವ್ರತೇ'–'ಸುವ್ರತಳೇ! ಈ ಎಲಚೀ ಹಣ್ಣುಗಳನ್ನೇ ಬೇಯಿಸಿಕೊಡು.'

ಬ್ರಾಹ್ಮಣನಿಂದ ಹೀಗೆ ನಿರ್ದೇಶಿತಳಾದ ಯಶಸ್ವಿನಿಯಾದ ಅರುಂಧತಿಯು ಬ್ರಾಹ್ಮಣನಿಗೆ ಪ್ರಿಯವನ್ನು ಮಾಡುವ ಅಭಿಲಾಷೆಯಿಂದ ಅಗ್ನಿಯನ್ನು ಹುತಮಾಡಿ ಪ್ರಜ್ವಲಿಸಿ ಉರಿಯುತ್ತಿದ್ದ ಯಜ್ಞೇಶ್ವರನಲ್ಲಿ ಎಲಚೀಹಣ್ಣುಗಳನ್ನು ಬೇಯಿಸತೊಡಗಿದಳು. ಆ ಸಮಯದಲ್ಲವಳು ಪರಮಪವಿತ್ರವಾದ, ಮನೋಹರವಾದ ಮತ್ತು ದಿವ್ಯವಾದ ಕಥೆಗಳನ್ನು ಕೇಳುತ್ತಿದ್ದಳು. ತಾನು ಆಹಾರವನ್ನು ತಿನ್ನದೇ ದಿವ್ಯವಾದ ಕಥೆಗಳನ್ನೇ ಕೇಳುತ್ತಾ ಎಲಚೀಹಣ್ಣುಗಳನ್ನು ಬೇಯಿಸುತ್ತಿರಲಾಗಿ ಘೋರವಾದ ಅನಾ

ವೃಷ್ಟಿಯಿಂದ ಕೂಡಿದ್ದ ಹನ್ನೆರಡು ವರ್ಷಗಳೇ ಕಳೆದುಹೋದುವು. ಸುದಾರುಣವಾದ ಹನ್ನೆರಡು ವರ್ಷಗಳ ಆ ದುರ್ಭಿಕ್ಷಕಾಲವು ಕಥೆಯನ್ನು ಕೇಳುತ್ತಾ ಇದ್ದ ಅರುಂಧತೀದೇವಿಗೆ ಒಂದೇ ಒಂದು ದಿವಸದೋಪಾದಿಯಲ್ಲಿ ಕಳೆದುಹೋಯಿತು. ಘೋರವಾದ ಅನಾವೃಷ್ಟಿಯ ಕಾಲವು ಕಳೆದನಂತರ ಸಪ್ತರ್ಷಿಗಳೂ ಫಲ-ಮೂಲಾದಿಗಳನ್ನು ಸಂಗ್ರಹಿಸಿಕೊಂಡು ಹಿಮವತ್ಪರ್ವತದ ಅರಣ್ಯಪ್ರದೇಶದಿಂದ ಅರುಂಧತಿಯನ್ನು ಬಿಟ್ಟುಹೋಗಿದ್ದ ಬದರಪಾಚನತೀರ್ಥದ ಸಮೀಪಕ್ಕೆ ಬಂದರು. ಬಳಿಕ ಸುಪ್ರೀತನಾದ ಶಂಕರನು ಅರುಂಧತಿಯೊಡನೆ ಹೇಳಿದನು :

"ಧರ್ಮಜ್ಞಳೇ! ನೀನು ಹಿಂದಿನಂತೆಯೇ ಈ ಸಪ್ತರ್ಷಿಗಳ ಸಮೀಪಕ್ಕೆ ಹೋಗು. ನಿನ್ನ ನಿಯಮಾನುಷ್ಠಾನಗಳಿಂದಲೂ ಮತ್ತು ತಪಸ್ಸಿನಿಂದಲೂ ನಾನು ಸುಪ್ರೀತನಾಗಿದ್ದೇನೆ." ಹೀಗೆಂದು ಹೇಳಿ ಭಗವಾನ್ ಶಂಕರನು ತನ್ನ ನಿಜಸ್ವರೂಪವನ್ನು ಅರುಂಧತಿಗೆ ತೋರಿಸಿದನು ಮತ್ತು ಅಲ್ಲಿಗೆ ಆಗಮಿಸಿದ ಸಪ್ತರ್ಷಿಗಳೊಡನೆ ಅರುಂಧತಿಯ ಮಹಾಚರಿತ್ರೆಯನ್ನು ಹೇಳಿದನು :

ಭವದ್ಭಿರ್ಹಿಮವತ್ಪೃಷ್ಠೇ ಯತ್ತಪಃ ಸಮುಪಾರ್ಜಿತಮ್ ।
ಅಸ್ಯಾಶ್ಚ ಯತ್ತಪೋ ವಿಪ್ರಾ ನ ಸಮಂ ತನ್ಮತಂ ಮಮ ॥೪೨॥

"ವಿಪ್ರಶ್ರೇಷ್ಠರೇ! ನೀವು ಹಿಮವತ್ಪರ್ವತದ ತಪ್ಪಲಿನಲ್ಲಿ ಮಾಡಿದ ತಪಸ್ಸು ಅರುಂಧತೀದೇವಿಯು ಈ ತೀರ್ಥದ ಬಳಿಯಲ್ಲಿಯೇ ಇದ್ದು ಯಾವ ತಪಸ್ಸನ್ನು ಆಚರಿಸಿದಳೋ ಆ ಮಹಾತಪಸ್ಸಿಗೆ ಸಮಾನವಾಗಿರುವುದಿಲ್ಲ. (ನೀವಲ್ಲಿ ಮಾಡಿದ ತಪಸ್ಸಿಗಿಂತಲೂ ಇವಳಿಲ್ಲಿ ಮಾಡಿರುವ ತಪಸ್ಸೇ ಅಧಿಕವಾಗಿದೆ.)

ತಪಸ್ವಿನಿಯಾದ ಅರುಂಧತಿಯು ಸುದುಷ್ಕರವಾದ ತಪಸ್ಸನ್ನೇ ಮಾಡಿದ್ದಾಳೆ. ಆಹಾರವನ್ನೇ ಸೇವಿಸದೆ ಎಲಚೀಹಣ್ಣುಗಳನ್ನು ಬೇಯಿಸು ತ್ತಿದ್ದಾಗಲೇ ಅನಾವೃಷ್ಟಿಯಿಂದ ಯುಕ್ತವಾಗಿದ್ದ ಅತಿಘೋರವಾದ ಹನ್ನೆರಡು ವರ್ಷಗಳೂ ಕಳೆದುಹೋದುವು."

ಜನಮೇಜಯ! ಸಪ್ತರ್ಷಿಗಳೊಡನೆ ಹೀಗೆ ಹೇಳಿದ ಮಹಾದೇವನು ಅರುಂಧತಿಯನ್ನು ಉದ್ದೇಶಿಸಿ ಪುನಃ ಹೇಳಿದನು :

**ವರಂ ವೃಣೀಷ್ವ ಕಲ್ಯಾಣಿ ಯತ್ತೇಽಭಿಲಷಿತಂ ಹೃದಿ ॥೪೯॥**

"ಕಲ್ಯಾಣಿಯೇ! ನಿನ್ನ ಮನಸ್ಸಿನಲ್ಲಿ ಅಪೇಕ್ಷಿತವಾದ ಯಾವುದಾದರೂ ವರವನ್ನು ಕೇಳು."

ಮಹಾದೇವನ ಮಾತನ್ನು ಕೇಳಿ ವಿಶಾಲನೇತ್ರೆಯಾದ ಮತ್ತು ಅರುಣನೇತ್ರೆಯಾದ ಅರುಂಧತೀದೇವಿಯು ಆ ಸಪ್ತರ್ಷಿಗಳ ಮಧ್ಯದಲ್ಲಿ ಮಹಾದೇವನಿಂದ ಈ ವರವನ್ನು ಕೇಳಿಕೊಂಡಳು :

**ಭಗವಾನ್ಯದಿ ಮೇ ಪ್ರೀತಸ್ತೀರ್ಥಂ ಸ್ಯಾದಿದಮದ್ಭುತಮ್ ।**
**ಸಿದ್ಧದೇವರ್ಷಿದಯಿತಂ ನಾಮ್ನಾ ಬದರಪಾಚನಮ್ ॥೫೦॥**

"ಭಗವಂತನಾದ ನೀನು ನನ್ನ ತಪೋನುಷ್ಠಾನಗಳಿಂದ ಪ್ರೀತ ನಾಗಿರುವುದೇ ಆದರೆ ಈ ತೀರ್ಥವು ಪರಮಾದ್ಭುತವಾದ ತೀರ್ಥವಾಗಲಿ. ಬದರಪಾಚನವೆಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಿ–ಸಿದ್ಧರಿಗೂ, ದೇವತೆಗಳಿಗೂ ಮತ್ತು ಋಷಿಗಳಿಗೂ ಅತ್ಯಂತಪ್ರಿಯವಾಗಲಿ.

**ತಥಾಸ್ಮಿನ್ದೇವದೇವೇಶ ತ್ರಿರಾತ್ರಮುಷಿತಃ ಶುಚಿಃ ।**
**ಪ್ರಾಪ್ನುಯಾದುಪವಾಸೇನ ಫಲಂ ದ್ವಾದಶವಾರ್ಷಿಕಮ್ ॥೫೧॥**

ದೇವದೇವೇಶ್ವರನೇ! ಈ ತೀರ್ಥಕ್ಷೇತ್ರದಲ್ಲಿ ಮೂರು ರಾತ್ರಿಗಳ ಪರ್ಯಂತವಾಗಿ ಶುದ್ಧನಾಗಿ ವಾಸವಾಗಿದ್ದು ಉಪವಾಸಮಾಡಿದವನಿಗೆ ಹನ್ನೆರಡು ವರ್ಷಗಳ ಕಾಲ ನಿಯಮಾನುಷ್ಠಾನಗಳಿಂದ ಉಪವಾಸಮಾಡಿದ ಮಹಾಪುಣ್ಯವು ಪ್ರಾಪ್ತವಾಗಲಿ."

ಹೀಗೆ ಹೇಳಿದ ತಪಸ್ವಿನಿಯಾದ ಅರುಂಧತಿಯೊಡನೆ ಮಹಾದೇವನು 'ಏವಮಸ್ತು–ಹಾಗೆಯೇ ಆಗಲಿ' ಎಂದನು. ಅನಂತರ ಸಪ್ತರ್ಷಿಗಳೂ ಪರಶಿವನನ್ನು ಸ್ತೋತ್ರಮಾಡಿದರು. ಬಳಿಕ ಮಹಾದೇವನು ತನ್ನ ಲೋಕಕ್ಕೆ ಹೊರಟುಹೋದನು.

ಹಸಿವು-ಬಾಯಾರಿಕೆಗಳಿಂದ ಕೂಡಿದ್ದರೂ ಸ್ವಲ್ಪವಾದರೂ ಆಯಾಸ

ಗೊಳ್ಳದಿದ್ದ ಮತ್ತು ಸ್ವಲ್ಪವಾದರೂ ಕುಂದಿದ ಮುಖಭಾವವನ್ನು ಹೊಂದದೇ ಇದ್ದ ಅರುಂಧತಿಯನ್ನು ನೋಡಿ ಸಪ್ತರ್ಷಿಗಳು ಅಚ್ಚರಿಗೊಂಡರು.

ಕಠೋರವ್ರತನಿಷ್ಠಳೇ! ಶ್ರುತಾವತಿಯೇ! ಹೀಗೆ ವಿಶುದ್ಧಾತ್ಮಳಾದ ಅರುಂಧತೀದೇವಿಯು ಈ ತೀರ್ಥದ ಸಮೀಪದಲ್ಲಿಯೇ ಮಹಾಸಿದ್ಧಿಯನ್ನು ಪಡೆದುಕೊಂಡಳು. ಅದೇ ರೀತಿಯಲ್ಲಿ ನೀನೂ ಸಹ ನನ್ನ ಸಲುವಾಗಿ ತಪಸ್ಸುಮಾಡಿ ಸಿದ್ಧಿಯನ್ನು ಪಡೆದುಕೊಂಡಿರುವೆ. ಅದರಲ್ಲಿಯೂ ವಿಶೇಷವೇನೆಂದರೆ : ನೀನು ಈ ಬದರಪಾಚನವೆಂಬ ಮಹಾವ್ರತದಲ್ಲಿ ಆತ್ಮಸಮರ್ಪಣವನ್ನೇ ಮಾಡಿರುವೆ. ಮಹಾಭಾಗಳೇ! ಸರ್ವಶ್ರೇಷ್ಠಳೇ! ನಿನ್ನ ನಿಯಮಾನುಷ್ಠಾನಗಳಿಂದ ಸಂತುಷ್ಟನಾದ ನಾನು ನಿನಗೆ ವಿಶೇಷವಾದ ವರವನ್ನೇ ದಯಪಾಲಿಸುತ್ತೇನೆ. ಕಲ್ಯಾಣಿ! ನಿನ್ನ ತಪಃಪ್ರಭಾವದಿಂದಲೂ ಮತ್ತು ತೇಜಸ್ಸಿನಿಂದಲೂ ಪ್ರಭಾವಿತನಾದ ನಾನು ಮಹಾತ್ಮನಾದ ಮಹಾದೇವನು ಅರುಂಧತೀದೇವಿಗೆ ದಯಪಾಲಿಸಿರುವುದಕ್ಕಿಂತಲೂ ಶ್ರೇಷ್ಠವಾದ ಮತ್ತು ಅಧಿಕವಾದ ವರವನ್ನೇ ದಯಪಾಲಿಸುತ್ತೇನೆ.

**ಯಸ್ತ್ವೇಕಾಂ ರಜನೀಂ ತೀರ್ಥೇ ವತ್ಸ್ಯತೇ ಸುಸಮಾಹಿತಃ ।**
**ಸ ಸ್ನಾತ್ವಾ ಪ್ರಾಪ್ಸ್ಯತೇ ಲೋಕಾನ್ದೇಹನ್ಯಾಸಾತ್ಸುದುರ್ಲಭಾನ್ ॥೫೮॥**

(ಈ ಕ್ಷೇತ್ರದಲ್ಲಿ ಮೂರು ರಾತ್ರಿಗಳು ಉಪವಾಸಮಾಡುವುದರಿಂದ ಹನ್ನೆರಡು ವರ್ಷಗಳು ಉಪವಾಸಮಾಡಿದ ಮಹಾಫಲವು ಪ್ರಾಪ್ತವಾಗಲಿ– ಎಂದಲ್ಲವೆ ಅರುಂಧತಿಯು ಮಹೇಶ್ವರನನ್ನು ಕೇಳಿಕೊಂಡುದು?) ಏಕಾಗ್ರ ಚಿತ್ತನಾಗಿ ಯಾವನು ಒಂದೇ ಒಂದು ರಾತ್ರಿಯನ್ನು ಈ ತೀರ್ಥಕ್ಷೇತ್ರದಲ್ಲಿ ಕಳೆಯುತ್ತಾನೆಯೋ ಮತ್ತು ಈ ತೀರ್ಥದಲ್ಲಿ ಸ್ನಾನಮಾಡುತ್ತಾನೆಯೋ– ಅವನು ಅವಸಾನಾನಂತರದಲ್ಲಿ ಸುದುರ್ಲಭವಾದ ಉತ್ತಮಲೋಕಗಳನ್ನು ಪಡೆದುಕೊಳ್ಳುತ್ತಾನೆ."

ಜನಮೇಜಯ! ಪ್ರತಾಪವಂತನಾದ, ಸಹಸ್ರಾಕ್ಷನಾದ ಭಗವಾನ್ ಇಂದ್ರದೇವನು ಪುಣ್ಯವತಿಯಾದ ಶ್ರುತಾವತಿಯೊಡನೆ ಹೀಗೆ ಹೇಳಿ ಸ್ವರ್ಗಕ್ಕೆ ಹಿಂದಿರುಗಿದನು.

ವಜ್ರಧರನಾದ ಇಂದ್ರನು ಸ್ವರ್ಗಕ್ಕೆ ಹೊರಟುಹೋದನಂತರ ಪುಣ್ಯ ಗಂಧಯುಕ್ತವಾದ ದಿವ್ಯಕುಸುಮಗಳ ವೃಷ್ಟಿಯಾಯಿತು. ಮಹಾಶಬ್ದಗಳಿಂದ ಯುಕ್ತವಾಗಿದ್ದ ದೇವದುಂದುಭಿಗಳು ಮೊಳಗಿದುವು. ಪುಣ್ಯಗಂಧ ಯುಕ್ತನಾಗಿದ್ದ ಪವಿತ್ರನಾದ ವಾಯುದೇವನು ಬೀಸತೊಡಗಿದನು. ಶುಭಲಕ್ಷಣೆಯಾದ ಶ್ರುತಾವತಿಯು ತನ್ನ ಮನುಷ್ಯಶರೀರವನ್ನು ತ್ಯಾಗಮಾಡಿ ಇಂದ್ರನ ಭಾರ್ಯೆಯಾದಳು. ತಾನು ಮಾಡಿದ ಉಗ್ರವಾದ ತಪಸ್ಸಿನಿಂದ ಶ್ರುತಾವತಿಯು ಇಂದ್ರನನ್ನು ಒಲಿಸಿಕೊಂಡು ಅವನೊಡನೆ ದೇವಲೋಕದಲ್ಲಿ ರಮಿಸುತ್ತಿದ್ದಳು."

ಶ್ರುತಾವತಿಯ ಕಥೆಯನ್ನು ಕೇಳಿ ಪುಲಕಿತನಾದ ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

**ಕಾ ತಸ್ಯಾ ಭಗವನ್ಮಾತಾ ಕ್ವ ಸಂವೃದ್ಧಾ ಚ ಶೋಭನಾ ।**
**ಶ್ರೋತುಮಿಚ್ಛಾಮ್ಯಹಂ ವಿಪ್ರ ಪರಂ ಕೌತೂಹಲಂ ಹಿ ಮೇ ॥೬೩॥**

"ಭಗವನ್! ಬ್ರಾಹ್ಮಣೋತ್ತಮರೇ! ಪರಮಶೋಭನೆಯಾದ ಶ್ರುತಾವತಿಯ ತಾಯಿಯು ಯಾರು? ಅವಳೆಲ್ಲಿ ಬೆಳೆದಳು? ಈ ವಿಷಯವನ್ನು ತಮ್ಮಿಂದ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇನೆ. ಈ ವಿಷಯವನ್ನು ತಿಳಿದುಕೊಳ್ಳಲು ನನಗೆ ಬಹಳ ಕುತೂಹಲವುಂಟಾಗಿದೆ."

"ಜನಮೇಜಯ! ಹಿಂದೊಮ್ಮೆ ವಿಶಾಲಾಕ್ಷಿಯಾದ ಘೃತಾಚೀ ಎಂಬ ಅಪ್ಸರಸೆಯು ಬರುತ್ತಿರುವುದನ್ನು ಕಂಡು ಮಹಾತ್ಮನಾದ ವಿಪ್ರರ್ಷಿಯಾದ ಭರದ್ವಾಜನ ರೇತಸ್ಸು ಜಾರಿತು. ಜಪಮಾಡುವವರಲ್ಲಿ ಶ್ರೇಷ್ಠನಾದ ಭರದ್ವಾಜನು ಒಡನೆಯೇ ಆ ರೇತಸ್ಸನ್ನು ಕೈಗೆತ್ತಿಕೊಂಡನು. ಆದರೆ ಆ ಮಹಾರೇತಸ್ಸು ಅವನ ಕೈಯಲ್ಲಿ ನಿಲ್ಲದೇ ಎಲೆಯ ದೊನ್ನೆಯಲ್ಲಿ ಬಿದ್ದಿತು. ಅಲ್ಲಿಯೇ ಶ್ರುತಾವತಿಯು ಹುಟ್ಟಿದಳು. ತಪೋಧನನಾದ, ಧರ್ಮಾತ್ಮನಾದ ಭರದ್ವಾಜನು ಹಾಗೆ ಹುಟ್ಟಿದ ತನ್ನ ಮಗಳಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿ ದೇವರ್ಷಿಗಳ ಸಭೆಯಲ್ಲಿ ಅವಳಿಗೆ 'ಶ್ರುತಾವತೀ' ಎಂಬುದಾಗಿ ನಾಮಕರಣವನ್ನೂ ಮಾಡಿದನು. ಬಳಿಕ ತನ್ನ

ಆಶ್ರಮದಲ್ಲಿಯೇ ಅವಳನ್ನು ಬೆಳೆಯಲು ಬಿಟ್ಟು ತಾನು ಹಿಮವತ್ಪರ್ವತದಲ್ಲಿದ್ದ ಅರಣ್ಯಕ್ಕೆ ಹೊರಟುಹೋದನು.

ಜನಮೇಜಯ! ವೃಷ್ಣಿವಂಶಾವತಂಸನಾದ, ಮಹಾನುಭಾವನಾದ ಬಲರಾಮನು ಆ ಬದರಪಾಚನಮಹಾತೀರ್ಥದಲ್ಲಿಯೂ ಸ್ನಾನಮಾಡಿ ಶ್ರೇಷ್ಠರಾದ ಬ್ರಾಹ್ಮಣರಿಗೆ ಧನಗಳನ್ನೂ ಯಥಾವಿಧಿಯಾಗಿ ದಾನಮಾಡಿ ಏಕಾಗ್ರಚಿತ್ತನಾಗಿ ಮುಂದೆ ಪರಿವಾರಸಮೇತನಾಗಿ ಇಂದ್ರತೀರ್ಥಕ್ಕೆ ತೆರಳಿದನು.”

ಳಲನೆಯ ಅಧ್ಯಾಯವು ಮುಗಿಯಿತು.

೪೯ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಇಂದ್ರತೀರ್ಥ, ರಾಮತೀರ್ಥ, ಯಮುನಾತೀರ್ಥ ಮತ್ತು ಆದಿತ್ಯತೀರ್ಥಗಳ ಮಹಿಮೆ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

“ಜನಮೇಜಯ! ನಾನು ಈ ಹಿಂದೆ ಹೇಳಿದಂತೆ ಯದುಶ್ರೇಷ್ಠನಾದ ಬಲರಾಮನು ಇಂದ್ರತೀರ್ಥಕ್ಕೆ ಹೋಗಿ ಆ ಪುಣ್ಯತೀರ್ಥದಲ್ಲಿ ಸ್ನಾನಮಾಡಿ ಧನವನ್ನೂ ರತ್ನಗಳನ್ನೂ ಬ್ರಾಹ್ಮಣರಿಗೆ ದಾನಮಾಡಿದನು. ಆ ಇಂದ್ರತೀರ್ಥದ ಸಮೀಪದಲ್ಲಿಯೇ ದೇವತೆಗಳ ರಾಜನಾದ ಇಂದ್ರನು ನೂರು ಯಜ್ಞಗಳನ್ನು ಮಾಡಿದನು ಮತ್ತು ಅದರ ಅಂಗವಾಗಿ ಬೃಹಸ್ಪತಿಗೆ ಹೇರಳವಾದ ಧನವನ್ನೂ ಕೊಟ್ಟನು. ಇಂದ್ರನು ನಾನಾಪ್ರಕಾರವಾದ ದಕ್ಷಿಣೆಗಳಿಂದ ಯುಕ್ತವಾದ, ಪುಷ್ಟವಾದ, ಶಾಸ್ತ್ರೋಕ್ತವಾದ ಯಜ್ಞಗಳನ್ನು ವೇದಪಾರಂಗತರೊಡನೆ ಯಾವ ವಿಧವಾದ ವಿಘ್ನಗಳೂ ಇಲ್ಲದೆ ಆ ಪುಣ್ಯಕ್ಷೇತ್ರದ ಸಮೀಪದಲ್ಲಿಯೇ ಪೂರ್ಣಗೊಳಿಸಿದನು.

**ತಾನ್ಕ್ರತೂನ್ಭರತಶ್ರೇಷ್ಠ ಶತಕೃತ್ವೋ ಮಹಾದ್ಯುತಿಃ ।**
**ಪೂರಯಾಮಾಸ ವಿಧಿವತ್ತತಃ ಖ್ಯಾತಃ ಶತಕ್ರತುಃ ॥೪॥**

ಮಹಾತೇಜಸ್ವಿಯಾದ ಇಂದ್ರನು ಆ ಯಜ್ಞವನ್ನು ನೂರು ಬಾರಿ ವಿಧಿಪೂರ್ವಕವಾಗಿ ಮಾಡಿ ಪೂರೈಸಿದನು. ಆದುದರಿಂದಲೇ ಅವನು ‘ಶತಕ್ರತು’ ಎಂದು ವಿಖ್ಯಾತನಾದನು.

**ತಸ್ಯ ನಾಮ್ನಾ ಚ ತತ್ತೀರ್ಥಂ ಶಿವಂ ಪುಣ್ಯಂ ಸನಾತನಮ್ ।**
**ಇನ್ದ್ರತೀರ್ಥಮಿತಿ ಖ್ಯಾತಂ ಸರ್ವಪಾಪಪ್ರಮೋಚನಮ್ ॥೫॥**

ಸಕಲವಿಧವಾದ ಪಾಪಗಳನ್ನೂ ಹೋಗಲಾಡಿಸುವ, ಮಂಗಳಕರವಾದ, ಪುಣ್ಯತಮವಾದ, ಸನಾತನವಾದ ಆ ತೀರ್ಥವು ಇಂದ್ರನ ಹೆಸರಿನಿಂದ 'ಇಂದ್ರತೀರ್ಥ' ಎಂದೇ ವಿಖ್ಯಾತವಾಯಿತು. ಮುಸಲಾಯುಧನಾದ ಬಲರಾಮನು ಅಲ್ಲಿಯೂ ವಿಧಿಪೂರ್ವಕವಾಗಿ ಸ್ನಾನಮಾಡಿ, ಒಳ್ಳೆಯ ವಸ್ತ್ರಗಳಿಂದಲೂ ಶ್ರೇಷ್ಠವಾದ ಭೋಜನಗಳಿಂದಲೂ ಬ್ರಾಹ್ಮಣರನ್ನು ಸಂಪೂಜಿಸಿ, ಇಂದ್ರತೀರ್ಥದಿಂದ ಹೊರಟು ಸಪರಿವಾರನಾಗಿ ಶುಭಾವಹವಾದ ಶ್ರೇಷ್ಠತೀರ್ಥವಾದ ರಾಮತೀರ್ಥಕ್ಕೆ ಪ್ರಯಾಣಮಾಡಿದನು.

ಮಹಾತಪಸ್ವಿಯಾದ, ಮಹಾಭಾಗ್ಯಶಾಲಿಯಾದ, ಭೃಗುವಂಶೀಯನಾದ ಪರಶುರಾಮನು ಹಲವು ಬಾರಿ ಕ್ಷತ್ರಿಯರನ್ನು ಸಂಹರಿಸಿ ಅಖಂಡ ಭೂಮಂಡಲವನ್ನೂ ಗೆದ್ದ ಬಳಿಕ ಆ ತೀರ್ಥದ ಸಮೀಪದಲ್ಲಿಯೇ ಮುನಿಶ್ರೇಷ್ಠನಾದ ಕಶ್ಯಪನನ್ನು ಆಚಾರ್ಯನನ್ನಾಗಿ ಪುರಸ್ಕರಿಸಿ, ವಾಜಪೇಯದಿಂದಲೂ ಮತ್ತು ನೂರು ಅಶ್ವಮೇಧಗಳಿಂದಲೂ ಯಾಗಮಾಡಿದನು. ಬಳಿಕ ಪರಶುರಾಮನು ತಾನು ಜಯಿಸಿದ ಸಾಗರಾಂಬರಳಾದ ಪೃಥ್ವಿಯನ್ನೇ ಕಶ್ಯಪನಿಗೆ ದಕ್ಷಿಣೆಯ ರೂಪದಲ್ಲಿ ಕೊಟ್ಟುಬಿಟ್ಟನು. ನಾನಾವಿಧವಾದ ರತ್ನ, ಗೋವು, ಆನೆ, ಸೇವಕರು, ಸೇವಕಿಯರು, ಕುರಿ, ಮೇಕೆ–ಇವೇ ಮೊದಲಾದುವುಗಳನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟು ಪರಶುರಾಮನು ಅರಣ್ಯಕ್ಕೆ ಹೊರಟುಹೋದನು.

ಜನಮೇಜಯ! ಬಲರಾಮನು ದೇವತೆಗಳಿಂದಲೂ ಬ್ರಹ್ಮರ್ಷಿಗಳಿಂದಲೂ ಸೇವಿಸಲ್ಪಡುತ್ತಿದ್ದ, ಪುಣ್ಯೋಪೇತವಾದ, ಶ್ರೇಷ್ಠವಾದ ಆ ರಾಮತೀರ್ಥದಲ್ಲಿ ಸ್ನಾನಮಾಡಿ, ಅಲ್ಲಿದ್ದ ಮುನಿಗಳಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ, ಅಲ್ಲಿಂದ ಮುಂದೆ ಯಮುನಾತೀರ್ಥಕ್ಕೆ ಆಗಮಿಸಿದನು. ಹಿಂದೆ ಆ ಯಮುನಾತೀರ್ಥದ ಸಮೀಪದಲ್ಲಿಯೇ ಅದಿತಿಯ ಮಗನಾದ, ಮಹಾಭಾಗ್ಯಶಾಲಿಯಾದ, ಬಿಳುಪಾದ ಕಾಂತಿಯಿಂದ ಕೂಡಿದ್ದ ವರುಣನು ರಾಜಸೂಯಯಾಗವನ್ನು ಮಾಡಿದನು. ಶತ್ರುವೀರಹಂತಕನಾದ ವರುಣನು

ಯುದ್ಧದಲ್ಲಿ ಮಾನವರನ್ನೂ ಮತ್ತು ದೇವತೆಗಳನ್ನೂ ಜಯಿಸಿದುದಕ್ಕಾಗಿ ಶ್ರೇಷ್ಠವಾದ ಆ ಮಹಾಯಾಗವನ್ನು ಮಾಡಿದ್ದನು. ವರುಣನ ಆ ರಾಜಸೂಯಯಜ್ಞವು ಮುಗಿದನಂತರ ದೇವತೆಗಳಿಗೂ ಮತ್ತು ದಾನವರಿಗೂ, ಮೂರು ಲೋಕಗಳಿಗೂ ಭಯವನ್ನುಂಟುಮಾಡುವ ಮಹಾಸಮರವು ಪ್ರಾರಂಭವಾಯಿತು.

ಮಹಾರಾಜ! ಕ್ರತುಗಳಲ್ಲಿ ಶ್ರೇಷ್ಠವೆನಿಸಿದ ರಾಜಸೂಯಯಾಗವು ನಿರ್ವಿಘ್ನವಾಗಿ ಮುಗಿದನಂತರ ಸಾಮಾನ್ಯವಾಗಿ ಕ್ಷತ್ರಿಯರಲ್ಲಿ ಮಹಾ ಘೋರವಾದ ಯುದ್ಧವು ನಡೆಯುತ್ತದೆ.

ಅರ್ಥಿಗಳ ಅಪೇಕ್ಷೆಯನ್ನು ಪೂರ್ಣಗೊಳಿಸುವ, ಹಲಾಯುಧನಾದ ಬಲರಾಮನು ಆ ಯಮುನಾತೀರ್ಥದಲ್ಲಿಯೂ ಸ್ನಾನಮಾಡಿ ಅಲ್ಲಿದ್ದ ಋಷಿಗಳನ್ನು ಯಥೋಕ್ತವಾದ ಪೂಜಾದಿಗಳಿಂದ ಆರಾಧಿಸಿದನು ಮತ್ತು ಇತರ ಯಾಚಕರಿಗೂ ಅನೇಕ ದಾನಗಳನ್ನು ಕೊಟ್ಟನು.

ಕಮಲನೇತ್ರನಾದ ವನಮಾಲಿಯಾದ ಬಲರಾಮನು ಪರಮ ಹೃಷ್ಟನಾಗಿ, ಮಹರ್ಷಿಗಳಿಂದಲೂ ಸ್ತೋತ್ರಮಾಡಲ್ಪಟ್ಟವನಾಗಿ ಯಮುನಾ ತೀರ್ಥದಿಂದ ಹೊರಟು ಸಪರಿವಾರನಾಗಿ ಆದಿತ್ಯತೀರ್ಥಕ್ಕೆ ಪ್ರಯಾಣ ಮಾಡಿದನು.

ಆ ಆದಿತ್ಯತೀರ್ಥದ ಸಮೀಪದಲ್ಲಿಯೇ ಜ್ಯೋತಿರ್ಮಯನಾದ ಭಾಸ್ಕರನು ಯಜ್ಞಮಾಡಿ ಪ್ರಭಾವವನ್ನೂ ಜ್ಯೋತಿರ್ಲೋಕಗಳ ಆಧಿಪತ್ಯ ವನ್ನೂ ಪಡೆದುಕೊಂಡನು. ಆ ನದಿಯ ತೀರದಲ್ಲಿಯೇ ಇಂದ್ರಾದಿ ದೇವತೆಗಳೂ, ವಿಶ್ವೇದೇವತೆಗಳೂ, ಮರುದ್ಗಣಗಳೂ, ಗಂಧರ್ವಾಪ್ಸರೆ ಯರೂ, ದ್ವೈಪಾಯನವ್ಯಾಸರೂ, ಶುಕರೂ, ಮಧುಸೂದನನಾದ ಶ್ರೀಕೃಷ್ಣನೂ, ಯಕ್ಷ-ರಾಕ್ಷಸ-ಪಿಶಾಚರೂ, ಇವರೇ ಅಲ್ಲದೆ ಇನ್ನೂ ಸಾವಿರಾರು ಪುರುಷರೂ ಯೋಗಸಿದ್ಧಿಯನ್ನು ಪಡೆದಿರುತ್ತಾರೆ.

ಪರಂತಪನೇ! ಹಿಂದೆ ಮಹಾವಿಷ್ಣುವು ಮಧು ಮತ್ತು ಕೈಟಭರೆಂಬ ಮಹಾಸುರರನ್ನು ಸಂಹರಿಸಿ, ಪರಮಶ್ರೇಷ್ಠವಾದ, ಪುಣ್ಯತಮವಾದ, ಮಂಗಳದಾಯಕವಾದ ಸರಸ್ವತೀನದಿಯ ಆ ತೀರ್ಥದಲ್ಲಿ ಸ್ನಾನಮಾಡಿದನು.

ಧರ್ಮಾತ್ಮರಾದ ಕೃಷ್ಣದ್ವೈಪಾಯನರೂ ಆ ಪುಣ್ಯತೀರ್ಥದಲ್ಲಿಯೇ ಸ್ನಾನ ಮಾಡಿ ಶ್ರೇಷ್ಠವಾದ ಯೋಗವನ್ನು ಪಡೆದು ಅನಂತರ ಶ್ರೇಷ್ಠವಾದ ಸಿದ್ಧಿಯನ್ನೂ ಪಡೆದುಕೊಂಡರು. ಮಹಾತಪಸ್ವಿಯಾದ ಅಸಿತದೇವಲನೆಂಬ ಋಷಿಯೂ ಆ ಆದಿತ್ಯತೀರ್ಥದಲ್ಲಿಯೇ ಸ್ನಾನಮಾಡಿ ಶ್ರೇಷ್ಠವಾದ ಯೋಗಸಿದ್ಧಿಯನ್ನು ಪಡೆದುಕೊಂಡನು."

೪೯ನೆಯ ಅಧ್ಯಾಯವು ಮುಗಿಯಿತು.

೫೦ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಆದಿತ್ಯತೀರ್ಥದ ಮಹಿಮಾಪ್ರಸಂಗದಲ್ಲಿ ಅಸಿತದೇವಲ-ಜೈಗೀಷವ್ಯರ ಪುಣ್ಯಚರಿತ್ರೆ

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಆ ಆದಿತ್ಯತೀರ್ಥದಲ್ಲಿಯೇ ಹಿಂದೆ ಧರ್ಮಾತ್ಮನಾದ, ತಪೋಧನನಾದ ಅಸಿತದೇವಲನು ಗೃಹಸ್ಥಾಶ್ರಮವನ್ನು ಆಶ್ರಯಿಸಿಕೊಂಡಿದ್ದನು.

**ಧರ್ಮನಿತ್ಯಃ ಶುಚಿರ್ದಾನ್ತೋ ನ್ಯಸ್ತದಣ್ಡೋ ಮಹಾತಪಾಃ ।**
**ಕರ್ಮಣಾ ಮನಸಾ ವಾಚಾ ಸಮಃ ಸರ್ವೇಷು ಜನ್ತುಷು ॥೨॥**

ಅವನು ಯಾವಾಗಲೂ ಧರ್ಮಪರಾಯಣನಾಗಿದ್ದನು. ಪವಿತ್ರನಾಗಿದ್ದನು. ಜಿತೇಂದ್ರಿಯನಾಗಿದ್ದನು. ಯಾರೊಬ್ಬರನ್ನೂ ಹಿಂಸಿಸುತ್ತಿರಲಿಲ್ಲ. ಮಹಾತಪಸ್ವಿಯಾಗಿದ್ದನು. ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ಕಾರ್ಯದಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ ಸಮವಾಗಿ ವರ್ತಿಸುತ್ತಿದ್ದನು. (ಅವನ ಮಾತು, ಮನಸ್ಸು ಮತ್ತು ಕ್ರಿಯೆಗಳು ಒಂದೇ ಆಗಿರುತ್ತಿದ್ದುವು. ಎಲ್ಲ ಪ್ರಾಣಿಗಳನ್ನೂ ಸಮದೃಷ್ಟಿಯಿಂದ ನೋಡುತ್ತಿದ್ದನು.)

**ಅಕ್ರೋಧನೋ ಮಹಾರಾಜ ತುಲ್ಯನಿನ್ದಾತ್ಮಸಂಸ್ತುತಿಃ ।**
**ಪ್ರಿಯಾಪ್ರಿಯೇ ತುಲ್ಯವೃತ್ತಿರ್ಯಮವತ್ಸಮದರ್ಶನಃ ॥೩॥**

ಅಸಿತದೇವಲನಿಗೆ ಕೋಪವೆಂಬುದೇ ಇರಲಿಲ್ಲ. ನಿಂದೆ ಮತ್ತು ಸ್ತುತಿಗಳನ್ನು ಒಂದೇ ಸಮನಾಗಿ ಭಾವಿಸುತ್ತಿದ್ದನು. ನಿಂದೆಯಿಂದ ಕುಗ್ಗುತ್ತಿರ

ಲಿಲ್ಲ ; ಸ್ತುತಿಯಿಂದ ಹಿಗ್ಗುತ್ತಲೂ ಇರಲಿಲ್ಲ. ಪ್ರಿಯವಾದುದು ಲಭಿಸಲಿ ; ಅಪ್ರಿಯವಾದುದು ಘಟಿಸಲಿ–ಅವನ ಚಿತ್ತವೃತ್ತಿಯಲ್ಲಿ ಯಾವ ವಿಧವಾದ ವ್ಯತ್ಯಾಸವೂ ಉಂಟಾಗುತ್ತಿರಲಿಲ್ಲ. ಯಮರಾಜನಂತೆಯೇ ಎಲ್ಲ ಪ್ರಾಣಿಗಳನ್ನೂ ಸಮದೃಷ್ಟಿಯಿಂದ ಕಾಣುತ್ತಿದ್ದನು.

**ಕಾಞ್ಚನೇ ಲೋಷ್ಟಭಾವೇ ಚ ಸಮದರ್ಶೀ ಮಹಾತಪಾಃ ।**
**ದೇವಾನಪೂಜಯನ್ನಿತ್ಯಮತಿಥೀಂಶ್ಚ ದ್ವಿಜೈಃ ಸಹ ॥೪॥**

ಮಹಾತಪಸ್ವಿಯಾದ ಅಸಿತದೇವಲನು ಚಿನ್ನದಲ್ಲಿಯೂ–ಮಣ್ಣಿನ ಹೆಂಟೆಯಲ್ಲಿಯೂ ಸಮದೃಷ್ಟಿಯುಳ್ಳವನಾಗಿದ್ದನು. ಪ್ರತಿನಿತ್ಯವೂ ದೇವತೆ ಗಳನ್ನು ಆರಾಧಿಸುತ್ತಿದ್ದನು. ಬ್ರಾಹ್ಮಣರನ್ನೂ, ಅತಿಥಿಗಳನ್ನೂ ಆದರಿಸಿ ಸತ್ಕರಿಸುತ್ತಿದ್ದನು.

ಅಸಿತದೇವಲನು ಧರ್ಮಪರಾಯಣನಾಗಿಯೂ, ಬ್ರಹ್ಮಚರ್ಯ ಪಾಲನೆಯಲ್ಲಿ ತತ್ಪರನಾಗಿಯೂ ಇದ್ದನು. ಹೀಗೆಯೇ ಇರುತ್ತಿರಲಾಗಿ ಒಂದು ದಿನ ಧೀಮಂತನಾದ ಜೈಗೀಷವ್ಯನೆಂಬ ಮಹಾಮುನಿಯು ಯೋಗವನ್ನಾಶ್ರಯಿಸಿ ಆ ಆದಿತ್ಯತೀರ್ಥದ ಸಮೀಪಕ್ಕೆ ಬಂದನು. ಆ ಮುನಿಯು ಸದಾಕಾಲದಲ್ಲಿಯೂ ಏಕಾಗ್ರಚಿತ್ತನಾಗಿ ತಪಸ್ಸಿನಲ್ಲಿಯೇ ನಿರತನಾಗಿದ್ದನು. ಮಹಾತೇಜಸ್ವಿಯಾದ ಮತ್ತು ಮಹಾತಪಸ್ವಿಯಾದ ಜೈಗೀಷವ್ಯನು ಸದಾ ಯೋಗಪಾರಾಯಣನಾಗಿದ್ದುಕೊಂಡು ಯೋಗಸಿದ್ಧಿ ಯನ್ನೂ ಪಡೆದುಕೊಂಡಿದ್ದನು. ಮಹಾಮುನಿಯಾದ ಜೈಗೀಷವ್ಯನು ತನ್ನ ಆಶ್ರಮದಲ್ಲಿಯೇ ಇದ್ದುಕೊಂಡು ಏಕಾಗ್ರಚಿತ್ತನಾಗಿ ಯೋಗನಿತ್ಯನಾಗಿರು ವುದನ್ನು ಅಸಿತದೇವಲನು ಅನುದಿನವೂ ನೋಡುತ್ತಲೇ ಇದ್ದನು. ಗೃಹಸ್ಥಾಶ್ರಮದಲ್ಲಿದ್ದುದರಿಂದ ಅಸಿತದೇವಲನು ಧರ್ಮದ ದೃಷ್ಟಿಯಿಂದ ಯೋಗಸಾಧನೆಗೆ ತೊಡಗುತ್ತಿರಲಿಲ್ಲ. ಹೀಗೆಯೇ ಅವರಿಬ್ಬರೂ ಆ ಆಶ್ರಮದಲ್ಲಿ ಅನೇಕವರ್ಷಗಳನ್ನು ಕಳೆದರು. ಮುನಿಶ್ರೇಷ್ಠನಾದ ಜೈಗೀಷವ್ಯನನ್ನು ದೇವಲನು ಕೆಲವು ಸಮಯಗಳಲ್ಲಿ ಕಾಣುತ್ತಲೇ ಇರಲಿಲ್ಲ. ಆದರೆ ಆಹಾರವನ್ನು ತಿನ್ನಬೇಕಾದ ಕಾಲದಲ್ಲಿ–ಆಹಾರಕ್ಕಾಗಿ ಭಿಕ್ಷಾಟನೆಯನ್ನು ಮಾಡಬೇಕಾಗಿದ್ದ ಕಾಲದಲ್ಲಿ–ಸಂನ್ಯಾಸಿಯಾಗಿದ್ದ ಜೈಗೀಷವ್ಯನು ಗೃಹಸ್ಥನಾಗಿದ್ದ ಅಸಿತದೇವಲನ ಸಮೀಪಕ್ಕೆ ತಪ್ಪದೇ ಬರು

ತ್ತಿದ್ದನು. ಸಂನ್ಯಾಸಿಯ ರೂಪದಲ್ಲಿ ಪ್ರಾಪ್ತನಾದ, ಮುನಿಶ್ರೇಷ್ಠನಾದ ಜೈಗೀಷವ್ಯನನ್ನು ನೋಡಿ ದೇವಲನು ಬಹಳ ಸಂತೋಷಗೊಳ್ಳುತ್ತಿದ್ದನು. ಜೈಗೀಷವ್ಯನಿಗೆ, ಅವನು ಸಂನ್ಯಾಸಿಯಾಗಿದ್ದುದರಿಂದ ಬಹಳ ಗೌರವ ಕೊಟ್ಟು ಯಥಾಶಕ್ತಿ ಋಷಿಪ್ರೋಕ್ತವಾದ ವಿಧಿಗೆ ಅನುಸಾರವಾಗಿ ಅವನನ್ನು ಸತ್ಕರಿಸುತ್ತಿದ್ದನು.

ಹೀಗೆಯೇ ಅಸಿತದೇವಲನು ಏಕಾಗ್ರಚಿತ್ತನಾಗಿ ಅನೇಕವರ್ಷಗಳವರೆಗೆ ಸಂನ್ಯಾಸಿಯಾದ ಜೈಗೀಷವ್ಯನನ್ನು ಸತ್ಕರಿಸಿದನು. ಹೀಗೆಯೇ ಇರುತ್ತಿರಲಾಗಿ ಒಂದು ದಿನ ಮಹಾಕಾಂತಿಯಿಂದ ಯುಕ್ತನಾಗಿದ್ದ ಜೈಗೀಷವ್ಯಮುನಿಯನ್ನು ನೋಡಿ ಮಹಾತ್ಮನಾದ ಅಸಿತದೇವಲನಿಗೆ ದೊಡ್ಡ ಚಿಂತೆಯುಂಟಾಯಿತು.

**ಸಮಾಸ್ತು ಸಮತಿಕ್ರಾನ್ತಾ ಬಹ್ವ್ಯಃ ಪೂಜಯತೋ ಮಮ ।**
**ನ ಚಾಯಮಲಸೋ ಭಿಕ್ಷುರಭ್ಯಭಾಷತ ಕಿಂಚನ ॥೧೩॥**

“ನಾನು ಅನುದಿನವೂ ಈ ಸಂನ್ಯಾಸಿಗೆ ಯಥೋಚಿತವಾಗಿ ಯಥಾ ವಿಧಿಯಾಗಿ ಸತ್ಕಾರಮಾಡುತ್ತಲೇ ಇದ್ದೇನೆ. ಹೀಗೆಯೇ ಅನೇಕವರ್ಷಗಳೂ ಕಳೆದುಹೋದುವು. ಆದರೆ ಈ ಅಲಸನಾದ ಸಂನ್ಯಾಸಿಯು ಅನುದಿನವೂ ಬಂದು ಭಿಕ್ಷೆಯನ್ನು ಪಡೆದುಕೊಂಡು ಹೋಗುತ್ತಿರುವನೇ ಹೊರತು ನನ್ನೊಡನೆ ಒಂದು ಮಾತನ್ನೂ ಆಡುತ್ತಿಲ್ಲವಲ್ಲಾ!”–ಹೀಗೆ ಆಲೋಚಿಸುತ್ತಾ ಶ್ರೀಮಂತನಾದ ಅಸಿತದೇವಲನು ಕೈಯಲ್ಲಿ ಕಲಶವೊಂದನ್ನೆತ್ತಿಕೊಂಡು ಆಕಾಶಮಾರ್ಗದಲ್ಲಿ ಸಮುದ್ರದ ಕಡೆಗೆ ಹೋಗುತ್ತಿದ್ದನು. ಸಮುದ್ರತೀರಕ್ಕೆ ಹೋದೊಡನೆಯೇ ತನಗಿಂತಲೂ ಮುಂಚಿತವಾಗಿಯೇ ಅಲ್ಲಿಗೆ ಹೋಗಿ ನಿಂತಿದ್ದ ಜೈಗೀಷವ್ಯಸಂನ್ಯಾಸಿಯನ್ನು ಅಸಿತದೇವಲನು ನೋಡಿದನು. ಆಗ ಅಮಿತತೇಜಸ್ವಿಯಾದ ಅಸಿತದೇವಲನಿಗೆ ಚಿಂತೆಯ ಜೊತೆಯಲ್ಲಿಯೇ ವಿಸ್ಮಯವೂ ಉಂಟಾಯಿತು.

**ಕಥಂ ಭಿಕ್ಷುರಯಂ ಪ್ರಾಪ್ತಃ ಸಮುದ್ರೇ ಸ್ನಾತ ಏವ ಚ ॥೧೭॥**

“ಈ ಸಂನ್ಯಾಸಿಯು ನನಗಿಂತಲೂ ಮೊದಲೇ ಇಲ್ಲಿಗೆ ಹೇಗೆ ಬಂದನು?

ಆಕಾಶಮಾರ್ಗದಲ್ಲಿಯೇ ವೇಗವಾಗಿ ಬಂದ ನನಗಿಂತಲೂ ಮೊದಲು ಇವನು ಈ ಸಮುದ್ರತೀರಕ್ಕೆ ಬಂದಿರುವುದೂ ಅಲ್ಲದೇ ನಾನು ಬರುವ ವೇಳೆಗಾಗಲೇ ಸ್ನಾನಮಾಡಿಯೂ ಇದ್ದಾನೆ. ಇವನಿಗಿದು ಹೇಗೆ ಸಾಧ್ಯವಾಯಿತು?"

ಮಹರ್ಷಿಯಾದ ಅಸಿತದೇವಲನು ಇವೇ ಮುಂತಾಗಿ ಚಿಂತಿಸ ತೊಡಗಿದನು. ಅನಂತರ ಸಮುದ್ರದಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿ ಶುಚಿಯಾಗಿ ಆ ಸಮಯದಲ್ಲಿ ಜಪಿಸಲು ಯೋಗ್ಯವಾದ ಮಂತ್ರಗಳನ್ನು ಜಪಿಸಿದನು. ಶ್ರೀಮಂತನಾದ ಅಸಿತದೇವಲನು ಜಪಾಹ್ನಿಕಗಳನ್ನು ಮುಗಿಸಿ ಜಲಪೂರ್ಣವಾಗಿದ್ದ ಕಲಶವನ್ನು ತೆಗೆದುಕೊಂಡು ಪುನಃ ಹಿಂದಿನಂತೆಯೇ ಆಕಾಶಮಾರ್ಗವಾಗಿ ತನ್ನ ಆಶ್ರಮಕ್ಕೆ ಹೋದನು. ಅಸಿತದೇವಲನು ತನ್ನ ಆಶ್ರಮಕ್ಕಿನ್ನೂ ಪ್ರವೇಶಿಸುತ್ತಿದ್ದಾಗಲೇ ತನ್ನ ಆಶ್ರಮದ ಒಳಭಾಗದಲ್ಲಿ ಸುಖಾಸೀನನಾಗಿ ಕುಳಿತಿದ್ದ ಜೈಗೀಷವ್ಯಮುನಿಯನ್ನು ನೋಡಿದನು. ಆದರೆ ಆ ಸಮಯದಲ್ಲಿಯೂ ಆ ಸಂನ್ಯಾಸಿಯು ಮಹರ್ಷಿಯಾದ ಅಸಿತದೇವಲ ನೊಡನೆ ಯಾವುದೊಂದು ಮಾತನ್ನೂ ಆಡಲಿಲ್ಲ. ಮಹಾತಪಸ್ವಿಯಾದ ಆ ಮುನಿಯು ಕಾಷ್ಠಮೌನವನ್ನು ಧರಿಸಿ (ಇಂಗಿತದಿಂದಲಾದರೂ ತನ್ನ ಅಭಿಪ್ರಾಯವನ್ನು ತಿಳಿಸದೇ ಕಟ್ಟಿಗೆಯಂತೆ ಜಡನಾಗಿ) ಆಶ್ರಮದಲ್ಲಿ ಕುಳಿತಿದ್ದನು. ಸಮುದ್ರದಂತೆ ಅತ್ಯಂತಗಾಂಭೀರ್ಯದಿಂದ ಕೂಡಿದ್ದ ಜೈಗೀಷವ್ಯಮುನಿಯು ಸಮುದ್ರದಲ್ಲಿ ಸ್ನಾನಮಾಡಿದುದನ್ನೂ ಅಸಿತ ದೇವಲನು ನೋಡಿದ್ದನು. ಪುನಃ ತನಗಿಂತಲೂ ಮೊದಲಾಗಿಯೇ ಆಶ್ರಮ ವನ್ನು ಪ್ರವೇಶಿಸಿ ಕಾಷ್ಠಮೌನದಿಂದ ಕುಳಿತಿರುವುದನ್ನೂ ನೋಡಿದನು. ಆ ಎರಡು ಸನ್ನಿವೇಶಗಳನ್ನೂ ಪ್ರತ್ಯಕ್ಷವಾಗಿಯೇ ನೋಡಿದ ಧೀಮಂತನಾದ ಅಸಿತದೇವಲನು ಆಲೋಚಿಸತೊಡಗಿದನು. ಜೈಗೀಷವ್ಯನ ತಪಸ್ಸಿನ ಪ್ರಭಾವವನ್ನೂ ಮತ್ತು ಯೋಗದಿಂದ ಪ್ರಾಪ್ತವಾಗಿದ್ದ ಸಿದ್ಧಿಯನ್ನೂ ನೋಡಿ ಮುನಿಶ್ರೇಷ್ಠನಾದ ಅಸಿತನು ಬಹಳವಾಗಿ ಚಿಂತಿಸಿದನು.

**ಮಯಾ ದೃಷ್ಟಃ ಸಮುದ್ರೇ ಚ ಆಶ್ರಮೇ ಚ ಕಥಂ ತ್ವಯಮ್ ॥**

"ನನಗಿಂತಲೂ ಮುಂಚಿತವಾಗಿ ಇವನು ಸಮುದ್ರತೀರದಲ್ಲಿದ್ದು ದನ್ನೂ ನಾನು ನೋಡಿದೆನು. ನನಗಿಂತಲೂ ಮುಂದಾಗಿ ಆಶ್ರಮದಲ್ಲಿ

ಬಂದು ಕುಳಿತಿರುವುದನ್ನೂ ನಾನೀಗ ಪ್ರತ್ಯಕ್ಷವಾಗಿಯೇ ಕಾಣುತ್ತಿದ್ದೇನೆ. ಇದು ಇವನಿಗೆ ಹೇಗೆ ಸಾಧ್ಯವಾಯಿತು?"

ಜನಮೇಜಯಮಹಾರಾಜ! ಹೀಗೆ ಚಿಂತಿಸುತ್ತಲೇ ಇದ್ದ ಮಂತ್ರಶಾಸ್ತ್ರ ದಲ್ಲಿ ಪಾರಂಗತನಾಗಿದ್ದ ಮುನಿಯಾದ ಅಸಿತದೇವಲನು ಸಂನ್ಯಾಸಿಯಾದ ಜೈಗೀಷವ್ಯನ ವಿಷಯವನ್ನು ತಿಳಿದುಕೊಳ್ಳುವ ಸಲುವಾಗಿ ಆಶ್ರಮ ಭೂಮಿಯಿಂದ ಅಂತರಿಕ್ಷಕ್ಕೆ ಹಾರಿದನು.

ಅಲ್ಲವನು ಅಂತರಿಕ್ಷದಲ್ಲಿ ಸಂಚರಿಸುತ್ತಿದ್ದ ಏಕಾಗ್ರಚಿತ್ತರಾಗಿದ್ದ ಅನೇಕಸಿದ್ಧರನ್ನು ನೋಡಿದನು. ಅಷ್ಟುಮಾತ್ರವಲ್ಲದೇ ಆ ಸಿದ್ಧಪುರುಷರು ತಮ್ಮ ಮಧ್ಯದಲ್ಲಿದ್ದ ಜೈಗೀಷವ್ಯಮುನಿಯನ್ನು ವಿಧಿವತ್ತಾಗಿ ಸಂಪೂಜಿಸುತ್ತಿದ್ದುದನ್ನೂ ನೋಡಿದನು. ಆ ದೃಶ್ಯವನ್ನು ಕಂಡೊಡನೆಯೇ ದೃಢವ್ರತನಾದ, ಪ್ರಯತ್ನಶೀಲನಾದ ಅಸಿತನು ಕುಪಿತನಾದನು. ಪುನಃ ಜೈಗೀಷವ್ಯನು ಸ್ವರ್ಗಲೋಕದ ಕಡೆಗೆ ಹೋಗುತ್ತಿರುವುದನ್ನು ನೋಡಿದನು. ಜೈಗೀಷವ್ಯ ಸಂನ್ಯಾಸಿಯು ದೇವಲೋಕದಿಂದ ಪಿತೃಲೋಕಕ್ಕೆ ಹೋಗುತ್ತಿರುವುದನ್ನೂ ದೇವಲನು ನೋಡಿದನು. ಅದೇ ಭಿಕ್ಷುವು ಪಿತೃಲೋಕದಿಂದ ಯಮಲೋಕಕ್ಕೆ ಹೋಗುತ್ತಿರುವುದನ್ನೂ ನೋಡಿದನು.

ಮಹಾಮುನಿಯಾದ ಜೈಗೀಷವ್ಯನು ಅಲ್ಲಿಂದಲೂ ಮುಂದೆ ಹಾರಿಕೊಂಡು ಸೋಮನ ಲೋಕಕ್ಕೆ ಹೋಗುತ್ತಿರುವುದನ್ನೂ ಮಹರ್ಷಿ ಯಾದ ಅಸಿತದೇವಲನು ನೋಡಿದನು. ಏಕಾಂತದಲ್ಲಿ ಯಜ್ಞಮಾಡುವ ವರಿಗೆ ಪ್ರಾಪ್ತವಾಗುವ ಪುಣ್ಯಲೋಕಗಳ ಕಡೆಗೆ ಸಂನ್ಯಾಸಿಯು ಹಾರಿ ಹೋಗುತ್ತಿರುವುದನ್ನೂ ದೇವಲನು ನೋಡಿದನು. ಅಲ್ಲಿಂದ ಮುಂದಕ್ಕೆ ಅಗ್ನಿಹೋತ್ರಿಗಳಿಗೆ ಲಭ್ಯವಾಗುವ ಪುಣ್ಯಲೋಕಗಳ ಕಡೆಗೆ ಭಿಕ್ಷುವು ಹಾರಿ ಹೋಗುತ್ತಿರುವುದನ್ನೂ ನೋಡಿದನು.

ಜೈಗೀಷವ್ಯನು ಆ ಲೋಕಗಳಿಂದಲೂ ಮೇಲು-ಮೇಲಕ್ಕೆ ಹಾರಿ ಹೋಗುತ್ತಾ ದರ್ಶ-ಪೂರ್ಣಮಾಸಯಜ್ಞಗಳನ್ನು ಮಾಡಿರುವ ತಪೋ ನಿಷ್ಠರಾದವರಿಗೆ ಲಭ್ಯವಾಗುವ ಪುಣ್ಯಲೋಕಗಳಿಗೂ ತೆರಳಿದನು. ಅಲ್ಲಿಂದ

ಮುಂದಕ್ಕೆ ಜೈಗೀಷವ್ಯನು ಪಶುಯಾಜಿಗಳಿಗೆ ಲಭ್ಯವಾಗುವ ಶ್ರೇಷ್ಠವಾದ ಪುಣ್ಯಲೋಕಗಳಿಗೆ ಹೋಗುತ್ತಿದ್ದುದು ಕಂಡುಬಂದಿತು.

ಬಹುವಿಧವಾದ ಚಾತುರ್ಮಾಸ್ಯಯಜ್ಞಗಳನ್ನು ಮಾಡುವ ತಪೋನಿಷ್ಠರಾದ ಮುನಿಗಳಿಗೆ ಪ್ರಾಪ್ತವಾಗುವ ನಿರ್ಮಲವಾದ ಪುಣ್ಯಲೋಕಗಳಲ್ಲಿ ದೇವಪೂಜಿತನಾದ ಸಂನ್ಯಾಸಿಯು ಸಂಚರಿಸುತ್ತಿದ್ದುದನ್ನು ಅಸಿತದೇವಲನು ಆಕಾಶದಲ್ಲಿದ್ದುಕೊಂಡೇ ನೋಡಿದನು. ಅಗ್ನಿಷ್ಟೋಮ ಮತ್ತು ಅಗ್ನಿಷ್ಟುತಗಳಿಂದಲೂ ಯಜ್ಞಮಾಡುವ ತಪೋನಿಷ್ಠರಾದ ಮುನಿಗಳಿಗೆ ಪ್ರಾಪ್ತವಾಗುವ ಪುಣ್ಯಲೋಕಗಳಲ್ಲಿ ಜೈಗೀಷವ್ಯನಿದ್ದುದನ್ನೂ ದೇವಲನು ನೋಡಿದನು. ಕ್ರತುಗಳಲ್ಲಿ ಶ್ರೇಷ್ಠವಾದ ಮತ್ತು ಬಹುಸುವರ್ಣದಕ್ಷಿಣಾಕವಾದ ವಾಜಪೇಯಯಾಗಗಳನ್ನು ಮಾಡುವ ಮಹಾಪ್ರಾಜ್ಞರಿಗೆ ಪ್ರಾಪ್ತವಾಗುವ ಮಹಾಪುಣ್ಯಲೋಕಗಳಲ್ಲಿಯೂ ಜೈಗೀಷವ್ಯನನ್ನು ದೇವಲನು ಕಂಡನು. ರಾಜಸೂಯದಿಂದಲೂ ಪುಂಡರೀಕದಿಂದಲೂ ಯಜ್ಞಮಾಡುವವರಿಗೆ ಲಭ್ಯವಾಗುವ ಪುಣ್ಯಲೋಕಗಳಲ್ಲಿಯೂ ಜೈಗೀಷವ್ಯನು ಸಂಚರಿಸುತ್ತಿದ್ದುದನ್ನು ದೇವಲನು ನೋಡಿದನು. ಕ್ರತುಗಳಲ್ಲಿ ಶ್ರೇಷ್ಠವಾದ ಅಶ್ವಮೇಧವನ್ನೂ ಮತ್ತು ನರಮೇಧವನ್ನೂ ಮಾಡುವವರಿಗೆ ಪ್ರಾಪ್ತವಾಗುವ ಶುಭಲೋಕಗಳಲ್ಲಿ ಭಿಕ್ಷುವು ಸಂಚರಿಸುತ್ತಿದ್ದುದನ್ನೂ ನೋಡಿದನು. ಅತ್ಯಂತದುಷ್ಕರವಾದ ಸರ್ವಮೇಧವನ್ನೂ ಮತ್ತು ಸೌತ್ರಾಮಣಿಯಜ್ಞವನ್ನೂ ಮಾಡುವವರಿಗೆ ಪ್ರಾಪ್ತವಾಗುವ ಪುಣ್ಯಲೋಕಗಳಲ್ಲಿಯೂ ಜೈಗೀಷವ್ಯಮುನಿಯು ಸಂಚರಿಸುತ್ತಿದ್ದುದನ್ನೂ ಅಸಿತದೇವಲನು ಕಂಡನು. ನಾನಾಪ್ರಕಾರವಾದ ದ್ವಾದಶಾಹಯಜ್ಞಗಳನ್ನೂ ಸತ್ರಗಳನ್ನೂ ವಿಧಿಪೂರ್ವಕವಾಗಿ ಮಾಡುವವರಿಗೆ ಯಾವ ಪುಣ್ಯಲೋಕಗಳು ಪ್ರಾಪ್ತವಾಗುತ್ತವೆಯೋ ಆ ಪುಣ್ಯಲೋಕಗಳಲ್ಲಿಯೂ ಜೈಗೀಷವ್ಯನು ಸಂಚರಿಸುತ್ತಿದ್ದುದು ದೇವಲನಿಗೆ ಗೋಚರಿಸಿತು. ಅನಂತರ ಮೈತ್ರಾವರುಣರ ಮತ್ತು ಆದಿತ್ಯರ ಪುಣ್ಯಲೋಕಗಳಲ್ಲಿ ಜೈಗೀಷವ್ಯನಿದ್ದುದನ್ನೂ ಅಸಿತನು ನೋಡಿದನು. ಏಕಾದಶರುದ್ರರ, ಅಷ್ಟವಸುಗಳ ಮತ್ತು ಬೃಹಸ್ಪತಿಯ ಸ್ಥಾನಗಳನ್ನೂ ಅತಿಕ್ರಮಿಸಿ ಮುಂದೆ ಹೋಗುತ್ತಿದ್ದ ಜೈಗೀಷವ್ಯನನ್ನು ಅಸಿತದೇವಲನು ನೋಡಿದನು. ಅನಂತರ

ಜೈಗೀಷವ್ಯನು ಗೋಲೋಕಕ್ಕೆ ಹೋಗಿ ಅಲ್ಲಿಂದ ಮುಂದೆ ಬ್ರಹ್ಮಸತ್ರವನ್ನು ಮಾಡಿದವರಿಗೆ ಪ್ರಾಪ್ತವಾಗುವ ಪುಣ್ಯಲೋಕಕ್ಕೆ ಹೋದುದನ್ನೂ ಅಸಿತ ದೇವಲನು ನೋಡಿದನು. ಅನಂತರ ವಿಪ್ರಶ್ರೇಷ್ಠನಾದ ಜೈಗೀಷವ್ಯಮುನಿಯು ತನ್ನ ತೇಜಸ್ಸಿನ ಪ್ರಭಾವದಿಂದ ಮೂರು ಲೋಕಗಳನ್ನೂ ದಾಟಿಕೊಂಡು ಮುಂದಕ್ಕೆ ಹೋಗಿ ಪತಿವ್ರತೆಯರಿಗೆ ಪ್ರಾಪ್ತವಾಗುವ ಪುಣ್ಯಲೋಕಗಳಲ್ಲಿ ಸಂಚರಿಸುತ್ತಿದ್ದುದನ್ನೂ ಅಸಿತದೇವಲನು ನೋಡಿದನು.

ಅರಿಂದಮನೇ! ದೇವಲನು ಪತಿವ್ರತೆಯರಿಗೆ ಪ್ರಾಪ್ತವಾಗುವ ಪುಣ್ಯಲೋಕಗಳಲ್ಲಿ ಜೈಗೀಷವ್ಯನನ್ನು ನೋಡಿದನಂತರ ಪುನಃ ಅವನನ್ನು ಮತ್ತಾವ ಲೋಕದಲ್ಲಿಯೂ ಕಾಣಲಿಲ್ಲ. ಸಂನ್ಯಾಸಿಯು ಅದೃಶ್ಯನಾಗಿಬಿಟ್ಟನು. ಬಳಿಕ ಮಹಾಭಾಗನಾದ ದೇವಲನು ಜೈಗೀಷವ್ಯನ ಪ್ರಭಾವ, ಶ್ರೇಷ್ಠವಾದ ವ್ರತಾನುಷ್ಠಾನ, ಅನುಪಮವಾದ ಯೋಗಸಿದ್ಧಿ–ಇವುಗಳನ್ನು ಕುರಿತು ಚಿಂತಿಸತೊಡಗಿದನು. ಹೀಗೆಯೇ ಚಿಂತಿಸುತ್ತಾ ಸ್ವಲ್ಪಹೊತ್ತು ಕಳೆದನಂತರ ಧೀರನಾದ ಅಸಿತದೇವಲನು ಜೈಗೀಷವ್ಯನು ಸಂಚರಿಸಿದ ಆ ಲೋಕಗಳಲ್ಲಿ ವಾಸಮಾಡುತ್ತಿದ್ದ ಬ್ರಹ್ಮಯಾಜಿಗಳನ್ನೂ, ಸಿದ್ಧರನ್ನೂ, ಸಾಧುಪುರುಷರನ್ನೂ ಬದ್ಧಾಂಜಲಿಯಾಗಿ ವಿನಯಭಾವದಿಂದ ಪ್ರಶ್ನಿಸಿದನು :

**ಜೈಗೀಷವ್ಯಂ ನ ಪಶ್ಯಾಮಿ ತಂ ಶಂಸಧ್ವಂ ಮಹೌಜಸಮ್ ।**
**ಏತದಿಚ್ಛಾಮ್ಯಹಂ ಶ್ರೋತುಂ ಪರಂ ಕೌತೂಹಲಂ ಹಿ ಮೇ ॥೪೬॥**

“ಮಹಾತೇಜಸ್ವಿಯಾದ ಜೈಗೀಷವ್ಯಮುನಿಯನ್ನು ನಾನೀಗ ಕಾಣುತ್ತಿಲ್ಲ. ಅವನೆಲ್ಲಿಗೆ ಹೋದನೆಂಬುದನ್ನು ದಯಮಾಡಿ ಹೇಳಿರಿ. ಈ ವಿಷಯವನ್ನು ನಿಮ್ಮಿಂದ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇನೆ. ಈ ವಿಷಯವನ್ನು ನಿಮ್ಮಿಂದ ಕೇಳಿ ತಿಳಿದುಕೊಳ್ಳಲು ನನಗೆ ಬಹಳ ಕುತೂಹಲವಿದೆ.”

ಅದಕ್ಕುತ್ತರವಾಗಿ ಸಿದ್ಧರು ಹೇಳಿದರು :

“ದೃಢವ್ರತನೇ! ದೇವಲ! ಪರಮಾರ್ಥವನ್ನು ಹೇಳಲಿರುವ ನಮ್ಮ ಈ ಮಾತನ್ನು ಕೇಳು.

**ಜೈಗೀಷವ್ಯಃ ಸ ವೈ ಲೋಕಂ ಶಾಶ್ವತಂ ಬ್ರಹ್ಮಣೋ ಗತಃ ॥೪೭॥**

ಜೈಗೀಷವ್ಯನು ಶಾಶ್ವತವಾದ ಬ್ರಹ್ಮನ ಲೋಕಕ್ಕೆ ಹೊರಟು ಹೋದನು."

ವೈಶಂಪಾಯನರು ಹೇಳುತ್ತಾರೆ :

"ಮಹಾರಾಜ! ಬ್ರಹ್ಮಯಾಜಿಗಳೂ ಮತ್ತು ಸಿದ್ಧರೂ ಹೇಳಿದ ಮಾತನ್ನು ಕೇಳಿ ಅಸಿತದೇವಲನು ಬಹಳ ಬೇಗ ಬ್ರಹ್ಮಲೋಕಕ್ಕೆ ಹಾರಿದನು. ಆದರೆ ಮರುಕ್ಷಣದಲ್ಲಿಯೇ ಅಲ್ಲಿಂದ ಕೆಳಕ್ಕೆ ಬಿದ್ದುಬಿಟ್ಟನು. ಅದನ್ನು ನೋಡಿದ ಸಿದ್ಧರು ದೇವಲನನ್ನು ಕುರಿತು ಪುನಃ ಹೇಳಿದರು :

**ನ ದೇವಲ ಗತಿಸ್ತತ್ರ ತವ ಗನ್ತುಂ ತಪೋಧನ ।**
**ಬ್ರಹ್ಮಣಃ ಸದನೇ ವಿಪ್ರ ಜೈಗೀಷವ್ಯೋ ಯದಾಪ್ತವಾನ್ ॥೫೦॥**

"ತಪೋಧನನೇ! ವಿಪ್ರಶ್ರೇಷ್ಠನೇ! ದೇವಲ! ಜೈಗೀಷವ್ಯನು ತನ್ನ ಯೋಗಶಕ್ತಿಯಿಂದ ಯಾವ ಬ್ರಹ್ಮಲೋಕವನ್ನು ಪಡೆದುಕೊಂಡಿರುವನೋ ಆ ಬ್ರಹ್ಮಲೋಕಕ್ಕೆ ಹೋಗಲು ನಿನಗೆ ಸಾಮರ್ಥ್ಯವಿಲ್ಲ. (ನೀನಿನ್ನೂ ಆ ಮಾರ್ಗವನ್ನು ಕಂಡುಕೊಂಡಿರುವುದಿಲ್ಲ.)"

ಸಿದ್ಧರು ಹೇಳಿದ ಮಾತನ್ನು ಕೇಳಿ ದೇವಲನು ಪುನಃ ಆನುಪೂರ್ವಿಯಿಂದ (ಪತಿವ್ರತೆಯರಿಗೆ ಲಭ್ಯವಾಗುವ ಲೋಕಗಳಿಂದ ಬ್ರಹ್ಮಯಾಜಿಗಳ ಲೋಕ, ಅಲ್ಲಿಂದ ಗೋಲೋಕ, ಬೃಹಸ್ಪತಿಯ ಲೋಕ, ರುದ್ರರ ಲೋಕ – ಹೀಗೆ ಮೇಲಕ್ಕೆ ಹತ್ತಿದ ಕ್ರಮದಲ್ಲಿಯೇ ಕೆಳಕ್ಕೆ ಇಳಿಯುವುದು) ಎಲ್ಲ ಲೋಕಗಳಿಂದಲೂ ಇಳಿದುಬಂದನು. ಅಂತರಿಕ್ಷಕ್ಕೆ ಬಂದ ಅಸಿತದೇವಲನು ಪಕ್ಷಿಯೋಪಾದಿಯಲ್ಲಿ ಹಾರಿಕೊಂಡು ಪುಣ್ಯೋಪೇತವಾದ ತನ್ನ ದಿವ್ಯಾಶ್ರಮಕ್ಕೆ ಬಹಳ ಬೇಗ ಬಂದನು. (ಅಲ್ಲಿಯೂ ದೇವಲನಿಗೆ ಆಶ್ಚರ್ಯಕರವಾದ ಘಟನೆಯೊಂದು ಕಾದಿದ್ದಿತು.) ಆಶ್ರಮದೊಳಕ್ಕೆ ಪ್ರವೇಶಿಸುತ್ತಿದ್ದಂತೆಯೇ ಅಲ್ಲಿಯೇ ಪುನಃ ಜೈಗೀಷವ್ಯನನ್ನು ನೋಡಿದನು. ಆಗ ದೇವಲನು, ಜೈಗೀಷವ್ಯನು ಯೋಗದಿಂದ ಪಡೆದ ತಪಸ್ಸಿನ ಪ್ರಭಾವವನ್ನು ನೋಡಿ ಧರ್ಮಯುಕ್ತವಾದ (ಅಸೂಯಾರಹಿತವಾದ) ಬುದ್ಧಿಯಿಂದ ಅವನ ಯೋಗಸಿದ್ಧಿಯ ವಿಷಯವಾಗಿ ವಿಚಾರಮಾಡಿದನು. (ಜೈಗೀಷವ್ಯನ

ಯೋಗಸಾಧನೆಯೇ ತನ್ನ ಸಾಧನೆಗಿಂತಲೂ ಮಿಗಿಲಾದುದೆಂದು ಅಸಿತ ದೇವಲನಿಗೆ ಮನವರಿಕೆಯಾಯಿತು.)

ಅನಂತರ ದೇವಲನು ನತಶಿರನಾಗಿ ಜೈಗೀಷವ್ಯನ ಸಮೀಪಕ್ಕೆ ಹೋಗಿ ಮಹಾಮುನಿಯಾದ, ಮಹಾತ್ಮನಾದ ಜೈಗೀಷವ್ಯನೊಡನೆ ವಿನಯದಿಂದ ಹೇಳಿದನು :

**ಮೋಕ್ಷಧರ್ಮಂ ಸಮಾಸ್ಥಾತುಮಿಚ್ಛೇಯಂ ಭಗವನ್ನಹಮ್ ॥೫೫॥**

"ಭಗವನ್! ನಾನು ಮೋಕ್ಷಧರ್ಮವನ್ನು ಆಶ್ರಯಿಸಬೇಕೆಂಬ ಇಚ್ಛೆಯುಳ್ಳವನಾಗಿದ್ದೇನೆ." ಮಹಾಮುನಿಯಾದ ಜೈಗೀಷವ್ಯನು ಅಸಿತ ದೇವಲನ ಮಾತನ್ನು ಕೇಳಿ ಅವನಿಗೆ ಮೋಕ್ಷಧರ್ಮದ ಉಪದೇಶವನ್ನು ಮಾಡಿದನು. ಅಸಿತದೇವಲನಿಗೆ ಸಂನ್ಯಾಸಾಶ್ರಮವನ್ನು ಸ್ವೀಕರಿಸಬೇಕೆನ್ನುವ ಬುದ್ಧಿಯುಂಟಾದುದನ್ನು ಜೈಗೀಷವ್ಯನು ಮನಗಂಡು ವಿಧ್ಯುಕ್ತವಾದ ರೀತಿಯಿಂದ ಅಸಿತದೇವಲನ ಸಂನ್ಯಾಸಾಶ್ರಮಸ್ವೀಕಾರಕ್ಕೆ ಮಾಡಬೇಕಾದ ಎಲ್ಲ ಕರ್ಮಗಳನ್ನೂ (ದೀಕ್ಷೆ, ಸಂಸ್ಕಾರ–ಮುಂತಾದುವನ್ನು) ಮಾಡಿಸಿದನು. ಜೈಗೀಷವ್ಯನು ಅಸಿತದೇವಲನಿಗೆ ಯೋಗವಿಧಿಯನ್ನು ಉಪದೇಶಿಸಿ ಶಾಸ್ತ್ರಾನುಸಾರವಾಗಿ ಸಂನ್ಯಾಸಾಶ್ರಮದಲ್ಲಿನ ಕಾರ್ಯ ಮತ್ತು ಅಕಾರ್ಯ ಗಳನ್ನೂ ತಿಳಿಯಹೇಳಿದನು.

**ಸಂನ್ಯಾಸಕೃತಬುದ್ಧಿಂ ತಂ ಭೂತಾನಿ ಪಿತೃಭಿಃ ಸಹ ।**
**ತತೋ ದೃಷ್ಟ್ವಾ ಪ್ರರುರುದುಃ ಕೋಽಸ್ಮಾನ್ಸಂವಿಭಜಿಷ್ಯತಿ ॥೫೭॥**

ಇದುವರೆಗೂ ಗೃಹಸ್ಥಾಶ್ರಮದಲ್ಲಿದ್ದು ದೇವ-ಪಿತೃಕಾರ್ಯಗಳನ್ನು ತಪ್ಪದೇ ಮಾಡುತ್ತಾ, ಅತಿಥಿ-ಅಭ್ಯಾಗತರ ಸೇವೆಯನ್ನು ಆಲಸ್ಯವಿಲ್ಲದೇ ಮಾಡುತ್ತಾ ಇದ್ದ ಅಸಿತದೇವಲನು ಸಂನ್ಯಾಸಾಶ್ರಮವನ್ನು ಸ್ವೀಕರಿಸಲು ಮನಸ್ಸುಮಾಡಿರುವನೆಂಬುದನ್ನು ಕೇಳಿದೊಡನೆಯೇ ಪಿತೃದೇವತೆಗಳೊಡನೆ ಎಲ್ಲ ಪ್ರಾಣಿಗಳೂ–'ಇನ್ನು ಮುಂದೆ ನಮಗೆ ಸಲ್ಲಬೇಕಾದ ಅನ್ನವನ್ನು ವಿಭಾಗಮಾಡಿ ಅರ್ಪಿಸುವವರು ಯಾರಿದ್ದಾರೆ?'–ಎಂದು ಹೇಳಿಕೊಂಡು ಗಟ್ಟಿಯಾಗಿ ಅಳತೊಡಗಿದುವು.

ಹತ್ತು ದಿಕ್ಕುಗಳಲ್ಲಿಯೂ ಗುಂಪು-ಗುಂಪಾಗಿ ಕುಳಿತು ಗೋಳಿಡುತ್ತಿದ್ದ

ಪ್ರಾಣಿಗಳ ಕರುಣಾಜನಕವಾದ ಮಾತುಗಳನ್ನು ಕೇಳಿ ಕರುಣಾಮೂರ್ತಿಯಾದ ಅಸಿತದೇವಲನು ಮೋಕ್ಷಧರ್ಮವನ್ನು (ಸಂನ್ಯಾಸಧರ್ಮವನ್ನು) ಸ್ವೀಕರಿಸದಿರಲು ನಿಶ್ಚಯಿಸಿದನು.

ಅಸಿತದೇವಲನು ಸಂನ್ಯಾಸಾಶ್ರಮಸ್ವೀಕಾರಕ್ಕೆ ಪೂರ್ವಾಂಗವಿಧಿಯನ್ನು ಮುಗಿಸಿದ್ದರೂ–ಸರ್ವಭೂತಗಳಿಗೂ ಅಭಯವಚನವನ್ನಿತ್ತಿದ್ದರೂ–ಪುನಃ ಗೃಹಸ್ಥಾಶ್ರಮದಲ್ಲಿಯೇ ಉಳಿಯುವೆನೆಂಬ ಅಭಿಪ್ರಾಯವನ್ನು ತಿಳಿಯಪಡಿಸಿದಾಗ ಫಲ-ಮೂಲಗಳೂ (ಗೆಡ್ಡೆ-ಗೆಣಸುಗಳೂ,) ದರ್ಭೆಗಳೂ, ಪುಷ್ಪಗಳೂ, ಓಷಧಿಲತೆಗಳೂ ಮತ್ತು ಯಜ್ಞಕ್ಕೆ ಸಂಬಂಧಿಸಿದ ಸಾವಿರಾರು ಪದಾರ್ಥಗಳೂ ಗಟ್ಟಿಯಾಗಿ ಅಳತೊಡಗಿದುವು.

**ಪುನರ್ನೋ ದೇವಲಃ ಕ್ಷುದ್ರೋ ನೂನಂ ಛೇತ್ಸ್ಯತಿ ದುರ್ಮತಿಃ ।**
**ಅಭಯಂ ಸರ್ವಭೂತೇಭ್ಯೋ ಯೋ ದತ್ತ್ವಾ ನಾವಬುಧ್ಯತೇ ॥೬೦॥**

"ಕ್ಷುದ್ರನಾದ, ದುರ್ಮತಿಯಾದ ಈ ದೇವಲನು ಪುನಃ ಗೃಹಸ್ಥಾಶ್ರಮದಲ್ಲಿಯೇ ಉಳಿದು ನಮ್ಮೆಲ್ಲರನ್ನೂ ಕತ್ತರಿಸುವುದು (ನಿರಾಶೆಗೊಳಿಸುವುದು) ನಿಶ್ಚಯ. ಸಂನ್ಯಾಸಾಶ್ರಮದ ಪೂರ್ವಾಂಗಕರ್ಮದಲ್ಲಿ ಎಲ್ಲ ಪ್ರಾಣಿಗಳಿಗೂ ಅಭಯಪ್ರದಾನಮಾಡಿರುವುದನ್ನು ಈ ಮೂರ್ಖನು ಮನಸ್ಸಿಗೆ ತೆಗೆದುಕೊಂಡೇ ಇರುವುದಿಲ್ಲ."

ದೇವಲನು ಗೃಹಸ್ಥಾಶ್ರಮವನ್ನು ತ್ಯಾಗಮಾಡಲು ನಿಶ್ಚಯಿಸಿದುದಕ್ಕಾಗಿ ಪಿತೃದೇವತೆಗಳು ರೋದನಮಾಡಿದರು. ಗೃಹಸ್ಥಾಶ್ರಮದಲ್ಲಿಯೇ ಉಳಿಯಲು ನಿಶ್ಚಯಿಸಿದಾಗ ಫಲಮೂಲೌಷಧೀಲತೆಗಳು ಗೋಳುಗರೆದುವು. ಅಸಿತದೇವಲನ ಮನಸ್ಸು ಡೋಲಾಯಮಾನವಾಯಿತು. ಪುನಃ ಮುನಿಶ್ರೇಷ್ಠನಾದ ದೇವಲನು–"ಮೋಕ್ಷಧರ್ಮಾನುಸರಣೆಯು ತನಗೆ ಶ್ರೇಯಸ್ಕರವೇ? ಗೃಹಸ್ಥಾಶ್ರಮದಲ್ಲಿಯೇ ಮುಂದುವರಿಯುವುದು ಶ್ರೇಯಸ್ಕರವೇ?–ಎಂಬುದನ್ನು ನಿಷ್ಕಲ್ಮಷವಾದ ಬುದ್ಧಿಯಿಂದ ಪುನಃ ತರ್ಕಿಸಿದನು. ಸ್ವಲ್ಪಹೊತ್ತು ತರ್ಕಿಸುತ್ತಿದ್ದು ದೇವಲನು–ಇದು ಹೀಗೆಯೇ ಸರಿ–ಎಂದು ಮನಸ್ಸಿನಲ್ಲಿಯೇ ನಿಶ್ಚಯಿಸಿ ಗಾರ್ಹಸ್ಥ್ಯವನ್ನು ಪರಿತ್ಯಜಿಸಿ ಮೋಕ್ಷಧರ್ಮವನ್ನು ಅಂಗೀಕರಿಸುವುದೇ ಶ್ರೇಯಸ್ಕರವೆಂದು ನಿಶ್ಚಯಿಸಿದನು.

ಎರಡು ಧರ್ಮಗಳಲ್ಲಿರುವ ಸಾಧಕ-ಬಾಧಕಗಳನ್ನು ಕೂಲಂಕಷವಾಗಿ

ಮಥಿಸಿದನಂತರವೇ ದೇವಲನು ಸಂನ್ಯಾಸಧರ್ಮವನ್ನು ಸ್ವೀಕರಿಸಲು ನಿಶ್ಚಯಿಸಿದನು. ಸಂನ್ಯಾಸಧರ್ಮವನ್ನು ಸ್ವೀಕರಿಸಿದನಂತರ ದೇವಲನು ಶ್ರೇಷ್ಠವಾದ ಸಿದ್ಧಿಯನ್ನೂ–ಶ್ರೇಷ್ಠವಾದ ಯೋಗವನ್ನೂ ಪಡೆದುಕೊಂಡನು.

ಬಳಿಕ ಬೃಹಸ್ಪತಿಪುರಃಸರರಾದ ದೇವತೆಗಳೂ ಮತ್ತು ತಪಸ್ವಿಗಳೂ ಅಸಿತದೇವಲನ ಆಶ್ರಮಕ್ಕೆ ಬಂದು ಅಲ್ಲಿಯೇ ಇದ್ದ ಜೈಗೀಷವ್ಯನ ತಪಃಸಿದ್ಧಿಯನ್ನು ಬಹಳವಾಗಿ ಪ್ರಶಂಸೆಮಾಡಿದರು. ದೇವತೆಗಳೂ ಜೈಗೀಷವ್ಯನ ತಪಸ್ಸನ್ನು ಪ್ರಶಂಸೆಮಾಡುತ್ತಿರುವುದನ್ನು ನೋಡಿ ಋಷಿಶ್ರೇಷ್ಠರಾದ ನಾರದರು ದೇವತೆಗಳೊಡನೆ ಹೇಳಿದರು :

**ಜೈಗೀಷವ್ಯೇ ತಪೋ ನಾಸ್ತಿ ವಿಸ್ಮಾಪಯತಿ ಯೋಽಸಿತಮ್ ॥೬೫॥**

“ಜೈಗೀಷವ್ಯನಲ್ಲಿ ಯಾವ ತಪಸ್ಸೂ ಇಲ್ಲ ; ಅವನೆಂದೂ ತಪಸ್ಸು ಮಾಡಿದವನೂ ಅಲ್ಲ. ಆದರೆ ಇವನು ಮಹಾಪ್ರಭಾವಶಾಲಿ. ತನ್ನ ಅತುಲ ಪ್ರಭಾವವನ್ನು ತೋರಿಸಿ ಅಸಿತದೇವಲನನ್ನು ಆಶ್ಚರ್ಯಚಕಿತನನ್ನಾಗಿ ಮಾಡಿರುವನು.”

ಹೀಗೆ ಹೇಳಿದ ಜ್ಞಾನಿಗಳಾದ ನಾರದರನ್ನು ಕುರಿತು ಮಹಾಮುನಿಯಾದ ಜೈಗೀಷವ್ಯನನ್ನು ಪ್ರಶಂಸೆಮಾಡುತ್ತಲೇ ಇದ್ದ ದೇವತೆಗಳು ಹೀಗೆ ಹೇಳಿದರು : “ನಾರದ! ನೀನು ಹಾಗೆಂದೂ ಹೇಳಬೇಡ.

**ನಾತಃ ಪರತರಂ ಕಿಂಚಿತ್ತುಲ್ಯಮಸ್ತಿ ಪ್ರಭಾವತಃ ।**
**ತೇಜಸಸ್ತಪಸಶ್ಚಾಸ್ಯ ಯೋಗಸ್ಯ ಚ ಮಹಾತ್ಮನಃ ॥೬೭॥**

ಪ್ರಭಾವದಲ್ಲಿ, ತೇಜಸ್ಸಿನಲ್ಲಿ, ತಪಸ್ಸಿನಲ್ಲಿ ಮತ್ತು ಯೋಗದಲ್ಲಿ ಮಹಾತ್ಮನಾದ ಈ ಜೈಗೀಷವ್ಯನಿಗಿಂತಲೂ ಶ್ರೇಷ್ಠನಾದವನಾಗಲೀ–ಇವನಿಗೆ ಸಮಾನನಾದವನಾಗಲೀ ಯಾರೂ ಇರುವುದಿಲ್ಲ.”

ಜನಮೇಜಯಮಹಾರಾಜ! ಧರ್ಮಾತ್ಮನಾದ ಜೈಗೀಷವ್ಯನು ಅಂತಹ ಪ್ರಭಾವಶಾಲಿಯಾದವನು. ಅಸಿತದೇವಲನೂ ಅವನಂತೆಯೇ ಅಮಿತಪ್ರಭಾವನು. ಶ್ರೇಷ್ಠವಾದ ಆ ಆದಿತ್ಯತೀರ್ಥಕ್ಷೇತ್ರದಲ್ಲಿಯೇ ಅವರಿಬ್ಬರೂ ವಾಸಮಾಡುತ್ತಿದ್ದರು. ಪವಿತ್ರವಾದ ಆ ಆದಿತ್ಯತೀರ್ಥವೇ ಆ ಮಹಾತ್ಮರದಾಗಿತ್ತು. ಮಹಾತ್ಮನಾದ, ಪಾರಮಾರ್ಥಿಕವಾದ ಕರ್ಮಗಳನ್ನು ಮಾಡುವ, ಹಲಧರನಾದ ಬಲರಾಮನು ಆ ಆದಿತ್ಯತೀರ್ಥದಲ್ಲಿಯೂ

ಸ್ನಾನಮಾಡಿ, ಬ್ರಾಹ್ಮಣರಿಗೆ ವಿತ್ತವನ್ನು ದಾನಮಾಡಿ, ಧರ್ಮದ ಫಲವನ್ನು ಹೊಂದಿ ಮುಂದೆ ಪರಿವಾರಸಮೇತನಾಗಿ ಸೋಮನ ಮಹಾತೀರ್ಥಕ್ಕೆ ಪ್ರಯಾಣಮಾಡಿದನು."

೫೦ನೆಯ ಅಧ್ಯಾಯವು ಮುಗಿಯಿತು.

೫೧ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಸಾರಸ್ವತತೀರ್ಥದ ಮಹಿಮಾಪ್ರಸಂಗದಲ್ಲಿ ದಧೀಚ ಮತ್ತು ಸಾರಸ್ವತಮುನಿಗಳ ಚರಿತ್ರೆ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ನಾನು ಹಿಂದೆ ಹೇಳಿದಂತೆ ಬಲರಾಮನು ಸೋಮತೀರ್ಥಕ್ಕೆ ಹೋದನು. ಆ ಸೋಮತೀರ್ಥದ ಸಮೀಪದಲ್ಲಿಯೇ ನಕ್ಷತ್ರಗಳಿಗೆ ಒಡೆಯನಾದ ಚಂದ್ರನು ರಾಜಸೂಯಯಾಗವನ್ನು ಮಾಡಿದ್ದನು. ಆ ತೀರ್ಥದ ಸಮೀಪದಲ್ಲಿಯೇ ದೊಡ್ಡದಾದ ತಾರಕಾಮಯ ಸಂಗ್ರಾಮವೂ ನಡೆಯಿತು. ಧರ್ಮಾತ್ಮನಾದ ಮತ್ತು ಮನನಶೀಲನಾದ ಬಲರಾಮನು ಆ ಸೋಮತೀರ್ಥದಲ್ಲಿಯೂ ಸ್ನಾನಮಾಡಿ ಅನೇಕವಿಧವಾದ ದಾನಗಳನ್ನು ಕೊಟ್ಟು, ಮುಂದೆ ಸಾರಸ್ವತಮುನಿಯ ತೀರ್ಥಕ್ಕೆ ಪ್ರಯಾಣಮಾಡಿದನು. ಹಿಂದೆ ಹನ್ನೆರಡು ವರ್ಷಗಳ ಕಾಲ ಮಳೆಯೇ ಇಲ್ಲದೇ ಸರ್ವತ್ರ ದುರ್ಭಿಕ್ಷವು ತಲೆದೋರಿದ್ದ ಕಾಲದಲ್ಲಿ ಸಾರಸ್ವತಮುನಿಯು ಶ್ರೇಷ್ಠರಾದ ಬ್ರಾಹ್ಮಣರಿಗೆ ವೇದಾಭ್ಯಾಸವನ್ನು ಮಾಡಿಸಿದನು."

ಜನಮೇಜಯನು ಪ್ರಶ್ನಿಸುತ್ತಾನೆ :

"ವೈಶಂಪಾಯನರೇ! ಹನ್ನೆರಡು ವರ್ಷಗಳು ಮಳೆಯೇ ಬಾರದೇ ದುರ್ಭಿಕ್ಷವಿದ್ದ ಕಾಲದಲ್ಲಿ ಸಾರಸ್ವತಮುನಿಯು ಶ್ರೇಷ್ಠರಾದ ಬ್ರಾಹ್ಮಣರಿಗೆ ಮತ್ತು ಋಷಿಗಳಿಗೆ ವೇದಾಧ್ಯಯನವನ್ನು ಹೇಗೆ ಮಾಡಿಸುತ್ತಿದ್ದನು?"

"ಮಹಾರಾಜ! ಹಿಂದೆ ಮಹಾತಪಸ್ವಿಯಾದ, ಧೀಮಂತನಾದ, ಬ್ರಹ್ಮಚಾರಿಯಾದ, ಜಿತೇಂದ್ರಿಯನಾದ ದಧೀಚ ಎಂದು ವಿಖ್ಯಾತನಾಗಿದ್ದ ಮುನಿಯೊಬ್ಬನಿದ್ದನು. ದಧೀಚಮುನಿಯು ಮಾಡುತ್ತಿದ್ದ ತೀವ್ರವಾದ ತಪಸ್ಸಿನಿಂದ ಇಂದ್ರನೂ ಭಯಪಡುತ್ತಿದ್ದನು. ಬಹುವಿಧವಾದ ಫಲಗಳ

ಪ್ರದಾನದ ಆಸೆಯನ್ನು ತೋರಿಸಿದರೂ ದಧೀಚನು ಅದರಿಂದ ಆಕರ್ಷಿತನಾಗುತ್ತಿರಲಿಲ್ಲ. ಅವನ ಮನಸ್ಸನ್ನು ಆಕರ್ಷಿಸುವ ಸಲುವಾಗಿ ಅಥವಾ ತಪಸ್ಸಿನಿಂದ ವಿಮುಖನನ್ನಾಗಿ ಮಾಡಲು ಇಂದ್ರನು ದರ್ಶನೀಯಳಾದ, ಪುಣ್ಯೋಪೇತಳಾದ, ದೇವಲೋಕದ 'ಅಲಂಬುಷಾ' ಎಂಬ ಅಪ್ಸರೆಯನ್ನು ದಧೀಚಮಹರ್ಷಿಯ ಬಳಿಗೆ ಕಳುಹಿಸಿಕೊಟ್ಟನು. ಒಂದು ದಿನ ದಧೀಚಮಹರ್ಷಿಯು ಸರಸ್ವತೀನದಿಯ ತೀರದಲ್ಲಿ ದೇವತೆಗಳನ್ನು ಅರ್ಚನೆಮಾಡುತ್ತಿದ್ದಾಗ ಭಾಮಿನಿಯಾದ ಅಲಂಬುಷೆಯು ಋಷಿಯ ಸಮೀಪಕ್ಕೆ ಹೋಗಿ ನಿಂತುಕೊಂಡಳು. ದಿವ್ಯವಾದ ಕಾಂತಿಯಿಂದ ಬೆಳಗುತ್ತಿದ್ದ ಅಲಂಬುಷೆಯನ್ನು ನೋಡಿದೊಡನೆಯೇ ವಿಶುದ್ಧಾಂತಃಕರಣನಾದ ದಧೀಚಮುನಿಯ ದಿವ್ಯವಾದ ರೇತಸ್ಸು ಜಾರಿ ಸರಸ್ವತೀನದಿಯಲ್ಲಿ ಬಿದ್ದಿತು. ಒಡನೆಯೇ ಸರಸ್ವತಿಯು ಆ ದಿವ್ಯರೇತಸ್ಸನ್ನು ಆದರದಿಂದ ಪರಿಗ್ರಹಿಸಿದಳು.

ಪುತ್ರಕಾಮಿನಿಯಾಗಿದ್ದ ಸರಸ್ವತಿಯು ಅತ್ಯಂತಹರ್ಷದಿಂದ ಆ ದಿವ್ಯರೇತಸ್ಸನ್ನು ತನ್ನ ಗರ್ಭದಲ್ಲಿಟ್ಟುಕೊಂಡಳು. ಈ ಪ್ರಕಾರ ಗರ್ಭವತಿಯಾದ ಸರಿಚ್ಛ್ರೇಷ್ಠಳಾದ ಸರಸ್ವತಿಯು ನವಮಾಸಗಳು ತುಂಬಿದೊಡನೆಯೇ ಗಂಡುಶಿಶುವಿಗೆ ಜನ್ಮವನ್ನಿತ್ತಳು. ಬಳಿಕ ಆ ತನ್ನ ಪುತ್ರನನ್ನೆತ್ತಿಕೊಂಡು ದಧೀಚಮಹರ್ಷಿಯ ಬಳಿಗೆ ಹೋದಳು. ಮುನಿಶ್ರೇಷ್ಠನಾದ ದಧೀಚಮಹರ್ಷಿಯು ಮುನಿಗಳ ಸದಸ್ಸಿನಲ್ಲಿದ್ದುದನ್ನು ಕಂಡು ಅವನಿಗೆ ತನ್ನ ಪುತ್ರನನ್ನು ಒಪ್ಪಿಸಿಕೊಡುತ್ತಾ ಹೀಗೆ ಹೇಳಿದಳು :

**ಬ್ರಹ್ಮರ್ಷೇ ತವ ಪುತ್ರೋಽಯಂ ತ್ವದ್ಭಕ್ತ್ಯಾ ಧಾರಿತೋ ಮಯಾ ।**
**ದೃಷ್ಟ್ವಾ ತೇಽಪ್ಸರಸಂ ರೇತೋ ಯತ್ಸ್ಕನ್ನಂ ಪ್ರಾಗಲಮ್ಬುಷಾಮ್ ॥**

**ತತ್ಕುಕ್ಷಿಣಾ ವೈ ಬ್ರಹ್ಮರ್ಷೇ ತದ್ಭಕ್ತ್ಯಾ ಧೃತವತ್ಯಹಮ್ ।**
**ನ ವಿನಾಶಮಿದಂ ಗಚ್ಛೇತ್ತ್ವತ್ತೇಜ ಇತಿ ನಿಶ್ಚಯಾತ್ ।**
**ಪ್ರತಿಗೃಹ್ಣೀಷ್ವ ಪುತ್ರಂ ಸ್ವಂ ಮಯಾ ದತ್ತಮನಿನ್ದಿತಮ್ ॥೧೪॥**

"ಬ್ರಹ್ಮರ್ಷಿಯೇ! ಇವನು ನಿನ್ನ ಮಗ. ನಿನ್ನ ಮೇಲಿನ ಭಕ್ತಿಯಿಂದಾಗಿ ನಾನಿವನನ್ನು ನನ್ನ ಗರ್ಭದಲ್ಲಿ ಧರಿಸಿದ್ದೆನು. ಹಿಂದೊಂದು ದಿನ ಅಪ್ಸರಸೆಯಾದ ಅಲಂಬುಷೆಯನ್ನು ನೋಡಿದ ಕಾರಣದಿಂದ ಜಾರಿ ನನ್ನಲ್ಲಿ

ಬಿದ್ದ ನಿನ್ನ ರೇತಸ್ಸನ್ನು ನಿನ್ನ ಮೇಲಿನ ಭಕ್ತಿಭಾವದಿಂದಾಗಿ ನಾನು ನನ್ನ ಕುಕ್ಷಿಯಲ್ಲಿ ಧರಿಸಿದೆನು. ನಿನ್ನ ದಿವ್ಯವಾದ ರೇತಸ್ಸು ವ್ಯರ್ಥವಾಗಕೂಡದೆಂಬ ನಿಶ್ಚಯದಿಂದ ನಾನು ಹಾಗೆ ಮಾಡಿದೆನು. ನಾನೀಗ ಒಪ್ಪಿಸುತ್ತಿರುವ ನಿಷ್ಕಳಂಕನಾದ ನಿನ್ನೀ ಮಗನನ್ನು ಸ್ವೀಕರಿಸು."

ಸರಸ್ವತಿಯು ಹೀಗೆ ಹೇಳಿದೊಡನೆಯೇ ದಧೀಚಮಹರ್ಷಿಯು ಪುತ್ರನನ್ನು ಕೈಗಳಲ್ಲೆತ್ತಿಕೊಂಡು ಅತ್ಯಂತಪ್ರಸನ್ನನಾದನು. ಆ ದ್ವಿಜಶ್ರೇಷ್ಠನು ಪ್ರೀತಿಯಿಂದ ತನ್ನ ಮಗನ ನೆತ್ತಿಯನ್ನು ಆಘ್ರಾಣಿಸಿದನು. ಬಹಳ ಹೊತ್ತು ಆ ತನ್ನ ಮಗನನ್ನು ಅಪ್ಪಿಕೊಂಡೇ ಕುಳಿತಿದ್ದನು. ಸರಸ್ವತಿಯ ಭಕ್ತಿಭಾವಕ್ಕೆ ಮೆಚ್ಚಿ ಸುಪ್ರೀತನಾದ ಮಹಾಮುನಿಯು ಅವಳಿಗೆ ಈ ವರವನ್ನು ಕೊಟ್ಟನು.

**ವಿಶ್ವೇದೇವಾಃ ಸಪಿತರೋ ಗನ್ಧರ್ವಾಪ್ಸರಸಾಂ ಗಣಾಃ ।**
**ತೃಪ್ತಿಂ ಯಾಸ್ಯನ್ತಿ ಸುಭಗೇ ತರ್ಪ್ಯಮಾಣಾಸ್ತವಾಮ್ಭಸಾ ॥೧೭॥**

"ಸೌಭಾಗ್ಯಶಾಲಿನಿಯೇ! ಸರಸ್ವತಿಯೇ! ನಿನ್ನ ಶುಭಜಲದಿಂದ ತರ್ಪಣವನ್ನಿತ್ತರೆ ಪಿತೃಗಣಗಳಿಂದ ಕೂಡಿದ ವಿಶ್ವೇದೇವತೆಗಳೂ ಮತ್ತು ಗಂಧರ್ವಾಪ್ಸರೆಯರೂ ತೃಪ್ತಿಹೊಂದುತ್ತಾರೆ." ಹೀಗೆ ವರವನ್ನಿತ್ತ ದಧೀಚಮಹರ್ಷಿಯು ಪ್ರಹೃಷ್ಟವಾದ ಮನಸ್ಸಿನಿಂದ ಕೂಡಿದವನಾಗಿ, ಪರಮಪ್ರೀತನಾಗಿ, ಮಹಾನದಿಯಾದ ಸರಸ್ವತಿಯನ್ನು ಪ್ರೀತಿಯುಕ್ತವಾದ ಮಾತುಗಳಿಂದ ಸ್ತೋತ್ರಮಾಡಿದನು. ಅವನು ಸ್ತೋತ್ರಮಾಡಿದುದನ್ನು ಯಥಾವತ್ತಾಗಿಯೇ ಹೇಳುವೆನು; ಕೇಳು :

**ಪ್ರಸುತಾಸಿ ಮಹಾಭಾಗೇ ಸರಸೋ ಬ್ರಹ್ಮಣಃ ಪುರಾ ।**
**ಜಾನನ್ತಿ ತ್ವಾಂ ಸರಿಚ್ಛ್ರೇಷ್ಠೇ ಮುನಯಃ ಸಂಶಿತವ್ರತಾಃ ।**
**ಮಮ ಪ್ರಿಯಕರೀ ಚಾಪಿ ಸತತಂ ಪ್ರಿಯದರ್ಶನೇ ॥೨೦॥**

**ತಸ್ಮಾತ್ಸಾರಸ್ವತಃ ಪುತ್ರೋ ಮಹಾಂಸ್ತೇ ವರವರ್ಣಿನಿ ।**
**ತವೈವ ನಾಮ್ನಾ ಪ್ರಥಿತಃ ಪುತ್ರಸ್ತೇ ಲೋಕಭಾವನಃ ॥೨೧॥**

"ಮಹಾಭಾಗಳೇ! ನೀನು ಮೊದಲು ಬ್ರಹ್ಮಸರಸ್ಸಿನಿಂದ ಹರಿದು ಬಂದಿರುವೆ. ಕಠೋರವ್ರತನಿಷ್ಠಳಾದ ಸರಿಚ್ಛ್ರೇಷ್ಠಳೇ! ಋಷಿಗಳು ನಿನ್ನ

ನಿಜಸ್ವರೂಪವನ್ನು ತಿಳಿದುಕೊಂಡಿರುತ್ತಾರೆ. ಪ್ರಿಯದರ್ಶನಳೇ! ನನಗೂ ಸಹ ನೀನು ಸದಾಕಾಲದಲ್ಲಿಯೂ ಪ್ರಿಯವಾದ ಕಾರ್ಯವನ್ನೇ ಮಾಡಿಕೊಡುತ್ತಿರುವೆ. ವರವರ್ಣಿನಿಯೇ! ಈ ಎಲ್ಲ ಕಾರಣಗಳಿಂದ ಶುದ್ಧಾಂತಃಕರಣದಿಂದ ಕೂಡಿರುವ ಈ ನಿನ್ನ ಮಗನು ನಿನ್ನ ಹೆಸರಿನಿಂದಲೇ ವಿಖ್ಯಾತನಾಗುತ್ತಾನೆ. (ಶ್ರೇಷ್ಠನಾದ ಈ ನಿನ್ನ ಪುತ್ರನು ಸಾರಸ್ವತನೆಂಬ ಹೆಸರಿನಿಂದ ಕರೆಯಲ್ಪಡುತ್ತಾನೆ.)

**ಸಾರಸ್ವತ ಇತಿ ಖ್ಯಾತೋ ಭವಿಷ್ಯತಿ ಮಹಾತಪಾಃ ।**
**ಏಷ ದ್ವಾದಶವಾರ್ಷಿಕ್ಯಾಮನಾವೃಷ್ಟ್ಯಾಂ ದ್ವಿಜರ್ಷಭಾನ್ ।**
**ಸಾರಸ್ವತೋ ಮಹಾಭಾಗೋ ವೇದಾನಧ್ಯಾಪಯಿಷ್ಯತಿ ॥೨೨॥**

'ಸಾರಸ್ವತ' ಎಂಬ ಹೆಸರಿನಿಂದ ವಿಖ್ಯಾತನಾಗುವ ಇವನು ಮಹಾತಪಸ್ವಿಯೂ ಆಗುತ್ತಾನೆ. ಮಹಾಭಾಗ್ಯಶಾಲಿಯಾದ ಈ ಸಾರಸ್ವತನು ಹನ್ನೆರಡು ವರ್ಷಗಳ ಪರ್ಯಂತವಾಗಿ ಮಳೆಯಿಲ್ಲದೇ ದೇಶದಲ್ಲಿ ದುರ್ಭಿಕ್ಷವುಂಟಾದ ಸಮಯದಲ್ಲಿ ಬ್ರಾಹ್ಮಣರಿಗೆ ವೇದಾಧ್ಯಯನವನ್ನು ಮಾಡಿಸುತ್ತಾನೆ.

**ಪುಣ್ಯಾಭ್ಯಶ್ಚ ಸರಿದ್ಭ್ಯಸ್ತ್ವಂ ಸದಾ ಪುಣ್ಯತಮಾ ಶುಭೇ ।**
**ಭವಿಷ್ಯಸಿ ಮಹಾಭಾಗೇ ಮತ್ಪ್ರಸಾದಾತ್ಸರಸ್ವತಿ ॥೨೩॥**

ಮಹಾಸೌಭಾಗ್ಯಶಾಲಿನಿಯಾದ ಸರಸ್ವತಿಯೇ! ನೀನು ನನ್ನ ವರಪ್ರಸಾದದಿಂದಾಗಿ ಇತರ ಪುಣ್ಯನದಿಗಳಿಗಿಂತಲೂ ಪುಣ್ಯತಮಳೂ–ಶುಭದಾಯಕಳೂ ಆಗುವೆ."

ಜನಮೇಜಯ! ಸರಸ್ವತಿಯು ಹೀಗೆ ದಧೀಚಮುನಿಯಿಂದ ಸ್ತೋತ್ರ ಮಾಡಲ್ಪಟ್ಟವಳಾಗಿ ಅವನಿಂದ ವರವನ್ನು ಪಡೆದು ಅತ್ಯಂತಹರ್ಷಯುಕ್ತಳಾಗಿ ತನ್ನ ಮಗನನ್ನು ಜೊತೆಯಲ್ಲಿಯೇ ಕರೆದುಕೊಂಡು ಹೊರಟುಹೋದಳು.

ಅದೇ ಸಮಯದಲ್ಲಿಯೇ ದೇವ-ದಾನವರಲ್ಲಿ ಪರಸ್ಪರವಾಗಿ ವಿರೋಧವುಂಟಾಯಿತು. ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸುವ ಸಲುವಾಗಿ ಇಂದ್ರನು ಮೂರು ಲೋಕಗಳಲ್ಲಿಯೂ ಸಂಚರಿಸತೊಡಗಿದನು. ಆದರೆ ಎಷ್ಟೇ

ಸುತ್ತಾಡಿದರೂ ದೇವಶತ್ರುಗಳಾದ ದೈತ್ಯರನ್ನು ಸಂಹರಿಸಲು ಯೋಗ್ಯವಾಗಿದ್ದ ಆಯುಧವು ಅವನಿಗೆ ಸಿಕ್ಕಲೇ ಇಲ್ಲ. ಇಂದ್ರನು ದೇವಲೋಕಕ್ಕೆ ಹಿಂದಿರುಗಿ ದೇವತೆಗಳೊಡನೆ ಹೇಳಿದನು :

"ದಧೀಚಮಹರ್ಷಿಯ ಮೂಳೆಯೊಂದನ್ನು ಬಿಟ್ಟು ಬೇರಾವ ಆಯುಧದಿಂದಲೂ ನಾನು ದೇವಶತ್ರುಗಳಾದ ಮಹಾಸುರರನ್ನು ಸಂಹರಿಸಲು ಸಾಧ್ಯವಿಲ್ಲ. ಆದುದರಿಂದ, ಸುರಶ್ರೇಷ್ಠರೇ! ನೀವೆಲ್ಲರೂ ಈಗಲೇ ಋಷಿಶ್ರೇಷ್ಠನಾದ ದಧೀಚನ ಸಮೀಪಕ್ಕೆ ಹೋಗಿ – '**ದಧೀಚ! ಅಸ್ಥೀನೀ ದೇಹಿ**' – 'ದಧೀಚನೇ! ನಿನ್ನ ಶರೀರದಲ್ಲಿರುವ ಮೂಳೆಗಳನ್ನು ದಯಪಾಲಿಸು'–ಎಂಬುದಾಗಿ ಯಾಚನೆಮಾಡಿರಿ. ಆ ಋಷಿಯ ಮೂಳೆಗಳಿಂದಲೇ ನಾವು ಶತ್ರುಗಳನ್ನು ಸಂಹರಿಸೋಣ."

ಇಂದ್ರನು ಹೇಳಿದಂತೆ ದೇವತೆಗಳೆಲ್ಲರೂ ದಧೀಚಮಹರ್ಷಿಯ ಸಮೀಪಕ್ಕೆ ಹೋಗಿ ಅಸುರರ ವಧಾರ್ಥವಾಗಿ ಮೂಳೆಗಳನ್ನು ಯಾಚಿಸಿದರು. ಋಷಿಶ್ರೇಷ್ಠನಾದ ದಧೀಚನು ತನ್ನ ಮೂಳೆಗಳನ್ನು ದೇವತೆಗಳಿಗೆ ಕೊಡುವ ಸಲುವಾಗಿ ಸ್ವಲ್ಪವಾದರೂ ಯೋಚನೆಯನ್ನೇ ಮಾಡದೇ ಪ್ರಾಣತ್ಯಾಗಮಾಡಿದನು. ದೇವತೆಗಳಿಗೆ ಪ್ರಿಯವಾದ ಕಾರ್ಯವನ್ನು ಮಾಡಿಕೊಟ್ಟ ಕಾರಣದಿಂದಾಗಿ ಆ ಋಷಿಯು ಅಕ್ಷಯವಾದ ಲೋಕಗಳನ್ನು ಹೊಂದಿದನು.

ದಧೀಚನ ಮೂಳೆಗಳನ್ನು ಪಡೆದುಕೊಂಡು ಸಂತೋಷಭರಿತನಾದ ಶಕ್ರನು ಆ ಮೂಳೆಗಳಿಂದ ಗದೆ, ವಜ್ರಾಯುಧ, ಚಕ್ರ, ದೊಡ್ಡ-ದೊಡ್ಡ ದಂಡಗಳು – ಇವೇ ಮೊದಲಾದ ಆಯುಧಗಳನ್ನು ಮಾಡಿಸಿದನು. ಬ್ರಹ್ಮನ ಪುತ್ರನಾದ ಭೃಗುಮಹರ್ಷಿಯು ತೀವ್ರವಾದ ತಪಸ್ಸನ್ನು ಮಾಡಿ ಲೋಕಕ್ಕೇ ಮಂಗಳವನ್ನುಂಟುಮಾಡುವ ಮಹಾಕಾಯನಾದ ದಧೀಚಮುನಿಯನ್ನು ಪಡೆದುಕೊಂಡಿದ್ದನು. ತೇಜಸ್ವಿಯಾದ ದಧೀಚನು ಲೋಕದ ಎಲ್ಲ ಸತ್ತ್ವಗಳನ್ನೂ ಒಂದೆಡೆಯಲ್ಲಿ ಸೇರಿಸಿ ನಿರ್ಮಿಸಲ್ಪಟ್ಟಿದ್ದನು. ದಧೀಚನು ಪರ್ವತದಂತೆ ಎತ್ತರವಾಗಿಯೂ, ಭಾರವಾಗಿಯೂ ಇದ್ದನು. ತನ್ನ ಮಹಿಮೆಯಿಂದ ಸರ್ವತ್ರ ವಿಖ್ಯಾತನಾಗಿದ್ದನು. ಪಾಕಶಾಸನನಾದ ಇಂದ್ರನು ಅವನ ಮಹಾತೇಜಸ್ಸಿಗೆ ಹೆದರಿ ನಿತ್ಯವೂ ಉದ್ವಿಗ್ನನಾಗುತ್ತಿದ್ದನು. ಅಂತಹ ದಧೀಚಮುನಿಯ ಮೂಳೆಗಳಿಂದ ಇಂದ್ರನು ವಜ್ರಾಯುಧವನ್ನು ಮಾಡಿಸಿದನು.

ಮಹಾತ್ಮನಾದ ದಧೀಚನ ಬ್ರಹ್ಮತೇಜಸ್ಸಿನಿಂದಲೇ ಉತ್ಪನ್ನವಾಗಿದ್ದ, ಮಹಾಮಂತ್ರಯುಕ್ತವಾಗಿದ್ದ, ಕ್ರೋಧಪೂರ್ವಕವಾಗಿ ಬಿಡಲ್ಪಟ್ಟಿದ್ದ ಆ ವಜ್ರಾಯುಧದಿಂದ ಇಂದ್ರನು ಬಹಳ ಬೇಗ ಎಂಟು ನೂರು ಹತ್ತು ದೈತ್ಯ-ದಾನವವೀರರನ್ನು ಸಂಹರಿಸಿದನು.

ಅನಂತರ ಬಹಳ ಕಾಲವು ಕಳೆದುಹೋಗಲಾಗಿ ಜಗತ್ತಿನಲ್ಲಿ ಹನ್ನೆರಡು ವರ್ಷಗಳ ಪರ್ಯಂತವಾಗಿ ಅತ್ಯಂತ ಭಯಂಕರವಾದ ಅನಾವೃಷ್ಟಿಯುಂಟಾಯಿತು. (ಹನ್ನೆರಡು ವರ್ಷಗಳವರೆಗೆ ಮಳೆಯೇ ಬರಲಿಲ್ಲ.) ಮಳೆ-ಬೆಳೆಗಳೇ ಇಲ್ಲದಿದ್ದ ಆ ಹನ್ನೆರಡು ವರ್ಷದ ಅವಧಿಯಲ್ಲಿ ಹಸಿವಿನಿಂದ ಸಂಕಟಪಡುತ್ತಿದ್ದ ಮಹರ್ಷಿಗಳು ಜೀವಿಕೆಗಾಗಿ ದಿಕ್ಕು-ದಿಕ್ಕಿಗೂ ಓಡಿದರು. ಎಲ್ಲ ಮುನಿಗಳೂ ಜೀವಿಕೆಗಾಗಿ ಓಡಿಹೋಗುತ್ತಿರುವುದನ್ನು ನೋಡಿ ಸಾರಸ್ವತಮುನಿಯೂ ತಾನಿದ್ದ ಸ್ಥಳದಿಂದ ಹೊರಡಲು ನಿಶ್ಚಯಿಸಿದನು. ಆ ಸಮಯದಲ್ಲಿ ಅವನ ತಾಯಿಯಾದ ಸರಸ್ವತಿಯು ಸಾರಸ್ವತನೊಡನೆ ಹೇಳಿದಳು :

**ನ ಗನ್ತವ್ಯಮಿತಃ ಪುತ್ರ ತವಾಹಾರಮಹಂ ಸದಾ ।**
**ದಾಸ್ಯಾಮಿ ಮತ್ಸ್ಯಪ್ರವರಾನುಷ್ಯತಾಮಿಹ ಭಾರತ ॥೩೯॥**

"ಪುತ್ರ! ನೀನು ಮಾತ್ರ ಇಲ್ಲಿಂದ ಹೋಗಬೇಡ. ನಾನು ನಿನ್ನ ಭೋಜನಾರ್ಥವಾಗಿ ಶ್ರೇಷ್ಠವಾದ ಮೀನುಗಳನ್ನು ಯಾವಾಗಲೂ ಒದಗಿಸಿಕೊಡುತ್ತೇನೆ. ಆದುದರಿಂದ ನೀನು ಇಲ್ಲಿಯೇ ಇರು."

ಜನಮೇಜಯ! ಸರಸ್ವತಿಯು ಹೀಗೆ ಹೇಳಿದನಂತರ ಸಾರಸ್ವತಮುನಿಯು ತನ್ನ ತಾಯಿಯು ಒದಗಿಸಿಕೊಡುತ್ತಿದ್ದ ಶ್ರೇಷ್ಠವಾದ ಮೀನುಗಳಿಂದಲೇ ದೇವ-ಪಿತೃಗಳನ್ನು ತೃಪ್ತಿಗೊಳಿಸುತ್ತಿದ್ದನು. ತಾನೂ ಸಹ ತಾಯಿಯು ಕೊಡುತ್ತಿದ್ದ ಮತ್ಸ್ಯಾಹಾರವನ್ನೇ ಭುಂಜಿಸುತ್ತಾ ತನ್ನ ಪ್ರಾಣದ ರಕ್ಷಣೆಯನ್ನೂ ಮಾಡಿಕೊಂಡನು. ವೇದಗಳ ರಕ್ಷಣೆಯನ್ನೂ ಮಾಡಿದನು. (ಸಾರಸ್ವತನು ಸತತವಾಗಿ ವೇದಗಳನ್ನು ಪಾರಾಯಣಮಾಡುವುದರಲ್ಲಿಯೇ ನಿರತನಾಗಿದ್ದನು.)

ಹನ್ನೆರಡು ವರ್ಷಗಳ ಅನಾವೃಷ್ಟಿಯು ಕಳೆದನಂತರ ಮಹರ್ಷಿಗಳೆ

ಲ್ಲರೂ ಪುನಃ ಒಂದೆಡೆಯಲ್ಲಿ ಸೇರಿದರು. ವೇದಗಳ ಅಧ್ಯಯನವನ್ನು ಹೇಗೆ ಮಾಡಬೇಕೆಂಬುದರ ಬಗೆಗೆ ಪರಸ್ಪರವಾಗಿ ಪ್ರಶ್ನಿಸತೊಡಗಿದರು.

**ತೇಷಾಂ ಕ್ಷುಧಾಪರೀತಾನಾಂ ನಷ್ಟಾ ವೇದಾಭಿಧಾವತಾಮ್ ।**
**ಸರ್ವೇಷಾಮೇವ ರಾಜೇನ್ದ್ರ ನ ಕಶ್ಚಿತ್ಪ್ರತಿಭಾನವಾನ್ ॥೪೨॥**

ಹಸಿವಿನಿಂದ ಸಂಕಟಪಡುತ್ತಿದ್ದ ಮತ್ತು ಅಲ್ಲಿಂದಿಲ್ಲಿಗೂ– ಇಲ್ಲಿಂದಲ್ಲಿಗೂ ಆಹಾರವನ್ನು ಹುಡುಕಿಕೊಂಡು ಅಲೆದಾಡುತ್ತಿದ್ದ ಆ ಋಷಿಗಳೆಲ್ಲರಿಗೂ ವೇದಗಳು ಸಂಪೂರ್ಣವಾಗಿ ಮರೆತುಹೋಗಿದ್ದುವು. ಅಂತಹ ಕಷ್ಟದ ಸಮಯದಲ್ಲಿ ವೇದಗಳನ್ನು ಸ್ಮರಣೆಯಲ್ಲಿಟ್ಟುಕೊಂಡಿದ್ದ ಪ್ರತಿಭಾವಂತನು ಅವರಲ್ಲಿ ಯಾರೂ ಇರಲಿಲ್ಲ.

ಆ ಋಷಿಗಳಲ್ಲೊಬ್ಬನು – ಪ್ರತಿದಿನವೂ ವೇದಗಳ ಪಾರಾಯಣದಲ್ಲಿಯೇ ನಿರತನಾಗಿದ್ದ, ಶುದ್ಧಾತ್ಮನಾದ ಋಷಿಶ್ರೇಷ್ಠನಾದ ಸಾರಸ್ವತನ ಬಳಿಗೆ ಬಂದನು. ಸಾರಸ್ವತನು ನಿರಂತರವಾಗಿ ವೇದಗಳ ಅಧ್ಯಯನದಲ್ಲಿ ನಿರತನಾಗಿದ್ದುದನ್ನು ನೋಡಿ ಪುನಃ ಋಷಿಗಳ ಸಮೂಹಕ್ಕೆ ಬಂದು ಅವರೊಡನೆ ಹೇಳಿದನು :

"ಋಷಿವರೇಣ್ಯರೇ! ದೇವತೆಗಳಂತೆ ಅಪಾರವಾದ ಕಾಂತಿಯಿಂದ ಕೂಡಿರುವ ಸಾರಸ್ವತಮುನಿಯು ನಿರ್ಜನವಾದ ಪ್ರದೇಶದಲ್ಲಿ ಕುಳಿತು ವೇದಗಳನ್ನು ಅಧ್ಯಯನಮಾಡುತ್ತಿದ್ದಾನೆ."

ಋಷಿಯು ಹೇಳಿದ ಮಾತನ್ನು ಕೇಳಿ ಋಷಿಗಳೆಲ್ಲರೂ ಸಾರಸ್ವತ ಮುನಿಯಿದ್ದ ಆ ಸ್ಥಳಕ್ಕೆ ಆಗಮಿಸಿದರು. ಹಾಗೆ ಆಗಮಿಸಿದ ಋಷಿಶ್ರೇಷ್ಠರು ಮುನಿಶ್ರೇಷ್ಠನಾದ ಸಾರಸ್ವತನನ್ನು ಕುರಿತು ಹೇಳಿದರು : **'ಅಸ್ಮಾನಧ್ಯಾಪಯಸ್ವ'**- 'ಸಾರಸ್ವತನೇ! ನಮಗೂ ವೇದಾಧ್ಯಯನವನ್ನು ಮಾಡಿಸು.' ಅದಕ್ಕುತ್ತರವಾಗಿ ಸಾರಸ್ವತಮುನಿಯು ಹೇಳಿದನು : **'ಶಿಷ್ಯತ್ವಮುಪಗಚ್ಛಧ್ವಂ ವಿಧಿವದ್ಧಿ ಮಮ'** – 'ನನ್ನ ಶಿಷ್ಯತ್ವವನ್ನು ನೀವೆಲ್ಲರೂ ವಿಧಿವತ್ತಾಗಿ ಅಂಗೀಕರಿಸಿರಿ; ನಾನು ನಿಮಗೆ ವೇದಾಧ್ಯಯನವನ್ನು ಮಾಡಿಸುತ್ತೇನೆ.' ಪ್ರತ್ಯುತ್ತರಿಸುತ್ತಾ ಋಷಿಗಳು ಹೇಳಿದರು :

"ಪುತ್ರಕ! ನೀನಿನ್ನೂ ಬಾಲಕನಾಗಿರುವೆ. (ನಮಗೆ ನೀನು ಪುತ್ರ

ಸಮಾನನಾಗಿರುವೆ,) ಪುತ್ರಸಮಾನನಾಗಿರುವ ನಿನಗೆ ನಾವು ಶಿಷ್ಯತ್ವವನ್ನು ಅಂಗೀಕರಿಸುವುದು ಹೇಗೆ?”

‘ನ ಮೇ ಧರ್ಮೋ ನಶ್ಯೇತ್’ - ‘ನನ್ನ ಧರ್ಮವೂ ನಷ್ಟವಾಗದಿರಲಿ’ (ಗುರು-ಶಿಷ್ಯವಿಧಾನದಿಂದಲ್ಲದೇ ವೇದಗಳ ಅಧ್ಯಾಪನವು ಮತ್ತಾವ ಬಗೆ ಯಿಂದಲೂ ಸಾಧ್ಯವಾಗುವುದಿಲ್ಲ.) ಎಂಬುದು ಸಾರಸ್ವತನ ಉತ್ತರವಾಗಿತ್ತು. ಸಾರಸ್ವತನು ಮುಂದುವರಿದು ಹೇಳಿದನು :

**ಯೋ ಹ್ಯಧರ್ಮೇಣ ವೈ ಬ್ರೂಯಾದ್ಗೃಹ್ಣೀಯಾದ್ಯೋಽಪ್ಯ ಧರ್ಮತಃ ।**
**ಹೀಯೇತಾಂ ತಾವುಭೌ ಕ್ಷಿಪ್ರಂ ಸ್ಯಾತಾಂ ವಾ ವೈರಿಣಾವುಭೌ ॥**

“ಯಾವನು ಧರ್ಮವಿಹಿತವಲ್ಲದ ವಿಧಾನದಲ್ಲಿ ವೇದಗಳನ್ನು ಹೇಳಿಕೊಡುತ್ತಾನೆಯೋ ಮತ್ತು ಯಾವನು ಧರ್ಮವಿಹಿತವಲ್ಲದ ವಿಧಾನದಲ್ಲಿ ವೇದಗಳನ್ನು ಹೇಳಿಸಿಕೊಳ್ಳುತ್ತಾನೆಯೋ– ಅವರಿಬ್ಬರೂ ಬಹಳ ಬೇಗ ಹೀನವಾದ ಅವಸ್ಥೆಯನ್ನು ಹೊಂದುತ್ತಾರೆ ಅಥವಾ ವಿನಾಶಹೊಂದುತ್ತಾರೆ. ಹಾಗಿಲ್ಲದಿದ್ದರೆ ಇಬ್ಬರೂ ಪರಸ್ಪರವಾಗಿ ವೈರಿಗಳಾಗುತ್ತಾರೆ.

**ನ ಹಾಯನೈರ್ನ ಪಲಿತೈರ್ನ ವಿತ್ತೇನ ನ ಬನ್ಧುಭಿಃ ।**
**ಋಷಯಶ್ಚಕ್ರಿರೇ ಧರ್ಮಂ ಯೋಽನೂಚಾನಃ ಸ ನೋ ಮಹಾನ್ ॥**

ಹೆಚ್ಚು ವಯಸ್ಸಾಗಿರುವವನನ್ನು ದೃಷ್ಟಿಯಲ್ಲಿಟ್ಟುಕೊಂಡು ಋಷಿಗಳು ಧರ್ಮದ ನಿರ್ಣಯವನ್ನು ಮಾಡಿಕೊಂಡಿರುವುದಿಲ್ಲ. ತಲೆ ನರೆತಿರುವುದನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರಾಚೀನಮಹರ್ಷಿಗಳು ಧರ್ಮದ ನಿರ್ಣಯವನ್ನು ಮಾಡಿರುವುದಿಲ್ಲ. ಮಹೈಶ್ವರ್ಯವಿರುವವನನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರಾಚೀನರು ಧರ್ಮದ ನಿರ್ಣಯವನ್ನು ಮಾಡಿರುವುದಿಲ್ಲ. ತಮ್ಮ ಬಂಧು-ಬಳಗದವರನ್ನು ದೃಷ್ಟಿಯಲ್ಲಿಟ್ಟುಕೊಂಡು ನಮ್ಮ ಪ್ರಾಚೀನಮಹರ್ಷಿಗಳು ಧರ್ಮದ ನಿರ್ಣಯವನ್ನು ಮಾಡಿರುವುದಿಲ್ಲ. ಸಾಂಗವೇದಾಧ್ಯಯನ ಮಾಡಿರುವವನು ಯಾವನಿದ್ದಾನೆಯೋ–ಯಾವನು ವೇದಗಳ ಅಧ್ಯಯನ ವನ್ನು ಮಾಡಿಸಬಲ್ಲನೋ–ಅವನೇ ಶ್ರೇಷ್ಠನು. ಅವನೇ ಗುರುಸ್ಥಾನಕ್ಕೆ

ಯೋಗ್ಯನಾದವನು. (ವಯಸ್ಸು, ವಿತ್ತ, ಬಂಧುತ್ವ–ಇತ್ಯಾದಿಗಳ ಪ್ರಶ್ನೆಯೇ ಇಲ್ಲಿ ಉದ್ಭವಿಸುವುದಿಲ್ಲ.)"

ಜನಮೇಜಯಮಹಾರಾಜ! ಸಾರಸ್ವತಮುನಿಯು ಹೇಳಿದ ಮಾತುಗಳನ್ನು ಕೇಳಿ ಆ ಮುನಿಗಳೆಲ್ಲರೂ ವಿಧಿಪೂರ್ವಕವಾಗಿ ಅವನಿಗೆ ಶಿಷ್ಯರಾಗಿ ಅವನಿಂದ ವೇದಗಳನ್ನು ಅಧ್ಯಯನಮಾಡಿ ಪುನಃ ವೇದೋಕ್ತವಾದ ಧರ್ಮಾನುಷ್ಠಾನಗಳಲ್ಲಿ ನಿರತರಾದರು.

**ಷಷ್ಟಿರ್ಮುನಿಸಹಸ್ರಾಣಿ ಶಿಷ್ಯತ್ವಂ ಪ್ರತಿಪೇದಿರೇ ।**
**ಸಾರಸ್ವತಸ್ಯ ವಿಪ್ರರ್ಷೇರ್ವೇದಸ್ವಾಧ್ಯಾಯಕಾರಣಾತ್ ॥೫೦॥**

ಅರುವತ್ತು ಸಾವಿರ ಮುನಿಗಳು ವೇದಗಳನ್ನು ಅಧ್ಯಯನಮಾಡುವ ಸಲುವಾಗಿ ಸಾರಸ್ವತಮುನಿಯ ಶಿಷ್ಯತ್ವವನ್ನು ವಿಧಿಪೂರ್ವಕವಾಗಿ ಅಂಗೀಕರಿಸಿದರು.

**ಮುಷ್ಟಿಂ ಮುಷ್ಟಿಂ ತತಃ ಸರ್ವೇ ದರ್ಭಾಣಾಂ ತೇ ಹ್ಯುಪಾಹರನ್ ।**
**ತಸ್ಯಾಸನಾರ್ಥಂ ವಿಪ್ರರ್ಷೇರ್ಬಾಲಸ್ಯಾಪಿ ವಶೇ ಸ್ಥಿತಾಃ ॥೫೧॥**

ವಿಪ್ರರ್ಷಿಯಾದ ಸಾರಸ್ವತನು ಬಾಲಕನೇ ಆಗಿದ್ದರೂ ವೇದಾಧ್ಯಯನ ಮಾಡಿಸುವ ಮಹಾಗುರುವಾಗಿದ್ದುದರಿಂದ ಅವನ ಶಿಷ್ಯರಾಗಿದ್ದ ದೊಡ್ಡ-ದೊಡ್ಡ ಋಷಿಗಳು ಗುರುಗಳ ಆಸನಕ್ಕೆಂದು ಮುಷ್ಟಿಯಲ್ಲಿ ದರ್ಭೆಯನ್ನು ಹಿಡಿದುಕೊಂಡು ಬರುತ್ತಿದ್ದರು.

ಶ್ರೀಕೃಷ್ಣನ ಅಣ್ಣನಾದ, ಮಹಾಬಲನಾದ, ರೋಹಿಣೀನಂದನನಾದ ಬಲರಾಮನು ಆ ಸಾರಸ್ವತತೀರ್ಥದಲ್ಲಿ ಸ್ನಾನಮಾಡಿ, ಬ್ರಾಹ್ಮಣರಿಗೆ ಐಶ್ವರ್ಯವನ್ನು ದಾನಮಾಡಿ, ಆನಂದಪರವಶನಾಗಿ ಕ್ರಮೇಣ ವೃದ್ಧಕನ್ಯೆಯೊಬ್ಬಳು ವಾಸವಾಗಿದ್ದ ಸುವಿಖ್ಯಾತವಾಗಿದ್ದ ಮಹಾತೀರ್ಥಕ್ಕೆ ಸಪರಿವಾರನಾಗಿ ತೆರಳಿದನು."

ಐವತ್ತೊಂದನೆಯ ಅಧ್ಯಾಯವು ಮುಗಿಯಿತು.

## ವೃದ್ಧಕನ್ಯೆಯ ಚರಿತ್ರೆ : ಶೃಂಗವಂತನೊಡನೆ ಅವಳ ವಿವಾಹ ಮತ್ತು ಸ್ವರ್ಗಾರೋಹಣ : ಆ ತೀರ್ಥದ ಮಹಿಮೆ

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ಭಗವಾನ್! ಕುಮಾರಿಯಾದವಳೇಕೆ ತಪಸ್ಸಿನಲ್ಲಿ ನಿರತಳಾಗಿದ್ದಳು? ಏತಕ್ಕಾಗಿ ಕನ್ಯೆಯಾದವಳು ತಪಸ್ಸುಮಾಡುತ್ತಿದ್ದಳು? ತಪಸ್ಸಿನಲ್ಲಿ ನಿರತ ಳಾಗಿದ್ದಾಗ ಅವಳು ಯಾವ ನಿಯಮಾನುಷ್ಠಾನಗಳನ್ನು ಮಾಡುತ್ತಿದ್ದಳು? ಬ್ರಾಹ್ಮಣಶ್ರೇಷ್ಠರೇ! ನಿಮ್ಮಿಂದ ನಾನು ಶ್ರೇಷ್ಠವಾದ ಮತ್ತು ಸುದುಷ್ಕರವಾದ ತಪಸ್ಸಿನ ಅನೇಕ ವಿಷಯಗಳನ್ನು ಕೇಳಿದ್ದೇನೆ. ಈಗ ನೀವು ಆ ವೃದ್ಧಕುಮಾರಿಯು ತಪಸ್ಸಿನಲ್ಲಿ ಯಾವ ರೀತಿ ನಿರತಳಾಗಿದ್ದಳೆಂಬ ವಿಷಯವನ್ನೂ ಅವಳಿಗೆ ಸಂಬಂಧಿಸಿದಂತೆ ಎಲ್ಲ ವಿಷಯಗಳನ್ನೂ ಯಥಾವತ್ತಾಗಿ ತಿಳಿಸಿರಿ."

"ಮಹಾರಾಜ! ಹಿಂದೆ ಮಹಾವೀರ್ಯನಾದ, ಮಹಾಯಶೋವಂತ ನಾದ ಕುಣಿಗರ್ಗ ಎಂಬ ಹೆಸರಿನ ಋಷಿಯಿದ್ದನು. ತಪಸ್ವಿಗಳಲ್ಲಿ ಶ್ರೇಷ್ಠನಾಗಿದ್ದ ಆ ಮಹರ್ಷಿಯು ಬಹಳವಾಗಿ ತಪಸ್ಸುಮಾಡಿ ಸುಂದರವಾದ ಹುಬ್ಬುಗಳನ್ನು ಹೊಂದಿದ್ದ ಮಗಳನ್ನು ಮನಃಸಂಕಲ್ಪದಿಂದಲೇ ಸೃಷ್ಟಿಸಿದನು. ಮಹಾಯಶೋವಂತನಾದ ಕುಣಿಗರ್ಗನು ಕಡುಚೆಲುವೆಯಾಗಿದ್ದ ತನ್ನ ಮಗಳನ್ನು ನೋಡಿ ಪರಮಸಂತುಷ್ಟನಾದನು. ಕೆಲವು ಕಾಲಾನಂತರದಲ್ಲಿ ಶರೀರವನ್ನು ಪರಿತ್ಯಜಿಸಿ ಸ್ವರ್ಗಕ್ಕೆ ಹೊರಟುಹೋದನು. ಅನಂತರ ಕಮಲದ ದಳಕ್ಕೆ ಸಮಾನವಾದ ಕಣ್ಣುಗಳಿಂದ ಕಂಗೊಳಿಸುತ್ತಿದ್ದ, ಕಲ್ಯಾಣ ಮಯವಾದ ಸುಂದರವಾದ ಹುಬ್ಬುಗಳನ್ನು ಹೊಂದಿದ್ದ, ನಿಷ್ಕಳಂಕಳಾದ ಆ ಋಷಿಕನ್ಯೆಯು ಒಂದು ಆಶ್ರಮವನ್ನು ಮಾಡಿಕೊಂಡು ಉಗ್ರವಾದ ತಪಸ್ಸಿನಿಂದಲೂ, ಉಪವಾಸಾದಿಗಳಿಂದಲೂ ಪಿತೃಗಳನ್ನೂ-ದೇವತೆಗಳನ್ನೂ ತೃಪ್ತಿಗೊಳಿಸುತ್ತಿದ್ದಳು. ಹೀಗೆಯೇ ಅವಳು ಉಗ್ರವಾದ ತಪಸ್ಸಿನಲ್ಲಿಯೇ ನಿರತಳಾಗಿದ್ದಾಗ ಅನೇಕವರ್ಷಗಳೇ ಕಳೆದುಹೋದುವು. ಅವಳ ತಂದೆಯಾದ ಕುಣಿಗರ್ಗನಿದ್ದಾಗಲೇ ಅವಳನ್ನು ಸತ್ಕುಲಪ್ರಸೂತ

ನೊಬ್ಬನಿಗೆ ಕೊಟ್ಟು ವಿವಾಹಮಾಡಬೇಕೆಂದು ಪ್ರಯತ್ನಿಸಿದ್ದನು. ಆದರೆ ಅನಿಂದಿತೆಯಾದ (ಯಾವ ದೋಷವೂ ಇಲ್ಲದ) ಆ ಕನ್ಯೆಯು ಆಗ ಸಮ್ಮತಿಸಲಿಲ್ಲ. ತನಗೆ ಅನುರೂಪನಾದ ವರನು ಸಿಕ್ಕಲಿಲ್ಲವೆಂಬ ಭಾವನೆಯೇ ಅವಳು ವಿವಾಹವಾಗದೇ ಇರುವುದಕ್ಕೆ ಮುಖ್ಯ ಕಾರಣವಾಗಿತ್ತು. ನಿರ್ಜನವಾದ ಅರಣ್ಯದಲ್ಲಿ ಆಶ್ರಮವನ್ನು ಕಟ್ಟಿಕೊಂಡು ಉಗ್ರವಾದ ತಪಸ್ಸಿನಿಂದ ತನ್ನ ದೇಹವನ್ನು ದಿನ-ದಿನಕ್ಕೂ ಕ್ಲೇಶಗೊಳಿಸುತ್ತಾ ದೇವ-ಪಿತೃಗಳ ಆರಾಧನೆಯಲ್ಲಿಯೇ ನಿರತಳಾಗಿದ್ದುಬಿಟ್ಟಳು. ಅದರಿಂದ ತಾನು ಕೃತಾರ್ಥಳಾದೆನೆಂದೇ ಭಾವಿಸಿದ್ದರೂ ಸತತವಾದ ಮತ್ತು ಅತಿಕಠೋರವಾದ ತಪಸ್ಸಿನಿಂದ ಋಷಿಕನ್ಯೆಯು ಬಹಳವಾಗಿ ಬಳಲಿ-ಬೆಂಡಾಗಿ ದಿನಗಳು ಕಳೆದಂತೆಲ್ಲಾ ವೃದ್ಧಾಪ್ಯದಿಂದಲೂ ಮತ್ತು ತಪಸ್ಸಿನಿಂದಲೂ ಬಹಳ ಕೃಶಳಾಗಿ ಹೋದಳು. ಆ ಸಮಯದಲ್ಲವಳಿಗೆ ಇತರರ ಸಹಾಯವಿಲ್ಲದೇ ಒಂದೊಂದು ಹೆಜ್ಜೆಯನ್ನು ಮುಂದಿಡಲೂ ಸಾಧ್ಯವಾಗುತ್ತಿರಲಿಲ್ಲ. ಅಂತಹ ಸ್ಥಿತಿಯಲ್ಲಿದ್ದ ಅವಳು ಪರಲೋಕಕ್ಕೆ ಹೊರಟುಹೋಗಬೇಕೆಂದು ನಿಶ್ಚಯಮಾಡಿಬಿಟ್ಟಳು. ಶರೀರವನ್ನು ತ್ಯಾಗಮಾಡಲು ಇಚ್ಛಿಸಿದ್ದ ಋಷಿಕನ್ಯೆಯನ್ನು ನೋಡಿ ನಾರದರು ಹೇಳಿದರು :

**ಅಸಂಸ್ಕೃತಾಯಾಃ ಕನ್ಯಾಯಾಃ ಕುತೋ ಲೋಕಾಸ್ತವಾನಘೇ ।**
**ಏವಂ ತು ಶ್ರುತಮಸ್ಮಾಭಿರ್ದೇವಲೋಕೇ ಮಹಾವ್ರತೇ ।**
**ತಪಃ ಪರಮಕಂ ಪ್ರಾಪ್ತಂ ನ ತು ಲೋಕಾಸ್ತ್ವಯಾ ಜಿತಾಃ ॥೧೨॥**

"ಮಹಾವ್ರತಳೇ! ನಿಷ್ಪಾಪಳೇ! ನಿನಗೆ ಇದುವರೆಗೂ ವಿವಾಹ ಸಂಸ್ಕಾರವಾಗಿರುವುದಿಲ್ಲ. ಇನ್ನೂ ನೀನು ಕನ್ಯೆಯಾಗಿಯೇ ಉಳಿದಿರುವೆ. ಅಸಂಸ್ಕೃತಳಾದ ನಿನಗೆ ಪುಣ್ಯಲೋಕಗಳು ಹೇಗೆ ತಾನೇ ಲಭಿಸುತ್ತವೆ? ದೇವಲೋಕದಲ್ಲಿ ನಾವು ನಿನ್ನ ಸಂಬಂಧವಾಗಿ ಇಂತಹ ಮಾತುಗಳನ್ನು ಕೇಳಿದ್ದೇವೆ. ನೀನೇನೋ ಸುದುಷ್ಕರವಾದ, ಅಪಾರವಾದ ತಪಸ್ಸನ್ನೇ ಮಾಡಿರುವೆ. ಆದರೆ ನಿನಗೆ ವಿವಾಹಸಂಸ್ಕಾರವಾಗದೇ ಇರುವುದರಿಂದ ಪುಣ್ಯಲೋಕಗಳು ವಶವಾಗಲಾರವು."

ಜನಮೇಜಯ! ನಾರದರು ಹೇಳಿದ ಮಾತನ್ನು ಕೇಳಿ ಋಷಿಕನ್ಯೆಯು ವಿವಾಹಸಂಸ್ಕಾರವನ್ನು ಹೊಂದಲು ನಿಶ್ಚಯಿಸಿದವಳಾಗಿ ಋಷಿಗಳ ಸಮೂಹದಲ್ಲಿ ಹೀಗೆ ಘೋಷಿಸಿದಳು :

**ತಪಸೋಽರ್ಧಂ ಪ್ರಯಚ್ಛಾಮಿ ಪಾಣಿಗ್ರಾಹಸ್ಯ ಸತ್ತಮಾಃ ॥೧೩॥**

"ಸಾಧುಶಿರೋಮಣಿಗಳೇ! ನಿಮ್ಮಲ್ಲಿ ಯಾರಾದರೂ ನನ್ನ ಪಾಣಿಗ್ರಹಣಮಾಡಿದ್ದೇ ಆದರೆ (ನನ್ನನ್ನು ವಿವಾಹಮಾಡಿಕೊಂಡುದೇ ಆದರೆ) ಅವರಿಗೆ ನಾನು ಇದುವರೆಗೂ ಮಾಡಿರುವ ತಪಸ್ಸಿನ ಫಲದಲ್ಲಿ ಅರ್ಧಭಾಗವನ್ನು ಅರ್ಪಿಸಿಬಿಡುತ್ತೇನೆ."

ಋಷಿಕನ್ಯೆಯು ಹೀಗೆ ಹೇಳಿದೊಡನೆಯೇ ಗಾಲವನ ಮಗನಾದ ಶೃಂಗವಂತನೆಂಬ ಋಷಿಯು ಅವಳ ಪಾಣಿಯನ್ನು ಗ್ರಹಣಮಾಡಿದನು. ತನ್ನ ಒಪ್ಪಿಗೆಯನ್ನು ಸೂಚಿಸುತ್ತಾ (ವಿವಾಹವಾಗುವ ಮೊದಲು) ಒಂದು ನಿಬಂಧನೆಯನ್ನು ಅವಳ ಮುಂದಿಟ್ಟನು :

**ಸಮಯೇನ ತವಾದ್ಯಾಹಂ ಪಾಣಿಂ ಸ್ಪ್ರಕ್ಷ್ಯಾಮಿ ಶೋಭನೇ ।**
**ಯದ್ಯೇಕರಾತ್ರಂ ವಸ್ತವ್ಯಂ ತ್ವಯಾ ಸಹ ಮಯೇತಿ ಹ ॥೧೪॥**

"ಶೋಭನಳೇ! ನಾನು ಒಂದು ನಿಬಂಧನೆಯೊಡನೆ ಇಂದು ನಿನ್ನನ್ನು ಮದುವೆಯಾಗುವೆನು. ಈ ನಿಬಂಧನೆಗೆ ನೀನು ಒಪ್ಪಬೇಕು. ಮದುವೆಯಾದನಂತರ ಒಂದು ರಾತ್ರಿ ಮಾತ್ರ ನೀನು ನನ್ನೊಡನಿರಬೇಕು. ಈ ನಿಬಂಧನೆಗೆ ನೀನು ಒಪ್ಪಿದರೆ ನಾನು ನಿನ್ನನ್ನು ವಿವಾಹವಾಗುತ್ತೇನೆ."

ಹಾಗೆಯೇ ಆಗಲೆಂದು ಋಷಿಕನ್ಯೆಯು ಪ್ರತಿವಚನವನ್ನಿತ್ತು ತನ್ನ ಕೈಯನ್ನು ಶೃಂಗವಂತನ ಕೈಯಲ್ಲಿಟ್ಟಳು. ಅನಂತರ ಶೃಂಗವಂತನು ಯಥಾವಿಧಿಯಾಗಿ, ಯಥಾಶಾಸ್ತ್ರವಾಗಿ ಅಗ್ನಿಯನ್ನು ಪ್ರತಿಷ್ಠಾಪಿಸಿ ವಿವಾಹಮಂತ್ರಗಳಿಂದ ಯಜ್ಞೇಶ್ವರನಲ್ಲಿ ಹೋಮಮಾಡಿ ಋಷಿಕನ್ಯೆಯ ಪಾಣಿಗ್ರಹಣವನ್ನೂ ಮತ್ತು ವಿವಾಹಸಂಸ್ಕಾರವನ್ನೂ ಮಾಡಿದನು.

**ಸಾ ರಾತ್ರಾವಭವದ್ರಾಜಂಸ್ತರುಣೀ ವರವರ್ಣಿನೀ ।**
**ದಿವ್ಯಾಭರಣವಸ್ತ್ರಾ ಚ ದಿವ್ಯಗನ್ಧಾನುಲೇಪನಾ ॥೧೫॥**

ವಚನವನ್ನಿತ್ತಿದ್ದಂತೆ ಪತಿಯ ಜೊತೆಯಲ್ಲಿ ಆ ರಾತ್ರಿಯನ್ನು ಕಳೆಯಲು ಋಷಿಕನ್ಯೆಯು ಬಂದಳು. ಆದರೆ ಆಗ ಅವಳು ವೃದ್ಧಕನ್ಯೆಯಾಗಿರಲಿಲ್ಲ. ಸುಂದರಳಾದ, ಶ್ರೇಷ್ಠವಾದ ವರ್ಣದಿಂದ ಕೂಡಿದ್ದ ತರುಣಿಯಾಗಿದ್ದಳು. ದಿವ್ಯವಾದ ಆಭರಣಗಳನ್ನು ತೊಟ್ಟುಕೊಂಡಿದ್ದಳು. ದಿವ್ಯವಾದ ವಸ್ತ್ರಗಳನ್ನು ಧರಿಸಿಕೊಂಡಿದ್ದಳು. ದಿವ್ಯವಾದ ಗಂಧಗಳನ್ನು ಲೇಪಿಸಿಕೊಂಡಿದ್ದಳು. ಶರೀರದ ಕಾಂತಿಯಿಂದ ಕಾನನವನ್ನೇ ಬೆಳಗುತ್ತಿರುವಳೋ ಎಂಬಂತಿದ್ದ ಋಷಿಕನ್ಯೆಯನ್ನು ನೋಡಿ ಗಾಲವಿಯು ಪರಮಪ್ರೀತನಾದನು. ಆ ಒಂದು ರಾತ್ರಿ ಅವಳೊಡನೆ ಸುಖದಿಂದ ಕಳೆದನು. ಬೆಳಗಾಗುತ್ತಲೇ ಋಷಿಕನ್ಯೆಯು ಗಾಲವಿಗೆ ಹೇಳಿದಳು :

**ಯಸ್ತ್ವಯಾ ಸಮಯೋ ವಿಪ್ರ ಕೃತೋ ಮೇ ತಪತಾಂ ವರ ।**
**ತೇನೋಷಿತಾಸ್ಮಿ ಭದ್ರಂ ತೇ ಸ್ವಸ್ತಿ ತೇಽಸ್ತು ವ್ರಜಾಮ್ಯಹಮ್ ॥**

"ತಪಸ್ವಿಗಳಲ್ಲಿ ಶ್ರೇಷ್ಠನಾದವನೇ! ನನ್ನನ್ನು ವಿವಾಹವಾಗಲು ನೀನು ಯಾವ ನಿಬಂಧನೆಯನ್ನು ಹಾಕಿದ್ದೆಯೋ–ಆ ನಿಬಂಧನೆಗೆ ಅನುಸಾರವಾಗಿ ಒಂದು ರಾತ್ರಿ ನಾನು ನಿನ್ನೊಡನೆ ಕಳೆದಿರುತ್ತೇನೆ. ನಿನಗೆ ಮಂಗಳವಾಗಲಿ; ಕಲ್ಯಾಣವಾಗಲಿ. ನನಗೆ ಅನುಮತಿಯನ್ನು ನೀಡು. ನಾನಿನ್ನು ಹೊರಡುತ್ತೇನೆ."

ಹೀಗೆಂದು ಹೇಳಿ ಅವಳು ಅಲ್ಲಿಂದ ಹೊರಟಳು. ಒಂದೆರಡು ಹೆಜ್ಜೆಗಳು ಮುಂದಿಟ್ಟನಂತರ ಪುನಃ ಋಷಿಕನ್ಯೆಯು ಹೇಳಿದಳು : "ಈ ತೀರ್ಥದ ಸಮೀಪದಲ್ಲಿ ಯಾರು ಏಕಾಗ್ರಚಿತ್ತರಾಗಿ ದೇವತೆಗಳ ಅರ್ಚನೆಯಲ್ಲಿ ನಿರತರಾಗಿದ್ದುಕೊಂಡು ಒಂದು ರಾತ್ರಿಯನ್ನು ಕಳೆಯುತ್ತಾರೆಯೋ–ಅವರಿಗೆ *ಐವತ್ತೆಂಟು ವರ್ಷಗಳವರೆಗೆ ವಿಧಿಪೂರ್ವಕವಾಗಿ ಬ್ರಹ್ಮಚರ್ಯವನ್ನು

*ಚತ್ವಾರಿಂಶತಮಷ್ಟೌ ಚ ದ್ವೌ ಚಾಷ್ಟೌ–ಎಂಬುದಕ್ಕೆ ವ್ಯಾಖ್ಯಾನಕಾರರು ೫೮ ವರ್ಷ ಎಂದು ಅರ್ಥಮಾಡಿರುತ್ತಾರೆ. ಚತ್ವಾರಿಂಶತಂ - ೪೦ + ಅಷ್ಟೌ ಚ ೮ = ೪೮. ಚತ್ವಾರಿಂಶತಮಷ್ಟೌ - ಪ್ರತಿವೇದಂ ದ್ವಾದಶ ವರ್ಷಾಣೀತಿ ವೇದಚತುಷ್ಟಯಾಧ್ಯಯನಾಯ ಅಷ್ಟಾಚತ್ವಾರಿಂಶದ್ವರ್ಷಾಣಿ - ಪ್ರತಿ ಒಂದು ವೇದದ ಅಧ್ಯಯನಮಾಡಲು ಹನ್ನೆರಡು ವರ್ಷಗಳು ಬೇಕಾಗುತ್ತವೆ. ಹೀಗೆ ನಾಲ್ಕು ವೇದಗಳ ಅಧ್ಯಯನಮಾಡಲು ೪೮ ವರ್ಷಗಳಾಗುತ್ತವೆ. ದ್ವೌ = ದ್ವಾವತ್ಸರೌ ಸ್ನಾತಕೇನ ಗುರೋರಾನೃಣ್ಯಾರ್ಥಂ

ಪಾಲಿಸಿಕೊಂಡಿರತಕ್ಕವರಿಗೆ ಯಾವ ಫಲವು ಲಭಿಸುವುದೋ–ಅದೇ ಫಲವೇ ಲಭಿಸುತ್ತದೆ.”

ಹೀಗೆ ಹೇಳಿ ಸಾಧ್ವಿಯಾದ ಋಷಿಪತ್ನಿಯು ದೇಹವನ್ನು ಪರಿತ್ಯಾಗ ಮಾಡಿ ಸ್ವರ್ಗಕ್ಕೆ ಹೊರಟುಹೋದಳು. ಋಷಿಕನ್ಯೆಯ ರೂಪವನ್ನೇ ಚಿಂತಿಸುತ್ತಾ ಗಾಲವಿಯೂ ಬಹಳ ಅಧೀರನಾದನು. ನಿಬಂಧನೆಗೆ ಅನುಸಾರವಾಗಿ ಗಾಲವಿಯು ಋಷಿಕನ್ಯೆಯು ಮಾಡಿದ್ದ ತಪಸ್ಸಿನ ಫಲದ ಅರ್ಧಭಾಗವನ್ನು ಬಹಳ ಕಷ್ಟದಿಂದ ಪ್ರತಿಗ್ರಹಿಸಿದನು. ಅವಳ ರೂಪದಿಂದ ಅತ್ಯಂತವಾಗಿ ಆಕರ್ಷಿತನಾಗಿದ್ದ ಶೃಂಗವಂತನು ಬಹಳ ದುಃಖಿತನಾದನು. ಅದೇ ಕಾರಣದಿಂದ ಅವನೂ ಸಹ ದೇಹತ್ಯಾಗಮಾಡಿ ಅವಳು ಹೋದ ಹಾದಿಯನ್ನೇ ಹಿಡಿದು ಹೊರಟುಹೋದನು.

ಮಹಾರಾಜ! ನಿನ್ನ ಆಶಯದಂತೆ ವೃದ್ಧಕನ್ಯೆಯ ಮಹಾಚರಿತ್ರೆಯನ್ನು ಹೇಳಿರುವೆನು. ಆ ಚರಿತ್ರೆಯ ಅಂಗವಾಗಿ ಅವಳ ಬ್ರಹ್ಮಚರ್ಯೆಯನ್ನೂ ಮತ್ತು ಅವಳು ಸ್ವರ್ಗಕ್ಕೆ ಹೋದ ವಿಧಾನವನ್ನೂ ತಿಳಿಸಿರುವೆನು. ವೃದ್ಧಕನ್ಯಾತೀರ್ಥಕ್ಷೇತ್ರದಲ್ಲಿದ್ದಾಗಲೇ ಬಲರಾಮನು, ಶಲ್ಯನು ಹತನಾದನೆಂಬ ವಾರ್ತೆಯನ್ನು ಕೇಳಿದನು. ಪರಂತಪನಾದ ಬಲಭದ್ರನು ಅಲ್ಲಿಯೂ ಬ್ರಾಹ್ಮಣರಿಗೆ ಅನೇಕವಿಧವಾದ ದಾನಗಳನ್ನು ಕೊಟ್ಟು, ಪಾಂಡವರಿಂದ ಶಲ್ಯನು ಹತನಾದ ಸಮಾಚಾರವನ್ನು ತಿಳಿದು, ಸಮಂತಪಂಚಕ ಮಹಾ ದ್ವಾರದಿಂದ ಹೊರಹೊರಟು ಕುರುಕ್ಷೇತ್ರದರ್ಶನದಿಂದ ಯಾವ ಫಲವು ಲಭಿಸುತ್ತದೆಂದು ಋಷಿಗಳನ್ನು ಪ್ರಶ್ನಿಸಿದನು. ಕುರುಕ್ಷೇತ್ರದರ್ಶನಫಲವನ್ನು

---

ಸೇವಾಕಾರ್ಯಾ-೪೮ ವರ್ಷಗಳ ಕಾಲ ನಾಲ್ಕು ವೇದಗಳನ್ನು ಅಧ್ಯಯನಮಾಡಿದನಂತರ ಆಚಾರ್ಯಋಣದಿಂದ ಮುಕ್ತನಾಗಲು ಸ್ನಾತಕನಾಗಿ ಎರಡು ವರ್ಷಗಳ ಕಾಲ ಗುರುಸೇವೆಯನ್ನು ಮಾಡಬೇಕು. ಅಲ್ಲಿಗೆ ೫೦ ವರ್ಷಗಳಾಗುತ್ತವೆ. ಅಲ್ಲಿಂದ ಮುಂದೆ ತತಃ ಅಷ್ಟವರ್ಷಕೀಂ  ಕನ್ಯಾಂ ಪರಿಣೀಯ - ಎಂಟೇ ವರ್ಷದ ಕನ್ಯೆಯನ್ನು ಮದುವೆಯಾಗಿ ತಸ್ಯಾಃ ಯೌವನಾವಧಿವರ್ಷಾಣೀತಿ = ಎಂಟುವರ್ಷದ ಕನ್ಯೆಯು ಯೌವನಾವಸ್ಥೆಗೆ ಬರಬೇಕಾದರೆ ಮತ್ತೆಂಟು ವರ್ಷಗಳು ಕಳೆಯಬೇಕು. ಆದುದರಿಂದ ಬ್ರಹ್ಮಚರ್ಯೆಯಲ್ಲಿರಬೇಕಾದ ಒಟ್ಟು ವರ್ಷಗಳು ಐವತ್ತೆಂಟು. ಅಷ್ಟಪಞ್ಚಾಶದ್ವರ್ಷಾಣಿ ಬ್ರಹ್ಮಚರ್ಯಂ ಸರ್ವಶ್ರೇಷ್ಠಂ.

ಬಲರಾಮನು ಕೇಳಲಾಗಿ ಮಹಾತ್ಮರಾದ ಋಷಿಗಳು ಬಲರಾಮನಿಗೆ ಎಲ್ಲ ವಿಷಯಗಳನ್ನೂ ಯಥಾವತ್ತಾಗಿ ವಿವರಿಸಿದರು.

೫೨ನೆಯ ಅಧ್ಯಾಯವು ಮುಗಿಯಿತು.

೫೩ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಋಷಿಗಳು ಕುರುಕ್ಷೇತ್ರದ ಎಲ್ಲೆ ಮತ್ತು ಮಹಿಮೆಗಳನ್ನು ವರ್ಣಿಸಿದುದು

ಜನಮೇಜಯ! ಕುರುಕ್ಷೇತ್ರದಲ್ಲಿದ್ದ ಋಷಿಗಳು ಬಲರಾಮನೊಡನೆ ಹೇಳುತ್ತಾರೆ :

"ಬಲರಾಮ! ಈ ಸಮಂತಪಂಚಕತೀರ್ಥಕ್ಷೇತ್ರವು ಸನಾತನವಾದ ಪುಣ್ಯಕ್ಷೇತ್ರವಾಗಿದೆ. ಇದನ್ನು ಪ್ರಜಾಪತಿಯ ಉತ್ತರವೇದಿಯೆಂದೂ ಕರೆಯುತ್ತಾರೆ. ಇಲ್ಲಿಯೇ ಹಿಂದೆ ಮಹಾ-ಮಹಾ ವರಗಳನ್ನು ಕೊಡುವ ದೇವತೆಗಳೇ ಸತ್ರಯಾಗವನ್ನು ಮಾಡಿರುವರು.

**ಪುರಾ ಚ ರಾಜರ್ಷಿವರೇಣ ಧೀಮತಾ**
**ಬಹೂನಿ ವರ್ಷಾಣ್ಯಮಿತೇನ ತೇಜಸಾ ।**
**ಪ್ರಕೃಷ್ಟಮೇತತ್ಕುರುಣಾ ಮಹಾತ್ಮನಾ**
**ತತಃ ಕುರುಕ್ಷೇತ್ರಮಿತೀಹ ಪಪ್ರಥೇ ॥೨॥**

ಈ ಕ್ಷೇತ್ರಕ್ಕೆ 'ಕುರುಕ್ಷೇತ್ರ' ಎಂಬ ಹೆಸರು ಬರಲೂ ಒಂದು ಐತಿಹ್ಯವಿದೆ. ಮಹಾತೇಜಸ್ವಿಯಾದ, ಬುದ್ಧಿವಂತನಾದ, ರಾಜರ್ಷಿಶ್ರೇಷ್ಠನಾದ, ಮಹಾತ್ಮನಾದ ಕುರುವು ಅನೇಕವರ್ಷಗಳವರೆಗೆ ಈ ಕ್ಷೇತ್ರವನ್ನು ಉಳುತ್ತಿದ್ದನು. ಆದುದರಿಂದ ಈ ಪ್ರದೇಶವು ಕುರುಕ್ಷೇತ್ರವೆಂದು ಪ್ರಸಿದ್ಧವಾಯಿತು."

ಬಲರಾಮನು ಪ್ರಶ್ನಿಸುತ್ತಾನೆ :

"ತಪೋಧನರೇ! ಮಹಾತ್ಮನಾದ, ರಾಜನಾದ ಕುರುವು ಈ ಕ್ಷೇತ್ರವನ್ನು ಏಕೆ ಉಳುತ್ತಿದ್ದನು? ನಿಮ್ಮಿಂದ ಈ ವಿಷಯವನ್ನು ತಿಳಿಯಲು ಅಪೇಕ್ಷಿಸುತ್ತೇನೆ."

"ರಾಮ! ನಿರಂತರವಾಗಿ ಶುಭಕಾರ್ಯಗಳನ್ನು ಮಾಡುವುದರಲ್ಲಿಯೇ ಉದ್ಯುಕ್ತನಾಗಿರುತ್ತಿದ್ದ ಮತ್ತು ಭೂಮಿಯನ್ನು ಉಳುತ್ತಿದ್ದ ಕುರುವನ್ನು ಹಿಂದೊಮ್ಮೆ ಇಂದ್ರನು ಸಂಧಿಸಿ ಹೀಗೆ ಉಳುತ್ತಿರುವುದಕ್ಕೆ ಕಾರಣವನ್ನು ಕೇಳಿದನು :

**ಕಿಮಿದಂ ವರ್ತತೇ ರಾಜನ್ಪ್ರಯತ್ನೇನ ಪರೇಣ ಚ ।**
**ರಾಜರ್ಷೇ ಕಿಮಭಿಪ್ರೇತಂ ಯೇನೇಯಂ ಕೃಷ್ಯತೇ ಕ್ಷಿತಿಃ ॥೫॥**

"ಮಹಾರಾಜ! ಯಾವ ಕಾರಣದಿಂದ ಈ ಮಹಾಪ್ರಯತ್ನವು ನಡೆಯುತ್ತಿದೆ? ಈ ಭೂಮಿಯನ್ನು ನೀನು ಸತತವಾಗಿ ಉಳುತ್ತಿರುವುದರ ಉದ್ದೇಶವಾದರೂ ಏನು?"

**ಇಹ ಯೇ ಪುರುಷಾಃ ಕ್ಷೇತ್ರೇ ಮರಿಷ್ಯನ್ತಿ ಶತಕ್ರತೋ ।**
**ತೇ ಗಮಿಷ್ಯನ್ತಿ ಸುಕೃತಾಂಲ್ಲೋಕಾನ್ಪಾಪವಿವರ್ಜಿತಾನ್ ॥೬॥**

"ಶತಕ್ರತುವೇ! ಈ ಕ್ಷೇತ್ರದಲ್ಲಿ ಯಾರು ಅಸುನೀಗುವರೋ–ಅವರು ಪಾಪರಹಿತವಾದ ಪುಣ್ಯಲೋಕಗಳಿಗೆ ಹೋಗುತ್ತಾರೆ. (ಹಾಗೆ ಹೋಗಲು ಸಾಧ್ಯವಾಗಲೆಂದೇ ನಾನು ಈ ಕ್ಷೇತ್ರವನ್ನು ಪ್ರಯತ್ನಪೂರ್ವಕವಾಗಿ ಉಳುತ್ತಿದ್ದೇನೆ.)" (ಉಳುವುದರಿಂದಲೇ ಅಲ್ಲಿ ಮರಣಹೊಂದಿದವರಿಗೆ ಪುಣ್ಯಲೋಕವು ಲಭಿಸುವುದೆಂದರೆ ಕುಚೋದ್ಯದ ವಿಷಯವೇ ಅಲ್ಲವೇ!!) ಇಂದ್ರನೂ ಹಾಗೆಯೇ ಕುರುರಾಜನನ್ನು ಅಪಹಾಸ್ಯಮಾಡಿ ಸ್ವರ್ಗಲೋಕಕ್ಕೆ ಹೊರಟುಹೋದನು. ಇತ್ತಲಾಗಿ ರಾಜರ್ಷಿಯಾದ ಕುರುವು ಇಂದ್ರನು ತೋರಿದ ಪ್ರತಿಕ್ರಿಯೆಯಿಂದ ಸ್ವಲ್ಪವೂ ವಿಷಣ್ಣನಾಗದೇ ಭೂಮಿಯನ್ನು ಯಥಾಪೂರ್ವವಾಗಿ ಉಳುತ್ತಲೇ ಇದ್ದನು. ಅತ್ತಲಾಗಿ ಇಂದ್ರನೂ ತನ್ನ ಪ್ರಯತ್ನವನ್ನು ನಿಲ್ಲಿಸಲಿಲ್ಲ. ಪದೇ-ಪದೇ ಕ್ಷೇತ್ರವನ್ನು ಉಳುತ್ತಿದ್ದ ಕುರುರಾಜನ ಸಮೀಪಕ್ಕೆ ಬರುತ್ತಿದ್ದನು. ಹಿಂದಿನಂತೆಯೇ ಪ್ರಶ್ನಿಸುತ್ತಿದ್ದನು. **'ಕಿಮಭಿಪ್ರೇತಂ ಯೇನೇಯಂ ಕೃಷ್ಯತೇ ಕ್ಷಿತಿಃ'** – 'ಯಾವ ಉದ್ದೇಶವನ್ನಿಟ್ಟುಕೊಂಡು ನೀನು ಈ ಕ್ಷೇತ್ರವನ್ನು ಉಳುತ್ತಿರುವೆ?' 'ಈ ಕ್ಷೇತ್ರದಲ್ಲಿ ಯಾರು ಮರಣಹೊಂದುವರೋ – ಅವರು ಪುಣ್ಯಲೋಕಗಳಿಗೆ ಹೋಗುವರು'–ಎಂದೇ ಕುರುರಾಜನು ಉತ್ತರಿಸುತ್ತಿದ್ದನು. ಆ

ಉತ್ತರವನ್ನು ಕೇಳಿದ ಇಂದ್ರನು ಗಹ-ಗಹಿಸಿ ನಕ್ಕು ಕುರುವನ್ನು ಅಪಹಾಸ್ಯ ಮಾಡಿ ಹೊರಟುಹೋಗುತ್ತಿದ್ದನು.

ಅನಂತರ ಕುರುವು ಉಗ್ರವಾದ ತಪಸ್ಸನ್ನು ಮಾಡಿಕೊಂಡೇ ಭೂಮಿಯನ್ನು ಉಳತೊಡಗಿದನು. ಆಗ ಇಂದ್ರನು, ರಾಜನು ಭೂಮಿಯನ್ನು ಉಳುತ್ತಿರುವುದರ ಉದ್ದೇಶವನ್ನು ದೇವತೆಗಳಿಗೆ ಹೇಳಿದನು. ಇಂದ್ರನು ಹೇಳಿದ ಮಾತನ್ನು ಕೇಳಿ ದೇವತೆಗಳು ಹೇಳಿದರು :

**ವರೇಣ ಚ್ಛನ್ದ್ಯತಾಂ ಶಕ್ರ ರಾಜರ್ಷಿರ್ಯದಿ ಶಕ್ಯತೇ ।**
**ಯದಿ ಹ್ಯತ್ರ ಪ್ರಮೀತಾ ವೈ ಸ್ವರ್ಗಂ ಗಚ್ಛನ್ತಿ ಮಾನವಾಃ ।**
**ಅಸ್ಮಾನನಿಷ್ಟ್ವಾ ಕ್ರತುಭಿರ್ಭಾಗೋ ನೋ ನ ಭವಿಷ್ಯತಿ ॥೧೧॥**

"ದೇವೇಂದ್ರ! ಸಾಧ್ಯವಾಗುವುದಾದರೆ ರಾಜರ್ಷಿಯನ್ನು ವರದಾನ ದಿಂದ ಅನುಕೂಲನನ್ನಾಗಿ ಮಾಡಿಕೋ. ಮನುಷ್ಯರು ಯಜ್ಞಗಳ ಮೂಲಕವಾಗಿ ನಮ್ಮನ್ನು ತೃಪ್ತಿಪಡಿಸದೇ ಆ ಕ್ಷೇತ್ರದಲ್ಲಿ ಮರಣಹೊಂದುವು ದರಿಂದಲೇ ಸ್ವರ್ಗವನ್ನು ಪಡೆದುಕೊಳ್ಳಲು ಸಾಧ್ಯವಾಗುವುದಾದರೆ, ಇನ್ನು ಮುಂದೆ ಯಜ್ಞಗಳೂ ನಡೆಯುವುದಿಲ್ಲ ; ಯಜ್ಞದ ಹವಿರ್ಭಾಗಗಳೂ ನಮಗೆ ಸಿಕ್ಕುವುದಿಲ್ಲ."

ದೇವತೆಗಳ ಸಲಹೆಯಂತೆ ಪುನಃ ಇಂದ್ರನು ಕುರುರಾಜನ ಬಳಿಗೆ ಬಂದು ಹೇಳಿದನು :

"ಕುರುರಾಜ! ನೀನಿನ್ನು ವೃಥಾ ಕಷ್ಟಪಡಬೇಡ. ನನ್ನ ಮಾತಿನಂತೆ ನಡೆದುಕೊ.

**ಮಾನವಾ ಯೇ ನಿರಾಹಾರಾ ದೇಹಂ ತ್ಯಕ್ಷ್ಯನ್ತ್ಯತನ್ದ್ರಿತಾಃ ॥೧೨॥**

**ಯುಧಿ ವಾ ನಿಹತಾಃ ಸಮ್ಯಗಪಿ ತಿರ್ಯಗ್ಗತಾ ನೃಪ ।**
**ತೇ ಸ್ವರ್ಗಭಾಜೋ ರಾಜೇನ್ದ್ರ ಭವಿಷ್ಯನ್ತಿ ಮಹಾಮತೇ ॥೧೩॥**

"(ನಿನ್ನ ಉದ್ದೇಶದಂತೆ ಇಲ್ಲಿ ಮರಣಹೊಂದುವವರೆಲ್ಲರೂ ಸ್ವರ್ಗ ಲೋಕಕ್ಕೆ ಬರಲು ಸಾಧ್ಯವಾಗುವುದಿಲ್ಲ.) ಮನುಷ್ಯರಲ್ಲಿಯೇ ಆಗಲೀ ಪಶು-ಪಕ್ಷಿಗಳಲ್ಲಿಯೇ ಆಗಲೀ–ಯಾರು ಆಹಾರವನ್ನು ಬಿಟ್ಟು ಸ್ವಲ್ಪವಾದರೂ ಆಲಸ್ಯವಿಲ್ಲದೇ ಉಪವಾಸವ್ರತನಿಷ್ಠರಾಗಿ ಈ ಕ್ಷೇತ್ರದಲ್ಲಿ ಪ್ರಾಣಬಿಡು

ತ್ತಾರೆಯೋ ಮತ್ತು ಯಾರು ಯುದ್ಧಮಾಡುವಾಗ ಪ್ರಾಣತ್ಯಾಗಮಾಡು ತ್ತಾರೆಯೋ-ಅವರೆಲ್ಲರೂ ಸ್ವರ್ಗಲೋಕದ ಸುಖಕ್ಕೆ ಭಾಗಿಗಳಾಗುತ್ತಾರೆ."

ಇಂದ್ರನಿಂದ ಅಂತಹ ವರವನ್ನು ಪಡೆದುಕೊಂಡ ಕುರುರಾಜನು ಹಾಗೆಯೇ ಆಗಲೆಂದನು. ಬಳಿಕ ಇಂದ್ರನು ಕುರುರಾಜನ ಅನುಮತಿಯನ್ನು ಪಡೆದುಕೊಂಡು ಸಂತುಷ್ಟಾಂತರಂಗನಾಗಿ ಬಹಳ ಬೇಗ ಸ್ವರ್ಗಕ್ಕೆ ಹೊರಟುಹೋದನು.

ಬಲರಾಮ! ಈ ಕುರುಕ್ಷೇತ್ರದಲ್ಲಿ ಸತ್ತವರೆಲ್ಲರಿಗೂ ಸ್ವರ್ಗವು ಸಿಕ್ಕಲೆಂಬ ಉದ್ದೇಶದಿಂದಲೇ ಕುರುಮಹಾರಾಜನು ಉಗ್ರತಪಸ್ಸನ್ನು ಮಾಡುತ್ತಾ ಭೂಮಿಯನ್ನುಳುತ್ತಿದ್ದನು. ನಾನು ಹೇಳಿದಂತೆ ಬ್ರಹ್ಮೇಂದ್ರಾದಿ ದೇವತೆಗಳು ಅವನ ಆಶಯವನ್ನು ಸ್ವಲ್ಪ ವ್ಯತ್ಯಾಸದಿಂದ ಈಡೇರಿಸಿ ಕೊಟ್ಟರು.

ನಾತಃ ಪರತರಂ ಪುಣ್ಯಂ ಭೂಮೇಃ ಸ್ಥಾನಂ ಭವಿಷ್ಯತಿ ।
ಇಹ ತಪ್ಸ್ಯನ್ತಿ ಯೇ ಕೇಚಿತ್ತಪಃ ಪರಮಕಂ ನರಾಃ ।
ದೇಹತ್ಯಾಗೇನ ತೇ ಸರ್ವೇ ಯಾಸ್ಯನ್ತಿ ಬ್ರಹ್ಮಣಃ ಕ್ಷಯಮ್ ॥೧೭॥

ಭೂಮಿಯಲ್ಲಿ ಈ ಕ್ಷೇತ್ರಕ್ಕಿಂತಲೂ ಪುಣ್ಯತರವಾದ ಮತ್ತೊಂದು ಕ್ಷೇತ್ರವಿಲ್ಲ. ಯಾವ ಮಾನವರಿಲ್ಲಿ ಶ್ರೇಷ್ಠವಾದ ತಪಸ್ಸನ್ನು ಮಾಡುತ್ತಾ ರೆಯೋ–ಅವರೆಲ್ಲರೂ ದೇಹತ್ಯಾಗಾನಂತರದಲ್ಲಿ ಬ್ರಹ್ಮಪದಕ್ಕೆ ಹೋಗುತ್ತಾರೆ.

ಯೇ ಪುನಃ ಪುಣ್ಯಭಾಜೋ ವೈ ದಾನಂ ದಾಸ್ಯನ್ತಿ ಮಾನವಾಃ ।
ತೇಷಾಂ ಸಹಸ್ರಗುಣಿತಂ ಭವಿಷ್ಯತ್ಯಚಿರೇಣ ವೈ ॥೧೮॥

ಪುಣ್ಯಾತ್ಮರಾದ ಯಾವ ಮನುಷ್ಯರು ಇಲ್ಲಿ ಸತ್ಪಾತ್ರರಿಗೆ ದಾನಕೊಡುತ್ತಾರೆಯೋ–ಅವರು ಕೊಟ್ಟ ದಾನದ ಫಲವು ಅನ್ಯತೀರ್ಥ ಕ್ಷೇತ್ರಗಳಲ್ಲಿ ಕೊಟ್ಟ ದಾನದ ಫಲಕ್ಕಿಂತಲೂ ಸಾವಿರಪಟ್ಟು ಹೆಚ್ಚಾಗುತ್ತದೆ ಮತ್ತು ಕ್ಷಿಪ್ರವಾಗಿಯೂ ಫಲವನ್ನೀಯುತ್ತದೆ.

ಯೇ ಚೇಹ ನಿತ್ಯಂ ಮನುಜಾ ನಿವತ್ಸ್ಯನ್ತಿ ಶುಭೈಷಿಣಃ ।
ಯಮಸ್ಯ ವಿಷಯಂ ತೇ ತು ನ ದ್ರಕ್ಷ್ಯನ್ತಿ ಕದಾಚನ ॥೧೯॥

ಶುಭಕಾಮನೆಯುಳ್ಳ ಯಾವ ಮನುಷ್ಯರು ಇಲ್ಲಿಯೇ ಜೀವನಪರ್ಯಂತ

ವಾಸಮಾಡುತ್ತಾರೆಯೋ–ಅಂತಹವರು ಯಮನ ರಾಜ್ಯವನ್ನು ಯಾವುದೇ ಕಾರಣದಿಂದಲೂ ಸಂದರ್ಶಿಸುವುದಿಲ್ಲ.

**ಯಕ್ಷ್ಯನ್ತಿ ಯೇ ಚ ಕ್ರತುಭಿರ್ಮಹದ್ಭಿರ್ಮನುಜೇಶ್ವರಾಃ ।**
**ತೇಷಾಂ ತ್ರಿವಿಷ್ಟಪೇ ವಾಸೋ ಯಾವದ್ಭೂಮಿರ್ಧರಿಷ್ಯತಿ ॥೨೦॥**

ಯಾವ ರಾಜ-ಮಹಾರಾಜರು ಈ ಪುಣ್ಯಕ್ಷೇತ್ರದಲ್ಲಿ ದೊಡ್ಡ-ದೊಡ್ಡ ಯಾಗಗಳಿಂದ ದೇವತೆಗಳನ್ನು ಆರಾಧಿಸುತ್ತಾರೆಯೋ–ಅವರಿಗೆ ಪೃಥ್ವಿಯು ಇರುವವರೆಗೂ ಸ್ವರ್ಗದಲ್ಲಿಯೇ ಸ್ಥಾನವು ಸಿಕ್ಕುತ್ತದೆ.

ಬಲರಾಮ! ಸ್ವತಃ ದೇವರಾಜನಾದ ಇಂದ್ರನೇ ಈ ಕುರುಕ್ಷೇತ್ರಕ್ಕೆ ಸಂಬಂಧಿಸಿದಂತೆ ಹಾಡಿರುವ ಈ ಶ್ಲೋಕಗಳನ್ನು ಕೇಳು.

**ಪಾಂಸವೋಽಪಿ ಕುರುಕ್ಷೇತ್ರಾದ್ವಾಯುನಾ ಸಮುದೀರಿತಾಃ ।**
**ಅಪಿ ದುಷ್ಕೃತಕರ್ಮಾಣಂ ನಯನ್ತಿ ಪರಮಾಂ ಗತಿಮ್ ॥೨೧॥**

'ಕುರುಕ್ಷೇತ್ರಪ್ರದೇಶದಿಂದ ವಾಯುವಿನ ಮೂಲಕವಾಗಿ ಒಯ್ಯಲ್ಪಡುವ ಧೂಳಿನ ಕಣಗಳೂ ಯಾವನ ತಲೆಯ ಮೇಲೆ ಬೀಳುವುವೋ– ಅವನು ಬಲು ಕೆಟ್ಟಕೆಲಸಗಳನ್ನು ಮಾಡುವವನೇ ಆಗಿದ್ದರೂ–ಅವನನ್ನೂ ಪರಮಪದಕ್ಕೆ ಒಯ್ಯುತ್ತವೆ.

**ಸುರರ್ಷಭಾ ಬ್ರಾಹ್ಮಣಸತ್ತಮಾಶ್ಚ**
**ತಥಾ ನೃಗಾದ್ಯಾ ನರದೇವಮುಖ್ಯಾಃ ।**
**ಇಷ್ಟ್ವಾ ಮಹಾರ್ಹೈಃ ಕ್ರತುಭಿರ್ನೃಸಿಂಹಾಃ**
**ಸಂತ್ಯಜ್ಯ ದೇಹಾನ್ಸುಗತಿಂ ಪ್ರಪನ್ನಾಃ ॥೨೩॥**

ದೇವಶ್ರೇಷ್ಠರೇ! ಈ ಕುರುಕ್ಷೇತ್ರದಲ್ಲಿ ಬ್ರಾಹ್ಮಣಶ್ರೇಷ್ಠರೂ ಮತ್ತು ನೃಗನೇ ಮೊದಲಾದ ರಾಜಶ್ರೇಷ್ಠರೂ ದೊಡ್ಡ-ದೊಡ್ಡ ಯಜ್ಞಗಳನ್ನು ಮಾಡುತ್ತಿದ್ದು ದೇಹಪರಿತ್ಯಾಗಮಾಡಿ ಅನಂತರ ಉತ್ತಮಗತಿಯನ್ನು ಪಡೆದಿರುತ್ತಾರೆ.

**ತರನ್ತುಕಾರನ್ತುಕಯೋರ್ಯದನ್ತರಂ**
**ರಾಮಹ್ರದಾನಾಂ ಚ ಮಚಕ್ರುಕಸ್ಯ ಚ ।**

ಏತತ್ಕುರುಕ್ಷೇತ್ರಸಮನ್ತಪಞ್ಚಕಂ
ಪ್ರಜಾಪತೇರುತ್ತರವೇದಿರುಚ್ಯತೇ ॥೨೪॥

ತರಂತುಕ, ಅರಂತುಕ, ರಾಮಹ್ರದ (ಪರಶುರಾಮಕುಂಡ) ಮತ್ತು ಮಚಕ್ರುಕ–ಈ ಕ್ಷೇತ್ರಗಳ ಮಧ್ಯಭಾಗದಲ್ಲಿ ಯಾವ ಭೂಭಾಗವಿರುವುದೋ ಅದೇ ಕುರುಕ್ಷೇತ್ರ ಅಥವಾ ಸಮಂತಪಂಚಕಕ್ಷೇತ್ರವಾಗಿದೆ. ಈ ಕುರುಕ್ಷೇತ್ರ ಅಥವಾ ಸಮಂತಪಂಚಕವನ್ನೇ ಪ್ರಜಾಪತಿಯ ಉತ್ತರವೇದಿ ಎಂದೂ ಕರೆಯುತ್ತಾರೆ.

ಶಿವಂ ಮಹಾಪುಣ್ಯಮಿದಂ ದಿವೌಕಸಾಂ
ಸುಸಮ್ಮತಂ ಸರ್ವಗುಣೈಃ ಸಮನ್ವಿತಮ್ ।
ಅತಶ್ಚ ಸರ್ವೇ ನಿಹತಾ ನೃಪಾ ರಣೇ
ಯಾಸ್ಯನ್ತಿ ಪುಣ್ಯಾಂ ಗತಿಮಕ್ಷಯಾಂ ಸದಾ ॥೨೫॥

ಮಹಾಪುಣ್ಯೋಪೇತವಾದ, ಮಂಗಳಕರವಾದ ಈ ದಿವ್ಯಕ್ಷೇತ್ರವು ದೇವತೆಗಳಿಗೆ ಪರಮಪ್ರಿಯವೂ–ಸರ್ವಗುಣಸಂಪನ್ನವೂ ಆಗಿದೆ. ಆದುದರಿಂದಲೇ ಇಲ್ಲಿ ಯುದ್ಧದಲ್ಲಿ ಮಡಿದ ಎಲ್ಲ ರಾಜರೂ ಅಕ್ಷಯವಾದ ಪುಣ್ಯಲೋಕಗಳಿಗೆ ಹೋಗುತ್ತಾರೆ.”

ಬಲಭದ್ರ! ಬ್ರಹ್ಮನೇ ಮೊದಲಾದ ದೇವತೆಗಳೊಡನಿದ್ದ ಇಂದ್ರನೇ ಸ್ವತಃ ಈ ಮಾತುಗಳನ್ನು ಹೇಳಿರುವನು. ಅವನ ಅಭಿಪ್ರಾಯವನ್ನು ಬ್ರಹ್ಮ-ವಿಷ್ಣು-ಮಹೇಶ್ವರರೂ ಅನುಮೋದಿಸಿರುವರು.”

ಐ೩ನೆಯ ಅಧ್ಯಾಯವು ಮುಗಿಯಿತು.

ಐ೪ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಪ್ಲಕ್ಷಪ್ರಸ್ರವಣತೀರ್ಥಗಳ ಮತ್ತು ಸರಸ್ವತಿಯ ಮಹಿಮೆ : ನಾರದರು ಕೌರವರ ವಿನಾಶವನ್ನೂ, ದುರ್ಯೋಧನ-ಭೀಮಸೇನರ ಯುದ್ಧಪ್ರಸಂಗವನ್ನೂ ಬಲರಾಮನಿಗೆ ತಿಳಿಸಿದುದು : ಯುದ್ಧವನ್ನು ನೋಡುವ ಸಲುವಾಗಿ ಬಲರಾಮನು ತೆರಳಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

“ಜನಮೇಜಯಮಹಾರಾಜ! ಸಾತ್ವತವಂಶಜನಾದ ಬಲರಾಮನು

ಕುರುಕ್ಷೇತ್ರವನ್ನು ಸಂದರ್ಶಿಸಿ, ಆ ಕ್ಷೇತ್ರದಲ್ಲಿ ಮಾಡಬೇಕಾದ ದಾನ-ಧರ್ಮಗಳೆಲ್ಲವನ್ನೂ ಮಾಡಿ ಮುಗಿಸಿ, ಆ ಕ್ಷೇತ್ರದಲ್ಲಿಯೇ ಇದ್ದ ಒಂದು ದಿವ್ಯವಾದ ಮತ್ತು ಮಹತ್ತ್ವಪೂರ್ಣವಾದ ಆಶ್ರಮಕ್ಕೆ ತೆರಳಿದನು. ಆ ಪುಣ್ಯಾಶ್ರಮದ ಸುತ್ತಲೂ ಹಿಪ್ಪೆ, ಮಾವು, ಅಶ್ವತ್ಥ, ಆಲ, ಚಿರಬಿಲ್ವ, ಹಲಸು, ಮತ್ತಿ–ಇವೇ ಮೊದಲಾದ ವೃಕ್ಷಗಳಿದ್ದು ಆ ಆಶ್ರಮಕ್ಕೆ ಶೋಭೆಯನ್ನುಂಟುಮಾಡುತ್ತಿದ್ದುವು.

ಪುಣ್ಯದಾಯಕವಾದ ಲಕ್ಷಣಗಳಿಂದ ಕೂಡಿದ್ದ, ಅತ್ಯಂತಶ್ರೇಷ್ಠ ತಮವಾಗಿ ಕಾಣುತ್ತಿದ್ದ ಆ ಆಶ್ರಮವನ್ನು ನೋಡಿದ ಬಲಭದ್ರನು ಸುಂದರ ವಾದ ಪುಣ್ಯೋಪೇತವಾದ ಈ ಆಶ್ರಮವು ಯಾರದ್ದೆಂದು ಅಲ್ಲಿದ್ದ ಋಷಿ ಗಳನ್ನು ಪ್ರಶ್ನಿಸಿದನು.

ಆ ಎಲ್ಲ ಋಷಿಗಳೂ ಮಹಾತ್ಮರಾದ ಹಲಾಯುಧನನ್ನು ಕುರಿತು ಹೇಳಿದರು :

“ಬಲಭದ್ರ! ಹಿಂದೆ ಈ ಆಶ್ರಮವು ಯಾರದ್ದಾಗಿತ್ತೆಂಬುದನ್ನು ವಿಸ್ತಾರವಾಗಿ ಹೇಳುವೆವು, ಕೇಳು. ಈ ಪುಣ್ಯಕ್ಷೇತ್ರದಲ್ಲಿ ಹಿಂದೆ ಮಹಾ ವಿಷ್ಣುವು ಉತ್ತಮೋತ್ತಮವಾದ ತಪಸ್ಸನ್ನು ಮಾಡಿದನು. ಸನಾತನವಾದ ಅನೇಕಯಜ್ಞಗಳನ್ನೂ ಇಲ್ಲಿಯೇ ವಿಧಿವತ್ತಾಗಿ ನೆರವೇರಿಸಿದನು. ಇಲ್ಲಿ ಕೌಮಾರಾವಸ್ಥೆಯಿಂದಲೇ ಬ್ರಹ್ಮಚರ್ಯವ್ರತವನ್ನು ಅನುಷ್ಠಾನಮಾಡುತ್ತಿದ್ದ, ತಪಸ್ವಿನಿಯಾಗಿದ್ದ, ತಪಸ್ಸಿನಲ್ಲಿ ಸಿದ್ಧಿಯನ್ನೂ ಪಡೆದಿದ್ದ ಬ್ರಾಹ್ಮಣಿಯೊಬ್ಬಳು ಇದ್ದಳು. ಅವಳು ಯೋಗಯುಕ್ತಳಾಗಿ ಸ್ವರ್ಗಕ್ಕೆ ಹೊರಟುಹೋದಳು. ತೇಜೋವಿಶಿಷ್ಟಳಾಗಿದ್ದ, ಅನೇಕವ್ರತಗಳನ್ನು ಆಚರಿಸುತ್ತಿದ್ದ, ಬ್ರಹ್ಮಚರ್ಯ ವ್ರತವನ್ನು ಪಾಲಿಸುತ್ತಿದ್ದ, ನಿಯತಾಹಾರ–ವಿಹಾರವುಳ್ಳವಳಾಗಿದ್ದ, ಸಾಧ್ವಿಯಾಗಿದ್ದ, ಮಹಾತ್ಮರಾದ ಶಾಂಡಿಲ್ಯನ ಮಗಳಾದ ಅವಳು ಈ ಆಶ್ರಮದಲ್ಲಿಯೇ ಇದ್ದಳು. ಮಹಾಭಾಗಿನಿಯಾದ ಅವಳು ಸ್ತ್ರೀಜನರಿಂದ ಆಚರಿಸಲು ದುಸ್ಸಾಧ್ಯವಾದ ಘೋರವಾದ ತಪಸ್ಸನ್ನು ಮಾಡಿ ದೇವತೆ ಗಳಿಂದಲೂ-ಬ್ರಾಹ್ಮಣರಿಂದಲೂ ಪೂಜಿತಳಾಗಿ ಸ್ವರ್ಗಕ್ಕೆ ಹೋದಳು.”

ಜನಮೇಜಯ! ಋಷಿಗಳು ಹೇಳಿದ ಮಾತುಗಳನ್ನು ಕೇಳಿ ಬಲರಾಮನು ಸಂತುಷ್ಟಾಂತರಂಗನಾಗಿ ಆ ದಿವ್ಯಾಶ್ರಮಕ್ಕೆ ಹೋದನು.

ಹಿಮಾಲಯದ ಪಾರ್ಶ್ವದಲ್ಲಿದ್ದ ಆ ಆಶ್ರಮದಲ್ಲಿದ್ದ ಮಹರ್ಷಿಗಳಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಎಲ್ಲ ಸಂಧ್ಯಾಕಾರ್ಯಗಳನ್ನೂ ಅಲ್ಲಿಯೇ ಮುಗಿಸಿಕೊಂಡು, ತನ್ನ ಅನುಯಾಯಿಗಳೊಡನೆ ಪ್ಲಕ್ಷಪ್ರಸ್ರವಣ ಪರ್ವತಶಿಖರವನ್ನು ಹತ್ತಲು ಉಪಕ್ರಮಿಸಿದನು. ತಾಲಧ್ವಜನಾದ, ಮಹಾಬಲಿಷ್ಠನಾದ ಬಲರಾಮನು ಸ್ವಲ್ಪ ಎತ್ತರಕ್ಕೆ ಹತ್ತುತ್ತಿದ್ದಂತೆಯೇ ಅಲ್ಲಿದ್ದ ಪುಣ್ಯೋಪೇತವಾದ, ಶ್ರೇಷ್ಠವಾದ (ಸರಸ್ವತೀನದಿಯ ಮೂಲಸ್ಥಾನವಾದ) ಪ್ಲಕ್ಷಪ್ರಸ್ರವಣವೆಂಬ ತೀರ್ಥವನ್ನೂ ಮತ್ತು ಸರಸ್ವತೀನದಿಯ ಪ್ರಭಾವವನ್ನೂ ಕಂಡು ಆಶ್ಚರ್ಯಭರಿತನಾದನು. ಅಲ್ಲಿಂದ ಮುಂದೆ ಬಲರಾಮನು ಉತ್ತಮೋತ್ತಮವಾದ ಮತ್ತು ಶ್ರೇಷ್ಠವಾದ ಕಾರಪವನವೆಂಬ ತೀರ್ಥಕ್ಕೆ ಹೋದನು. ಮಹಾಬಲನಾದ, ರಣದುರ್ಮದನಾದ ಹಲಾಯುಧನು ಅಲ್ಲಿಯೂ ದಾನವನ್ನು ಕೊಟ್ಟು ಪುಣ್ಯೋಪೇತವಾದ, ಸುಶೀತಲವಾದ, ಪರಿಶುದ್ಧವಾದ, ಶುಚಿಯಾಗಿದ್ದ ಆ ತೀರ್ಥದಲ್ಲಿ ಸ್ನಾನಮಾಡಿ ದೇವ-ಪಿತೃಗಳನ್ನು ಅರ್ಚನ-ತರ್ಪಣಾದಿಗಳಿಂದ ಸಂತೃಪ್ತಿಗೊಳಿಸಿದನು. ಆ ಕಾರಪವನತೀರ್ಥದಲ್ಲಿಯೇ ಯತಿಗಳೊಡನೆಯೂ ಮತ್ತು ಬ್ರಾಹ್ಮಣರೊಡನೆಯೂ ಒಂದು ರಾತ್ರಿಯನ್ನು ಕಳೆದು ಬೆಳಗಾಗುತ್ತಲೇ ಪುಣ್ಯೋಪೇತವಾದ ಮಿತ್ರಾವರುಣರ ಆಶ್ರಮಕ್ಕೆ ಪ್ರಯಾಣಮಾಡಿದನು. ಕಾರಪವನಕ್ಷೇತ್ರದಿಂದ ಹೊರಟ ಬಲರಾಮನು ಇಂದ್ರ, ಅಗ್ನಿ ಮತ್ತು ಅರ್ಯಮರು ಹಿಂದೆ ಯಾವ ಪುಣ್ಯತೀರ್ಥದ ಅವಗಾಹನದಿಂದ ಪ್ರಸನ್ನತೆಯನ್ನು ಪಡೆದುಕೊಂಡರೋ–ಅಂತಹ ಪುಣ್ಯತೀರ್ಥವಿರುವ ಯಮುನಾನದೀತೀರಕ್ಕೆ ಪ್ರಯಾಣಮಾಡಿದನು.

ಆ ಪುಣ್ಯತೀರ್ಥದಲ್ಲಿಯೂ ಬಲರಾಮನು ಸ್ನಾನಮಾಡಿ ಹೆಚ್ಚು ಪ್ರಸನ್ನತೆಯನ್ನು ಪಡೆದುಕೊಂಡನು. ಬಳಿಕ ಮಹಾಬಲನಾದ ಯದುಶ್ರೇಷ್ಠನಾದ ಬಲರಾಮನು ಋಷಿಗಳಿಂದಲೂ ಮತ್ತು ಸಿದ್ಧರಿಂದಲೂ ಕಲೆತು ಉತ್ತಮೋತ್ತಮವಾದ ಕಥೆಗಳನ್ನು ಕೇಳುತ್ತಿದ್ದನು. ಬಲರಾಮಾದಿಗಳು ಕಥೆಗಳನ್ನು ಕೇಳುತ್ತಾ ಕುಳಿತಿರಲಾಗಿ ಭಗವಾನ್ ನಾರದಮಹರ್ಷಿಗಳು ಬಲರಾಮನಿದ್ದ ಸ್ಥಳಕ್ಕೆ ಆಗಮಿಸಿದರು.

**ಜಟಾಮಣ್ಡಲಸಂವೀತಃ ಸ್ವರ್ಣಚೀರೋ ಮಹಾತಪಾಃ ।**

**ಹೇಮದಣ್ಡಧರೋ ರಾಜನ್ಕಮಣ್ಡಲುಧರಸ್ತಥಾ ।**
**ಕಚ್ಛಪೀಂ ಸುಖಶಬ್ದಾಂ ತಾಂ ಗೃಹ್ಯ ವೀಣಾಂ ಮನೋರಮಾಮ್ ॥**

ಜನಮೇಜಯ! ಮಹಾತಪಸ್ವಿಗಳಾದ ನಾರದರು ಜಟಾಮಂಡಲದಿಂದ ಸಮಲಂಕೃತರಾಗಿದ್ದರು. ಸುವರ್ಣವರ್ಣದ ನಾರುಮಡಿಯನ್ನು ಧರಿಸಿದ್ದರು. ಸುವರ್ಣಮಯವಾದ ದಂಡವನ್ನೂ ಮತ್ತು ಕಮಂಡಲುವನ್ನೂ



ಹಿಡಿದಿದ್ದರು. ಮನಸ್ಸಿಗೆ ಉಲ್ಲಾಸವನ್ನುಂಟುಮಾಡುತ್ತಿದ್ದ, ಕಿವಿಗಳಿಗೆ ಇಂಪಾಗುವಂತಹ ಶಬ್ದದಿಂದ ಕೂಡಿದ್ದ 'ಕಚ್ಛಪೀ' ಎಂಬ ವೀಣೆಯನ್ನು ಹಿಡಿದುಕೊಂಡು ಬಲರಾಮನು ಕಥೆಯನ್ನು ಕೇಳುತ್ತಾ ಕುಳಿತಿದ್ದ ಸ್ಥಳಕ್ಕೆ ಆಗಮಿಸಿದರು.

**ನೃತ್ಯೇ ಗೀತೇ ಚ ಕುಶಲೋ ದೇವಬ್ರಾಹ್ಮಣಪೂಜಿತಃ ।**
**ಪ್ರಕರ್ತಾ ಕಲಹಾನಾಂ ಚ ನಿತ್ಯಂ ಚ ಕಲಹಪ್ರಿಯಃ ॥೨೦॥**

ದೇವ-ಬ್ರಾಹ್ಮಣರಿಂದ ಸತ್ಕೃತರಾದ, ನೃತ್ಯ ಮತ್ತು ಗೀತಗಳಲ್ಲಿ ಮಹಾಕುಶಲರಾಗಿದ್ದ, ಯಾವಾಗಲೂ ಜಗಳವಾಡಿಸುವುದರಲ್ಲಿಯೇ ಹೆಚ್ಚಿನ ಪ್ರೀತಿಯುಳ್ಳವರಾಗಿದ್ದ ನಾರದರು ಅನುದಿನವೂ ಲೋಕಕಲ್ಯಾಣಾರ್ಥವಾಗಿ ಯಾವುದಾದರೂ ಕಲಹಗಳನ್ನು ಎರಡೂ ಪಕ್ಷಗಳ ಮಧ್ಯದಲ್ಲಿ ಹಚ್ಚಿಡುತ್ತಲೇ ಇರುತ್ತಿದ್ದರು.

ಅಂತಹ ಕಲಹಪ್ರಿಯರಾದ ನಾರದರು, ಬಲರಾಮನು ಸಿದ್ಧರ್ಷಿಗಳೊಡನೆ ಕುಳಿತಿದ್ದ ಸ್ಥಳಕ್ಕೆ ಆಗಮಿಸಿದರು. ನಾರದರು ಆಗಮಿಸಿದೊಡನೆಯೇ ಬಲರಾಮನು ಸಿದ್ಧರ್ಷಿಗಳೊಡನೆ ಪ್ರತ್ಯುತ್ಥಾನಮಾಡಿ ವ್ರತಪರಿಪಾಲನನಿಷ್ಠರಾದ, ದೇವರ್ಷಿಗಳಾದ ನಾರದರನ್ನು ಯಥೋಚಿತವಾಗಿ ಸತ್ಕರಿಸಿ ಅನಂತರ ಕುರುಗಳ ಸಮಾಚಾರವೇನೆಂದು ಪ್ರಶ್ನಿಸಿದನು. ಸರ್ವಧರ್ಮಗಳನ್ನೂ ತಿಳಿದಿದ್ದ ನಾರದರು ಕುರುಗಳ ವಿನಾಶವು ಯಾವ ರೀತಿಯಲ್ಲಿ ಆಯಿತೆಂಬುದನ್ನು ಯಥಾವತ್ತಾಗಿ ಬಲರಾಮನೊಡನೆ ಹೇಳಿದರು. ನಾರದರ ಮಾತನ್ನು ಕೇಳಿ ಬಲರಾಮನ ಮನಸ್ಸಿಗೆ ಬಹಳ ಖೇದವುಂಟಾಯಿತು. ದೀನವಾದ ಮಾತಿನಿಂದ ರೌಹಿಣೇಯನು ನಾರದರಿಗೆ ಹೇಳಿದನು :

“ನಾರದರೇ! ಕ್ಷತ್ರಿಯವಂಶಕ್ಕೇ ಎಂತಹ ದುರವಸ್ಥೆಯುಂಟಾಯಿತು! ಅಲ್ಲಿದ್ದ ರಾಜರ ಅವಸ್ಥೆಯೇನಾಯಿತು? ತಪೋಧನರೇ! ಈ ಎಲ್ಲ ವಿಷಯಗಳನ್ನೂ ನಾನು ಈ ಹಿಂದೆಯೇ ಅಲ್ಲಲ್ಲಿ ಕೇಳುತ್ತಲೇ ಇದ್ದೆನು. ಆದರೂ ಕುರುವಿನಾಶದ ವಿಷಯವನ್ನು ಇನ್ನೂ ವಿಶದವಾಗಿ ತಮ್ಮಿಂದ ಕೇಳಿ ತಿಳಿಯಲು ಅತ್ಯಂತಕುತೂಹಲಿಯಾಗಿದ್ದೇನೆ.”

“ಬಲಭದ್ರ! ಎಲ್ಲರಿಗಿಂತಲೂ ಮೊದಲೇ ಭೀಷ್ಮನು ಹತನಾದನು. ದ್ರೋಣರು, ಸೈಂಧವ, ವೈಕರ್ತನಕರ್ಣ, ಮಹಾರಥರಾದ ಕರ್ಣನ ಮಕ್ಕಳು, ಭೂರಿಶ್ರವಸ, ವೀರ್ಯವಂತನಾದ ಶಲ್ಯ–ಇವರೆಲ್ಲರೂ ಹತರಾಗಿ ಹೋದರು. ಇವರೇ ಅಲ್ಲದೆ ಮಹಾಬಲಿಷ್ಠರಾದ, ಯುದ್ಧದಲ್ಲಿ ಹಿಂದಿರುಗದೇ

ಇದ್ದ ಇನ್ನೂ ಅನೇಕರಾಜರೂ ಮತ್ತು ರಾಜಪುತ್ರರೂ ದುರ್ಯೋಧನನ ವಿಜಯದ ಸಲುವಾಗಿ ತಮ್ಮ ಪ್ರಿಯವಾದ ಪ್ರಾಣಗಳನ್ನೂ ಪರಿತ್ಯಜಿಸಿ ಸ್ವರ್ಗಲೋಕಕ್ಕೆ ಹೊರಟುಹೋದರು. ಮಹಾಬಾಹುವೇ! ಮಾಧವ! ಕೌರವನ ಪಕ್ಷದಲ್ಲಿ ಹತರಾಗದೇ ಉಳಿದಿರುವವರು ಯಾರೆಂಬುದನ್ನು ಹೇಳುವೆನು; ಕೇಳು. ದುರ್ಯೋಧನನ ಸೈನ್ಯದಲ್ಲಿ ಶತ್ರುಸಂಹಾರಕರಾದ ಕೃಪರು, ಕೃತವರ್ಮಾ ಮತ್ತು ವೀರ್ಯವಂತನಾದ ದ್ರೋಣರ ಮಗ ಅಶ್ವತ್ಥಾಮಾ–ಈ ಮೂವರು ಮಾತ್ರವೇ ಉಳಿದುಕೊಂಡಿರುತ್ತಾರೆ. ಆ ಮೂವರೂ ಆ ಸಮಯದಲ್ಲಿ ಪಾಂಡವರ ಭಯದಿಂದಾಗಿ ಹತ್ತು ದಿಕ್ಕುಗಳಿಗೂ ಓಡಿಹೋದರು. ಸೇನಾಪತಿಯಾಗಿದ್ದ ಶಲ್ಯನೂ ಹತನಾಗ ಲಾಗಿ, ಅಳಿದುಳಿದಿದ್ದ ಕೃಪರೇ ಮೊದಲಾದ ಮೂವರು ಮಹಾರಥರೂ ಪಲಾಯನಮಾಡಲಾಗಿ ಅತ್ಯಂತದುಃಖಿತನಾದ ದುರ್ಯೋಧನನು ದ್ವೈಪಾಯನವೆಂಬ ಸರೋವರವನ್ನು ಪ್ರವೇಶಿಸಿದನು. ಸ್ತಂಭಿತವಾದ ನೀರಿನಲ್ಲಿ ಮಲಗಿದ್ದ ದುರ್ಯೋಧನನನ್ನು ಪಾಂಡವರು ಶ್ರೀಕೃಷ್ಣನೊಡನೆ ಕೂಡಿಕೊಂಡು ಉಗ್ರವಾದ ಮಾತುಗಳಿಂದ ಪೀಡಿಸಿದರು. ಪಾಂಡವರ ವಾಗ್ಬಾಣಗಳಿಂದ ನಾಲ್ಕು ಕಡೆಗಳಿಂದಲೂ ಚುಚ್ಚಲ್ಪಟ್ಟ, ಬಲಿಷ್ಠನಾದ, ವೀರನಾದ ದುರ್ಯೋಧನನು ಮಹಾಗದೆಯನ್ನು ಕೈಯಲ್ಲೆತ್ತಿಕೊಂಡು ಸರೋವರದಿಂದ ಮೇಲೆದ್ದು ಬಂದನು. ಈ ಸಮಯದಲ್ಲಿ ದುರ್ಯೋಧನನು ಭೀಮಸೇನನೊಡನೆ ಯುದ್ಧಮಾಡಲು ಅವನ ಬಳಿಗೆ ಹೋಗುತ್ತಿದ್ದಾನೆ.

ಬಲಭದ್ರ! ಆ ಇಬ್ಬರು ವೀರರ ನಡುವೆ ಈಗ ಸುದಾರುಣವಾದ ಯುದ್ಧವು ನಡೆಯುತ್ತದೆ. ನಿನಗೇನಾದರೂ ಅವರಿಬ್ಬರ ಯುದ್ಧವನ್ನು ನೋಡಬೇಕೆನ್ನುವ ಕುತೂಹಲವಿರುವುದಾದರೆ ತಡಮಾಡದೇ ಈಗಲೇ ನೀನು ಅಲ್ಲಿಗೆ ಹೋಗು. ಸೂಕ್ತವೆಂದು ಭಾವಿಸುವುದಾದರೆ ನಿನ್ನ ಇಬ್ಬರು ಶಿಷ್ಯರ ಮಹಾಘೋರವಾದ ಯುದ್ಧವನ್ನು ವೀಕ್ಷಿಸು.”

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

“ಜನಮೇಜಯ! ನಾರದರು ಹೇಳಿದ ಮಾತನ್ನು ಕೇಳಿ ಬಲರಾಮನು ತನ್ನೊಡನೆ ತೀರ್ಥಯಾತ್ರೆಗೆ ಆಗಮಿಸಿದ್ದ ಎಲ್ಲ ಬ್ರಾಹ್ಮಣಶ್ರೇಷ್ಠರನ್ನೂ

ಯಥೋಕ್ತವಾಗಿ ಸತ್ಕರಿಸಿ ಅವರೆಲ್ಲರನ್ನೂ ಅವರವರ ಸ್ಥಳಗಳಿಗೆ ಕಳುಹಿಸಿಕೊಟ್ಟನು. ಬಳಿಕ ತನ್ನ ಅನುಯಾಯಿಗಳಿಗೆ ಮತ್ತು ಪರಿಚಾರಕರಿಗೆ ದ್ವಾರವತಿಗೆ ಹೋಗುವಂತೆ ಆಜ್ಞೆಮಾಡಿದನು. ಅನಂತರ ಬಲರಾಮನು ಪ್ಲಕ್ಷಪ್ರಸ್ರವಣವೆಂಬ ಹೆಸರಿನ ಶ್ರೇಷ್ಠವಾದ ಮತ್ತು ಮಂಗಳದಾಯಕವಾದ ಪರ್ವತಶಿಖರದಿಂದ ಕೆಳಗಿಳಿದು, ತೀರ್ಥಕ್ಷೇತ್ರಗಳನ್ನು ಸಂದರ್ಶಿಸುವುದರಿಂದಲೂ ಮತ್ತು ಪುಣ್ಯತೀರ್ಥಗಳಲ್ಲಿ ಸ್ನಾನಾಚಮನಗಳನ್ನು ಮಾಡುವುದರಿಂದಲೂ ಪ್ರಾಪ್ತವಾಗುವ ಮಹಾಫಲವನ್ನು ಕೇಳಿ ಪ್ರಸನ್ನವಾದ ಮನಸ್ಸನ್ನು ಹೊಂದಿದವನಾಗಿ ಬ್ರಾಹ್ಮಣರ ಸನ್ನಿಧಿಯಲ್ಲಿ ಈ ಪುಣ್ಯಶ್ಲೋಕಗಳನ್ನು ಹಾಡಿದನು :

**ಸರಸ್ವತೀವಾಸಸಮಾ ಕುತೋ ರತಿಃ**
**ಸರಸ್ವತೀವಾಸಸಮಾಃ ಕುತೋ ಗುಣಾಃ ।**
**ಸರಸ್ವತೀಂ ಪ್ರಾಪ್ಯ ದಿವಂ ಗತಾ ಜನಾಃ**
**ಸದಾ ಸ್ಮರಿಷ್ಯನ್ತಿ ನದೀಂ ಸರಸ್ವತೀಮ್ ॥೩೮॥**

“ಸರಸ್ವತೀನದಿಯ ತೀರದಲ್ಲಿ ವಾಸಮಾಡುವುದರಿಂದ ಮನಸ್ಸಿಗೆ ಯಾವ ಆಹ್ಲಾದವುಂಟಾಗುವುದೋ–ಆ ಆಹ್ಲಾದವು ಮತ್ತೆಲ್ಲಿ ಲಭಿಸುತ್ತದೆ? ಸರಸ್ವತೀನದಿಯ ತೀರದಲ್ಲಿ ವಾಸಮಾಡುವುದರಿಂದ ಯಾವ ಶ್ರೇಷ್ಠವಾದ ಸದ್ಗುಣಗಳು ಮೈಗೂಡುತ್ತವೆಯೋ–ಅಂತಹ ಸದ್ಗುಣಗಳು ಮತ್ತೆಲ್ಲಿ ವಾಸಮಾಡುವುದರಿಂದ ಲಭ್ಯವಾಗುತ್ತವೆ? ಸರಸ್ವತೀನದಿಯ ತೀರವನ್ನು ಸೇರಿ ಅಲ್ಲಿಯೇ ವಾಸಮಾಡಿಕೊಂಡಿದ್ದ ಅನೇಕ ಜನರು ಸ್ವರ್ಗಕ್ಕೆ ಹೋಗಿದ್ದಾರೆ. ಅಲ್ಲಿಯೂ ಅವರು ಸತತವಾಗಿ ಸರಸ್ವತಿಯನ್ನು ಸ್ಮರಿಸುತ್ತಲೇ ಇರುತ್ತಾರೆ.

**ಸರಸ್ವತೀ ಸರ್ವನದೀಷು ಪುಣ್ಯಾ**
**ಸರಸ್ವತೀ ಲೋಕಶುಭಾವಹಾ ಸದಾ ।**
**ಸರಸ್ವತೀಂ ಪ್ರಾಪ್ಯ ಜನಾಃ ಸುದುಷ್ಕೃತಂ**
**ಸದಾ ನ ಶೋಚನ್ತಿ ಪರತ್ರ ಚೇಹ ಚ ॥೩೯॥**

ಎಲ್ಲ ನದಿಗಳಿಗಿಂತಲೂ ಸರಸ್ವತೀನದಿಯು ಪವಿತ್ರವಾದುದು. ಸರಸ್ವತೀ

ನದಿಯು ಎಲ್ಲ ಜಗತ್ತಿಗೂ ಶುಭಾವಹವಾದುದು. ಸರಸ್ವತೀನದಿಯ ತೀರವನ್ನು ಆಶ್ರಯಿಸಿದ ಮಾನವರು ಈ ಲೋಕದಲ್ಲಿಯೇ ಆಗಲೀ, ಪರಲೋಕದಲ್ಲಿಯೇ ಆಗಲೀ–ದುಷ್ಕಾರ್ಯದಿಂದ ಪ್ರಾಪ್ತವಾಗುವ ದುಷ್ಫಲದ ವಿಷಯವಾಗಿ ದುಃಖಪಡಬೇಕಾಗಿಲ್ಲ. (ಎಂತಹ ದುಷ್ಕಾರ್ಯವನ್ನೇ ಮಾಡಿದ್ದರೂ ಸರಸ್ವತೀನದಿಯಲ್ಲಿ ಸ್ನಾನಮಾಡುವುದರಿಂದ ಆ ದುಷ್ಕರ್ಮದ ಪಾಪವು ಪರಿಹಾರವಾಗುತ್ತದೆ.")

ಜನಮೇಜಯ! ಹೀಗೆ ಪರಂತಪನಾದ ಬಲರಾಮನು ಸರಸ್ವತಿಯನ್ನು ಹಾಡಿ-ಹೊಗಳಿದನಂತರ ಪ್ರೇಮಪೂರ್ವಕವಾಗಿ ಪದೇ-ಪದೇ ಸರಸ್ವತೀನದಿಯ ಕಡೆಗೇ ನೋಡುತ್ತಾ ಕುದುರೆಗಳಿಂದ ಸಜ್ಜಾಗಿದ್ದ ಉಜ್ಜ್ವಲವಾದ ರಥವನ್ನು ಹತ್ತಿ ಕುಳಿತನು. ಯದುಶ್ರೇಷ್ಠನಾದ ಬಲರಾಮನು ಶೀಘ್ರವಾಗಿ ಹೋಗುವ ಆ ರಥದಲ್ಲಿ ಕುಳಿತು ಸಮುಪಸ್ಥಿತವಾಗಿದ್ದ ಪ್ರಿಯಶಿಷ್ಯರಿಬ್ಬರ ಯುದ್ಧವನ್ನು ನೋಡುವ ಸಲುವಾಗಿ ಅವರ ಸಮೀಪಕ್ಕೆ ಆಗಮಿಸಿದನು.

೫೪ನೆಯ ಅಧ್ಯಾಯವು ಮುಗಿಯಿತು.

೫೫ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಬಲರಾಮನ ಸಲಹೆಯಂತೆ ಎಲ್ಲರೂ ಕುರುಕ್ಷೇತ್ರದಲ್ಲಿನ ಸಮಂತಪಂಚಕತೀರ್ಥದ ಬಳಿಗೆ ಹೋದುದು : ಗದಾಯುದ್ಧಕ್ಕೆ ಭೀಮ-ದುರ್ಯೋಧನರ ಸಿದ್ಧತೆ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಬಲರಾಮನು ಬಂದ ಬಳಿಕ ಭೀಮ-ದುರ್ಯೋಧನರಿಗೆ ಬಹಳ ಭಯಂಕರವಾದ ಯುದ್ಧವಾಯಿತೆಂಬ ವಾರ್ತೆಯನ್ನು ಸಂಜಯನಿಂದ ಕೇಳುತ್ತಿದ್ದ ಧೃತರಾಷ್ಟ್ರನು ಪರಮದುಃಖಿತನಾಗಿ ಸಂಜಯನನ್ನು ಪ್ರಶ್ನಿಸುತ್ತಾನೆ :

**ರಾಮಂ ಸಂನಿಹತಂ ದೃಷ್ಟ್ವಾ ಗದಾಯುದ್ಧ ಉಪಸ್ಥಿತೇ ।**
**ಮಮ ಪುತ್ರಃ ಕಥಂ ಭೀಮಂ ಪ್ರತ್ಯಯುಧ್ಯತ ಸಂಜಯ ॥೨॥**

"ಸಂಜಯ! ಗದಾಯುದ್ಧವು ಸನ್ನಿಹಿತವಾಗಿರಲಾಗಿ ಬಲರಾಮನು ರಣರಂಗದಲ್ಲಿ ನಿಂತಿರುವುದನ್ನು ನೋಡಿದ ನನ್ನ ಮಗನು ಏನು ಮಾಡಿದನು ಮತ್ತು ಮುಂದೆ ಅವನು ಭೀಮಸೇನನೊಡನೆ ಯಾವ ರೀತಿಯಲ್ಲಿ ಯುದ್ಧಮಾಡಿದನು?"

"ಮಹಾರಾಜ! ವೀರ್ಯವಂತನಾದ, ಮಹಾಬಾಹುವಾದ ಭೀಮಸೇನನೊಡನೆ ಯುದ್ಧಮಾಡಬೇಕೆನ್ನುವ ಆಕಾಂಕ್ಷೆಯಿಂದಿದ್ದ ನಿನ್ನ ಮಗ ದುರ್ಯೋಧನನು ತನ್ನ ಸಮೀಪದಲ್ಲಿ ಬಲರಾಮನಿದ್ದುದನ್ನು ನೋಡಿ ಆನಂದಭರಿತನಾದನು. ಅತ್ತಲಾಗಿ ಧರ್ಮಾತ್ಮನಾದ ಯುಧಿಷ್ಠಿರರಾಜನು ಹಲಾಯುಧನಾದ ಬಲರಾಮನನ್ನು ನೋಡಿದೊಡನೆಯೇ ಮುಂದೆ ಬಂದು ಸ್ವಾಗತನೀಡಿ, ವಿಶೇಷವಾದ ಪ್ರೀತಿಯಿಂದ ಕೂಡಿದವನಾಗಿ, ಯಥಾವಿಧಿಯಾಗಿ ಅರ್ಘ್ಯ-ಪಾದ್ಯಾದಿಗಳಿಂದ ಸಂಪೂಜಿಸಿ, ಶುಭಾಸನವನ್ನಿತ್ತು ಕುಶಲವನ್ನು ವಿಚಾರಿಸಿದನು. ಅನಂತರ ಬಲರಾಮನು ಶೂರರಿಗೆ ಹಿತಕರವಾದ, ಧರ್ಮಯುಕ್ತವಾದ, ಸುಮಧುರವಾದ ಈ ಮಾತನ್ನು ಯುಧಿಷ್ಠಿರನೊಡನೆ ಹೇಳಿದನು :

"ಯುಧಿಷ್ಠಿರ ಮಹಾರಾಜ! ಕುರುಕ್ಷೇತ್ರವು ಶ್ರೇಷ್ಠವಾದ ಪುಣ್ಯಕ್ಷೇತ್ರವೆಂದೂ, ಪವಿತ್ರವಾದುದೆಂದೂ, ಸ್ವರ್ಗಪ್ರಾಪಕವಾದುದೆಂದೂ, ದೇವತೆಗಳಿಂದಲೂ, ಋಷಿಗಳಿಂದಲೂ, ಮಹಾತ್ಮರಾದ ಬ್ರಾಹ್ಮಣರಿಂದಲೂ ಸೇವಿಸಲ್ಪಡತಕ್ಕುದೆಂದೂ ಋಷಿಗಳು ಹೇಳುತ್ತಿದ್ದುದನ್ನು ನಾನು ಕೇಳಿರುವೆನು.

**ತತ್ರ ವೈ ಯೋತ್ಸ್ಯಮಾನಾ ಯೇ ದೇಹಂ ತ್ಯಕ್ಷ್ಯನ್ತಿ ಮಾನವಾಃ ।**
**ತೇಷಾಂ ಸ್ವರ್ಗೇ ಧ್ರುವೋ ವಾಸಃ ಶಕ್ರೇಣ ಸಹ ಮಾರಿಷ ॥೮॥**

ಕುರುಕ್ಷೇತ್ರದಲ್ಲಿ ಯುದ್ಧಮಾಡುತ್ತಾ ಯಾರು ದೇಹತ್ಯಾಗ ಮಾಡುತ್ತಾರೆಯೋ–ಅವರಿಗೆ ಸ್ವರ್ಗದಲ್ಲಿ ಇಂದ್ರನೊಡನೆ ವಾಸವು ಸ್ಥಿರವಾದುದು. ಈ ಕಾರಣದಿಂದ ನಾವು ಇಲ್ಲಿಂದ ಸಮಂತಪಂಚಕತೀರ್ಥಕ್ಕೆ ಶೀಘ್ರವಾಗಿ ಹೋಗೋಣ.

**ಪ್ರಥಿತೋತ್ತರವೇದೀ ಸಾ ದೇವಲೋಕೇ ಪ್ರಜಾಪತೇಃ ।**
**ತಸ್ಮಿನ್ಮಹಾಪುಣ್ಯತಮೇ ತ್ರೈಲೋಕ್ಯಸ್ಯ ಸನಾತನೇ ।**
**ಸಂಗ್ರಾಮೇ ನಿಧನಂ ಪ್ರಾಪ್ಯ ಧ್ರುವಂ ಸ್ವರ್ಗೇ ಭವಿಷ್ಯತಿ ॥೧೦॥**

ಆ ಕುರುಕ್ಷೇತ್ರವು ಬ್ರಹ್ಮನ ಉತ್ತರವೇದಿಯೆಂದು ದೇವಲೋಕದಲ್ಲಿ ಪ್ರಸಿದ್ಧವಾಗಿದೆ. ಮೂರು ಲೋಕಗಳಲ್ಲಿಯೂ ಮಹಾಪುಣ್ಯೋಪೇತವಾದ, ಸನಾತನವಾದ ಸಮಂತಪಂಚಕಕ್ಷೇತ್ರದಲ್ಲಿ ಯುದ್ಧಮಾಡುತ್ತಾ ನಿಧನ ಹೊಂದಿದವನಿಗೆ ನಿಶ್ಚಯವಾಗಿಯೂ ಸ್ವರ್ಗಪ್ರಾಪ್ತಿಯಾಗುತ್ತದೆ."

ಧೃತರಾಷ್ಟ್ರಮಹಾರಾಜ! ಬಲಭದ್ರನು ಹೀಗೆಂದು ಹೇಳಿದೊಡನೆಯೇ ಕುಂತಿಯ ಮಗನಾದ, ವೀರನಾದ, ಪ್ರಭುವಾದ ಯುಧಿಷ್ಠಿರನು ಹಾಗೆಯೇ ಆಗಲೆಂದು ಹೇಳಿ ಸಮಂತಪಂಚಕಕ್ಕೆ ಅಭಿಮುಖವಾಗಿ ಪ್ರಯಾಣ ಮಾಡಿದನು.

ಬಳಿಕ ಅಸಹನಶೀಲನಾದ, ಕಾಂತಿಮಂತನಾದ ದುರ್ಯೋಧನ ರಾಜನೂ ಕಾಲ್ನಡಿಗೆಯಲ್ಲಿಯೇ ಪಾಂಡವರೊಡನೆ ಸಮಂತಪಂಚಕಕ್ಷೇತ್ರಕ್ಕೆ ತೆರಳಿದನು. ಕಾಲ್ನಡಿಗೆಯಲ್ಲಿಯೇ ಗದಾಪಾಣಿಯಾಗಿ ಬರುತ್ತಿದ್ದ, ದಿವ್ಯವಾದ ಕವಚವನ್ನು ಧರಿಸಿದ್ದ ದುರ್ಯೋಧನನನ್ನು ನೋಡಿ ಅಂತರಿಕ್ಷದಲ್ಲಿ ಸಂಚರಿಸುತ್ತಿದ್ದ ದೇವತೆಗಳು - 'ಸಾಧು ದುರ್ಯೋಧನ! ಸಾಧು!' - ಎಂಬುದಾಗಿ ಪ್ರಶಂಸಿಸಿದರು. ವಾತಿಕರೂ ಮತ್ತು ಚಾರಣರೂ ದುರ್ಯೋಧನನನ್ನು ನೋಡಿ ಪರಮಹೃಷ್ಟರಾದರು. ಕುರುರಾಜನಾದ ನಿನ್ನ ಮಗ ದುರ್ಯೋಧನನು ಪಾಂಡವರಿಂದ ಪರಿವೃತನಾಗಿ ಮದಿಸಿದ ಆನೆಯ ನಡಿಗೆಯನ್ನು ಅನುಕರಿಸುತ್ತಾ ಹೋಗುತ್ತಿದ್ದನು. ಬಳಿಕ ಶಂಖಧ್ವನಿಗಳಿಂದಲೂ, ಭೇರಿಗಳ ಮಹಾನಿನಾದದಿಂದಲೂ, ಶೂರರ ಸಿಂಹನಾದಗಳಿಂದಲೂ ಎಲ್ಲ ದಿಕ್ಕುಗಳೂ ತುಂಬಿಹೋದುವು. ಅನಂತರ ನರಶ್ರೇಷ್ಠರಲ್ಲಿ ಶ್ರೇಷ್ಠರಾದ ಕುರುರಾಜರೆಲ್ಲರೂ ನಿನ್ನ ಮಗನೊಡನೆ ಪಶ್ಚಿಮಾಭಿಮುಖವಾಗಿ ಪ್ರಯಾಣಮಾಡಿ ಅಭಿಪ್ರೇತವಾದ (ಮುಂದಾಗಿಯೇ ಅಂಗೀಕರಿಸಲ್ಪಟ್ಟಿದ್ದ) ಕುರುಕ್ಷೇತ್ರದ ಸಮಂತಪಂಚಕತೀರ್ಥಕ್ಕೆ ಆಗಮಿಸಿದರು.

ಸರಸ್ವತೀನದಿಯ ದಕ್ಷಿಣತೀರದಲ್ಲಿದ್ದ ಶ್ರೇಷ್ಠವಾದ ಆ ಸಮಂತ

ಪಂಚಕತೀರ್ಥವು ಸದ್ಗತಿದಾಯಕವಾಗಿದ್ದಿತು. ಜೌಗುಪ್ರದೇಶವೂ ಆಗಿರದಿದ್ದ (ಮರಳಿನ ಭೂಮಿಯಲ್ಲದ) ಆ ಪುಣ್ಯಭೂಮಿಯು ಗದಾಯುದ್ಧಕ್ಕೆ ಪ್ರಶಸ್ತವಾಗಿದೆಯೆಂದು ಎಲ್ಲರೂ ಅಭಿಪ್ರಾಯಪಟ್ಟರು.



ಅನಂತರ ಭೀಮಸೇನನು ಕವಚವನ್ನು ಧರಿಸಿ, ದೊಡ್ಡದಾದ ಅಗ್ರಭಾಗದಿಂದ ಕೂಡಿದ್ದ ಗದೆಯನ್ನು ಹಿಡಿದು ಗರುಡಸದೃಶವಾದ ಮಹಾ ರೂಪವನ್ನು ಧರಿಸಿ ಯುದ್ಧಸನ್ನದ್ಧನಾಗಿ ನಿಂತನು. ನಿನ್ನ ಮಗನಾದ ದುರ್ಯೋಧನನೂ ಶಿರಸ್ತ್ರಾಣವನ್ನು ತಲೆಗೆ ಬಿಗಿದು ಸುವರ್ಣಮಯವಾದ ಕವಚವನ್ನು ಧರಿಸಿ ಗಿರಿರಾಜನಾದ ಮೇರುವಿನಂತೆಯೇ ಪ್ರಕಾಶಿಸಿದನು. ಯುದ್ಧವು ಪ್ರಾರಂಭವಾಗಲಿದ್ದ ಆ ಸಮಯದಲ್ಲಿ ಕವಚಗಳನ್ನು ಧರಿಸಿದ್ದ ಮಹಾವೀರರಾಗಿದ್ದ ಭೀಮ-ದುರ್ಯೋಧನರು ಕೋಪಗೊಂಡಿರುವ ಎರಡು

ಮದಿಸಿದ ಆನೆಗಳಂತೆಯೇ ಪ್ರಕಾಶಿಸುತ್ತಿದ್ದರು. ರಣಮಂಡಲದ ಮಧ್ಯಭಾಗ ದಲ್ಲಿದ್ದ ಪುರುಷರ್ಷಭರಾದ ಆ ಅಣ್ಣ-ತಮ್ಮಂದಿರು ಆಗತಾನೇ ಉದಯಿಸಿದ ಸೂರ್ಯ-ಚಂದ್ರರಂತೆಯೇ ಶೋಭಾಯಮಾನರಾಗಿ ಕಾಣುತ್ತಿದ್ದರು. ಪರಸ್ಪರವಾಗಿ ಸಂಹಾರಮಾಡಲಿಚ್ಛಿಸಿದ್ದ ಭೀಮ-ದುರ್ಯೋಧನರು ಕೋಪಗೊಂಡ ಎರಡು ಮಹಾಗಜಗಳಂತೆ ಎದುರು-ಬದುರಾಗಿ ನಿಂತು ಕಣ್ಣುಗಳಿಂದಲೇ ಒಬ್ಬರು ಮತ್ತೊಬ್ಬರನ್ನು ದಹಿಸಿಬಿಡುವರೋ ಎಂಬ ರೀತಿಯಲ್ಲಿ ದುರುಗುಟ್ಟಿಕೊಂಡು ನೋಡುತ್ತಿದ್ದರು.

ಬಳಿಕ ವೀರ್ಯವಂತನಾದ, ಕುರುಕುಲಾವತಂಸನಾದ ಯುದ್ಧ ಮಾಡುವುದರಲ್ಲಿ ಪರಮಹೃಷ್ಟವಾದ ಮನಸ್ಸಿನಿಂದ ಕೂಡಿದ್ದ ದುರ್ಯೋಧ ನನು ಗದೆಯನ್ನು ಕೈಯಲ್ಲಿ ಹಿಡಿದು ಕಟವಾಯಿಗಳನ್ನು ನೆಕ್ಕುತ್ತಾ, ಕೋಪದಿಂದ ರಕ್ತಾಕ್ಷನಾಗಿ ದೀರ್ಘವಾಗಿ ನಿಟ್ಟುಸಿರುಬಿಡುತ್ತಾ, ಭೀಮಸೇನನನ್ನೊಮ್ಮೆ ದಿಟ್ಟಿಸಿನೋಡಿ–ಒಂದು ಸಲಗವು ಮತ್ತೊಂದು ಸಲಗವನ್ನು ಕದನಕ್ಕೆ ಆಹ್ವಾನಿಸುವಂತೆ–ಭೀಮಸೇನನನ್ನು ಯುದ್ಧಕ್ಕೆ ಆಹ್ವಾನಿಸಿದನು. ಅದೇ ರೀತಿಯಲ್ಲಿ ವೀರ್ಯವಂತನಾದ ಭೀಮಸೇನನೂ ಲೋಹಮಯವಾದ ಗದೆಯನ್ನೆತ್ತಿಕೊಂಡು–ಅರಣ್ಯದಲ್ಲಿರುವ ಒಂದು ಸಿಂಹವು ಮತ್ತೊಂದು ಸಿಂಹವನ್ನು ಕದನಕ್ಕೆ ಆಹ್ವಾನಿಸುವಂತೆ–ದುರ್ಯೋಧನನನ್ನು ಯುದ್ಧಕ್ಕೆ ಆಹ್ವಾನಿಸಿದನು. ಗದೆಗಳನ್ನು ಹಿಡಿದಿದ್ದ ಕೈಗಳೆರಡನ್ನೂ ಮೇಲೆತ್ತಿಕೊಂಡು ನಿಂತಿದ್ದ ದುರ್ಯೋಧನ-ವೃಕೋದರರು ಆ ಯುದ್ಧಸಮಯದಲ್ಲಿ ಶಿಖರ ಗಳಿಂದ ಕೂಡಿದ ಎರಡು ಪರ್ವತಗಳಂತೆಯೇ ಪ್ರಕಾಶಿಸುತ್ತಿದ್ದರು. ಪರಮಕ್ರುದ್ಧರಾಗಿದ್ದ ಭಯಂಕರವಾದ ಪರಾಕ್ರಮದಿಂದ ಕೂಡಿದ್ದ ದುರ್ಯೋಧನ-ವೃಕೋದರರಿಬ್ಬರೂ ಗದಾಯುದ್ಧದಲ್ಲಿ ಧೀಮಂತನಾದ ಬಲರಾಮನ ಶಿಷ್ಯರಾಗಿದ್ದರು.

**ಉಭೌ ಸದೃಶಕರ್ಮಾಣೌ ಯಮವಾಸವಯೋರಿವ ।**
**ತಥಾ ಸದೃಶಕರ್ಮಾಣೌ ವರುಣಸ್ಯ ಮಹಾಬಲೌ ।**
**ವಾಸುದೇವಸ್ಯ ರಾಮಸ್ಯ ತಥಾ ವೈಶ್ರವಣಸ್ಯ ಚ ॥೨೯॥**

**ಸದೃಶೌ ತೌ ಮಹಾರಾಜ ಮಧುಕೈಟಭಯೋರ್ಯುಧಿ ।**
**ಉಭೌ ಸದೃಶಕರ್ಮಾಣೌ ತಥಾ ಸುನ್ದೋಪಸುನ್ದಯೋಃ ॥೩೦॥**

**ರಾಮರಾವಣಯೋಶ್ಚೈವ ವಾಲಿಸುಗ್ರೀವಯೋಸ್ತಥಾ ।**
**ತಥೈವ ಕಾಲಸ್ಯ ಸಮೌ ಮೃತ್ಯೋಶ್ಚೈವ ಪರಂತಪೌ ॥೩೧॥**

ಮಹಾರಾಜ! ಶತ್ರುಸಂತಾಪಕರಾದ, ಮಹಾಬಲಿಷ್ಠರಾದ, ವೀರರಾದ ಭೀಮ-ದುರ್ಯೋಧನರು–ಯಮರಾಜ, ಇಂದ್ರ, ವರುಣ, ಶ್ರೀಕೃಷ್ಣ, ಬಲರಾಮ, ಕುಬೇರ, ಮಧು-ಕೈಟಭರು, ಸುಂದ-ಉಪಸುಂದರು, ರಾಮ-ರಾವಣರು, ವಾಲಿ-ಸುಗ್ರೀವರು–ಇವರ ಸಾಹಸಕಾರ್ಯಗಳಿಗೆ ಸದೃಶವಾದ ಸಾಹಸಕಾರ್ಯಗಳನ್ನು ಮಾಡುವವರಾಗಿದ್ದರು. ಆ ಯುದ್ಧಸಮಯದಲ್ಲಿ ಅವರಿಬ್ಬರೂ ಕಾಲ ಮತ್ತು ಮೃತ್ಯುಗಳಿಗೆ ಸಮಾನರಾಗಿರುವಂತೆ ಕಾಣುತ್ತಿದ್ದರು. ಶರತ್ಕಾಲದಲ್ಲಿ ಮೈಥುನೇಚ್ಛೆಯಿಂದ ಕೂಡಿದ ಹೆಣ್ಣಾನೆಯ ಸಮಾಗಮಕ್ಕೆ ಮದದಿಂದ ಕೊಬ್ಬಿದ ಎರಡು ಗಂಡಾನೆಗಳು ಪರಸ್ಪರವಾಗಿ ಸಂಘರ್ಷಿಸುವಂತೆ–ಬಲೋನ್ಮತ್ತರಾಗಿದ್ದ ಭೀಮ-ಸುಯೋಧನರು ಪರಸ್ಪರ ವಾಗಿ ಸಂಘರ್ಷಿಸಲು ಅನುವುಮಾಡಿಕೊಳ್ಳುತ್ತಿದ್ದರು. ವಿಷಸರ್ಪಗಳಂತೆ ಇಬ್ಬರೂ ಅತ್ಯುಗ್ರವಾದ ಕ್ರೋಧವೆಂಬ ವಿಷವನ್ನು ಕಾರುತ್ತಿದ್ದರು. ಪರಮಕ್ರುದ್ಧರಾದ ಅವರಿಬ್ಬರೂ ಪರಸ್ಪರವಾಗಿ ದುರುಗುಟ್ಟಿಕೊಂಡು ನೋಡುತ್ತಿದ್ದರು. ಇಬ್ಬರೂ ಸಹ ಭರತವಂಶಕ್ಕೆ ಶಾರ್ದೂಲಪ್ರಾಯ ರಾಗಿದ್ದರು. ಪರಾಕ್ರಮದಿಂದ ಕೂಡಿದ್ದ ಅವರಿಬ್ಬರೂ ಅರಣ್ಯದ ಸಿಂಹಗಳಂತೆ ಎದುರಿಸಲು ಅಸಾಧ್ಯರಾಗಿದ್ದರು. ಇಬ್ಬರೂ ಗದಾಯುದ್ಧದಲ್ಲಿ ವಿಶೇಷಪ್ರಾವೀಣ್ಯವನ್ನು ಪಡೆದುಕೊಂಡಿದ್ದರು. ಉಗುರು ಮತ್ತು ಕೋರೆದಾಡೆಗಳೇ ಆಯುಧವಾಗಿ ಉಳ್ಳ ಎರಡು ವ್ಯಾಘ್ರಗಳೋಪಾದಿಯಲ್ಲಿ ಆ ವೀರರು ಶತ್ರುಗಳಿಂದ ಎದುರಿಸಲು ದುಃಸಾಧ್ಯರಾಗಿದ್ದರು. ಪ್ರಳಯಕಾಲದಲ್ಲಿ (ಪ್ರಜಾಸಂಹಾರ ಮಾಡಲು) ಕ್ಷೋಭೆಗೊಂಡ ಎರಡು ಸಮುದ್ರಗಳೋಪಾದಿಯಲ್ಲಿದ್ದ ಭೀಮ-ಸುಯೋಧನರು ಶತ್ರುಗಳಿಂದ ದಾಟಲು ಅಶಕ್ಯರಾಗಿದ್ದರು. (ಅವರನ್ನು ಅತಿಕ್ರಮಿಸಿ ಹೋಗಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ.) ಮಹಾರಥರಾದ ಭೀಮ-ಸುಯೋಧನರು ಕೋಪಗೊಂಡ ಎರಡು ಅಂಗಾರಕಗ್ರಹಗಳಂತೆ ಪರಸ್ಪರವಾಗಿ ತಾಪವನ್ನುಂಟುಮಾಡುತ್ತಿದ್ದರು. ವರ್ಷರ್ತುವಿನಲ್ಲಿ ಪೂರ್ವ ಮತ್ತು ಪಶ್ಚಿಮದಿಕ್ಕುಗಳಲ್ಲಿ ಕವಿದ ಮಳೆಗರೆಯುವ ಮೇಘಗಳು ಭಯಂಕರವಾದ ಗರ್ಜನೆಯನ್ನು ಮಾಡುವಂತೆ–ಶತ್ರುಗಳನ್ನು ದಮನ

ಮಾಡುವ ಭೀಮ-ಸುಯೋಧನರು ಪರಸ್ಪರವಾಗಿ ನೋಡುತ್ತಾ ಭಯಂಕರವಾಗಿ ಸಿಂಹನಾದಗಳನ್ನು ಮಾಡುತ್ತಿದ್ದರು. ಮಹಾತ್ಮರಾದ, ಮಹಾಬಲಿಷ್ಠರಾದ, ಕುರುಶ್ರೇಷ್ಠರಾದ ದುರ್ಯೋಧನ-ಭೀಮರು ಪ್ರಳಯಕಾಲದಲ್ಲಿ ಉದಯಿಸಿದ ಪ್ರಖರವಾದ ಕಿರಣಗಳಿಂದ ಕೂಡಿದ ಇಬ್ಬರು ಸೂರ್ಯರಂತೆಯೇ ಕಾಣುತ್ತಿದ್ದರು. ಅವರಿಬ್ಬರೂ–ಪರಮಕ್ರುದ್ಧವಾದ ವ್ಯಾಘ್ರಗಳೋಪಾದಿಯಲ್ಲಿಯೂ, ಗರ್ಜಿಸುತ್ತಿರುವ ಮೇಘಗಳೋಪಾದಿಯಲ್ಲಿಯೂ–ಕಾಣುತ್ತಿದ್ದರು. ಎರಡು ಸಿಂಹಗಳೋಪಾದಿಯಲ್ಲಿದ್ದ ಮಹಾಬಾಹುಗಳಾದ ಭೀಮ-ಸುಯೋಧನರು ಹರ್ಷೋಲ್ಲಸಿತರಾಗಿಯೂ ಇದ್ದರು. ಮಹಾತ್ಮರಾದ ಆ ಕುರುಕುಮಾರರು ಕೋಪಗೊಂಡ ಎರಡು ಆನೆಗಳಂತೆಯೂ–ಪ್ರಜ್ವಲಿಸಿ ಉರಿಯುತ್ತಿರುವ ಎರಡು ಅಗ್ನಿಗಳಂತೆಯೂ–ಶಿಖರಗಳಿಂದ ಕೂಡಿರುವ ಎರಡು ಪರ್ವತಗಳಂತೆಯೂ–ಕಾಣುತ್ತಿದ್ದರು. ಕೋಪದ ಆವೇಶದಿಂದಾಗಿ ಇಬ್ಬರ ತುಟಿಗಳೂ ಅದುರುತ್ತಿದ್ದುವು. ಒಬ್ಬರನ್ನೊಬ್ಬರು ತೀಕ್ಷ್ಣದೃಷ್ಟಿಯಿಂದ ನೋಡುತ್ತಿದ್ದರು. ಮಾನವಶ್ರೇಷ್ಠರಾದ, ಗದಾಪಾಣಿಗಳಾದ, ಮಹಾತ್ಮರಾದ ಕುರುರಾಜಕುಮಾರರಿಬ್ಬರೂ ಯುದ್ಧದಲ್ಲಿ ತೊಡಗಿದರು. ಇಬ್ಬರೂ ಪರಮಹೃಷ್ಟರಾಗಿದ್ದರು. ವಿಶೇಷವಾಗಿ ಇಬ್ಬರೂ ಲೋಕದ ವೀರರೆಲ್ಲರಿಗೂ ಪರಮಸಮ್ಮತರಾಗಿದ್ದರು. (ಹೆಚ್ಚು ಸಮ್ಮಾನ್ಯರಾಗಿದ್ದರು.) ಒಳ್ಳೆಯ ಕುದುರೆಗಳಂತೆ ಇಬ್ಬರೂ ಕೆನೆಯುತ್ತಿದ್ದರು. ಮದಿಸಿದ ಆನೆಗಳಂತೆ ಇಬ್ಬರೂ ಘೀಂಕರಿಸುತ್ತಿದ್ದರು. ಎರಡು ಗೂಳಿಗಳಂತೆ ಗುಟುರು ಹಾಕುತ್ತಿದ್ದರು. ನರಶ್ರೇಷ್ಠರಾದ ಬಲೋನ್ಮತ್ತರಾಗಿದ್ದ ದುರ್ಯೋಧನ– ವೃಕೋದರರು ಆ ಸಮಯದಲ್ಲಿ ಇಬ್ಬರು ಮಹಾದೈತ್ಯರಂತೆಯೇ ಪ್ರಕಾಶಿಸುತ್ತಿದ್ದರು.

ಧೃತರಾಷ್ಟ್ರಮಹಾರಾಜ! ಅನಂತರ ದುರ್ಯೋಧನನು–ಅಮಿತ ಪರಾಕ್ರಮಿಯಾದ ಬಲರಾಮ, ಮಹಾತ್ಮನಾದ ಶ್ರೀಕೃಷ್ಣ, ಮಹಾತ್ಮರಾದ ಪಾಂಚಾಲ-ಸೃಂಜಯ-ಕೇಕಯರು–ಇವರೆಲ್ಲರೊಡನಿದ್ದ ಅಭಿಮಾನಿಯಾದ ಯುಧಿಷ್ಠಿರನನ್ನು ಕುರಿತು ವೀರೋಚಿತವಾದ ಈ ಮಾತನ್ನು ಹೇಳಿದನು :

ಇದಂ ವ್ಯವಸಿತಂ ಯುದ್ಧಂ ಮಮ ಭೀಮಸ್ಯ ಚೋಭಯೋಃ ।
ಉಪೋಪವಿಷ್ಟಾಃ ಪಶ್ಯಧ್ವಂ ಸಹಿತೈರ್ನೃಪಪುಙ್ಗವೈಃ ॥೪೫॥

“ವೀರರೇ! ನನಗೂ ಮತ್ತು ಭೀಮನಿಗೂ ನಿಶ್ಚಿತವಾಗಿರುವ ಈ ಗದಾಯುದ್ಧವನ್ನು ನೀವೆಲ್ಲರೂ ಶ್ರೇಷ್ಠರಾದ ಈ ರಾಜರೊಡನೆ ಹತ್ತಿರದಲ್ಲಿಯೇ ಕುಳಿತುಕೊಂಡು ವೀಕ್ಷಿಸಿರಿ.”

ದುರ್ಯೋಧನನ ಮಾತನ್ನು ಕೇಳಿ ಅವರೆಲ್ಲರೂ ಅವನು ಹೇಳಿದಂತೆಯೇ ಮಾಡಿದರು. ಯುಧಿಷ್ಠಿರನೇ ಆದಿಯಾಗಿ ಎಲ್ಲ ರಾಜರೂ ಸುತ್ತಲೂ ಕುಳಿತುಕೊಂಡರು. ಸುತ್ತಲೂ ಕುಳಿತಿದ್ದ ಆ ಮಹಾರಾಜ ಮಂಡಲವು ಸ್ವರ್ಗದಲ್ಲಿರುವ ದೇವತೆಗಳ ಸಮೂಹದಂತೆ ಪ್ರಕಾಶಮಾನವಾಗಿ ಕಾಣುತ್ತಿದ್ದಿತು. ಅವರ ಮಧ್ಯದಲ್ಲಿ ಕೇಶವಾಗ್ರಜನಾದ, ಮಹಾಬಾಹುವಾದ ಶ್ರೀಮಂತನಾದ ಬಲರಾಮನು ಕುಳಿತಿದ್ದನು. ಎಲ್ಲರಿಂದಲೂ ಸಂಪೂಜಿತನಾಗಿದ್ದ, ರಾಜರ ಮಧ್ಯದಲ್ಲಿ ಕುಳಿತಿದ್ದ, ನೀಲವಸ್ತ್ರವನ್ನು ಧರಿಸಿದ್ದ, ಶುಭ್ರವಾದ ಪ್ರಭೆಯಿಂದ ವಿರಾಜಮಾನನಾಗಿದ್ದ ಬಲರಾಮನು–ರಾತ್ರಿಯಲ್ಲಿ ನಕ್ಷತ್ರಗಳಿಂದ ಸಮಾವೃತನಾದ ಚಂದ್ರನಂತೆಯೇ ಕಾಣುತ್ತಿದ್ದನು. ಶತ್ರುಗಳಿಂದ ಸಹಿಸಲು ಅಶಕ್ಯರಾದ, ಗದಾಪಾಣಿಗಳಾಗಿದ್ದ ಇಬ್ಬರು ವೀರರೂ ಪರಸ್ಪರವಾಗಿ ಕಠೋರವಾದ ಮಾತುಗಳಿಂದ ಒಬ್ಬರು ಮತ್ತೊಬ್ಬರನ್ನು ನೋಯಿಸುತ್ತಾ ಯುದ್ಧ ಸನ್ನದ್ಧರಾಗಿ ನಿಂತಿದ್ದರು. ಕುರುಶ್ರೇಷ್ಠರಾದ ಭೀಮ-ಸುಯೋಧನರು ಅನ್ಯೋನ್ಯವಾಗಿ ಅವಹೇಳನಕರವಾದ ಮಾತುಗಳನ್ನಾಡುತ್ತಾ, ಒಬ್ಬರನ್ನೊಬ್ಬರು ತೀಕ್ಷ್ಣದೃಷ್ಟಿಯಿಂದ ನೋಡುತ್ತಾ, ಇಂದ್ರ-ವೃತ್ರಾಸುರರೋಪಾದಿಯಲ್ಲಿ ರಣರಂಗದಲ್ಲಿ ಯುದ್ಧಕ್ಕೆ ಸಜ್ಜಾಗಿ ನಿಂತಿದ್ದರು.”

೫೫ನೆಯ ಅಧ್ಯಾಯವು ಮುಗಿಯಿತು.

೫೬ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ದುರ್ಯೋಧನನಿಗೆ ಅಪಶಕುನವಾದುದು : ಭೀಮಸೇನನ ಉತ್ಸಾಹ : ಭೀಮ–ದುರ್ಯೋಧನರ ವಾಗ್ಯುದ್ಧ : ಗದಾಯುದ್ಧದ ಪ್ರಾರಂಭ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

“ಜನಮೇಜಯ! ಗದಾಯುದ್ಧವಾಗುವ ಮೊದಲು ಭೀಮ–

ದುರ್ಯೋಧನರ ನಡುವೆ ಭಯಂಕರವಾದ ವಾಗ್ಯುದ್ಧವು ನಡೆಯಿತು. ಆ ಪ್ರಸಂಗವನ್ನು ಸಂಜಯನಿಂದ ಕೇಳಿದ ಧೃತರಾಷ್ಟ್ರನು ಬಹಳ ದುಃಖಿತನಾಗಿ ಹೇಳುತ್ತಾನೆ :

**ಧಿಗಸ್ತು ಖಲು ಮಾನುಷ್ಯಂ ಯಸ್ಯ ನಿಷ್ಠೇಯಮೀದೃಶೀ ।**
**ಏಕಾದಶಚಮೂಭರ್ತಾ ಯತ್ರ ಪುತ್ರೋ ಮಮಾನಘ ॥೨॥**

**ಆಜ್ಞಾಪ್ಯ ಸರ್ವಾನ್ನೃಪತೀನ್ಭುಕ್ತ್ವಾ ಚೇಮಾಂ ವಸುನ್ಧರಾಮ್ ।**
**ಗದಾಮಾದಾಯ ವೇಗೇನ ಪದಾತಿಃ ಪ್ರಸ್ಥಿತೋ ರಣೇ ॥೩॥**

"ಮಾನವಜನ್ಮದ ಪರ್ಯವಸಾನವು ಇಷ್ಟು ದುಃಖದಾಯಕವಾಗುವುದಾದರೆ ಅಂತಹ ಮನುಷ್ಯತ್ವಕ್ಕೇ ಧಿಕ್ಕಾರವಿರಲಿ. ನಿಷ್ಪಾಪನೇ! ನಿನಗೆ ತಿಳಿದಿರುವಂತೆ ನನ್ನ ಮಗನು ಹನ್ನೊಂದು ಅಕ್ಷೌಹಿಣೀಸೈನ್ಯಕ್ಕೆ ಅಧಿಪತಿಯಾಗಿದ್ದನು. ಪೃಥ್ವಿಯಲ್ಲಿದ್ದ ಎಲ್ಲ ರಾಜರನ್ನೂ ತನ್ನ ಆಜ್ಞಾಪಾಲಕರನ್ನಾಗಿ ಮಾಡಿಕೊಂಡಿದ್ದನು. ಈ ಅಖಂಡಭೂಮಂಡಲವನ್ನೂ ಉಪಭೋಗಿಸುತ್ತಿದ್ದನು. ಅಂತಹವನು ಕಡೆಯಲ್ಲಿ ಶತ್ರುವಿನೊಡನೆ ಯುದ್ಧಮಾಡಲು ಗದೆಯನ್ನೆತ್ತಿಕೊಂಡು ಪದಾತಿಯಾಗಿಯೇ ಓಡುತ್ತಾ ಹೋಗಬೇಕಾಯಿತು. (ಇಂತಹ ಅವಸ್ಥೆಯು ಅವನಿಗೆ ಕಡೆಯಲ್ಲಿ ಬಂದೊದಗಿತು.)

**ಭೂತ್ವಾ ಹಿ ಜಗತೋ ನಾಥೋ ಹ್ಯನಾಥ ಇವ ಮೇ ಸುತಃ ।**
**ಗದಾಮುದ್ಯಮ್ಯ ಯೋ ಯಾತಿ ಕಿಮನ್ಯದ್ಭಾಗಧೇಯತಃ ॥೪॥**

ಜಗತ್ತಿಗೇ ನಾಥನಾಗಿದ್ದ ನನ್ನ ಮಗನು ಅನಾಥನಂತೆ ಗದೆಯನ್ನೆತ್ತಿಕೊಂಡು ಪದಾತಿಯಾಗಿಯೇ ಯುದ್ಧಕ್ಕೆ ಹೋಗಬೇಕಾಯಿತೆಂದರೆ ಇದಕ್ಕೆ ಭಾಗ್ಯವಿಪರ್ಯಯವು ಕಾರಣವಲ್ಲದೇ ಮತ್ತಾವ ಕಾರಣವು ತಾನೇ ಇದ್ದೀತು?

**ಅಹೋ ದುಃಖಂ ಮಹತ್ಪ್ರಾಪ್ತಂ ಪುತ್ರೇಣ ಮಮ ಸಂಜಯ ॥೫॥**

ಅಯ್ಯೋ! ಸಂಜಯ! ನನ್ನ ಮಗನಿಂದ ಮಹಾದುಃಖವು ಹೊಂದಲ್ಪಟ್ಟಿತು. ಈಗ ನಾನೇನು ಮಾಡಲಿ?"

ಜನಮೇಜಯ! ಹೀಗೆ ಹೇಳಿ ಅತಿದುಃಖಿತನಾಗಿದ್ದ ಜನಾಧಿಪನಾದ ಧೃತರಾಷ್ಟ್ರರಾಜನಿಗೆ ಮುಂದೆ ಮಾತನಾಡಲಾಗಲಿಲ್ಲ.

ಬಳಿಕ ಸಂಜಯನು ಯುದ್ಧವರ್ಣನೆಯನ್ನು ಮುಂದುವರಿಸುತ್ತಾನೆ :

“ಧೃತರಾಷ್ಟ್ರಮಹಾರಾಜ! ಆ ಸಮಯದಲ್ಲಿ ಮೇಘದ ಗರ್ಜನೆಗೆ ಅನುರೂಪವಾಗಿ ಗರ್ಜನೆಮಾಡುತ್ತಿದ್ದ, ಪರಾಕ್ರಮಿಯಾದ ದುರ್ಯೋಧನನು ಪರಮಹೃಷ್ಟನಾಗಿ ಹೋರಿಯಂತೆ ಗುಟುರುಹಾಕುತ್ತಾ ಭೀಮಸೇನನನ್ನು ಯುದ್ಧಕ್ಕೆ ಆಹ್ವಾನಿಸುತ್ತಿರಲಾಗಿ, ಮಹಾಘೋರವಾದ ಅಪಶಕುನ ಸೂಚಕವಾದ ನಾನಾವಿಧವಾದ ದೃಶ್ಯಗಳು ಕಾಣಿಸಿಕೊಂಡುವು.

ವವುರ್ವಾತಾಃ ಸನಿರ್ಘಾತಾಃ ಪಾಂಸುವರ್ಷಂ ಪಪಾತ ಚ ।
ಬಭೂವುಶ್ಚ ದಿಶಃ ಸರ್ವಾಸ್ತಿಮಿರೇಣ ಸಮಾವೃತಾಃ ॥೮॥

ಮಹಾಸ್ವನಾಃ ಸನಿರ್ಘಾತಾಸ್ತುಮುಲಾ ಲೋಮಹರ್ಷಣಾಃ ।
ಪೇತುಸ್ತಥೋಲ್ಕಾಃ ಶತಶಃ ಸ್ಫೋಟಯನ್ತ್ಯೋ ನಭಸ್ತಲಾತ್ ॥೯॥

ರಾಹುಶ್ಚಾಗ್ರಸದಾದಿತ್ಯಮಪರ್ವಣಿ ವಿಶಾಮ್ಪತೇ ।
ಚಕಮ್ಪೇ ಚ ಮಹಾಕಮ್ಪಂ ಪೃಥಿವೀ ಸವನದ್ರುಮಾ ॥೧೦॥

*ನಿರ್ಘಾತಗಳೊಡನೆ ಚಂಡಮಾರುತಗಳು ಬೀಸತೊಡಗಿದುವು. ಧೂಳಿನ ಮಳೆಯೇ ಸುರಿಯಿತು. ಎಲ್ಲ ದಿಕ್ಕುಗಳಲ್ಲಿಯೂ ಕತ್ತಲೆಯು ಕವಿಯಿತು. ಮಹಾಧ್ವನಿಯಿಂದ ಕೂಡಿದ್ದ, ಸಿಡಿಲುಗಳಿಂದ ಸಮ್ಮಿಶ್ರವಾಗಿದ್ದ ಭಯಂಕರವಾದ ಮತ್ತು ರೋಮಾಂಚಕರವಾದ ನೂರಾರು ಉಲ್ಕೆಗಳು ಭೂಮಂಡಲವನ್ನೇ ಭೇದಿಸುವುವೋ ಎಂಬಂತೆ ಆಕಾಶದಿಂದ ಚ್ಯುತವಾದುವು. ಅಂದು ಪರ್ವತಿಥಿಯಲ್ಲದಿದ್ದರೂ ರಾಹುವು ಸೂರ್ಯನನ್ನು ನುಂಗಿದನು. ಅರಣ್ಯಗಳಿಂದಲೂ ಮತ್ತು ವೃಕ್ಷಗಳಿಂದಲೂ ಕೂಡಿದ್ದ ಪೃಥ್ವಿಯು ಬಹಳ ವೇಗದಿಂದ ಕಂಪಿಸತೊಡಗಿತು.

---

*ನಿರ್ಘಾತಃ–ಘಾತ ಎಂದರೆ ಪ್ರಹಾರ. ನಿರ್ಘಾತ ಎಂದರೆ ಬಲವಾದ ಪ್ರಹಾರ. ವಾಯುವಿನಿಂದ ವಾಯುವು ಹೊಡೆಯಲ್ಪಟ್ಟು ಅದು ಭೂಮಿಯ ಮೇಲೆ ಬೀಳುವಾಗ ಉಂಟಾಗುವ ಶಬ್ದಕ್ಕೆ ನಿರ್ಘಾತ ಎಂದು ನಿಘಂಟುಕಾರರು ಹೇಳುತ್ತಾರೆ. ವಾಯುನಾಭಿಹತೇ ವಾಯೌ ಗಗನಾಚ್ಚ ಪತತ್ಯಧಃ । ಪ್ರಚಣ್ಡಘೋರ ನಿರ್ಘೋಷೋ ನಿರ್ಘಾತ ಇತಿ ಕಥ್ಯತೇ ॥ ಹೀಗೆ ವಾಯುವು ಭೂಮಿಯ ಮೇಲೆ ಬೀಳುವುದು ಬಹಳ

**ರೂಕ್ಷಾಶ್ಚ ವಾತಾಃ ಪ್ರವವುರ್ನೀಚೈಃ ಶರ್ಕರಕರ್ಷಿಣಃ ।**
**ಗಿರೀಣಾಂ ಶಿಖರಾಣ್ಯೇವ ನ್ಯಪತನ್ತ ಮಹೀತಲೇ ॥೧೧॥**

ಕಲ್ಲುಗಳನ್ನೇ ಸುರಿಸುವ ಬಿರುಸಾದ ಸುಂಟರಗಾಳಿಗಳು ಕೆಳಭಾಗದಲ್ಲಿ ಬೀಸತೊಡಗಿದುವು. ಪರ್ವತಗಳ ಶಿಖರಗಳೇ ಕಳಚಿಕೊಂಡು ಭೂಮಿಯ ಮೇಲೆ ಬೀಳತೊಡಗಿದುವು.

**ಮೃಗಾ ಬಹುವಿಧಾಕಾರಾಃ ಸಮ್ಪತನ್ತಿ ದಿಶೋ ದಶ ।**
**ದೀಪ್ತಾಃ ಶಿವಾಶ್ಚಾನದನ್ಘೋರರೂಪಾಃ ಸುದಾರುಣಾಃ ॥೧೨॥**

ನಾನಾವಿಧವಾದ ಆಕೃತಿಗಳನ್ನು ಹೊಂದಿದ್ದ ಮೃಗಗಳು ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದುವು. ಅತಿಭಯಂಕರವಾಗಿ ಕಾಣುತ್ತಿದ್ದ, ಪ್ರದೀಪ್ತವಾದ ಮುಖಗಳನ್ನು ಹೊಂದಿದ್ದ ಗುಳ್ಳೇನರಿಗಳು ದಾರುಣವಾಗಿ ಧ್ವನಿಮಾಡುತ್ತಿದ್ದುವು.

**ನಿರ್ಘಾತಾಶ್ಚ ಮಹಾಘೋರಾ ಬಭೂವುರ್ಲೋಮಹರ್ಷಣಾಃ ।**
**ದೀಪ್ತಾಯಾಂ ದಿಶಿ ರಾಜೇನ್ದ್ರ ಮೃಗಾಶ್ಚಾಶುಭವೇದಿನಃ ॥೧೩॥**

ಆ ಸಮಯದಲ್ಲಿ ಅತ್ಯಂತಭಯಂಕರವಾದ ಮತ್ತು ರೋಮಾಂಚಕರವಾದ ಶಬ್ದಗಳುಂಟಾದುವು. ಜಾಜ್ವಲ್ಯಮಾನವಾಗಿ ಕಾಣುತ್ತಿದ್ದ ಆಗ್ನೇಯ ದಿಕ್ಕಿನಲ್ಲಿ ಮೃಗಗಳು ಮುಂದೆ ಅಶುಭವುಂಟಾಗುವುದೆಂಬುದನ್ನು ತಿಳಿದುಕೊಂಡು ಧ್ವನಿಗಳ ಮೂಲಕವಾಗಿ ಸೂಚಿಸುತ್ತಿದ್ದುವು.

**ಉದಪಾನಗತಾಶ್ಚಾಪೋ ವ್ಯವರ್ಧನ್ತ ಸಮನ್ತತಃ ।**
**ಅಶರೀರಾ ಮಹಾನಾದಾಃ ಶ್ರೂಯನ್ತೇ ಸ್ಮ ತದಾ ನೃಪ ॥೧೪॥**

ಬಾವಿಗಳಲ್ಲಿದ್ದ ನೀರು ಇದ್ದಕ್ಕಿದ್ದಂತೆಯೇ ಎಲ್ಲ ಕಡೆಗಳಿಂದಲೂ ಉಕ್ಕಿ

---

ಅನಿಷ್ಟಸೂಚಕವಾದುದು. ವಾಯುವು ಭೂಮಿಯಲ್ಲಿ ಬೀಳುವ ಸಮಯದಲ್ಲಿ ಪಕ್ಷಿಗಳೆಲ್ಲವೂ ಸೂರ್ಯನಿಗೆ ಅಭಿಮುಖವಾಗಿ ತಿರುಗಿಕೊಂಡು ಕೂಗಿಕೊಳ್ಳುವುವು. ಪವನಃ ಪವನಾಭಿಹತೋ ಗಗನಾದವನೌ ಯದಾ ಸಮಾಪತತಿ । ಭವತಿ ತದಾ ನಿರ್ಘಾತಃ ಸ ಚ ಪಾಪೋ ದೀರ್ಘವಿಹಗರುತಃ ॥ ಬೃಹತ್ಸಂಹಿತಾ ೩೯-೧. ಈ ನಿರ್ಘಾತದ ಶಬ್ದವು ಸಿಡಿಲಿನ ಶಬ್ದದಂತಿರುತ್ತದೆಂದು ಹೇಳುತ್ತಾರೆ.

ಬಂದಿತು. ಶಬ್ದವಾಗುವ ಸಾಧನವೇ ಇಲ್ಲದೆ (ಶರೀರ ಮುಂತಾದುವು) ಎಲ್ಲ ಕಡೆಗಳಿಂದಲೂ ಘೋರವಾದ ಶಬ್ದಗಳು ಕೇಳಿಬರುತ್ತಿದ್ದುವು.

ಭೀಮಸೇನನು ಇವೇ ಮೊದಲಾದ *ನಿಮಿತ್ತಗಳನ್ನು ನೋಡಿ ಹಿರಿಯಣ್ಣನಾದ ಯುಧಿಷ್ಠಿರನೊಡನೆ ಹೇಳಿದನು :

"ಅಣ್ಣ! ಮಂದಾತ್ಮನಾದ ಈ ದುರ್ಯೋಧನನು ನನ್ನನ್ನು ಇಂದಿನ ಯುದ್ಧದಲ್ಲಿ ಜಯಿಸಲು ಖಂಡಿತವಾಗಿಯೂ ಶಕ್ತನಲ್ಲ. ಖಾಂಡವವನದಲ್ಲಿ ಅರ್ಜುನನು ಬೆಂಕಿಯನ್ನು ಸುರಿಸಿದಂತೆ–ಬಹಳ ಕಾಲದಿಂದಲೂ ನನ್ನ ಹೃದಯದಲ್ಲಿ ನಿಗೂಢವಾಗಿರುವ ಕ್ರೋಧಾಗ್ನಿಯನ್ನಿಂದು ನಾನು ಈ ಕೌರವೇಂದ್ರನ ಮೇಲೆ ಸುರಿಸುತ್ತೇನೆ. ನಿನ್ನ ಹೃದಯದಲ್ಲಿ ಬಹಳ ಕಾಲದಿಂದಲೂ ನೆಟ್ಟುಕೊಂಡಿರುವ ಮುಳ್ಳನ್ನಿಂದು ನಾನು ತೆಗೆದುಹಾಕುತ್ತೇನೆ.

**ನಿಹತ್ಯ ಗದಯಾ ಪಾಪಮಿಮಂ ಕುರುಕುಲಾಧಮಮ್ ।**
**ಅದ್ಯ ಕೀರ್ತಿಮಯೀಂ ಮಾಲಾಂ ಪ್ರತಿಮೋಕ್ಷ್ಯಾಮ್ಯಹಂ ತ್ವಯಿ ॥**

ಕುರುಕುಲಾಧಮನಾದ ಪಾಪಿಷ್ಠನಾದ ಈ ದುರ್ಯೋಧನನನ್ನು ಈ ಗದೆಯಿಂದ ಸಂಹರಿಸಿ ಇಂದು ನಿನ್ನ ಕತ್ತಿನಲ್ಲಿ ಕೀರ್ತಿರೂಪವಾದ ಮಾಲೆಯನ್ನು ಹಾಕುತ್ತೇನೆ.

**ಹತ್ವೇಮಂ ಪಾಪಕರ್ಮಾಣಂ ಗದಯಾ ರಣಮೂರ್ಧನಿ ।**
**ಅದ್ಯಾಸ್ಯ ಶತಧಾ ದೇಹಂ ಭಿನದ್ಮಿ ಗದಯಾನಯಾ ॥೧೯॥**

ರಣಾಂಗಣದಲ್ಲಿ ಪಾಪಕರ್ಮನಾದ ಈ ದುರ್ಯೋಧನನನ್ನು ಇಂದು ಈ ಗದೆಯಿಂದಲೇ ಸಂಹರಿಸಿ ಅನಂತರ ಇದೇ ಗದೆಯಿಂದಲೇ ಇವನ ದೇಹವನ್ನು ಮರ್ದಿಸಿ ನೂರಾರು ಚೂರುಗಳನ್ನಾಗಿ ಮಾಡಿಬಿಡುತ್ತೇನೆ.

**ನಾಯಂ ಪ್ರವೇಷ್ಟಾ ನಗರಂ ಪುನರ್ವಾರಣಸಾಹ್ವಯಮ್ ॥೨೦॥**

ಅಣ್ಣ! ಹಸ್ತಿನಾಪುರವೆಂಬ ಹೆಸರಿನ ಪಟ್ಟಣವನ್ನು ಇವನು ಖಂಡಿತವಾಗಿಯೂ ಪುನಃ ಪ್ರವೇಶಿಸಲಾರನು.

---

*ನಿಮಿತ್ತ : ಶಕುನ. ಒಳ್ಳೆಯದನ್ನು ಅಥವಾ ಕೆಟ್ಟುದನ್ನು ಸೂಚಿಸುವ ಒಂದು ಘಟನೆ.

**ಸರ್ಪೋತ್ಸರ್ಗಸ್ಯ ಶಯನೇ ವಿಷದಾನಸ್ಯ ಭೋಜನೇ ।**
**ಪ್ರಮಾಣಕೋಟ್ಯಾಂ ಪಾತಸ್ಯ ದಾಹಸ್ಯ ಜತುವೇಶ್ಮನಿ ।**
**ಸಭಾಯಾಮವಹಾಸಸ್ಯ ಸರ್ವಸ್ವಹರಣಸ್ಯ ಚ ॥೨೧॥**

**ವರ್ಷಮಜ್ಞಾತವಾಸಸ್ಯ ವನವಾಸಸ್ಯ ಚಾನಘ ।**
**ಅದ್ಯಾನ್ತಮೇಷಾಂ ದುಃಖಾನಾಂ ಗನ್ತಾಹಂ ಭರತರ್ಷಭ ॥೨೨॥**

ಮಲಗಿದ್ದ ಸಮಯದಲ್ಲಿ ಸರ್ಪಗಳನ್ನು ಮೇಲೆ ಬಿಟ್ಟು ಕಚ್ಚಿಸಿದುದು; ವಿಷಮಿಶ್ರಿತವಾದ ಭೋಜನವನ್ನು ಮಾಡಿಸಿದುದು; ಕೈಕಾಲುಗಳನ್ನು ಬಿಗಿದು ಪ್ರಮಾಣಕೋಟಿತೀರ್ಥದಲ್ಲಿ ಎತ್ತಿಹಾಕಿದುದು; ಲಾಕ್ಷಾಗೃಹದಲ್ಲಿ ಸುಟ್ಟುದು; ತುಂಬಿದ ಸಭೆಯಲ್ಲಿ ಅವಮಾನಪಡಿಸಿದುದು; ನಮ್ಮ ಎಲ್ಲ ಐಶ್ವರ್ಯವನ್ನೂ ಅಪಹರಿಸಿದುದು; ಹನ್ನೆರಡು ವರ್ಷಗಳ ಕಾಲ ವನವಾಸವನ್ನು ಮಾಡಿಸಿದುದು; ಒಂದು ವರ್ಷ ಅಜ್ಞಾತವಾಸವನ್ನು ಮಾಡಿಸಿದುದು. ಈ ಎಲ್ಲ ದುಃಖಗಳ ಕೊನೆಯನ್ನೂ ನಾನಿಂದು ಮುಟ್ಟುತ್ತೇನೆ.

**ಏಕಾಹ್ನಾ ವಿನಿಹತ್ಯೇಮಂ ಭವಿಷ್ಯಾಮ್ಯಾತ್ಮನೋಽನೃಣಃ ।**
**ಅದ್ಯಾಯುರ್ಧಾರ್ತರಾಷ್ಟ್ರಸ್ಯ ದುರ್ಮತೇರಕೃತಾತ್ಮನಃ ।**
**ಸಮಾಪ್ತಂ ಭರತಶ್ರೇಷ್ಠ ಮಾತಾಪಿತ್ರೋಶ್ಚ ದರ್ಶನಮ್ ॥೨೩॥**

ಈ ಒಂದು ಹಗಲಿನಲ್ಲಿಯೇ ನಾನಿವನನ್ನು ಸಂಹರಿಸಿ ನನ್ನ ಋಣದಿಂದ ಮುಕ್ತನಾಗುತ್ತೇನೆ. ಜಿತೇಂದ್ರಿಯನಲ್ಲದ, ದುರ್ಮತಿಯಾದ ಈ ದುರ್ಯೋಧನನ ಆಯುಷ್ಯವು ಇಂದಿಗೆ ಮುಗಿದುಹೋಯಿತು. ಅಂತೆಯೇ ಇವನು ತನ್ನ ತಂದೆ-ತಾಯಿಗಳ ದರ್ಶನವನ್ನೂ ಪುನಃ ಮಾಡಲಾರನು. ಅವರ ದರ್ಶನಮಾಡಲು ಇವನಿಗೆ ಅವಕಾಶವೇ ಒದಗುವುದಿಲ್ಲ.

**ಅದ್ಯ ಸೌಖ್ಯಂ ತು ರಾಜೇನ್ದ್ರ ಕುರುರಾಜಸ್ಯ ದುರ್ಮತೇಃ ।**
**ಸಮಾಪ್ತಂ ಚ ಮಹಾರಾಜ ನಾರೀಣಾಂ ದರ್ಶನಂ ಪುನಃ ॥೨೪॥**

ದುರ್ಮತಿಯಾದ ಕುರುರಾಜನ ಸುಖವೂ ಇಂದಿಗೆ ಸಮಾಪ್ತಿಯನ್ನು ಹೊಂದುತ್ತದೆ. ಇವನಿಗೆ ಅಂತಃಪುರದ ನಾರಿಯರ ದರ್ಶನಸುಖವೂ ಪುನಃ ಲಭಿಸುವುದಿಲ್ಲ.

**ಅದ್ಯಾಯಂ ಕುರುರಾಜಸ್ಯ ಶಾನ್ತನೋಃ ಕುಲಪಾಂಸನಃ ।**
**ಪ್ರಾಣಾಞ್ಶ್ರಿಯಂ ಚ ರಾಜ್ಯಂ ಚ ತ್ಯಕ್ತ್ವಾ ಶೇಷ್ಯತಿ ಭೂತಲೇ ॥೨೫॥**

ಕುರುರಾಜನಾದ ಶಾಂತನುವಿನ ಕುಲಕ್ಕೇ ಕಳಂಕಪ್ರಾಯನಾದ ಇವನಿಂದು ಪ್ರಾಣಗಳನ್ನೂ, ಸಂಪತ್ತನ್ನೂ, ರಾಜ್ಯವನ್ನೂ ಪರಿತ್ಯಜಿಸಿ ಭೂಮಿಯ ಮೇಲೆ ಮಲಗುತ್ತಾನೆ.

ಧೃತರಾಷ್ಟ್ರರಾಜನು, ತನ್ನ ಮಗನು ಪ್ರಾಣಗಳನ್ನು ತೊರೆದು ಭೂಮಿಯ ಮೇಲೆ ಬಿದ್ದುಹೋದನೆಂಬ ವಾರ್ತೆಯನ್ನು ಕೇಳಿ, ಶಕುನಿಯ ಬುದ್ಧಿಯಲ್ಲಿ ಹುಟ್ಟಿ ಕಾರ್ಯರೂಪಕ್ಕೆ ಬಂದ ಕುತ್ಸಿತಕಾರ್ಯಗಳೆಲ್ಲವನ್ನೂ ಸ್ಮರಿಸಿಕೊಳ್ಳುತ್ತಾನೆ."

ನೃಪಶ್ರೇಷ್ಠನೇ! ಹೀಗೆ ವೀರ್ಯವಂತನಾದ ಭೀಮಸೇನನು ಯುಧಿಷ್ಠಿರನೊಡನೆ ಹೇಳಿ ಗದೆಯನ್ನೆತ್ತಿಕೊಂಡು–ಇಂದ್ರನು ವೃತ್ರಾಸುರನನ್ನು ಯುದ್ಧಕ್ಕೆ ಆಹ್ವಾನಿಸಿದಂತೆ–ದುರ್ಯೋಧನನನ್ನು ಯುದ್ಧಕ್ಕೆ ಆಹ್ವಾನಿಸಿದನು. ಶಿಖರದಿಂದ ಯುಕ್ತವಾದ ಕೈಲಾಸಪರ್ವತದಂತೆ ಗದೆಯನ್ನೆತ್ತಿ ನಿಂತಿದ್ದ ದುರ್ಯೋಧನನನ್ನು ನೋಡಿ ಪುನಃ ಕೋಪಗೊಂಡ ಭೀಮಸೇನನು ಹೇಳಿದನು :

"ದುರ್ಯೋಧನ! ನಿನ್ನ ತಂದೆಯಾದ ಧೃತರಾಷ್ಟ್ರರಾಜನೂ ಮತ್ತು ನೀನೂ ವಾರಣಾವತದಲ್ಲಿ ಎಂತೆಂತಹ ದುಷ್ಕೃತ್ಯಗಳನ್ನೆಸಗಿದಿರೆಂಬುದನ್ನು ಸ್ಮರಿಸು. ರಜಸ್ವಲೆಯಾಗಿದ್ದ ದ್ರೌಪದಿಯು ನಿಮ್ಮ ದುಷ್ಕರ್ಮದ ಕಾರಣ ದಿಂದಾಗಿ ತುಂಬಿದ ಸಭೆಯ ಮಧ್ಯದಲ್ಲಿ ಮಹಾಕ್ಲೇಶವನ್ನು ಅನುಭವಿಸಿ ದಳು. ನೀನೂ ಮತ್ತು ಶಕುನಿಯೂ ಸೇರಿ ಧರ್ಮರಾಜನನ್ನು ದ್ಯೂತದಲ್ಲಿ ವಂಚಿಸಿದಿರಿ. ನಿನ್ನ ಸಲುವಾಗಿ ನಾವೆಲ್ಲರೂ ಅರಣ್ಯದಲ್ಲಿ ಮಹಾದುಃಖವನ್ನೇ ಅನುಭವಿಸಿದೆವು. ವಿರಾಟನಗರದಲ್ಲಿಯೂ ನಾವು ಗರ್ಭವಾಸಮಾಡಿದಂತೆ ಸ್ವರೂಪವನ್ನು ಮರೆಸಿಕೊಂಡು ನಮ್ಮ ಜೀವನವನ್ನು ನಿರ್ವಹಿಸಿದೆವು. ಈ ಎಲ್ಲ ಕಷ್ಟಗಳ ಕಾರಣದಿಂದಾಗಿ ನನ್ನ ಮನಸ್ಸಿನಲ್ಲಿ ಉದ್ಭೂತವಾಗಿರುವ ಮಹಾಕ್ರೋಧವನ್ನು ಈಗ ನಾನು ನಿನ್ನ ಮೇಲೆ ಸುರಿಸುವೆನು. ದುರ್ಮತಿಯೇ! ಕೇವಲ ಅದೃಷ್ಟದ ಕಾರಣದಿಂದಲೇ ನೀನೀಗ ನನ್ನ ಕಣ್ಣುಗಳಿಗೆ ವಿಷಯನಾಗಿರುವೆ. ರಥಿಗಳಲ್ಲಿ ಶ್ರೇಷ್ಠನಾದ, ಪ್ರತಾಪವಂತ

ನಾದ ಗಾಂಗೇಯನು ನಿನ್ನ ಸಲುವಾಗಿಯೇ ಯುದ್ಧಮಾಡಿ ಶಿಖಂಡಿಯಿಂದ ಹತನಾಗಿ ಶರತಲ್ಪದಲ್ಲಿ ಮಲಗಿರುವನು. ನಿನ್ನ ಸಲುವಾಗಿಯೇ ಯುದ್ಧಮಾಡಿದ ದ್ರೋಣರೂ ಹತರಾಗಿ ಹೋದರು. ಕರ್ಣನೂ ಮತ್ತು ಪ್ರತಾಪವಂತನಾದ ಶಲ್ಯನೂ ಹತರಾದರು. ಎಲ್ಲಕ್ಕಿಂತಲೂ ಮುಖ್ಯವಾಗಿ ವೈರವೆಂಬ ಅಗ್ನಿಯ ಉತ್ಪತ್ತಿಗೆ ಮೂಲಕಾರಣನಾದ, ಸುಬಲನ ಮಗನಾದ ಶಕುನಿಯೂ ನಿನ್ನ ಸಲುವಾಗಿಯೇ ಯುದ್ಧಮಾಡುತ್ತಾ ಹತನಾದನು. ದ್ರೌಪದಿಗೆ ತನ್ನ ಮಾತುಗಳಿಂದ ಕ್ಲೇಶವನ್ನುಂಟುಮಾಡಿದ್ದ ಪಾಪಿಷ್ಠನಾದ ಪ್ರಾತಿಕಾಮಿಯೂ ಹತನಾದನು. ಶೂರರಾದ, ಮಹಾಪರಾಕ್ರಮದಿಂದ ಯುದ್ಧಮಾಡುತ್ತಿದ್ದ ನಿನ್ನ ಎಲ್ಲ ಸಹೋದರರೂ ನಿನ್ನ ಸಲುವಾಗಿಯೇ ಯುದ್ಧಮಾಡುತ್ತಾ ಯುದ್ಧದಲ್ಲಿ ಹತರಾದರು. ಇವರೇ ಅಲ್ಲದೇ ಇನ್ನೂ ಅನೇಕ ರಾಜರು ನಿನ್ನ ಸಲುವಾಗಿ ರಣಭೂಮಿಯಲ್ಲಿ ಪ್ರಾಣಗಳನ್ನು ತೊರೆದರು. ಈಗ ನಾನು ನಿನ್ನನ್ನೂ ಈ ಗದೆಯಿಂದ ಸಂಹಾರಮಾಡುತ್ತೇನೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ."

ಧೃತರಾಷ್ಟ್ರ! ಹೀಗೆ ಗಟ್ಟಿಯಾಗಿ ಮಾತನಾಡುತ್ತಿದ್ದ ವೃಕೋದರನನ್ನು ಕುರಿತು ಸತ್ಯವಿಕ್ರಮನಾಗಿದ್ದ ನಿನ್ನ ಮಗನು ನಿರ್ಭಯವಾಗಿಯೇ ಹೇಳಿದನು :

**ಕಿಂ ಕತ್ಥನೇನ ಬಹುನಾ ಯುಧ್ಯಸ್ವ ತ್ವಂ ವೃಕೋದರ ।**
**ಅದ್ಯ ತೇಽಹಂ ವಿನೇಷ್ಯಾಮಿ ಯುದ್ಧಶ್ರದ್ಧಾಂ ಕುಲಾಧಮ ॥೩೮॥**

"ವೃಕೋದರ! ಅತಿಯಾಗಿ ಹೊಗಳಿಕೊಳ್ಳುವುದರಿಂದ ಪ್ರಯೋಜನವೇನಿದೆ? ಕುಲಾಧಮನೇ! ಯುದ್ಧಮಾಡು. ನಾನೀಗಲೇ ನಿನ್ನ ಯುದ್ಧಶ್ರದ್ಧೆಯನ್ನು ವಿನಾಶಗೊಳಿಸುತ್ತೇನೆ.

**ನ ಹಿ ದುರ್ಯೋಧನಃ ಕ್ಷುದ್ರ ಕೇನಚಿತ್ತ್ವದ್ವಿಧೇನ ವೈ ।**
**ಶಕ್ಯಸ್ತ್ರಾಸಯಿತುಂ ವಾಚಾ ಯಥಾನ್ಯಃ ಪ್ರಾಕೃತೋ ನರಃ ॥೩೯॥**

ಕ್ಷುದ್ರನೇ! ನಿನ್ನಂತಹ ಒಬ್ಬ ಮನುಷ್ಯನು ಸಾಧಾರಣನಾದ ಮನುಷ್ಯನನ್ನು ಮಾತಿನಿಂದ ಹೆದರಿಸುವಂತೆ–ದುರ್ಯೋಧನನನ್ನು ಹೆದರಿಸಲು ಎಂದಿಗೂ ಸಾಧ್ಯವಾಗುವುದಿಲ್ಲ.

ನನಗೆ ಹಿಂದಿನಿಂದಲೂ ನಿನ್ನೊಡನೆ ಗದಾಯುದ್ಧವನ್ನು ಮಾಡಬೇಕೆಂಬ ಅಭಿಲಾಷೆಯಿದ್ದಿತು. ಅದೃಷ್ಟವಿಶೇಷದಿಂದ ನನ್ನ ಹೃದ್ಗತವಾಗಿದ್ದ ಆ ಆಶೆಯನ್ನು ಇಂದು ನನಗೆ ದೇವತೆಗಳೇ ಪೂರ್ಣಮಾಡಿಕೊಟ್ಟಿರುತ್ತಾರೆ. ದುರ್ಮತಿಯೇ! ಹೆಚ್ಚು ಮಾತನಾಡುವುದರಿಂದ, ನಿನ್ನ ಪರಾಕ್ರಮದ ವಿಷಯವಾಗಿ ಜಂಬಕೊಚ್ಚುವುದರಿಂದ ಲಾಭವೇನಿದೆ? ನಿನ್ನ ಮಾತನ್ನು ಕೃತಿಯಲ್ಲಿ ತೋರಿಸು ; ಸಾವಕಾಶಮಾಡಬೇಡ."

ಮಹಾರಾಜ! ದುರ್ಯೋಧನನು ಹೇಳಿದ ಮಾತನ್ನು ಕೇಳಿ ಸೋಮಕರೇ ಮೊದಲಾದ ಅಲ್ಲಿದ್ದ ರಾಜರೂ ಮತ್ತು ಯುದ್ಧವನ್ನು ನೋಡುವ ಸಲುವಾಗಿ ಅಲ್ಲಿಗೆ ಬಂದಿದ್ದವರೆಲ್ಲರೂ ದುರ್ಯೋಧನನನ್ನು ಬಹಳವಾಗಿ ಪ್ರಶಂಸಿಸಿದರು. ಅವರೆಲ್ಲರೂ 'ಭಲೇ ದುರ್ಯೋಧನ! ಭಲೇ ಕೌರವ!' ಎಂದು ಪ್ರಶಂಸಾವಾಕ್ಯಗಳನ್ನು ಹೇಳುತ್ತಿದ್ದಂತೆ ಆನಂದಪರವಶನಾದ ದುರ್ಯೋಧನನ ರೋಮಕೋಟಿಗಳೂ ನಿಮಿರಿನಿಂತುವು. ಕುರುನಂದನನು ಪುನಃ ಯುದ್ಧಮಾಡಲು ಧೀರವಾದ ಬುದ್ಧಿಯನ್ನು ಆಶ್ರಯಿಸಿದನು. (ಧೈರ್ಯದಿಂದ ಯುದ್ಧಮಾಡಲು ನಿಶ್ಚಯಿಸಿದನು.)

ಆನೆಯನ್ನು ಚಪ್ಪಾಳೆಗಳ ಶಬ್ದದಿಂದ ಉನ್ಮತ್ತವನ್ನಾಗಿ ಮಾಡುವಂತೆ–ಅಲ್ಲಿ ನೆರೆದಿದ್ದ ರಾಜರೆಲ್ಲರೂ ಚಪ್ಪಾಳೆಗಳ ಶಬ್ದದಿಂದ ಅಸಹನಶೀಲನಾದ ದುರ್ಯೋಧನನನ್ನು ಪುನಃ ಹರ್ಷಗೊಳಿಸಿದರು. ಮಹಾತ್ಮನಾದ ಭೀಮಸೇನನು ಗದೆಯನ್ನು ಎತ್ತಿಕೊಂಡು ಧೃತರಾಷ್ಟ್ರನ ಮಗನಾದ ಮಹಾತ್ಮನಾದ ದುರ್ಯೋಧನನನ್ನು ರಭಸದಿಂದ ಆಕ್ರಮಿಸಿದನು. ಆ ಸಮಯದಲ್ಲಿ ವಿಜಯೇಚ್ಛುಗಳಾದ ಪಾಂಡವರ ಕಡೆಯ ಆನೆಗಳು ಬಾರಿ-ಬಾರಿಗೂ ಘೀಳಿಡುತ್ತಿದ್ದುವು. ಕುದುರೆಗಳು ಪುನಃ-ಪುನಃ ಕೆನೆಯುತ್ತಿದ್ದುವು. ಪಾಂಡವರ ಶಸ್ತ್ರಾಸ್ತ್ರಗಳು ದೇದೀಪ್ಯಮಾನವಾಗಿ ಬೆಳಗುತ್ತಿದ್ದುವು."

ಐ೬ನೆಯ ಅಧ್ಯಾಯವು ಮುಗಿಯಿತು.

೫೭ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಭೀಮ-ದುರ್ಯೋಧನರ ಗದಾಯುದ್ಧದ ವರ್ಣನೆ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಧೀರಹೃದಯನಾದ ದುರ್ಯೋಧನನು ರಭಸದಿಂದ ಆಕ್ರಮಿಸಲು ಬರುತ್ತಿರುವ ಭೀಮಸೇನನನ್ನು ನೋಡಿ ತಾನೂ ಸಹ ಗರ್ಜನೆಮಾಡುತ್ತಾ ರಭಸದಿಂದಲೇ ಅವನನ್ನು ಎದುರಿಸಿದನು. ಕೊಂಬುಗಳಿಂದ ಕೂಡಿದ ಎರಡು ಎತ್ತುಗಳಂತೆ ಭೀಮ-ದುರ್ಯೋಧನರು ಪರಸ್ಪರವಾಗಿ ಯುದ್ಧದಲ್ಲಿ ತೊಡಗಿದರು. ಭೀಮ-ದುರ್ಯೋಧನರ ಪರಸ್ಪರ ಗದಾಪ್ರಹಾರಗಳಿಂದ ಉತ್ಪನ್ನವಾದ ಶಬ್ದವು ವಜ್ರಪಾತಕ್ಕೆ ಸಮಾನವಾಗಿ ಭಯಂಕರವಾಗಿದ್ದಿತು. ಒಬ್ಬರನ್ನು ಮತ್ತೊಬ್ಬರು ಗೆಲ್ಲಬೇಕೆಂದು ಉದ್ದೇಶಿಸಿ ಯುದ್ಧಮಾಡುತ್ತಿದ್ದ ಭೀಮ-ದುರ್ಯೋಧನರ ಆ ಮಹಾಗದಾಯುದ್ಧವು– ಹಿಂದೆ ಇಂದ್ರನಿಗೂ ಪ್ರಹ್ಲಾದನಿಗೂ ನಡೆದ ಮಹಾಯುದ್ಧದಂತೆ– ರೋಮಾಂಚಕರವೂ, ಭಯಂಕರವೂ ಆಗಿದ್ದಿತು. ಇಬ್ಬರ ಎಲ್ಲ ಅಂಗೋಪಾಂಗಗಳೂ ರಕ್ತದಿಂದ ತೋಯ್ದುಹೋಗಿದ್ದುವು. ಆ ಸಮಯದಲ್ಲಿ ಗದಾಪಾಣಿಗಳಾಗಿದ್ದ, ಮಹಾತ್ಮರಾದ, ದೃಢಮನಸ್ಕರಾದ ಭೀಮ-ದುರ್ಯೋಧನರು–ಹೂವರಳಿದ ಮುತ್ತುಗದ ಮರಗಳಂತೆಯೇ ಕಾಣುತ್ತಿದ್ದರು. ಸುದಾರುಣವಾದ ಮಹಾಗದಾಯುದ್ಧವು ಹಾಗೆ ನಡೆಯುತ್ತಿರಲಾಗಿ, ಗದೆಗಳ ಪರಸ್ಪರವಾದ ಸಂಘರ್ಷದಿಂದಾಗಿ ಅಗ್ನಿಯ ಕಿಡಿಗಳು ಆಕಾಶಕ್ಕೆ ಅನವರತವಾಗಿ ಹಾರಿ ಹೋಗುತ್ತಿದ್ದುದರಿಂದ ಆ ಸಮಯದಲ್ಲಿ ಆಗಸವು ಮಿಣುಕುಹುಳುಗಳಿಂದ ವ್ಯಾಪ್ತವಾಗಿರುವಂತೆ ದರ್ಶನೀಯವಾಗಿದ್ದಿತು. ಹಾಗೆ ಮಹಾಭಯಂಕರವಾದ ಗದಾಯುದ್ಧವು ನಡೆಯುತ್ತಿರಲಾಗಿ ಯುದ್ಧಮಾಡುತ್ತಿದ್ದ ಅರಿಂದಮರಾದ ಭೀಮ- ದುರ್ಯೋಧನರಿಬ್ಬರೂ ಬಹಳವಾಗಿ ಬಳಲಿದರು.

ಶತ್ರುಸಂತಾಪಕರಾದ ಅವರಿಬ್ಬರೂ ಸ್ವಲ್ಪಹೊತ್ತು ವಿಶ್ರಮಿಸಿಕೊಂಡರು. ದಣಿವಾರಿದ ಬಳಿಕ ವಿಚಿತ್ರವಾಗಿದ್ದ, ಸುಂದರವಾಗಿದ್ದ ತಮ್ಮೆರಡು ಗದೆಗಳನ್ನೂ ಮೇಲೆತ್ತಿ ಪರಸ್ಪರವಾಗಿ ಪ್ರಹರಿಸತೊಡಗಿದರು.

ಸಮಾನಬಲರಾದ, ಮಹಾಪರಾಕ್ರಮಿಗಳಾದ, ನರಶ್ರೇಷ್ಠರಾದ ಭೀಮ-ದುರ್ಯೋಧನರು ದಣಿವಾರಿಸಿಕೊಂಡು–ಹೆಣ್ಣಾನೆಯ ಸಲುವಾಗಿ ಎರಡು ಮದಗಜಗಳು ಸೆಣೆಸಾಡುವಂತೆ–ಪುನಃ ಗದೆಗಳನ್ನು ಹಿಡಿದು ಯುದ್ಧದಲ್ಲಿ ತೊಡಗಿದುದನ್ನು ನೋಡಿ ದೇವ-ಗಂಧರ್ವ-ಮಾನವರೆಲ್ಲರೂ ಆಶ್ಚರ್ಯಭರಿತರಾದರು. ದುರ್ಯೋಧನ-ವೃಕೋದರರು ಗದೆಗಳನ್ನೆತ್ತಿ ಕೊಂಡು ಪ್ರಹರಿಸುವ ಸಲುವಾಗಿ ನಿಂತಿರುವುದನ್ನು ನೋಡಿ ಎಲ್ಲ ಪ್ರಾಣಿಗಳಿಗೂ ಯಾರಿಗೆ ವಿಜಯವು ಲಭಿಸುವುದೆಂಬುದರಲ್ಲಿ ಸಂದೇಹ ವುಂಟಾಯಿತು. ಬಲಿಷ್ಠರಲ್ಲಿ ಶ್ರೇಷ್ಠರಾದ ಆ ಇಬ್ಬರು ಅಣ್ಣ-ತಮ್ಮಂದಿರು ಒಬ್ಬರು ಮತ್ತೊಬ್ಬರನ್ನು ಪ್ರಹರಿಸಿ ಛಿದ್ರಾನ್ವೇಷಣೆಮಾಡುವ ಇಚ್ಛೆಯಿಂದ ಪರಸ್ಪರವಾಗಿ ಮಿಳಿತರಾಗುತ್ತಿದ್ದರು. ಮತ್ತೊಮ್ಮೆ ಛಿದ್ರವಿರುವ ಕಡೆಗೆ ಹೆಜ್ಜೆಯಿಡುತ್ತಿದ್ದರು. ರಣಭೂಮಿಯಲ್ಲಿ ಭೀಮಸೇನನು ವರಸೆ-ವರಸೆಯಾಗಿ ತಿರುಗಿಸುತ್ತಿದ್ದ, ಯಮದಂಡಸದೃಶವಾದ, ಬಹುಭಾರ ವಾಗಿರುವ, ಮೇಲೆತ್ತಿದ ಇಂದ್ರನ ವಜ್ರಾಯುಧದಂತಿರುವ, ಮಹಾಭಯಂಕರವಾದ, ಶತ್ರುಗಳನ್ನು ಛಿನ್ನ-ಭಿನ್ನಗೊಳಿಸುವ ಸಾಮರ್ಥ್ಯವನ್ನು ಹೊಂದಿದ್ದ ಮಹಾಗದೆಯನ್ನು ಪ್ರೇಕ್ಷಕರು ನೋಡಿದರು. ಭೀಮಸೇನನು ಗದೆಯನ್ನು ತಿರುಗಿಸುತ್ತಿದ್ದಾಗ ಭಯಂಕರವಾದ ಮತ್ತು ಘೋರವಾದ ಶಬ್ದವು ಮುಹೂರ್ತಪರ್ಯಂತವಾಗಿ ಕೇಳುತ್ತಲೇ ಇದ್ದಿತು. ನಿನ್ನ ಮಗ ದುರ್ಯೋಧನನು, ಶತ್ರುವಾದ ಭೀಮಸೇನನು ಮಹಾವೇಗಯುಕ್ತವಾದ ಗದೆಯನ್ನು ಭಿನ್ನ-ಭಿನ್ನಕ್ರಮಗಳಿಂದ ತಿರುಗಿಸುತ್ತಿರುವುದನ್ನು ನೋಡಿ ಅಚ್ಚರಿಗೊಂಡನು. ಆ ಸಮಯದಲ್ಲಿ ನಾನಾವಿಧವಾದ ರೀತಿಗಳಲ್ಲಿ ಹೆಜ್ಜೆಗಳನ್ನಿಡುತ್ತಾ ಮಂಡಲಕ್ರಮಗಳಲ್ಲಿ ಸಂಚರಿಸುತ್ತಾ ಮಹಾವೀರನಾದ ಭೀಮಸೇನನು ಬಹಳವಾಗಿ ಶೋಭಿಸಿದನು. ಭೀಮ-ದುರ್ಯೋಧನ ರಿಬ್ಬರೂ ಪರಸ್ಪರವಾಗಿ ಸಂಘರ್ಷಿಸುತ್ತಾ, ಆತ್ಮರಕ್ಷಣೆಗಾಗಿ ಸತತವಾಗಿ ಪ್ರಯತ್ನಿಸುತ್ತಾ–ತಿನಿಸಿನ ಸಲುವಾಗಿ ಕಚ್ಚಾಡುವ ಎರಡು ಬೆಕ್ಕುಗಳಂತೆ– ಒಬ್ಬರನ್ನೊಬ್ಬರು ಗಾಯಗೊಳಿಸುತ್ತಿದ್ದರು. ಭೀಮಸೇನನು ಬಹುವಿಧವಾದ ನಡಿಗೆಗಳನ್ನಿಡುತ್ತಿದ್ದನು. ವಿಚಿತ್ರವಾದ ಗತ-ಪ್ರತ್ಯಾಗತಗಳ *ಮಂಡಲಗಳನ್ನು ಪ್ರದರ್ಶಿಸುತ್ತಿದ್ದನು.

---

*ಮಂಡಲಾನಿ ಎಂಬುದಕ್ಕೆ ವ್ಯಾಖ್ಯಾನಕಾರರು ಶತ್ರುವಿನ ಸುತ್ತಲೂ ನಾನಾವಿಧ

***ಅಸ್ತ್ರಯನ್ತ್ರಾಣಿ ಚಿತ್ರಾಣಿ ಸ್ಥಾನಾನಿ ವಿವಿಧಾನಿ ಚ ।**
**ಪರಿಮೋಕ್ಷಂ ಪ್ರಹಾರಾಣಾಂ ವರ್ಜನಂ ಪರಿಧಾವನಮ್ ॥೧೮॥**

ಎಸೆಯುವುದು, ಹಿಡಿಯುವುದು, ವಿವಿಧಸ್ಥಾನಗಳಲ್ಲಿ ಸಂಚರಿಸುವುದು–ಈ ರೀತಿಯ ಕ್ರಮಗಳನ್ನು ಅನುಸರಿಸುತ್ತಾ ಇಬ್ಬರೂ ಶತ್ರುವಿನ ಪ್ರಹಾರಗಳಿಂದ ತಪ್ಪಿಸಿಕೊಳ್ಳುತ್ತಿದ್ದರು. ಪ್ರತಿಪಕ್ಷಿಯ ಪ್ರಹಾರವನ್ನು ವ್ಯರ್ಥಗೊಳಿಸುತ್ತಿದ್ದರು. ಶತ್ರುವಿನ ಎಡಪಕ್ಕಕ್ಕೂ ಮತ್ತು ಬಲಪಕ್ಕಕ್ಕೂ ಧಾವಿಸುತ್ತಿದ್ದರು.

**ಅಭಿದ್ರವಣಮಾಕ್ಷೇಪಮವಸ್ಥಾನಂ ಸವಿಗ್ರಹಮ್ ।**
**ಪರಿವರ್ತನಸಂವರ್ತಮವಪ್ಲುತಮುಪಪ್ಲುತಮ್ ॥೧೯॥**

**ಉಪನ್ಯಸ್ತಮಪನ್ಯಸ್ತಂ ಗದಾಯುದ್ಧವಿಶಾರದೌ ।**
**ಏವಂ ತೌ ವಿಚರನ್ತೌ ತು ಪರಸ್ಪರಮಯುಧ್ಯತಾಮ್ ॥೨೦॥**

ಗದಾಯುದ್ಧವಿಶಾರದರಾದ ಭೀಮ-ದುರ್ಯೋಧನರು ಗದಾಯುದ್ಧ ಮಾಡುತ್ತಿದ್ದಾಗ ಅಭಿದ್ರವಣ, ಆಕ್ಷೇಪ, ಅವಸ್ಥಾನ, ಸವಿಗ್ರಹ, ಪರಿವರ್ತನ, ಸಂವರ್ತ, ಅವಪ್ಲುತ, ಉಪಪ್ಲುತ, ಉಪನ್ಯಸ್ತ, ಅಪನ್ಯಸ್ತ–ಈ ಕ್ರಮಗಳಲ್ಲಿ ಸಂಚರಿಸುತ್ತಾ ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಿದ್ದರು.

(**ಅಭಿದ್ರವಣಂ-ವೇಗೇನಾಭ್ಯಾಗಮನಂ** - ವೇಗದಿಂದ ಎದುರಾಳಿಗೆ ಅಭಿಮುಖವಾಗಿ ಹೋಗುವುದು. **ಆಕ್ಷೇಪಂ–ಪರಯತ್ನಸ್ಯ ತತ್ಪಾತನ ಹೇತುತಾ ಸಂಪಾದನಂ** = ಎದುರಾಳಿಯ ಪ್ರಯತ್ನವನ್ನು ವಿಫಲಗೊಳಿಸಿ ಅವನನ್ನು ಬೀಳಿಸುವ ಬಗೆಯನ್ನು ತಿಳಿದು ಬೀಳಿಸುವುದು. **ಅವಸ್ಥಾನಂ-**

---

ವಾದ ಹೆಜ್ಜೆಗಳನ್ನಿಟ್ಟುಕೊಂಡು ಸುತ್ತುವುದು–ಎಂದು ಅರ್ಥಮಾಡಿರುತ್ತಾರೆ. ಮಣ್ಡಲಾನಿ = ಶತ್ರೋಃ ಪರಿವೇಷ್ಟನಾನಿ; ಪರಿತೋ ಭ್ರಮಣಾನಿ ಗತಪ್ರತ್ಯಾಗತಾನಿ. ಗತಂ = ಶತ್ರೋಃ ಸಮ್ಮುಖಗಮನಂ - ಶತ್ರುವಿಗೆ ಎದುರಾಗಿ ಹೋಗುವುದು. ಪ್ರತ್ಯಾಗತಂ = ಆಭಿಮುಖ್ಯಂ ಆತ್ಯಜತ ಏವ ಅಪಸರಣಂ – ಶತ್ರುವಿಗೆ ಅಭಿಮುಖವಾಗಿಯೇ ಇದ್ದುಕೊಂಡು ಹಿಂದಕ್ಕೆ ಸರಿಯುವುದು.

*ಅಸ್ತ್ರಯನ್ತ್ರಾಣಿ : ಭೀಮ-ದುರ್ಯೋಧನರಿಗೆ ನಡೆಯುತ್ತಿರುವುದು ಗದಾಯುದ್ಧ. ಗದಾಯುದ್ಧದಲ್ಲಿ ಅಸ್ತ್ರಗಳನ್ನಾಗಲೀ ಶತಘ್ನಿಯೇ ಮೊದಲಾದ ಯಂತ್ರಾ

ಅಚಾಂಚಲ್ಯಂ = ಚಂಚಲತೆಯಿಲ್ಲದೆ ಸ್ಥಿರವಾಗಿರುವುದು. ಸವಿಗ್ರಹಂ-ಶತ್ರೌ ಉತ್ಥಿತೇ ಪುನಸ್ತೇನ ಸಹ ಯುದ್ಧಕರಣಂ = ಶತ್ರುವು ಮೇಲೆದ್ದ ನಂತರ ಪುನಃ ಅವನೊಡನೆ ಯುದ್ಧಮಾಡುವುದು. ಪರಿವರ್ತನಂ-ಶತ್ರುಂ ಪ್ರಹರ್ತುಂ ಪರಿತಃ ಪ್ರಸರಣಂ =ಶತ್ರುವನ್ನು ಪ್ರಹರಿಸಲು ಅವನ ಸುತ್ತಲೂ ಸಂಚರಿಸುವುದು. ಸಂವರ್ತಂ - ಶತ್ರುಪ್ರಸರಣಸ್ಯ ಅವರೋಧನಂ =ತನ್ನನ್ನು ಪ್ರಹರಿಸಲು ಸುತ್ತಲೂ ಸಂಚರಿಸುವ ಶತ್ರುವನ್ನು ತಡೆಯುವುದು. ಅವಪ್ಲುತಂ - ಪ್ರಹಾರವಂಚನಾರ್ಥಂ ನಮ್ರೀಭೂಯ ನಿಃಸರಣಂ = ಪ್ರಹಾರವನ್ನು ತಪ್ಪಿಸಿಕೊಳ್ಳಲು ದೇಹವನ್ನು ಬಗ್ಗಿಸಿಕೊಂಡು ಹೊರಟುಹೋಗುವುದು. ಉಪಪ್ಲುತಂ-ತದೇವ ಅರ್ವಾಗ್ಗಮನಯುಕ್ತಂ = ಪ್ರಹಾರವನ್ನು ತಪ್ಪಿಸಿಕೊಳ್ಳಲು ಹಿಂದಕ್ಕೆ ಹೋಗುವುದು. ಉಪನ್ಯಸ್ತಂ-ಉಪೇತ್ಯಾಯುಧ ಪ್ರಕ್ಷೇಪಃ = ಆಯುಧದಿಂದ ಪ್ರಹರಿಸುವುದು. ಅಪನ್ಯಸ್ತಂ-ಪರಾವೃತ್ಯ ಪೃಷ್ಠತಃ ಕೃತೇನ ಹಸ್ತೇನ ಶತ್ರೋಸ್ತಾಡನಂ = ಹಿಂದಕ್ಕೆ ತಿರುಗಿ ಆಯುಧವಿರುವ ಕೈಯನ್ನು ಹಿಂಭಾಗಕ್ಕೆ ಮಾಡಿ ಶತ್ರುವನ್ನು ಹಿಮ್ಮುಖನಾಗಿಯೇ ಇದ್ದು ಪ್ರಹರಿಸುವುದು.)

ಕುರುಶ್ರೇಷ್ಠರಾದ ಮಹಾಬಲಿಷ್ಠರಾದ ಭೀಮ-ದುರ್ಯೋಧನರು ಯುದ್ಧಕುಶಲತೆಯಿಂದ ಸಮಯಗಳಲ್ಲಿ ಪರಸ್ಪರವಾಗಿ ವಂಚಿಸುತ್ತಾ, ಯುದ್ಧವೆಂಬ ಆಟವನ್ನೇ ಆಡುತ್ತಾ, ಮಂಡಲಕ್ರಮದಲ್ಲಿ ಸಂಚರಿಸುತ್ತಾ, ಸುತ್ತಲೂ ಇದ್ದ ಪ್ರೇಕ್ಷಕರಿಗೆ ಯುದ್ಧಕ್ರೀಡೆಯನ್ನು ಪ್ರದರ್ಶಿಸುತ್ತಿದ್ದರು. ಮರುಕ್ಷಣದಲ್ಲಿಯೇ ಅವರು ಪರಸ್ಪರವಾಗಿ ಸಂಘರ್ಷಿಸಿ ಗದೆಗಳಿಂದ ಒಬ್ಬರು ಮತ್ತೊಬ್ಬರನ್ನು ಅಪ್ಪಳಿಸುತ್ತಿದ್ದರು. ಎರಡು ಮದಿಸಿದ ಆನೆಗಳು ವಿಷಾಣ

---

ಯುಧಗಳನ್ನಾಗಲೀ ತೋರಿಸುವುದು ಹೇಗೆ? ಅವುಗಳನ್ನು ಬಿಡುವಂತೆಯೇ ಗದೆಯನ್ನು ಪ್ರಯೋಗಿಸುತ್ತಿದ್ದರು. ಶತಘ್ನಿಯಿಂದ ಶತ್ರುವನ್ನು ಪ್ರಹರಿಸುವಂತೆ ಗದೆಯಿಂದಲೇ ಪ್ರಹರಿಸುತ್ತಿದ್ದರು. ಇಷ್ಟುಮಾತ್ರ ಸಮಾಧಾನಹೇಳಬಹುದಾಗಿದೆ. ಪಾಠಾಂತರದಲ್ಲಿ ಗೋಮೂತ್ರಿ-ಕಾಣಿ ಚಿತ್ರಾಣಿ ಎಂಬುದಾಗಿದೆ. ಗೋಮೂತ್ರಿಕಾಗತ-ಪ್ರತ್ಯಾಗತ ಇವುಗಳು ನಡಿಗೆಗಳು. ಈ ನಡಿಗೆಗಳನ್ನಿಡುತ್ತಾ ಯುದ್ಧಮಾಡುತ್ತಿದ್ದರು–ಎಂದಾಗುತ್ತದೆ. ಈ ಪಾಠಕ್ರಮದಲ್ಲಿ ಸಮನ್ವಯಮಾಡಲು ಕಷ್ಟವೇನೂ ಆಗುವುದಿಲ್ಲ. ಅಸ್ತ್ರಯನ್ತ್ರಾಣಿ ಎಂಬ ಪಾಠಕ್ರಮವನ್ನೇ ಅನುಸರಿಸಿ ವ್ಯಾಖ್ಯಾನಕಾರರು ಹೀಗೆ ವ್ಯಾಖ್ಯೆಮಾಡಿರುತ್ತಾರೆ. ಅಸ್ತ್ರಯನ್ತ್ರಾಣಿ=ಕಿಂಚಿನ್ಮರ್ಮದೇಶಂ

ಗಳಿಂದ ತಿವಿದಾಡಿ ರಕ್ತಸಿಕ್ತವಾಗುವಂತೆ ಭೀಮ-ದುರ್ಯೋಧನರು ಪರಸ್ಪರವಾಗಿ ಸಂಘರ್ಷಿಸಿ ರಕ್ತದಿಂದ ತೋಯ್ದು ಬಹಳವಾಗಿ ಪ್ರಕಾಶಿಸುತ್ತಿದ್ದರು.

ಪರಂತಪನೇ! ಈ ರೀತಿ ಹಗಲು ಉರುಳಿಹೋಗುವುದರಲ್ಲಿದ್ದ ಆ ಸಮಯದಲ್ಲಿ ವೃತ್ರ-ವಾಸವರ ಯುದ್ಧದಂತೆ ಭೀಮನಿಗೂ ಮತ್ತು ದುರ್ಯೋಧನನಿಗೂ ಘೋರರೂಪವಾದ, ಕ್ರೂರವಾದ ಯುದ್ಧವು ನಡೆಯುತ್ತಿದ್ದಿತು. ಗದಾಪಾಣಿಗಳಾಗಿದ್ದ ಇಬ್ಬರು ಮಹಾಬಲರೂ ಮಂಡಲಾಕಾರದ ಯುದ್ಧಸ್ಥಳದಲ್ಲಿ ನಿಂತಿದ್ದರು. ಬಲಿಷ್ಠನಾದ ದುರ್ಯೋಧನನು ಆ ಮಂಡಲದ ಬಲಭಾಗದಲ್ಲಿಯೂ ಭೀಮಸೇನನು ಎಡಭಾಗದಲ್ಲಿಯೂ ಉಪಸ್ಥಿತರಾಗಿದ್ದರು. ಭೀಮಸೇನನು ಎಡಭಾಗದ ಮಂಡಲದಲ್ಲಿ ಸಂಚರಿಸುತ್ತಿದ್ದಾಗ ದುರ್ಯೋಧನನು ಭೀಮಸೇನನ ಪಾರ್ಶ್ವಭಾಗವನ್ನು (ಪಕ್ಕೆಯನ್ನು) ಗದೆಯಿಂದ ಪ್ರಹರಿಸಿದನು. ನಿನ್ನ ಮಗನಿಂದ ಪ್ರಹೃತನಾದ ಭೀಮಸೇನನು ತನಗೆ ಬಿದ್ದ ಪೆಟ್ಟನ್ನು ಗಣನೆಗೇ ತೆಗೆದುಕೊಳ್ಳದೇ ಕೈಯಲ್ಲಿದ್ದ ಭಾರವಾದ ಗದೆಯನ್ನು ಗಿರ-ಗಿರನೆ ತಿರುಗಿಸತೊಡಗಿದನು. ಇಂದ್ರನ ವಜ್ರಾಯುಧಕ್ಕೆ ಸಮಾನವಾಗಿದ್ದ, ಘೋರರೂಪವಾಗಿದ್ದ, ಯಮದಂಡದೋಪಾದಿಯಲ್ಲಿ ಭೀಮಸೇನನಿಂದ ಮೇಲಕ್ಕೆತ್ತಲ್ಪಟ್ಟಿದ್ದ ಭೀಮಸೇನನ ಆ ಮಹಾಗದೆಯನ್ನು ಪ್ರೇಕ್ಷಕರು ನೋಡಿದರು. ಶತ್ರುತಾಪಕನಾದ ನಿನ್ನ ಮಗನು ಭೀಮಸೇನನು ತನ್ನನ್ನು ಪ್ರಹರಿಸುವುದಕ್ಕಾಗಿ ಗದೆಯನ್ನು ತಿರುಗಿಸುತ್ತಿರುವುದನ್ನು ನೋಡಿ ತನ್ನ ಘೋರವಾದ ಗದೆಯನ್ನು ಮೇಲೆತ್ತಿ ರಭಸದಿಂದ ಪ್ರಹರಿಸಿದನು. ನಿನ್ನ ಪುತ್ರನ ಗದೆಯು ವಾಯುವೇಗದಿಂದ ಹೋಗಿ ವಾಯುಪುತ್ರನ ಗದೆಯನ್ನು ಬಡಿದೊಡನೆಯೇ ಭಯಂಕರವಾದ ಶಬ್ದವುಂಟಾಯಿತು ಮತ್ತು ಬೆಂಕಿಯ ಕಿಡಿಗಳೂ ಹೊರಹೊಮ್ಮಿದುವು. ವಿಧ-ವಿಧವಾದ ಗತಿಗಳಲ್ಲಿಯೂ ಮತ್ತು ಮಂಡಲಗಳಲ್ಲಿಯೂ ಸಂಚರಿಸುತ್ತಿದ್ದ ದುರ್ಯೋಧನನು ಆ

---

ಆಕ್ಷಿಪ್ಯ ಯೇನ ಶತ್ರೋಃ ಉತ್ಕ್ಷೇಪಣಂ ಅಪಕ್ಷೇಪಣಂ ಚ ಕ್ರಿಯತೇ ತತ್ ಅಸ್ತ್ರಯನ್ತ್ರಂ = ಮರ್ಮಸ್ಥಳವನ್ನು ಹಿಡಿದು ಮೇಲಕ್ಕೆಸೆಯುವುದು ಮತ್ತು ಕೆಳಕ್ಕೆ ಹಾಕುವುದು. ಇದಕ್ಕೆ ಅಸ್ತ್ರಯಂತ್ರ ಎಂದು ಹೆಸರು. ಹೀಗೆ ಅರ್ಥಮಾಡುವಾಗ ವ್ಯಾಖ್ಯಾನಕಾರರು ಅಸ್ತ್ರಯಂತ್ರಶಬ್ದದ ವ್ಯುತ್ಪತ್ತಿಯನ್ನು ಹೀಗೆ ಮಾಡಿರುತ್ತಾರೆ. ಅಸ್ಯತೇ ಕ್ಷಿಪ್ಯತೇ ಅನೇನ ಇತ್ಯಸ್ತ್ರಂ - ತಚ್ಚ ತದ್ಯನ್ತ್ರಂ ನಿಗ್ರಹಣಂ ಚ ಅಸ್ತ್ರಯನ್ತ್ರಂ.

ಸಮಯದಲ್ಲಿ ಭೀಮಸೇನನಿಗಿಂತಲೂ ಅಧಿಕವಾದ ತೇಜಸ್ಸಿನಿಂದ ಕೂಡಿರುವವನಂತೆ ಕಾಣುತ್ತಿದ್ದನು. ಭೀಮಸೇನನು ಅತ್ಯಂತರಭಸದಿಂದ ತಿರುಗಿಸು



ತ್ತಿದ್ದ ಆ ಮಹಾಗದೆಯು ಮಹಾಧ್ವನಿಮಾಡುತ್ತಾ ಧೂಮಸಹಿತವಾದ ಮತ್ತು ಜ್ವಾಲೆಗಳಿಂದ ಕೂಡಿದ ಅಗ್ನಿಯನ್ನು ಉಗುಳುತ್ತಿದ್ದಿತು. ಭೀಮಸೇನನಿಂದ ರಭಸದಿಂದ ತಿರುಗಿಸಲ್ಪಟ್ಟ ಆ ಗದೆಯನ್ನು ನೋಡಿದ ದುರ್ಯೋಧನನು ಲೋಹಮಯವಾದ ಅತ್ಯಂತಭಾರವಾದ ತನ್ನ ಗದೆಯನ್ನೂ ತಿರುಗಿಸುತ್ತಾ ಬಹಳ ಶೋಭಾಯಮಾನವಾಗಿ ಕಾಣುತ್ತಿದ್ದನು. ವಾಯುವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ ಮಹಾತ್ಮನಾದ ದುರ್ಯೋಧನನ ಗದೆಯನ್ನು ನೋಡಿದೊಡನೆಯೇ ಪಾಂಡವರನ್ನೂ ಮತ್ತು ಸೋಮಕರನ್ನೂ

ಭಯವು ಆವರಿಸಿತು. ಭೀಮ-ದುರ್ಯೋಧನರು ಸುತ್ತಲೂ ಇದ್ದ ಪ್ರೇಕ್ಷಕರಿಗೆ ಯುದ್ಧಕ್ರೀಡೆಯನ್ನು ಪ್ರದರ್ಶಿಸುತ್ತಿದ್ದರು. ಮರುಕ್ಷಣದಲ್ಲಿಯೇ ಅವರು ಪರಸ್ಪರವಾಗಿ ಸಂಘರ್ಷಿಸಿ ತಮ್ಮೆರಡೂ ಗದೆಗಳಿಂದ ಒಬ್ಬರು ಮತ್ತೊಬ್ಬರನ್ನು ಅಪ್ಪಳಿಸುತ್ತಿದ್ದರು. ಎರಡು ಮದಿಸಿದ ಆನೆಗಳು ಕೊಂಬುಗಳಿಂದ ತಿವಿದಾಡಿ ರಕ್ತಸಿಕ್ತವಾಗುವಂತೆ–ಭೀಮ-ದುರ್ಯೋಧನರು ಪರಸ್ಪರವಾಗಿ ಸಂಘರ್ಷಿಸಿ ರಕ್ತದಿಂದ ತೋಯ್ದು ಬಹಳವಾಗಿ ಪ್ರಕಾಶಿಸುತ್ತಿದ್ದರು. ಹೀಗೆ ದಿನವು ಸಮಾಪ್ತಿಯಾಗುವುದರಲ್ಲಿದ್ದ ಆ ಸಮಯದಲ್ಲಿ ಆ ಇಬ್ಬರು ವೀರರಿಗೂ ವೃತ್ರ–ವಾಸವರ ಯುದ್ಧದಂತೆ ಘೋರರೂಪವಾದ ಮತ್ತು ಕ್ರೂರವಾದ ಯುದ್ಧವು ನಡೆಯುತ್ತಿದ್ದಿತು. ಮಹಾಬಲನಾದ ನಿನ್ನ ಮಗನು ಭೀಮಸೇನನು ನಿಂತಿರುವುದನ್ನು ನೋಡಿ ವಿಚಿತ್ರತರವಾದ ನಡಿಗೆಗಳನ್ನಿಡುತ್ತಾ ಗದೆಯನ್ನು ವರಸೆ-ವರಸೆಯಾಗಿ ತಿರುಗಿಸುತ್ತಾ ಭೀಮನನ್ನು ಆಕ್ರಮಿಸಿದನು. ಅತಿಕ್ರುದ್ಧನಾಗಿ ತನ್ನನ್ನಾಕ್ರಮಿಸಲು ಬರುತ್ತಿದ್ದ, ಸುವರ್ಣದಿಂದ ಸಮಲಂಕೃತವಾಗಿದ್ದ, ಮಹಾವೇಗಯುಕ್ತವಾಗಿದ್ದ ದುರ್ಯೋಧನನ ಗದೆಯನ್ನು ಕ್ರುದ್ಧನಾಗಿದ್ದ ಭೀಮಸೇನನು ತನ್ನ ಗದೆಯಿಂದ ಪ್ರಹರಿಸಿದನು. ಆ ಎರಡು ಮಹಾಗದೆಗಳ ಸಂಘರ್ಷಣೆಯಿಂದ ಎರಡು ವಜ್ರಾಯುಧಗಳ ಸಂಘರ್ಷಣೆಯಿಂದ ಆಗುವಂತೆ ಅಗ್ನಿಯ ಕಿಡಿಗಳಿಂದ ಕೂಡಿದ ಮಹಾಶಬ್ದವುಂಟಾಯಿತು. ಭೀಮಸೇನಪ್ರಮುಕ್ತವಾದ, ವೇಗಯುಕ್ತವಾಗಿದ್ದ, ದುರ್ಯೋಧನನ ಗದೆಯ ಮೇಲೆ ಬಿದ್ದ ಭಯಂಕರವಾದ ಆ ಗದೆಯ ಧ್ವನಿಯಿಂದ ಭೂಮಿಯೇ ನಡುಗಿತು. ಮದಿಸಿದ ಆನೆಯೊಂದು ತನ್ನಂತೆಯೇ ಮದಿಸಿದ ಮತ್ತೊಂದು ಆನೆಯನ್ನು ನೋಡಿದೊಡನೆಯೇ ಕೋಪಗೊಳ್ಳುವಂತೆ– ದುರ್ಯೋಧನನು ಭೀಮಸೇನನ ಗದೆಯಿಂದ ತನ್ನ ಗದೆಯು ಪ್ರತಿಹತವಾದುದನ್ನು ಸಹಿಸಿಕೊಳ್ಳಲಿಲ್ಲ. ಅನಂತರ ದುರ್ಯೋಧನನು ಭೀಮಸೇನನನ್ನು ಸಂಹರಿಸಬೇಕೆಂದು ದೃಢವಾಗಿ ನಿಶ್ಚಯಿಸಿ ಮಂಡಲದ ಎಡಪಕ್ಕದಲ್ಲಿ ಸುತ್ತುತ್ತಾ ಸಮಯವರಿತು ನೆಗೆದು ಭಯಂಕರವೇಗದಿಂದ ಕೂಡಿದ್ದ ಗದೆಯಿಂದ ಭೀಮಸೇನನ ತಲೆಯನ್ನು ಪ್ರಹರಿಸಿದನು. ಅಂತಹ ಭಯಂಕರವೇಗಯುಕ್ತವಾದ ಗದೆಯಿಂದ ಪ್ರಹೃತನಾದರೂ ಭೀಮಸೇನನು ಅಳ್ಳಾಡಲಿಲ್ಲ. ಅದು ಪ್ರೇಕ್ಷಕರಿಗೆ ಪರಮಾದ್ಭುತವೆನಿಸಿತು. ದುರ್ಯೋಧನನ

ಮಹಾಗದೆಯಿಂದ ಪ್ರಹೃತನಾದರೂ ಭೀಮಸೇನನು ಒಂದು ಹೆಜ್ಜೆಯನ್ನೂ ಮುಂದಕ್ಕಾಗಲೀ ಹಿಂದಕ್ಕಾಗಲೀ ಇಡಲಿಲ್ಲ. ಮಹಾರಾಜ! ಅದು ನಿಶ್ಚಯ ವಾಗಿಯೂ ಅತ್ಯಾಶ್ಚರ್ಯಕರವಾದ ವಿಷಯವೇ ಸರಿ. ಭೀಮಸೇನನ ಆ ಸ್ಥೈರ್ಯವನ್ನು ನೋಡಿ ಎಲ್ಲ ಸೈನಿಕರೂ ಪ್ರಶಂಸಿಸಿದರು. ಅನಂತರ ಭಯಂಕರಪರಾಕ್ರಮನಾದ ಭೀಮಸೇನನು ಅತ್ಯಂತಭಾರವಾಗಿದ್ದ, ಪ್ರದೀಪ್ತ ವಾಗಿದ್ದ, ಸುವರ್ಣದಿಂದ ಸಮಲಂಕೃತವಾಗಿದ್ದ ಮಹಾಗದೆಯನ್ನು ದುರ್ಯೋಧನನ ಮೇಲೆ ರಭಸದಿಂದ ಎಸೆದನು. ಆದರೆ ಮಹಾಬಲಿಷ್ಠ ನಾದ ದುರ್ಯೋಧನನು ಆ ಮಹಾಗದೆಯ ಪ್ರಹಾರದಿಂದ ಸ್ವಲ್ಪವಾದರೂ ಗಾಬರಿಗೊಳ್ಳಲಿಲ್ಲ. ಪದವಿನ್ಯಾಸಗಳ ಲಾಘವದಿಂದಲೇ (ಶೀಘ್ರವಾಗಿ ಪಕ್ಕಕ್ಕೆ ಸರಿದು) ಭೀಮಸೇನನು ಪ್ರಯೋಗಿಸಿದ ಗದೆಯನ್ನು ವ್ಯರ್ಥಗೊಳಿಸಿಬಿಟ್ಟನು. ಅದನ್ನು ನೋಡಿದ ಎಲ್ಲರಿಗೂ ವಿಸ್ಮಯವುಂಟಾಯಿತು. ಭೀಮನಿಂದ ಪ್ರಯೋಗಿಸಲ್ಪಟ್ಟು ದುರ್ಯೋಧನನಿಂದ ವ್ಯರ್ಥಗೊಳಿಸಲ್ಪಟ್ಟ, ದೊಡ್ಡ ಸಿಡಿಲಿನ ಶಬ್ದದಿಂದ ಕೂಡಿದ್ದ ಆ ಗದೆಯು ಕೆಳಕ್ಕೆ ಬೀಳುತ್ತಾ ಭೂಮಿಯನ್ನೇ ನಡುಗಿಸಿಬಿಟ್ಟಿತು. ಭೀಮಸೇನನ ಗದೆಯು ಕೆಳಕ್ಕೆ ಬಿದ್ದುದನ್ನೂ ಮತ್ತು ಭೀಮಸೇನನು ವಂಚಿತನಾದನೆಂಬುದನ್ನೂ ತಿಳಿದ, ಕ್ರುದ್ಧನಾದ, ಮಹಾಬಲನಾದ, ಕುರುಶ್ರೇಷ್ಠನಾದ ದುರ್ಯೋಧನನು ಕೌಶಿಕಗಳೆಂಬ ನಡಿಗೆಗಳನ್ನು ಆಶ್ರಯಿಸಿ ಪುನಃ-ಪುನಃ ಅಲ್ಲಿಂದಿಲ್ಲಿಗೂ-ಇಲ್ಲಿಂದಲ್ಲಿಗೂ ನೆಗೆದಾಡುತ್ತಾ ಭೀಮಸೇನನನ್ನು ವಂಚಿಸಿ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ನಿನ್ನ ಪುತ್ರನ ಗದೆಯಿಂದ ಪ್ರಹೃತನಾದ ಭೀಮಸೇನನು ಕ್ಷಣಕಾಲ ಮೋಹವಶನಾದನು. ಅವನಿಗೆ ಮುಂದಿನ ಕರ್ತವ್ಯವೇನೆಂಬುದೇ ತಿಳಿಯಲಿಲ್ಲ. ಭೀಮಸೇನನು ಮೋಹವಶನಾಗಲಾಗಿ ಪಾಂಡವ-ಸೋಮ ಕರು ಸಂತೋಷಹೀನರಾದರು. ವಿಜಯಗಳಿಸಬೇಕೆಂಬ ಅವರ ಸಂಕಲ್ಪಕ್ಕೆ ದೊಡ್ಡ ಆಘಾತವುಂಟಾಯಿತು. ಮರುಕ್ಷಣದಲ್ಲಿಯೇ ಭೀಮಸೇನನು ಚೇತರಿಸಿಕೊಂಡು–ಮಾವಟಿಗನ ಪ್ರಹಾರದಿಂದ ಆನೆಯು ಕೋಪಗೊಳ್ಳು ವಂತೆ–ದುರ್ಯೋಧನನ ಪ್ರಹಾರದಿಂದ ಪರಮಕ್ರುದ್ಧನಾದನು. ಒಂದು ಮದಿಸಿದ ಆನೆಯು ಮತ್ತೊಂದು ಮದಿಸಿದ ಆನೆಯನ್ನು ಆಕ್ರಮಿಸಲು ಹೋಗು ವಂತೆ–ಭೀಮಸೇನನು ಮಹಾಗಜಸದೃಶನಾಗಿದ್ದ ನಿನ್ನ ಮಗನನ್ನು ರಭಸದಿಂದ

ಆಕ್ರಮಿಸಿದನು. ಸಿಂಹವು ಅರಣ್ಯದಲ್ಲಿರುವ ಆನೆಯ ಮೇಲೆ ರಭಸದಿಂದ ನುಗ್ಗುವಂತೆ–ಭೀಮಸೇನನು ಬಹಳ ವೇಗದಿಂದ ಗದೆಯನ್ನೆತ್ತಿಕೊಂಡು ನಿನ್ನ ಮಗನ ಕಡೆಗೆ ಧಾವಿಸಿದನು. ಗದೆಯನ್ನು ಪ್ರಯೋಗಿಸುವುದರಲ್ಲಿ ಅತ್ಯಂತ ನಿಪುಣನಾದ ಭೀಮಸೇನನು ದುರ್ಯೋಧನನನ್ನು ಸಮೀಪಿಸಿ ಗದೆಯ ನ್ನೊಮ್ಮೆ ತಿರುಗಿಸಿ, ನಿನ್ನ ಮಗನ ಮರಣವನ್ನೇ ಉದ್ದೇಶಿಸಿ ರಭಸದಿಂದ ತಿರುಗುತ್ತಿದ್ದ ಆ ಗದೆಯಿಂದ ದುರ್ಯೋಧನನ ಪಕ್ಕೆಯಲ್ಲಿ ಪ್ರಹರಿಸಿದನು. ಆ ಗದಾಪ್ರಹಾರದಿಂದ ಅತ್ಯಂತವ್ಯಾಕುಲನಾದ ದುರ್ಯೋಧನನು ಮಂಡಿ ಯೂರಿಕೊಂಡು ನೆಲದ ಮೇಲೆ ಕುಳಿತುಕೊಳ್ಳಲಾಗಿ ಸೃಂಜಯರು ಮಾಡಿದ ವಿಜಯಘೋಷವು ಗಗನಕ್ಕೇರಿಹೋಯಿತು. ನರಶ್ರೇಷ್ಠನೇ! ಧೃತರಾಷ್ಟ್ರ! ಸೃಂಜಯರು ಮಾಡಿದ ಆ ಜಯಘೋಷವನ್ನು ಕೇಳಿ ನಿನ್ನ ಮಗನು ಅಸಹನೆಯಿಂದಾಗಿ ಕುಪಿತನಾದನು. ಮಹಾಬಾಹುವಾದ ದುರ್ಯೋಧನನು ಮೆಲ್ಲನೆ ಮೇಲೆದ್ದು ಮಹಾಸರ್ಪದಂತೆ ನಿಟ್ಟುಸಿರುಬಿಡುತ್ತಾ ಕಣ್ಣುಗಳಿಂದಲೇ ಸುಟ್ಟುಬಿಡುವನೋ ಎಂಬಂತೆ ಭೀಮಸೇನನನ್ನು ದುರುಗುಟ್ಟಿಕೊಂಡು ನೋಡಿದನು. ಮರುಕ್ಷಣದಲ್ಲಿಯೇ ಭರತಶ್ರೇಷ್ಠನಾದ ದುರ್ಯೋಧನನು ಗದೆಯನ್ನು ಹಿಡಿದು ಯುದ್ಧದಲ್ಲಿ ಭೀಮಸೇನನ ತಲೆಯನ್ನು ಕ್ಷಣಮಾತ್ರದಲ್ಲಿ ಜಜ್ಜಿಬಿಡುವನೋ ಎಂಬಂತೆ ಅವನ ಕಡೆಗೆ ಧಾವಿಸಿದನು. ಭೀಮ ಪರಾಕ್ರಮನಾದ ಮಹಾತ್ಮನಾದ ದುರ್ಯೋಧನನು ಮಹಾತ್ಮನಾದ ಭೀಮ ಸೇನನನ್ನು ಅವನ ಹಣೆಯ ಮೂಳೆಯ ಮೇಲೆ ಪ್ರಹರಿಸಿದನು. ಆದರೆ ಪರ್ವತಸದೃಶನಾಗಿದ್ದ ಭೀಮಸೇನನು ಸ್ವಲ್ಪವಾದರೂ ವಿಚಲಿತನಾಗಲಿಲ್ಲ. ದುರ್ಯೋಧನನ ಗದೆಯಿಂದ ಪ್ರಹೃತನಾದ ಭೀಮಸೇನನ ಹಣೆಯಿಂದ ರಕ್ತವು ಹರಿಯಲು ಪ್ರಾರಂಭಿಸಿತು. ಆ ಸಮಯದಲ್ಲವನು ಕಪೋಲಗಳಿಂದ ಮದೋದಕವನ್ನು ಸುರಿಸುವ ಆನೆಯಂತೆಯೇ ಪ್ರಕಾಶಿಸುತ್ತಿದ್ದನು. ಬಳಿಕ ಧನಂಜಯಾಗ್ರಜನಾದ, ಶತ್ರುಸೂದನನಾದ ಭೀಮಸೇನನು ಬಲಪೂರ್ವಕ ವಾಗಿ ತನ್ನ ಪರಾಕ್ರಮವನ್ನು ಪ್ರಕಟಿಸುತ್ತಾ, ವೀರವಿನಾಶಿನಿಯಾದ, ಲೋಹ ಮಯವಾದ, ವಜ್ರಾಯುಧ ಮತ್ತು ಸಿಡಿಲುಗಳ ಶಬ್ದಕ್ಕೆ ಸಮಾನವಾದ ಶಬ್ದದಿಂದ ಕೂಡಿದ್ದ ಗದೆಯನ್ನು ಹಿಡಿದುಕೊಂಡು ಶತ್ರುವನ್ನು ಬಲವಾಗಿ ಪ್ರಹರಿಸಿದನು. ಭೀಮಸೇನನಿಂದ ಪ್ರಹರಿಸಲ್ಪಟ್ಟ ನಿನ್ನ ಮಗನ

ದೇಹದ ಕೀಲುಗಳೆಲ್ಲವೂ ಸಡಿಲವಾಗಿಹೋದುವು. ಬಿರುಗಾಳಿಯ ಆಘಾತಕ್ಕೆ ಸಿಕ್ಕಿ ಅಳ್ಳಾಡುವ ಅರಣ್ಯದಲ್ಲಿರುವ ಪುಷ್ಪಭರಿತವಾದ ಶಾಲವೃಕ್ಷದಂತೆ–ನಿನ್ನ ಮಗನು ಕ್ಷಣಕಾಲ ಕಂಪಿಸುತ್ತಿದ್ದು ನೆಲದ ಮೇಲೆ ಬಿದ್ದುಬಿಟ್ಟನು. ದುರ್ಯೋಧನನು ನೆಲದ ಮೇಲೆ ಬಿದ್ದುದನ್ನು ಕಂಡೊಡನೆಯೇ ಪಾಂಡವರು ಹರ್ಷದಿಂದ ಜಯಘೋಷಗಳನ್ನು ಮಾಡಿದರು.



ಸ್ವಲ್ಪಹೊತ್ತಿನಲ್ಲಿಯೇ ನಿನ್ನ ಮಗನು ಚೇತರಿಸಿಕೊಂಡು–ಆನೆಯು ಮಡುವಿನಿಂದ ಹೊರಬರುವಂತೆ–ನೆಗೆದು ನಿಂತುಕೊಂಡನು. ಸದಾಕಾಲ ದಲ್ಲಿಯೂ ಕೋಪಿಷ್ಠನಾಗಿಯೇ ಇರುತ್ತಿದ್ದ, ಮಹಾರಥನಾದ ದುರ್ಯೋಧ ನನು ಸುಶಿಕ್ಷಿತನಾದ ಯೋಧನೋಪಾದಿಯಲ್ಲಿ ಭೀಮನ ಸುತ್ತಲೂ ಅನೇಕ

ವಿಧವಾದ ಗತಿಗಳಿಂದ ಸಂಚರಿಸುತ್ತಿದ್ದು ಸಮಯವನ್ನು ನೋಡಿ ತನ್ನ ಅಗ್ರಭಾಗದಲ್ಲಿ ನಿಂತಿದ್ದ ಭೀಮಸೇನನನ್ನು ಗದೆಯಿಂದ ಪ್ರಹರಿಸಿದನು. ಆ ಪ್ರಹಾರದಿಂದ ಭೀಮಸೇನನ ಶರೀರವು ಜರ್ಝರಿತವಾಯಿತು. ಅವನು ಮೂರ್ಛಿತನಾಗಿ ಕೆಳಕ್ಕೆ ಬಿದ್ದುಬಿಟ್ಟನು. ಕೌರವನು ಯುದ್ಧದಲ್ಲಿ ತನ್ನ ಓಜಸ್ಸಿನಿಂದ ಭೀಮಸೇನನನ್ನು ಭೂಮಿಯ ಮೇಲೆ ಬೀಳಿಸಿ ಸಿಂಹನಾದಕ್ಕೆ ಸಮಾನವಾಗಿ ಗರ್ಜನೆಯನ್ನು ಮಾಡಿದನು. ದುರ್ಯೋಧನನು ತನ್ನ ಸಂಪೂರ್ಣಶಕ್ತಿಯನ್ನೂ ಯೋಜಿಸಿ ಗದಾಪ್ರಹಾರಮಾಡಿ ಭೀಮಸೇನನ ವಜ್ರಸದೃಶವಾದ ಕವಚವನ್ನೂ ಭೇದಿಸಿಬಿಟ್ಟನು.

ಆಗ ಆಕಾಶದಲ್ಲಿ ಹರ್ಷಧ್ವನಿಗಳನ್ನು ಮಾಡುತ್ತಿದ್ದ ದೇವತೆಗಳ ಮತ್ತು ಅಪ್ಸರೆಯರ ದೊಡ್ಡ ಕೋಲಾಹಲವುಂಟಾಯಿತು. ಅವರ ಜೊತೆಯಲ್ಲಿಯೇ ಬಹಳ ಎತ್ತರದಿಂದ ದೇವತೆಗಳು ಸುರಿಸುತ್ತಿದ್ದ ವಿಚಿತ್ರವಾದ ಪುಷ್ಪಗುಚ್ಛಗಳ ವೃಷ್ಟಿಯೂ ಆಗತೊಡಗಿತು. ಬಳಿಕ ಭೀಮಸೇನನ ಸುದೃಢವಾದ ಕವಚವು ಭಿನ್ನವಾದುದನ್ನೂ, ಭೀಮಸೇನನು ನೆಲದ ಮೇಲೆ ಮೋಹಗೊಂಡು ಬಿದ್ದಿರುವುದನ್ನೂ ಮತ್ತು ಬಲದಿಂದ ಸ್ವಲ್ಪವಾದರೂ ಕುಗ್ಗದೇ ಇದ್ದ ದುರ್ಯೋಧನನನ್ನೂ ನೋಡಿ ಶತ್ರುಗಳ (ಪಾಂಡವರ) ಮನಸ್ಸುಗಳನ್ನು ಮಹಾಭಯವು ಪ್ರವೇಶಿಸಿತು. (ಪಾಂಡವರು ಭಯಪೀಡಿತರಾದರು.) ಸ್ವಲ್ಪಹೊತ್ತಿನನಂತರ ಚೇತರಿಸಿಕೊಂಡ ಭೀಮಸೇನನು ರಕ್ತಸಿಕ್ತವಾಗಿದ್ದ ಮುಖವನ್ನು ಒರೆಸಿಕೊಳ್ಳುತ್ತಾ ಧೈರ್ಯವನ್ನು ಅವಲಂಬಿಸಿ, ಕಣ್ಣುಗಳನ್ನು ಹೊರಳಿಸಿ, ಬಲಪೂರ್ವಕವಾಗಿ ಜರ್ಝರಿತವಾಗಿದ್ದ ಶರೀರವನ್ನು ಸ್ವಾಧೀನಕ್ಕೆ ತೆಗೆದುಕೊಂಡು ಪುನಃ ಯುದ್ಧಸನ್ನದ್ಧನಾಗಿ ನಿಂತನು."

೫೭ನೆಯ ಅಧ್ಯಾಯವು ಮುಗಿಯಿತು.

ಙಲನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಕೃಷ್ಣಾರ್ಜುನರ ಸಂಭಾಷಣೆ : ಅರ್ಜುನನು ಸೂಚಿಸಿದ ಸಂಕೇತದಂತೆ ಭೀಮಸೇನನು ದುರ್ಯೋಧನನ ತೊಡೆಯನ್ನು ಪ್ರಹರಿಸಿ ಅವನನ್ನು ನೆಲಕ್ಕೆ ಕೆಡವಿದುದು : ಭಯಂಕರೋತ್ಪಾತಗಳ ಆವಿರ್ಭಾವ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಅರ್ಜುನನು ಕುರುಕುಲದ ಪ್ರಮುಖವೀರರಾದ ಭೀಮ-ದುರ್ಯೋಧನರ ಯುದ್ಧವು ಕ್ಷಣ-ಕ್ಷಣಕ್ಕೂ ಬಿಗಡಾಯಿಸು ತ್ತಿರುವುದನ್ನು ನೋಡಿ ಯಶೋವಂತನಾದ ಶ್ರೀಕೃಷ್ಣನಿಗೆ ಹೇಳಿದನು :

**ಅನಯೋರ್ವೀರಯೋರ್ಯುದ್ಧೇ ಕೋ ಜ್ಯಾಯಾನ್ಭವತೋ ಮತಃ ।**
**ಕಸ್ಯ ವಾ ಕೋ ಗುಣೋ ಭೂಯಾನೇತದ್ವದ ಜನಾರ್ದನ ॥೨॥**

"ಜನಾರ್ದನ! ನಿನ್ನ ಅಭಿಪ್ರಾಯದಲ್ಲಿ ಈ ಇಬ್ಬರು ವೀರರ ನಡುವೆ ಯಾರು ಹೆಚ್ಚಿನವರು? ಯಾರಲ್ಲಿ ಯಾವ ಗುಣವು ಅಧಿಕವಾಗಿದೆ? ಈ ವಿಷಯವನ್ನು ಹೇಳು."

**ಉಪದೇಶೋಽನಯೋಸ್ತುಲ್ಯೋ ಭೀಮಸ್ತು ಬಲವತ್ತರಃ ।**
**ಕೃತೀ ಯತ್ನಪರಸ್ತ್ವೇಷ ಧಾರ್ತರಾಷ್ಟ್ರೋ ವೃಕೋದರಾತ್ ॥೩॥**

"ಅರ್ಜುನ! ಇವರಿಬ್ಬರಿಗೂ ಒಂದೇ ವಿಧವಾದ ಯುದ್ಧಶಿಕ್ಷಣವಾಗಿದೆ. ಇಬ್ಬರಲ್ಲಿ ಭೀಮಸೇನನು ಮಹಾಬಲಿಷ್ಠನು. ದುರ್ಯೋಧನನು ಅಭ್ಯಾಸ ಮತ್ತು ಪ್ರಯತ್ನಶೀಲತೆಗಳಲ್ಲಿ ಭೀಮಸೇನನಿಗಿಂತಲೂ ಅಧಿಕನು.

**ಭೀಮಸೇನಸ್ತು ಧರ್ಮೇಣ ಯುಧ್ಯಮಾನೋ ನ ಜೇಷ್ಯತಿ ।**
**ಅನ್ಯಾಯೇನ ತು ಯುಧ್ಯನ್ವೈ ಹನ್ಯಾದೇವ ಸುಯೋಧನಮ್ ॥೪॥**

ಭೀಮಸೇನನು ಧರ್ಮಪೂರ್ವಕವಾಗಿಯೇ ಯುದ್ಧಮಾಡುತ್ತಿದ್ದರೆ ದುರ್ಯೋಧನನನ್ನು ಖಂಡಿತವಾಗಿಯೂ ಜಯಿಸಲಾಗುವುದಿಲ್ಲ. ಧರ್ಮ ಮಾರ್ಗವನ್ನು ಬಿಟ್ಟು ಯುದ್ಧಧರ್ಮವನ್ನು ಮೀರಿ ಯುದ್ಧಮಾಡಿದರೆ ಮಾತ್ರ ಭೀಮಸೇನನು ಸುಯೋಧನನನ್ನು ಸಂಹಾರಮಾಡಬಲ್ಲನು.

ಶತ್ರುಗಳನ್ನು ಜಯಿಸುವ ಸಲುವಾಗಿ ಅನ್ಯಾಯಮಾರ್ಗದಿಂದ ಯುದ್ಧಮಾಡಿದ ಅನೇಕ ನಿದರ್ಶನಗಳಿವೆ, ಅರ್ಜುನ!

**ಮಾಯಯಾ ನಿರ್ಜಿತಾ ದೇವೈರಸುರಾ ಇತಿ ನಃ ಶ್ರುತಮ್ ।**
**ವಿರೋಚನಸ್ತು ಶಕ್ರೇಣ ಮಾಯಯಾ ನಿರ್ಜಿತಃ ಸ ವೈ ॥೫॥**



ದೇವತೆಗಳು ಅಸುರರನ್ನು ವಂಚನೆಯಿಂದಲೇ ಜಯಿಸಿದರೆಂಬ ವಿಷಯವನ್ನು ನಾವು ಕೇಳಿದ್ದೇವೆ. ಇಂದ್ರನಾದರೋ ವಿರೋಚನನನ್ನು ವಂಚನೆಯಿಂದಲೇ ಜಯಿಸಿದನು.

**ಮಾಯಯಾ ಚಾಕ್ಷಿಪತ್ತೇಜೋ ವೃತ್ರಸ್ಯ ಬಲಸೂದನಃ ।**
**ತಸ್ಮಾನ್ಮಾಯಾಮಯಂ ಭೀಮ ಆತಿಷ್ಠತು ಪರಾಕ್ರಮಮ್ ॥೬॥**

ಬಲಸೂದನನಾದ ಇಂದ್ರನು ವಂಚನೆಯಿಂದಲೇ ವೃತ್ರಾಸುರನ ತೇಜಸ್ಸನ್ನು ನಷ್ಟಗೊಳಿಸಿದನು. ಆದುದರಿಂದ ಈ ಗದಾಯುದ್ಧದಲ್ಲಿಯೂ ಭೀಮಸೇನನು ಮಾಯಾಮಯವಾದ ಪರಾಕ್ರಮವನ್ನೇ ಅವಲಂಬಿಸಲಿ.

(ಒಂದು ರೀತಿಯಲ್ಲಿ ನೋಡಿದರೆ ಇದು 'ವಂಚನೆ' ಎಂದೂ ಎನಿಸುವುದಿಲ್ಲ.)

**ಪ್ರತಿಜ್ಞಾತಂ ಚ ಭೀಮೇನ ದ್ಯೂತಕಾಲೇ ಧನಂಜಯ ।**
**ಊರೂ ಭೇತ್ಸ್ಯಾಮಿ ತೇ ಸಂಖ್ಯೇ ಗದಯೇತಿ ಸುಯೋಧನಮ್ ॥೭॥**

ದ್ಯೂತಸಮಯದಲ್ಲಿ ಭೀಮನು ದುರ್ಯೋಧನನನ್ನು ಕುರಿತು 'ಯುದ್ಧದಲ್ಲಿ ನಿನ್ನ ತೊಡೆಗಳನ್ನು ಮುರಿಯುತ್ತೇನೆ'–ಎಂದೇ ಪ್ರತಿಜ್ಞೆಯನ್ನು ಮಾಡಿರುವನು.

**ಸೋಽಯಂ ಪ್ರತಿಜ್ಞಾಂ ತಾಂ ಚಾಪಿ ಪಾಲಯತ್ವರಿಕರ್ಷಣಃ ।**
**ಮಾಯಾವಿನಂ ತು ರಾಜಾನಂ ಮಾಯಯೈವ ನಿಕೃನ್ತತು ॥೮॥**

ಆದುದರಿಂದ ಶತ್ರುಕರ್ಷಣನಾದ ಭೀಮಸೇನನು ಅಂದು ತಾನು ಮಾಡಿದ್ದ ಪ್ರತಿಜ್ಞೆಯನ್ನು ಪರಿಪಾಲಿಸಲಿ. ವಂಚಕನಾದ ದುರ್ಯೋಧನನನ್ನು ವಂಚನೆಯಿಂದಲೇ ಸಂಹಾರಮಾಡಲಿ.

**ಯದ್ಯೇಷ ಬಲಮಾಸ್ಥಾಯ ನ್ಯಾಯೇನ ಪ್ರಹರಿಷ್ಯತಿ ।**
**ವಿಷಮಸ್ಥಸ್ತತೋ ರಾಜಾ ಭವಿಷ್ಯತಿ ಯುಧಿಷ್ಠಿರಃ ॥೯॥**

ಒಂದು ವೇಳೆ ಭೀಮಸೇನನು ಬಲವನ್ನೇ ಆಶ್ರಯಿಸಿ ನ್ಯಾಯರೀತಿಯಲ್ಲಿ ಗದೆಯಿಂದ ಪ್ರಹರಿಸುತ್ತಿದ್ದರೆ ದುರ್ಯೋಧನನನ್ನು ಸಂಹರಿಸಲು ಸಾಧ್ಯವಾಗುವುದಿಲ್ಲ. ಅದಕ್ಕೆ ಪ್ರತಿಯಾಗಿ ದುರ್ಯೋಧನನು ಅಭ್ಯಾಸಬಲದಿಂದಲೂ ಮತ್ತು ಪ್ರಯತ್ನಶೀಲತೆಯಿಂದಲೂ ಭೀಮಸೇನನನ್ನೇ ಸಂಹಾರಮಾಡಬಹುದು. ಆಗ ಯುಧಿಷ್ಠಿರರಾಜನಿಗೆ ಅತ್ಯಂತಕಷ್ಟಕರವಾದ ಪರಿಸ್ಥಿತಿಯುಂಟಾಗುತ್ತದೆ.

ಪಾಂಡವೇಯ! ಅರ್ಜುನ! ನಾನು ಪುನಃ ಈ ಮಾತನ್ನು ಹೇಳುತ್ತೇನೆ ; ಗಮನವಿಟ್ಟು ಕೇಳು :

**ಧರ್ಮರಾಜಾಪರಾಧೇನ ಭಯಂ ನಃ ಪುನರಾಗತಮ್ ॥೧೦॥**

ಧರ್ಮರಾಜನು ಮಾಡಿದ ಅಪರಾಧದಿಂದಾಗಿ ಪುನಃ ನಮ್ಮನ್ನು ಭಯವು ಆವರಿಸಿದೆ.

**ಕೃತ್ವಾ ಹಿ ಸುಮಹತ್ಕರ್ಮ ಹತ್ವಾ ಭೀಷ್ಮಮುಖಾನ್ಕುರೂನ್ ।**
**ಜಯಃ ಪ್ರಾಪ್ತೋ ಯಶಃ ಪ್ರಾಗ್ರ್ಯಂ ವೈರಂ ಚ ಪ್ರತಿಯಾತಿತಮ್ ।**
**ತದೇವಂ ವಿಜಯಃ ಪ್ರಾಪ್ತಃ ಪುನಃ ಸಂಶಯಿತಃ ಕೃತಃ ॥೧೧॥**

ಮಹಾಪ್ರಯಾಸಕರವಾದ ಕಾರ್ಯಗಳನ್ನು ಮಾಡಿ ಭೀಷ್ಮನೇ ಮೊದಲಾದ ಕುರುಪ್ರಮುಖರನ್ನು ಸಂಹರಿಸಿ, ವಿಜಯವನ್ನೂ ಶ್ರೇಷ್ಠವಾದ ಯಶಸ್ಸನ್ನೂ ಗಳಿಸಿ, ವೈರಕ್ಕೆ ತಕ್ಕುದಾದ ಪ್ರತೀಕಾರವನ್ನೂ ಮಾಡಿಯಾಯಿತು. ಹೀಗೆ ಗಳಿಸಿದ ವಿಜಯವನ್ನು ಪುನಃ ಧರ್ಮರಾಜನು ಸಂದೇಹಕ್ಕೆ ಈಡುಮಾಡಿಬಿಟ್ಟನು.

**ಅಬುದ್ಧಿರೇಷಾ ಮಹತೀ ಧರ್ಮರಾಜಸ್ಯ ಪಾಣ್ಡವ ।**
**ಯದೇಕವಿಜಯೇ ಯುದ್ಧಂ ಪಣಿತಂ ಘೋರಮೀದೃಶಮ್ ॥೧೨॥**

ಐವರು ಪಾಂಡವರಲ್ಲಿ ಒಬ್ಬನನ್ನು ಜಯಿಸಿದರೂ ಎಲ್ಲರನ್ನೂ ಜಯಿಸಿದಂತಾಗುವುದೆಂಬ ನಿಬಂಧನೆಯನ್ನೇ ಪಣವನ್ನಾಗಿಟ್ಟು ಇಂತಹ ಘೋರವಾದ ಯುದ್ಧವನ್ನು ಯಾರು ಮಾಡಲೊಪ್ಪಿದನೋ – ಅಂತಹ ಧರ್ಮರಾಜನ ಬುದ್ಧಿಯು ನಿಶ್ಚಯವಾಗಿಯೂ ವಿವೇಕವಿಲ್ಲದ ಬುದ್ಧಿಯೇ ಸರಿ.

**ಸುಯೋಧನಃ ಕೃತೀ ವೀರ ಏಕಾಯನಗತಸ್ತಥಾ ॥೧೩॥**

**ಅಪಿ ಚೋಶನಸಾ ಗೀತಃ ಶ್ರೂಯತೇಽಯಂ ಪುರಾತನಃ ।**
**ಶ್ಲೋಕಸತ್ತ್ವಾರ್ಥಸಹಿತಸ್ತನ್ಮೇ ನಿಗದತಃ ಶೃಣು ॥೧೪॥**

ಸುಯೋಧನನು ಗದಾಯುದ್ಧದಲ್ಲಿ ಮಹಾಕುಶಲನು. ಮೇಲಾಗಿ ಒಂದೇ ನಿರ್ಧಾರದಲ್ಲಿ ದೃಢಚಿತ್ತನು. ತಾನು ಗೆದ್ದೇ ತೀರಬೇಕೆಂಬ ದೃಢನಿಶ್ಚಯದಿಂದ ಯುದ್ಧಮಾಡುತ್ತಿರುವವನು. ಇವನಿಗೆ ಇದನ್ನು ಬಿಟ್ಟರೆ

ಅನ್ಯಮಾರ್ಗವೇ ಇಲ್ಲವಾಗಿದೆ. ಇವನ ಉಳಿವಿಗೆ ಯುದ್ಧದಲ್ಲಿ ವಿಜಯಗಳಿಸುವುದೊಂದೇ ಮಾರ್ಗವಾಗಿರುತ್ತದೆ. ಈ ವಿಷಯದಲ್ಲಿ ಶುಕ್ರಾಚಾರ್ಯರು ಹೇಳಿರುವ ಬಹಳ ಪ್ರಾಚೀನವಾದ ಒಂದು ಶ್ಲೋಕವು ಕೇಳಿಬರುತ್ತದೆ. ಆ ಶ್ಲೋಕವು ತತ್ತ್ವಾರ್ಥಸಹಿತವಾಗಿದೆ. ಆ ಶ್ಲೋಕವನ್ನೇ ಹೇಳುವೆನು : ಕೇಳು, ಅರ್ಜುನ!

**ಪುನರಾವರ್ತಮಾನಾನಾಂ ಭಗ್ನಾನಾಂ ಜೀವಿತೈಷಿಣಾಮ್ ।**
**ಭೇತವ್ಯಮರಿಶೇಷಾಣಾಮೇಕಾಯನಗತಾ ಹಿ ತೇ ॥೧೫॥**

'ಜೀವದ ಮೇಲಿನ ಆಸೆಯಿಂದಾಗಿ ಯುದ್ಧವನ್ನು ಬಿಟ್ಟು ಓಡಿಹೋಗಿದ್ದ, ಜೀವದಿಂದುಳಿದಿರುವ ಶತ್ರುಗಳು–ಒಂದು ವೇಳೆ ಪುನಃ ಯುದ್ಧಕ್ಕೆ ಹಿಂದಿರುಗಿ ಬಂದರೆ–ಅಂತಹವರ ವಿಷಯದಲ್ಲಿ ಹೆಚ್ಚು ಭಯಪಡಬೇಕು. ಏಕೆಂದರೆ : ಯುದ್ಧಮಾಡಲು ಪುನಃ ಬಂದಿರುವ ಅವರಿಗೆ ಜೀವದ ಮೇಲಿನ ಆಸೆಯು ಸಂಪೂರ್ಣವಾಗಿ ಹೋಗಿಯೇ ಬಿಟ್ಟಿರುತ್ತದೆ. ಜೀವದ ಮೇಲಿನ ಹಂಗನ್ನೇ ತೊರೆದು ಅವರು ಜಯಗಳಿಸುವುದೊಂದರಲ್ಲಿಯೇ ತಮ್ಮ ಅಭ್ಯಾಸ ಮತ್ತು ಪ್ರಯತ್ನಗಳನ್ನು ಕೇಂದ್ರೀಕರಿಸಿರುತ್ತಾರೆ.'

**ಸಾಹಸೋತ್ಪತಿತಾನಾಂ ಚ ನಿರಾಶಾನಾಂ ಚ ಜೀವಿತೇ ।**
**ನ ಶಕ್ಯಮಗ್ರತಃ ಸ್ಥಾತುಂ ಶಕ್ರೇಣಾಪಿ ಧನಂಜಯ ॥೧೬॥**

ಧನಂಜಯ! ಜೀವನದಲ್ಲಿ ನಿರಾಶೆಯನ್ನು ಹೊಂದಿ ಸಾಹಸದಿಂದ ಯುದ್ಧದಲ್ಲಿ ಮುನ್ನುಗ್ಗಿಬರುವವರ ಎದುರಾಗಿ ನಿಂತು ಯುದ್ಧಮಾಡಲು ದೇವೇಂದ್ರನಿಂದಲೂ ಸಾಧ್ಯವಾಗುವುದಿಲ್ಲ.

**ಸುಯೋಧನಮಿಮಂ ಭಗ್ನಂ ಹತಸೈನ್ಯಂ ಹ್ರದಂ ಗತಮ್ ।**
**ಪರಾಜಿತಂ ವನಪ್ರೇಪ್ಸುಂ ನಿರಾಶಂ ರಾಜ್ಯಲಮ್ಭನೇ ।**
**ಕೋ ನ್ವೇಷ ಸಂಯುಗೇ ಪ್ರಾಜ್ಞಃ ಪುನರ್ದ್ವನ್ದ್ವೇ**
**ಸಮಾಹ್ವಯೇತ್ ॥೧೭॥**

ಅರ್ಜುನ! ಈ ದುರ್ಯೋಧನನು ಭಗ್ನಮನೋರಥನಾಗಿದ್ದನು. ಇವನ ಸೈನ್ಯವೆಲ್ಲವೂ ಸಂಪೂರ್ಣವಾಗಿ ಹತವಾಗಿದ್ದಿತು. ನಿಲ್ಲಲು ಸ್ಥಳವಿಲ್ಲದೇ

ಸರೋವರದಲ್ಲಿ ಅಡಗಿಕೊಂಡಿದ್ದನು. ಸಂಪೂರ್ಣವಾಗಿ ಪರಾಜಿತನಾಗಿದ್ದನು. ಇಂತಹವನನ್ನು ಬುದ್ಧಿವಂತನಾದ ಯಾವನು ತಾನೇ ದ್ವಂದ್ವಯುದ್ಧಕ್ಕೆ ಆಹ್ವಾನಿಸುತ್ತಾನೆ?

ಅಪಿ ನೋ ನಿರ್ಜಿತಂ ರಾಜ್ಯಂ ನ ಹರೇತ ಸುಯೋಧನಃ ॥೧೮॥

ನಾವು ಬಹಳ ಕಷ್ಟಪಟ್ಟು ಜಯಿಸಿರುವ ಈ ರಾಜ್ಯವನ್ನು ಸುಯೋಧನನು ಪುನಃ ಕಸಿದುಕೊಳ್ಳದಂತಾದೀತೆ?

ದುರ್ಯೋಧನನು ಈ ಹದಿಮೂರು ವರ್ಷಗಳಿಂದಲೂ ಚೆನ್ನಾಗಿ ಅಭ್ಯಸಿಸಿ ಗದಾಯುದ್ಧದಲ್ಲಿ ಪರಿಶ್ರಮವನ್ನು ಪಡೆದಿರುತ್ತಾನೆ. ಅಂತಹ ಕುಶಲಿಯಾದ ದುರ್ಯೋಧನನು ಭೀಮಸೇನನನ್ನು ಸಂಹರಿಸುವ ಇಚ್ಛೆಯಿಂದ ಅಡ್ಡವಾಗಿ ನಡಿಗೆಗಳನ್ನಿಡುತ್ತಾನೆ ; ಮತ್ತೊಮ್ಮೆ ಮೇಲಕ್ಕೂ ನೆಗೆಯುತ್ತಾನೆ.

ಏವಂ ಚೇನ್ನ ಮಹಾಬಾಹುರನ್ಯಾಯೇನ ಹನಿಷ್ಯತಿ ।
ಏಷ ವಃ ಕೌರವೋ ರಾಜಾ ಧಾರ್ತರಾಷ್ಟ್ರೋ ಭವಿಷ್ಯತಿ ॥೨೦॥

ಮಹಾಬಾಹುವಾದ ಭೀಮಸೇನನು ದುರ್ಯೋಧನನನ್ನು ಅನ್ಯಾಯದ ವಿಧಾನದಿಂದ ಸಂಹರಿಸದೇ ಇದ್ದರೆ ಧೃತರಾಷ್ಟ್ರನ ಮಗನಾದ ಈ ಕೌರವನೇ ನಿಮ್ಮೆಲ್ಲರಿಗೂ ರಾಜನಾಗುತ್ತಾನೆ.”

ಧೃತರಾಷ್ಟ್ರ! ಧನಂಜಯನು ಮಹಾತ್ಮನಾದ ಕೇಶವನ ಮಾತನ್ನು ಕೇಳಿ ಭೀಮಸೇನನು ನೋಡುತ್ತಿದ್ದಂತೆಯೇ ತನ್ನ ಎಡಭಾಗದ ತೊಡೆಯನ್ನು ತಟ್ಟಿಕೊಂಡನು. ಅರ್ಜುನನಿತ್ತ ಸಂಜ್ಞೆಯನ್ನು ಗ್ರಹಿಸಿದ ಭೀಮಸೇನನು ಗದೆಯನ್ನು ಹಿಡಿದು ರಣಾಂಗಣದಲ್ಲಿ ಯಮಕವೇ ಮೊದಲಾದ ವಿಚಿತ್ರವಾದ ಇನ್ನೂ ಅನೇಕಮಂಡಲಗಳನ್ನು ಪ್ರದರ್ಶಿಸುತ್ತಾ ಸಂಚರಿಸುತ್ತಿದ್ದನು. ಪಾಂಡುಪುತ್ರನಾದ ಭೀಮಸೇನನು ಶತ್ರುವನ್ನು ಭ್ರಾಂತನನ್ನಾಗಿ ಮಾಡುವ ಸಲುವಾಗಿ ಸವ್ಯ-ವಾಮ-ಗೋಮೂತ್ರಕ–ಇವೇ ಮೊದಲಾದ ಮಂಡಲಕ್ರಮಗಳಲ್ಲಿ ಸಂಚರಿಸತೊಡಗಿದನು. ಗದಾಪ್ರಹರಣವಿಶಾರದ

ನಾಗಿದ್ದ ನಿನ್ನ ಪುತ್ರನೂ ಭೀಮಸೇನನನ್ನು ಸಂಹರಿಸುವ ಇಚ್ಛೆಯಿಂದ ಬಹಳ ಶೀಘ್ರವಾಗಿಯೂ ವಿಚಿತ್ರತರವಾದ ನಡಿಗೆಗಳಿಂದಲೂ ಸಂಚರಿಸುತ್ತಿದ್ದನು. ವೈರಕ್ಕೆ ಪೂರ್ಣವಿರಾಮವನ್ನು ಹಾಕುವುದರಲ್ಲಿಯೇ ಇಚ್ಛೆಯುಳ್ಳವರಾಗಿದ್ದ ಭೀಮ-ದುರ್ಯೋಧನರು ರಣಾಂಗಣದಲ್ಲಿ ಚಂದನಾಗರುಗಳಿಂದ ಚರ್ಚಿತವಾಗಿದ್ದ ಮಹಾಘೋರವಾಗಿದ್ದ ತಮ್ಮೆರಡು ಗದೆಗಳನ್ನೂ ತಿರುಗಿಸುತ್ತಾ ಕ್ರುದ್ಧರಾದ ಇಬ್ಬರು ಅಂತಕರೋಪಾದಿಯಲ್ಲಿ ಕಾಣುತ್ತಿದ್ದರು. ಎರಡು ಗರುಡಪಕ್ಷಿಗಳು ಹಾವಿನ ಮಾಂಸವನ್ನು ಪಡೆದುಕೊಳ್ಳುವ ಇಚ್ಛೆಯಿಂದ ಪರಸ್ಪರವಾಗಿ ಬಡಿದಾಡುವಂತೆ–ಒಬ್ಬರು ಮತ್ತೊಬ್ಬರನ್ನು ವಧೆಮಾಡುವ ಇಚ್ಛೆಯಿಂದ ಶ್ರೇಷ್ಠವೀರರಾದ, ಶ್ರೇಷ್ಠಪುರುಷರಾದ ಭೀಮ-ಸುಯೋಧನರು ಪರಸ್ಪರವಾಗಿ ಯುದ್ಧಮಾಡುತ್ತಿದ್ದರು. ವಿಚಿತ್ರವಾದ ಮಂಡಲಗತಿಗಳಲ್ಲಿ ಸಂಚರಿಸುತ್ತಿದ್ದ ಭೀಮ-ದುರ್ಯೋಧನರ ಗದೆಗಳ ಸಂಘಟ್ಟನೆಯಿಂದಾಗಿ ಅಗ್ನಿಯ ಜ್ವಾಲೆಗಳು ಪ್ರಕಟವಾದುವು. ವಾಯುವಿನಿಂದ ಪ್ರಕ್ಷುಬ್ಧವಾದ ಎರಡು ಸಮುದ್ರಗಳು ಅಲೆಗಳ ಮೂಲಕವಾಗಿ ಪರಸ್ಪರವಾಗಿ ಅಪ್ಪಳಿಸುವಂತೆ–ಎರಡು ಮದಿಸಿದ ಗಜಗಳು ವಿಷಾಣಗಳಿಂದ ಪರಸ್ಪರವಾಗಿ ಗಾಯಗೊಳಿಸುವಂತೆ–ಬಲಿಷ್ಠರಾದ ಮತ್ತು ಶೂರರಾದ ಭೀಮ-ದುರ್ಯೋಧನರು ಗದೆಗಳಿಂದ ಸಮ-ಸಮವಾಗಿ ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಿದ್ದರು. ಆ ಗದಾಪ್ರಹಾರಗಳ ಭಯಂಕರಧ್ವನಿಯು ಸಿಡಿಲಿನ ಶಬ್ದದಂತೆ ಕೇಳಿಬರುತ್ತಿದ್ದಿತು.

ಮಹಾರಾಜ! ಅತ್ಯಂತಭಯಂಕರವಾದ ಮತ್ತು ಸುದಾರುಣವಾದ ಯುದ್ಧವು ನಡೆಯುತ್ತಿರಲಾಗಿ ಗದಾಯುದ್ಧಮಾಡುತ್ತಿದ್ದ, ಶತ್ರುಗಳನ್ನು ದಮನಮಾಡುವ ಭೀಮ-ದುರ್ಯೋಧನರಿಬ್ಬರೂ ಬಹಳವಾಗಿ ಬಳಲಿದರು. ಸ್ವಲ್ಪಕಾಲ ಅವರಿಬ್ಬರೂ ವಿಶ್ರಮಿಸಿ ದಣಿವಾರಿಸಿಕೊಂಡು ಕ್ರುದ್ಧರಾಗಿ ತಮ್ಮ-ತಮ್ಮ ಮಹಾಗದೆಗಳನ್ನೆತ್ತಿಕೊಂಡು ಒಬ್ಬರು ಮತ್ತೊಬ್ಬರನ್ನು ಪುನಃ ಪ್ರಹರಿಸತೊಡಗಿದರು. ಗದೆಗಳ ಪ್ರಹಾರಗಳಿಂದ ಒಬ್ಬರು ಮತ್ತೊಬ್ಬರನ್ನು ಗಾಯಗೊಳಿಸುತ್ತಿದ್ದ ಭೀಮ-ದುರ್ಯೋಧನರ ನಡುವೆ ಘೋರರೂಪವಾದ, ಮುಚ್ಚುಮರೆಯಿಲ್ಲದ ಮಹಾಯುದ್ಧವು ಪ್ರಾರಂಭವಾಯಿತು.

ಕೆಸರಿನಲ್ಲಿ ಬಿದ್ದಿರುವ ಎರಡು ಕಾಡುಕೋಣಗಳು ಪರಸ್ಪರವಾಗಿ ಹಾಯ್ದಾಡುವಂತೆ–ವೃಷಭಾಕ್ಷರಾದ, ವೇಗವಂತರಾದ, ಇಬ್ಬರು ವೀರರೂ ಸಮರಾಂಗಣದಲ್ಲಿ ಪರಸ್ಪರವಾಗಿ ಬಡಿದಾಡುತ್ತಿದ್ದರು. ಅವರ ಎಲ್ಲ ಅಂಗ ಗಳೂ ಗದಾಪ್ರಹಾರಗಳಿಂದ ಜರ್ಝರಿತವಾಗಿದ್ದುವು. (ಶಕ್ತಿಯನ್ನು ಕಳೆದುಕೊಂಡಿದ್ದುವು.) ರಕ್ತದಿಂದ ತೋಯ್ದುಹೋಗಿದ್ದ ಶರೀರಗಳಿಂದ ಕೂಡಿದ್ದ ಇಬ್ಬರೂ–ಹಿಮವತ್ಪರ್ವತದಲ್ಲಿರುವ ಪುಷ್ಪಭರಿತವಾದ ಮುತ್ತುಗದ ಮರಗಳಂತೆಯೇ ಕಾಣುತ್ತಿದ್ದರು.

ಭೀಮಸೇನನು ದುರ್ಯೋಧನನಿಗೆ ಪ್ರಹರಿಸಲು ಅವಕಾಶಕೊಟ್ಟವ ನಂತೆ ನಟಿಸಲಾಗಿ ದುರ್ಯೋಧನನು ನಸುನಕ್ಕು ಒಡನೆಯೇ ಭೀಮಸೇನನ ಮೇಲೆ ಬಿದ್ದನು. ಪ್ರಾಜ್ಞನಾದ, ಬಲಿಷ್ಠನಾದ ವೃಕೋದರನು, ದುರ್ಯೋಧ ನನು ತನ್ನ ಮೇಲೆ ಬೀಳಲು ರಭಸದಿಂದ ಬರುತ್ತಿರುವುದನ್ನು ಕಂಡು ಮಹಾವೇಗದಿಂದ ಅವನ ಮೇಲೆ ಗದೆಯನ್ನು ಬೀಸಿದನು. ತನ್ನನ್ನು ಪ್ರಹರಿಸಲು ಭೀಮಸೇನನು ಗದೆಯೆತ್ತಿದುದನ್ನು ನೋಡಿದೊಡನೆಯೇ ನಿನ್ನ ಮಗ ದುರ್ಯೋಧನನು ತಾನಿದ್ದ ಸ್ಥಳದಿಂದ ಸ್ವಲ್ಪ ಹಿಂದೆ ಸರಿದನು. ಭೀಮಸೇನನು ಪ್ರಯೋಗಿಸಿದ ಗದೆಯು ವ್ಯರ್ಥವಾಗಿ ಭೂಮಿಯಲ್ಲಿ ಬಿದ್ದು ಹೋಯಿತು. ಹೀಗೆ ಭೀಮಸೇನನ ಗದಾಪ್ರಹಾರವನ್ನು ತಪ್ಪಿಸಿಕೊಂಡ ಕುರುಶ್ರೇಷ್ಠನಾದ ದುರ್ಯೋಧನನು ಅತ್ಯಂತವೇಗದಿಂದ ಭೀಮಸೇನನನ್ನು ತನ್ನ ಗದೆಯಿಂದ ಅಪ್ಪಳಿಸಿದನು. ಅಮಿತತೇಜಸ್ವಿಯಾದ ಭೀಮಸೇನನ ಶರೀರದಿಂದ ಧಾರಾರೂಪವಾಗಿ ರಕ್ತವು ಪ್ರವಹಿಸತೊಡಗಿತು. ಅದರ ಜೊತೆಗೆ ದುರ್ಯೋಧನನ ಗದೆಯ ಪೆಟ್ಟೂ ಬಹಳ ಜೋರಾಗಿಯೇ ಇದ್ದಿತು. ಆ ಕಾರಣಗಳಿಂದಾಗಿ ಭೀಮಸೇನನು ಮೂರ್ಛೆಗೊಂಡವನಂತಾದನು. ತಡೆದುಕೊಳ್ಳಲು ಕಷ್ಟಸಾಧ್ಯವಾಗಿದ್ದ ಶರೀರದ ಯಾತನೆಯನ್ನು ಭೀಮಸೇನನು ಬಹಳ ಕಷ್ಟದಿಂದ ತಡೆದುಕೊಂಡನು. ಈ ಕಾರಣದಿಂದ ದುರ್ಯೋಧನನಿಗೆ ತನ್ನ ಗದಾಪ್ರಹಾರದಿಂದ ಭೀಮಸೇನನು ಪೀಡಿತ ನಾಗಿರುವನೆಂಬ ವಿಷಯವು ತಿಳಿಯಲೇ ಇಲ್ಲ. ಯದ್ಯಪಿ ಭೀಮಸೇನನು ಯಾತನೆಯಿಂದಾಗಿ ಕ್ಷಣಕಾಲ ಅಚೇತನನಾಗಿ ನಿಂತಿದ್ದರೂ ದುರ್ಯೋಧನನು

ತಾನು ಪ್ರಹರಿಸಿದುದಕ್ಕೆ ಪ್ರತಿಯಾಗಿ ಪ್ರಹರಿಸಲು ಭೀಮಸೇನನು ಸಮಯವನ್ನು ಕಾಯುತ್ತಾ ನಿಂತಿರುವನೆಂದೇ ಭಾವಿಸಿದನು.

ಹೀಗೆ ಭಾವಿಸಿದ ನಿನ್ನ ಮಗನು ಯಾತನೆಯನ್ನನುಭವಿಸುತ್ತಿದ್ದ ಭೀಮಸೇನನ ಮೇಲೆ ಪುನಃ ಗದಾಪ್ರಹಾರವನ್ನು ಮಾಡಲಿಲ್ಲ. ಸ್ವಲ್ಪ ಹೊತ್ತಿನಲ್ಲಿಯೇ ಪ್ರತಾಪವಂತನಾದ ಭೀಮಸೇನನು ಚೇತರಿಸಿಕೊಂಡು ತನ್ನ ಸಮೀಪದಲ್ಲಿಯೇ ನಿಂತಿದ್ದ ದುರ್ಯೋಧನನನ್ನು ರಭಸದಿಂದ ಪುನಃ ಆಕ್ರಮಿಸಿದನು. ಕುಪಿತನಾಗಿದ್ದ ಅಮಿತೌಜಸ್ಕನಾದ ಭೀಮಸೇನನು ರಭಸದಿಂದ ತನ್ನ ಮೇಲೆ ಬೀಳಲು ಬರುತ್ತಿರುವುದನ್ನು ಕಂಡು ದುರ್ಯೋಧನನು ಹಿಂದಿನಂತೆಯೇ ಅವನ ಗದಾಪ್ರಹಾರವನ್ನು ನಿರರ್ಥಕಗೊಳಿಸಲು ನಿಶ್ಚಯಿಸಿದನು. ಮಹಾಮನಸ್ವಿಯಾದ ನಿನ್ನ ಪುತ್ರನು ಮೊದಲು ತಾನಿದ್ದಲ್ಲಿಯೇ ಇರಲು ನಿಶ್ಚಯಿಸಿದನು. ಪುನಃ ಭೀಮಸೇನನನ್ನು ಮೋಸಗೊಳಿಸುವ ಸಲುವಾಗಿ ಮೇಲಕ್ಕೆ ನೆಗೆಯಲೂ ಇಚ್ಛಿಸಿದನು. ದುರ್ಯೋಧನನ ಚಲನ-ವಲನಗಳಿಂದಲೇ ಅವನ ಮನಸ್ಸಿನ ಆಶಯವನ್ನು ಭೀಮಸೇನನು ತಿಳಿದುಕೊಂಡನು. ಮಂಡಲಾನುಕ್ರಮದಲ್ಲಿ ನಡಿಗೆಗಳನ್ನಿಡುತ್ತಾ ಮರುಕ್ಷಣದಲ್ಲಿಯೇ ಭೀಮಸೇನನನ್ನು ವಂಚಿಸುವ ಇಚ್ಛೆಯಿಂದ ಮೇಲಕ್ಕೆ ಕುಪ್ಪಳಿಸಿದ ದುರ್ಯೋಧನನನ್ನು ಸಮೀಪಿಸಿದ ವೃಕೋದರನು ಸಿಂಹದಂತೆ ಗರ್ಜನೆಮಾಡುತ್ತಾ ಅವನ ತೊಡೆಗಳನ್ನೇ ಅನುಲಕ್ಷಿಸಿ ಗದೆಯನ್ನು ರಭಸದಿಂದೆಸೆದನು. ಭಯಂಕರಕರ್ಮನಾದ ಭೀಮಸೇನನಿಂದ ಪ್ರಮುಕ್ತವಾದ ಆ ಗದೆಯು ಸಿಡಿಲಿಗೆ ಸಮಾನವಾಗಿ ರಭಸದಿಂದ ಬಂದು, ನೋಡಲು ಬಲು ಸುಂದರವಾಗಿದ್ದ ದುರ್ಯೋಧನನ ತೊಡೆಗಳನ್ನು ಮುರಿದುಹಾಕಿತು. ಭೀಮಸೇನನಿಂದ ತೊಡೆಗಳನ್ನು ಮುರಿಸಿಕೊಂಡ ನರಶ್ರೇಷ್ಠನಾದ ನಿನ್ನ ಪುತ್ರನು ಭೂಮಿಯನ್ನೇ ಪ್ರತಿಧ್ವನಿಗೊಳಿಸುತ್ತಾ ಕೆಳಕ್ಕೆ ಬಿದ್ದನು. ಭೂಮಂಡಲದ ಸಮಸ್ತರಾಜರಿಗೂ ಸ್ವಾಮಿಯಾಗಿದ್ದ ದುರ್ಯೋಧನನು ಧರಾಶಾಯಿಯಾಗಲಾಗಿ, ಸಿಡಿಲುಗಳೊಡನೆ ಚಂಡ ಮಾರುತಗಳು ಬೀಸತೊಡಗಿದುವು. ಧೂಳಿನ ಮಳೆಯೇ ಸುರಿಯಿತು. ಮರ-ಗಿಡ-ಬಳ್ಳಿಗಳಿಂದಲೂ ಪರ್ವತಗಳಿಂದಲೂ ಕೂಡಿದ ಭೂಮಿಯೂ ನಡುಗಿತು. ಪೃಥಿವೀಪತಿಯಾಗಿದ್ದ ದುರ್ಯೋಧನನು ಭೂಮಿಯ ಮೇಲೆ ಬಿದ್ದುಹೋಗಲಾಗಿ ಮಹಾಶಬ್ದದಿಂದ ಕೂಡಿದ, ದೇದೀಪ್ಯ

ಮಾನವಾಗಿದ್ದ, ನಿರ್ಘಾತದಿಂದ ಕೂಡಿದ, ಮಹಾಭಯಂಕರವಾದ ಮಹೋಲ್ಕೆಯು ಆಕಾಶದಿಂದ ಬಿದ್ದಿತು. ನಿನ್ನ ಮಗನು ಬಿದ್ದುಹೋಗಲಾಗಿ ಇಂದ್ರನು ರಕ್ತದ ಮತ್ತು ಧೂಳಿನ ಮಳೆಗರೆದನು. ಅಂತರಿಕ್ಷದಲ್ಲಿ ಯಕ್ಷ-ರಾಕ್ಷಸ-ಪಿಶಾಚರ ಮಹಾಧ್ವನಿಯು ಕೇಳಿಬಂದಿತು. ಅಂತರಿಕ್ಷದಿಂದ ಬಂದ ಆ ಘೋರಶಬ್ದದೊಡನೆ ಭೂಮಿಯ ಮೇಲಿದ್ದ ಅನೇಕ ಮೃಗ-ಪಕ್ಷಿಗಳ ಘೋರಶಬ್ದವೂ ಎಲ್ಲ ದಿಕ್ಕುಗಳಲ್ಲಿಯೂ ಕೇಳಿಬಂದಿತು. ನಿನ್ನ ಮಗನು ಧರಾಶಾಯಿಯಾಗಲಾಗಿ ಆ ರಣಾಂಗಣದಲ್ಲಿ ಅಳಿದುಳಿದಿದ್ದ ಆನೆ-ಕುದುರೆಗಳು ಅಳಿದುಳಿದಿದ್ದ ಮನುಷ್ಯರೊಡನೆ ಮಹಾನಾದಗಳನ್ನು ಮಾಡಿದುವು. ಭೇರೀ-ಶಂಖ-ಮೃದಂಗಗಳ ಮಹಾಧ್ವನಿಯುಂಟಾಯಿತು. ಭೂಮಿಯ ಒಳಗಡೆಯಲ್ಲಿಯೂ ಮಹಾಶಬ್ದವುಂಟಾಯಿತು. ಬಹುಪಾದಗಳಿಂದಲೂ ಬಹುಭುಜಗಳಿಂದಲೂ ಕೂಡಿ ನೃತ್ಯಮಾಡುತ್ತಿದ್ದ, ಭಯವನ್ನುಂಟುಮಾಡುವ ಭಯಂಕರಾಕಾರದ ಕಬಂಧಗಳಿಂದ ಎಲ್ಲ ದಿಕ್ಕುಗಳೂ ವ್ಯಾಪ್ತವಾಗಿದ್ದುವು. ನಿನ್ನ ಪುತ್ರನು ಧರಾಶಾಯಿಯಾಗಲಾಗಿ ಶಸ್ತ್ರಾಸ್ತ್ರ- ಧ್ವಜಯುಕ್ತರಾಗಿದ್ದ ವೀರರೆಲ್ಲರೂ ನಡುಗಿದರು. ಆ ಸಮಯದಲ್ಲಿ ಸರೋವರಗಳೂ ಮತ್ತು ಬಾವಿಗಳೂ ರಕ್ತವನ್ನೇ ಹೊರಚೆಲ್ಲಿದುವು. ನದಿಗಳು ಮಹಾವೇಗಯುಕ್ತವಾಗಿ ಹಿಂದು-ಮುಂದಾಗಿ ಹರಿಯತೊಡಗಿದುವು.

**ಪುಲ್ಲಿಙ್ಗಾ ಇವ ನಾರ್ಯಸ್ತು ಸ್ತ್ರೀಲಿಙ್ಗಾಃ ಪುರುಷಾಭವನ್ ।**
**ದುರ್ಯೋಧನೇ ತದಾ ರಾಜನ್ಪತಿತೇ ತನಯೇ ತವ ॥೫೯॥**

ನಿನ್ನ ಮಗನಾದ ದುರ್ಯೋಧನನು ಭೂಮಿಯ ಮೇಲೆ ಬಿದ್ದುಹೋಗಲಾಗಿ, ಸ್ತ್ರೀಯರು ಪುರುಷತ್ವದ ಲಕ್ಷಣಗಳನ್ನೂ–ಪುರುಷರು ಸ್ತ್ರೀತ್ವಸೂಚಕವಾದ ಲಕ್ಷಣಗಳನ್ನೂ ಪಡೆದರು. ಪಾಂಚಾಲರು ಪಾಂಡವರೊಡನೆ ಇಂತಹ ಅದ್ಭುತವಾದ ಉತ್ಪಾತಗಳನ್ನು ನೋಡಿ ಹೆಚ್ಚು ಉದ್ವಿಗ್ನರಾದರು. ನಿನ್ನ ಮಕ್ಕಳಿಬ್ಬರೂ ಮಾಡಿದ ಅದ್ಭುತಗದಾಯುದ್ಧವನ್ನು ವರ್ಣಿಸುತ್ತಾ ದೇವತೆಗಳೂ ಮತ್ತು ಗಂಧರ್ವಾಪ್ಸರೆಯರೂ ತಮಗೆ ಬೇಕಾದ ಸ್ಥಳಗಳಿಗೆ ಹೊರಟುಹೋದರು. ಅದೇ ರೀತಿಯಲ್ಲಿ ಸಿದ್ಧರೂ, ವಾಯುಚಾರಿಗಳಾದ ಚಾರಣರೂ

ನರಶ್ರೇಷ್ಠರಾದ ಭೀಮ-ದುರ್ಯೋಧನರನ್ನು ಪ್ರಶಂಸೆಮಾಡುತ್ತಾ ತಾವು ಬಂದಿದ್ದ ಸ್ಥಳಗಳಿಗೆ ಹೊರಟುಹೋದರು."

೫೮ನೆಯ ಅಧ್ಯಾಯವು ಮುಗಿಯಿತು.

೫೯ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಭೀಮಸೇನನು ದುರ್ಯೋಧನನನ್ನು ನಿಂದಿಸಿದುದು : ಯುಧಿಷ್ಠಿರನು ಭೀಮಸೇನನನ್ನು ಸಮಾಧಾನಗೊಳಿಸಿ ದುರ್ಯೋಧನನನ್ನೂ ಸಮಾಧಾನಗೊಳಿಸುತ್ತಾ ತನ್ನ ಖೇದವನ್ನು ಪ್ರಕಟಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಮಹಾಶಾಲವೃಕ್ಷದಂತೆ ದೀರ್ಘಕಾಯನಾಗಿದ್ದ ದುರ್ಯೋಧನನು ಭೀಮಸೇನನಿಂದ ಕೆಳಕ್ಕೆ ಬೀಳಿಸಲ್ಪಟ್ಟುದನ್ನು ಕಂಡು ಎಲ್ಲ ಪಾಂಡವರೂ ಪ್ರಹೃಷ್ಟಚಿತ್ತರಾದರು. ಸಿಂಹದಿಂದ ಹತವಾದ ಮದೋನ್ಮತ್ತಗಜದಂತೆ–ರಣರಂಗದಲ್ಲಿ ಬಿದ್ದಿದ್ದ ದುರ್ಯೋಧನನನ್ನು ನೋಡಿದ ಸೋಮಕರು ರೋಮಾಂಚಿತರಾದರು. ಪ್ರತಾಪವಂತನಾದ ಭೀಮಸೇನನು ಕೆಳಕ್ಕೆ ಬೀಳಿಸಲ್ಪಟ್ಟಿದ್ದ ಕೌರವೇಂದ್ರನನ್ನು ಸಮೀಪಿಸಿ ಅವನೊಡನೆ ಹೇಳಿದನು :

**ಗೌರ್ಗೌರಿತಿ ಪುರಾ ಮನ್ದ ದ್ರೌಪದೀಮೇಕವಾಸಸಾಮ್ ।**
**ಯತ್ಸಭಾಯಾಂ ಹಸನ್ನಸ್ಮಾಂಸ್ತದಾ ವದಸಿ ದುರ್ಮತೇ ।**
**ತಸ್ಯಾವಹಾಸಸ್ಯ ಫಲಮದ್ಯ ತ್ವಂ ಸಮವಾಪ್ನುಹಿ ॥೪॥**

"ಮೂಢನೇ! ತುಂಬಿದ ಸಭೆಯಲ್ಲಿ ನಮ್ಮನ್ನು ಹಾಸ್ಯಮಾಡುತ್ತಾ ಏಕವಸ್ತ್ರಧರಳಾಗಿದ್ದ ದ್ರೌಪದಿಯನ್ನು - 'ಗೌಃ ಗೌಃ! ಹಸು-ಹಸು!' ಎಂಬುದಾಗಿ ಹೇಳಿಕೊಂಡು ಹಾಸ್ಯಮಾಡಿದೆಯಲ್ಲವೇ? ಹಾಗೆ ಅಪಹಾಸ್ಯ ಮಾಡಿದುದರ ಫಲವನ್ನು ನೀನೀಗ ಅನುಭವಿಸು." ಹೀಗೆಂಬುದಾಗಿ ಹೇಳಿ ಭೀಮಸೇನನು ರಾಜಸಿಂಹನ ಕಿರೀಟವನ್ನು ಎಡಗಾಲಿನಿಂದ ಒದ್ದನು. ಅನಂತರ ಅವನ ತಲೆಯನ್ನೂ ಕಾಲಿನಿಂದ ಮೆಟ್ಟಿದನು. ಧೃತರಾಷ್ಟ್ರ ಮಹಾ

ರಾಜ! ಬಳಿಕ ಶತ್ರುಬಲವಿಧ್ವಂಸಕನಾದ ಭೀಮಸೇನನು ಕ್ರೋಧದಿಂದ ರಕ್ತನೇತ್ರನಾಗಿ ಪುನಃ ಯಾವ ಮಾತುಗಳನ್ನು ಅವನೊಡನೆ ಹೇಳಿದನೋ–ಆ ಮಾತುಗಳನ್ನು ನೀನೂ ಕೇಳು.

ಯೇಽಸ್ಮಾನುಪರೋಪನೃತ್ಯನ್ತ ಮೂಢಾ ಗೌರಿತಿ ಗೌರಿತಿ ।
ತಾನ್ವಯಂ ಪ್ರತಿನೃತ್ಯಾಮಃ ಪುನರ್ಗೌರಿತಿ ಗೌರಿತಿ ॥೭॥

"ಹಿಂದೆ ಯಾವ ಮೂಢರು 'ಹಸು-ಹಸು' ಎಂದು ಹೇಳಿಕೊಂಡು ಅಪಹಾಸ್ಯಮಾಡುತ್ತಾ ನಮ್ಮ ಮುಂದೆ ಕುಣಿದಾಡಿದರೋ, ಆ ಮೂಢರ ಮುಂದೆ ನಾವಿಂದು ಅದೇ ಪದವನ್ನೇ ಪುನರುಚ್ಚರಿಸುತ್ತಾ ಕುಣಿದಾಡುತ್ತೇವೆ.

ನಾಸ್ಮಾಕಂ ನಿಕೃತಿರ್ವಹ್ನಿರ್ನಾಕ್ಷದ್ಯೂತಂ ನ ವಞ್ಚನಾ ।
ಸ್ವಬಾಹುಬಲಮಾಶ್ರಿತ್ಯ ಪ್ರಬಾಧಾಮೋ ವಯಂ ರಿಪೂನ್ ॥೮॥

ಮೋಸ, ಮನೆಗೆ ಬೆಂಕಿಯಿಡುವುದು, ಕಪಟದ್ಯೂತ, ವಂಚನೆ–ಇವುಗಳಾವುವೂ ನಮ್ಮಲ್ಲಿಲ್ಲ. ಶತ್ರುಗಳ ವಿನಾಶಕ್ಕಾಗಿ ಇವುಗಳಲ್ಲಿ ಯಾವುದನ್ನೂ ನಾವು ಆಶ್ರಯಿಸುವುದಿಲ್ಲ. ನಮ್ಮ ಬಾಹುಬಲವನ್ನೇ ಆಶ್ರಯಿಸಿ ನಾವು ಶತ್ರುಗಳಿಗೆ ಸಂತಾಪವನ್ನುಂಟುಮಾಡುತ್ತೇವೆ."

ಮಹಾರಾಜ! ಭೀಮಸೇನನು ಮಹಾದ್ವೇಷದ ಪಾರವನ್ನು (ಅಂತ್ಯವನ್ನು) ಹೊಂದಿ ನಸುನಗುತ್ತಾ ಯುಧಿಷ್ಠಿರ-ಕೇಶವಾರ್ಜುನ-ಸೃಂಜಯರನ್ನೂ, ನಕುಲ-ಸಹದೇವರನ್ನೂ ಕುರಿತು ಹೇಳಿದನು :

ರಜಸ್ವಲಾಂ ದ್ರೌಪದೀಮಾನಯನ್ಯೇ
ಯೇ ಚಾಪ್ಯಕುರ್ವನ್ತ ಸದಸ್ಯವಸ್ತ್ರಾಮ್ ।
ತಾನ್ಪಶ್ಯಧ್ವಂ ಪಾಣ್ಡವೈರ್ಧಾರ್ತರಾಷ್ಟ್ರಾ-
ನ್ರಣೇ ಹತಾಂಸ್ತಪಸಾ ಯಾಜ್ಞಸೇನ್ಯಾಃ ॥೧೦॥

"ರಜಸ್ವಲೆಯಾಗಿದ್ದ ದ್ರೌಪದಿಯನ್ನು ತುಂಬಿದ ಸಭೆಗೆ ಯಾರು ಹಿಡಿದೆಳೆದು ತಂದರೋ–ಆ ಸಭೆಯಲ್ಲಿ ಯಾರು ಅವಳನ್ನು ವಿವಸ್ತ್ರಳನ್ನಾಗಿ ಮಾಡಲು ಯತ್ನಿಸಿದರೋ–ಧೃತರಾಷ್ಟ್ರನ ಆ ಮಕ್ಕಳೆಲ್ಲರೂ ಇಂದು ಯಾಜ್ಞ

ಸೇನಿಯ ತಪಃಪ್ರಭಾವದಿಂದಾಗಿ ಪಾಂಡವರಿಂದ ಯುದ್ಧದಲ್ಲಿ ಹತರಾಗಿ ಬಿದ್ದಿರುವುದನ್ನು ನೋಡಿರಿ.

ಯೇ ನಃ ಪುರಾ ಷಣ್ಢತಿಲಾನವೋಚ-
ನ್ಕ್ರೂರಾ ರಾಜ್ಞೋ ಧೃತರಾಷ್ಟ್ರಸ್ಯ ಪುತ್ರಾಃ ।
ತೇ ನೋ ಹತಾಃ ಸಗಣಾಃ ಸಾನುಬನ್ಧಾಃ
ಕಾಮಂ ಸ್ವರ್ಗಂ ನರಕಂ ವಾ ಪತಾಮಃ ॥೧೧॥

ಹಿಂದೆ ಯಾರು ನಮ್ಮನ್ನು ಎಣ್ಣೆಯಿಲ್ಲದ ಎಳ್ಳಿಗೆ ಸಮಾನರಾದ ನಪುಂಸಕರೆಂದು ಕರೆದರೋ–ಅಂತಹ ಕ್ರೂರಿಗಳಾದ ಧೃತರಾಷ್ಟ್ರನ ಮಕ್ಕಳು ಬಂಧು-ಬಾಂಧವರ ಮತ್ತು ಅನುಯಾಯಿಗಳ ಸಮೇತರಾಗಿ ನಮ್ಮಿಂದ ಹತರಾಗಿದ್ದಾರೆ. ಈ ಮಹಾಕಾರ್ಯವನ್ನು ಸಾಧಿಸಿರುವುದರಿಂದ ನಾವು ಸ್ವರ್ಗಕ್ಕಾದರೂ ಹೋಗೋಣ ; ನರಕದಲ್ಲಾದರೂ ಬೀಳೋಣ."

ಹೀಗೆ ಹೇಳಿದ ಭೀಮಸೇನನು ಹೆಗಲಿನಲ್ಲಿದ್ದ ಗದೆಯನ್ನೆತ್ತಿ ಭೂಮಿಯಲ್ಲಿ ಬಿದ್ದಿದ್ದ ದುರ್ಯೋಧನನ ತಲೆಯನ್ನು ಎಡಗಾಲಿನಿಂದ ಮೆಟ್ಟಿ ಅವನನ್ನು ಪುನಃ 'ಮೋಸಗಾರ! ಕಪಟಿ!' ಎಂದು ಸಂಬೋಧಿಸಿದನು. ಕ್ಷುದ್ರಬುದ್ಧಿಯವನಾದ ಭೀಮಸೇನನು ಸಂತೋಷಾಧಿಕ್ಯದಿಂದ ಕುರುಶ್ರೇಷ್ಠನಾದ ದುರ್ಯೋಧನನ ತಲೆಯ ಮೇಲೆ ಎಡಗಾಲಿಟ್ಟುದು ಧರ್ಮಾತ್ಮರಾದ ಸೋಮಕಶ್ರೇಷ್ಠರಿಗೆ ಸಂತೋಷವಾಗಲಿಲ್ಲ. ಆ ಕುಕೃತ್ಯಕ್ಕಾಗಿ ಅವರು ಅವನನ್ನು ಅಭಿನಂದಿಸಲೂ ಇಲ್ಲ.

ಮಹಾರಾಜ! ನಿನ್ನ ಪುತ್ರನನ್ನು ಈ ರೀತಿ ಸಂಹರಿಸಿ ಬಡಬಡಿಸಿ ಮಾತನಾಡುತ್ತಿದ್ದ ಮತ್ತು ಕುಣಿದಾಡುತ್ತಿದ್ದ ಭೀಮಸೇನನನ್ನು ಕುರಿತು ಧರ್ಮರಾಜನು ಹೇಳಿದನು :

ಗತೋಽಸಿ ವೈರಸ್ಯಾನೃಣ್ಯಂ ಪ್ರತಿಜ್ಞಾ ಪೂರಿತಾ ತ್ವಯಾ ।
ಶುಭೇನಾಥಾಶುಭೇನೈವ ಕರ್ಮಣಾ ವಿರಮಾಧುನಾ ॥೧೫॥

"ಭೀಮಸೇನ! ನೀನೀಗ ವೈರಋಣದಿಂದ ಮುಕ್ತನಾಗಿರುವೆ. ನೀನು ಶುಭಕರ್ಮದಿಂದಲೋ–ಅಶುಭಕರ್ಮದಿಂದಲೋ (ನ್ಯಾಯಮಾರ್ಗ

ದಿಂದಲೋ-ಅನ್ಯಾಯಮಾರ್ಗದಿಂದಲೋ) ನಿನ್ನ ಪ್ರತಿಜ್ಞೆಯನ್ನು ಪೂರ್ಣಗೊಳಿಸಿರುವೆ. ಇಷ್ಟು ಸಾಕು. ಈಗ ನೀನು ಮಾಡುತ್ತಿರುವ ಕಾರ್ಯದಿಂದ ವಿರಮಿಸು.

**ಮಾ ಶಿರೋಽಸ್ಯ ಪದಾ ಮಾರ್ದೀರ್ಮಾ ಧರ್ಮಸ್ತೇಽತಿಗೋ ಭವೇತ್।**
**ರಾಜಾ ಜ್ಞಾತಿರ್ಹತಶ್ಚಾಯಂ ನೈತನ್ನ್ಯಾಯ್ಯಂ ತವಾನಘ ॥೧೬॥**

ನೀನು ಇವನ ತಲೆಯನ್ನು ಕಾಲಿನಿಂದ ಮೆಟ್ಟಬೇಡ. ನಿನ್ನ ಮೂಲಕವಾಗಿ ಧರ್ಮದ ಉಲ್ಲಂಘನೆಯಾಗದಿರಲಿ. ನಿಷ್ಪಾಪನೇ! ದುರ್ಯೋಧನನು ರಾಜನು. ಮಿಗಿಲಾಗಿ ನಮ್ಮ ಜ್ಞಾತಿಯೂ (ದಾಯಾದನೂ) ಆಗಿದ್ದಾನೆ. ಈಗ ಇವನು ಸತ್ತುಬಿದ್ದಿದ್ದಾನೆ. (ಸಾಯುವ ಸ್ಥಿತಿಯಲ್ಲಿದ್ದಾನೆ.) ಇಂತಹವನ ವಿಷಯದಲ್ಲಿ ನೀನು ಹೀಗೆ ವರ್ತಿಸುವುದು ನ್ಯಾಯವಲ್ಲ.

**ಏಕಾದಶಚಮೂನಾಥಂ ಕುರೂಣಾಮಧಿಪಂ ತಥಾ ।**
**ಮಾ ಸ್ಪ್ರಾಕ್ಷೀರ್ಭೀಮ ಪಾದೇನ ರಾಜಾನಂ ಜ್ಞಾತಿಮೇವ ಚ ॥೧೭॥**

ಹನ್ನೊಂದು ಅಕ್ಷೌಹಿಣೀ ಸೈನ್ಯಕ್ಕೆ ಅಧಿಪತಿಯಾಗಿದ್ದ, ಕುರುಗಳಿಗೆ ಒಡೆಯನಾಗಿದ್ದ, ರಾಜನಾಗಿದ್ದ ಮತ್ತು ನಮ್ಮ ದಾಯಾದನಾದ ದುರ್ಯೋಧನನ ಶಿರಸ್ಸನ್ನು ಕಾಲಿನಿಂದ ಮೆಟ್ಟಬೇಡ.

**ಹತಬನ್ಧುರ್ಹತಾಮಾತ್ಯೋ ಭ್ರಷ್ಟಸೈನ್ಯೋ ಹತೋ ಮೃಧೇ ।**
**ಸರ್ವಾಕಾರೇಣ ಶೋಚ್ಯೋಽಯಂ ನಾವಹಾಸ್ಯೋಽಯಮೀಶ್ವರಃ ॥**

ಇವನ ಬಂಧುಗಳೂ ಮಂತ್ರಿಗಳೂ ಹತರಾಗಿಹೋಗಿರುವರು. ಇವನ ಹನ್ನೊಂದು ಅಕ್ಷೌಹಿಣೀ ಸೈನ್ಯವೂ ಯುದ್ಧದಲ್ಲಿ ನಷ್ಟವಾಗಿಹೋಯಿತು. ಇಂತಹ ದುಃಸ್ಥಿತಿಯಲ್ಲಿ ಹತನಾಗಿ ಬಿದ್ದಿರುವ ದುರ್ಯೋಧನನ ವಿಷಯದಲ್ಲಿ ನಾವು ಸರ್ವಪ್ರಕಾರದಿಂದಲೂ ಅನುತಾಪಪಡಬೇಕಾಗಿದೆ. ರಾಜನಾಗಿದ್ದ ಇವನನ್ನು ನಾವು ಯಾವುದೇ ಕಾರಣದಿಂದಲೂ ಅಪಹಾಸ್ಯ ಮಾಡಬಾರದು. ಅಪಹಾಸ್ಯಕ್ಕೆ ಇವನು ಪಾತ್ರನಲ್ಲ.

**ವಿಧ್ವಸ್ತೋಽಯಂ ಹತಾಮಾತ್ಯೋ ಹತಭ್ರಾತಾ ಹತಪ್ರಜಃ ।**
**ಉತ್ಸನ್ನಪಿಣ್ಡೋ ಭ್ರಾತಾ ಚ ನೈತನ್ನ್ಯಾಯ್ಯಂ ಕೃತಂ ತ್ವಯಾ ॥೧೯॥**

ಈ ದುರ್ಯೋಧನನೀಗ ಸಂಪೂರ್ಣವಾಗಿ ವಿಧ್ವಸ್ತನಾಗಿದ್ದಾನೆ. ಇವನ ಮಂತ್ರಿಗಳೂ, ಸಹೋದರರೂ, ಮಕ್ಕಳೂ ಹತರಾಗಿಹೋಗಿದ್ದಾರೆ. ಈಗ ಇವನಿಗೆ ಪಿಂಡಪ್ರದಾನಮಾಡುವವರೂ ಇಲ್ಲವಾಗಿದ್ದಾರೆ. ಈ ಹಿಂದೆ ಇವನು ನಮಗೆ ಪರಮದ್ವೇಷಿಯಾಗಿದ್ದರೂ ಇವನು ನಮ್ಮ ಭ್ರಾತೃವರ್ಗಕ್ಕೆ ಸೇರಿದವನು. ಆದುದರಿಂದ ಇಂತಹವನ ವಿಷಯದಲ್ಲಿ ನಿನ್ನ ಈ ವರ್ತನೆಯು ನ್ಯಾಯಸಮ್ಮತವೆನಿಸುವುದಿಲ್ಲ.

**ಧಾರ್ಮಿಕೋ ಭೀಮಸೇನೋಽಸಾವಿತ್ಯಾಹುಸ್ತ್ವಾಂ ಪುರಾ ಜನಾಃ ।**
**ಸ ಕಸ್ಮಾದ್ಭೀಮಸೇನ ತ್ವಂ ರಾಜಾನಮಧಿತಿಷ್ಠಸಿ ॥೨೦॥**

ಈ ಹಿಂದೆ - 'ಭೀಮಸೇನನು ಧಾರ್ಮಿಕನು'-ಎಂದು ಜನರು ಹೇಳುತ್ತಿದ್ದರು. ಭೀಮಸೇನ! ಹಾಗೆ ಧರ್ಮಿಷ್ಠನೆಂದು ಖ್ಯಾತನಾದ ನೀನು ಯಾವ ಕಾರಣದಿಂದ ದುರ್ಯೋಧನರಾಜನ ಶಿರಸ್ಸನ್ನು ಮೆಟ್ಟುತ್ತಿರುವೆ?"

ಧೃತರಾಷ್ಟ್ರಮಹಾರಾಜ! ಗದ್ಗದಧ್ವನಿಯಿಂದಲೇ ಭೀಮಸೇನನೊಡನೆ ಈ ಮಾತುಗಳನ್ನು ಹೇಳಿ ಕಂಬನಿದುಂಬಿದ ಕಣ್ಣುಗಳಿಂದ ಕೂಡಿದ್ದ ದೀನನಾಗಿದ್ದ ಯುಧಿಷ್ಠಿರನು, ಅರಿಂದಮನಾದ ದುರ್ಯೋಧನನ ಸಮೀಪಕ್ಕೆ ಹೋಗಿ ಅವನೊಡನೆ ಗದ್ಗದಧ್ವನಿಯಿಂದ ಹೇಳಿದನು :

**ತಾತ ಮನ್ಯುರ್ನ ತೇ ಕಾರ್ಯೋ ನಾತ್ಮಾ ಶೋಚ್ಯಸ್ತ್ವಯಾ ತಥಾ ।**
**ನೂನಂ ಪೂರ್ವಕೃತಂ ಕರ್ಮ ಸುಘೋರಮನುಭೂಯತೇ ॥೨೨॥**

"ಮಗು, ದುರ್ಯೋಧನ! ನೀನು ಭೀಮಸೇನನು ಮಾಡಿದ ಕೃತ್ಯಕ್ಕಾಗಿ ಕೋಪಗೊಳ್ಳಬೇಡ. ಇದಕ್ಕಾಗಿ ನೀನು ಶೋಕಿಸುವ ಕಾರಣವೂ ಇಲ್ಲ. (ನಿನ್ನ ವಿಷಯದಲ್ಲಿ ನೀನು ವ್ಯಸನಪಡಬೇಕಾಗಿಲ್ಲ.) ಪ್ರಪಂಚ ದಲ್ಲಿರುವ ಎಲ್ಲ ಮಾನವರೂ ತಾವು ಹಿಂದೆ ಮಾಡಿದ ಭಯಂಕರವಾದ ಪಾಪಕರ್ಮಗಳಿಗೆ ಅನುರೂಪವಾದ ಫಲಗಳನ್ನು ಅನುಭವಿಸಿಯೇ ತೀರುತ್ತಾರೆ.

**ಧಾತ್ರೋಪದಿಷ್ಟಂ ವಿಷಮಂ ನೂನಂ ಫಲಮಸಂಸ್ಕೃತಮ್ ।**
**ಯದ್ವಯಂ ತ್ವಾಂ ಜಿಘಾಂಸಾಮಸ್ತ್ವಂ ಚಾಸ್ಮಾನ್ಕುರುಸತ್ತಮ ॥೨೩॥**

ಈ ಸಮಯದಲ್ಲಿ ನಾವು ನಿನ್ನನ್ನು ಸಂಹರಿಸಲು ಇಚ್ಛಿಸಿದುದು

ಮತ್ತು ನೀನು ನಮ್ಮನ್ನು ವಧಿಸಲು ಇಚ್ಛಿಸಿದುದು–ಈ ಭಾವನೆಗಳೂ ಹಿಂದೆ ಮಾಡಿದ ಅಶುದ್ಧಕರ್ಮಗಳಿಗೆ ಬ್ರಹ್ಮನು ದಯಪಾಲಿಸಿರುವ ವಿಷಮ ಫಲಗಳೇ ಆಗಿವೆ. (ನಾವು ಶುಭಕರ್ಮಗಳನ್ನೇ ಮಾಡಿದ್ದರೆ ನಮ್ಮಿಬ್ಬರ ಮನಸ್ಸಿನಲ್ಲಿಯೂ ಇಂತಹ ಭಾವನೆಗಳೇ ಮೂಡುತ್ತಿರಲಿಲ್ಲ.)

**ಆತ್ಮನೋ ಹ್ಯಪರಾಧೇನ ಮಹದ್ವ್ಯಸನಮೀದೃಶಮ್ ।**
**ಪ್ರಾಪ್ತವಾನಸಿ ಯಲ್ಲೋಭಾನ್ಮದಾದ್ಬಾಲ್ಯಾಚ್ಚ ಭಾರತ ॥೨೪॥**

ಭರತನಂದನನೇ! ನೀನು ಲೋಭ, ಮದ ಮತ್ತು ಬಾಲಬುದ್ಧಿಗಳಿಂದಾಗಿ ಸ್ವಾಪರಾಧದಿಂದಲೇ ಇಂತಹ ಮಹಾವ್ಯಸನವನ್ನು ಪಡೆದುಕೊಂಡಿರುವೆ.

**ಘಾತಯಿತ್ವಾ ವಯಸ್ಯಾಂಶ್ಚ ಭ್ರಾತೄನಥ ಪಿತೄಂಸ್ತಥಾ ।**
**ಪುತ್ರಾನ್ಪೌತ್ರಾಂಸ್ತಥಾ ಚಾನ್ಯಾಂಸ್ತತೋಽಸಿ ನಿಧನಂ ಗತಃ ॥೨೫॥**

ಮಿತ್ರರನ್ನೂ, ಸಹೋದರರರನ್ನೂ, ಪಿತೃಗಳನ್ನೂ, ಪುತ್ರರನ್ನೂ, ಪೌತ್ರರನ್ನೂ ಮತ್ತು ನಿನ್ನ ಇನ್ನೂ ಅನೇಕ ಅನುಯಾಯಿಗಳನ್ನೂ ಸಾವಿಗೀಡುಮಾಡಿ ಕೊನೆಯಲ್ಲಿ ನೀನು ನಿಧನಹೊಂದಿದೆ.

**ತವಾಪರಾಧಾದಸ್ಮಾಭಿರ್ಭ್ರಾತರಸ್ತೇ ನಿಪಾತಿತಾಃ ।**
**ನಿಹತಾ ಜ್ಞಾತಯಶ್ಚಾಪಿ ದಿಷ್ಟಂ ಮನ್ಯೇ ದುರತ್ಯಯಮ್ ॥೨೬॥**

ನಿನ್ನೊಬ್ಬನ ಅಪರಾಧದ ಕಾರಣದಿಂದಲೇ ನಾವು ನಿನ್ನ ಸಹೋದರರನ್ನು ಸಂಹರಿಸಿದೆವು. ನಮ್ಮ ಅನೇಕ ದಾಯಾದರನ್ನೂ ಸಂಹರಿಸಿದೆವು. ಇದರಿಂದಾಗಿ ದೈವದ ವಿಚಿತ್ರಗತಿಯನ್ನು ಅತಿಕ್ರಮಿಸಲು ಯಾರಿಂದಲೂ ಸಾಧ್ಯವಾಗಲಾರದೆಂದು ಭಾವಿಸುತ್ತೇನೆ.

**ಆತ್ಮಾ ನ ಶೋಚನೀಯಸ್ತೇ ಶ್ಲಾಘ್ಯೋ ಮೃತ್ಯುಸ್ತವಾನಘ ।**
**ವಯಮೇವಾಧುನಾ ಶೋಚ್ಯಾಃ ಸರ್ವಾವಸ್ಥಾಸು ಕೌರವ ।**
**ಕೃಪಣಂ ವರ್ತಯಿಷ್ಯಾಮಸ್ತೈರ್ಹೀನಾ ಬನ್ಧುಭಿಃ ಪ್ರಿಯೈಃ ॥೨೭॥**

ದುರ್ಯೋಧನ! ನೀನು ನಿನ್ನ ಸಾವಿನ ಬಗೆಗೆ ಶೋಕಿಸಬೇಕಾದ ಕಾರಣವೇನೂ ಇಲ್ಲ. ನಿನಗೆ ಪ್ರಶಂಸನೀಯವಾದ ಮೃತ್ಯುವೇ ಲಭಿಸಿದೆ.

ನಿಜವಾಗಿ ಹೇಳುವುದಾದರೆ ಈಗ ನಾವೇ ಸರ್ವಪ್ರಕಾರದಿಂದಲೂ ಶೋಚನೀಯರಾಗಿದ್ದೇವೆ. ಪ್ರಿಯಬಂಧುಗಳಿಂದ ವಿಹೀನರಾಗಿರುವ ನಾವು ದುಃಖದಿಂದ ನಮ್ಮ ಜೀವನವನ್ನು ನಿರ್ವಹಿಸಬೇಕಾಗಿದೆ.



**ಭ್ರಾತೄಣಾಂ ಚೈವ ಪುತ್ರಾಣಾಂ ತಥಾ ವೈ ಶೋಕವಿಹ್ವಲಾಃ ।**
**ಕಥಂ ದ್ರಕ್ಷ್ಯಾಮಿ ವಿಧವಾ ವಧೂಃ ಶೋಕಪರಿಪ್ಲುತಾಃ ॥೨೮॥**

ಅಯ್ಯೋ! ನನ್ನ ಸಹೋದರರ ಮತ್ತು ಮಕ್ಕಳ ಮರಣದಿಂದ ವಿಧವೆಯರಾಗಿ ಶೋಕದಿಂದ ವ್ಯಾಕುಲಗೊಂಡಿರುವ ಮತ್ತು ದುಃಖಸಾಗರದಲ್ಲಿಯೇ ಮುಳುಗಿಹೋಗಿರುವ ನನ್ನ ಸಹೋದರರ ಮತ್ತು ಮಕ್ಕಳ ಪತ್ನಿಯರನ್ನು ನಾನು ಹೇಗೆ ವೀಕ್ಷಿಸಲಿ?

**ತ್ವಮೇಕಃ ಸುಸ್ಥಿತೋ ರಾಜನ್ಸ್ವರ್ಗೇ ತೇ ನಿಲಯೋ ಧ್ರುವಃ ।**
**ವಯಂ ನರಕಸಂಜ್ಞಂ ವೈ ದುಃಖಂ ಪ್ರಾಪ್ಸ್ಯಾಮ ದಾರುಣಮ್ ॥**

ಸುಯೋಧನ! ನೀನೊಬ್ಬನೇ ಸುಖಿಯು. ಸ್ವರ್ಗದಲ್ಲಿ ನಿನಗೊಂದು ಶಾಶ್ವತವಾದ ಸ್ಥಾನವು ಲಭಿಸುವುದು ನಿಶ್ಚಯ. ನಾವಾದರೋ ನರಕ ಸದೃಶವಾದ ಸುದಾರುಣವಾದ ದುಃಖಕ್ಕೆ ಭಾಗಿಗಳಾಗುತ್ತೇವೆ.

ಶೋಕಾತುರರಾದ, ವ್ಯಾಕುಲರಾದ, ಗಂಡಂದಿರನ್ನು ಕಳೆದುಕೊಂಡು ವಿಧವೆಯರಾಗಿರುವ ಧೃತರಾಷ್ಟ್ರನ ಸೊಸೆಯರೂ ಮತ್ತು ಧೃತರಾಷ್ಟ್ರನ ಮಕ್ಕಳ ಸೊಸೆಯರೂ ನಿಶ್ಚಯವಾಗಿಯೂ ನಮ್ಮನ್ನು ನಿಂದಿಸುತ್ತಾರೆ."

ಧೃತರಾಷ್ಟ್ರಮಹಾರಾಜ! ದುಃಖಾರ್ತನಾಗಿದ್ದ ಧರ್ಮಪುತ್ರನಾದ ಯುಧಿಷ್ಠಿರನು ನಿನ್ನ ಮಗನಿಗೆ ಹೀಗೆ ಹೇಳಿ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಬಹಳ ಹೊತ್ತಿನವರೆಗೂ ಅಳುತ್ತಲೇ ಇದ್ದನು."

೫೯ನೆಯ ಅಧ್ಯಾಯವು ಮುಗಿಯಿತು.

೬೦ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಕ್ರೋಧಾಭಿಭೂತನಾಗಿದ್ದ ಬಲರಾಮನನ್ನು ಶ್ರೀಕೃಷ್ಣನು ಸಮಾಧಾನಗೊಳಿಸಿದುದು : ಯುಧಿಷ್ಠಿರನೊಡನೆ ಶ್ರೀಕೃಷ್ಣ-ಭೀಮಸೇನರ ಸಂಭಾಷಣೆ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ದುರ್ಯೋಧನರಾಜನು ಅಧರ್ಮಯುದ್ಧದಲ್ಲಿ ಹತ ನಾದುದನ್ನು ಕಂಡು ಮಹಾಬಲಿಷ್ಠನಾದ, ಮಧುಕುಲತಿಲಕನಾದ ಬಲ ದೇವನು ಏನೆಂದನು? ಗದಾಯುದ್ಧಪ್ರಕ್ರಿಯೆಯನ್ನು ವಿಶೇಷರೀತಿಯಲ್ಲಿ ತಿಳಿದಿದ್ದ, ಗದಾಯುದ್ಧವಿಶಾರದನಾದ, ರೋಹಿಣಿಯ ಮಗನಾದ ಬಲರಾಮನು ಮುಂದೇನು ಮಾಡಿದನೆಂಬುದನ್ನೂ ನನ್ನೊಡನೆ ಹೇಳು."

"ಮಹಾರಾಜ! ಭೀಮಸೇನನು ಕಾಲಿನಿಂದ ದುರ್ಯೋಧನನ ಶಿರಸ್ಸನ್ನು ಮೆಟ್ಟಿದುದನ್ನು ಕಂಡು ಯೋಧಶ್ರೇಷ್ಠನಾದ, ಮಹಾಬಲಿಷ್ಠ

ನಾದ ಬಲರಾಮನು ಕುಪಿತನಾದನು. ಆ ಸಕಲರಾಜರ ಮಧ್ಯದಲ್ಲಿ ಹಲಾಯುಧನಾದ ಬಲರಾಮನು ತನ್ನೆರಡು ಕೈಗಳನ್ನೂ ಮೇಲಕ್ಕೆತ್ತಿಕೊಂಡು ಭಯಂಕರವಾಗಿ ಆರ್ತನಾದಮಾಡುತ್ತಾ - 'ಧಿಕ್ ಭೀಮಸೇನ! ಧಿಕ್' 'ಭೀಮಸೇನನೇ! ನಿನಗೆ ಧಿಕ್ಕಾರವಿರಲಿ'–ಎಂದು ಗಟ್ಟಿಯಾಗಿ ಕೂಗಿದನು.

**ಅಹೋ ಧಿಗ್ಯದಧೋ ನಾಭೇಃ ಪ್ರಹೃತಂ ಧರ್ಮವಿಗ್ರಹೇ ।**
**ನೈತದ್ದೃಷ್ಟಂ ಗದಾಯುದ್ಧೇ ಕೃತವಾನ್ಯದ್ವೃಕೋದರಃ ॥೫॥**

"ಈ ಅಧರ್ಮಯುದ್ಧಕ್ಕೆ ಧಿಕ್ಕಾರವಿರಲಿ! ಧರ್ಮಯುದ್ಧವು ನಡೆಯುತ್ತಿರುವಾಗ ಎದುರಾಳಿಯು ನಾಭಿಯಿಂದ ಕೆಳಭಾಗದಲ್ಲಿ ಪ್ರಹರಿಸ ಲ್ಪಟ್ಟನು. ವೃಕೋದರನು ಮಾಡಿದ ಈ ದುಷ್ಕೃತ್ಯವು ಇದುವರೆಗೆ ನಡೆದ ಗದಾಯುದ್ಧಗಳಲ್ಲಿ ಎಲ್ಲಿಯೂ ಕಂಡುಬಂದಿರಲಿಲ್ಲ.

**ಅಧೋ ನಾಭ್ಯಾ ನ ಹನ್ತವ್ಯಮಿತಿ ಶಾಸ್ತ್ರಸ್ಯ ನಿಶ್ಚಯಃ ।**
**ಅಯಂ ತ್ವಶಾಸ್ತ್ರವಿನ್ಮೂಢಃ ಸ್ವಚ್ಛನ್ದಾತ್ಸಮ್ಪ್ರವರ್ತತೇ ॥೬॥**

ನಾಭಿಯಿಂದ ಕೆಳಗಿರುವ ಭಾಗಗಳನ್ನು ಪ್ರಹರಿಸಕೂಡದೆಂಬುದು ಗದಾಯುದ್ಧಶಾಸ್ತ್ರದ ನಿರ್ಣಯವಾಗಿರುತ್ತದೆ. ಆದರೆ ಶಾಸ್ತ್ರಜ್ಞಾನಶೂನ್ಯನಾದ, ಮೂರ್ಖನಾದ ಭೀಮಸೇನನು ಶಾಸ್ತ್ರಸಿದ್ಧಾಂತವನ್ನು ಮೀರಿ ಸ್ವೇಚ್ಛೆಯಿಂದ ವರ್ತಿಸಿದ್ದಾನೆ."

ಮಹಾರಾಜ! ಹೀಗೆ ಮಾತನಾಡುತ್ತಿದ್ದಂತೆ ಬಲರಾಮನ ಕ್ರೋಧವೂ ಅಧಿಕಗೊಂಡಿತು. ಬಳಿಕ ಕ್ರೋಧದಿಂದ ರಕ್ತಾಕ್ಷನಾಗಿದ್ದ ಬಲದೇವನು ದುರ್ಯೋಧನನ ಅವಸ್ಥೆಯನ್ನು ನೋಡಿ ಶ್ರೀಕೃಷ್ಣನಿಗೆ ಹೇಳಿದನು :

**ನ ಚೈವ ಪತಿತಃ ಕೃಷ್ಣ ಕೇವಲಂ ಮತ್ಸಮೋಽಸಮಃ ।**
**ಆಶ್ರಿತಸ್ಯ ತು ದೌರ್ಬಲ್ಯಾದಾಶ್ರಯಃ ಪರಿಭರ್ತ್ಸ್ಯತೇ ॥೭॥**

"ಕೃಷ್ಣ! ದುರ್ಯೋಧನರಾಜನು ಗದಾಯುದ್ಧಕೌಶಲದಲ್ಲಿ ನನಗೆ ಸಮಾನನಾಗಿದ್ದನು. ಗದಾಯುದ್ಧದಲ್ಲಿ ಅವನಿಗೆ ಸಮಾನರಾದವರು ಬೇರೆ ಯಾರೂ ಇರಲಿಲ್ಲ. ಅಧರ್ಮಯುದ್ಧದಿಂದ ದುರ್ಯೋಧನನೊಬ್ಬನನ್ನೇ ಕೆಳಕ್ಕೆ ಬೀಳಿಸಿದಂತಾಗಲಿಲ್ಲ. ಗುರುವಾದ ನನ್ನನ್ನೂ ತಿರಸ್ಕರಿಸಿದಂತಾ

ಯಿತು. ಆಶ್ರಿತನು ದುರ್ಬಲನಾಗಿರುವನೆಂಬ ಕಾರಣದಿಂದ ಆಶ್ರಯವನ್ನಿತ್ತವನೂ ತಿರಸ್ಕಾರಕ್ಕೆ ಪಾತ್ರನಾಗುತ್ತಿದ್ದಾನೆ.”

ಹೀಗೆಂಬುದಾಗಿ ಬಲರಾಮನು ಹೇಳಿ ತನ್ನ ಹಲಾಯುಧವನ್ನೆತ್ತಿ ಕೊಂಡು ಭೀಮನ ಬಳಿಗೆ ಧಾವಿಸಿದನು. ಆ ಸಮಯದಲ್ಲಿ ಭುಜಗಳೆರಡನ್ನೂ



ಮೇಲೆತ್ತಿ ನಿಂತಿದ್ದ ಮಹಾತ್ಮನಾದ ಬಲರಾಮನ ರೂಪವು ಗೈರಿಕಾದಿ ಅನೇಕಧಾತುಗಳಿಂದ ಚಿತ್ರಿತವಾಗಿ ಕಾಣುತ್ತಿದ್ದ ಮಹಾಶ್ವೇತ ಪರ್ವತದಂತೆಯೇ ಕಾಣುತ್ತಿದ್ದಿತು. ಆಗ ವಿನಯಶೀಲನಾದ, ಬಲಿಷ್ಠನಾದ ಶ್ರೀಕೃಷ್ಣನು ಭೀಮನನ್ನು ಆಕ್ರಮಿಸಲು ಹೋಗುತ್ತಿದ್ದ ಬಲರಾಮನನ್ನು ದಪ್ಪವಾಗಿಯೂ, ದುಂಡಾಗಿಯೂ ಇದ್ದ ಬಾಹುಗಳಿಂದ ಪ್ರಯತ್ನಪೂರ್ವಕ

ವಾಗಿ ಹಿಡಿದುಕೊಂಡನು. ಬಿಳುಪಾಗಿಯೂ ಮತ್ತು ಕಪ್ಪಾಗಿಯೂ ಇದ್ದ ಯದುಶ್ರೇಷ್ಠರಾದ ಬಲರಾಮ-ಕೃಷ್ಣರು ಆ ಸಮಯದಲ್ಲಿ ಸಾಯಂಕಾಲದ ಸಮಯದಲ್ಲಿ ಆಕಾಶದಲ್ಲಿರುವ ಚಂದ್ರ-ಸೂರ್ಯರಂತೆಯೇ ಪ್ರಕಾಶಿಸುತ್ತಿದ್ದರು. ಕೋಪಗೊಂಡಿದ್ದ ಬಲರಾಮನನ್ನು ಸಾಂತ್ವನಗೊಳಿಸುತ್ತಾ ಶ್ರೀಕೃಷ್ಣನು ಹೇಳಿದನು :

**ಆತ್ಮವೃದ್ಧಿರ್ಮಿತ್ರವೃದ್ಧಿರ್ಮಿತ್ರಮಿತ್ರೋದಯಸ್ತಥಾ ।**
**ವಿಪರೀತಂ ದ್ವಿಷತ್ಸ್ವೇತತ್ ಷಡ್ವಿಧಾ ವೃದ್ಧಿರಾತ್ಮನಃ ॥೧೩॥**

"ಅಣ್ಣ! ಆತ್ಮವೃದ್ಧಿ, ಶತ್ರುಕ್ಷಯ, ಮಿತ್ರನ ವೃದ್ಧಿ, ಶತ್ರುವಿನ ಮಿತ್ರನ ನಾಶ, ತನ್ನ ಮಿತ್ರನ ಮಿತ್ರನ ವೃದ್ಧಿ, ಶತ್ರುವಿನ ಮಿತ್ರನ ಮಿತ್ರನ ನಾಶ – ಈ ಆರು ವಿಧಾನಗಳೂ ಆತ್ಮೋನ್ನತಿಗೆ ಸಾಧನಗಳಾಗುತ್ತವೆ. (ಇದಕ್ಕೆ ವಿಪರೀತವಾದುವುಗಳು ಆರು. ಆತ್ಮನಾಶ, ಶತ್ರುವೃದ್ಧಿ, ತನ್ನ ಮಿತ್ರನ ನಾಶ, ಶತ್ರುವಿನ ಮಿತ್ರನ ವೃದ್ಧಿ, ತನ್ನ ಮಿತ್ರನ ಮಿತ್ರನ ನಾಶ, ಶತ್ರುವಿನ ಮಿತ್ರನ ಮಿತ್ರನ ವೃದ್ಧಿ – ಈ ಆರು ವಿಧಾನಗಳೂ ಅಧಃಪತನಕ್ಕೆ ಕಾರಣಗಳಾಗುತ್ತವೆ.)

**ಆತ್ಮನ್ಯಪಿ ಚ ಮಿತ್ರೇ ಚ ವಿಪರೀತಂ ಯದಾ ಭವೇತ್ ।**
**ತದಾ ವಿದ್ಯಾನ್ಮನೋಗ್ಲಾನಿಮಾಶು ಶಾನ್ತಿಕರೋ ಭವೇತ್ ॥೧೪॥**

ತನ್ನ ವಿಷಯದಲ್ಲಿಯೂ – ತನ್ನ ಮಿತ್ರನ ವಿಷಯದಲ್ಲಿಯೂ ಇದಕ್ಕೆ ವಿಪರೀತವಾದುದೇನಾದರೂ ಸಂಭವಿಸಿದರೆ (ಆತ್ಮಹಾನಿ, ತನ್ನ ಮಿತ್ರನ ಹಾನಿ) ಮನೋವ್ಯಥೆಯುಂಟಾಗುತ್ತದೆ. ಅಂತಹ ಸಮಯದಲ್ಲಿ ಆ ಹಾನಿಯನ್ನು ನಿವಾರಿಸಲು ಬಹಳ ಬೇಗ ಪ್ರಯತ್ನಮಾಡಬೇಕು.

**ಅಸ್ಮಾಕಂ ಸಹಜಂ ಮಿತ್ರಂ ಪಾಣ್ಡವಾಃ ಶುದ್ಧಪೌರುಷಾಃ ।**
**ಸ್ವಕಾಃ ಪಿತೃಷ್ವಸುಃ ಪುತ್ರಾಸ್ತೇ ಪರೈರ್ನಿಕೃತಾ ಭೃಶಮ್ ॥೧೫॥**

ಶುದ್ಧ (ಸತ್ಯ) ಪರಾಕ್ರಮರಾದ ಪಾಂಡವರು ನಮಗೆ ಸಹಜಮಿತ್ರರಾಗಿರುತ್ತಾರೆ. ಮೇಲಾಗಿ ನಮ್ಮ ಸೋದರತ್ತೆಯ ಮಕ್ಕಳಾಗಿರುವ ಇವರು ನಮ್ಮವರೇ ಆಗಿರುತ್ತಾರೆ. ಇವರು ಶತ್ರುಗಳಿಂದ ಬಹಳವಾಗಿ ಪೀಡಿತರಾಗಿರುವರು. (ಈ ಕಾರಣದಿಂದ ಮಿತ್ರರೂ ಮತ್ತು ಬಂಧುಗಳೂ ಆಗಿರುವ

ಪಾಂಡವರಿಗೆ ನಾವು ಸಹಾಯಮಾಡಬೇಕಾದುದು ನಮ್ಮ ಕರ್ತವ್ಯವೇ ಆಗಿರುತ್ತದೆ. ಅವರ ಅಭಿವೃದ್ಧಿಯು ನಮ್ಮ ವೃದ್ಧಿಯೇ ಆಗಿದೆ.)

**ಪ್ರತಿಜ್ಞಾಪಾಲನಂ ಧರ್ಮಃ ಕ್ಷತ್ರಿಯಸ್ಯೇಹ ವೇದ್ಮ್ಯಹಮ್ ।**
**ಸುಯೋಧನಸ್ಯ ಗದಯಾ ಭಙ್ಕ್ತಾಸ್ಮ್ಯೂರೂ ಮಹಾಹವೇ ।**
**ಇತಿ ಪೂರ್ವಂ ಪ್ರತಿಜ್ಞಾತಂ ಭೀಮೇನ ಹಿ ಸಭಾತಲೇ ॥೧೭॥**

ಅಣ್ಣ! ಈ ಪ್ರಪಂಚದಲ್ಲಿ ಕ್ಷತ್ರಿಯನಾದವನಿಗೆ ಪ್ರತಿಜ್ಞಾಪಾಲನವು ಮುಖ್ಯವಾದ ಧರ್ಮವೆಂದು ನಾನು ಭಾವಿಸುತ್ತೇನೆ. ನಿನಗೆ ತಿಳಿದಿರುವಂತೆಯೇ ಭೀಮಸೇನನು ಹಿಂದೆ ಸಭಾಮಧ್ಯದಲ್ಲಿ ದುರ್ಯೋಧನನ ತೊಡೆಗಳನ್ನು ಯುದ್ಧದಲ್ಲಿ ಗದೆಯಿಂದ ಮುರಿಯುವೆನೆಂದು ಪ್ರತಿಜ್ಞೆ ಮಾಡಿದ್ದನು. ಪರಂತಪನೇ! ಅದಕ್ಕೆ ಪೂರಕವಾಗಿಯೋ ಎಂಬಂತೆ ಮೈತ್ರೇಯಮಹರ್ಷಿಗಳೂ ಬಹಳ ಹಿಂದೆಯೇ ದುರ್ಯೋಧನನಿಗೆ - '**ಊರೂ ತೇ ಭೇತ್ಸ್ಯತೇ ಭೀಮೋ ಗದಯಾ**' - 'ಭೀಮಸೇನನು ಗದೆಯಿಂದ ನಿನ್ನ ತೊಡೆಗಳನ್ನು ಮುರಿಯುತ್ತಾನೆ'–ಎಂದು ಶಾಪವನ್ನಿತ್ತಿದ್ದರು.

ಪ್ರಲಂಬಹಂತಕನೇ! ಬಲದೇವ! ಈ ಕಾರಣದಿಂದ ಭೀಮಸೇನನು ದುರ್ಯೋಧನನ ತೊಡೆಗಳನ್ನು ಮುರಿದಿರುವುದರಲ್ಲಿ ನಾನು ದೋಷವನ್ನೇನೂ ಕಾಣುತ್ತಿಲ್ಲ. ಇದಕ್ಕಾಗಿ ನೀನು ಕೋಪಗೊಳ್ಳಬೇಡ.

**ಯೌನಃ ಸ್ವೈಃ ಸುಖಹಾರ್ದೈಶ್ಚ ಸಮ್ಬನ್ಧಃ ಸಹ ಪಾಣ್ಡವೈಃ ।**
**ತೇಷಾಂ ವೃದ್ಧ್ಯಾ ಹಿ ವೃದ್ಧಿರ್ನೋ ಮಾ ಕ್ರುಧಃ ಪುರುಷರ್ಷಭ ॥**

ಪುರುಷಶ್ರೇಷ್ಠನೇ! ನಮಗೂ ಪಾಂಡವರಿಗೂ ಶರೀರಸಂಬಂಧವಿದೆ. (ನಮ್ಮ ಪಿತಾಮಹನೂ ಪಾಂಡವರ ಮಾತಾಮಹನೂ ಒಬ್ಬನೇ ಆಗಿರುತ್ತಾನೆ. ಅರ್ಜುನನಿಗೆ ತಂಗಿಯಾದ ಸುಭದ್ರೆಯನ್ನು ಕೊಟ್ಟು ಸಂಬಂಧವನ್ನು ಬೆಳೆಸಿದ್ದೇವೆ.) ಎರಡನೆಯದಾಗಿ–ಪಾಂಡವರೂ ನಮ್ಮೊಡನೆ ಸೌಹಾರ್ದದಿಂದಲೇ ನಡೆದುಕೊಳ್ಳುತ್ತಿದ್ದಾರೆ. ಪಾಂಡವರ ವೃದ್ಧಿಯಿಂದ ನಮ್ಮ ವೃದ್ಧಿಯೂ ಆಗುತ್ತದೆ. ಆದುದರಿಂದ ಕುಪಿತನಾಗಬೇಡಣ್ಣ!"

ಧೃತರಾಷ್ಟ್ರ! ವಾಸುದೇವನು ಹೇಳಿದ ಮಾತನ್ನು ಕೇಳಿ ಧರ್ಮವಿದನಾದ ಹಲಧರನು ಹೇಳಿದನು :

ಧರ್ಮಃ ಸುಚರಿತಃ ಸದ್ಭಿಃ ಸ ಚ ದ್ವಾಭ್ಯಾಂ ನಿಯಚ್ಛತಿ ।
ಅರ್ಥಶ್ಚಾತ್ಯರ್ಥಲುಬ್ಧಸ್ಯ ಕಾಮಶ್ಚಾತಿಪ್ರಸಙ್ಗಿಣಃ ॥೨೧॥

ಧರ್ಮಾರ್ಥೌ ಧರ್ಮಕಾಮೌ ಚ ಕಾಮಾರ್ಥೌ ಚಾಪ್ಯಪೀಡಯನ್ ।
ಧರ್ಮಾರ್ಥಕಾಮಾನ್ಯೋಽಭ್ಯೇತಿ ಸೋಽತ್ಯನ್ತಂ ಸುಖಮಶ್ನುತೇ ॥೨೨॥

"ಕೃಷ್ಣ! ಸತ್ಪುರುಷರಿಂದ ಚೆನ್ನಾಗಿ ಆಚರಿಸಲ್ಪಟ್ಟ ಧರ್ಮವು ಅರ್ಥ-ಕಾಮಗಳಿಂದ ಸಂಕುಚಿತವಾಗುತ್ತಿರುತ್ತದೆ. (ಅರ್ಥ-ಕಾಮಗಳು ಧರ್ಮವನ್ನು ನಾನಾರೀತಿಯಲ್ಲಿ ವಿಕಾರಗೊಳಿಸುತ್ತವೆ.) ಅತ್ಯಂತಲೋಭಿಯಾದವನ ಅರ್ಥವೂ–ಅತ್ಯಂತಕಾಮಾಸಕ್ತನಾದವನ ಕಾಮವೂ ಧರ್ಮಕ್ಕೆ ಹಾನಿಯನ್ನುಂಟುಮಾಡುತ್ತವೆ. (ಅರ್ಥಗಳಿಗೂ, ಕಾಮಗಳಿಗೂ ಧರ್ಮವು ಗೌಣವಾಗುತ್ತದೆ.) ಯಾವನು ಕಾಮದ ಕಾರಣದಿಂದ ಧರ್ಮಾರ್ಥಗಳಿಗೂ, ಅರ್ಥದ ಕಾರಣದಿಂದ ಧರ್ಮ-ಕಾಮಗಳಿಗೂ ಮತ್ತು ಧರ್ಮದ ಕಾರಣದಿಂದ ಕಾಮಾರ್ಥಗಳಿಗೂ ಹಾನಿಯನ್ನುಂಟುಮಾಡದೇ ಧರ್ಮಾರ್ಥ- ಕಾಮಗಳನ್ನು ಯಥೋಚಿತವಾಗಿ ಅನುಸರಣೆಮಾಡುತ್ತಾನೆಯೋ–ಅವನು ಪರಮಸುಖವನ್ನು ಅನುಭವಿಸುತ್ತಾನೆ.

ತದಿದಂ ವ್ಯಾಕುಲಂ ಸರ್ವಂ ಕೃತಂ ಧರ್ಮಸ್ಯ ಪೀಡನಾತ್ ।
ಭೀಮಸೇನೇನ ಗೋವಿನ್ದ ಕಾಮಂ ತ್ವಂ ತು ಯಥಾತ್ಥ ಮಾಮ್ ॥

ಈ ಸಂದರ್ಭದಲ್ಲಿ ಭೀಮಸೇನನು ಅರ್ಥದ ಲೋಭದಿಂದಾಗಿ ಧರ್ಮಕ್ಕೆ ಪೀಡೆಯನ್ನುಂಟುಮಾಡಿರುವುದರಿಂದ ಹಿಂದೆ ಮಾಡಿದ್ದ ಯುದ್ಧಧರ್ಮದ ನಿರ್ಣಯಗಳೆಲ್ಲವೂ ವಿಕೃತವಾದುವು. ಈ ವಿಷಯದಲ್ಲಿ ನೀನು ಧರ್ಮಸಂಗತವಾಗಿದೆಯೆಂದು ನಿನಗೆ ತೋರಿದಂತೆ ಹೇಳುತ್ತಿರುವೆ.* (ಆದರೆ ಇದು ಧರ್ಮವಲ್ಲ. ಮಾಡಿದ ಅಧರ್ಮಕ್ಕೆ ಧರ್ಮದ ಹೊದ್ದಿಕೆ ಮಾತ್ರವಾಗಿದೆ.")

"ಅಣ್ಣ! ನೀನು–'ಧರ್ಮವತ್ಸಲನು ; ಧರ್ಮಾತ್ಮನು ; ಕ್ರೋಧರಹಿತನು'–ಎಂಬುದಾಗಿ ವಿಶ್ವವಿಖ್ಯಾತಿಯನ್ನು ಪಡೆದುಕೊಂಡಿರುವೆ. ಆದುದರಿಂದ ನಿನ್ನ ಸ್ವಭಾವಕ್ಕೆ ವಿರುದ್ಧವಾಗಿ ಕುಪಿತನಾಗಬೇಡ ; ಶಾಂತನಾಗು.

---

* ಕಡೆಯ ಪಾದವಾದ 'ಕಾಮಂ ಯಥಾತ್ಥ ಮಾಂ' ಎಂಬುದಕ್ಕೆ 'ತಥಾ ಭವತು' ಎಂದು ಅಧ್ಯಾಹಾರಮಾಡಿಕೊಂಡು - 'ಇದು ಹೊರತು (ಭೀಮನ ಅಧರ್ಮಯುದ್ಧ)

**ಪ್ರಾಪ್ತಂ ಕಲಿಯುಗಂ ವಿದ್ಧಿ ಪ್ರತಿಜ್ಞಾಂ ಪಾಣ್ಡವಸ್ಯ ಚ ।**
**ಆನೃಣ್ಯಂ ಯಾತು ವೈರಸ್ಯ ಪ್ರತಿಜ್ಞಾಯಾಶ್ಚ ಪಾಣ್ಡವಃ ॥೨೫॥**

ಅಣ್ಣ! ಕಲಿಯುಗವು ಈಗಾಗಲೇ ಪ್ರಾರಂಭವಾಗಿಬಿಟ್ಟಿರುವುದನ್ನು ಗಮನಿಸು. ಭೀಮಸೇನನು ಸಭಾಮಧ್ಯದಲ್ಲಿ ಪ್ರತಿಜ್ಞೆಮಾಡಿದುದನ್ನೂ ಸ್ಮರಿಸು. ಭೀಮನು ವೈರ ಮತ್ತು ಪ್ರತಿಜ್ಞೆಗಳ ಋಣಗಳಿಂದ ಮುಕ್ತನಾಗಲಿ.”

ಧೃತರಾಷ್ಟ್ರಮಹಾರಾಜ! ಕೇಶವನಿಂದ ವ್ಯಾಜರೂಪವಾದ ಧರ್ಮದ ವಿವರಣೆಯನ್ನು ಕೇಳಿ ಬಲದೇವನಿಗೆ ಸಮಾಧಾನವಾಗಲಿಲ್ಲ. ಅವನು ಪುನಃ ಆ ರಾಜಸಭೆಯಲ್ಲಿ ಈ ಮಾತುಗಳನ್ನು ಹೇಳಿದನು :

**ಹತ್ವಾಧರ್ಮೇಣ ರಾಜಾನಂ ಧರ್ಮಾತ್ಮಾನಂ ಸುಯೋಧನಮ್ ।**
**ಜಿಹ್ಮಯೋಧೀತಿ ಲೋಕೇಽಸ್ಮಿನ್ಖ್ಯಾತಿಂ ಯಾಸ್ಯತಿ ಪಾಣ್ಡವಃ ॥೨೬॥**

“ಧರ್ಮಾತ್ಮನಾದ ಸುಯೋಧನರಾಜನನ್ನು ಅಧರ್ಮಮಾರ್ಗದಿಂದ ಸಂಹರಿಸಿರುವ ಭೀಮಸೇನನು ಈ ಲೋಕದಲ್ಲಿ ವಂಚನೆಯ ಯುದ್ಧ ಮಾಡುವವನು – ಎಂಬ ಖ್ಯಾತಿಯನ್ನು ಗಳಿಸುತ್ತಾನೆ.

**ದುರ್ಯೋಧನೋಽಪಿ ಧರ್ಮಾತ್ಮಾ ಗತಿಂ ಯಾಸ್ಯತಿ ಶಾಶ್ವತೀಮ್ ।**
**ಋಜುಯೋಧೀ ಹತೋ ರಾಜಾ ಧಾರ್ತರಾಷ್ಟ್ರೋ ನರಾಧಿಪಃ ॥೨೭॥**

ಧೃತರಾಷ್ಟ್ರನ ಮಗನಾದ, ಧರ್ಮಾತ್ಮನಾದ ದುರ್ಯೋಧನನಾದರೋ ಸರಳವಾದ ರೀತಿಯಲ್ಲಿ (ನ್ಯಾಯರೀತಿಯಲ್ಲಿ) ಯುದ್ಧಮಾಡುತ್ತಿದ್ದು ಹತನಾದನು. ಆದುದರಿಂದ ಅವನು ಶಾಶ್ವತವಾದ ಸದ್ಗತಿಯನ್ನು ಹೊಂದುತ್ತಾನೆ.

**ಯುದ್ಧದೀಕ್ಷಾಂ ಪ್ರವಿಶ್ಯಾಜೌ ರಣಯಜ್ಞಂ ವಿತತ್ಯ ಚ ।**
**ಹುತ್ವಾತ್ಮಾನಮಮಿತ್ರಾಗ್ನೌ ಪ್ರಾಪ ಚಾವಭೃಥಂ ಯಶಃ ॥೨೮॥**

ಯುದ್ಧದೀಕ್ಷೆಯನ್ನು ಕೈಗೊಂಡು, ಸಂಗ್ರಾಮಭೂಮಿಯನ್ನು ಪ್ರವೇಶಿಸಿ ರಣಯಜ್ಞವನ್ನು ಸಂಪೂರ್ಣವಾಗಿ ವಿಸ್ತರಿಸಿ, ಶತ್ರುರೂಪವಾದ

---

ನೀನು ನನ್ನೊಡನೆ ಹೇಳಿದ ಉಳಿದ ವಿಷಯಗಳು ಹಾಗೆಯೇ ಇರಬಹುದು’–ಎಂದೂ ಅರ್ಥಮಾಡಬಹುದೆಂದು ಒಬ್ಬ ವಿದ್ವಾಂಸರ ಅಭಿಪ್ರಾಯವಾಗಿದೆ.

ಪ್ರಜ್ವಲಿಸುವ ಅಗ್ನಿಯಲ್ಲಿ ಆತ್ಮಾಹುತಿಯನ್ನು ಮಾಡಿಕೊಂಡು ದುರ್ಯೋಧನನು ಯಶೋರೂಪವಾದ ಅವಭೃಥವನ್ನು ಹೊಂದಿದನು."

ಬಿಳಿಯ ಮೋಡಗಳಿಂದ ಕೂಡಿದ್ದ ಶ್ವೇತಪರ್ವತದ ಶಿಖರದಂತೆ ಗೌರಾಂಗನಾದ, ಪ್ರತಾಪವಂತನಾದ ರೌಹಿಣೇಯನು ಹೀಗೆ ಹೇಳಿ ರಥದಲ್ಲಿ ಕುಳಿತು ದ್ವಾರಾವತಿಗೆ ಅಭಿಮುಖವಾಗಿ ಪ್ರಯಾಣಮಾಡಿದನು. ಆದರೆ ಬಲರಾಮನ ನಿರ್ಗಮನದಿಂದ ಪಾಂಚಾಲ-ಕೃಷ್ಣ-ಪಾಂಡವಯೋಧರು ಪ್ರಹೃಷ್ಟವಾದ ಮನಸ್ಸಿನಿಂದ ಕೂಡಿದವರಾಗಲಿಲ್ಲ. (ವಿಜಯಗಳಿಸಿದ್ದರೂ ನಿರುತ್ಸಾಹಿಗಳಾಗಿದ್ದರು.) ಆ ಸಮಯದಲ್ಲಿ ದೀನನಾಗಿದ್ದ, ಚಿಂತಾಪರ ನಾಗಿದ್ದ, ತಲೆತಗ್ಗಿಸಿಕೊಂಡಿದ್ದ, ಶೋಕದಿಂದ ಭಗ್ನಸಂಕಲ್ಪನಾಗಿದ್ದ ಯುಧಿಷ್ಠಿರನೊಡನೆ ವಾಸುದೇವನು ಹೇಳಿದನು :

**ಧರ್ಮರಾಜ ಕಿಮರ್ಥಂ ತ್ವಮಧರ್ಮಮನುಮನ್ಯಸೇ ।**
**ಹತಬನ್ಧೋರ್ದುರ್ಯೋಧನಸ್ಯ ಪತಿತಸ್ಯ ವಿಚೇತಸಃ ॥೩೩॥**

**ದುರ್ಯೋಧನಸ್ಯ ಭೀಮೇನ ಮೃದ್ಯಮಾನಂ ಶಿರಃ ಪದಾ ।**
**ಉಪಪ್ರೇಕ್ಷಸಿ ಕಸ್ಮಾತ್ತ್ವಂ ಧರ್ಮಜ್ಞಃ ಸನ್ನರಾಧಿಪ ॥೩೪॥**

"ಧರ್ಮರಾಜ! ನೀನು ಅಧರ್ಮಕಾರ್ಯಕ್ಕೆ ಏಕೆ ಅನುಮೋದಿಸಿದೆ? ದುರ್ಯೋಧನನು ಬಂಧುಗಳನ್ನೂ ಅಮಾತ್ಯರನ್ನೂ ಮೊದಲೇ ಕಳೆದುಕೊಂಡಿದ್ದನು. ಭೀಮಸೇನನ ಗದಾಘಾತದಿಂದ ಕೆಳಕ್ಕೆ ಬಿದ್ದು ಪ್ರಜ್ಞಾರಹಿತನಾಗಿದ್ದನು. ಅಂತಹ ಸಂದರ್ಭದಲ್ಲಿ ದುರ್ಯೋಧನನ ತಲೆಯನ್ನು ಭೀಮಸೇನನು ತನ್ನ ಕಾಲಿನಿಂದ ಮೆಟ್ಟುತ್ತಿದ್ದನು. ನರಾಧಿಪನೇ! ನೀನು ಧರ್ಮವನ್ನು ತಿಳಿದವನಾಗಿದ್ದೂ (ಭೀಮಸೇನನ ಕೃತ್ಯವನ್ನು ಒಡನೆಯೇ ಖಂಡಿಸದೇ) ಅವನ ಹತ್ತಿರದಲ್ಲಿಯೇ ನಿಂತು ಏಕೆ ಸುಮ್ಮನೆ ನೋಡುತ್ತಿದ್ದೆ?"

**ನ ಮಮೈತತ್ಪ್ರಿಯಂ ಕೃಷ್ಣ ಯದ್ರಾಜಾನಂ ವೃಕೋದರಃ ।**
**ಪದಾ ಮೂರ್ಧ್ನ್ಯಸ್ಪೃಶತ್ಕ್ರೋಧಾನ್ನ ಚ ಹೃಷ್ಯೇ ಕುಲಕ್ಷಯೇ ॥೩೬॥**

"ಕೃಷ್ಣ! ವೃಕೋದರನು ಕೋಪದಿಂದ ರಾಜನ ತಲೆಯನ್ನು ಕಾಲಿ ನಿಂದ ಮೆಟ್ಟಿದ ಕಾರ್ಯವು ನನಗೂ ಪ್ರಿಯವಾಗಿಲ್ಲ. ಕುಲವೇ ಕ್ಷಯವಾಗಿ

ಹೋಯಿತು. ಇದಕ್ಕೆ ಕಾರಣವು ಯಾವುದೇ ಆಗಿರಲಿ – ನಾನು ಗೆದ್ದರೂ ಈ ಕುಲಕ್ಷಯದಿಂದ ನನಗೆ ಯಾವ ವಿಧವಾದ ಸಂತೋಷವೂ ಇಲ್ಲ.

**ನಿಕೃತ್ಯಾ ನಿಕೃತಾ ನಿತ್ಯಂ ಧೃತರಾಷ್ಟ್ರಸುತೈರ್ವಯಮ್ ।**
**ಬಹೂನಿ ಪರುಷಾಣ್ಯುಕ್ತ್ವಾ ವನಂ ಪ್ರಸ್ಥಾಪಿತಾಃ ಸ್ಮ ಹ ॥೩೬॥**

(ಭೀಮಸೇನನು ದುರ್ಯೋಧನನ ತಲೆಯನ್ನು ಮೆಟ್ಟುತ್ತಿದ್ದುದನ್ನು ಸಮೀಪದಲ್ಲಿಯೇ ನಿಂತು ನೋಡುತ್ತಿದ್ದರೂ ತಾನೇಕೆ ಅವನನ್ನು ತಡೆಯಲಿಲ್ಲವೆಂಬುದಕ್ಕೆ ಯುಧಿಷ್ಠಿರನು ಕಾರಣವನ್ನು ತಿಳಿಸುತ್ತಾನೆ.) ಧೃತರಾಷ್ಟ್ರನ ಮಕ್ಕಳು ನಿತ್ಯವೂ ನಮಗೆ ಮೋಸಮಾಡುತ್ತಾ ನಮ್ಮನ್ನು ಯಾವುದಾದರೂ ರೀತಿಯಿಂದ ವಂಚಿಸುತ್ತಲೇ ಇದ್ದರು. ಬಹಳವಾದ ಕಟುವಾಕ್ಕುಗಳನ್ನು ಹೇಳಿ ನಮ್ಮನ್ನು ಅರಣ್ಯಕ್ಕೂ ಅಟ್ಟಿಬಿಟ್ಟರು.

'ಆ ದುಃಖವು ಭೀಮಸೇನನ ಹೃದಯದಲ್ಲಿ ಬಹಳವಾಗಿ ಬೇರೂರಿಬಿಟ್ಟಿದೆ–ಆ ದುಃಖದ ಉಪಶಮನಾರ್ಥವಾಗಿ ಅವನು ಈ ಕಾರ್ಯವನ್ನು ಮಾಡುತ್ತಿದ್ದಾನೆ'-ವಾರ್ಷ್ಣೇಯ! ಹೀಗೆ ಚಿಂತಿಸಿದ ನಾನು ಭೀಮಸೇನನ ಆ ಅಕಾರ್ಯವನ್ನು ಉಪೇಕ್ಷಿಸಿಬಿಟ್ಟೆನು. (ತಡೆಯಲು ಹೋಗಲಿಲ್ಲ.)

**ತಸ್ಮಾದ್ಧತ್ವಾಕೃತಪ್ರಜ್ಞಂ ಲುಬ್ಧಂ ಕಾಮವಶಾನುಗಮ್ ।**
**ಲಭತಾಂ ಪಾಣ್ಡವಃ ಕಾಮಂ ಧರ್ಮೇಽಧರ್ಮೇ ಚ ವಾ ಕೃತೇ ॥೩೭॥**

ನಾನು ಹೀಗೂ ವಿಚಾರಮಾಡಿದೆನು. 'ಜಿತೇಂದ್ರಿಯನಲ್ಲದ (ಸುಬುದ್ಧಿಶೂನ್ಯನಾದ), ಕಡುಲೋಭಿಯಾದ, ಕಾಮಕ್ಕೆ ದಾಸನಾಗಿದ್ದ ದುರ್ಯೋಧನನನ್ನು ಧರ್ಮಮಾರ್ಗದಿಂದಲೋ ಅಧರ್ಮಮಾರ್ಗ ದಿಂದಲೋ ಸಂಹರಿಸಿರುವ ಭೀಮನು ತನ್ನ ಇಚ್ಛೆಯನ್ನು ಪೂರೈಸಿಕೊಳ್ಳಲಿ.'

ಧೃತರಾಷ್ಟ್ರಮಹಾರಾಜ! ಧರ್ಮರಾಜನು ಹೀಗೆ ಹೇಳಿದನಂತರ ಯದುಕುಲಸಂಭೂತನಾದ ವಾಸುದೇವನು ಬಹಳಕಷ್ಟದಿಂದ ಹೇಳಿದನು : '**ಕಾಮಮಸ್ತ್ವೇತತ್** - ನಿನ್ನ ಇಷ್ಟವಿದ್ದಂತಾಗಲಿ.'

ಭೀಮಸೇನನಿಗೆ ಪ್ರಿಯಕರನೂ ಹಿತಕರನೂ ಆದ ವಾಸುದೇವನು ಹೀಗೆ ಹೇಳಿದನಂತರ ಭೀಮಸೇನನು ರಣರಂಗದಲ್ಲಿ ಮಾಡಿದ ಕೃತ್ಯಗಳೆಲ್ಲ

ವನ್ನೂ ಯುಧಿಷ್ಠಿರನು ಅನುಮೋದಿಸಿದನು. ಅಸಹನಶೀಲನಾದ ಭೀಮಸೇನನು ರಣಾಂಗಣದಲ್ಲಿ ನಿನ್ನ ಮಗನನ್ನು ಸಂಹರಿಸಿ ಸಂಪ್ರಹೃಷ್ಟನಾಗಿ ಯುಧಿಷ್ಠಿರನಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಬದ್ಧಾಂಜಲಿಯಾಗಿ ಅವನ ಮುಂದೆ ನಿಂತುಕೊಂಡನು. ವಿಜಯೋಲ್ಲಸಿತನಾಗಿದ್ದ, ಅಮಿತವಾದ ಹರ್ಷದಿಂದ ವಿಕಸಿತವಾದ ಕಣ್ಣುಗಳಿಂದ ಕೂಡಿದ್ದ, ಮಹಾತೇಜಸ್ವಿಯಾದ ಭೀಮಸೇನನು ಧರ್ಮರಾಜನೊಡನೆ ಹೇಳಿದನು :

**ತವಾದ್ಯ ಪೃಥಿವೀ ಸರ್ವಾ ಕ್ಷೇಮಾ ನಿಹತಕಣ್ಟಕಾ ।**
**ತಾಂ ಪ್ರಶಾಧಿ ಮಹಾರಾಜ ಸ್ವಧರ್ಮಮನುಪಾಲಯನ್ ॥೪೩॥**

"ಮಹಾರಾಜ! ಈಗ ಈ ಅಖಂಡಭೂಮಂಡಲವೇ ನಿನ್ನದಾಗಿದೆ. ನಾಶಪಡಿಸಲ್ಪಟ್ಟ ಶತ್ರುಗಳುಳ್ಳ ಈ ರಾಜ್ಯವು ಸುಕ್ಷೇಮವಾಗಿದೆ. ಸ್ವಧರ್ಮವನ್ನು ಪಾಲಿಸುತ್ತಾ ಈ ಭೂಮಂಡಲವನ್ನು ಅನುಶಾಸನಮಾಡು.

**ಯಸ್ತು ಕರ್ತಾಸ್ಯ ವೈರಸ್ಯ ನಿಕೃತ್ಯಾ ನಿಕೃತಿಪ್ರಿಯಃ ।**
**ಸೋಽಯಂ ವಿನಿಹತಃ ಶೇತೇ ಪೃಥಿವ್ಯಾಂ ಪೃಥಿವೀಪತೇ ॥೪೪॥**

ಪೃಥಿವೀಪತಿಯೇ! ವಂಚನೆ ಮತ್ತು ಮೋಸಗಳೇ ಯಾವನಿಗೆ ಅತ್ಯಂತಪ್ರಿಯವಾಗಿದ್ದುವೋ–ಯಾವನು ವಂಚನೆಯ ಮೂಲಕವಾಗಿಯೇ ಈ ವಿದ್ವೇಷಕ್ಕೆ ಕರ್ತೃವೋ–ಆ ದುರ್ಯೋಧನನಿಂದು ಹತನಾಗಿ ಭೂಮಿಯ ಮೇಲೆ ಮಲಗಿದ್ದಾನೆ.

**ದುಃಶಾಸನಪ್ರಭೃತಯಃ ಸರ್ವೇ ತೇ ಚೋಗ್ರವಾದಿನಃ ।**
**ರಾಧೇಯಃ ಶಕುನಿಶ್ಚೈವ ಹತಾಶ್ಚ ತವ ಶತ್ರವಃ ॥೪೫॥**

ನಮ್ಮ ವಿಷಯದಲ್ಲಿ ಅತ್ಯಂತಕಠೋರವಾದ ಮಾತುಗಳನ್ನಾಡುತ್ತಿದ್ದ ದುಃಶಾಸನನೇ ಮೊದಲಾದ ಧೃತರಾಷ್ಟ್ರನ ಮಕ್ಕಳೂ, ಕರ್ಣ-ಶಕುನಿಯೇ ಮೊದಲಾದ ನಿನ್ನ ಎಲ್ಲ ಶತ್ರುಗಳೂ ಹತರಾಗಿಹೋದರು.

**ಸೇಯಂ ರತ್ನಸಮಾಕೀರ್ಣಾ ಮಹೀ ಸವನಪರ್ವತಾ ।**
**ಉಪಾವೃತ್ತಾ ಮಹಾರಾಜ ತ್ವಾಮದ್ಯ ನಿಹತದ್ವಿಷಮ್ ॥೪೬॥**

ಮಹಾರಾಜ! ನಾನಾವಿಧವಾದ ರತ್ನಗಳಿಂದ ವ್ಯಾಪ್ತಳಾಗಿರುವ,

ಅರಣ್ಯಗಳಿಂದಲೂ–ಪರ್ವತಗಳಿಂದಲೂ ಕೂಡಿರುವ ಭೂದೇವಿಯು ಹತಶತ್ರುವಾದ ನಿನ್ನನ್ನು ಉಪಾಸನೆಮಾಡಲು ಬಂದಿರುತ್ತಾಳೆ.”

**ಗತೋ ವೈರಸ್ಯ ನಿಧನಂ ಹತೋ ರಾಜಾ ಸುಯೋಧನಃ ।**
**ಕೃಷ್ಣಸ್ಯ ಮತಮಾಸ್ಥಾಯ ವಿಜಿತೇಯಂ ವಸುನ್ಧರಾ ॥೪೭॥**

“ಭೀಮಸೇನ! ನೀನು ವೈರದ ಕೊನೆಯನ್ನು ಮುಟ್ಟಿದೆ. ದುರ್ಯೋಧನರಾಜನು ಹತನಾಗಿಹೋದನು. ಶ್ರೀಕೃಷ್ಣನ ಅಭಿಪ್ರಾಯಾನುಸಾರವಾಗಿ ನಡೆಯುತ್ತಿದ್ದುದರಿಂದಲೇ ನಾವು ಈ ಭೂಮಿಯನ್ನು ಜಯಿಸಿದೆವು.

**ದಿಷ್ಟ್ಯಾ ಗತಸ್ತ್ವಮಾನೃಣ್ಯಂ ಮಾತುಃ ಕೋಪಸ್ಯ ಚೋಭಯೋಃ ।**
**ದಿಷ್ಟ್ಯಾ ಜಯಸಿ ದುರ್ಧರ್ಷ ದಿಷ್ಟ್ಯಾ ಶತ್ರುರ್ನಿಪಾತಿತಃ ॥೪೮॥**

ಸೌಭಾಗ್ಯವಶದಿಂದ ನೀನು ಮಾತೃಋಣದಿಂದಲೂ ಮುಕ್ತನಾಗಿರುವೆ. ಕೋಪದ ಋಣದಿಂದಲೂ ಮುಕ್ತನಾಗಿರುವೆ. (ವೀರಮಾತೆಯಾದ ಕುಂತಿಯ ಹೊಟ್ಟೆಯಲ್ಲಿ ಹುಟ್ಟಿದುದಕ್ಕೆ ಸಾರ್ಥಕವಾಯಿತು.) ಸೌಭಾಗ್ಯವಶದಿಂದ ನೀನು ವಿಜಯಿಯಾದೆ. ಸೌಭಾಗ್ಯವಶದಿಂದಲೇ ಶತ್ರುವನ್ನು ರಣಾಂಗಣದಲ್ಲಿ ಸಂಹರಿಸಿ ಬೀಳಿಸಿದೆ.”

೬೦ನೆಯ ಅಧ್ಯಾಯವು ಮುಗಿಯಿತು.

೬೧ನೆಯ ಅಧ್ಯಾಯ — ಗದಾಪರ್ವ (ಮುಂದುವರಿದಿದೆ.)

## ಪಾಂಡವಸೈನಿಕರು ಭೀಮಸೇನನನ್ನು ಸ್ತುತಿಸಿದುದು : ಶ್ರೀಕೃಷ್ಣನು ದುರ್ಯೋಧನನನ್ನು ಆಕ್ಷೇಪಿಸಿದುದು : ದುರ್ಯೋಧನನ ಉತ್ತರ : ಶ್ರೀಕೃಷ್ಣನು ಪಾಂಡವರಿಗೆ ಸಮಾಧಾನ ಹೇಳಿದುದು

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

“ಸಂಜಯ! ಯುದ್ಧದಲ್ಲಿ ದುರ್ಯೋಧನನು ಭೀಮಸೇನನಿಂದ ಹತನಾದುದನ್ನು ಕಂಡು ಪಾಂಡವ-ಸಂಜಯರು ಏನು ಮಾಡಿದರು?”

“ಮಹಾರಾಜ! ಸಿಂಹವು ಮದಿಸಿದ ಕಾಡಾನೆಯನ್ನು ಸಂಹರಿಸು

ವಂತೆ – ಭೀಮಸೇನನು ದುರ್ಯೋಧನನನ್ನು ಸಂಹರಿಸಿದುದನ್ನು ಕಂಡು ಶ್ರೀಕೃಷ್ಣಸಹಿತರಾದ ಪಾಂಡವರು ಆನಂದತುಂದಿಲರಾದರು. ಕುರುನಂದನನಾದ ದುರ್ಯೋಧನನು ಹತನಾಗಲಾಗಿ ಪಾಂಚಾಲ-ಸೃಂಜಯಯೋಧರು ತಮ್ಮ ಉತ್ತರೀಯಗಳನ್ನು ಮೇಲೆ ಹಾರಿಸುತ್ತಾ ಸಿಂಹನಾದಗಳನ್ನು ಮಾಡಿದರು. ಆನಂದತುಂದಿಲರಾಗಿದ್ದ ಅವರ ಭಾರವನ್ನು ಹೊರಲು ಭೂದೇವಿಗೂ ಸಾಧ್ಯವಾಗಲಿಲ್ಲ. ಆ ಸಮಯದಲ್ಲಿ ಸಂತೋಷಾಧಿಕ್ಯದಿಂದ ಕೆಲವು ಯೋಧರು ಧನುಸ್ಸುಗಳನ್ನು ಟೇಂಕರಿಸುತ್ತಿದ್ದರು. ಕೆಲವರು ಶಿಂಜಿನಿಗಳನ್ನು ಸೆಳೆಯುತ್ತಿದ್ದರು. ಕೆಲವರು ಮಹಾಶಂಖಗಳನ್ನೂದುತ್ತಿದ್ದರು. ಕೆಲವರು ದುಂದುಭಿಗಳನ್ನು ಬಾರಿಸುತ್ತಿದ್ದರು. ನಿನಗೆ ಅಹಿತರಾದ ಅನೇಕರು ಕುಣಿದಾಡುತ್ತಿದ್ದರು ; ಕೆಲವರು ಪರಿಹಾಸ್ಯಮಾಡುತ್ತಾ ಗಹ-ಗಹಿಸಿ ನಗುತ್ತಿದ್ದರು. ಅವರೆಲ್ಲರೂ ಭೀಮಸೇನನೊಡನೆ ಈ ಮಾತುಗಳನ್ನು ಹಲವು ಬಾರಿ ಹೇಳುತ್ತಿದ್ದರು :

“ಗದಾಯುದ್ಧದಲ್ಲಿ ಬಹಳ ಪರಿಶ್ರಮವನ್ನು ಹೊಂದಿದ್ದ ಕೌರವೇಂದ್ರನಾದ ದುರ್ಯೋಧನನನ್ನು ನೀನು ಯುದ್ಧದಲ್ಲಿ ಸಂಹರಿಸಿ ಮಹತ್ತರವಾದ ಮತ್ತು ಅತ್ಯಂತದುಷ್ಕರವಾದ ಕರ್ಮವನ್ನು ಮಾಡಿರುವೆ. ಮಹಾಸಮರದಲ್ಲಿ ಇಂದ್ರನು ವೃತ್ರಾಸುರನನ್ನು ವಧಿಸಿದಂತೆ–ನೀನು ಶತ್ರುವಾದ ದುರ್ಯೋಧನನನ್ನು ವಧಿಸಿದೆಯೆಂದು ಜನರು ಭಾವಿಸಿದ್ದಾರೆ. ‘ನಾನಾವಿಧವಾದ ನಡಿಗೆಗಳಲ್ಲಿ ಸಂಚರಿಸುತ್ತಾ, ಎಲ್ಲ ವಿಧವಾದ ಮಂಡಲಗತಿಗಳನ್ನೂ ಪ್ರದರ್ಶಿಸುತ್ತಾ ಗದಾಯುದ್ಧದಲ್ಲಿ ತೊಡಗಿದ್ದ ಶೂರನಾದ ಈ ದುರ್ಯೋಧನನನ್ನು ಭೀಮಸೇನನೊಬ್ಬನ ಹೊರತಾಗಿ ಮತ್ತಾರು ಸಂಹರಿಸುತ್ತಿದ್ದರು?’ – ಎಂಬುದಾಗಿ ಜನರು ಆಡಿಕೊಳ್ಳುತ್ತಿದ್ದಾರೆ. ನೀನು ವೈರವೆಂಬ ಸಮುದ್ರವನ್ನು ದಾಟಿರುವೆ. ಈ ಸಮುದ್ರವು ಇತರರಿಂದ ದಾಟಲು ದುಸ್ಸಾಧ್ಯವಾದುದು. ಈ ರೀತಿಯಲ್ಲಿ ವಿಜಯವನ್ನು ಸಂಪಾದಿಸಲು ಬೇರೆ ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ. ಮದಿಸಿದ ಆನೆಯೋಪಾದಿಯಲ್ಲಿ ನೀನು ರಣಾಂಗಣದಲ್ಲಿ ದುರ್ಯೋಧನನ ಶಿರಸ್ಸನ್ನೂ ಅದೃಷ್ಟವಶಾತ್ ನಿನ್ನ ಪಾದದಿಂದ ಮೆಟ್ಟಿದೆ.

ನಿಷ್ಪಾಪನೇ! ಸಿಂಹವು ಎಮ್ಮೆಯ ರಕ್ತವನ್ನು ಹೀರುವಂತೆ–ಘೋರ

ವಾದ ಯುದ್ಧಮಾಡಿ ದುಃಶಾಸನನ ರಕ್ತವನ್ನು ಕುಡಿದೆ. ಇದೂ ಸಹ ಪರಮಸೌಭಾಗ್ಯದ ವಿಷಯವೇ ಆಗಿದೆ. ಯಾರು ಧರ್ಮಾತ್ಮನಾದ ಯುಧಿಷ್ಠಿರನ ವಿಷಯದಲ್ಲಿ ಅಪರಾಧವನ್ನೆಸಗಿದರೋ, ನಿನ್ನ ಸಾಹಸ ಕಾರ್ಯದ ಮೂಲಕವಾಗಿ ಅವರ ತಲೆಯ ಮೇಲೆ ಕಾಲನ್ನಿಟ್ಟೆ. ಇದೂ ಸಹ ನಿನ್ನ ಅದೃಷ್ಟವೇ ಸರಿ. ಶತ್ರುಗಳ ಮೇಲೆ ನಿನ್ನ ಪ್ರಭುತ್ವವನ್ನು ಸ್ಥಾಪಿಸಿರುವುದರಿಂದಲೂ, ದುರ್ಯೋಧನನನ್ನು ವಧಿಸಿರುವುದರಿಂದಲೂ, ಸೌಭಾಗ್ಯದ ಕಾರಣದಿಂದಲೂ ಪೃಥಿವಿಯಲ್ಲಿ ನಿನ್ನ ಮಹಾಯಶಸ್ಸು ಸರ್ವತ್ರಪ್ರಖ್ಯಾತವಾಗುತ್ತದೆ. ವೃತ್ರಾಸುರನು ಹತನಾಗಲಾಗಿ ಇಂದ್ರನನ್ನು ವಂದಿ-ಮಾಗಧರು ಇದೇ ರೀತಿ ಅಭಿನಂದಿಸುತ್ತಿದ್ದರು. ಅಮಿತ್ರಹಂತಕನಾದ ನಿನ್ನನ್ನೂ ನಾವು ಈ ಸಮಯದಲ್ಲಿ ಅಭಿನಂದಿಸುತ್ತೇವೆ. ದುರ್ಯೋಧನನ ವಧೆಯ ಸಮಯದಲ್ಲಿ ಯಾವ ನಮ್ಮ ರೋಮಕೋಟಿಗಳು ನಿಮಿರಿ ನಿಂತಿದ್ದುವೋ–ಆ ರೋಮಕೋಟಿಗಳು ಈಗಲೂ ನಮ್ಮ ಶರೀರಗಳಲ್ಲಿ ಹಾಗೆಯೇ ನಿಮಿರಿ ನಿಂತಿವೆ. ಪ್ರಸುಪ್ತವಾಗಿರುವುದಿಲ್ಲ. ಭಾರತನೇ! ಇದನ್ನು ನೀನು ಪ್ರತ್ಯಕ್ಷವಾಗಿಯೇ ಕಾಣಬಹುದಾಗಿದೆ."

ಅಲ್ಲಿ ನೆರೆದಿದ್ದ ವೀರಯೋಧರು ಭೀಮಸೇನನನ್ನು ಇವೇ ಮುಂತಾದ ಮಾತುಗಳಿಂದ ಪ್ರಶಂಸಿಸಿದರು. ದುರ್ಯೋಧನನ ನಿಧನದಿಂದ ಪರಮ ಹೃಷ್ಟರಾಗಿದ್ದ ಪಾಂಡವರಿಂದ ಕೂಡಿದ ಪಾಂಚಾಲಯೋಧರು ಅನುಚಿತವಾದ ಮಾತುಗಳನ್ನು ಹೇಳುತ್ತಿದ್ದುದನ್ನು ಕೇಳಿ ಮಧುಸೂದನನು ಅವರೊಡನೆ ಹೇಳಿದನು :

**ನ ನ್ಯಾಯ್ಯಂ ನಿಹತಂ ಶತ್ರುಂ ಭೂಯೋ ಹನ್ತುಂ ನರಾಧಿಪಾಃ ।**
**ಅಸಕೃದ್ವಾಗ್ಭಿರುಗ್ರಾಭಿರ್ನಿಹತೋ ಹ್ಯೇಷ ಮನ್ದಧೀಃ ॥೧೮॥**

"ನರಾಧಿಪರೇ! ಹತನಾಗಿರುವ ಶತ್ರುವನ್ನು ಪುನಃ ಪುನಃ ಮಾತುಗಳಿಂದ ಪೀಡಿಸುವುದು ಉಚಿತವೆನಿಸುವುದಿಲ್ಲ. ನೀವು ಮಂದಬುದ್ಧಿಯಾದ ಈ ದುರ್ಯೋಧನನನ್ನು ಉಗ್ರವಾದ ಮಾತುಗಳಿಂದ ಪುನಃ ಪುನಃ ಪೀಡಿಸುತ್ತಿರುವಿರಿ.

**ತದೈವೈಷ ಹತಃ ಪಾಪೋ ಯದೈವ ನಿರಪತ್ರಪಃ ।**
**ಲುಬ್ಧಃ ಪಾಪಸಹಾಯಶ್ಚ ಸುಹೃದಾಂ ಶಾಸನಾತಿಗಃ ॥೧೯॥**

ಪಾಪಿಷ್ಠನಾದ, ನಿರ್ಲಜ್ಜನಾದ ಇವನು ಯಾವಾಗ ಕಡುಲೋಭಿಯಾಗಿ ಪಾಪಿಷ್ಠರ ಸಹಾಯವನ್ನು ಪಡೆದು ಸುಹೃದರ ಮಾತನ್ನು ಉಲ್ಲಂಘಿಸಿದನೋ–ಆಗಲೇ ಹತನಾದನು.

**ಬಹುಶೋ ವಿದುರದ್ರೋಣಕೃಪಗಾಙ್ಗೇಯಸೃಂಜಯೈಃ ।**
**ಪಾಣ್ಡುಭ್ಯಃ ಪ್ರಾರ್ಥ್ಯಮಾನೋಽಪಿ ಪಿತ್ರ್ಯಮಂಶಂ ನ ದತ್ತವಾನ್ ॥**

ವಿದುರ-ದ್ರೋಣ-ಕೃಪ-ಭೀಷ್ಮ-ಸೃಂಜಯರಿಂದ ಹಲವು ಬಾರಿ ಪ್ರಾರ್ಥಿಸಲ್ಪಟ್ಟರೂ ಪಾಂಡವರಿಗೆ ಅವರ ತಂದೆಯ (ಪರಂಪರಾಗತವಾದ) ಪಾಲನ್ನು ಬಿಟ್ಟುಕೊಡಲಿಲ್ಲ.

**ನೈಷ ಯೋಗ್ಯೋಽದ್ಯ ಮಿತ್ರಂ ವಾ ಶತ್ರುರ್ವಾ ಪುರುಷಾಧಮಃ ।**
**ಕಿಮನೇನಾತಿಭುಗ್ನೇನ ವಾಗ್ಭಿಃ ಕಾಷ್ಠ ಸಧರ್ಮಣಾ ॥೨೧॥**

**ರಥೇಷ್ವಾರೋಹತ ಕ್ಷಿಪ್ರಂ ಗಚ್ಛಾಮೋ ವಸುಧಾಧಿಪಾಃ ।**
**ದಿಷ್ಟ್ಯಾ ಹತೋಽಯಂ ಪಾಪಾತ್ಮಾ ಸಾಮಾತ್ಯಜ್ಞಾತಿಬಾನ್ಧವಃ ॥೨೨॥**

ಈ ಪುರುಷಾಧಮನೀಗ ಯಾರೊಬ್ಬರಿಗೂ ಮಿತ್ರನಾಗಲೂ ಅಥವಾ ಶತ್ರುವಾಗಲೂ ಯೋಗ್ಯನಾಗಿರುವುದಿಲ್ಲ. ಕಟ್ಟಿಗೆಯಂತೆ ಬಿದ್ದಿರುವ ಇವನನ್ನು ಕಠಿಣವಾದ ಮಾತುಗಳಿಂದ ಬಗ್ಗಿಸಲು ಪ್ರಯತ್ನಿಸುವುದರಿಂದ ಯಾವ ಪ್ರಯೋಜನವಿದೆ? ಸೌಭಾಗ್ಯದ ಕಾರಣದಿಂದ ಅಮಾತ್ಯ-ಜ್ಞಾತಿ-ಬಾಂಧವಸಹಿತನಾಗಿ ಈ ಪಾಪಾತ್ಮನು ಹತನಾದನು. ನೃಪಶ್ರೇಷ್ಠರೇ! ಬೇಗ-ಬೇಗ ನಿಮ್ಮ ರಥಗಳನ್ನು ಹತ್ತಿರಿ. ಶಿಬಿರಗಳಿಗೆ ಹೋಗೋಣ.”

ಮಹಾರಾಜ! ಶ್ರೀಕೃಷ್ಣನ ಬಾಯಿಂದಲೇ ಬಂದ ನಿಂದನೆಯನ್ನು ಕೇಳಿ ದುರ್ಯೋಧನನು ಕೋಪಾವಿಷ್ಟನಾಗಿ ಎರಡು ಕೈಗಳನ್ನೂ ನೆಲಕ್ಕೂರಿಕೊಂಡು ಮೇಲೆದ್ದು ಪೃಷ್ಠವನ್ನು ಊರಿ ಕುಳಿತನು. ಅನಂತರ ದುರ್ಯೋಧನನು ಹುಬ್ಬನ್ನು ಗಂಟಿಕ್ಕಿ ಶ್ರೀಕೃಷ್ಣನನ್ನು ದುರುಗುಟ್ಟಿಕೊಂಡು ನೋಡಿದನು. ಶರೀರದ ಅರ್ಧಭಾಗವು ಮಾತ್ರ ಮೇಲೆ ಕಾಣುತ್ತಿದ್ದ ಅವನ ರೂಪವು ಆ ಸಮಯದಲ್ಲಿ ಕತ್ತರಿಸಿದ ಬಾಲವುಳ್ಳ ಕೋಪಗೊಂಡ ವಿಷಸರ್ಪದಂತೆಯೇ ಕಾಣುತ್ತಿತ್ತು.

**ಪ್ರಾಣಾಂತಕರಿಣೀಂ ಘೋರಾಂ ವೇದನಾಮಪ್ಯಚಿನ್ತಯನ್ ।**
**ದುರ್ಯೋಧನೋ ವಾಸುದೇವಂ ವಾಗ್ಭಿರುಗ್ರಾಭಿರಾರ್ದಯತ್ ॥**

ಮಹಾರಾಜ! ದುರ್ಯೋಧನನಿಗೆ ಆ ಸಮಯದಲ್ಲಿ ಪ್ರಾಣಾಂತಕರವಾದ ಭಯಂಕರವಾದ ವೇದನೆಯಾಗುತ್ತಿದ್ದಿತು. ಅದನ್ನೂ ಅವನು ಲೆಕ್ಕಿಸದೇ ವಾಸುದೇವನನ್ನು ಅತ್ಯಂತಕಠೋರವಾದ ಮಾತುಗಳಿಂದ ಪೀಡಿಸತೊಡಗಿದನು.

**ಕಂಸದಾಸಸ್ಯ ದಾಯಾದ ನ ತೇ ಲಜ್ಜಾಸ್ತ್ಯನೇನ ವೈ ।**
**ಅಧರ್ಮೇಣ ಗದಾಯುದ್ಧೇ ಯದಹಂ ವಿನಿಪಾತಿತಃ ॥೨೭॥**

"ಕಂಸನ ದಾಸನ ಮಗನೇ! ಅಧರ್ಮದಿಂದ ನಾನು ಗದಾಯುದ್ಧದಲ್ಲಿ ಕೆಳಕ್ಕೆ ಬೀಳಿಸಲ್ಪಟ್ಟೆನು. ನಿನ್ನ ಕಡೆಯವರೇ ಮಾಡಿದ (ನೀನು ಮಾಡಿಸಿದ) ಈ ಕುತ್ಸಿತಕಾರ್ಯಕ್ಕಾಗಿ ನಿನಗೆ ನಾಚಿಕೆಯಾಗುವುದಿಲ್ಲವೇ?

**ಊರೂ ಭಿನ್ಧೀತಿ ಭೀಮಸ್ಯ ಸ್ಮೃತಿಂ ಮಿಥ್ಯಾ ಪ್ರಯಚ್ಛತಾ ।**
**ಕಿಂ ನ ವಿಜ್ಞಾತಮೇತನ್ಮೇ ಯದರ್ಜುನಮವೋಚಥಾಃ ॥೨೮॥**

ನನ್ನ ತೊಡೆಗಳನ್ನು ಮುರಿಯುವಂತೆ ಭೀಮಸೇನನಿಗೆ ಮರೆತು ಹೋಗಿದ್ದುದನ್ನು ಜ್ಞಾಪಿಸಿದ ನೀನೇ ಈ ಅಧರ್ಮಯುದ್ಧಕ್ಕೆ ಪ್ರೇರಕನಾಗಿರುವೆ. ಆ ಸಮಯದಲ್ಲಿ ನೀನು ಅರ್ಜುನನೊಡನೆ ಏನು ಹೇಳಿದೆಯೆಂಬುದು ನನಗೆ ತಿಳಿಯದೆಂದು ಭಾವಿಸಿರುವೆಯಾ?

**ಘಾತಯಿತ್ವಾ ಮಹೀಪಾಲಾನೃಜುಯುದ್ಧಾನ್ಸಹಸ್ರಶಃ ।**
**ಜಿಹ್ಮೈರುಪಾಯೈರ್ಬಹುಭಿರ್ನ ತೇ ಲಜ್ಜಾ ನ ತೇ ಘೃಣಾ ॥೨೯॥**

ನ್ಯಾಯಮಾರ್ಗದಲ್ಲಿ ಯುದ್ಧಮಾಡುತ್ತಿದ್ದ ಸಾವಿರಾರು ರಾಜರನ್ನು ಅನೇಕಾನೇಕ ಕುಟಿಲೋಪಾಯಗಳ ಮೂಲಕವಾಗಿ ಸಂಹಾರಮಾಡಿಸಿರುವ ನಿನಗೆ ನಾಚಿಕೆಯೂ ಇಲ್ಲ ; ಕರುಣೆಯೂ ಇಲ್ಲ.

**ಅಹನ್ಯಹನಿ ಶೂರಾಣಾಂ ಕುರ್ವಾಣಃ ಕದನಂ ಮಹತ್ ।**
**ಶಿಖಣ್ಡಿನಂ ಪುರಸ್ಕೃತ್ಯ ಘಾತಿತಸ್ತೇ ಪಿತಾಮಹಃ ॥೩೦॥**

ಶಿಖಂಡಿಯನ್ನು ಮುಂದೆ ನಿಲ್ಲಿಸಿ ಅನುದಿನವೂ ಸಾವಿರಾರು ಶೂರರನ್ನು ಸಂಹಾರಮಾಡುತ್ತಿದ್ದ ಪಿತಾಮಹನನ್ನು ಕೊಲ್ಲಿಸಿದೆ.

**ಅಶ್ವತ್ಥಾಮ್ನಃ ಸನಾಮಾನಂ ಹತ್ವಾ ನಾಗಂ ಸುದುರ್ಮತೇ ।**
**ಆಚಾರ್ಯೋ ನ್ಯಾಸಿತಃ ಶಸ್ತ್ರಂ ಕಿಂ ತನ್ನ ವಿದಿತಂ ಮಯಾ ॥೩೧॥**

ಮಹಾದುರ್ಮತಿಯೇ! 'ಅಶ್ವತ್ಥಾಮ' ಎಂಬ ಹೆಸರಿನ ಆನೆಯನ್ನು ಕೊಂದು ಅಶ್ವತ್ಥಾಮನೇ ಸತ್ತನೆಂಬುದಾಗಿ ಧರ್ಮರಾಜನಿಂದ ಹೇಳಿಸಿ ದ್ರೋಣಾಚಾರ್ಯರಿಂದ ಶಸ್ತ್ರನ್ಯಾಸವನ್ನು ಮಾಡಿಸಿದೆ. ಈ ವಿಷಯವು ನನಗೆ ತಿಳಿದಿಲ್ಲವೆಂದು ಭಾವಿಸಿರುವೆಯಾ?

ಸ ಚಾನೇನ ನೃಶಂಸೇನ ಧೃಷ್ಟದ್ಯುಮ್ನೇನ ವೀರ್ಯವಾನ್ ।
ಪಾತ್ಯಮಾನಸ್ತ್ವಯಾ ದೃಷ್ಟೋ ನ ಚೈನಂ ತ್ವಮವಾರಯಃ ॥೩೨॥

ವೀರ್ಯವಂತರಾದ, ಶಸ್ತ್ರನ್ಯಾಸಮಾಡಿದ್ದ ದ್ರೋಣರನ್ನು ಮಹಾ ಕ್ರೂರಿಯಾದ ಧೃಷ್ಟದ್ಯುಮ್ನನು ಕೊಲ್ಲುತ್ತಿದ್ದುದನ್ನು ನೀನು ಪ್ರತ್ಯಕ್ಷವಾಗಿಯೇ ನೋಡಿದೆ. ಆದರೆ ಅಂತಹ ಕುತ್ಸಿತಕಾರ್ಯವನ್ನೂ ನೀನು ತಡೆಯಲಿಲ್ಲ.

ವಧಾರ್ಥಂ ಪಾಣ್ಡುಪುತ್ರಸ್ಯ ಯಾಚಿತಾಂ ಶಕ್ತಿಮೇವ ಚ ।
ಘಟೋತ್ಕಚೇ ವ್ಯಂಸಯತಃ ಕಸ್ತ್ವತ್ತಃ ಪಾಪಕೃತ್ತಮಃ ॥೩೩॥

ಪಾಂಡುಪುತ್ರನಾದ ಅರ್ಜುನನನ್ನು ವಧಿಸುವ ಸಲುವಾಗಿಯೇ ಶಕ್ತ್ಯಾಯುಧವನ್ನು ಕರ್ಣನು ಇಂದ್ರನಿಂದ ಯಾಚಿಸಿ ಪಡೆದುಕೊಂಡಿದ್ದನು. ಆ ಶಕ್ತ್ಯಾಯುಧವನ್ನು ನೀನು ಘಟೋತ್ಕಚನ ಮೇಲೆ ಪ್ರಯೋಗಿಸುವಂತೆ ತಂತ್ರಮಾಡಿದೆ. ಇಂತಹ ಅನೇಕಕುತ್ಸಿತಕರ್ಮಗಳನ್ನೂ ಮಾಡಿರುವ ನಿನಗಿಂತಲೂ ಮಹಾಪಾತಕಿಯು ಬೇರೆ ಯಾವನಿದ್ದಾನೆ?

ಛಿನ್ನಹಸ್ತಃ ಪ್ರಾಯಗತಸ್ತಥಾ ಭೂರಿಶ್ರವಾ ಬಲೀ ।
ತ್ವಯಾಭಿಸೃಷ್ಟೇನ ಹತಃ ಶೈನೇಯೇನ ಮಹಾತ್ಮನಾ ॥೩೪॥

ಬಲಿಷ್ಠನಾದ ಭೂರಿಶ್ರವಸನು ಛಿನ್ನಹಸ್ತನಾಗಿದ್ದನು. ಪ್ರಾಯೋಪ ವೇಶಮಾಡಿದ್ದನು. ಅಂತಹವನನ್ನೂ ಮಹಾತ್ಮನಾದ ಸಾತ್ಯಕಿಯು ನಿನ್ನ ಪ್ರೇರಣೆಯಿಂದಲೇ ಸಂಹರಿಸಿದನು.

ಕುರ್ವಾಣಶ್ಚೋತ್ತಮಂ ಕರ್ಮ ಕರ್ಣಃ ಪಾರ್ಥಜಿಗೀಷಯಾ ।
ವ್ಯಂಸನೇನಾಶ್ವಸೇನಸ್ಯ ಪನ್ನಗೇನ್ದ್ರಸ್ಯ ವೈ ಪುನಃ ॥೩೫॥

ಪುನಶ್ಚ ಪತಿತೇ ಚಕ್ರೇ ವ್ಯಸನಾರ್ತಃ ಪರಾಜಿತಃ ।
ಪಾತಿತಃ ಸಮರೇ ಕರ್ಣಶ್ಚಕ್ರವ್ಯಗ್ರೋಽಗ್ರಣೀರ್ನೃಣಾಮ್ ॥೩೬॥

ಮನುಷ್ಯರಲ್ಲಿಯೇ ಅಗ್ರಗಣ್ಯನಾದ ಕರ್ಣನು ಅರ್ಜುನನನ್ನು ಜಯಿಸುವ ದೃಢವಾದ ಇಚ್ಛೆಯಿಂದ ಶ್ರೇಷ್ಠವಾದ ಪರಾಕ್ರಮವನ್ನು ತೋರಿಸುತ್ತಾ ಯುದ್ಧಮಾಡುತ್ತಿದ್ದನು. ಆ ಸಮಯದಲ್ಲಿ ನಾಗರಾಜನಾದ ಅಶ್ವಸೇನನು ಕರ್ಣನು ಬಿಟ್ಟ ಬಾಣದಲ್ಲಿ ಯೋಗಬಲದಿಂದ ಸೇರಿಕೊಂಡು ಅರ್ಜುನನನ್ನು ಸಂಹರಿಸಲು ಹೋದಾಗ ಕುಯುಕ್ತಿಯಿಂದ ಅದನ್ನು ವ್ಯರ್ಥಗೊಳಿಸಿದೆ. (ರಥವನ್ನೇ ಕಾಲಿನಿಂದ ಮೆಟ್ಟಿ ಆ ಬಾಣವು ಕಿರೀಟಿಯ ಕಿರೀಟವನ್ನು ಮಾತ್ರವೇ ಹಾರಿಸಿಕೊಂಡು ಹೋಗುವಂತೆ ಮಾಡಿದೆ.) ಕರ್ಣನ ರಥದ ಎಡಭಾಗದ ಚಕ್ರವು ನೆಲದಲ್ಲಿ ಹೂತುಹೋಗಿದ್ದಿತು. ಆ ಸಮಯದಲ್ಲಿ ಕರ್ಣನು ಚಕ್ರವನ್ನು ಎತ್ತುವುದರಲ್ಲಿಯೇ ಮಗ್ನನಾಗಿದ್ದನು. ಅಂತಹ ಸಂದಿಗ್ಧಸಮಯದಲ್ಲಿ ವ್ಯಸನಾರ್ತನಾಗಿದ್ದ ಕರ್ಣನು ಪರಾಜಿತನಾಗಿ ನಿಮ್ಮಿಂದ ಕೊಲ್ಲಲ್ಪಟ್ಟನು.

**ಯದಿ ಮಾಂ ಚಾಪಿ ಕರ್ಣಂ ಚ ಭೀಷ್ಮದ್ರೋಣೌ ಚ ಸಂಯುತೌ ।**
**ಋಜುನಾ ಪ್ರತಿಯುಧ್ಯೇಥಾ ನ ತೇ ಸ್ಯಾದ್ವಿಜಯೋ ಧ್ರುವಮ್ ॥**

ನನ್ನೊಡನೆ, ಕರ್ಣನೊಡನೆ ಮತ್ತು ಭೀಷ್ಮ-ದ್ರೋಣರೊಡನೆ ನೀನು ನ್ಯಾಯಮಾರ್ಗದಲ್ಲಿಯೇ ಯುದ್ಧಮಾಡಿದ್ದರೆ, ನಿನಗೆ (ನಿನ್ನ ಪಕ್ಷಕ್ಕೆ) ಖಂಡಿತವಾಗಿಯೂ ಜಯವು ಲಭಿಸುತ್ತಿರಲಿಲ್ಲ.

**ತ್ವಯಾ ಪುನರನಾರ್ಯೇಣ ಜಿಹ್ಮಮಾರ್ಗೇಣ ಪಾರ್ಥಿವಾಃ ।**
**ಸ್ವಧರ್ಮಮನುತಿಷ್ಠನ್ತೋ ವಯಂ ಚಾನ್ಯೇ ಚ ಘಾತಿತಾಃ ॥೩೮॥**

ಸ್ವಧರ್ಮಪಾಲನೆಯಲ್ಲಿಯೇ (ಧರ್ಮಯುದ್ಧದಲ್ಲಿಯೇ) ನಿಷ್ಠರಾಗಿದ್ದ ನಾವೂ ಮತ್ತು ಇತರ ರಾಜರೂ ಕುಟಿಲಮಾರ್ಗಾವಲಂಬಿಯಾದ, ಅನಾರ್ಯನಾದ ನಿನ್ನಿಂದ ಹತರಾದೆವು.”

ದುರ್ಯೋಧನನು ಮಾಡಿದ ನಿಂದನೆಗೆ ಶ್ರೀಕೃಷ್ಣನು ಉತ್ತರಿಸುತ್ತಾನೆ.

**ಹತಸ್ತ್ವಮಸಿ ಗಾನ್ಧಾರೇ ಸಭ್ರಾತೃಸುತಬಾನ್ಧವಃ ।**
**ಸಗಣಃ ಸಸುಹೃಚ್ಚೈವ ಪಾಪಮಾರ್ಗಮನುಷ್ಠಿತಃ ॥೩೯॥**

**ತವೈವ ದುಷ್ಕೃತೈರ್ವೀರೌ ಭೀಷ್ಮದ್ರೋಣೌ ನಿಪಾತಿತೌ ।**
**ಕರ್ಣಶ್ಚ ನಿಹತಃ ಸಂಖ್ಯೇ ತವ ಶೀಲಾನುವರ್ತಕಃ ॥೪೦॥**

“ಗಾಂಧಾರೀಪುತ್ರನೇ! ಪಾಪಮಾರ್ಗವನ್ನೇ ಸಂಪೂರ್ಣವಾಗಿ ಆಶ್ರಯಿಸಿದ್ದ ನೀನು ಆ ಪಾಪದ ಫಲವಾಗಿ ಭ್ರಾತೃ-ಸುತ-ಬಾಂಧವಗಣ-ಸುಹೃತ್ಸಮೇತನಾಗಿ ಹತನಾದೆ. ನಿನ್ನ ಪಾಪಕರ್ಮದ ಫಲವಾಗಿಯೇ ಭೀಷ್ಮ-ದ್ರೋಣರೂ ಹತರಾದರು. ನಿನ್ನ ಗುಣ-ಶೀಲಗಳನ್ನು ಅನುವರ್ತಿಸುತ್ತಿದ್ದ ಕರ್ಣನೂ ಅದೇ ಕಾರಣದಿಂದಲೇ ಹತನಾದನು.

**ಯಾಚ್ಯಮಾನಂ ಮಯಾ ಮೂಢ ಪಿತ್ರ್ಯಮಂಶಂ ನ ದಿತ್ಸಸಿ ।**
**ಪಾಣ್ಡವೇಭ್ಯಃ ಸ್ವರಾಜ್ಯಂ ಚ ಲೋಭಾಚ್ಛಕುನಿನಿಶ್ಚಯಾತ್ ॥೪೧॥**

ಮೂರ್ಖನೇ! ಶಕುನಿಯ ಸಲಹೆಗೆ ಮಾನ್ಯತೆಯನ್ನು ಕೊಟ್ಟು ಮತ್ತು ರಾಜ್ಯಲೋಭದ ಕಾರಣದಿಂದಾಗಿ ನಾನೇ ಯಾಚಿಸಲು ಬಂದಾಗಲೂ ಪಿತೃಸಂಬಂಧವಾದ ಪಾಂಡವರ ರಾಜ್ಯವನ್ನು ನೀನು ಅವರಿಗೆ ಕೊಡಲು ಸಮ್ಮತಿಸಲಿಲ್ಲ.

**ವಿಷಂ ತೇ ಭೀಮಸೇನಾಯ ದತ್ತಂ ಸರ್ವೇ ಚ ಪಾಣ್ಡವಾಃ ।**
**ಪ್ರದೀಪಿತಾ ಜತುಗೃಹೇ ಮಾತ್ರಾ ಸಹ ಸುದುರ್ಮತೇ ॥೪೨॥**

**ಸಭಾಯಾಂ ಯಾಜ್ಞಸೇನೀ ಚ ಕೃಷ್ಟಾ ದ್ಯೂತೇ ರಜಸ್ವಲಾ ।**
**ತದೈವ ತಾವದ್ದುಷ್ಟಾತ್ಮನ್ವಧ್ಯಸ್ತ್ವಂ ನಿರಪತ್ರಪ ॥೪೩॥**

ದುರ್ಬುದ್ಧಿಯವನೇ! ನಾಚಿಕೆಗೆಟ್ಟವನೇ! ನೀನು ಭೀಮಸೇನನಿಗೆ ವಿಷವುಣಿಸಿದೆ. ಲಾಕ್ಷಾಗೃಹದಲ್ಲಿ ತಾಯಿಯ ಜೊತೆಯಲ್ಲಿಯೇ ಎಲ್ಲ ಪಾಂಡವರನ್ನೂ ಸುಡಲು ಪ್ರಯತ್ನಿಸಿದೆ. ದ್ಯೂತಸಮಯದಲ್ಲಿ ರಜಸ್ವಲೆಯಾಗಿದ್ದ ದ್ರೌಪದಿಯನ್ನು ತುಂಬಿದ ಸಭೆಯಲ್ಲಿ ಎಳೆದಾಡಿಸಿದೆ. ದುಷ್ಟಾತ್ಮನೇ! ಈ ಒಂದು ಅಪರಾಧಕ್ಕಾಗಿಯೇ ನಿನ್ನನ್ನು ಆಗಲೇ ವಧಿಸಬೇಕಾಗಿದ್ದಿತು.

**ಅನಕ್ಷಜ್ಞಂ ಚ ಧರ್ಮಜ್ಞಂ ಸೌಬಲೇನಾಕ್ಷವೇದಿನಾ ।**
**ನಿಕೃತ್ಯಾ ಯತ್ಪರಾಜೈಷೀಸ್ತಸ್ಮಾದಸಿ ಹತೋ ರಣೇ ॥೪೪॥**

ಅಕ್ಷವಿದ್ಯೆಯನ್ನು (ಪಗಡೆಯಾಟವನ್ನು) ತಿಳಿಯದೇ ಇದ್ದ, ಧರ್ಮಜ್ಞನಾದ ಧರ್ಮರಾಜನನ್ನು ಅಕ್ಷವಿದ್ಯೆಯಲ್ಲಿ ಪ್ರವೀಣನಾದ ಶಕುನಿಯ ಮೂಲಕವಾಗಿ ವಂಚನೆಯಿಂದ ಜಯಿಸಿದ ಕಾರಣ ನೀನಿಂದು ರಣಭೂಮಿಯಲ್ಲಿ ಹತನಾಗಿ ಬಿದ್ದಿರುವೆ.

**ಜಯದ್ರಥೇನ ಪಾಪೇನ ಯತ್ಕೃಷ್ಣಾ ಕ್ಲೇಶಿತಾ ವನೇ ।**
**ಯಾತೇಷು ಮೃಗಯಾಂ ಚೈವ ತೃಣಬಿನ್ದೋರಥಾಶ್ರಮಮ್ ॥೪೫॥**

ಪಾಂಡವರು ಬೇಟೆಯಾಡುವ ಸಲುವಾಗಿ ತೃಣಬಿಂದುವಿನ ಆಶ್ರಮದ ಕಡೆಗೆ ಹೋಗಿರಲಾಗಿ ಪಾಪಿಷ್ಠನಾದ ಜಯದ್ರಥನು ದ್ರೌಪದಿಯನ್ನು ಕ್ಲೇಶಗೊಳಿಸಿದ ಕಾರಣದಿಂದ ನೀನಿಂದು ಹತನಾಗಿ ರಣಭೂಮಿಯಲ್ಲಿ ಬಿದ್ದಿರುವೆ.

**ಅಭಿಮನ್ಯುಶ್ಚ ಯದ್ಬಾಲ ಏಕೋ ಬಹುಭಿರಾಹವೇ ।**
**ತ್ವದ್ದೋಷೈರ್ನಿಹತಃ ಪಾಪ ತಸ್ಮಾದಸಿ ಹತೋ ರಣೇ ॥೪೬॥**

ಪಾಪಿಷ್ಠನೇ! ಬಾಲನಾದ ಅಭಿಮನ್ಯುವೊಬ್ಬನೇ ಅನೇಕವೀರರನ್ನು ಎದುರಿಸಿ ಯುದ್ಧಮಾಡುತ್ತಿದ್ದಾಗ ನಿನ್ನ ಪಾಪಯುಕ್ತವಾದ ಸಲಹೆಗೆ ಅನುಸಾರವಾಗಿ ಕೊಲ್ಲಲ್ಪಟ್ಟನು. ಆ ಕಾರಣದಿಂದಲೂ ನೀನಿಂದು ರಣ ಭೂಮಿಯಲ್ಲಿ ಹತನಾಗಿ ಬಿದ್ದಿರುವೆ.

**ಯಾನ್ಯಕಾರ್ಯಾಣಿ ಚಾಸ್ಮಾಕಂ ಕೃತಾನೀತಿ ಪ್ರಭಾಷಸೇ ।**
**ವೈಗುಣ್ಯೇನ ತವಾತ್ಯರ್ಥಂ ಸರ್ವಂ ಹಿ ತದನುಷ್ಠಿತಮ್ ॥೪೭॥**

ನೀನು ಯಾವ ನಮ್ಮ ಕಾರ್ಯಗಳನ್ನು ಅಕಾರ್ಯಗಳೆಂದು ಹೇಳುತ್ತಿರುವೆಯೋ–ಆ ಕಾರ್ಯಗಳೆಲ್ಲವೂ ನಿನ್ನಲ್ಲಿರುವ ದುರ್ಗುಣಗಳಿಗೆ ಅನುಸಾರವಾಗಿಯೇ ಮಾಡಲ್ಪಟ್ಟುವುಗಳಾಗಿವೆ.

**ಬೃಹಸ್ಪತೇರುಶನಸೋ ನೋಪದೇಶಃ ಶ್ರುತಸ್ತ್ವಯಾ ।**
**ವೃದ್ಧಾ ನೋಪಾಸಿತಾಶ್ಚೈವ ಹಿತಂ ವಾಕ್ಯಂ ನ ತೇ ಶ್ರುತಮ್ ॥೪೮॥**

ಬೃಹಸ್ಪತಿ-ಶುಕ್ರರ ನೀತಿಗಳನ್ನು ನೀನು ಕೇಳಿರುವುದಿಲ್ಲ. ವೃದ್ಧರ ಸೇವೆಯನ್ನು ಮಾಡಿರುವುದಿಲ್ಲ. ಹಿತವಾಗುವಂತಹ ಮಾತನ್ನು ನೀನೆಂದೂ ಮಾನ್ಯಮಾಡಿದವನೂ ಅಲ್ಲ.

**ಲೋಭೇನಾತಿಬಲೇನ ತ್ವಂ ತೃಷ್ಣಯಾ ಚ ವಶೀಕೃತಃ ।**
**ಕೃತವಾನಸ್ಯಕಾರ್ಯಾಣಿ ವಿಪಾಕಸ್ತಸ್ಯ ಭುಜ್ಯತಾಮ್ ॥೪೯॥**

ಪ್ರಬಲವಾದ ಲೋಭಕ್ಕೂ ಮತ್ತು ಅಧಿಕಾರದಾಹಕ್ಕೂ ಪರವಶ

ನಾದ ನೀನು ಪಾಂಡವರ ವಿಷಯದಲ್ಲಿ ಅನೇಕವಾದ ಅಕಾರ್ಯಗಳನ್ನೇ ಮಾಡಿರುವೆ. ಆ ಪಾಪಕರ್ಮಗಳ ಪರಿಣಾಮವನ್ನು ಈಗ ಉಪಭೋಗಿಸು.”

ದುರ್ಯೋಧನನು ಪ್ರತ್ಯುತ್ತರಿಸುತ್ತಾನೆ :

**ಅಧೀತಂ ವಿಧಿವದ್ದತ್ತಂ ಭೂಃ ಪ್ರಶಾಸ್ತಾ ಸಸಾಗರಾ ।**
**ಮೂರ್ಧ್ನಿ ಸ್ಥಿತಮಮಿತ್ರಾಣಾಂ ಕೋ ನು ಸ್ವನ್ತತರೋ ಮಯಾ ॥**

“ಕೃಷ್ಣ! (ನಾನು ಪಾಪಕರ್ಮಗಳನ್ನು ಮಾಡಿಯೂ ಇಲ್ಲ ; ಪಾಪಕರ್ಮಗಳ ಫಲವನ್ನು ಅನುಭವಿಸಬೇಕಾದ ಸ್ಥಿತಿಯೂ ಈಗ ನನಗಿಲ್ಲ.) ನಾನು ವಿಧಿಪೂರ್ವಕವಾಗಿ ಅಧ್ಯಯನವನ್ನು ಮಾಡಿದ್ದೇನೆ. ಯಥೇಚ್ಛವಾಗಿ ದಾನಮಾಡಿದ್ದೇನೆ. ಶತ್ರುಗಳ ತಲೆಯನ್ನು ಮೆಟ್ಟಿ ಸಾಗರಪರ್ಯಂತವಾದ ಭೂಮಿಯನ್ನು ಧರ್ಮದಿಂದ ಆಳಿದ್ದೇನೆ. ನನಗಾಗಿರತಕ್ಕ ಈ ಉತ್ತಮಪರಿಣಾಮವು ಮತ್ತಾರಿಗೆ ತಾನೇ ಲಭಿಸಿದೆ?

**ಯದಿಷ್ಟಂ ಕ್ಷತ್ರಬನ್ಧೂನಾಂ ಸ್ವಧರ್ಮಮನುಪಶ್ಯತಾಮ್ ।**
**ತದಿದಂ ನಿಧನಂ ಪ್ರಾಪ್ತಂ ಕೋ ನು ಸ್ವನ್ತತರೋ ಮಯಾ ॥೫೧॥**

ಸ್ವಧರ್ಮದಲ್ಲಿಯೇ ದೃಷ್ಟಿಯಿಟ್ಟು ಸ್ವಧರ್ಮಾನುಸಾರವಾಗಿ ನಡೆದು ಕೊಳ್ಳುವ ಕ್ಷತ್ರಬಂಧುಗಳಿಗೆ ಯಾವುದು ಇಷ್ಟವೋ–ಅಂತಹ ಈ ಯುದ್ಧ ಮರಣವೇ ನನಗೆ ಪ್ರಾಪ್ತವಾಗಿದೆ. ಈಗ ಹೇಳು, ಕೃಷ್ಣ! ಕಡೆಗಾಲದಲ್ಲಿ ನನಗಿಂತಲೂ ಉತ್ತಮಫಲವನ್ನು ಪಡೆದಿರತಕ್ಕವರು ಮತ್ತಾರಿದ್ದಾರೆ?

**ದೇವಾರ್ಹಾ ಮಾನುಷಾ ಭೋಗಾಃ ಪ್ರಾಪ್ತಾ ಅಸುಲಭಾ ನೃಪೈಃ ।**
**ಐಶ್ವರ್ಯಂ ಚೋತ್ತಮಂ ಪ್ರಾಪ್ತಂ ಕೋ ನು**
**ಸ್ವನ್ತತರೋ ಮಯಾ ॥೫೨॥**

ಯಾವ ರಾಜರಿಂದಲೂ ಪಡೆದುಕೊಳ್ಳಲು ಸಾಧ್ಯವಾಗದ, ದೇವತೆಗಳಿಗೆ ಮಾತ್ರವೇ ಸುಲಭಸಾಧ್ಯವಾದ ಮಾನುಷಭೋಗಗಳೆಲ್ಲವನ್ನೂ ನಾನು ಅನು ಭವಿಸಿದೆನು. ಉತ್ತಮೋತ್ತಮವಾದ ಐಶ್ವರ್ಯವನ್ನೂ ಪಡೆದುಕೊಂಡೆನು. (ಜೀವನದಲ್ಲಿ ಇನ್ನೇನು ತಾನೇ ಬೇಕಾಗಿದೆ? ಕ್ಷತ್ರಿಯಯೋಗ್ಯವಾದ ನಿಧನವೂ ಪ್ರಾಪ್ತವಾಯಿತು.) ಈಗ ಹೇಳು, ಕೃಷ್ಣ! ಇಂತಹ ಉತ್ಕೃಷ್ಟ

ವಾದ ಅಂತ್ಯಕಾಲವನ್ನು ನಾನೊಬ್ಬನಲ್ಲದೆ ಬೇರೆ ಯಾರುತಾನೇ ಪಡೆದುಕೊಂಡಿರುತ್ತಾರೆ?

**ಸಸುಹೃತ್ಸಾನುಗಶ್ಚೈವ ಸ್ವರ್ಗಂ ಗನ್ತಾಹಮಚ್ಯುತ ।**
**ಯೂಯಂ ನಿಹತಸಂಕಲ್ಪಾಃ ಶೋಚನ್ತೋ ವರ್ತಯಿಷ್ಯಥ ॥೫೩॥**

ಅಚ್ಯುತ! ನಾನು ನನ್ನ ಸುಹೃದರಿಂದಲೂ, ಅನುಯಾಯಿಗಳಿಂದಲೂ ಒಡಗೂಡಿ ಸ್ವರ್ಗಕ್ಕೆ ಹೋಗುತ್ತೇನೆ. ನೀವು ಭಗ್ನಮನೋರಥರಾಗಿ ದುಃಖಿಸುತ್ತಾ ಜೀವನವನ್ನು ನಡೆಸುವಿರಿ.”

ಮಹಾರಾಜ! ಧೀಮಂತನಾದ, ಕುರುರಾಜನಾದ ದುರ್ಯೋಧನನು ಇಷ್ಟು ಹೇಳಿ ಮುಗಿಸುತ್ತಿದ್ದಂತೆಯೇ ಪುಣ್ಯಗಂಧಯುಕ್ತವಾದ ಪುಷ್ಪಗಳ ದೊಡ್ಡ ಮಳೆಯೇ ಸುರಿಯಿತು. ಗಂಧರ್ವರು ಕಿವಿಗಳಿಗಿಂಪಾಗುವಂತೆ ವಾದ್ಯಗಳನ್ನು ನುಡಿಸಿದರು. ಅಪ್ಸರಸ್ತ್ರೀಯರು ದುರ್ಯೋಧನನ ಯಶಸ್ಸಿಗೆ ಸಂಬಂಧಿಸಿದ ಗೀತಗಳನ್ನು ಹಾಡಿದರು. ಸಿದ್ಧರು ‘ಸಾಧು ದುರ್ಯೋಧನ! ಸಾಧು’–ಎಂದು ಬಾಯಿತುಂಬ ಹೊಗಳಿದರು. ಪುಣ್ಯಗಂಧಯುಕ್ತವಾದ, ಮನೋಹರವಾದ ಮೃದುವಾದ (ಸ್ಪರ್ಶಸುಖವನ್ನು ಕೊಡುವ) ಸುಖದಾಯಕವಾದ ವಾಯುವು ಬೀಸತೊಡಗಿತು. ಎಲ್ಲ ದಿಕ್ಕುಗಳೂ ಪ್ರಕಾಶಮಾನವಾದುವು. ಆಕಾಶವು ವೈಡೂರ್ಯಸದೃಶವಾಗಿ ಕಾಂತಿಯುಕ್ತವಾಗಿ ಕಾಣುತ್ತಿದ್ದಿತು.

ವಾಸುದೇವಪುರಃಸರರಾದ ಪಾಂಡವ-ಸೃಂಜಯ-ವೃಷ್ಣಿಗಳು ಅತ್ಯದ್ಭುತವಾದ ಆ ದೃಶ್ಯಗಳನ್ನು ನೋಡಿ ಮತ್ತು ದುರ್ಯೋಧನನಿಗೆ ದೇವತೆಗಳು ಮಾಡಿದ ಸಮ್ಮಾನವನ್ನು ಕಂಡು ಬಹಳವಾಗಿ ಲಜ್ಜಿತರಾದರು. ಭೀಷ್ಮ-ದ್ರೋಣ-ಕರ್ಣ-ಭೂರಿಶ್ರವಸರು ಅನ್ಯಾಯಮಾರ್ಗದಲ್ಲಿ ಹತರಾದರೆಂಬುದನ್ನು ಕೇಳಿ ಶ್ರೀಕೃಷ್ಣಸಹಿತರಾದ ಎಲ್ಲರೂ ಶೋಕಪೀಡಿತರಾಗಿ ಖೇದವನ್ನು ವ್ಯಕ್ತಪಡಿಸಿದರು. ಪಾಂಡವರು ದೀನಮನಸ್ಕರಾದುದನ್ನೂ ಮತ್ತು ಚಿಂತೆಯಲ್ಲಿ ಮಗ್ನರಾದುದನ್ನೂ ಗಮನಿಸಿ ಮೇಘ-ದುಂದುಭಿಗಳ ಶಬ್ದಕ್ಕೆ ಸಮಾನವಾದ ಕಂಠಧ್ವನಿಯುಳ್ಳ ಶ್ರೀಕೃಷ್ಣನು ಹೇಳಿದನು :

**ನೈಷ ಶಕ್ಯೋಽತಿಶೀಘ್ರಾಸ್ತ್ರಸ್ತೇ ಚ ಸರ್ವೇ ಮಹಾರಥಾಃ ।**
**ಋಜುಯುದ್ಧೇನ ವಿಕ್ರಾನ್ತಾ ಹನ್ತುಂ ಯುಷ್ಮಾಭಿರಾಹವೇ ॥೬೧॥**

"ಪಾಂಡವರೇ! ಅತಿಶೀಘ್ರವಾಗಿ ಅಸ್ತ್ರಸಂಚಾಲನೆಮಾಡುವ ಈ ದುರ್ಯೋಧನನನ್ನು ನೀವು ನ್ಯಾಯಪೂರ್ವಕವಾದ ಯುದ್ಧದಲ್ಲಿ ಜಯಿಸುವ ಸಾಧ್ಯತೆಯೇ ಇರಲಿಲ್ಲ. ಅಂತೆಯೇ ಭೀಷ್ಮ-ದ್ರೋಣ-ಕರ್ಣ-ಭೂರಿಶ್ರವಸರೂ ಮಹಾರಥರೂ, ಮಹಾಪರಾಕ್ರಮಿಗಳೂ ಆಗಿದ್ದರು. ಅವರನ್ನಾದರೂ ನೀವು ಕಪಟರಹಿತವಾದ ಯುದ್ಧದಲ್ಲಿ ಸಂಹರಿಸಲು ಸಾಧ್ಯವಾಗುತ್ತಿರಲಿಲ್ಲ.

**ನೈಷ ಶಕ್ಯಃ ಕದಾಚಿತ್ತು ಹನ್ತುಂ ಧರ್ಮೇಣ ಪಾರ್ಥಿವಃ ।**
**ತೇ ವಾ ಭೀಷ್ಮಮುಖಾಃ ಸರ್ವೇ ಮಹೇಷ್ವಾಸಾ ಮಹಾರಥಾಃ ॥೬೨॥**

ರಾಜನಾದ ಈ ದುರ್ಯೋಧನನನ್ನೇ ಆಗಲೀ–ಮಹಾಧನುಷ್ಮಂತರಾದ, ಮಹಾರಥರಾದ, ಭೀಷ್ಮಪ್ರಮುಖರಾದ ವೀರರನ್ನೇ ಆಗಲೀ–ಧರ್ಮಯುದ್ಧದ ಮೂಲಕವಾಗಿ ಸಂಹರಿಸಲು ಎಂದಿಗೂ ಸಾಧ್ಯವಾಗುತ್ತಿರಲಿಲ್ಲ.

**ಮಯಾನೇಕೈರುಪಾಯೈಸ್ತು ಮಾಯಾಯೋಗೇನ ಚಾಸಕೃತ್ ।**
**ಹತಾಸ್ತೇ ಸರ್ವ ಏವಾಜೌ ಭವತಾಂ ಹಿತಮಿಚ್ಛತಾ ॥೬೩॥**

ನಿಮಗೆ ಹಿತವನ್ನುಂಟುಮಾಡಬೇಕೆಂದು ಇಚ್ಛಿಸಿದ ನಾನು ಅನೇಕ ವಿಧವಾದ ಉಪಾಯಗಳಿಂದಲೂ, ಎಷ್ಟೋ ಬಾರಿ ಮಾಯಾಪ್ರಯೋಗದಿಂದಲೂ (ವಂಚನೆಯ ಮಾರ್ಗದಿಂದಲೂ) ಅವರೆಲ್ಲರನ್ನೂ ಸಂಹರಿಸಿದೆನು.

**ಯದಿ ನೈವಂ ವಿಧಂ ಜಾತು ಕುರ್ಯಾಂ ಜಿಹ್ಮಮಹಂ ರಣೇ ।**
**ಕುತೋ ವೋ ವಿಜಯೋ ಭೂಯಃ ಕುತೋ ರಾಜ್ಯಂ ಕುತೋ ಧನಮ್ ॥೬೪॥**

ನಾನೊಂದು ವೇಳೆ ಯುದ್ಧದಲ್ಲಿ ಈ ವಿಧವಾಗಿ ಕುಟಿಲಮಾರ್ಗವನ್ನು ಅನುಸರಿಸದೇ ಇದ್ದಿದ್ದರೆ–ನಿಮಗೆ ವಿಜಯವು ಹೇಗೆ ಲಭಿಸುತ್ತಿದ್ದಿತು? ರಾಜ್ಯವಾದರೂ ನಿಮಗೆ ಹೇಗೆ ಕೈವಶವಾಗುತ್ತಿದ್ದಿತು? ಐಶ್ವರ್ಯವನ್ನಾದರೂ ನೀವು ಹೇಗೆ ಪಡೆದುಕೊಳ್ಳುತ್ತಿದ್ದಿರಿ?

**ತೇ ಹಿ ಸರ್ವೇ ಮಹಾತ್ಮಾನಶ್ಚತ್ವಾರೋಽತಿರಥಾ ಭುವಿ ।**
**ನ ಶಕ್ಯಾ ಧರ್ಮತೋ ಹನ್ತುಂ ಲೋಕಪಾಲೈರಪಿ ಸ್ವಯಮ್ ॥೬೫॥**

ಮಹಾತ್ಮರಾದ ಭೀಷ್ಮ, ದ್ರೋಣ, ಕರ್ಣ, ಭೂರಿಶ್ರವಸ–ಈ ನಾಲ್ವರೂ ಪ್ರಪಂಚದಲ್ಲಿಯೇ ಅತಿರಥರೆಂದು ಖ್ಯಾತಿಯನ್ನು ಪಡೆದಿರತಕ್ಕವರು. ಸ್ವಯಂ ಇಂದ್ರಾದಿ ಲೋಕಪಾಲರಿಂದಲೂ ಆ ನಾಲ್ವರನ್ನು ಧರ್ಮಮಾರ್ಗದಲ್ಲಿ ಯುದ್ಧಮಾಡಿ ಸಂಹರಿಸಲು ಸಾಧ್ಯವಾಗುತ್ತಿರಲಿಲ್ಲ.

**ತಥೈವಾಯಂ ಗದಾಪಾಣಿರ್ಧಾರ್ತರಾಷ್ಟ್ರೋ ಗತಕ್ಲಮಃ ।**
**ನ ಶಕ್ಯೋ ಧರ್ಮತೋ ಹನ್ತುಂ ಕಾಲೇನಾಪೀಹ ದಣ್ಡಿನಾ ॥೬೬॥**

ಅದೇ ರೀತಿಯಲ್ಲಿಯೇ ಗದಾಪಾಣಿಯಾದ, ಯುದ್ಧದಲ್ಲಿ ಶ್ರಮವನ್ನೇ ಕಾಣದ ದುರ್ಯೋಧನನನ್ನು ಧರ್ಮಯುದ್ಧದಲ್ಲಿ ಸಂಹರಿಸಲು ದಂಡಪಾಣಿಯಾದ ಕಾಲನಿಂದಲೂ ಸಾಧ್ಯವಾಗುತ್ತಿರಲಿಲ್ಲ.

**ನ ಚ ವೋ ಹೃದಿ ಕರ್ತವ್ಯಂ ಯದಯಂ ಘಾತಿತೋ ರಿಪುಃ ।**
**ಮಿಥ್ಯಾವಧ್ಯಾಸ್ತಥೋಪಾಯೈರ್ಬಹವಃ ಶತ್ರವೋಽಧಿಕಾಃ ॥೬೭॥**

ಹೀಗೆ ಕುಟಿಲಮಾರ್ಗದಲ್ಲಿ ಶತ್ರುವನ್ನು ಸಂಹರಿಸಿದುದಕ್ಕಾಗಿ ನೀವು ಮನಸ್ಸಿನಲ್ಲಿ ನೊಂದುಕೊಳ್ಳುವ ಅಥವಾ ವಿಚಾರಮಾಡುವ ಕಾರಣವಿಲ್ಲ. ಏಕೆಂದರೆ : ತಮಗಿಂತಲೂ ಅಧಿಕಬಲರಾದ ಮತ್ತು ಅಧಿಕಸಂಖ್ಯೆಯಲ್ಲಿರುವ ಶತ್ರುಗಳನ್ನು ನಾನಾವಿಧವಾದ ಉಪಾಯಗಳಿಂದಲೂ ಮತ್ತು ಕೂಟನೀತಿಗಳಿಂದಲೂ (ವಂಚನೆಗಳಿಂದಲೂ) ಸಂಹರಿಸಬೇಕು.

ಪಾಂಡವರೇ! ಇದು ನಾನು ಹೊಸದಾಗಿ ಕಂಡುಹಿಡಿದಿರುವ ಮಾರ್ಗವೇನೂ ಅಲ್ಲ.

**ಪೂರ್ವೈರನುಗತೋ ಮಾರ್ಗೋ ದೇವೈರಸುರಘಾತಿಭಿಃ ।**
**ಸದ್ಭಿಶ್ಚಾನುಗತಃ ಪನ್ಥಾಃ ಸ ಸರ್ವೈರನುಗಮ್ಯತೇ ॥೬೮॥**

ಅಸುರಹಂತಕರಾದ ಹಿಂದಿನ ದೇವತೆಗಳೇ ಈ ಮಾರ್ಗವನ್ನು ಅನುಸರಿಸಿದ್ದರು. ಶ್ರೇಷ್ಠಪುರುಷರೂ ಆ ಮಾರ್ಗವನ್ನೇ ಹಿಡಿದು ಹೋಗಿರುತ್ತಾರೆ. ಆ ಮಾರ್ಗವೇ ಎಲ್ಲರಿಂದಲೂ ಅನುಸರಿಸಲ್ಪಡುತ್ತದೆ.

ನರಾಧಿಪರೇ! ನಾವೀಗ ಕೃತಕೃತ್ಯರಾಗಿದ್ದೇವೆ. ಸಾಯಂಕಾಲವೂ ಆಗಿದೆ. ವಿಶ್ರಾಂತಿಯನ್ನು ಪಡೆದುಕೊಳ್ಳಬೇಕೆಂಬ ಆಶಯವು ಎಲ್ಲರಿಗೂ

ಇದೆ. ಗಜಾಶ್ವ-ರಥಸೈನಿಕರ ಸಹಿತವಾಗಿ ನಾವೆಲ್ಲರೂ ವಿಶ್ರಾಂತಿಯನ್ನು ಪಡೆಯೋಣ."

ಮಹಾರಾಜ! ವಾಸುದೇವನು ಹೇಳಿದ ಮಾತುಗಳನ್ನು ಕೇಳಿ ಬಹಳವಾಗಿ ಸಂತೋಷಗೊಂಡ ಪಾಂಚಾಲಯೋಧರು ಪಾಂಡವರೊಡನೆ–ಸಿಂಹಗಳು ಸಾಮೂಹಿಕವಾಗಿ ಸೇರಿ ಗರ್ಜಿಸುವಂತೆ–ಗರ್ಜಿಸಿದರು. ಅನಂತರ ದುರ್ಯೋಧನನು ಹತನಾದುದನ್ನು ನೋಡಿ ಹೃಷ್ಟರಾಗಿ ಎಲ್ಲರೂ ತಮ್ಮ-ತಮ್ಮ ಶಂಖಗಳನ್ನೂದಿದರು. ಶ್ರೀಕೃಷ್ಣನೂ ಪಾಂಚಜನ್ಯವನ್ನೂದಿದನು."

೬೧ನೆಯ ಅಧ್ಯಾಯವು ಮುಗಿಯಿತು.

೬೨ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ಪಾಂಡವರು ಕೌರವರ ಶಿಬಿರದೊಳಗೆ ಪ್ರವೇಶಿಸಿದುದು : ಅರ್ಜುನನ ರಥವು ಭಸ್ಮವಾದುದು : ಪಾಂಡವರು ಶ್ರೀಕೃಷ್ಣನನ್ನು ಹಸ್ತಿನಾಪುರಕ್ಕೆ ಕಳುಹಿಸಿಕೊಟ್ಟುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಅನಂತರ ಪರಿಘಾಯುಧಗಳಂತಹ ತೋಳುಗಳನ್ನು ಹೊಂದಿದ್ದ ಎಲ್ಲ ರಾಜರೂ ಆನಂದತುಂದಿಲರಾಗಿ ತಮ್ಮ-ತಮ್ಮ ಶಂಖಗಳನ್ನೂದುತ್ತಾ ವಿಶ್ರಾಂತಿಯನ್ನು ಪಡೆದುಕೊಳ್ಳುವ ಸಲುವಾಗಿ ಶಿಬಿರಗಳ ಕಡೆಗೆ ಪ್ರಯಾಣಮಾಡಿದರು. ನಮ್ಮ ಶಿಬಿರಗಳ ಕಡೆಗೆ ಬರುತ್ತಿದ್ದ ಪಾಂಡವರನ್ನು ಮಹಾಧನುಷ್ಮಂತರಾದ ಯುಯುತ್ಸು-ಸಾತ್ಯಕಿಯರೂ ಅನುಸರಿಸಿದರು. ಧೃಷ್ಟದ್ಯುಮ್ನ, ಶಿಖಂಡಿ, ದ್ರೌಪದಿಯ ಐವರು ಮಕ್ಕಳು ಮತ್ತು ಮಹಾಧನುಷ್ಮಂತರಾದ ಇನ್ನೂ ಅನೇಕಯೋಧರು ತಮ್ಮ ಶಿಬಿರಗಳಿಗೆ ಹೋದರು. ಪೃಥಾಪುತ್ರರಾದ ಪಾಂಡವರು ದುರ್ಯೋಧನನ ಶಿಬಿರವನ್ನು ಪ್ರವೇಶಿಸಿದರು. ಆ ಸಮಯದಲ್ಲಿ ಆ ಶಿಬಿರವು ಕಾಂತಿಹೀನವಾಗಿದ್ದಿತು. ಶಿಬಿರದ ಸ್ವಾಮಿಯು ಹತನಾಗಿದ್ದನು. ನಾಟಕವು ಮುಗಿದನಂತರ ಜನರೆಲ್ಲರೂ ಹೊರಟುಹೋಗಿರುವ ರಂಗಮಂಟಪದಂತಿದ್ದ ದುರ್ಯೋಧನನ

ಶಿಬಿರವನ್ನು ಪಾಂಡವರು ಪ್ರವೇಶಿಸಿದರು. ಆ ಶಿಬಿರವು ಉತ್ಸವಶೂನ್ಯವಾದ ಪಟ್ಟಣದಂತೆಯೂ, ಸರ್ಪಗಳಿಂದ ರಹಿತವಾದ ಸರೋವರದಂತೆಯೂ ಕಾಣುತ್ತಿದ್ದಿತು. ಸ್ತ್ರೀಯರಿಂದಲೂ, ನಪುಂಸಕರಿಂದಲೂ ಮತ್ತು ವೃದ್ಧರಾದ ಅಮಾತ್ಯರಿಂದಲೂ ಆ ಶಿಬಿರವು ಕೂಡಿದ್ದಿತು. ಆ ಮೊದಲು ದುರ್ಯೋಧನನ ಮುಂದೆ ಹೋಗುತ್ತಿದ್ದ, ಕಾಷಾಯವರ್ಣದ ಮಲಿನವಾದ ಬಟ್ಟೆಗಳನ್ನು ಧರಿಸಿದ್ದ ಸೇವಕರು ಬದ್ಧಾಂಜಲಿಗಳಾಗಿ, ಶಿಬಿರಕ್ಕೆ ಆಗಮಿಸುತ್ತಿದ್ದ ಪಾಂಡವರನ್ನು ಸುತ್ತುವರಿದು ನಿಂತರು. ರಥಶ್ರೇಷ್ಠರಾದ ಪಾಂಡವರು ಕುರುರಾಜನಾದ ದುರ್ಯೋಧನನ ಶಿಬಿರದ ಬಳಿಗೆ ಬಂದು ರಥಗಳಿಂದ ಕೆಳಗಿಳಿದರು. ಅನಂತರ ಅರ್ಜುನನಿಗೆ ಪ್ರಿಯವನ್ನುಂಟುಮಾಡು ವುದರಲ್ಲಿಯೂ ಮತ್ತು ಹಿತವನ್ನುಂಟುಮಾಡುವುದರಲ್ಲಿಯೂ ನಿರಂತರ ವಾದ ಆಸಕ್ತಿಯನ್ನು ತಳೆದಿದ್ದ ಕೇಶವನು ಗಾಂಡೀವಿಯನ್ನು ಕುರಿತು ಹೇಳಿದನು :

**ಅವರೋಪಯ ಗಾಣ್ಡೀವಮಕ್ಷಯೌ ಚ ಮಹೇಷುಧೀ ।**
**ಅಥಾಹಮವರೋಕ್ಷ್ಯಾಮಿ ಪಶ್ಚಾದ್ಭರತಸತ್ತಮ ।**
**ಸ್ವಯಂ ಚೈವಾವರೋಹ ತ್ವಮೇತಚ್ಛ್ರೇಯಸ್ತವಾನಘ ॥೯॥**

"ಭರತಶ್ರೇಷ್ಠನೇ! ನೀನು ಮೊದಲು ಗಾಂಡೀವಧನುಸ್ಸನ್ನೂ ಮತ್ತು ಅಕ್ಷಯತೂಣೀರಗಳನ್ನೂ ರಥದಿಂದ ಕೆಳಗಿಳಿಸು. ಅನಂತರ ನೀನೂ ಇಳಿದುಬಿಡು. ನೀನು ರಥದಿಂದಿಳಿದ ಬಳಿಕ ನಾನು ಇಳಿಯುತ್ತೇನೆ. ನಿಷ್ಪಾಪನೇ! ಈ ಸಮಯದಲ್ಲಿ ಹೀಗೆ ಮಾಡುವುದರಿಂದ ನಿನಗೆ ಶ್ರೇಯಸ್ಸುಂಟಾಗುತ್ತದೆ."

ಮಹಾರಾಜ! ಶ್ರೀಕೃಷ್ಣನು ಹೇಳಿದಂತೆಯೇ ಅರ್ಜುನನು ಧನುರ್ಬಾಣಗಳನ್ನು ಕೆಳಗೆ ಹಾಕಿ ತಾನೂ ರಥದಿಂದಿಳಿದನು. ಅರ್ಜುನನು ರಥದಿಂದ ಅವರೋಹಣಮಾಡಿದನಂತರ ಮೇಧಾವಿಯಾದ ಶ್ರೀಕೃಷ್ಣನು ಕುದುರೆಗಳ ಕಡಿವಾಣಗಳನ್ನು ಬಿಸುಟು ಅರ್ಜುನನ ರಥದಿಂದ ಕೆಳಗಿಳಿದನು. ಸಮಸ್ತಪ್ರಾಣಿಗಳಿಗೂ ಈಶ್ವರನಾದ ಪರಮಾತ್ಮನಾದ ಶ್ರೀಕೃಷ್ಣನು ರಥದಿಂದ ಇಳಿದಕೂಡಲೇ ರಥದ ಧ್ವಜದಲ್ಲಿದ್ದ ದಿವ್ಯಕಪಿಯೂ ಅದೃಶ್ಯವಾಯಿತು.

ಸ ದಗ್ಧೋ ದ್ರೋಣಕರ್ಣಾಭ್ಯಾಂ ದಿವ್ಯೈರಸ್ತ್ರೈರ್ಮಹಾರಥಃ ।
ಅಥಾದೀಪ್ತೋಽಗ್ನಿನಾ ಹ್ಯಾಶು ಪ್ರಜಜ್ವಾಲ ಮಹೀಪತೇ ॥೧೩॥

ಮಹಾರಾಜ! ದ್ರೋಣ-ಕರ್ಣರ ದಿವ್ಯಾಸ್ತ್ರಗಳಿಂದ ಆ ಮೊದಲೇ ದಗ್ಧಪ್ರಾಯವಾಗಿದ್ದ ಆ ಮಹಾರಥವು ಶ್ರೀಕೃಷ್ಣನು ಕೆಳಗಿಳಿದೊಡನೆಯೇ ಅಗ್ನಿಯಿಂದ ಪ್ರದೀಪ್ತವಾಗಿ ಪ್ರಜ್ವಲಿಸತೊಡಗಿತು.



ಸೋಪಾಸಙ್ಗಃ ಸರಶ್ಮಿಶ್ಚ ಸಾಶ್ವಃ ಸಯುಗಬನ್ಧುರಃ ।
ಭಸ್ಮೀಭೂತೋಽಪತದ್ಭೂಮೌ ರಥೋ ಗಾಣ್ಡೀವಧನ್ವನಃ ॥೧೪॥

ಗಾಂಡೀವಧನ್ವನಾದ ಅರ್ಜುನನ ಆ ಮಹಾರಥವು ಬತ್ತಳಿಕೆ, ಕಡಿವಾಣ, ಕುದುರೆಗಳು, ನೊಗ, ಮೂಕಿ – ಇವುಗಳ ಸಮೇತವಾಗಿ

ಬೂದಿಯಾಗಿ ಭೂಮಿಯ ಮೇಲೆ ಬಿದ್ದಿತು. ಹೀಗೆ ಭಸ್ಮೀಭೂತವಾದ ಅರ್ಜುನನ ರಥವನ್ನು ನೋಡಿ ಪಾಂಡುವಿನ ಮಕ್ಕಳು ವಿಸ್ಮಿತರಾದರು. ಅರ್ಜುನನು ಕೈಗಳನ್ನು ಜೋಡಿಸಿ ಶ್ರೀಕೃಷ್ಣನ ಕಾಲುಗಳನ್ನು ಮುಟ್ಟಿ ಅಭಿವಾದನಮಾಡಿ ಪ್ರೇಮಪೂರ್ವಕವಾಗಿ ಗೋವಿಂದನನ್ನು ಪ್ರಶ್ನಿಸಿದನು :

**ಗೋವಿನ್ದ ಕಸ್ಮಾದ್ಭಗವನ್ರಥೋ ದಗ್ಧೋಽಯಮಗ್ನಿನಾ ।**
**ಕಿಮೇತನ್ಮಹದಾಶ್ಚರ್ಯಮಭವದ್ಯದುನನ್ದನ ।**
**ತನ್ಮೇ ಬ್ರೂಹಿ ಮಹಾಬಾಹೋ ಶ್ರೋತವ್ಯಂ ಯದಿ ಮನ್ಯಸೇ ।।**

"ಗೋವಿಂದ! ಯಾವ ಕಾರಣದಿಂದಾಗಿ ಅಗ್ನಿಯಿಂದ ಈ ರಥವು ಭಸ್ಮೀಭೂತವಾಯಿತು? ಯದುನಂದನನೇ! ಈ ಅತ್ಯಾಶ್ಚರ್ಯಕರವಾದ ಘಟನೆಯು ಹೇಗೆ ನಡೆಯಿತು? ಈ ವಿಷಯವನ್ನು ನಾನು ತಿಳಿದುಕೊಳ್ಳಬಹುದೆಂದು ನೀನು ಭಾವಿಸುವೆಯಾದರೆ–ದಯಮಾಡಿ ನನ್ನೊಡನೆ ಹೇಳು."

**ಅಸ್ತ್ರೈರ್ಬಹುವಿಧೈರ್ದಗ್ಧಃ ಪೂರ್ವಮೇವಾಯಮರ್ಜುನ ।**
**ಮದಧಿಷ್ಠಿತತ್ವಾತ್ಸಮರೇ ನ ವಿಶೀರ್ಣಃ ಪರಂತಪ ।।೧೮।।**

"ಅರ್ಜುನ! ಈ ರಥವು ಈ ಮೊದಲೇ ಬಹುವಿಧವಾದ ಅಸ್ತ್ರಗಳಿಂದ ಸುಟ್ಟುಹೋಗಿದ್ದಿತು. ಆದರೆ ನಾನು ಈ ರಥದಲ್ಲಿ ಕುಳಿತಿದ್ದುದರಿಂದ ರಥವು ಆಗಲೇ ಭಗ್ನವಾಗಿ ಹೋಗಲಿಲ್ಲ.

**ಇದಾನೀಂ ತು ವಿಶೀರ್ಣೋಽಯಂ ದಗ್ಧೋ ಬ್ರಹ್ಮಾಸ್ತ್ರತೇಜಸಾ ।**
**ಮಯಾ ವಿಮುಕ್ತಃ ಕೌನ್ತೇಯ ತ್ವಯ್ಯದ್ಯ ಕೃತಕರ್ಮಣಿ ।।೧೯।।**

ನೀನು ಕೃತಕೃತ್ಯನಾಗಲಾಗಿ ನಾನು ಈ ರಥವನ್ನು ವಿಸರ್ಜಿಸಿದೆನು. ಬ್ರಹ್ಮಾಸ್ತ್ರಗಳಿಂದ ಮೊದಲೇ ದಗ್ಧಪ್ರಾಯವಾಗಿದ್ದ ಈ ರಥವೀಗ ದಗ್ಧವಾಗಿ ಬೂದಿಯ ರೂಪವನ್ನು ಹೊಂದಿತು."

ಬಳಿಕ ಅರಿಹಂತಕನಾದ ಕೇಶವನು ಮುಗುಳ್ನಗೆಯನ್ನು ಸೂಸುತ್ತಾ ಧರ್ಮರಾಜನನ್ನು ಆಲಿಂಗಿಸಿ ಹೇಳಿದನು :

**ದಿಷ್ಟ್ಯಾ ಜಯಸಿ ಕೌನ್ತೇಯ ದಿಷ್ಟ್ಯಾ ತೇ ಶತ್ರವೋ ಜಿತಾಃ ।**
**ದಿಷ್ಟ್ಯಾ ಗಾಣ್ಡೀವಧನ್ವಾ ಚ ಭೀಮಸೇನಶ್ಚ ಪಾಣ್ಡವಃ ।।೨೦।।**

**ತ್ವಂ ಚಾಪಿ ಕುಶಲೀ ರಾಜನ್ಮಾದ್ರೀಪುತ್ರೌ ಚ ಪಾಣ್ಡವೌ ।**
**ಮುಕ್ತಾ ವೀರಕ್ಷಯಾದಸ್ಮಾತ್ಸಂಗ್ರಾಮಾನ್ನಿಹತದ್ವಿಷಃ ॥೨೨॥**

"ಯುಧಿಷ್ಠಿರ! ಸೌಭಾಗ್ಯವಶದಿಂದ ನೀನು ವಿಜಯಿಯಾಗಿರುವೆ. ಸೌಭಾಗ್ಯವಶದಿಂದಲೇ ಶತ್ರುಗಳೆಲ್ಲರೂ ಹತರಾಗಿಹೋದರು. ಅದೃಷ್ಟದ ಕಾರಣದಿಂದ ಅರ್ಜುನ, ಭೀಮಸೇನ, ಮಾದ್ರಿಯ ಮಕ್ಕಳಾದ ನಕುಲ-ಸಹದೇವರು ಮತ್ತು ನೀನು–ಎಲ್ಲರೂ ಕುಶಲಿಗಳಾಗಿರುವಿರಿ. ಹತಶತ್ರುಗಳಾದ ನೀವು ವೀರಕ್ಷಯಕರವಾದ ಈ ಭೀಕರಸಂಗ್ರಾಮದಿಂದ ಬದುಕಿ ಬಂದಿರುವಿರಿ.

ಭರತನಂದನ! ಮುಂದೆ ಮಾಡಬೇಕಾದ ಕಾರ್ಯಗಳನ್ನು ಶೀಘ್ರವಾಗಿ ಮಾಡು. ಹಿಂದೆ ನಾನು ಅರ್ಜುನನ ಸಂಗಡ ಉಪಪ್ಲವ್ಯಕ್ಕೆ ಬಂದಿದ್ದಾಗ ನೀನು ನನಗೆ ಮಧುಪರ್ಕವನ್ನಿತ್ತು ಗೌರವಿಸಿ ಹೀಗೆ ಹೇಳಿದ್ದೆಯಲ್ಲವೇ?

**ಏಷ ಭ್ರಾತಾ ಸಖಾ ಚೈವ ತವ ಕೃಷ್ಣ ಧನಂಜಯಃ ।**
**ರಕ್ಷಿತವ್ಯೋ ಮಹಾಬಾಹೋ ಸರ್ವಾಸ್ವಾಪತ್ಸ್ವಿತಿ ಪ್ರಭೋ ॥೨೪॥**

"ಶ್ರೀಕೃಷ್ಣ! ಈ ಅರ್ಜುನನು ನಿನ್ನ ಸೋದರಸಮಾನನೂ ಮತ್ತು ಪ್ರಿಯಸಖನೂ ಆಗಿದ್ದಾನೆ. ಮಹಾಬಾಹುವೇ! ಎಲ್ಲ ಆಪತ್ತುಗಳ ಸಮಯಗಳಲ್ಲಿಯೂ ನೀನು ಇವನನ್ನು ರಕ್ಷಿಸಬೇಕಾಗಿದೆ."

ಧರ್ಮಜ! ನೀನು ಹೀಗೆ ಹೇಳಿದೊಡನೆಯೇ ನಾನು 'ತಥಾಸ್ತು' ಎಂದು ಪ್ರತಿವಚನವನ್ನೂ ಇತ್ತೆನು–ಅಲ್ಲವೇ?

**ಸ ಸವ್ಯಸಾಚೀ ಗುಪ್ತಸ್ತೇ ವಿಜಯೀ ಚ ಜನೇಶ್ವರ ।**
**ಭ್ರಾತೃಭಿಃ ಸಹ ರಾಜೇನ್ದ್ರ ಶೂರಃ ಸತ್ಯಪರಾಕ್ರಮಃ ।**
**ಮುಕ್ತೋ ವೀರಕ್ಷಯಾದಸ್ಮಾತ್ಸಂಗ್ರಾಮಾಲ್ಲೋಮಹರ್ಷಣಾತ್ ॥೨೬॥**

ಜನೇಶ್ವರ! ಶೂರನಾದ, ಸತ್ಯಪರಾಕ್ರಮನಾದ, ಸವ್ಯಸಾಚಿಯಾದ ಆ ನಿನ್ನ ಅರ್ಜುನನು ನನ್ನಿಂದ ರಕ್ಷಿಸಲ್ಪಟ್ಟು ವಿಜಯಿಯಾಗಿದ್ದಾನೆ. ವೀರಕ್ಷಯಕರವಾದ ಮತ್ತು ರೋಮಾಂಚಕರವಾದ ಈ ಮಹಾಯುದ್ಧದಿಂದ ಸಹೋದರರೊಡನೆ ಜೀವಸಹಿತನಾಗಿ ಬಂದಿರುತ್ತಾನೆ."

ಮಹಾರಾಜ! ಶ್ರೀಕೃಷ್ಣನು ಹೀಗೆ ಹೇಳಿದೊಡನೆಯೇ ಆನಂದ ತುಂದಿಲನಾದ ಧರ್ಮನ ಮಗನಾದ ಯುಧಿಷ್ಠಿರನ ರೋಮಕೋಟಿಗಳು ನಿಮಿರಿನಿಂತುವು. ಬಳಿಕ ಅವನು ಶ್ರೀಕೃಷ್ಣನೊಡನೆ ಹೇಳಿದನು :

**ಪ್ರಮುಕ್ತಂ ದ್ರೋಣಕರ್ಣಾಭ್ಯಾಂ ಬ್ರಹ್ಮಾಸ್ತ್ರಮರಿಮರ್ದನ ।**
**ಕಸ್ತ್ವದನ್ಯಃ ಸಹೇತ್ಸಾಕ್ಷಾದಪಿ ವಜ್ರೀ ಪುರಂದರಃ ॥೨೮॥**

"ಅರಿಮರ್ದನನೇ! ಶ್ರೀಕೃಷ್ಣ! ದ್ರೋಣ-ಕರ್ಣರಿಂದ ಪ್ರಮುಕ್ತವಾದ ಬ್ರಹ್ಮಾಸ್ತ್ರವನ್ನು ಸಹಿಸಿಕೊಳ್ಳಲು ನಿನ್ನೊಬ್ಬನಿಂದಲ್ಲದೇ ಮತ್ತಾರಿಂದ ತಾನೇ ಸಾಧ್ಯವಾಗುತ್ತಿದ್ದಿತು? ಸಾಕ್ಷಾತ್ ವಜ್ರಧರನಾದ ಇಂದ್ರನೇ ಬಂದಿದ್ದರೂ ಆ ಬ್ರಹ್ಮಾಸ್ತ್ರದ ಆಘಾತವನ್ನು ಸಹಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ.

**ಭವತಸ್ತು ಪ್ರಸಾದೇನ ಸಂಶಪ್ತಕಗಣಾ ಜಿತಾಃ ।**
**ಮಹಾರಣಗತಃ ಪಾರ್ಥೋ ಯಚ್ಚ ನಾಸೀತ್ಪರಾಙ್ಮುಖಃ ॥೨೯॥**

ಶ್ರೀಕೃಷ್ಣ! ನಿನ್ನ ಪರಮಾನುಗ್ರಹದಿಂದಲೇ ಸಂಶಪ್ತಕಗಣಗಳೂ ಪರಾಜಿತವಾದುವು. ನಿನ್ನ ಪ್ರಸನ್ನತೆಯಿಂದಲೇ ಮಹಾಸಂಗ್ರಾಮದಲ್ಲಿ ಪ್ರವೇಶಿಸಿದ ಪಾರ್ಥನು ಯಾವಾಗಲೂ ಪರಾಙ್ಮುಖನಾಗಲಿಲ್ಲ.

**ತಥೈವ ಚ ಮಹಾಬಾಹೋ ಪರ್ಯಾಯೈರ್ಬಹುಭಿರ್ಮಯಾ ।**
**ಕರ್ಮಣಾಮನುಸಂತಾನಂ ತೇಜಸಶ್ಚ ಗತೀಃ ಶುಭಾಃ ॥೩೦॥**

ಮಹಾಬಾಹುವೇ! ಅದೇ ರೀತಿಯಲ್ಲಿ ನಿನ್ನ ತೇಜಸ್ಸಿನ ಶುಭ ಪರಿಣಾಮದಿಂದ ಒಂದಾದಮೇಲೊಂದರಂತೆ ಕರ್ಮಗಳ ಶುಭಫಲಗಳನ್ನು ಪಡೆದಿರುತ್ತೇನೆ. ತೇಜೋವೃದ್ಧಿಯನ್ನೂ ಹೊಂದಿರುತ್ತೇನೆ. ಉಪಪ್ಲವ್ಯದಲ್ಲಿದ್ದಾಗ ಮಹರ್ಷಿಗಳಾದ ಕೃಷ್ಣದ್ವೈಪಾಯನರು ನನ್ನೊಡನೆ ಹೀಗೆ ಹೇಳಿದ್ದರು.:

**ಯತೋ ಧರ್ಮಸ್ತತಃ ಕೃಷ್ಣೋ ಯತಃ ಕೃಷ್ಣಸ್ತತೋ ಜಯಃ ॥**

'ಧರ್ಮವೆಲ್ಲಿರುತ್ತದೆಯೋ ಅಲ್ಲಿ ಶ್ರೀಕೃಷ್ಣನಿರುತ್ತಾನೆ. ಎಲ್ಲಿ ಶ್ರೀಕೃಷ್ಣನಿರುತ್ತಾನೆಯೋ ಆ ಪಕ್ಷಕ್ಕೇ ವಿಜಯವು ಲಭಿಸುತ್ತದೆ.'

ಮಹಾರಾಜ! ಯುಧಿಷ್ಠಿರನು ಹೀಗೆ ಹೇಳಿದನಂತರ ಪಾಂಡವರು ನಿನ್ನ ಶಿಬಿರವನ್ನು ಪ್ರವೇಶಿಸಿ ಅಲ್ಲಿದ್ದ ಖಜಾನೆಯನ್ನೂ, ರತ್ನಗಳ ರಾಶಿಯನ್ನೂ ಮತ್ತು ಐಶ್ವರ್ಯದ ಭಂಡಾರವನ್ನೂ ತಮ್ಮ ವಶಕ್ಕೆ ತೆಗೆದುಕೊಂಡರು. ಬೆಳ್ಳಿ, ಚಿನ್ನ, ಮುತ್ತು, ಮಣಿಗಳು, ಒಡವೆ-ವಸ್ತುಗಳು, ರತ್ನಗಂಬಳಿಗಳು, ಮೃಗಚರ್ಮಗಳು, ಅಸಂಖ್ಯಾತರಾಗಿದ್ದ ದಾಸೀ-ದಾಸರು ಮತ್ತು ರಾಜ್ಯಕ್ಕೆ ಸಂಬಂಧಿಸಿದಂತಹ ಉಪಕರಣಗಳು–ಇವುಗಳೆಲ್ಲವನ್ನೂ ಪಾಂಡವರು ತಮ್ಮ ವಶಕ್ಕೆ ತೆಗೆದುಕೊಂಡರು. ಭರತಶ್ರೇಷ್ಠನೇ! ನರೇಶ್ವರ! ಶತ್ರುವಿಜೇತರಾದ, ಮಹಾಸೌಭಾಗ್ಯಶಾಲಿಗಳಾದ ಪಾಂಡವರು ನಿನ್ನ ಅಕ್ಷಯಭಂಡಾರವನ್ನು ಸ್ವಾಧೀನಪಡಿಸಿಕೊಂಡು ಹರ್ಷಧ್ವನಿಗಳನ್ನು ಮಾಡಿದರು. ಆ ವೀರರು ರಥಗಳಿಂದ ಕುದುರೆಗಳನ್ನು ಬಿಚ್ಚಿ, ಅವುಗಳನ್ನು ಸಂತೈಸಿದರು. ಅನಂತರ ಎಲ್ಲ ಪಾಂಡವರೂ ಮತ್ತು ಸಾತ್ಯಕಿಯೂ ಒಂದು ಕಡೆಯಲ್ಲಿ ಕುಳಿತುಕೊಂಡರು. ಆಗ ಮಹಾಯಶೋವಂತನಾದ ವಾಸುದೇವನು ಎಲ್ಲರನ್ನೂ ಉದ್ದೇಶಿಸಿ ಹೇಳಿದನು :

ಅಸ್ಮಾಭಿರ್ಮಙ್ಗಲಾರ್ಥಾಯ ವಸ್ತವ್ಯಂ ಶಿಬಿರಾದ್ಬಹಿಃ ॥೩೭॥

"ನಮ್ಮೆಲ್ಲರ ಕಲ್ಯಾಣಾರ್ಥವಾಗಿ ಈ ರಾತ್ರಿ ಶಿಬಿರದ ಹೊರಭಾಗದಲ್ಲಿಯೇ ಇರಬೇಕು."

ಶ್ರೀಕೃಷ್ಣನು ಹೀಗೆ ಹೇಳಿದೊಡನೆಯೇ ಹಾಗೆಯೇ ಆಗಲೆಂದು ಹೇಳಿ ಪಾಂಡವರೂ ಮತ್ತು ಸಾತ್ಯಕಿಯೂ ವಾಸುದೇವನೊಡನೆ ಆತ್ಮಕಲ್ಯಾಣಾರ್ಥವಾಗಿ ಶಿಬಿರದಿಂದ ಹೊರಕ್ಕೆ ಹೊರಟುಹೋದರು. ಶಿಬಿರದಿಂದ ಹೊರಟ ಹತಶತ್ರುಗಳಾದ ಪಾಂಡವರು ಪುಣ್ಯೋಪೇತಳಾದ ಓಘವತೀ ಎಂಬ ನದಿಯ ಬಳಿಗೆ ಬಂದು ಆ ರಾತ್ರಿಯಲ್ಲಿ ಆ ನದಿಯ ದಂಡೆಯ ಮೇಲೆ ನಿವಾಸಮಾಡಿದರು. ಆಗ ಯುಧಿಷ್ಠಿರರಾಜನು ಆ ಸಮಯದಲ್ಲಿ ಮಾಡಬೇಕಾದ ಕಾರ್ಯದ ವಿಷಯವಾಗಿ ಯೋಚಿಸಿ ಬಳಿಕ ಶ್ರೀಕೃಷ್ಣನೊಡನೆ ಹೇಳಿದನು :

"ಶತ್ರುಸೂದನನೇ ಮಾಧವ! ಕ್ರೋಧದಿಂದ ಉರಿದುಹೋಗುತ್ತಿರುವ ಗಾಂಧಾರೀದೇವಿಯನ್ನು ಶಾಂತಗೊಳಿಸುವ ಸಲುವಾಗಿ ಈ ಸಮಯದಲ್ಲಿ ನೀನು ಹಸ್ತಿನಾಪಟ್ಟಣಕ್ಕೆ ಹೋಗುವುದು ಉಚಿತವಾಗಿ ಕಾಣುತ್ತದೆ.

ಮಹಾಭಾಗನೇ! ನೀನು ಯುಕ್ತಿಯುಕ್ತವೂ, ಕಾರಣಸಹಿತವೂ ಮತ್ತು ಸಮಯೋಚಿತವೂ ಆದ ಮಾತುಗಳಿಂದ ಗಾಂಧಾರೀದೇವಿಯನ್ನು ಬಹಳ ಶೀಘ್ರದಲ್ಲಿಯೇ ಶಾಂತಗೊಳಿಸಬಹುದಾಗಿದೆ. ಈ ಹೊತ್ತಿನಲ್ಲಿ ಪಿತಾಮಹರಾದ ಭಗವಾನ್ ವ್ಯಾಸರೂ ಅಲ್ಲಿಯೇ ಇರುತ್ತಾರೆ."

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯಮಹಾರಾಜ! ಪಾಂಡವರು ಯದುವಂಶಶಿರೋ ಮಣಿಯಾದ ಶ್ರೀಕೃಷ್ಣನನ್ನು ಹಸ್ತಿನಾಪಟ್ಟಣಕ್ಕೆ ಕಳುಹಿಸಿಕೊಟ್ಟರು. ಪ್ರತಾಪವಂತನಾದ ವಾಸುದೇವನು ದಾರುಕನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಅಂಬಿಕಾಸುತನಾದ ಧೃತರಾಷ್ಟ್ರನೆಡೆಗೆ ಶೀಘ್ರವಾಗಿ ಹೊರಡಲು ಸಿದ್ಧನಾದನು. ಹಸ್ತಿನಾಪಟ್ಟಣಕ್ಕೆ ಹೊರಟ ಸಮಯದಲ್ಲಿ ಶೈಬ್ಯ-ಸುಗ್ರೀವಗಳೆಂಬ ಕುದುರೆಗಳಿಂದ ಸಜ್ಜಾಗಿದ್ದ ರಥದಲ್ಲಿ ಕುಳಿತು ಹೊರಟಿದ್ದ ಶ್ರೀಕೃಷ್ಣನನ್ನು ಕುರಿತು ಪಾಂಡವರು ಹೇಳಿದರು :

ಪ್ರತ್ಯಾಶ್ವಾಸಯ ಗಾನ್ಧಾರೀಂ ಹತಪುತ್ರಾಂ ಯಶಸ್ವಿನೀಮ್ ॥೪೫॥

"ಕೃಷ್ಣ! ಎಲ್ಲ ಮಕ್ಕಳನ್ನೂ ಕಳೆದುಕೊಂಡಿರುವ ಯಶಸ್ವಿನಿಯಾದ ಗಾಂಧಾರೀದೇವಿಯನ್ನು ಸಮಾಧಾನಗೊಳಿಸು."

ಮಹಾರಾಜ! ಪಾಂಡವರಿಂದ ಆ ಸಲಹೆಯನ್ನು ಪಡೆದು ಸಾತ್ವತವಂಶೀಯರಲ್ಲಿ ಶ್ರೇಷ್ಠನಾದ ಶ್ರೀಕೃಷ್ಣನು ಬಹಳ ಬೇಗ ಹತಪುತ್ರಳಾಗಿದ್ದ ಗಾಂಧಾರೀದೇವಿಯ ಬಳಿಗೆ ಬಂದನು."

ಅರವತ್ತೆರಡನೆಯ ಅಧ್ಯಾಯವು ಮುಗಿಯಿತು.

## ಯುಧಿಷ್ಠಿರನ ಪ್ರೇರಣೆಯಂತೆ ಶ್ರೀಕೃಷ್ಣನು ಹಸ್ತಿನಾಪಟ್ಟಣಕ್ಕೆ ಹೋಗಿ ಧೃತರಾಷ್ಟ್ರನನ್ನೂ-ಗಾಂಧಾರಿಯನ್ನೂ ಸಮಾಧಾನಗೊಳಿಸಿ ಹಿಂದಿರುಗಿದುದು

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ದ್ವಿಜಶ್ರೇಷ್ಠರೇ! ಯಾವ ಕಾರಣಕ್ಕಾಗಿ ಧರ್ಮಜನಾದ ಯುಧಿಷ್ಠಿರನು ಶತ್ರುತಾಪಕನಾದ ವಾಸುದೇವನನ್ನು ಗಾಂಧಾರಿಯ ಬಳಿಗೆ ಕಳುಹಿಸಿ ಕೊಟ್ಟನು? ಹಿಂದೆ ಶ್ರೀಕೃಷ್ಣನು ಕೌರವರ ಬಳಿಗೆ ಸಂಧಾನಾರ್ಥವಾಗಿ ಹೋಗಿದ್ದಾಗ ಅವನು ತನ್ನ ಅಭೀಷ್ಟವನ್ನು ಪೂರ್ಣಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. (ಸಂಧಾನವು ಮುರಿದುಬಿದ್ದಿತು.) ಆ ಕಾರಣದಿಂದಲೇ ಮಹಾಯುದ್ಧವು ಪ್ರಾರಂಭವಾಯಿತು. ಯುದ್ಧದಲ್ಲಿ ಕೌರವರ ಕಡೆಯ ಎಲ್ಲ ಯೋಧರೂ ಹತರಾಗಿಹೋದರು. ದುರ್ಯೋಧನನೂ ಹತನಾದನು. ಪೃಥ್ವಿಯಲ್ಲಿ ಪಾಂಡುಪುತ್ರನಾದ ಯುಧಿಷ್ಠಿರನಿಗೆ ಶತ್ರುಗಳೇ ಇಲ್ಲವಾದರು. ಕೌರವರ ಶಿಬಿರಗಳನ್ನು ಕಾಯುತ್ತಿದ್ದ ಕಾಲಾಳುಗಳೂ ಶಿಬಿರಗಳಿಂದ ಪಲಾಯನಮಾಡಿದರು. ದುರ್ಯೋಧನನ ಶಿಬಿರವು ಶೂನ್ಯವಾಗಿದ್ದಿತು. ಪಾಂಡವರು ಉತ್ತಮವಾದ ಯಶಸ್ಸನ್ನು ಪಡೆದುಕೊಂಡರು. ಇಷ್ಟೆಲ್ಲಾ ಆದನಂತರವೂ ಯಾವ ಕಾರಣದಿಂದ ಶ್ರೀಕೃಷ್ಣನು ಪುನಃ ಹಸ್ತಿನಾಪುರಕ್ಕೆ ಪ್ರಯಾಣಮಾಡಿದನು? ಅದರ ಅಗತ್ಯವೇನಿದ್ದಿತು? ಬ್ರಾಹ್ಮಣಶ್ರೇಷ್ಠರೇ! ಮಹಾತ್ಮನಾದ ಜನಾರ್ದನನೇ ಸ್ವಯಂ ಹಸ್ತಿನಾಪಟ್ಟಣಕ್ಕೆ ಹೋಗಬೇಕಾದರೆ ಕಾರಣವು ಅಲ್ಪವಲ್ಲವೆಂದೇ ನಾನು ಭಾವಿಸುತ್ತೇನೆ. ಅಧ್ವರ್ಯುಸತ್ತಮರೇ! ಈ ವಿಷಯವನ್ನು ಯಥಾವತ್ತಾಗಿ ಹೇಳಿರಿ. 'ಗಾಂಧಾರಿಯನ್ನು ನೋಡಬೇಕು. ಅವಳನ್ನು ಶ್ರೀಕೃಷ್ಣನೇ ಸಮಾಧಾನಗೊಳಿಸಬೇಕು'–ಎಂಬ ಈ ಕಾರ್ಯದ ನಿಶ್ಚಯದಲ್ಲಿ ಯಾವ ಮಹತ್ತ್ವದ ಕಾರಣವಡಗಿದೆಯೆಂಬುದನ್ನು ದಯಮಾಡಿ ಹೇಳಿರಿ."

"ಭರತರ್ಷಭನೇ! ನೀನು ಕೇಳಿದ ಪ್ರಶ್ನೆಯು ಸಮುಚಿತವಾಗಿಯೇ ಇದೆ. ನೀನು ಕೇಳಿದ ಪ್ರಶ್ನೆಗೆ ಉತ್ತರವನ್ನು ಯಥಾವತ್ತಾಗಿ ಹೇಳುತ್ತೇನೆ.

ಧೃತರಾಷ್ಟ್ರನ ಮಗನಾದ, ಮಹಾಬಲಿಷ್ಠನಾದ ದುರ್ಯೋಧನನನ್ನು ಭೀಮಸೇನನು ಯುದ್ಧದಲ್ಲಿ ನಿಯಮವನ್ನು ಉಲ್ಲಂಘಿಸಿ ಸಂಹರಿಸಿದನು. ಗದಾಯುದ್ಧದ ಮೂಲಕವಾಗಿ ಸುಯೋಧನನು ಭೀಮಸೇನನಿಂದ ಅನ್ಯಾಯಮಾರ್ಗದಲ್ಲಿ ಕೊಲ್ಲಲ್ಪಟ್ಟುದನ್ನು ನೋಡಿ ಯುಧಿಷ್ಠಿರನಿಗೆ ಮಹಾಭಯವುಂಟಾಯಿತು. ಘೋರವಾದ ತಪಸ್ಸನ್ನು ಆಚರಿಸುತ್ತಿದ್ದ, ಮಹಾಭಾಗ್ಯಶಾಲಿನಿಯಾದ, ತಪಸ್ವಿನಿಯಾದ ಗಾಂಧಾರಿಯ ವಿಷಯ ವಾಗಿಯೇ ಯುಧಿಷ್ಠಿರನು ಚಿಂತಿಸತೊಡಗಿದನು. ಅವಳೇನಾದರೂ ಕುಪಿತಳಾದರೆ ಮೂರು ಲೋಕಗಳನ್ನೂ ಸುಟ್ಟುಬಿಟ್ಟಾಳೆಂಬ ಭಯವು ಯುಧಿಷ್ಠಿರನ ಮನಸ್ಸನ್ನು ಆವರಿಸಿತು. ಹೀಗೆಯೇ ಯುಧಿಷ್ಠಿರನು ಚಿಂತಿಸುತ್ತಿರುವಾಗ ಅವನಿಗೊಂದು ಉಪಾಯವು ಹೊಳೆಯಿತು. ಕೋಪ ದಿಂದ ಉರಿಯುತ್ತಿರುವ ಗಾಂಧಾರೀದೇವಿಯ ಕ್ರೋಧವನ್ನು ಮೊದಲು ಪ್ರಶಮನಗೊಳಿಸಬೇಕೆಂದು ನಿಶ್ಚಯಿಸಿದನು. ಒಂದು ವೇಳೆ ಈ ಸಮಯದಲ್ಲಿ ಅವಳ ಕೋಪವನ್ನು ಉಪಶಮನಗೊಳಿಸದಿದ್ದರೆ ಅವಳ ಪುತ್ರನ ವಧೆಯು ನಮ್ಮಿಂದ ಅನ್ಯಾಯರೀತಿಯಲ್ಲಿ ನಡೆದಿರುವುದೆಂಬುದನ್ನು ಕೇಳಿದ ಅವಳು ಕ್ರುದ್ಧಳಾಗಿ ಸಂಕಲ್ಪಮಾತ್ರದಿಂದಲೇ ಜನಿತವಾದ ಅಗ್ನಿಯಿಂದ ನಮ್ಮನ್ನು ಭಸ್ಮೀಭೂತರನ್ನಾಗಿ ಮಾಡಿಬಿಡುವಳೆಂದು ಯುಧಿಷ್ಠಿರನು ಭಾವಿಸಿದನು. "ನ್ಯಾಯಮಾರ್ಗದಲ್ಲಿ ಯುದ್ಧಮಾಡುತ್ತಿದ್ದ ತನ್ನ ಮಗನನ್ನು ಅನ್ಯಾಯಮಾರ್ಗದಿಂದ ಪಾಂಡವರು ಸಂಹರಿಸಿದರೆಂಬ ವಾರ್ತೆಯನ್ನು ಕೇಳಿದನಂತರ ತೀವ್ರತರವಾದ ದುಃಖವನ್ನು ಗಾಂಧಾರಿಯು ಹೇಗೆ ತಾನೇ ಸಹಿಸಿಕೊಳ್ಳುವಳು?" ಭಯ ಮತ್ತು ಶೋಕಗಳಿಂದ ಕೂಡಿದ್ದ ಯುಧಿಷ್ಠಿರನು ಇದೇ ಮುಂತಾಗಿ ಯೋಚಿಸಿ ವಾಸುದೇವನನ್ನು ಕುರಿತು ಹೇಳಿದನು :

**ತವ ಪ್ರಸಾದಾದ್ಗೋವಿನ್ದ ರಾಜ್ಯಂ ನಿಹತಕಣ್ಟಕಮ್ ।**
**ಅಪ್ರಾಪ್ಯಂ ಮನಸಾಪೀದಂ ಪ್ರಾಪ್ತಮಸ್ಮಾಭಿರಚ್ಯುತ ॥೧೫॥**

"ಗೋವಿಂದ! ಅಚ್ಯುತ! ಮನಸ್ಸಿನಿಂದಲೂ ಪಡೆದುಕೊಳ್ಳುವುದಕ್ಕೆ ಸಾಧ್ಯವಾಗದಿದ್ದ, ನಿಷ್ಕಂಟಕವಾದ ಈ ರಾಜ್ಯವನ್ನು ನಾವು ನಿನ್ನ ಅನುಗ್ರಹ ಮಾತ್ರದಿಂದ ಪಡೆದುಕೊಂಡಿರುತ್ತೇವೆ.

ಮಹಾಬಾಹುವಾದ ಯಾದವನಂದನನೇ! ರೋಮಾಂಚಕರವಾದ ಈ ಯುದ್ಧದಲ್ಲಿ ನನ್ನ ಸಮಕ್ಷದಲ್ಲಿಯೇ ನೀನು ಮಹಾಮರ್ದನಕ್ಕೆ ಈಡಾದೆ. (ಶತ್ರುಗಳು ನಿನ್ನನ್ನೂ ಬಹಳವಾಗಿ ಪ್ರಹರಿಸಿದರು.) ಹಿಂದೆ ದೇವತೆಗಳಿಗೂ ಮತ್ತು ಅಸುರರಿಗೂ ಯುದ್ಧವು ನಡೆದ ಸಮಯದಲ್ಲಿ ಅಸುರರನ್ನು ವಧೆಮಾಡುವ ಸಲುವಾಗಿ ದೇವತೆಗಳಿಗೆ ಸಹಾಯಮಾಡಿದೆ. ನಿನ್ನ ಸಹಾಯದಿಂದಾಗಿ ಅಸುರರು ವಿನಾಶಹೊಂದಿದರು. ಮಹಾಬಾಹುವೇ! ಕೃಷ್ಣ! ದೇವತೆಗಳಿಗೆ ಸಹಾಯಮಾಡಿದಂತೆಯೇ ನೀನು ಪಾರ್ಥನಿಗೆ ಸಾರಥಿಯಾಗಿದ್ದುಕೊಂಡು ನಮಗೂ ಸಹಾಯಮಾಡಿರುವೆ. ನಿನ್ನಿಂದಲೇ ನಾವೆಲ್ಲರೂ ಧರಿಸಲ್ಪಟ್ಟಿದ್ದೇವೆ. (ನೀನೇ ನಮ್ಮೆಲ್ಲರನ್ನೂ ಉದ್ಧರಿಸಿರುವೆ.) ನೀನೇನಾದರೂ ಈ ಮಹಾಸಮರದಲ್ಲಿ ಅರ್ಜುನನಿಗೆ ನಾಥನಾಗಿ ಅವನ ರಕ್ಷಣೆಯ ಭಾರವನ್ನು ವಹಿಸದಿದ್ದರೆ ಕೌರವರ ಸಮುದ್ರರೂಪವಾದ ಸೈನ್ಯವನ್ನು ಜಯಿಸಲು ನಮ್ಮಿಂದ ಹೇಗೆ ತಾನೇ ಸಾಧ್ಯವಾಗುತ್ತಿದ್ದಿತು?

**ಗದಾಪ್ರಹಾರಾ ವಿಪುಲಾಃ ಪರಿಘೈಶ್ಚಾಪಿ ತಾಡನಮ್ ।**
**ಶಕ್ತಿಭಿರ್ಭಿನ್ದಿಪಾಲೈಶ್ಚ ತೋಮರೈಃ ಸಪರಶ್ವಧೈಃ ॥೨೦॥**

**ಅಸ್ಮತ್ಕೃತೇ ತ್ವಯಾ ಕೃಷ್ಣ ವಾಚಃ ಸುಪರುಷಾಃ ಶ್ರುತಾಃ ।**
**ಶಸ್ತ್ರಾಣಾಂ ಚ ನಿಪಾತಾ ವೈ ವಜ್ರಸ್ಪರ್ಶೋಪಮಾ ರಣೇ ॥೨೧॥**

ಶ್ರೀಕೃಷ್ಣ! ನೀನು ನಮ್ಮ ಸಲುವಾಗಿ ಹಲವು ಬಾರಿ ಶತ್ರುಗಳು ಮಾಡಿದ ಗದಾಪ್ರಹಾರಗಳನ್ನು ಸಹಿಸಿಕೊಂಡಿರುವೆ. ಪರಿಘಾಯುಧಗಳ ಪ್ರಹಾರಗಳನ್ನು ಸಹಿಸಿಕೊಂಡಿರುವೆ. ಶಕ್ತ್ಯಾಯುಧಗಳಿಂದಲೂ, ಭಿಂದಿಪಾಲಗಳಿಂದಲೂ, ತೋಮರಗಳಿಂದಲೂ, ಪರಶ್ವಧಗಳಿಂದಲೂ ನೀನು ಪೆಟ್ಟುತಿಂದಿರುವೆ. ವಜ್ರಾಯುಧದ ಸ್ಪರ್ಶಕ್ಕೆ ಸಮಾನವಾದ ದಾರುಣಸ್ಪರ್ಶವುಳ್ಳ ಶಸ್ತ್ರಗಳ ಪ್ರಹಾರಗಳನ್ನೂ ಸಹಿಸಿಕೊಂಡಿರುವೆ. ನಮ್ಮ ಸಲುವಾಗಿ ನೀನು ಶತ್ರುಗಳಿಂದ ಅತ್ಯಂತಕಠಿಣವಾದ ಮಾತುಗಳನ್ನೂ ಕೇಳಿರುವೆ.

**ತೇ ಚ ತೇ ಸಫಲಾ ಜಾತಾ ಹತೇ ದುರ್ಯೋಧನೇಽಚ್ಯುತ ।**
**ತತ್ಸರ್ವಂ ನ ಯಥಾ ನಶ್ಯೇತ್ಪುನಃ ಕೃಷ್ಣ ತಥಾ ಕುರು ॥೨೨॥**

ಅಚ್ಯುತನೇ! ದುರ್ಯೋಧನನು ಹತನಾಗಲಾಗಿ, ಯುದ್ಧಸಮಯದಲ್ಲಿ ಆಯುಧಗಳಿಂದಲೂ ಶಸ್ತ್ರಗಳಿಂದಲೂ ನೀನು ತಿಂದ ಪೆಟ್ಟುಗಳೂ ಮತ್ತು ಕೇಳಿದ ಕಠಿನೋಕ್ತಿಗಳೂ ಸಫಲವಾದುವು. ಇಷ್ಟು ಕಷ್ಟಪಟ್ಟು ನಾವೀಗ ಸಾಧಿಸಿರುವುದೆಲ್ಲವೂ ಸಂಪೂರ್ಣವಾಗಿ ವಿನಾಶವಾಗದ ರೀತಿಯಲ್ಲಿ ನೀನೀಗ ಕಾರ್ಯಮಾಡಬೇಕಾಗಿದೆ.

**ಸಂದೇಹದೋಲಾಂ ಪ್ರಾಪ್ತಂ ನಶ್ಚೇತಃ ಕೃಷ್ಣ ಜಯೇ ಸತಿ ।**
**ಗಾನ್ಧಾರ್ಯಾ ಹಿ ಮಹಾಬಾಹೋ ಕ್ರೋಧಂ ಬುಧ್ಯಸ್ವ ಮಾಧವ ॥**

ಕೃಷ್ಣ! ಇಂದು ನಮಗೆ ವಿಜಯವು ಪ್ರಾಪ್ತವಾಗಿದ್ದರೂ ನಮ್ಮ ಮನಸ್ಸು ಈ ವಿಜಯವು ಶಾಶ್ವತವಾಗಿ ನಿಲ್ಲುವುದೋ ಇಲ್ಲವೋ ಎಂಬ ಸಂದೇಹದ ತೊಟ್ಟಿಲಿನಲ್ಲಿ ತೂಗಾಡುತ್ತಿದೆ. ಮಹಾಬಾಹುವೇ! ಈ ಸಮಯದಲ್ಲಿ ಗಾಂಧಾರಿಯ ಕೋಪವೆಷ್ಟಿರಬಹುದೆಂಬುದನ್ನು ನೀನೇ ಊಹಿಸು.

**ಸಾ ಹಿ ನಿತ್ಯಂ ಮಹಾಭಾಗಾ ತಪಸೋಗ್ರೇಣ ಕರ್ಶಿತಾ ।**
**ಪುತ್ರಪೌತ್ರವಧಂ ಶ್ರುತ್ವಾ ಧ್ರುವಂ ನಃ ಸಮ್ಪ್ರಧಕ್ಷ್ಯತಿ ।**
**ತಸ್ಯಾಃ ಪ್ರಸಾದನಂ ವೀರ ಪ್ರಾಪ್ತಕಾಲಂ ಮತಂ ಮಮ ॥೨೪॥**

ಉಗ್ರವಾದ ತಪಸ್ಸಿನಿಂದ ಶರೀರವನ್ನು ಕೃಶಗೊಳಿಸಿರುವ, ಮಹಾಭಾಗ್ಯಶಾಲಿನಿಯಾದ ಗಾಂಧಾರಿಯು ಮಕ್ಕಳ ಮತ್ತು ಮೊಮ್ಮಕ್ಕಳ ವಧೆಯನ್ನು ಕೇಳಿ ನಿಶ್ಚಯವಾಗಿಯೂ ನಮ್ಮನ್ನು ಸುಟ್ಟುಬಿಡುತ್ತಾಳೆ. ಅವಳನ್ನು ಪ್ರಸನ್ನಗೊಳಿಸುವ ಕಾಲವೀಗ ಸನ್ನಿಹಿತವಾಗಿದೆಯೆಂದು ನಾನು ಭಾವಿಸುತ್ತೇನೆ.

**ಕಶ್ಚ ತಾಂ ಕ್ರೋಧತಾಮ್ರಾಕ್ಷೀಂ ಪುತ್ರವ್ಯಸನಕರ್ಶಿತಾಮ್ ।**
**ವೀಕ್ಷಿತುಂ ಪುರುಷಃ ಶಕ್ತಸ್ತ್ವಾಮೃತೇ ಪುರುಷೋತ್ತಮ ॥೨೫॥**

ಪುರುಷೋತ್ತಮನೇ! ಪುತ್ರ-ಪೌತ್ರರ ನಿಧನದಿಂದಾಗಿ ಸಂಕಟಪಡುತ್ತಿರುವ, ಕ್ರೋಧದಿಂದ ಕೆಂಪಾದ ಕಣ್ಣುಗಳನ್ನು ಹೊಂದಿರುವ ಗಾಂಧಾರಿಯನ್ನು ನೋಡಲು ನಿನ್ನೊಬ್ಬನನ್ನು ಬಿಟ್ಟು ಬೇರೆ ಯಾವ ಪುರುಷನು ತಾನೇ ಶಕ್ತನಾಗಿದ್ದಾನೆ?

**ತ್ವಂ ಹಿ ಕರ್ತಾ ವಿಕರ್ತಾ ಚ ಲೋಕಾನಾಂ ಪ್ರಭವಾಪ್ಯಯಃ ।**
**ಹೇತುಕಾರಣಸಂಯುಕ್ತೈರ್ವಾಕ್ಯೈಃ ಕಾಲಸಮೀರಿತೈಃ ।**
**ಕ್ಷಿಪ್ರಮೇವ ಮಹಾಬಾಹೋ ಗಾನ್ಧಾರೀಂ ಶಮಯಿಷ್ಯಸಿ ॥೨೮॥**

ಮಹಾಬಾಹುವೇ! ನೀನು ಸಂಪೂರ್ಣಲೋಕಗಳ ಸೃಷ್ಟಿಕರ್ತನೂ ಆಗಿರುವೆ; ಸಂಹಾರಕನೂ ಆಗಿರುವೆ. ನೀನು ಪ್ರಪಂಚದ ಎಲ್ಲ ಪ್ರಾಣಿಗಳಿಗೂ ಉತ್ಪತ್ತಿಸ್ಥಾನವೂ–ಲಯಸ್ಥಾನವೂ ಆಗಿರುವೆ. ಯುಕ್ತಿ ಹಾಗೂ ಕಾರಣಗಳಿಂದ ಸಂಯುಕ್ತವಾದ ಮತ್ತು ಸಮಯೋಚಿತವಾದ ಮಾತುಗಳಿಂದ ಗಾಂಧಾರೀದೇವಿಯ ಕೋಪವನ್ನು ಶೀಘ್ರವಾಗಿ ಉಪಶಮನಗೊಳಿಸು.

ಈ ಸಮಯದಲ್ಲಿ ನಮ್ಮ ಪಿತಾಮಹರಾದ ಕೃಷ್ಣದ್ವೈಪಾಯನರೂ ಅಲ್ಲಿಯೇ ಇರುತ್ತಾರೆ. ಮಹಾಬಾಹುವೇ! ಸಾತ್ವತಶ್ರೇಷ್ಠನೇ! ಪಾಂಡವರ ಹಿತಚಿಂತಕನಾಗಿರುವ ನಿನಗೆ ಗಾಂಧಾರಿಯ ಶೋಕವನ್ನು ಉಪಶಮನ ಗೊಳಿಸುವುದು ಮುಖ್ಯಕರ್ತವ್ಯವೂ ಆಗಿರುತ್ತದೆ.”

ಜನಮೇಜಯಮಹಾರಾಜ! ಧರ್ಮರಾಜನ ಮಾತನ್ನು ಕೇಳಿ ಯದುಕುಲತಿಲಕನಾದ ಶ್ರೀಕೃಷ್ಣನು ದಾರುಕನನ್ನು ಕರೆದು ರಥವನ್ನು ಸಜ್ಜುಗೊಳಿಸುವಂತೆ ಹೇಳಿದನು. ಕೇಶವನ ಮಾತನ್ನು ಕೇಳಿ ದಾರುಕನು ತ್ವರೆಯಿಂದ ರಥವನ್ನು ಸಜ್ಜುಗೊಳಿಸಿ ರಥವು ಹೊರಡಲು ಸಿದ್ಧವಾಗಿರುವುದೆಂಬ ವಿಷಯವನ್ನು ಮಹಾತ್ಮನಾದ ಕೇಶವನಿಗೆ ನಿವೇದಿಸಿದನು. ಯದುಶ್ರೇಷ್ಠನಾದ, ಪರಂತಪನಾದ, ವಿಭುವಾದ ಕೇಶವನು ಸಜ್ಜಾಗಿದ್ದ ರಥದಲ್ಲಿ ಕುಳಿತು ಹಸ್ತಿನಾಪುರಕ್ಕೆ ಬಹಳ ತ್ವರೆಯಿಂದ ಹೊರಟನು.

ಮಹಾರಾಜ! ಪರಾಕ್ರಮಿಯಾದ ಭಗವಾನ್ ಮಾಧವನು ರಥದಲ್ಲಿ ಕುಳಿತು ಹಸ್ತಿನಾಪುರಕ್ಕೆ ಪ್ರಯಾಣಮಾಡಿ ಪಟ್ಟಣದ ಬಳಿಗೆ ಹೋಗಿ ನಗರವನ್ನು ಪ್ರವೇಶಿಸಿದನು. ರಥಘೋಷದಿಂದ ಎಲ್ಲ ದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಾ ಶ್ರೀಕೃಷ್ಣನು ನಗರವನ್ನು ಪ್ರವೇಶಿಸಿ ತಾನು ಬಂದಿರುವ ಸಮಾಚಾರವನ್ನು ಧೃತರಾಷ್ಟ್ರನಿಗೆ ತಿಳಿಯಪಡಿಸಿದನು. ಅನಂತರ ಧೀರನಾದ ಶ್ರೀಕೃಷ್ಣನು ಶ್ರೇಷ್ಠವಾದ ರಥದಿಂದ ಕೆಳಗಿಳಿದು ಧೃತರಾಷ್ಟ್ರನ

ಅರಮನೆಯನ್ನು ಪ್ರವೇಶಿಸಿದನು. ಶ್ರೀಕೃಷ್ಣನು ತಾನು ಧೃತರಾಷ್ಟ್ರನ ಅರಮನೆಗೆ ಹೋಗುವ ಮೊದಲೇ ಅಲ್ಲಿಗೆ ಆಗಮಿಸಿದ್ದ ಋಷಿಶ್ರೇಷ್ಠರಾದ ಕೃಷ್ಣದ್ವೈಪಾಯನರನ್ನು ನೋಡಿದನು. ಅನಂತರ ಸ್ಥಿರಚಿತ್ತನಾದ ಶ್ರೀಕೃಷ್ಣನು ವ್ಯಾಸರ ಮತ್ತು ಧೃತರಾಷ್ಟ್ರನ ಕಾಲುಗಳನ್ನು ಮುಟ್ಟಿ ನಮಸ್ಕರಿಸಿ, ಅನಂತರ ಗಾಂಧಾರಿಗೂ ಅಭಿವಾದನಪೂರ್ವಕವಾಗಿ ನಮಸ್ಕರಿಸಿದನು. ಬಳಿಕ ಯಾದವಶ್ರೇಷ್ಠನಾದ ಅಧೋಕ್ಷಜನಾದ ಶ್ರೀಕೃಷ್ಣನು ಧೃತರಾಷ್ಟ್ರನ ಹಸ್ತವನ್ನು ತನ್ನ ಕೈಗಳಿಂದ ಹಿಡಿದುಕೊಂಡು ಬಿಕ್ಕಿ-ಬಿಕ್ಕಿ ಅಳತೊಡಗಿದನು. ಸ್ವಲ್ಪಹೊತ್ತಿನವರೆಗೆ ಶೋಕದಿಂದ ಸಮುದ್ಭೂತವಾಗಿದ್ದ ಕಣ್ಣೀರನ್ನು ಸುರಿಸಿ, ಬಳಿಕ ಶ್ರೀಕೃಷ್ಣನು ನೀರಿನಿಂದ ತನ್ನೆರಡು ಕಣ್ಣುಗಳನ್ನೂ ತೊಳೆದುಕೊಂಡು, ಯಥಾವಿಧಿಯಾಗಿ ಶುದ್ಧಾಚಮನಮಾಡಿ, ಅರಿಂದಮನಾದ ಧೃತರಾಷ್ಟ್ರನನ್ನು ಕುರಿತು ಸಮಯೋಚಿತವಾದ ಈ ಮಾತನ್ನು ಹೇಳಿದನು :

**ನ ತೇಽಸ್ತ್ಯವಿದಿತಂ ಕಿಂಚಿದ್ವೃದ್ಧಸ್ಯ ತವ ಭಾರತ ।**
**ಕಾಲಸ್ಯ ಚ ಯಥಾವೃತ್ತಂ ತತ್ತೇ ಸುವಿದಿತಂ ಪ್ರಭೋ ॥೪೦॥**

"ಭಾರತ! ವೃದ್ಧನಾಗಿರುವ ನಿನಗೆ ತಿಳಿಯದೇ ಇರುವ ವಿಷಯಗಳೇ ಇಲ್ಲ. ಕಾಲಾನುಗುಣವಾಗಿ ಯಾವುದು ಹೇಗೆ ನಡೆಯಿತೆಂಬುದೂ ನಿನಗೆ ಚೆನ್ನಾಗಿ ತಿಳಿದಿದೆ.

**ಯತಿತಂ ಪಾಣ್ಡವೈಃ ಸರ್ವೈಸ್ತವ ಚಿತ್ತಾನುರೋಧಿಭಿಃ ।**
**ಕಥಂ ಕುಲಕ್ಷಯೋ ನ ಸ್ಯಾತ್ತಥಾ ಕ್ಷತ್ರಸ್ಯ ಭಾರತ ॥೪೧॥**

ನಿನ್ನ ಚಿತ್ತಾನುವರ್ತಿಗಳಾದ ಎಲ್ಲ ಪಾಂಡವರೂ–ಕುರುಕುಲದ ಕ್ಷಯವೂ ಹಾಗೆಯೇ ಕ್ಷತ್ರಿಯವಂಶದ ನಾಶವೂ ಆಗಕೂಡದೆಂಬ ಆಶಯ ದಿಂದ ಯುದ್ಧವನ್ನು ತಪ್ಪಿಸಲು ಬಹಳವಾಗಿ ಪ್ರಯತ್ನಿಸಿದರು. (ಈ ವಿಷಯವೂ ನಿನಗೆ ತಿಳಿದೇ ಇದೆ.)

ಧರ್ಮವತ್ಸಲನಾದ ಯುಧಿಷ್ಠಿರನು ತನ್ನ ಅನುಜರೊಡನೆ ನಿಬಂಧನೆ ಯನ್ನು ಮಾಡಿಕೊಂಡು ತಾಳ್ಮೆಯಿಂದಿರುತ್ತಾ ಅನೇಕಕಷ್ಟಗಳನ್ನೂ ಸಹಿಸಿ

ಕೊಂಡನು. ಶುದ್ಧವಾದ ಮನಸ್ಸಿನಿಂದ ಕೂಡಿದ ಪಾಂಡವರು ವಂಚನೆಯ ದ್ಯೂತದಲ್ಲಿ ಪರಾಜಿತರಾಗಿ ವನವಾಸವನ್ನು ಅನುಭವಿಸಬೇಕಾಯಿತು.

ಅನಂತರ ಅವರು ನಾನಾವಿಧವಾದ ವೇಷಗಳಿಂದ ತಮ್ಮ ಸ್ವರೂಪ ಗಳನ್ನು ಮರೆಯಿಸಿಕೊಂಡು ಅಜ್ಞಾತವಾಸವನ್ನೂ ಮುಗಿಸಿದರು. ಅರಣ್ಯವಾಸ ಮತ್ತು ಅಜ್ಞಾತವಾಸಗಳ ಕಾಲದಲ್ಲಿ ಅವರು ದುರ್ಬಲರಾದವರು ಅನುಭವಿಸುವಂತೆ ಅನೇಕವಿಧವಾದ ಕ್ಲೇಶಗಳನ್ನೂ ಅನುಭವಿಸಿದರು.

**ಮಯಾ ಚ ಸ್ವಯಮಾಗಮ್ಯ ಯುದ್ಧಕಾಲ ಉಪಸ್ಥಿತೇ ।**
**ಸರ್ವಲೋಕಸ್ಯ ಸಾಂನಿಧ್ಯೇ ಗ್ರಾಮಾಂಸ್ತ್ವಂ ಪಞ್ಚ ಯಾಚಿತಃ ॥೪೪॥**

ಯುದ್ಧಕಾಲವು ಸನ್ನಿಹಿತವಾಗಲಾಗಿ ನಾನೇ ಸ್ವತಃ ಬಂದು ಎಲ್ಲ ಜನರ ಸಮಕ್ಷದಲ್ಲಿ ಕೇವಲ ಐದು ಗ್ರಾಮಗಳನ್ನು ಪಾಂಡವರ ಸಲುವಾಗಿ ನಿನ್ನನ್ನು ಯಾಚಿಸಿದೆನು.

**ತ್ವಯಾ ಕಾಲೋಪಸೃಷ್ಟೇನ ಲೋಭತೋ ನಾಪವರ್ಜಿತಾಃ ।**
**ತವಾಪರಾಧಾನ್ನೃಪತೇ ಸರ್ವಂ ಕ್ಷತ್ರಂ ಕ್ಷಯಂ ಗತಮ್ ॥೪೫॥**

ಕಾಲಪ್ರೇರಿತನಾದ ನೀನು ಲೋಭದ ಕಾರಣದಿಂದಾಗಿ ನಾನು ಪ್ರಾರ್ಥಿಸಿದ ಐದು ಗ್ರಾಮಗಳನ್ನೂ ಕೊಡಲಿಲ್ಲ. ನೀನು ಮಾಡಿದ ಈ ಅಪರಾಧದಿಂದಲೇ ಎಲ್ಲ ಕ್ಷತ್ರಿಯರೂ ವಿನಾಶಹೊಂದಿದರು.

ಭೀಷ್ಮ, ಸೋಮದತ್ತ, ಬಾಹ್ಲೀಕ, ಕೃಪ, ದ್ರೋಣರು, ಅಶ್ವತ್ಥಾಮಾ, ಧೀಮಂತನಾದ ವಿದುರ–ಇವರೆಲ್ಲರೂ ಪಾಂಡವರೊಡನೆ ಸಂಧಾನ ಮಾಡಿಕೊಳ್ಳುವಂತೆ ನಿನ್ನನ್ನು ಅನುದಿನವೂ ಯಾಚಿಸುತ್ತಿದ್ದರು. ಆದರೆ ಅವರ ಪ್ರಾರ್ಥನೆಯನ್ನೂ ನೀನು ನಡೆಸಿಕೊಡಲಿಲ್ಲ.

**ಕಾಲೋಪಹತಚಿತ್ತಾ ಹಿ ಸರ್ವೇ ಮುಹ್ಯನ್ತಿ ಭಾರತ ॥೪೭॥**

ಕಾಲದ ಪ್ರಭಾವದಿಂದ ಬುದ್ಧಿಯನ್ನು ಕಳೆದುಕೊಂಡಿರುವವರೆಲ್ಲರೂ ಮೋಹಪರವಶರಾಗುತ್ತಾರೆ. ಹಾಗೆಯೇ ಹಿಂದೆ ಯುದ್ಧದ ಸಿದ್ಧತೆಯು ನಡೆಯುತ್ತಿದ್ದಾಗ ಸರಿಯಾದ ನಿರ್ಣಯವನ್ನು ತೆಗೆದುಕೊಳ್ಳಬೇಕಾಗಿದ್ದ ಸಮಯದಲ್ಲಿ ಕಾಲಪ್ರಭಾವದಿಂದ ನೀನು ಮೂಢನಾದೆ. ಇದು ಕಾಲದ ಪ್ರಭಾವವಲ್ಲದೇ ಮತ್ತೇನು? ಈ ವಿಷಯಗಳಲ್ಲಿ ದೈವವೇ ಎಲ್ಲಕ್ಕೂ ಆಶ್ರಯಭೂತವಾಗಿರುತ್ತದೆ.

**ಮಾ ಚ ದೋಷಾನ್ಮಹಾಪ್ರಾಜ್ಞ ಪಾಣ್ಡವೇಷು ನಿವೇಶಯ ॥೪೮॥**

**ಅಲ್ಪೋಽಪ್ಯತಿಕ್ರಮೋ ನಾಸ್ತಿ ಪಾಣ್ಡವಾನಾಂ ಮಹಾತ್ಮನಾಮ್ ।**
**ಧರ್ಮತೋ ನ್ಯಾಯತಶ್ಚೈವ ಸ್ನೇಹತಶ್ಚ ಪರಂತಪ ॥೪೯॥**

ಮಹಾಪ್ರಾಜ್ಞನೇ! ಕ್ಷತ್ರಿಯಕುಲದ ಕ್ಷಯಕ್ಕೆ ಪಾಂಡವರ ಮೇಲೆ ದೋಷಾರೋಪಣೆಯನ್ನು ಮಾಡಬೇಡ. ಪರಂತಪನೇ! ಧರ್ಮದ ದೃಷ್ಟಿಯಿಂದಲೂ, ನ್ಯಾಯದ ದೃಷ್ಟಿಯಿಂದಲೂ ಮತ್ತು ಸ್ನೇಹದ ದೃಷ್ಟಿಯಿಂದಲೂ ಮಹಾತ್ಮರಾದ ಪಾಂಡವರು ಸ್ವಲ್ಪವಾದರೂ ಅಪರಾಧವನ್ನೆಸಗಿರುವುದಿಲ್ಲ. ಇವೆಲ್ಲವೂ ನೀನೇ ಮಾಡಿದ ತಪ್ಪಿನ ಫಲವೆಂದು ತಿಳಿದು ಪಾಂಡವರ ವಿಷಯದಲ್ಲಿ ನೀನು ಅಸೂಯೆಪಡುವುದು ಉಚಿತವಲ್ಲ.

**ಕುಲಂ ವಂಶಶ್ಚ ಪಿಣ್ಡಾಶ್ಚ ಯಚ್ಚ ಪುತ್ರಕೃತಂ ಫಲಮ್ ।**
**ಗಾನ್ಧಾರ್ಯಾಸ್ತವ ವೈ ನಾಥ ಪಾಣ್ಡವೇಷು ಪ್ರತಿಷ್ಠಿತಮ್ ॥೫೦॥**

ಈಗ ನಿನ್ನ ಕುಲ ಮತ್ತು ವಂಶಗಳು ಪಾಂಡವರ ಮೂಲಕವೇ ಬೆಳೆಯಬೇಕಾಗಿದೆ. ನಿನಗೂ ಮತ್ತು ಗಾಂಧಾರೀದೇವಿಗೂ ಅವಸಾನಾನಂತರದಲ್ಲಿ ಪಿಂಡಪ್ರದಾನಾದಿಗಳು ಪಾಂಡವರಿಂದಲೇ ನಡೆಯಬೇಕಾಗಿದೆ. ಪುತ್ರರಿಂದ ಪ್ರಾಪ್ತವಾಗಬಹುದಾದ ಎಲ್ಲ ಫಲಗಳೂ ಈಗ ಪಾಂಡವರಲ್ಲಿಯೇ ಪ್ರತಿಷ್ಠಿತವಾಗಿವೆ. ನಿನ್ನ ಮತ್ತು ಗಾಂಧಾರಿಯ ಸಲುವಾಗಿ ನಿನ್ನ ಮಕ್ಕಳು ಮಾಡಬೇಕಾಗಿದ್ದ ಎಲ್ಲ ಕಾರ್ಯಗಳನ್ನೂ ಪಾಂಡವರೇ ಮಾಡಬೇಕಾಗಿದೆ.

ಕುರುಶ್ರೇಷ್ಠನೇ! ನರಶ್ರೇಷ್ಠನೇ! ನೀನೇ ಆಗಲೀ, ಯಶಸ್ವಿನಿಯಾದ ಗಾಂಧಾರಿಯೇ ಆಗಲೀ–ಪಾಂಡವರಿಗೆ ಕೇಡನ್ನುಂಟುಮಾಡಬೇಕೆಂದು ಖಂಡಿತವಾಗಿಯೂ ಯೋಚಿಸಬೇಡಿರಿ. (ಕೇಡಾಗಲೆಂದು ಆಶಿಸದಿರಿ.)

**ಏತತ್ಸರ್ವಮನುಧ್ಯಾಯ ಆತ್ಮನಶ್ಚ ವ್ಯತಿಕ್ರಮಮ್ ।**
**ಶಿವೇನ ಪಾಣ್ಡವಾನ್ಪಾಹಿ ನಮಸ್ತೇ ಭರತರ್ಷಭ ॥೫೪॥**

ಭರತರ್ಷಭನೇ! ಈ ಎಲ್ಲ ವಿಷಯಗಳನ್ನೂ ಸಮಾಲೋಚಿಸಿ, ಈ ವಿಷಯದಲ್ಲಿ ನೀನು ಮಾಡಿರುವ ಅಪರಾಧವನ್ನೂ ಮನಗಂಡು, ಪಾಂಡವರ ವಿಷಯದಲ್ಲಿ ಶುಭಭಾವನೆಯನ್ನಿಟ್ಟುಕೊಂಡು ಅವರನ್ನು ಸಂರಕ್ಷಿಸು. ನಿನಗೆ ನಮಸ್ಕಾರಮಾಡುತ್ತೇನೆ. (ನಮಸ್ಕಾರಮಾಡಿ ಕೇಳಿಕೊಳ್ಳುತ್ತೇನೆ.)

ಮಹಾಬಾಹುವೇ! ಭರತಶ್ರೇಷ್ಠನೇ! ಧರ್ಮರಾಜನಿಗೆ ಸ್ವಭಾವತಃ ನಿನ್ನ ವಿಷಯದಲ್ಲಿ ಎಷ್ಟೊಂದು ಭಕ್ತಿ-ಸ್ನೇಹಗಳಿವೆಯೆಂಬ ವಿಷಯವೂ ನಿನಗೆ ತಿಳಿದಿದೆ.

**ಏತಚ್ಚ ಕದನಂ ಕೃತ್ವಾ ಶತ್ರೂಣಾಮಪಕಾರಿಣಾಮ್ ।**
**ದಹ್ಯತೇ ಸ ದಿವಾರಾತ್ರೌ ನ ಚ ಶರ್ಮಾಧಿಗಚ್ಛತಿ ॥೫೫॥**

ತನಗೆ ಬಹಳವಾಗಿ ಅಪಕಾರವನ್ನೆಸಗಿದ ಶತ್ರುಗಳನ್ನು ಸಂಹರಿಸಿದು ದಕ್ಕಾಗಿಯೂ ಧರ್ಮಜನು ಹಗಲಿರುಳೂ ಶೋಕವೆಂಬ ಅಗ್ನಿಯಿಂದ ದಹಿಸಿಹೋಗುತ್ತಿದ್ದಾನೆ. ಇದರಿಂದ ಅವನಿಗೆ ಸುಖವೆಂಬುದು ಇಲ್ಲವಾಗಿದೆ.

**ತ್ವಾಂ ಚೈವ ನರಶಾರ್ದೂಲ ಗಾನ್ಧಾರೀಂ ಚ ಯಶಸ್ವಿನೀಮ್ ।**
**ಸ ಶೋಚನ್ನರಶಾರ್ದೂಲಃ ಶಾನ್ತಿಂ ನೈವಾಧಿಗಚ್ಛತಿ ॥೫೬॥**

ಪುರುಷಸಿಂಹನೇ! ನಿನ್ನ ಸಲುವಾಗಿಯೂ ಮತ್ತು ಯಶಸ್ವಿನಿಯಾದ ಗಾಂಧಾರಿಯ ಸಲುವಾಗಿಯೂ ನಿರಂತರವಾಗಿ ಶೋಕಪಡುತ್ತಿರುವ ನರ ಶ್ರೇಷ್ಠನಾದ ಯುಧಿಷ್ಠಿರನಿಗೆ ಮನಶ್ಶಾಂತಿಯೆಂಬುದೇ ಇಲ್ಲವಾಗಿದೆ.

**ಹ್ರಿಯಾ ಚ ಪರಯಾವಿಷ್ಟೋ ಭವನ್ತಂ ನಾಧಿಗಚ್ಛತಿ ।**
**ಪುತ್ರಶೋಕಾಭಿಸಂತಪ್ತಂ ಬುದ್ಧಿವ್ಯಾಕುಲಿತೇನ್ದ್ರಿಯಮ್ ॥೫೭॥**

ಪುತ್ರಶೋಕದಿಂದ ಪರಿತಪಿಸುತ್ತಿರುವ ಮತ್ತು ಶೋಕದಿಂದ ವ್ಯಾಕುಲವಾಗಿರುವ ಬುದ್ಧಿ ಮತ್ತು ಇಂದ್ರಿಯಗಳಿಂದ ಕೂಡಿರುವ ನಿನ್ನನ್ನು ಸಂದರ್ಶಿಸಲು ಮಹಾಲಜ್ಜೆಯಿಂದ ಕೂಡಿರುವ ಯುಧಿಷ್ಠಿರನು ಸ್ವಯಂ ಬಂದಿರುವುದಿಲ್ಲ.”

ಜನಮೇಜಯ! ಯದೂತ್ತಮನಾದ ಶ್ರೀಕೃಷ್ಣನು ಧೃತರಾಷ್ಟ್ರನೊಡನೆ ಹೀಗೆ ಹೇಳಿ ಬಳಿಕ ಶೋಕದಿಂದ ದುರ್ಬಲಳಾಗಿದ್ದ ಗಾಂಧಾರೀದೇವಿಯನ್ನು ಕುರಿತು ಶ್ರೇಷ್ಠವಾದ ಈ ಮಾತುಗಳನ್ನು ಹೇಳಿದನು :

“ಸುಬಲನಂದಿನಿಯೇ! ನಾನು ಹೇಳುವುದನ್ನು ಮನಸ್ಸಿಟ್ಟು ಕೇಳು.

**ತ್ವತ್ಸಮಾ ನಾಸ್ತಿ ಲೋಕೇಽಸ್ಮಿನ್ನದ್ಯ ಸೀಮನ್ತಿನೀ ಶುಭೇ ।**
**ಜಾನಾಸಿ ಚ ಯಥಾ ರಾಜ್ಞಿ ಸಭಾಯಾಂ ಮಮ ಸಂನಿಧೌ ॥೬೦॥**

**ಧರ್ಮಾರ್ಥಸಹಿತಂ ವಾಕ್ಯಮುಭಯೋಃ ಪಕ್ಷಯೋರ್ಹಿತಮ್ ।**
**ಉಕ್ತವತ್ಯಸಿ ಕಲ್ಯಾಣಿ ನ ಚ ತೇ ತನಯೈಃ ಕೃತಮ್ ॥೬೧॥**

ಶುಭಸ್ವರೂಪಳೇ! ಕಲ್ಯಾಣಿ! ಈ ಪ್ರಪಂಚದಲ್ಲಿ ನಿನಗೆ ಸಮಾನಳಾದ ತಪೋಬಲಸಂಪನ್ನೆಯಾದ ಸ್ತ್ರೀಯು ಮತ್ತಾರೂ ಇರುವುದಿಲ್ಲ. ತುಂಬಿದ ಸಭೆಯಲ್ಲಿ ನನ್ನ ಸಮಕ್ಷದಲ್ಲಿಯೇ ನೀನು ಎರಡು ಪಕ್ಷಗಳಿಗೂ ಹಿತಕರವಾಗುವ ಧರ್ಮಾರ್ಥಸಹಿತವಾದ ಮಾತುಗಳನ್ನೇ ಹೇಳಿದೆ. ಆ ನಿನ್ನ ಮಾತುಗಳಂತೆ ನಿನ್ನ ಮಕ್ಕಳು ನಡೆದುಕೊಳ್ಳಲಿಲ್ಲ. ಈ ವಿಷಯವು ನಿನ್ನ ಸ್ಮರಣೆಯಲ್ಲಿರಬಹುದು.

ಆ ಸಮಯದಲ್ಲಿ ನೀನು ಯುದ್ಧದಲ್ಲಿ ವಿಜಯಗಳಿಸಬೇಕೆನ್ನುವ ಅಭಿಲಾಷೆಯನ್ನಿಟ್ಟುಕೊಂಡಿದ್ದ ದುರ್ಯೋಧನನನ್ನು ಸಂಬೋಧಿಸಿ ಕಠಿನವಾದ ಈ ಮಾತುಗಳನ್ನಾಡಿದೆ :

**ಶೃಣು ಮೂಢ ವಚೋ ಮಹ್ಯಂ ಯತೋ ಧರ್ಮಸ್ತತೋ ಜಯಃ॥**

'ಮೂಢ! ನನ್ನ ಈ ಮಾತನ್ನು ಕೇಳು. ಯಾವ ಪಕ್ಷದಲ್ಲಿ ಧರ್ಮವಿರುವುದೋ ಆ ಪಕ್ಷಕ್ಕೆ ವಿಜಯವು ಲಭಿಸುತ್ತದೆ.'

**ತದಿದಂ ಸಮನುಪ್ರಾಪ್ತಂ ತವ ವಾಕ್ಯಂ ನೃಪಾತ್ಮಜೇ ।**
**ಏವಂ ವಿದಿತ್ವಾ ಕಲ್ಯಾಣಿ ಮಾ ಸ್ಮ ಶೋಕೇ ಮನಃ ಕೃಥಾಃ ॥೬೩॥**

ರಾಜಪುತ್ರಿ! ಕಲ್ಯಾಣಿ! ಅಂದು ನೀನು ಹೇಳಿದ ಮಾತು ಇಂದು ಸತ್ಯವಾಗಿ ಪರಿಣಮಿಸಿತು. ಇದೇ ಭಾವನೆಯನ್ನಿಟ್ಟುಕೊಂಡು ನೀನು ಶೋಕದಲ್ಲಿ ಮನಸ್ಸನ್ನು ಲೀನಗೊಳಿಸಬೇಡ. (ನಿನ್ನ ಅಭಿಪ್ರಾಯದಂತೆಯೇ ಆಗಬೇಕಾದುದು ಆಗಿದೆ. ಅದಕ್ಕಾಗಿ ವ್ಯಥೆಪಡಬೇಡ.)

**ಪಾಣ್ಡವಾನಾಂ ವಿನಾಶಾಯ ಮಾ ತೇ ಬುದ್ಧಿಃ ಕದಾಚನ ॥೬೪॥**

ನಿನ್ನ ಮಕ್ಕಳನ್ನೂ ಮೊಮ್ಮಕ್ಕಳನ್ನೂ ಸಂಹಾರಮಾಡಿದುದಕ್ಕಾಗಿ ಪಾಂಡವರನ್ನೂ ವಿನಾಶಮಾಡಬೇಕೆಂದು ನೀನು ಯಾವಾಗಲೂ ಬುದ್ಧಿಯಲ್ಲಿ ಯೋಚಿಸಬೇಡ. ನಿನಗೆ ಅಂತಹ ಬುದ್ಧಿಯುಂಟಾಗದಿರಲಿ.

**ಶಕ್ತಾ ಚಾಸಿ ಮಹಾಭಾಗೇ ಪೃಥಿವೀಂ ಸಚರಾಚರಮ್ ।**
**ಚಕ್ಷುಷಾ ಕ್ರೋಧದೀಪ್ತೇನ ನಿರ್ದಗ್ಧುಂ ತಪಸೋ ಬಲಾತ್ ॥೬೫॥**

ಮಹಾಭಾಗಳೇ! ನಿನ್ನ ತಪಸ್ಸಿನ ಬಲದಿಂದಾಗಿ ಚರಾಚರಸಹಿತವಾದ ಈ ಭೂಮಂಡಲವನ್ನೇ ನೀನು ಕ್ರೋಧದೀಪ್ತವಾದ ನಿನ್ನ ಕಣ್ಣುಗಳಿಂದ ದಹಿಸಲು ಸಮರ್ಥಳಾಗಿರುವೆ.”



ವಾಸುದೇವನು ಹೇಳಿದ ಮಾತನ್ನು ಕೇಳಿ ಗಾಂಧಾರಿಯು ಹೇಳಿದಳು :

ಏವಮೇತನ್ಮಹಾಬಾಹೋ ಯಥಾ ವದಸಿ ಕೇಶವ ।
ಆಧಿಭಿರ್ದಹ್ಯಮಾನಾಯಾ ಮತಿಃ ಸಂಚಲಿತಾ ಮಮ ।
ಸಾ ಮೇ ವ್ಯವಸ್ಥಿತಾ ಶ್ರುತ್ವಾ ತವ ವಾಕ್ಯಂ ಜನಾರ್ದನ ॥೬೬॥

“ಕೇಶವ! ನೀನು ಹೇಗೆ ಹೇಳಿದೆಯೋ ಅದು ಹಾಗೆಯೇ ಸರಿ. (ನಾನು ಈ ಭೂಮಂಡಲವನ್ನೇ ದಹಿಸಬಲ್ಲೆನು.) ಪುತ್ರರ ಮರಣ

ದಿಂದುಂಟಾದ ಮನೋವ್ಯಥೆಯಿಂದ ನಾನು ಪರಿತಪಿಸುತ್ತಿದ್ದೆನು. ಈ ಕಾರಣದಿಂದಲೇ ನನ್ನ ಮನಸ್ಸೂ ವಿಚಲಿತವಾಗಿದ್ದಿತು. (ಪಾಂಡವರಿಗೆ ಅನಿಷ್ಟವನ್ನುಂಟುಮಾಡುವ ವಿಷಯದಲ್ಲಿ ಡೋಲಾಯಮಾನವಾಗಿದ್ದಿತು.) ಹಾಗೆ ವಿಚಲಿತವಾಗಿದ್ದ ನನ್ನ ಬುದ್ಧಿಯು ನಿನ್ನ ಮಾತನ್ನು ಕೇಳಿದನಂತರ ಸ್ಥಿರವಾಗಿ ನಿಂತಿತು. (ಈಗ ನಾನು ನೀನು ಹೇಳಿದಂತೆ ಪಾಂಡವರಿಗೆ ಅನಿಷ್ಟವನ್ನು ಬಯಸುವುದಿಲ್ಲ.)

**ರಾಜ್ಞಸ್ತ್ವನ್ಧಸ್ಯ ವೃದ್ಧಸ್ಯ ಹತಪುತ್ರಸ್ಯ ಕೇಶವ ।**
**ತ್ವಂ ಗತಿಃ ಸಹಿತೈರ್ವೀರೈಃ ಪಾಣ್ಡವೈರ್ದ್ವಿಪದಾಂ ವರ ॥೬೭॥**

ಮನುಜಶ್ರೇಷ್ಠನಾದ ಕೇಶವನೇ! ವೃದ್ಧನಾಗಿರುವ, ಅಂಧನಾಗಿರುವ, ಮಕ್ಕಳೆಲ್ಲರನ್ನೂ ಕಳೆದುಕೊಂಡಿರುವ ಈ ರಾಜನಿಗೆ ವೀರಪಾಂಡವರೊಡನೆ ನೀನೇ ಆಶ್ರಯದಾತನಾಗು."

ಜನಮೇಜಯ! ಇಷ್ಟು ಮಾತ್ರ ಮಾತನಾಡಿ ಪುತ್ರಶೋಕದಿಂದ ಪರಿತಪಿಸುತ್ತಿದ್ದ ಗಾಂಧಾರಿಯು ಸೀರೆಯ ಸೆರಗಿನಿಂದ ಮುಖವನ್ನು ಮುಚ್ಚಿ ಕೊಂಡು ಗಟ್ಟಿಯಾಗಿ ಅಳತೊಡಗಿದಳು.

ಅನಂತರ ಪ್ರಭುವಾದ, ಮಹಾಬಾಹುವಾದ ಕೇಶವನು ಶೋಕದಿಂದ ಸಂಕಟಪಡುತ್ತಿದ್ದ ಗಾಂಧಾರಿಯನ್ನು ಹೇತುಕಾರಣಯುಕ್ತವಾದ (ಯುಕ್ತಿ ಯುಕ್ತವಾದ) ಮಾತುಗಳಿಂದ ಸಮಾಧಾನಪಡಿಸಿದನು. ಗಾಂಧಾರಿಯನ್ನೂ ಧೃತರಾಷ್ಟ್ರನನ್ನೂ ಸಮಾಧಾನಪಡಿಸಿದನಂತರ ಮಾಧವನು ಆ ವೇಳೆಯಲ್ಲಿ ಅಶ್ವತ್ಥಾಮನು ತನ್ನ ಮನಸ್ಸಿನಲ್ಲಿ ಮಾಡಿಕೊಂಡ ಸಂಕಲ್ಪವನ್ನು ತಿಳಿದುಕೊಂಡನು.

ಒಡನೆಯೇ ಕೇಶವನು ತ್ವರೆಯಿಂದ ಮೇಲೆದ್ದು ವ್ಯಾಸರ ಪಾದಗಳಲ್ಲಿ ತಲೆಬಾಗಿ ನಮಸ್ಕರಿಸಿ ಧೃತರಾಷ್ಟ್ರನೊಡನೆ ಹೇಳಿದನು :

"ಕುರುಶ್ರೇಷ್ಠನೇ! ನಾನು ಇಲ್ಲಿಂದ ಹೊರಡಲು ನಿನ್ನ ಅನುಮತಿ ಯನ್ನು ಪ್ರಾರ್ಥಿಸುತ್ತಿದ್ದೇನೆ. ಮನಸ್ಸನ್ನು ಶೋಕದಲ್ಲಿ ಮುಳುಗಿಸಬೇಡ. ದ್ರೋಣರ ಮಗನಾದ ಅಶ್ವತ್ಥಾಮನ ಮನಸ್ಸಿನಲ್ಲಿ ಪಾಪಪೂರ್ಣವಾದ

ಸಂಕಲ್ಪದ ಅಂಕುರವಾಗಿದೆ. ಈ ಕಾರಣದಿಂದಲೇ ನಾನು ಅವಸರದಿಂದ ಮೇಲೆದ್ದೆನು. ಈ ರಾತ್ರಿಯಲ್ಲಿ ಪಾಂಡವರ ವಧೆಮಾಡಬೇಕೆಂಬ ಬುದ್ಧಿಯನ್ನು ಅವನು ಪ್ರಕಟಗೊಳಿಸಿದ್ದಾನೆ."

ಶ್ರೀಕೃಷ್ಣನ ಮಾತನ್ನು ಕೇಳಿದೊಡನೆಯೇ ಮಹಾಬಾಹುವಾದ ಧೃತರಾಷ್ಟ್ರನು ಗಾಂಧಾರಿಯೊಡನೆ ಕೇಶವನನ್ನು ಕುರಿತು ಈ ಮಾತುಗಳನ್ನು ಹೇಳಿದನು :

**ಶೀಘ್ರಂ ಗಚ್ಛ ಮಹಾಬಾಹೋ ಪಾಣ್ಡವಾನ್ಪರಿಪಾಲಯ ।**
**ಭೂಯಸ್ತ್ವಯಾ ಸಮೇಷ್ಯಾಮಿ ಕ್ಷಿಪ್ರಮೇವ ಜನಾರ್ದನ ॥೭೫॥**

"ಮಹಾಬಾಹುವೇ! ಶ್ರೀಕೃಷ್ಣ! ಶೀಘ್ರವಾಗಿ ಹೋಗು. ಪಾಂಡವರನ್ನು ರಕ್ಷಿಸು. ನಾನು ಬಹಳ ಶೀಘ್ರದಲ್ಲಿಯೇ ಪುನಃ ನಿನ್ನನ್ನು ಸಂಧಿಸುತ್ತೇನೆ."

ಧೃತರಾಷ್ಟ್ರನ ಅನುಮತಿಯನ್ನು ಪಡೆದು ಶ್ರೀಕೃಷ್ಣನು ಅತಿತ್ವರೆಯಿಂದ ದಾರುಕನೊಡನೆ ಪಾಂಡವರಿದ್ದೆಡೆಗೆ ಪ್ರಯಾಣಮಾಡಿದನು.

ವಾಸುದೇವನು ಪ್ರಯಾಣಮಾಡಿದನಂತರ ಜನೇಶ್ವರನಾದ ಧೃತರಾಷ್ಟ್ರ ರಾಜನನ್ನು ಸಕಲಲೋಕನಮಸ್ಕೃತರಾದ, ಮಹಾತ್ಮರಾದ ವ್ಯಾಸರು ಸಮಾಧಾನಗೊಳಿಸಿದರು. ಧರ್ಮಾತ್ಮನಾದ ವಾಸುದೇವನೂ ಕೃತಕೃತ್ಯನಾಗಿ ಹಸ್ತಿನಾಪುರದಿಂದ ಪಾಂಡವರನ್ನು ನೋಡುವ ಸಲುವಾಗಿ ಶಿಬಿರವನ್ನು ಕುರಿತು ಪ್ರಯಾಣಮಾಡಿದನು. ಶಿಬಿರಕ್ಕೆ ಆಗಮಿಸಿ ಆ ರಾತ್ರಿಯಲ್ಲಿ ಪಾಂಡವರನ್ನು ಸಂಧಿಸಿ ಹಸ್ತಿನಾವತಿಯಲ್ಲಿ ನಡೆದುದೆಲ್ಲವನ್ನೂ ಅವರೊಡನೆ ಹೇಳಿ ಅವರೊಡನೆ ಸಾವಧಾನದಿಂದಿದ್ದನು."

೬೩ನೆಯ ಅಧ್ಯಾಯವು ಮುಗಿಯಿತು.

೬೪ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ದುರ್ಯೋಧನನು ಸಂಜಯನ ಸಮ್ಮುಖದಲ್ಲಿ ವಿಲಪಿಸಿದುದು: ವಾಹಕರ ಮೂಲಕವಾಗಿ ತನ್ನ ಸ್ನೇಹಿತರಿಗೆ ವಾರ್ತಾಸಂದೇಶನೀಡಿದುದು

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ನನ್ನ ಮಗನು ಭೀಮಸೇನನಿಂದ ತೊಡೆಗಳನ್ನು ಮುರಿಸಿ ಕೊಂಡು ಭೂಮಿಯಲ್ಲಿ ಬಿದ್ದನು. ಬಳಿಕ ಭೀಮಸೇನನು ಎಡಗಾಲಿನಿಂದ ಅವನ ತಲೆಯನ್ನು ಮೆಟ್ಟಿದನು. ತನ್ನ ಬಲದ ವಿಷಯದಲ್ಲಿ ಮಹಾಭಿಮಾನಿ ಯಾಗಿದ್ದ ನನ್ನ ಮಗನು ಆ ಸಮಯದಲ್ಲಿ ಏನು ಹೇಳಿದನು? ದುರ್ಯೋಧನನು ಮಹಾಕೋಪಿ. ಪಾಂಡವರ ವಿಷಯದಲ್ಲಿ ಬದ್ಧವೈರಿ ಯಾಗಿದ್ದನು. ಅಂತಹವನು ಯುದ್ಧಭೂಮಿಯಲ್ಲಿ ಮಹಾವ್ಯಸನವು ಪ್ರಾಪ್ತವಾದಾಗ ಏನೆಂದು ಹೇಳಿದನು?"

"ಮಹಾರಾಜ! ಅಂತಹ ಮಹಾವ್ಯಸನವು ಪ್ರಾಪ್ತವಾದನಂತರ ಭಗ್ನೋರುವಾದ ದುರ್ಯೋಧನನು ಏನು ಹೇಳಿದನೆಂಬುದನ್ನು ವಿಶದವಾಗಿ ಹೇಳುವೆನು; ಕೇಳು.

ಭಗ್ನೋರುವಾದ ದುರ್ಯೋಧನನು ಕೆಳಕ್ಕೆ ಬಿದ್ದೊಡನೆಯೇ ಧೂಳಿನಿಂದ ಮುಚ್ಚಿಹೋದನು. ಕೆದರಿಹೋಗಿದ್ದ ತಲೆಗೂದಲನ್ನು ಸರಿಮಾಡಿಕೊಳ್ಳುತ್ತಾ ಹತ್ತು ದಿಕ್ಕುಗಳನ್ನೂ ನೋಡಿದನು. ಕೆದರಿದ್ದ ತಲೆಗೂದಲುಗಳನ್ನು ಪ್ರಯತ್ನಪೂರ್ವಕವಾಗಿ ಬಂಧಿಸಿ ಸರ್ಪದಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದನು. ಕೋಪದಿಂದ ಕೂಡಿದ (ಕೆಂಪಾದ) ಮತ್ತು ಕಣ್ಣೀರಿನಿಂದ ತುಂಬಿದ ಕಣ್ಣುಗಳಿಂದ ನನ್ನ ಕಡೆಗೆ ನೋಡಿದನು. ಮದೋನ್ಮತ್ತವಾದ ಆನೆಯಂತೆ ತನ್ನೆರಡು ಕೈಗಳನ್ನೂ ನೆಲದ ಮೇಲೆ ಬಡಿಯುತ್ತಾ, ಚದುರಿಹೋಗುತ್ತಿದ್ದ ತಲೆಗೂದಲುಗಳನ್ನು ಅಳ್ಳಾಡಿಸುತ್ತಾ, ಹಲ್ಲುಗಳಿಂದ ಹಲ್ಲುಗಳನ್ನು ಕಟ-ಕಟನೆ ಕಡಿಯುತ್ತಾ, ಪಾಂಡವಜ್ಯೇಷ್ಠನಾದ ಧರ್ಮರಾಜನನ್ನು ನಿಂದಿಸುತ್ತಾ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ನನ್ನೊಡನೆ ಈ ಮಾತುಗಳನ್ನು ಹೇಳಿದನು :

"ಸಂಜಯ! ಶಾಂತನುನಂದನನಾದ ಭೀಷ್ಮ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಕರ್ಣ, ಕೃಪರು, ಶಕುನಿ, ಶಸ್ತ್ರವಿದ್ಯೆಗಳಲ್ಲಿ ಶ್ರೇಷ್ಠರಾದ ದ್ರೋಣರು, ಅಶ್ವತ್ಥಾಮಾ, ಶಲ್ಯ, ಶೂರನಾದ ಕೃತವರ್ಮಾ–ಇವರೆಲ್ಲರೂ ನನಗೆ ರಕ್ಷಕರಾಗಿದ್ದರೂ ನಾನು ಇಂದು ಇಂತಹ ದುರವಸ್ಥೆಯನ್ನು ಪಡೆದುಕೊಂಡಿರುತ್ತೇನೆ. ಕಾಲೋ ಹಿ **ದುರತಿಕ್ರಮಃ**–ನಿಶ್ಚಯವಾಗಿಯೂ ಕಾಲವು ಅನತಿಕ್ರಮಣೀಯವಾದುದು.

ಮಹಾಬಾಹುವೇ! ಸಂಜಯ! ಹನ್ನೊಂದು ಅಕ್ಷೌಹಿಣೀಸೈನ್ಯಕ್ಕೆ ಒಡೆಯನಾಗಿದ್ದ ನಾನು ಇಂದು ಇಂತಹ ದುರವಸ್ಥೆಯಲ್ಲಿದ್ದೇನೆ. ಅಂತಹ ಕಾಲವು ಬರುವುದಾಗಿದ್ದರೆ ಅದನ್ನು ಅತಿಕ್ರಮಿಸಿ ನಡೆಯಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಈ ನನ್ನ ಪಕ್ಷದಲ್ಲಿ ಯಾರಾದರೂ ಯೋಧರು ಜೀವಂತವಾಗಿ ಉಳಿದಿದ್ದರೆ ಅವರಿಗೆ ಭೀಮಸೇನನು ಗದಾಯುದ್ಧದ ನಿಯಮಗಳನ್ನು ಉಲ್ಲಂಘಿಸಿ ಯಾವ ರೀತಿಯಲ್ಲಿ ನನ್ನನ್ನು ಸಂಹರಿಸಿದನೆಂಬ ವಿಷಯವನ್ನು ತಿಳಿಸಬೇಕು.

ಸಂಜಯ! ಪಾಂಡವರು ಭೂರಿಶ್ರವಸ, ಕರ್ಣ, ಭೀಷ್ಮ ಮತ್ತು ಶ್ರೀಮಂತರಾದ ದ್ರೋಣರು–ಇವರ ವಿಷಯದಲ್ಲಿ ಅತ್ಯಂತಕ್ರೂರವಾದ ಕಾರ್ಯಗಳನ್ನೆಸಗಿದ್ದಾರೆ. ಅಕೀರ್ತಿಕರವಾದ ಈ ಕ್ರೂರಕರ್ಮಗಳನ್ನು ಕ್ರೂರಿಗಳಾದ ಪಾಂಡವರು ಮಾಡಿರುತ್ತಾರೆ. ಈ ಕಾರ್ಯದಿಂದವರು ಸತ್ಪುರುಷರ ತಿರಸ್ಕಾರಕ್ಕೆ ಪಾತ್ರರಾಗುವರೆಂಬುದು ನನ್ನ ಅಭಿಪ್ರಾಯವಾಗಿದೆ.

**ಕಾ ಪ್ರೀತಿಃ ಸತ್ತ್ವಯುಕ್ತಸ್ಯ ಕೃತ್ವೋಪಧಿಕೃತಂ ಜಯಮ್ ।**
**ಕೋ ವಾ ಸಮಯಭೇತ್ತಾರಂ ಬುಧಃ ಸಮ್ಮನ್ತುಮರ್ಹತಿ ॥೧೩॥**

ವಂಚನೆಯ ಮೂಲಕವಾಗಿ ಪಡೆದ ವಿಜಯವು ಸತ್ತ್ವಶಾಲಿಯಾದ ಯಾವನಿಗೆ ತಾನೇ ಪ್ರೀತಿಯನ್ನುಂಟುಮಾಡುತ್ತದೆ? ನಿಯಮಗಳನ್ನು ಉಲ್ಲಂಘಿಸುವವನನ್ನು ಯಾವ ವಿದ್ವಾಂಸನು ತಾನೇ ಸಮ್ಮಾನಿಸಲು ಇಚ್ಛಿಸುತ್ತಾನೆ?

ಪಾಪಿಷ್ಠನಾದ, ಪಾಂಡುಪುತ್ರನಾದ ವೃಕೋದರನು ಅಧರ್ಮ

ಯುದ್ಧದ ಮೂಲಕವಾಗಿ ವಿಜಯವನ್ನು ಗಳಿಸಿ ಸಂತೋಷಿಸುತ್ತಿರುವಂತೆ ಯಾವ ಪಂಡಿತನು ಅಧರ್ಮಮಾರ್ಗದಿಂದ ವಿಜಯವನ್ನು ಗಳಿಸಿ ಸಂತೋಷಪಡುತ್ತಾನೆ? ಕ್ಷುದ್ರನಾದ ಭೀಮಸೇನನು ಭಗ್ನೋರುವಾಗಿ ಭೂಮಿಯ ಮೇಲೆ ಬಿದ್ದಿದ್ದ ನನ್ನ ತಲೆಯ ಮೇಲೆ ಕಾಲಿಟ್ಟನು. ಇದಕ್ಕಿಂತಲೂ ವಿಚಿತ್ರವಾದುದು ಪ್ರಪಂಚದಲ್ಲಿ ಬೇರಾವುದಿದೆ?

**ಪ್ರತಪನ್ತಂ ಶ್ರಿಯಾ ಜುಷ್ಟಂ ವರ್ತಮಾನಂ ಚ ಬನ್ಧುಷು ।**
**ಏವಂ ಕುರ್ಯಾನ್ನರೋ ಯೋ ಹಿ ಸ ವೈ ಸಂಜಯ ಪೂಜಿತಃ ॥**

ಸಂಜಯ! ತೇಜಸ್ಸಿನಿಂದ ಪ್ರತಪಿಸುತ್ತಿರುವ, ಸಂಪತ್ತಿನಿಂದ ಕೂಡಿರುವ ಮತ್ತು ಬಂಧುಗಳ ಮಧ್ಯದಲ್ಲಿರುವ ವೀರಪುರುಷನೊಬ್ಬನಿಗೆ ಯಾವ ವೀರನು ಹೀಗೆ ಮಾಡುವನೋ ಅಂತಹ ವೀರಪುರುಷನು ಸಮ್ಮಾನ್ಯನೇ ಸರಿ. (ಸಾಯುತ್ತಿರುವ ನನ್ನ ತಲೆಯ ಮೇಲೆ ಕಾಲಿಟ್ಟರೆ ಅದೂ ಒಂದು ಪೌರುಷವೇ?)

ನನ್ನ ತಂದೆ-ತಾಯಿಗಳಿಬ್ಬರೂ ಯುದ್ಧಧರ್ಮವನ್ನು ತಿಳಿದವರಾಗಿರುತ್ತಾರೆ. ಅವರಿಬ್ಬರೂ ನನ್ನ ಅವಸಾನದ ವಾರ್ತೆಯನ್ನು ಕೇಳಿ ದುಃಖಪೀಡಿತರಾಗಿರುತ್ತಾರೆ. ನನ್ನ ಮಾತಿನಿಂದ ನೀನು ಈ ನನ್ನ ವಿಜ್ಞಾಪನೆಯನ್ನು ಅವರಿಗೆ ತಿಳಿಸಬೇಕು. “ನಾನು ಯಜ್ಞಮಾಡಿದ್ದೇನೆ. ಭರಣ ಮತ್ತು ಪೋಷಣೆಗಳಿಗೆ ಯೋಗ್ಯರಾದವರನ್ನು (ಭೃತ್ಯರನ್ನೂ–ಆಶ್ರಿತರನ್ನೂ) ಸಾಕಿ-ಸಲಹಿದ್ದೇನೆ. ಸಾಗರಾಂತವಾದ ಭೂಮಿಯನ್ನು ಚೆನ್ನಾಗಿ ಪರಿಪಾಲನೆ ಮಾಡಿದ್ದೇನೆ. ಜೀವಿಸಿದ್ದ ಶತ್ರುಗಳ ತಲೆಗಳನ್ನೇ ನಾನು ನನ್ನ ಕಾಲುಗಳಿಂದ ಮೆಟ್ಟಿದ್ದೇನೆ. ಯಥಾಶಕ್ತಿದಾನಮಾಡಿದ್ದೇನೆ. ಮಿತ್ರರಿಗೆ ಪ್ರಿಯವನ್ನು ಮಾಡಿದ್ದೇನೆ. ನನ್ನ ಶತ್ರುಗಳೆಲ್ಲರನ್ನೂ ಬಾಧೆಪಡಿಸಿದ್ದೇನೆ. ನನ್ನ ಹಾಗೆ ಸುಖಾಂತ್ಯವನ್ನು ಪಡೆದಿರತಕ್ಕವರು ಮತ್ತಾರಿದ್ದಾರೆ?

ನಾನು ನನ್ನೆಲ್ಲ ಬಂಧುಗಳನ್ನೂ ಸಮ್ಮಾನಿಸಿದ್ದೇನೆ. ನನ್ನ ಅಧೀನರಾದ ರಾಜರನ್ನು ಗೌರವಿಸಿದ್ದೇನೆ. ಧರ್ಮಾರ್ಥ-ಕಾಮಗಳನ್ನು ಸೇವಿಸಿದ್ದೇನೆ. ನನಗಿಂತಲೂ ಸುಖಾಂತವನ್ನು ಪಡೆದುಕೊಂಡಿರತಕ್ಕವರು ಮತ್ತಾರಿದ್ದಾರೆ? ದೊಡ್ಡ-ದೊಡ್ಡ ರಾಜರನ್ನೇ ನನ್ನ ಆಜ್ಞಾಧಾರಕರನ್ನಾಗಿ ಮಾಡಿ

ಕೊಂಡಿದ್ದೇನೆ. ಅವರಿಂದ ಸುದುರ್ಲಭವಾದ ಗೌರವವನ್ನೂ ಪಡೆದುಕೊಂಡಿದ್ದೇನೆ. ಆಜಾನೇಯವಾದ ಕುದುರೆಗಳ ಮೂಲಕವಾಗಿ ಪ್ರಯಾಣ ಮಾಡಿದ್ದೇನೆ. ನನಗಿಂತಲೂ ಸುಖಾಂತವನ್ನು ಪಡೆದಿರತಕ್ಕವರು ಮತ್ತಾರಿದ್ದಾರೆ? ಇತರ ರಾಷ್ಟ್ರಗಳ ಮೇಲೆ ಆಕ್ರಮಣ ನಡೆಸಿ ಅವುಗಳನ್ನು ನನ್ನ ರಾಷ್ಟ್ರಕ್ಕೆ ಸೇರಿಸಿಕೊಂಡಿರುತ್ತೇನೆ. ಸೇವಕರೋಪಾದಿಯಲ್ಲಿ ಆ ರಾಜರು ನನ್ನ ಸೇವೆ ಮಾಡಿರುತ್ತಾರೆ. ನನಗೆ ಪ್ರಿಯರಾದವರಿಗೆ ಒಳ್ಳೆಯದನ್ನು ಮಾಡಿದ್ದೇನೆ. ನನಗಿಂತಲೂ ಒಳ್ಳೆಯ ಅಂತವನ್ನು ಪಡೆದಿರತಕ್ಕವರು ಮತ್ತಾರಿದ್ದಾರೆ? ವಿಧಿಪೂರ್ವಕವಾಗಿ ವೇದಗಳನ್ನು ಅಧ್ಯಯನಮಾಡಿದ್ದೇನೆ. ನಾನಾವಿಧವಾದ ದಾನಗಳನ್ನು ಕೊಟ್ಟಿದ್ದೇನೆ. ರೋಗರಹಿತವಾದ ಆಯುಷ್ಯವನ್ನು ಪಡೆದಿದ್ದೇನೆ. ಸ್ವಧರ್ಮಾನುಷ್ಠಾನದಿಂದ ಅನೇಕ ಪುಣ್ಯಲೋಕಗಳನ್ನು ಪಡೆದುಕೊಂಡಿರುತ್ತೇನೆ. ನನಗಿಂತಲೂ ಒಳ್ಳೆಯ ಅಂತವನ್ನು ಪಡೆದಿರತಕ್ಕವರು ಮತ್ತಾರಿದ್ದಾರೆ? ಅದೃಷ್ಟವಶಾತ್ ನಾನು ಯಾವಾಗಲೂ ಯುದ್ಧದಲ್ಲಿ ಪರಾಜಯಹೊಂದಲಿಲ್ಲ. ಸೇವಕರಂತೆ ಯಾವಾಗಲೂ ಶತ್ರುಗಳಿಗೆ ಶರಣಾಗತನಾಗಲಿಲ್ಲ. ಸೌಭಾಗ್ಯದ ಕಾರಣದಿಂದ ನನ್ನಲ್ಲಿ ವಿಪುಲವಾದ ಅಕ್ಷಯವಾದ ಐಶ್ವರ್ಯವೂ ಇದ್ದಿತು. ನಾನು ಮರಣಹೊಂದಿದನಂತರವೇ ಅದು ಶತ್ರುಗಳ ವಶವಾಯಿತು. ಸ್ವಧರ್ಮಾನುಷ್ಠಾನದಲ್ಲಿಯೇ ನಿರತರಾದ ಕ್ಷತ್ರಿಯಬಂಧುಗಳಿಗೆ ಯಾವುದು ಇಷ್ಟವೋ ಅದನ್ನು ನಾನು ಪಡೆದುಕೊಂಡಿರುತ್ತೇನೆ. ಯುದ್ಧಮಾಡುವಾಗಲೇ ನಿಧನಹೊಂದಿದ್ದೇನೆ. ನನಗಿಂತಲೂ ಒಳ್ಳೆಯ ಅಂತವನ್ನು ಪಡೆದಿರತಕ್ಕವರು ಮತ್ತಾರಿದ್ದಾರೆ? ಅದೃಷ್ಟವಶಾತ್ ನಾನು ವೈರಭಾವದಿಂದ ಪರಿವರ್ತನೆ ಹೊಂದಲಿಲ್ಲ. (ಶತ್ರುವಿನೊಡನೆ ಸಂಧಾನಮಾಡಿಕೊಳ್ಳಲಿಲ್ಲ.) ಸಾಮಾನ್ಯಮನುಷ್ಯನು ಜಯಿಸಲ್ಪಡುವಂತೆ ನಾನು ಜಯಿಸಲ್ಪಡಲಿಲ್ಲ. ಅದೃಷ್ಟವಶಾತ್ ನಾನು ಯಾವುದೇ ರೀತಿಯ ದುರ್ವಿಚಾರವನ್ನೂ ಆಶ್ರಯಿಸಿ (ಅಧರ್ಮಮಾರ್ಗದಲ್ಲಿ ಬುದ್ಧಿಯನ್ನು ಹರಿಸಿ) ಪರಾಜಿತನಾಗಲಿಲ್ಲ.

**ಸುಪ್ತಂ ವಾಥ ಪ್ರಮತ್ತಂ ವಾ ಯಥಾ ಹನ್ಯಾದ್ವಿಷೇಣ ವಾ ।**
**ಏವಂ ವ್ಯುತ್ಕ್ರಾನ್ತಧರ್ಮೇಣ ವ್ಯುತ್ಕ್ರಮ್ಯ ಸಮಯಂ ಹತಃ ॥೨೭॥**

ಮಲಗಿದ್ದವನನ್ನು ಕೊಲ್ಲುವಂತೆ, ಮತ್ತೇರಿದವನನ್ನು ಕೊಲ್ಲುವಂತೆ

ಅಥವಾ ವಿಷವಿಟ್ಟು ಕೊಲ್ಲುವಂತೆ–ಧರ್ಮವನ್ನು ಮೀರಿ ಭೀಮಸೇನನು ಗದಾಯುದ್ಧದ ಮರ್ಯಾದೆಯನ್ನೇ ಉಲ್ಲಂಘಿಸಿ ನನ್ನನ್ನು ಸಂಹರಿಸಿದನು.

ಸಂಜಯ! ಮಹಾಭಾಗನಾದ ಅಶ್ವತ್ಥಾಮನಿಗೂ, ಸಾತ್ವತವಂಶಜನಾದ ಕೃತವರ್ಮನಿಗೂ ಮತ್ತು ಶಾರದ್ವತರಾದ ಕೃಪರಿಗೂ ನನ್ನ ಆಣತಿಯಂತೆ ಈ ಮಾತನ್ನು ಹೇಳಬೇಕು.

**ಅಧರ್ಮೇಣ ಪ್ರವೃತ್ತಾನಾಂ ಪಾಣ್ಡವಾನಾಮನೇಕಶಃ ।**
**ವಿಶ್ವಾಸಂ ಸಮಯಘ್ನಾನಾಂ ನ ಯೂಯಂ ಗನ್ತುಮರ್ಹಥ ॥೨೯॥**

'ಅಧರ್ಮಪ್ರವೃತ್ತರಾದ, ಹಲವು ಬಾರಿ ಯುದ್ಧನಿಯಮಗಳನ್ನು ಉಲ್ಲಂಘಿಸಿರುವ ಪಾಂಡವರ ವಿಷಯದಲ್ಲಿ ನೀವು ಯಾವುದೇ ಕಾರಣ ದಿಂದಲೂ ವಿಶ್ವಾಸವನ್ನಿಡಬೇಡಿರಿ'–ಈ ನನ್ನ ಮಾತನ್ನು ನೀನು ಆ ಮೂವರಿಗೂ ತಿಳಿಸಬೇಕು"–ಎಂಬುದಾಗಿ ದುರ್ಯೋಧನನು ನನ್ನೊಡನೆ ಹೇಳಿದನು.

ಬಳಿಕ ಸತ್ಯಪರಾಕ್ರಮಿಯಾದ ದುರ್ಯೋಧನರಾಜನು ಸಂದೇಶ ವಾಹಕರಾದ ದೂತರೊಡನೆಯೂ ಈ ಮಾತುಗಳನ್ನು ಹೇಳಿದನು :

"ಭೀಮಸೇನನು ನನ್ನನ್ನು ರಣಭೂಮಿಯಲ್ಲಿ ಅಧರ್ಮದಿಂದ ಸಂಹಾರಮಾಡಿದ್ದಾನೆ. ಹಾಗೆ ಅವಸಾನಹೊಂದಿದ ನಾನು ಸ್ವರ್ಗಗತರಾದ ದ್ರೋಣರನ್ನೂ, ಕರ್ಣ-ಶಲ್ಯರನ್ನೂ, ಮಹಾವೀರ್ಯನಾದ ವೃಷಸೇನನನ್ನೂ, ಸುಬಲನ ಮಗನಾದ ಶಕುನಿಯನ್ನೂ, ಮಹಾವೀರ್ಯನಾದ ಜಲಸಂಧ ನನ್ನೂ, ರಾಜನಾದ ಭಗದತ್ತನನ್ನೂ, ಮಹಾಧನುಷ್ಮಂತನಾದ ಸೋಮದತ್ತ ನನ್ನೂ, ಸಿಂಧುದೇಶದ ರಾಜನಾದ ಜಯದ್ರಥನನ್ನೂ, ದುಃಶಾಸನಪ್ರಮುಖ ರಾದ ಆತ್ಮಸಮಾನರಾದ ನನ್ನ ಅನುಜರನ್ನೂ, ಮಹಾಪರಾಕ್ರಮಿಯಾದ ದೌಃಶಾಸನಿ ಯನ್ನೂ, ನನ್ನ ಪುತ್ರನಾದ ಲಕ್ಷ್ಮಣನನ್ನೂ – ಇವರೇ ಅಲ್ಲದೇ ನನ್ನ ಕಡೆಯ ಸಾವಿರಾರು ಮಂದಿ ಸುಹೃದರನ್ನೂ ಅನುಸರಿಸಿ ಅವರ ಹಿಂದೆ–ತನ್ನ ಸಂಗಡಿಗರೆಲ್ಲರನ್ನೂ ಕಳೆದುಕೊಂಡ ದಾರಿಹೋಕನಂತೆ–ಏಕಾಕಿ ಯಾಗಿ ಹೋಗುತ್ತೇನೆ. ತನ್ನ ನೂರು ಮಂದಿ ಸಹೋದರರೂ ಮತ್ತು ಪತಿಯೂ ಹತರಾದರೆಂಬ ವಾರ್ತೆಯನ್ನು ಕೇಳಿದನಂತರ ದುಃಖಾರ್ತಳಾಗಿ ಗೋಳಾಡುವ ದುಃಶಲೆಯು ಮುಂದೆ ಹೇಗಿದ್ದಾಳು? ಗಂಡಂದಿರನ್ನು

ಕಳೆದುಕೊಂಡು ದುಃಖಿತಪ್ತರಾಗಿ ಗೋಳಾಡುತ್ತಿರುವ ಸೊಸೆಯರಿಂದಲೂ ತಮ್ಮ ಮಕ್ಕಳ ಸೊಸೆಯರಿಂದಲೂ ಪರಿವೃತನಾದ, ಗಾಂಧಾರೀಸಹಿತನಾದ, ವೃದ್ಧನಾದ ನನ್ನ ತಂದೆಯು ಮುಂದೆ ಯಾವ ಗತಿಯನ್ನು ಹೊಂದುತ್ತಾನೆ? ಪುತ್ರನನ್ನೂ, ಪತಿಯನ್ನೂ ಕಳೆದುಕೊಂಡಿರುವ ವಿಶಾಲಲೋಚನೆಯಾದ, ಕಲ್ಯಾಣಮಯಿಯಾದ ಲಕ್ಷ್ಮಣನ ತಾಯಿಯು (ನನ್ನ ಭಾರ್ಯೆಯು) ನಿಶ್ಚಯವಾಗಿಯೂ ಈ ದುಃಖವನ್ನು ತಾಳಲಾರದೇ ಬಹಳ ಬೇಗ ವಿನಾಶ ಹೊಂದುತ್ತಾಳೆ.

**ಯದಿ ಜಾನಾತಿ ಚಾರ್ವಾಕಃ ಪರಿವ್ರಾಡ್ವಾಗ್ವಿಶಾರದಃ ।**
**ಕರಿಷ್ಯತಿ ಮಹಾಭಾಗೋ ಧ್ರುವಂ ಚಾಪಚಿತಿಂ ಮಮ ॥೩೮॥**

ಸಂನ್ಯಾಸಿಯ ವೇಷವನ್ನು ಧರಿಸಿ ಪ್ರಪಂಚಪರ್ಯಟನಮಾಡುತ್ತಿರುವ, ಮಾತನಾಡುವುದರಲ್ಲಿ ಮಹಾಕುಶಲನಾದ *ಚಾರ್ವಾಕನೇನಾದರೂ ನನ್ನ ಈ ಅವಸ್ಥೆಯನ್ನು ತಿಳಿದಿದ್ದೇ ಆದರೆ ಆ ಮಹಾನುಭಾವನು ನಿಶ್ಚಯವಾಗಿಯೂ ಇದಕ್ಕೆ ತಕ್ಕ ಪ್ರತೀಕಾರಮಾಡುತ್ತಾನೆ.

**ಸಮನ್ತಪಞ್ಚಕೇ ಪುಣ್ಯೇ ತ್ರಿಷು ಲೋಕೇಷು ವಿಶ್ರುತೇ ।**
**ಅಹಂ ನಿಧನಮಾಸಾದ್ಯ ಲೋಕಾನ್ಪ್ರಾಪ್ಸ್ಯಾಮಿ ಶಾಶ್ವತಾನ್ ॥೩೯॥**

ಮೂರು ಲೋಕಗಳಲ್ಲಿಯೂ ವಿಖ್ಯಾತವಾದ, ಪುಣ್ಯತಮವಾದ ಸಮಂತಪಂಚಕಕ್ಷೇತ್ರದಲ್ಲಿ ನಿಧನವನ್ನು ಹೊಂದಿರುವ ನಾನು ಶಾಶ್ವತವಾದ ಲೋಕಗಳನ್ನು ಪಡೆದುಕೊಳ್ಳುತ್ತೇನೆ."

ಹೀಗೆ ಹೇಳಿದ ದುರ್ಯೋಧನನು ಮರಣಸಂಕಟದಿಂದಾಗಿ ಗಟ್ಟಿಯಾಗಿ ರೋದನಮಾಡಲು ಉಪಕ್ರಮಿಸಿದನು. ದುರ್ಯೋಧನರಾಜನ ಆ ಪ್ರಲಾಪ ವನ್ನು ಕೇಳಿ ಅವನ ಸುತ್ತಲೂ ಇದ್ದ ಸಾವಿರಾರು ಜನ ವಾರ್ತಾವಾಹಕರ ಕಣ್ಣುಗಳೂ ಬಾಷ್ಪಪೂರ್ಣವಾಗಿದ್ದುವು. ಅವರೆಲ್ಲರೂ ಅಲ್ಲಿ ನಿಲ್ಲಲಾಗದೇ ದಿಕ್ಕಾಪಾಲಾಗಿ ಓಡಿಹೋದರು. ಆ ಸಮಯದಲ್ಲಿ ಸಮುದ್ರಗಳಿಂದಲೂ, ವನಗಳಿಂದಲೂ, ಚರಾಚರಪ್ರಾಣಿಗಳಿಂದಲೂ ಕೂಡಿದ್ದ ಈ ಪೃಥಿವಿಯು

*ಚಾರ್ವಾಕ ಎಂಬುದಕ್ಕೆ ವ್ಯಾಖ್ಯಾನಕಾರರು–ಬ್ರಾಹ್ಮಣವೇಷಧಾರೀ ರಾಕ್ಷಸಃ–ಎಂದು ಅರ್ಥಮಾಡಿರುತ್ತಾರೆ.

ಭಯಂಕರರೂಪವನ್ನು ತಾಳಿ ಸಿಡಿಲಿಗೆ ಸಮಾನವಾದ ಶಬ್ದದೊಡನೆ ನಡುಗತೊಡಗಿತು. ಎಲ್ಲ ದಿಕ್ಕುಗಳೂ ಮಾಲಿನ್ಯವನ್ನು ಹೊಂದಿದುವು. ದುರ್ಯೋಧನನು ಹೇಳಿದಂತೆ ಆ ವಾರ್ತಾವಾಹಕರು ದ್ರೋಣಪುತ್ರನಾದ ಅಶ್ವತ್ಥಾಮನ ಸಮೀಪಕ್ಕೆ ಹೋಗಿ ನಡೆದುದೆಲ್ಲವನ್ನೂ ಹೇಳಿದರು. ಗದಾಯುದ್ಧದಲ್ಲಿ ನಡೆದ ಅವ್ಯವಹಾರ; ದುರ್ಯೋಧನನ ಪತನ–ಎಲ್ಲವನ್ನೂ ವಿಶದವಾಗಿ ದ್ರೌಣಿಗೆ ಹೇಳಿದರು. ಆರ್ತರಾಗಿದ್ದ ವಾರ್ತಾವಾಹಕರು ದ್ರೋಣಪುತ್ರನಿಗೆ ಎಲ್ಲ ವಿಷಯಗಳನ್ನೂ ಹೇಳಿ ಬಹಳ ಹೊತ್ತು ಅದೇ ವಿಷಯವಾಗಿಯೇ ಚಿಂತಿಸುತ್ತಲಿದ್ದು ಎಲ್ಲಿಂದ ಬಂದರೋ ಆ ತಮ್ಮ ಸ್ಥಳಗಳಿಗೆ ಹೊರಟುಹೋದರು."

೬೪ನೆಯ ಅಧ್ಯಾಯವು ಮುಗಿಯಿತು.

೬೫ನೆಯ ಅಧ್ಯಾಯ ಗದಾಪರ್ವ (ಮುಂದುವರಿದಿದೆ.)

## ದುರ್ಯೋಧನನ ದುರವಸ್ಥೆಯನ್ನು ಕಂಡು ಅಶ್ವತ್ಥಾಮನು ವಿಷಾದಿಸಿದುದು : ಪಾಂಡವರನ್ನು ಸಂಹರಿಸುವುದಾಗಿ ಪ್ರತಿಜ್ಞೆಮಾಡಿದುದು : ದುರ್ಯೋಧನನು ಅಶ್ವತ್ಥಾಮನನ್ನು ಸೇನಾಪತಿಯ ಸ್ಥಾನದಲ್ಲಿ ಅಭಿಷೇಕಮಾಡಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ವಾರ್ತಾವಾಹಿಗಳ ಮೂಲಕವಾಗಿ ದುರ್ಯೋಧನನು ಹತನಾದನೆಂಬ ವಾರ್ತೆಯನ್ನು ಕೇಳಿ ಯುದ್ಧದಲ್ಲಿ ಹತರಾಗದೇ ಉಳಿದಿದ್ದ, ನಿಶಿತವಾದ ಬಾಣಗಳಿಂದಲೂ, ಗದಾ-ತೋಮರ-ಶಕ್ತ್ಯಾಯುಧಗಳಿಂದಲೂ ಛಿನ್ನ-ಭಿನ್ನವಾದ ಶರೀರಗಳನ್ನು ಹೊಂದಿದ್ದ ಅಶ್ವತ್ಥಾಮಾ, ಕೃಪರು, ಸಾತ್ವತವಂಶೀಯನಾದ ಕೃತವರ್ಮಾ–ಈ ಮೂವರು ಕೌರವಮಹಾರಥರೂ ವೇಗವಾಗಿ ಹೋಗುವ ಕುದುರೆಗಳ ಮೂಲಕವಾಗಿ ಬಹಳ ಬೇಗ ರಣರಂಗಕ್ಕೆ ಆಗಮಿಸಿದರು. ಆ ಯುದ್ಧಭೂಮಿಯಲ್ಲಿ–ಅರಣ್ಯದಲ್ಲಿ ವಾಯುವೇಗದಿಂದ ಕೆಳಕ್ಕೆ ಬಿದ್ದಿರುವ ಮಹಾಸಾಲವೃಕ್ಷದಂತೆ–ಭಗ್ನೋರುವಾಗಿ ಭೂಮಿಯ ಮೇಲೆ ಬಿದ್ದಿದ್ದ, ಸಂಕಟದಿಂದ ಚಡಪಡಿಸುತ್ತಿದ್ದ, ರಕ್ತದಿಂದ ತೋಯ್ದುಹೋಗಿದ್ದ, ಮಹಾರಣ್ಯದಲ್ಲಿ ಬೇಡನಿಂದ ಕೆಳಕ್ಕೆ ಬೀಳಿಸಲ್ಪಟ್ಟ

ಮಹಾಗಜದಂತೆಯೇ ಕಾಣುತ್ತಿದ್ದ, ಪ್ರಾಣಸಂಕಟದಿಂದ ಹೊರಳಾಡುತ್ತಿದ್ದ, ರಕ್ತದ ಕೋಡಿಯಲ್ಲಿಯೇ ಮುಳುಗಿಹೋಗಿದ್ದ ಮಹಾತ್ಮನಾದ ದುರ್ಯೋಧನನನ್ನು ನೋಡಿದರು. ದೈವದ ಇಚ್ಛೆಯಿಂದ ಆಕಾಶದಿಂದ ಕೆಳಕ್ಕೆ ಬಿದ್ದ ಸೂರ್ಯನ ಚಕ್ರದಂತೆಯೂ–ದೊಡ್ಡ ಬಿರುಗಾಳಿಯ ಬೀಸುವಿಕೆಯಿಂದ ಒಣಗಿಹೋದ ಸಮುದ್ರದಂತೆಯೂ–ಆಕಾಶದಲ್ಲಿ ಹಿಮದಿಂದ ಆವೃತವಾದ ಮಂಡಲದಿಂದ ಯುಕ್ತನಾದ ಪೂರ್ಣಚಂದ್ರನಂತೆಯೂ ಕಾಣುತ್ತಿದ್ದ, ಧೂಳಿನಿಂದ ಆವೃತನಾಗಿದ್ದ, ದೀರ್ಘಭುಜನಾದ, ಪರಾಕ್ರಮದಲ್ಲಿ ಮದಿಸಿದ ಆನೆಯಂತಿದ್ದ ದುರ್ಯೋಧನನನ್ನು ಅಶ್ವತ್ಥಾಮಾ-ಕೃಪ-ಕೃತವರ್ಮರು ನೋಡಿದರು.

**ವೃತಂ ಭೂತಗಣೈರ್ಘೋರೈಃ ಕ್ರವ್ಯಾದೈಶ್ಚ ಸಮನ್ತತಃ ।**
**ಯಥಾ ಧನಂ ಲಿಪ್ಸಮಾನೈರ್ಭೃತ್ಯೈರ್ನೃಪತಿಸತ್ತಮಮ್ ॥೮॥**

ಧನವನ್ನು ಕಸಿದುಕೊಳ್ಳುವ ಇಚ್ಛೆಯಿಂದ ಸೇವಕರು ರಾಜನನ್ನು ಮುತ್ತುವಂತೆ–ಘೋರವಾದ ಭೂತಗಣಗಳಿಂದಲೂ, ಮಾಂಸಾಶಿಗಳಾದ ಮೃಗ-ಪಕ್ಷಿಗಳಿಂದಲೂ ಸುತ್ತುವರಿಯಲ್ಪಟ್ಟಿದ್ದ ನೃಪಶ್ರೇಷ್ಠನಾದ ದುರ್ಯೋಧನನನ್ನು ಕೌರವಮಹಾರಥರು ನೋಡಿದರು. ಗಂಟಿಕ್ಕಿದ ಹುಬ್ಬುಗಳು ಅವನ ಬಾಯಿಯವರೆಗೂ ಪ್ರಸರಿಸಿದ್ದುವು. ಕೋಪದಿಂದಾಗಿ ಕಣ್ಣುಗಳು ಹೊರಚಾಚಿಕೊಂಡಿದ್ದುವು. ಕೆಳಕ್ಕೆ ಬಿದ್ದಿರುವ ವ್ಯಾಘ್ರದಂತೆಯೇ ಕಾಣುತ್ತಿದ್ದ, ಕೋಪಾವಿಷ್ಟನಾಗಿದ್ದ, ನರಶ್ರೇಷ್ಠನಾದ ದುರ್ಯೋಧನನನ್ನು ಕೌರವಮಹಾರಥರು ವೀಕ್ಷಿಸಿದರು. ಮಹಾಧನುಷ್ಮಂತನಾದ ರಾಜನು ಭೂಮಿಯ ಮೇಲೆ ಬಿದ್ದಿರುವುದನ್ನು ನೋಡಿ ಕೃಪರೇ ಮೊದಲಾದ ಆ ಮೂವರು ಮಹಾರಥರೂ ವಿಮೋಹಿತರಾದರು. ಒಡನೆಯೇ ಅವರು ತಮ್ಮ-ತಮ್ಮ ರಥಗಳಿಂದಿಳಿದು ದುರ್ಯೋಧನನ ಸಮೀಪಕ್ಕೆ ಓಡಿಹೋದರು. ಹತ್ತಿರದಲ್ಲಿಯೇ ನಿಂತು ಅವನನ್ನು ಚೆನ್ನಾಗಿ ನೋಡಿ ಅವನ ಸಮೀಪದಲ್ಲಿಯೇ ಭೂಮಿಯ ಮೇಲೆ ಕುಳಿತುಕೊಂಡರು. ಬಳಿಕ ಕಂಬನಿದುಂಬಿದ ಕಣ್ಣುಗಳಿಂದ ಕೂಡಿದ್ದ ಅಶ್ವತ್ಥಾಮನು ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ರಾಜಾಧಿರಾಜನಾದ, ಭರತಶ್ರೇಷ್ಠನಾದ ದುರ್ಯೋಧನನನ್ನು ಕುರಿತು ಹೇಳಿದನು :

**ನ ನೂನಂ ವಿದ್ಯತೇ ಸತ್ಯಂ ಮಾನುಷೇ ಕಿಂಚಿದೇವ ಹಿ ।**
**ಯತ್ರ ತ್ವಂ ಪುರುಷವ್ಯಾಘ್ರ ಶೇಷೇ ಪಾಂಸುಷು ರೂಷಿತಃ ॥೧೩॥**

"ಪುರುಷವ್ಯಾಘ್ರನೇ! ನಿನ್ನಂತಹವನೇ ಧೂಳಿನಿಂದ ಧೂಸರಿತನಾಗಿ ರಣರಂಗದಲ್ಲಿ ಇಂತಹ ಸ್ಥಿತಿಯಲ್ಲಿ ಮಲಗುವಂತಾದ ಮೇಲೆ ಮನುಷ್ಯ ಲೋಕದಲ್ಲಿ ಕಿಂಚಿತ್ತಾದರೂ ಸ್ಥಿರತೆಯೇ ಉಳಿದಿಲ್ಲವೆಂಬುದು ನಿಶ್ಚಯ ವಾದಂತಾಯಿತು.

**ಭೂತ್ವಾ ಹಿ ನೃಪತಿಃ ಪೂರ್ವಂ ಸಮಾಜ್ಞಾಪ್ಯ ಚ ಮೇದಿನೀಮ್ ।**
**ಕಥಮೇಕೋಽದ್ಯ ರಾಜೇನ್ದ್ರ ತಿಷ್ಠಸೇ ನಿರ್ಜನೇ ವನೇ ॥೧೪॥**

ನೀನು ಈ ಹಿಂದೆ ರಾಜನಾಗಿದ್ದೆ. ಅಖಂಡಭೂಮಂಡಲವನ್ನೇ ನಿನ್ನ ಶಾಸನಕ್ಕೆ ಒಳಪಡಿಸಿದ್ದೆ. ಅಂತಹವನೀಗ ಏಕಾಕಿಯಾಗಿ ನಿರ್ಜನವಾದ ಈ ಅರಣ್ಯದಲ್ಲಿ ಹೇಗಿರುವೆ?

ನಾನು ಈ ಸಮಯದಲ್ಲಿ ದುಃಶಾಸನನನ್ನು ಕಾಣುತ್ತಿಲ್ಲ. ಮಹಾರಥನಾದ ಕರ್ಣನನ್ನೂ ಕಾಣುತ್ತಿಲ್ಲ. ಅಪಾರಸಂಖ್ಯೆಯಲ್ಲಿದ್ದ ನಿನ್ನ ಆ ಸುಹೃದ್ಗಣಗಳನ್ನೂ ನಾನಿಂದು ಕಾಣುತ್ತಿಲ್ಲ. ಭರತಶ್ರೇಷ್ಠನೇ! ಇದೇನಿದು? ಪರಿಸ್ಥಿತಿಯು ಹೀಗಾಗಲು ಕಾರಣವೇನು?

**ದುಃಖಂ ನೂನಂ ಕೃತಾನ್ತಸ್ಯ ಗತಿಂ ಜ್ಞಾತುಂ ಕಥಂಚನ ।**
**ಲೋಕಾನಾಂ ಚ ಭವಾನ್ಯತ್ರ ಶೇಷೇ ಪಾಂಸುಷು ರೂಷಿತಃ ॥೧೬॥**

ಕೃತಾಂತನ (ದೈವದ) ಮತ್ತು ಲೋಕಗಳ ಗತಿಯನ್ನು ತಿಳಿದುಕೊಳ್ಳುವುದು ಯಾವುದೇ ರೀತಿಯಿಂದಲೂ ದುಃಸಾಧ್ಯವೇ ಸರಿ. ನೀನೂ ಸಹ ಕಾಲಕ್ಕೆ ಅಧೀನನಾಗಿ ಧೂಳಿನಿಂದ ರೂಷಿತನಾಗಿ ಈ ನಿರ್ಜನ ಪ್ರದೇಶದಲ್ಲಿ ಮಲಗಿರುವೆಯಲ್ಲವೇ?"

**ಏಷ ಮೂರ್ಧಾಭಿಷಿಕ್ತಾನಾಮಗ್ರೇ ಗತ್ವಾ ಪರಂತಪಃ ।**
**ಸತೃಣಂ ಗ್ರಸತೇ ಪಾಂಸುಂ ಪಶ್ಯ ಕಾಲಸ್ಯ ಪರ್ಯಯಮ್ ॥೧೭॥**

(ಅಶ್ವತ್ಥಾಮನು ತನ್ನ ಅನುಯಾಯಿಗಳೊಡನೆ ಹೇಳುತ್ತಾನೆ:)

"ಮೂರ್ಧಾಭಿಷಿಕ್ತರಾದ ರಾಜರಲ್ಲಿ ಅಗ್ರಗಣ್ಯನಾದ, ಶತ್ರುತಾಪನನಾದ ಈ ದುರ್ಯೋಧನರಾಜನು ಹುಲ್ಲಿನಿಂದ ಯುಕ್ತವಾದ ಧೂಳನ್ನು ಬಾಯೊಳಗೆ ಹಾಕಿಕೊಳ್ಳುತ್ತಿದ್ದಾನೆ. (ಮಣ್ಣುಮುಕ್ಕುತ್ತಿದ್ದಾನೆ. ನೆಲದ ಮೇಲೆ ಬಿದ್ದು ಹೊರಳಾಡುವಾಗ ಧೂಳು-ಗರಿಕೆಗಳ ಚೂರುಗಳು ಇವನ ಬಾಯೊಳಗೆ ಹೋಗಿವೆ.) ಕಾಲದ ವೈಪರೀತ್ಯವನ್ನಾದರೂ ನೋಡಿರಿ."

**ಕ್ವ ತೇ ತದಮಲಂ ಛತ್ರಂ ವ್ಯಜನಂ ಕ್ವ ಚ ಪಾರ್ಥಿವ ।**
**ಸಾ ಚ ತೇ ಮಹತೀ ಸೇನಾ ಕ್ವ ಗತಾ ಪಾರ್ಥಿವೋತ್ತಮ ॥೧೮॥**

(ಅಶ್ವತ್ಥಾಮನು ದುರ್ಯೋಧನನನ್ನು ಸಂಬೋಧಿಸಿ ಹೇಳುತ್ತಾನೆ :)

"ಪಾರ್ಥಿವಶ್ರೇಷ್ಠನೇ! ನಿರ್ಮಲವಾದ ಆ ನಿನ್ನ ಶ್ವೇತಚ್ಛತ್ರವೆಲ್ಲಿ? ಯಾವಾಗಲೂ ಸೇವಕರಿಂದ ಬೀಸಲ್ಪಡುತ್ತಿದ್ದ ಆ ಬೀಸಣಿಗೆಯಲ್ಲಿ? ಆ ನಿನ್ನ ಹನ್ನೊಂದು ಅಕ್ಷೌಹಿಣೀಯುಕ್ತವಾಗಿದ್ದ ಮಹಾಸೈನ್ಯವಾದರೂ ಎಲ್ಲಿ ಹೋಯಿತು?

**ದುರ್ವಿಜ್ಞೇಯಾ ಗತಿರ್ನೂನಂ ಕಾರ್ಯಾಣಾಂ ಕಾರಣಾನ್ತರೇ ।**
**ಯದ್ವೈ ಲೋಕಗುರುರ್ಭೂತ್ವಾ ಭವಾನೇತಾಂ ದಶಾಂ ಗತಃ ॥೧೯॥**

ಯಾವ ಕಾರಣದಿಂದ ಯಾವ ಕಾರ್ಯವಾಗುತ್ತದೆಂಬುದನ್ನು ತಿಳಿದುಕೊಳ್ಳುವುದೂ ಮತ್ತು ಕಾಲದ ಗತಿಯನ್ನು ಊಹಿಸುವುದೂ ನಿಶ್ಚಯವಾಗಿಯೂ ಕಷ್ಟಸಾಧ್ಯವೇ ಸರಿ. ಏಕೆಂದರೆ : ಇದುವರೆಗೂ ಜಗತ್ತಿಗೇ ಆದರಣೀಯನಾಗಿದ್ದ ನೀನಿಂದು ಇಂತಹ ದುರವಸ್ಥೆಯನ್ನು ಹೊಂದಿರುವೆ.

**ಅಧ್ರುವಾ ಸರ್ವಮರ್ತ್ಯೇಷು ಶ್ರೀರುಪಾಲಕ್ಷ್ಯತೇ ಭೃಶಮ್ ।**
**ಭವತೋ ವ್ಯಸನಂ ದೃಷ್ಟ್ವಾ ಶಕ್ರವಿಸ್ಪರ್ಧಿನೋ ಭೃಶಮ್ ॥೨೦॥**

ದುರ್ಯೋಧನ! ನೀನು ನಿನ್ನ ಸಾಮ್ರಾಜ್ಯಲಕ್ಷ್ಮಿಯ ಮೂಲಕವಾಗಿ ಇಂದ್ರನೊಡನೆಯೂ ಸ್ಪರ್ಧಿಸುತ್ತಿದ್ದೆ. ಇಂದ್ರನ ಸಂಪತ್ತಿಗೆ ಸಮಾನವಾದ ಸಂಪತ್ತೇ ನಿನ್ನಲ್ಲಿಯೂ ಇದ್ದಿತು. ಅಂತಹ ನೀನೇ ಇಷ್ಟು ದಾರುಣವಾದ ಸಂಕಟದಲ್ಲಿರುವುದನ್ನು ನೋಡಿದರೆ ಯಾವ ಮನುಷ್ಯ

ನಲ್ಲಿಯೂ ಲಕ್ಷ್ಮಿಯು ಸ್ಥಿರವಾಗಿ ನಿಲ್ಲತಕ್ಕವಳಲ್ಲವೆಂಬುದು ಸ್ಪಷ್ಟವಾಗಿ ಕಾಣುತ್ತಿದೆ.”

ಮಹಾರಾಜ! ಅತ್ಯಂತದುಃಖಿತನಾಗಿದ್ದ ಅಶ್ವತ್ಥಾಮನು ಹೇಳಿದ ಮಾತುಗಳನ್ನು ಕೇಳಿ ನಿನ್ನ ಮಗನು ಶೋಕದಿಂದ ಉಕ್ಕಿಬರುತ್ತಿದ್ದ ಕಣ್ಣೀರನ್ನು ಸುರಿಸುತ್ತಾ, ಹಾಗೆ ಬರುತ್ತಿದ್ದ ಕಣ್ಣೀರನ್ನು ತನ್ನೆರಡು ಕೈಗಳಿಂದಲೂ ಬಾರಿ-ಬಾರಿಗೂ ಒರೆಸಿಕೊಳ್ಳುತ್ತಾ, ಕೃಪರೇ ಮೊದಲಾದ ಆ ಮೂವರು ವೀರರನ್ನೂ ಕುರಿತು ಸಮಯೋಚಿತವಾದ ಈ ಮಾತುಗಳನ್ನು ಹೇಳಿದನು :

**ಈದೃಶೋ ಲೋಕಧರ್ಮೋಽಯಂ ಧಾತ್ರಾ ನಿರ್ದಿಷ್ಟ ಉಚ್ಯತೇ ।**
**ವಿನಾಶಃ ಸರ್ವಭೂತಾನಾಂ ಕಾಲಪರ್ಯಾಯಮಾಗತಃ ॥೨೬॥**

“ವೀರಪುರುಷರೇ! ಮರ್ತ್ಯಲೋಕದ ಧರ್ಮ (ನಿಯಮ)ವೇ ಈ ರೀತಿಯಾಗಿದೆ. ಈ ನಿಯಮವನ್ನು ಬ್ರಹ್ಮನೇ ಮಾಡಿದ್ದಾನೆಂದೂ ಹೇಳುತ್ತಾರೆ. ಈ ಕಾರಣದಿಂದಾಗಿ ಕಾಲಕ್ರಮದಲ್ಲಿ ಪ್ರಪಂಚದಲ್ಲಿರುವ ಎಲ್ಲ ಪ್ರಾಣಿಗಳ ವಿನಾಶವೂ ಆಗಿಹೋಗುತ್ತದೆ. ಎಲ್ಲ ಪ್ರಾಣಿಗಳಿಗೂ ಒಂದಲ್ಲ–ಒಂದು ದಿನ ಪ್ರಾಪ್ತವಾಗುವ ವಿನಾಶವು ನಿಮ್ಮೆಲ್ಲರ ಎದುರಿನಲ್ಲಿಯೇ ಈಗ ನನಗೂ ಪ್ರಾಪ್ತವಾಗಿದೆ. ಭೂಮಂಡಲವನ್ನೇ ಆಳುತ್ತಿದ್ದ ನಾನಿಂದು ಇಂತಹ ದುಃಸ್ಥಿತಿಗೆ ಒಳಗಾಗಿದ್ದೇನೆ.

**ದಿಷ್ಟ್ಯಾ ನಾಹಂ ಪರಾವೃತ್ತೋ ಯುದ್ಧೇ ಕಸ್ಯಾಂಚಿದಾಪದಿ ।**
**ದಿಷ್ಟ್ಯಾಹಂ ನಿಹತಃ ಪಾಪೈಶ್ಛಲೇನೈವ ವಿಶೇಷತಃ ॥೨೫॥**

ನಿಮ್ಮೆಲ್ಲರಿಗೂ ತಿಳಿದಿರುವಂತೆ ನಾನು ಸೌಭಾಗ್ಯವಶದಿಂದ ಯಾವುದೇ ಪ್ರಾಣಾಪತ್ತಿನ ಸಮಯದಲ್ಲಿಯೂ ಯುದ್ಧದಿಂದ ಹಿಂದಿರುಗಲಿಲ್ಲ. ಆದರೆ ದೈವವಶದಿಂದ ಪಾಪಿಷ್ಠರು ನನ್ನನ್ನು ಮೋಸದಿಂದ ಕೊಂದರು. (ನ್ಯಾಯಮಾರ್ಗದಲ್ಲಿ ಅವರು ನನ್ನನ್ನು ಜಯಿಸಲಾಗಲಿಲ್ಲ.)

ಶತ್ರುಗಳೊಡನೆ ಕಡೆಯವರೆಗೂ ಯುದ್ಧಮಾಡಿಯೇ ತೀರಬೇಕೆಂದು ನಿಶ್ಚಯಿಸಿದ್ದ ನಾನು ಅದೃಷ್ಟವಿಶೇಷದಿಂದಲೇ ಅನುದಿನವೂ ಅತ್ಯುತ್ಸಾಹ ದಿಂದಲೇ ಯುದ್ಧಮಾಡುತ್ತಿದ್ದೆನು. ನನ್ನ ಜ್ಞಾತಿ-ಬಾಂಧವರೆಲ್ಲರೂ ಹತರಾದ

ಬಳಿಕವೇ ನಾನು ಯುದ್ಧದಲ್ಲಿ ಹತನಾದೆನು. ಇದೂ ಸಹ ನನ್ನ ಸೌಭಾಗ್ಯವೆಂದೇ ಹೇಳಬೇಕು. ಈ ಜನಕ್ಷಯಕರವಾದ ಯುದ್ಧದಿಂದ ಮುಕ್ತರಾಗಿರುವ ನಿಮ್ಮನ್ನು ಅದೃಷ್ಟವಿಶೇಷದಿಂದಲೇ ನಾನು ನೋಡುತ್ತಿದ್ದೇನೆ. ಮೇಲಾಗಿ ನೀವು ಕುಶಲಿಗಳಾಗಿರುವಿರಿ. ಮತ್ತು ಕಾರ್ಯಮಾಡಲು ಸಮರ್ಥರಾಗಿರುವಿರಿ. ಇದು ನಿಶ್ಚಯವಾಗಿಯೂ ನನಗೆ ಅತ್ಯಂತಪ್ರಿಯಕರವಾಗಿದೆ.

**ಮಾ ಭವನ್ತೋಽತ್ರ ತಪ್ಯನ್ತಾಂ ಸೌಹೃದಾನ್ನಿಧನೇನ ಮೇ ।**
**ಯದಿ ವೇದಾಃ ಪ್ರಮಾಣಂ ವೋ ಜಿತಾ ಲೋಕಾ ಮಯಾಕ್ಷಯಾಃ ॥**

ಪುರುಷೋತ್ತಮರೇ! ನನ್ನ ಮೇಲಿನ ಸೌಹಾರ್ದದ ಕಾರಣದಿಂದ ನನ್ನ ನಿಧನಕ್ಕಾಗಿ ನೀವು ಯಾರೂ ಪರಿತಪಿಸಬೇಕಾದ ಕಾರಣವಿಲ್ಲ. ನನ್ನಂತೆಯೇ ನಿಮಗೂ ಸಹ ವೇದಗಳೇ ಪ್ರಮಾಣವಾಗಿರುವುದಾದರೆ ವೇದೋಕ್ತರೀತ್ಯಾ ಯುದ್ಧದಲ್ಲಿ ಪ್ರಾಪ್ತವಾಗುವ ಈ ನನ್ನ ನಿಧನದ ಕಾರಣದಿಂದಾಗಿ ನಾನು ಅಕ್ಷಯವಾದ ಲೋಕಗಳನ್ನು ಈಗಾಗಲೇ ಜಯಿಸಿರುತ್ತೇನೆ.

**ಮನ್ಯಮಾನಃ ಪ್ರಭಾವಂ ಚ ಕೃಷ್ಣಸ್ಯಾಮಿತತೇಜಸಃ ।**
**ತೇನ ನ ಚ್ಯಾವಿತಶ್ಚಾಹಂ ಕ್ಷತ್ರಧರ್ಮಾತ್ಸ್ವನುಷ್ಠಿತಾತ್ ।**
**ಸ ಮಯಾ ಸಮನುಪ್ರಾಪ್ತೋ ನಾಸ್ಮಿ ಶೋಚ್ಯಃ ಕಥಂಚನ ॥೨೯॥**

ಅಮಿತತೇಜಸ್ವಿಯಾದ ಶ್ರೀಕೃಷ್ಣನ ಪ್ರಭಾವವೆಷ್ಟೆಂಬುದು ನನಗೆ ತಿಳಿದಿದ್ದರೂ ನಾನು ಅವನ ಪ್ರೇರಣೆಗೆ ವಶವಾಗಿ ಚೆನ್ನಾಗಿ ಅನುಷ್ಠಾನ ಮಾಡುತ್ತಿದ್ದ ಕ್ಷತ್ರಧರ್ಮದಿಂದ ಚ್ಯುತನಾಗಲಿಲ್ಲ. (ಕ್ಷತ್ರಿಯೋಚಿತವಾಗಿ ಯುದ್ಧಮಾಡಿದೆನೇ ಹೊರತು ಶ್ರೀಕೃಷ್ಣನ ಪ್ರಭಾವಕ್ಕೆ ಮಾರುಹೋಗಿ ಶತ್ರುಗಳೊಡನೆ ಸಂಧಿಮಾಡಿಕೊಳ್ಳಲು ಹೋಗಲಿಲ್ಲ.) ಆ ಕ್ಷತ್ರ ಧರ್ಮಾನುಷ್ಠಾನದ ಫಲವನ್ನು ನಾನಿಂದು ಪಡೆದುಕೊಂಡಿರುತ್ತೇನೆ. ಆದುದರಿಂದ ನನ್ನ ವಿಷಯದಲ್ಲಿ ಯಾವ ಕಾರಣದಿಂದಲೂ ಯಾರೂ ಶೋಕಪಡಬೇಕಾಗಿಲ್ಲ.

**ಕೃತಂ ಭವದ್ಭಿಃ ಸದೃಶಮನುರೂಪಮಿವಾತ್ಮನಃ ।**
**ಯತಿತಂ ವಿಜಯೇ ನಿತ್ಯಂ ದೈವಂ ತು ದುರತಿಕ್ರಮಮ್ ॥೩೦॥**

ನೀವೆಲ್ಲರೂ ನಿಮ್ಮ-ನಿಮ್ಮ ಸ್ವರೂಪಕ್ಕೆ ಅನುಗುಣವಾಗಿ

ಪರಾಕ್ರಮದಿಂದಲೇ ಶತ್ರುಗಳೊಡನೆ ಯುದ್ಧಮಾಡಿರುವಿರಿ. ಅನುದಿನವೂ ನನಗೆ ವಿಜಯಗಳಿಸಿಕೊಡುವ ಸಲುವಾಗಿ ಪ್ರಯತ್ನಿಸುತ್ತಲೇ ಇದ್ದಿರಿ. ಆದರೆ ದೈವದ ಇಚ್ಛೆಯು ಬೇರೆಯಾಗಿದ್ದಿತು. ದೈವವನ್ನು ಅತಿಕ್ರಮಿಸಲು ಯಾರಿಂದಲೂ ದುಃಸಾಧ್ಯವಾದುದು."

ಈ ಮಾತನ್ನು ಹೇಳುತ್ತಿದ್ದಾಗಲೇ ಕಣ್ಣೀರಿನಿಂದ ದುರ್ಯೋಧನನ ಕಣ್ಣುಗಳು ಮುಚ್ಚಿಹೋಗಿದ್ದುವು. ಪ್ರಾಣಪ್ರಯಾಣದ ಸಂಕಟದಿಂದಾಗಿ ಬಹಳ ವ್ಯಾಕುಲಿತನಾಗಿದ್ದನು. ಆದುದರಿಂದ ಮುಂದೆ ಮಾತನಾಡದೇ ಸುಮ್ಮನಿದ್ದುಬಿಟ್ಟನು. ಶೋಕದಿಂದ ಕಣ್ಣೀರುಸುರಿಸುತ್ತಿದ್ದ ದುರ್ಯೋಧನನನ್ನು ನೋಡಿ ಅಶ್ವತ್ಥಾಮನು ಪ್ರಳಯಕಾಲದ ಅಗ್ನಿಯೋಪಾದಿಯಲ್ಲಿ ಕಿಡಿ-ಕಿಡಿಯಾದನು. ಕ್ರೋಧಾಭಿಭೂತನಾಗಿದ್ದ ಅವನು ಕೈಯಿಂದ ಕೈಯನ್ನು ಉಜ್ಜಿಕೊಳ್ಳುತ್ತಾ ಅಶ್ರುಗದ್ಗದವಾದ ಮಾತಿನಿಂದ ರಾಜನನ್ನು ಕುರಿತು ಹೇಳಿದನು :

**ಪಿತಾ ಮೇ ನಿಹತಃ ಕ್ಷುದ್ರೈಃ ಸುನೃಶಂಸೇನ ಕರ್ಮಣಾ ।**
**ನ ತಥಾ ತೇನ ತಪ್ಯಾಮಿ ಯಥಾ ರಾಜಂಸ್ತ್ವಯಾದ್ಯ ವೈ ॥೩೪॥**

"ಕ್ಷುದ್ರರಾದ ಪಾಂಡವರು ಅತ್ಯಂತಕ್ರೂರವಾದ ಕರ್ಮದಿಂದ ನನ್ನ ತಂದೆಯನ್ನು ಸಂಹರಿಸಿದರು. ಅವರು ಹಾಗೆ ತಂದೆಯನ್ನು ಸಂಹರಿಸಿದಾಗಲೂ ನಾನಿಷ್ಟೊಂದು ಪರಿತಾಪಗೊಂಡಿರಲಿಲ್ಲ. ಆದರೆ ಈಗ ನಿನ್ನಿಂದ (ನಿನ್ನ ಈ ದುರವಸ್ಥೆಯನ್ನು ನೋಡಿ) ನಾನು ಬಹಳ ಪರಿತಾಪಗೊಂಡಿರುತ್ತೇನೆ. ನಾನು ಮಾಡಿರುವ ಇಷ್ಟಾಪೂರ್ತಗಳ ಮೇಲೆ, ದಾನ-ಧರ್ಮಗಳ ಮೇಲೆ, ಸುಕೃತದ ಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ. ಸತ್ಯದಿಂದ ಹೇಳುತ್ತಿರುವ ಈ ನನ್ನ ಮಾತುಗಳನ್ನು ಕೇಳು :

**ಅದ್ಯಾಹಂ ಸರ್ವಪಞ್ಚಾಲಾನ್ವಾಸುದೇವಸ್ಯ ಪಶ್ಯತಃ ॥೩೬॥**

**ಸರ್ವೋಪಾಯೈರ್ಹಿ ನೇಷ್ಯಾಮಿ ಪ್ರೇತರಾಜನಿವೇಶನಮ್ ।**
**ಅನುಜ್ಞಾಂ ತು ಮಹಾರಾಜ ಭವಾನ್ಮೇ ದಾತುಮರ್ಹತಿ ॥೩೭॥**

ಈಗಲೇ ನಾನು ಎಲ್ಲ ಪಾಂಚಾಲರನ್ನೂ ಎಲ್ಲ ವಿಧವಾದ ಉಪಾಯ

ಗಳನ್ನೂ ಪ್ರಯೋಗಿಸಿ ಶ್ರೀಕೃಷ್ಣನ ಸಮ್ಮುಖದಲ್ಲಿಯೇ ಯಮನ ಅರಮನೆಗೆ ಕಳುಹಿಸಿಕೊಡುತ್ತೇನೆ. ಮಹಾರಾಜ! ಹೀಗೆ ಮಾಡಲು ನನಗೆ ಅನುಜ್ಞೆಯನ್ನು ಮಾತ್ರ ನೀನು ನೀಡಬೇಕಾಗಿದೆ.”

ಮಹಾರಾಜ! ಮನಸ್ಸಿಗೆ ಸಮಾಧಾನವನ್ನೂ ಮತ್ತು ಸಂತೋಷವನ್ನೂ ಉಂಟುಮಾಡುವುದಾಗಿದ್ದ ಅಶ್ವತ್ಥಾಮನ ಆ ಮಾತನ್ನು ಕೇಳಿ ದುರ್ಯೋಧನನು ಕೃಪರೊಡನೆ ಹೇಳಿದನು :

**ಆಚಾರ್ಯ ಶೀಘ್ರಂ ಕಲಶಂ ಜಲಪೂರ್ಣಂ ಸಮಾನಯ ॥೩೯॥**

“ಆಚಾರ್ಯರೇ! ನೀರಿನಿಂದ ತುಂಬಿದ ಕಲಶವನ್ನು ಶೀಘ್ರವಾಗಿ ತೆಗೆದುಕೊಂಡು ಬನ್ನಿರಿ.”

ಬ್ರಾಹ್ಮಣಶ್ರೇಷ್ಠರಾದ ಕೃಪರು ರಾಜನ ಮಾತನ್ನು ಗೌರವಿಸುತ್ತಾ ನೀರಿನಿಂದ ಪೂರ್ಣವಾಗಿದ್ದ ಕಲಶವನ್ನು ತೆಗೆದುಕೊಂಡು ರಾಜನ ಬಳಿಗೆ ಬಂದರು. ಕೃಪರು ಪೂರ್ಣಕುಂಭವನ್ನು ತಂದನಂತರ ನಿನ್ನ ಮಗನು ಅವರೊಡನೆ ಹೇಳಿದನು :

**ಮಮಾಜ್ಞಯಾ ದ್ವಿಜಶ್ರೇಷ್ಠ ದ್ರೋಣಪುತ್ರೋಽಭಿಷಿಚ್ಯತಾಮ್ ।**
**ಸೈನಾಪತ್ಯೇನ ಭದ್ರಂ ತೇ ಮಮ ಚೇದಿಚ್ಛಸಿ ಪ್ರಿಯಮ್ ॥೪೧॥**

“ದ್ವಿಜಶ್ರೇಷ್ಠರೇ! ನಿಮಗೆ ಮಂಗಳವಾಗಲಿ. ನೀವು ಈ ಸಮಯದಲ್ಲಿ ನನಗೆ ಪ್ರಿಯವಾದ ಕಾರ್ಯಮಾಡಲು ಇಚ್ಛಿಸುವಿರಾದರೆ ನನ್ನ ಆಜ್ಞಾನುಸಾರವಾಗಿ ಅಶ್ವತ್ಥಾಮನನ್ನು ಸೇನಾಪತಿಯ ಸ್ಥಾನದಲ್ಲಿ ಅಭಿಷೇಚಿಸಿರಿ.

**ರಾಜ್ಞೋ ನಿಯೋಗಾದ್ಯೋದ್ಧವ್ಯಂ ಬ್ರಾಹ್ಮಣೇನ ವಿಶೇಷತಃ ।**
**ವರ್ತತಾ ಕ್ಷತ್ರಧರ್ಮೇಣ ಹ್ಯೇವಂ ಧರ್ಮವಿದೋ ವಿದುಃ ॥೪೨॥**

ರಾಜನ ಆಜ್ಞೆಯಂತೆ ಯಾರಾದರೂ ಯುದ್ಧಮಾಡಲೇಬೇಕು. ಅದರಲ್ಲಿಯೂ ವಿಶೇಷವಾಗಿ ಕ್ಷತ್ರಧರ್ಮಾನುಸಾರವಾಗಿ ಜೀವಿಕೆಯನ್ನು ನಡೆಸುತ್ತಿರುವ ಬ್ರಾಹ್ಮಣನು ರಾಜಾಜ್ಞೆಯಂತೆ ಯುದ್ಧಮಾಡುವುದು ಅವನ ಮುಖ್ಯಕರ್ತವ್ಯವೂ ಆಗಿರುತ್ತದೆಂದು ಧರ್ಮವನ್ನು ತಿಳಿದವರು ಭಾವಿಸುತ್ತಾರೆ.”

ಶರದ್ವಂತರ ಮಕ್ಕಳಾದ ಕೃಪರು ದುರ್ಯೋಧನರಾಜನು ಹೇಳಿದ ಮಾತನ್ನು ಕೇಳಿ ರಾಜಾಜ್ಞೆಗೆ ಅನುಸಾರವಾಗಿ ಅಶ್ವತ್ಥಾಮನನ್ನು ಸೇನಾಪತಿಯ ಸ್ಥಾನದಲ್ಲಿ ಅಭಿಷೇಚಿಸಿದರು. ಸೇನಾಪತಿಯಾಗಿ ಅಭಿಷಿಕ್ತನಾದ ಅಶ್ವತ್ಥಾಮನು ನೃಪಶ್ರೇಷ್ಠನಾದ ದುರ್ಯೋಧನನನ್ನು ಆಲಿಂಗಿಸಿಕೊಂಡು ಅವನಿಗೆ



ಸಮಾಧಾನಹೇಳಿ ಎಲ್ಲ ದಿಕ್ಕುಗಳಲ್ಲಿಯೂ ಪ್ರತಿಧ್ವನಿಯಾಗುವಂತೆ ಸಿಂಹನಾದಮಾಡುತ್ತಾ ಹೊರಟುಹೋದನು. ರಕ್ತದಿಂದ ತೊಯ್ದು ಹೋಗಿದ್ದ ದುರ್ಯೋಧನನೂ ಸರ್ವಪ್ರಾಣಿಗಳಿಗೂ ಭಯದಾಯಕವಾಗಿದ್ದ ಆ ರಾತ್ರಿಯನ್ನು ಅಲ್ಲಿಯೇ ಕಳೆದನು.

ದುರ್ಯೋಧನನಿದ್ದ ಯುದ್ಧಭೂಮಿಯಿಂದ ಬಹಳ ಶೀಘ್ರವಾಗಿ

ಹಿಂದಿರುಗಿದ ಆ ಮೂವರು ಮಹಾರಥರೂ ದುಃಖದಿಂದ ಉದ್ವಿಗ್ನವಾದ ಮನಸ್ಸುಳ್ಳವರಾಗಿದ್ದರು ಮತ್ತು ತಮ್ಮ ಮುಂದಿನ ಕರ್ತವ್ಯದ ನಿರ್ಧಾರಕ್ಕಾಗಿ ಪರಸ್ಪರವಾಗಿ ಸಮಾಲೋಚಿಸುವುದರಲ್ಲಿ ಮಗ್ನರಾದರು."

ಒಂಭತ್ತನೆಯ ಅಧ್ಯಾಯವು ಮುಗಿಯಿತು.

## ಶಲ್ಯಪರ್ವವು ಮುಗಿಯಿತು.

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।
ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸನ್ತು ನಿರ್ಭಯಾಃ ॥

ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ ।
ಅಧನಾಃ ಸಧನಾಃ ಸನ್ತು ಜೀವನ್ತು ಶರದಾಂ ಶತಮ್ ॥
ಕಾಯೇನ ವಾಚಾ ಮನಸೇನ್ದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥

ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು
ಓಂ ತತ್ಸತ್



ಶ್ರೀಮಹಾಗಣಪತಯೇ ನಮಃ ಶ್ರೀಮಹಾಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ



ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

# ಸೌಪ್ತಿಕಪರ್ವ

೧ನೆಯ ಅಧ್ಯಾಯ ಸೌಪ್ತಿಕಪರ್ವ

## ಮೂವರು ಕೌರವಮಹಾರಥರೂ ವನವೊಂದರಲ್ಲಿ ವಿಶ್ರಮಿಸಿಕೊಂಡುದು : ವೃಕ್ಷದ ಮೇಲೆ ಮಲಗಿದ್ದ ಕಾಗೆಗಳ ಮೇಲೆ ಗೂಬೆಯು ಆಕ್ರಮಣನಡೆಸಿದುದನ್ನು ಕಂಡು ಅಶ್ವತ್ಥಾಮನ ಮನಸ್ಸಿನಲ್ಲಿ ಕ್ರೂರವಾದ ಸಂಕಲ್ಪವು ಅಂಕುರಿಸಿದುದು : ಆ ವಿಷಯದಲ್ಲಿ ಮಿತ್ರರ ಸಲಹೆಯನ್ನು ಕೇಳಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

**ತತಸ್ತೇ ಸಹಿತಾ ವೀರಾಃ ಪ್ರಯಾತಾ ದಕ್ಷಿಣಾಮುಖಾಃ ।**
**ಉಪಾಸ್ತಮನವೇಲಾಯಾಂ ಶಿಬಿರಾಭ್ಯಾಶಮಾಗತಾಃ ॥೧॥**

“ಮಹಾರಾಜ! ದುರ್ಯೋಧನನ ಆಜ್ಞಾನುಸಾರವಾಗಿ ಕೃಪರು ಅಶ್ವತ್ಥಾಮನಿಗೆ ಸೇನಾಪತಿಯ ಪಟ್ಟಗಟ್ಟಿದನಂತರ, ಸೂರ್ಯಾಸ್ತಮನ ಸಮಯದಲ್ಲಿ ಅಶ್ವತ್ಥಾಮ-ಕೃಪ-ಕೃತವರ್ಮರು ದಕ್ಷಿಣಾಭಿಮುಖವಾಗಿ ಹೊರಟು ಸೈನ್ಯಗಳ ಶಿಬಿರಗಳ ಬಳಿಗೆ ಬಂದರು.

ಅಶ್ವತ್ಥಾಮನು ಪಾಂಚಾಲರೆಲ್ಲರನ್ನೂ ಸಂಹರಿಸುವೆನೆಂದು ಪ್ರತಿಜ್ಞೆ ಮಾಡಿ ಸೇನಾಪತ್ಯದ ಪದವಿಯನ್ನು ಪಡೆದುಕೊಂಡು ಬಂದಿದ್ದರೂ ಪಾಂಡವರ ವಿಷಯದಲ್ಲಿ ಆ ಮೂವರೂ ಬಹಳವಾಗಿ ಭಯಗೊಂಡಿದ್ದರು. ಆದುದ ರಿಂದಲೇ ಅವರು ಶಿಬಿರಗಳ ಬಳಿಯಲ್ಲಿಯೂ ಇರದೇ ಗಹನವಾಗಿದ್ದ ಅರಣ್ಯ

ಪ್ರದೇಶಕ್ಕೆ ಹೋಗಿ, ಅಲ್ಲಿ ತಮ್ಮ ರಥದ ಕುದುರೆಗಳನ್ನು ಬಿಚ್ಚಿ, ಯಾರಿಗೂ ಕಾಣದಂತೆ ಮೂವರೂ ಒಂದೆಡೆಯಲ್ಲಿ ಕುಳಿತುಕೊಂಡರು. ಆ ಅರಣ್ಯ ಪ್ರದೇಶವೂ ಸೈನ್ಯದ ಶಿಬಿರಗಳಿಗೆ ಹೆಚ್ಚು ದೂರದಲ್ಲಿರಲಿಲ್ಲ. ಸೇನಾಶಿಬಿರಗಳಿಗೆ ಸ್ವಲ್ಪದೂರದಲ್ಲಿಯೇ ಅರಣ್ಯದ ನಿಗೂಢವಾದ ಸ್ಥಳದಲ್ಲಿ ಆ ಮೂವರೂ ಕುಳಿತಿದ್ದರು. ಶತ್ರುಗಳ ನಿಶಿತವಾದ ಶಸ್ತ್ರಾಸ್ತ್ರಗಳಿಂದ ಪ್ರಹೃತರಾಗಿದ್ದ ಅವರು ಶರೀರಾದ್ಯಂತವಾಗಿ ಕ್ಷತ-ವಿಕ್ಷತರಾಗಿದ್ದರು. ಪಾಂಡವರನ್ನೇ ಬಾರಿ-ಬಾರಿಗೂ ಚಿಂತಿಸುತ್ತಾ ಸುದೀರ್ಘವಾದ ಮತ್ತು ಬಿಸಿ-ಬಿಸಿಯಾದ ನಿಟ್ಟುಸಿರುಬಿಡುತ್ತಿದ್ದರು. ವಿಜಯೋಲ್ಲಸಿತರಾಗಿದ್ದ ಪಾಂಡವರ ಘೋರಗರ್ಜನೆಗಳನ್ನು ಕೇಳಿ ಅವರೇನಾದರೂ ತಮ್ಮನ್ನು ಹಿಂಬಾಲಿಸಿ ಬರುತ್ತಿರಬಹುದೋ ಎಂಬ ಭಯದಿಂದ ಪುನಃ ಪೂರ್ವಾಭಿಮುಖವಾಗಿ ಓಡಿಹೋದರು. ಸ್ವಲ್ಪಹೊತ್ತು ಹಾಗೆಯೇ ಓಡಿಹೋಗುತ್ತಿದ್ದ ಅವರಿಗೆ ಬಾಯಾರಿತು. ಅವರ ಕುದುರೆಗಳೂ ಬಳಲಿದುವು. ಅದನ್ನು ಸಹಿಸಿಕೊಳ್ಳಲಾಗದೇ ಆ ಮಹಾಧನುಷ್ಮಂತರು ಅಸಹನೆಯಿಂದ ಕ್ರೋಧಪರವಶರಾದರು. ರಾಜನಾದ ದುರ್ಯೋಧನನ ವಧೆಯಿಂದಲೂ ಪರಮ ದುಃಖಿತರಾಗಿದ್ದ ಅವರು ಸ್ವಲ್ಪ ಹೊತ್ತಿನವರೆಗೆ ಯಾವ ಮಾತನ್ನೂ ಆಡದೇ ಸುಮ್ಮನೇ ಕುಳಿತಿದ್ದರು."

ಸಂಜಯನು ಕಥೆಯನ್ನು ಮುಂದುವರಿಸುವುದರಲ್ಲಿದ್ದಾಗ ಧೃತರಾಷ್ಟ್ರನು ಮಧ್ಯದಲ್ಲಿ ಮಾತನಾಡತೊಡಗಿದನು :

**ಅಶ್ರದ್ಧೇಯಮಿದಂ ಕರ್ಮ ಕೃತಂ ಭೀಮೇನ ಸಂಜಯ ।**
**ಯತ್ಸ ನಾಗಾಯುತಪ್ರಾಣಃ ಪುತ್ರೋ ಮಮ ನಿಪಾತಿತಃ ॥೭॥**

"ಸಂಜಯ! ಹತ್ತು ಸಾವಿರ ಆನೆಗಳ ಬಲವನ್ನು ಹೊಂದಿದ್ದ ನನ್ನ ಮಗನು ಭೀಮಸೇನನಿಂದ ನಿಧನಹೊಂದಿದನೆಂಬ ಮಾತಿನಲ್ಲಿ ವಿಶ್ವಾಸವೇ ಉಂಟಾಗುವುದಿಲ್ಲ. ನೀನು ಹೇಳಿದ ಈ ವಾರ್ತೆಯನ್ನು ನಂಬುವುದಕ್ಕೇ ಆಗುತ್ತಿಲ್ಲ. ಪ್ರಪಂಚದಲ್ಲಿರುವ ಎಲ್ಲ ಪ್ರಾಣಿಗಳಿಂದಲೂ ಅವಧ್ಯನೆನಿಸಿ ಯುವಕನಾದ ನನ್ನ ಮಗನು ಯುದ್ಧದಲ್ಲಿ ಪಾಂಡವರಿಂದ ಸಂಹರಿಸಲ್ಪಟ್ಟನೆಂಬ ಮಾತನ್ನು ಹೇಗೆ ನಂಬುವುದು?

ಗಾವಲ್ಗಣಿಯೇ! ಸಂಜಯ! ಕುಂತಿಯ ಮಕ್ಕಳೆಲ್ಲರೂ ಸೇರಿ ಮಹಾವೀರನಾದ ವಜ್ರಕಾಯನಾದ ನನ್ನ ಮಗನನ್ನು ಸಂಹರಿಸಿದುದು ನಿಜವೇ ಆಗಿದ್ದರೆ ನಾವು ಈ ನಿಶ್ಚಯಕ್ಕೆ ಬರಬೇಕಾಗಿದೆ. ನ ದಿಷ್ಟಮಭ್ಯತಿಕ್ರಾನ್ತುಂ ಶಕ್ಯಂ ನರೈಃ – ಮಾನವರಿಂದ ದೈವದ ನಿಯಮವನ್ನು ಅತಿಕ್ರಮಿಸಲು ಸಾಧ್ಯವೇ ಆಗುವುದಿಲ್ಲ. ಸಂಜಯ! ನೂರು ಮಕ್ಕಳೂ ಮಡಿದರೆಂದು ಕೇಳಿದನಂತರವೂ ನನ್ನ ಈ ಹೃದಯವು ಸಾವಿರಾರು ಚೂರುಗಳಾಗಿ ಒಡೆದುಹೋಗದೇ ಹಾಗೆಯೇ ಉಳಿದುಕೊಂಡಿದೆ. ಆದುದರಿಂದ ಈ ನನ್ನ ಹೃದಯವು ನಿಶ್ಚಯವಾಗಿಯೂ ಉಕ್ಕಿನದಾಗಿರಬೇಕು. ಇಲ್ಲದಿದ್ದರೆ ಪುತ್ರರೆಲ್ಲರನ್ನೂ ಕಳೆದುಕೊಂಡಿರುವ ಈ ವೃದ್ಧದಂಪತಿಗಳು ಹೇಗೆತಾನೇ ಉಳಿದಿದ್ದಾರು? ಸಂಜಯ! ನನ್ನ ವಿಷಯವಾಗಿ ಹೇಳುವುದಾದರೆ ನನಗೆ ಯುಧಿಷ್ಠಿರನ ದೇಶದಲ್ಲಿರಲೇ ಉತ್ಸಾಹವಿಲ್ಲ.

**ಕಥಂ ರಾಜ್ಞಃ ಪಿತಾ ಭೂತ್ವಾ ಸ್ವಯಂ ರಾಜಾ ಚ ಸಂಜಯ ।**
**ಪ್ರೇಷ್ಯಭೂತಃ ಪ್ರವರ್ತೇಯಂ ಪಾಣ್ಡವೇಯಸ್ಯ ಶಾಸನಾತ್ ॥೧೨॥**

ನಾನೇ ರಾಜನಾಗಿದ್ದು, ರಾಜನ ತಂದೆಯೂ ಆಗಿದ್ದು, ಈಗ ಯುಧಿಷ್ಠಿರನ ಶಾಸನಕ್ಕೊಳಪಟ್ಟು ಅವನ ಸೇವಕನಂತೆ ನಾನು ಹೇಗೆತಾನೇ ವರ್ತಿಸಲಿ?

**ಆಜ್ಞಾಪ್ಯ ಪೃಥಿವೀಂ ಸರ್ವಾಂ ಸ್ಥಿತ್ವಾ ಮೂರ್ಧ್ನಿ ಚ ಸಂಜಯ ।**
**ಕಥಮದ್ಯ ಭವಿಷ್ಯಾಮಿ ಪ್ರೇಷ್ಯಭೂತೋ ದುರನ್ತಕೃತ್ ॥೧೩॥**

ಈ ಮೊದಲು ಸಮಸ್ತಭೂಮಂಡಲಕ್ಕೂ ಆಜ್ಞಾದಾಯಕನಾಗಿದ್ದೆನು. ಎಲ್ಲ ರಾಜರ ತಲೆಗಳನ್ನೂ ಮೆಟ್ಟಿನಿಂತಿದ್ದೆನು. ಈ ದುರಂತಕ್ಕೆ ಮೂಲ ಕಾರಣನಾದ ನಾನು ಈಗ ಸೇವಕನಂತಿರಲು ಹೇಗೆ ಸಾಧ್ಯವಾಗುತ್ತದೆ?

**ಕಥಂ ಭೀಮಸ್ಯ ವಾಕ್ಯಾನಿ ಶ್ರೋತುಂ ಶಕ್ಷ್ಯಾಮಿ ಸಂಜಯ ।**
**ಯೇನ ಪುತ್ರಶತಂ ಪೂರ್ಣಮೇಕೇನ ನಿಹತಂ ಮಮ ॥೧೪॥**

ಯಾವನು ನನ್ನ ನೂರು ಮಂದಿ ಮಕ್ಕಳನ್ನೂ ಪೂರ್ಣವಾಗಿ ಸಂಹರಿಸಿ

ದನೋ–ಆ ಭೀಮಸೇನನ ಮನಸ್ಸನ್ನು ಚುಚ್ಚುವ ಮಾತುಗಳನ್ನು ಕೇಳಿಕೊಂಡಿರಲು ನನಗೆ ಹೇಗೆ ಸಾಧ್ಯವಾಗುತ್ತದೆ?

ನನ್ನ ಮಗನು ನಾನು ಹೇಳಿದ ಮಾತನ್ನು ಕೇಳದೇ ಮಹಾತ್ಮನಾದ ವಿದುರನು ಹೇಳಿದ ಮಾತುಗಳನ್ನು ನಿಜಗೊಳಿಸಿದನು.

ತಾತ, ಸಂಜಯ! ನನ್ನ ಪುತ್ರನಾದ ದುರ್ಯೋಧನನು ಧರ್ಮವಲ್ಲದ ರೀತಿಯಲ್ಲಿ ಹತನಾಗಲಾಗಿ ಕೃತವರ್ಮ-ಕೃಪಾಶ್ವತ್ಥಾಮರು ಮುಂದೇನು ಮಾಡಿದರು?"

"ಮಹಾರಾಜ! ನಿನ್ನ ಕಡೆಯ ಆ ಮೂವರು ಯೋಧರೂ ಶಿಬಿರಗಳಿಂದ ಸ್ವಲ್ಪ ದೂರವೇ ಮುಂದೆ ಹೋಗಿ ನಾನಾವಿಧವಾದ ವೃಕ್ಷಗಳಿಂದಲೂ ಲತೆಗಳಿಂದಲೂ ಆವೃತವಾಗಿದ್ದ ಒಂದು ಘೋರಾರಣ್ಯದ ಬಳಿಗೆ ಬಂದರು. ಆ ಸ್ಥಳದಲ್ಲಿ ಅವರು ಸ್ವಲ್ಪಹೊತ್ತು ವಿಶ್ರಮಿಸಿಕೊಂಡು, ತಮ್ಮ ಶ್ರೇಷ್ಠವಾದ ಕುದುರೆಗಳಿಗೂ ನೀರುಕುಡಿಸಿ, ಸೂರ್ಯಾಸ್ತಮಾನದ ಸಮಯದಲ್ಲಿ ಘೋರಾರಣ್ಯವನ್ನು ಪ್ರವೇಶಿಸಿದರು. ಆ ಮಹಾವನವು ನಾನಾವಿಧವಾದ ಮೃಗಗಳ ಸಮೂಹಗಳಿಂದ ಆಶ್ರಯಿಸಲ್ಪಟ್ಟಿದ್ದಿತು; ನಾನಾವಿಧವಾದ ಪಕ್ಷಿಗಳ ಸಮೂಹಗಳಿಂದ ಆವೃತವಾಗಿದ್ದಿತು; ನಾನಾವಿಧವಾದ ವೃಕ್ಷಗಳಿಂದಲೂ ಲತೆಗಳಿಂದಲೂ ಮುಚ್ಚಿಹೋಗಿದ್ದಿತು; ನಾನಾವಿಧವಾದ ವಿಷಜಂತುಗಳೂ ಆ ಮಹಾರಣ್ಯದಲ್ಲಿ ಆಶ್ರಯವನ್ನು ಹೊಂದಿದ್ದುವು. ಆ ಮಹಾರಣ್ಯದಲ್ಲಿ ನಾನಾಪ್ರಕಾರವಾದ (ಸರೋವರ-ಕೂಪ-ಝರಿ–ಇವೇ ಮುಂತಾದ) ಜಲಾಶಯಗಳಿದ್ದುವು. ಆ ಜಲಾಶಯಗಳು ನಾನಾವಿಧವಾದ ಪುಷ್ಪಗಳಿಂದ ಶೋಭಾಯಮಾನವಾಗಿ ಕಾಣುತ್ತಿದ್ದುವು. ನೂರಾರು ಕಮಲಪುಷ್ಪಗಳಿಂದ ಮುಚ್ಚಿಹೋಗಿದ್ದುವು. ಕೃತವರ್ಮ-ಕೃಪಾಶ್ವತ್ಥಾಮರು ಆ ಘೋರಾರಣ್ಯವನ್ನು ಪ್ರವೇಶಿಸಿ ಸುತ್ತಲೂ ನೋಡುತ್ತಿರಲಾಗಿ ಸಾವಿರಾರು ರೆಂಬೆಗಳಿಂದ ಕೂಡಿದ್ದ ಬಹಳ ದೊಡ್ಡದಾಗಿದ್ದ ಆಲದಮರವೊಂದನ್ನು ನೋಡಿದರು. ಮಾನವಶ್ರೇಷ್ಠರಾದ ಆ ಮೂವರು ಮಹಾರಥರೂ ಆಲದಮರದ ಬಳಿಗೆ ಬಂದು ವಿಶಾಲವಾದ ಆ ವೃಕ್ಷವನ್ನು ನೋಡಿದರು. ಆಲದ ಮರದ ಸಮೀಪ

ದಲ್ಲಿಯೇ ಕೃತವರ್ಮ-ಕೃಪಾಶ್ವತ್ಥಾಮರು ತಮ್ಮ ರಥಗಳಿಂದಿಳಿದು ಕುದುರೆ ಗಳನ್ನು ಬಿಚ್ಚಿದರು. ಯಥೋಚಿತವಾಗಿ ಸ್ನಾನಾಚಮನಾದಿಗಳನ್ನು ಮಾಡಿ ಸಾಯಂಸಂಧ್ಯಾವಂದನೆಯನ್ನು ಮಾಡಿದರು. ಅನಂತರ ಸೂರ್ಯದೇವನು ಶ್ರೇಷ್ಠಪರ್ವತವಾದ ಅಸ್ತಾಚಲವನ್ನು ಸೇರಲಾಗಿ, ಎಲ್ಲ ಜಗತ್ತಿಗೂ ಮಾತೃಸ್ವರೂಪಳಾದ ರಾತ್ರೀದೇವಿಯು ಜಗತ್ತನ್ನೇ ತನ್ನ ಮಡಿಲಲ್ಲಿ ಹಾಕಿಕೊಂಡಳು. (ಕತ್ತಲೆಯು ಸರ್ವತ್ರ ವ್ಯಾಪ್ತವಾಯಿತು.) ಸಂಪೂರ್ಣ ವಾದ ಗ್ರಹ-ನಕ್ಷತ್ರ-ತಾರೆಗಳಿಂದ ಸಮಲಂಕೃತವಾಗಿದ್ದ ಆಕಾಶವು ನವಿರಾದ ಕಲಾಬತ್ತಿನ ವಸ್ತ್ರದಂತೆ ಕಾಣುತ್ತಿದ್ದು ಎಲ್ಲ ಕಡೆಗಳಲ್ಲಿಯೂ ನೋಡಲು ಆಕರ್ಷಕವಾಗಿದ್ದಿತು. ರಾತ್ರಿಯಲ್ಲಿ ಸಂಚರಿಸುವ ಪ್ರಾಣಿಗಳು ಇಚ್ಛಾನುಸಾರ ವಾಗಿ ಸಂಚರಿಸಲೂ–ಕೂಗಲೂ ತೊಡಗಿದುವು. ಹಗಲಿನಲ್ಲಿ ಸಂಚರಿಸುವ ಪ್ರಾಣಿಗಳೆಲ್ಲವೂ ನಿದ್ರೆಗೆ ಅಧೀನವಾದುವು. ರಾತ್ರಿಯಲ್ಲಿ ಸಂಚರಿಸುವ ಪ್ರಾಣಿಗಳ ಕೂಗು ಮಹಾಭಯಂಕರವಾಗಿದ್ದಿತು. ಮಾಂಸಾಹಾರಿಗಳಾದ ಪ್ರಾಣಿಗಳು ಆನಂದಪರವಶವಾಗಿದ್ದುವು. ಆ ಸಮಯದಲ್ಲಿ ರಾತ್ರಿಯು ಮಹಾಘೋರವಾಗಿ ಕಾಣುತ್ತಿದ್ದಿತು. ಘೋರರಾತ್ರಿಯ ಪ್ರಥಮ ಯಾಮದಲ್ಲಿ ದುಃಖ-ಶೋಕಗಳಿಂದ ಯುಕ್ತರಾಗಿದ್ದ ಕೃತವರ್ಮ-ಕೃಪಾಶ್ವತ್ಥಾಮರು ಆ ಆಲದ ಮರದ ಸಮೀಪದಲ್ಲಿ ಒಂದೇಸಾಲಿನಲ್ಲಿ ಕುಳಿತರು. ವಟವೃಕ್ಷದ ಸಮೀಪದಲ್ಲಿ ಕುಳಿತಿದ್ದ ಅವರು ಅತಿಕ್ರಾಂತವಾದ ಕೌರವ-ಪಾಂಡವಯೋಧರ ವಿನಾಶದ ವಿಷಯವಾಗಿಯೇ ಮಾತನಾಡುತ್ತಾ ದುಃಖಪಡುತ್ತಿದ್ದರು. ವಿಧ-ವಿಧವಾದ ಬಾಣಗಳಿಂದ ಕ್ಷತ-ವಿಕ್ಷತರಾಗಿದ್ದ ಅವರು ಬಹಳವಾಗಿ ಬಳಲಿದ್ದರು. ನಿದ್ರೆಯಿಂದಲೂ ಪರೀತರಾಗಿದ್ದ ಅವರು ತೂಕಡಿಸುತ್ತಲೇ ಭೂಮಿಯ ಮೇಲೆ ಕುಳಿತಿದ್ದರು. ಸುಖೋಚಿತರಾಗಿದ್ದ, ದುಃಖಕ್ಕೆ ಭಾಗಿಗಳಾಗಲು ಅನರ್ಹರಾಗಿದ್ದ, ಮಹಾರಥರಾದ ಕೃಪ-ಕೃತ ವರ್ಮರು ನಿದ್ರಾಪರವಶರಾಗಿ ಆ ಕಠಿನವಾದ ನೆಲದ ಮೇಲೆಯೇ ಮಲಗಿದರು. ಬಹಳವಾಗಿ ಬಳಲಿದ್ದ, ಶೋಕಾಭಿಭೂತರಾಗಿದ್ದ, ಬಹುಮೂಲ್ಯ ವಾದ ಹಂಸತೂಲಿಕಾತಲ್ಪದ ಮೇಲೆ ಮಲಗಲು ಯೋಗ್ಯರಾಗಿದ್ದ ಕೃಪ-ಕೃತ ವರ್ಮರು ಅನಾಥರಂತೆ ಭೂಮಿಯನ್ನೇ ಹಾಸಿಗೆಯನ್ನಾಗಿ ಮಾಡಿಕೊಂಡು ಮಲಗಿಬಿಟ್ಟರು. ಆದರೆ ಕ್ರೋಧಪರವಶನಾಗಿದ್ದ, ಅಸಹನಶೀಲನಾಗಿದ್ದ ದ್ರೋಣರ

ಮಗನಾದ ಅಶ್ವತ್ಥಾಮನಿಗೆ ಮಾತ್ರ ನಿದ್ರೆಯು ಬರಲಿಲ್ಲ. ಅವನು ಕೋಪಗೊಂಡ ಸರ್ಪದಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದನು.

ಕೋಪದಿಂದ ಉರಿದುಹೋಗುತ್ತಿದ್ದ ಮಹಾಬಾಹುವಾದ ಅಶ್ವತ್ಥಾಮನಿಗೆ ನಿದ್ರೆಯೇ ಬರಲಿಲ್ಲ. ಭಯಂಕರವಾಗಿ ಕಾಣುತ್ತಿದ್ದ ಆ ಅರಣ್ಯವನ್ನು ಪದೇ-ಪದೇ ನೋಡುತ್ತಲೇ ಇದ್ದನು. ನಾನಾವಿಧವಾದ ಪ್ರಾಣಿಗಳಿಂದ ಸಂಸೇವ್ಯಮಾನವಾಗಿದ್ದ ಅರಣ್ಯದ ಸುತ್ತಲೂ ನೋಡುತ್ತಿದ್ದಾಗ ಮಹಾಬಾಹುವಾದ ಅಶ್ವತ್ಥಾಮನು ಕಾಗೆಗಳಿಂದ ಯುಕ್ತವಾಗಿದ್ದ ಆ ವಟವೃಕ್ಷವನ್ನು ನೋಡಿದನು. ಆ ವಟವೃಕ್ಷದ ಮೇಲೆ ಸಾವಿರಾರು ಕಾಗೆಗಳು ಆ ರಾತ್ರಿಯನ್ನು ಕಳೆಯುತ್ತಿದ್ದುವು. ಆ ಕಾಗೆಗಳು ಪ್ರತ್ಯೇಕ-ಪ್ರತ್ಯೇಕವಾದ ಕೊಂಬೆಗಳನ್ನು ಆಶ್ರಯಿಸಿ ಸುಖವಾಗಿ ಮಲಗಿ ನಿದ್ರಿಸುತ್ತಿದ್ದುವು. ವಟವೃಕ್ಷವನ್ನಾಶ್ರಯಿಸಿ ಆ ಕಾಗೆಗಳೆಲ್ಲವೂ ನಿರ್ಭಯದಿಂದ ವೃಕ್ಷದ ಎಲ್ಲ ಕಡೆಗಳಲ್ಲಿಯೂ ಮಲಗಿರಲಾಗಿ ಭಯಂಕರಾಕಾರದ ಗೂಬೆಯೊಂದು ರಭಸದಿಂದ ಆ ವೃಕ್ಷದ ಸಮೀಪಕ್ಕೆ ಬಂದುದನ್ನು ಅಶ್ವತ್ಥಾಮನು ನೋಡಿದನು. ಆ ಉಲೂಕದ ಕೂಗು ಮಹಾಭಯಂಕರವಾಗಿದ್ದಿತು. ಅದಕ್ಕೆ ದೊಡ್ಡದಾದ ಬೂದು ಮತ್ತು ಕಂದುಹಳದೀಬಣ್ಣದ ದೇಹವಿದ್ದಿತು. ಅದರ ಕಣ್ಣುಗಳು ಹರಿನ್ಮಣಿಗೆ ಸಮಾನವಾಗಿದ್ದುವು. ಅದರ ಕೊಕ್ಕು ಮತ್ತು ಉಗುರುಗಳು ನೀಳವಾಗಿದ್ದುವು. ಗರುಡನಂತೆಯೇ ಆ ಗೂಬೆಯೂ ವೇಗಯುಕ್ತವಾಗಿದ್ದಿತು. ಮಹಾಘೋರ ಧ್ವನಿಯಿಂದ ಕೂಡಿದ್ದ ಆ ಉಲೂಕವು ವೃಕ್ಷದ ಸಮೀಪಕ್ಕೆ ಬಂದೊಡನೆಯೇ ಮೃದುವಾಗಿ ಶಬ್ದಮಾಡತೊಡಗಿತು. ಆ ಪಕ್ಷಿಯು ಅಲ್ಲಲ್ಲಿ ಅವಿತಿಟ್ಟುಕೊಳ್ಳುವಂತೆ ಯಾರಿಗೂ ಕಾಣಿಸದ ರೀತಿಯಲ್ಲಿ ಮೆಲ್ಲ-ಮೆಲ್ಲನೆ ಹಾರುತ್ತಾ ವಟವೃಕ್ಷದ ಒಂದು ರೆಂಬೆಯನ್ನು ಆಶ್ರಯಿಸಿತು. ಕಾಗೆಗಳಿಗೆ ಯಮಪ್ರಾಯವಾಗಿದ್ದ ಆ ಉಲೂಕವು ಹಾರಿಕೊಂಡು ಬಂದು ವಟವೃಕ್ಷದ ರೆಂಬೆಯ ಮೇಲೆ ಕುಳಿತು ಮಲಗಿದ್ದ ಸಾವಿರಾರು ಕಾಗೆಗಳನ್ನು ಕೊಂದುಹಾಕಿತು. ಕಾಲುಗಳೇ ಆಯುಧವಾಗಿದ್ದ ಆ ಉಲೂಕವು ಕೆಲವು ಕಾಗೆಗಳ ರೆಕ್ಕೆಗಳನ್ನೇ ಕತ್ತರಿಸಿತು. ಕೆಲವು ಕಾಗೆಗಳ ತಲೆಗಳನ್ನೇ ಕತ್ತರಿಸಿತು. ಕೆಲವು ಕಾಗೆಗಳ ಕಾಲುಗಳನ್ನೇ ಮುರಿದು ಹಾಕಿತು. ಬಲಿಷ್ಠವಾಗಿದ್ದ ಆ ಗೂಬೆಯು ತನ್ನ ಕಣ್ಣಿಗೆ ಬಿದ್ದ ಕಾಗೆಗಳೆಲ್ಲ

ವನ್ನೂ ಕ್ಷಣಮಾತ್ರದಲ್ಲಿ ಸಂಹರಿಸಿತು. ಆ ಸಮಯದಲ್ಲಿ ವಟವೃಕ್ಷಮಂಡಲವು ಸತ್ತುಹೋದ ಕಾಗೆಗಳಿಂದಲೂ ಮತ್ತು ಅವುಗಳ ಛಿನ್ನ-ಭಿನ್ನವಾಗಿದ್ದ ಅವಯವಗಳಿಂದಲೂ ಸಂಪೂರ್ಣವಾಗಿ ವ್ಯಾಪ್ತವಾಗಿದ್ದಿತು. ಗೂಬೆಯು ಆ ಕಾಗೆಗಳೆಲ್ಲವನ್ನೂ ಸಂಹರಿಸಿ ಶತ್ರುಗಳಿಗೆ ಮನಃಪೂರ್ತಿಯಾಗಿ ಪ್ರತೀಕಾರಮಾಡಿ ಆನಂದಿಸಿತು. ರಾತ್ರಿಯಲ್ಲಿ ಗೂಬೆಯು ಮಾಡಿದ



ವಂಚನೆಯಿಂದ ಕೂಡಿದ ಆ ಕ್ರೂರಕರ್ಮವನ್ನು ಪ್ರತ್ಯಕ್ಷವಾಗಿ ನೋಡಿದ ಅಶ್ವತ್ಥಾಮನು ತಾನೂ ಸಹ ಹಾಗೆಯೇ ಮಾಡಬೇಕೆಂದು ಸಂಕಲ್ಪಿಸಿದವನಾಗಿ ತನ್ನಲ್ಲಿಯೇ ಚಿಂತಿಸತೊಡಗಿದನು :

ಉಪದೇಶಃ ಕೃತೋಽನೇನ ಪಕ್ಷಿಣಾ ಮಮ ಸಂಯುಗೇ ।
ಶತ್ರೂಣಾಂ ಕ್ಷಪಣೇ ಯುಕ್ತಃ ಪ್ರಾಪ್ತಃ ಕಾಲಶ್ಚ ಮೇ ಮತಃ ॥

"ಈ ಸಮಯದಲ್ಲಿ ಯುದ್ಧದಲ್ಲಿ ನಾನು ಅನುಸರಿಸಬೇಕಾದ ನೀತಿಯು ಯಾವುದೆಂಬುದನ್ನು ಈ ಪಕ್ಷಿಯೇ ನನಗೆ ನಿದರ್ಶನಪೂರ್ವಕವಾಗಿ ಉಪದೇಶಿಸಿದೆ. ಇದೇ ವಿಧಾನದಲ್ಲಿ ಶತ್ರುಗಳನ್ನು ಸಂಹರಿಸಲು ಇದು ಸಕಾಲವಾಗಿರುವುದೆಂದು ನಾನು ಭಾವಿಸುತ್ತೇನೆ.

**ನಾದ್ಯ ಶಕ್ಯಾ ಮಯಾ ಹನ್ತುಂ ಪಾಣ್ಡವಾ ಜಿತಕಾಶಿನಃ ।**
**ಬಲವನ್ತಃ ಕೃತೋತ್ಸಾಹಾಃ ಪ್ರಾಪ್ತಲಕ್ಷ್ಯಾಃ ಪ್ರಹಾರಿಣಃ ॥೪೬॥**

ಪಾಂಡವರೀಗ ವಿಜಯೋಲ್ಲಸಿತರಾಗಿದ್ದಾರೆ. ಅವರೆಲ್ಲರೂ ಮಹಾ ಬಲಿಷ್ಠರೂ, ಉತ್ಸಾಹಶಕ್ತಿಯಿರುವವರೂ, ಲಕ್ಷ್ಯಭೇದನದಲ್ಲಿ ಸಿದ್ಧಿಯನ್ನು ಪಡೆದಿರತಕ್ಕವರೂ, ಮೇಲಾಗಿ ಪ್ರಹಾರಕುಶಲರೂ ಆಗಿದ್ದಾರೆ. ಇಂತಹವರನ್ನು ನೇರವಾದ ಯುದ್ಧದಲ್ಲಿ ಸಂಹರಿಸಲು ನಾನು ಖಂಡಿತ ವಾಗಿಯೂ ಸಮರ್ಥನಲ್ಲ.

**ರಾಜ್ಞಃ ಸಕಾಶಾತ್ತೇಷಾಂ ತು ಪ್ರತಿಜ್ಞಾತೋ ವಧೋ ಮಯಾ ।**
**ಪತಙ್ಗಾಗ್ನಿಸಮಾಂ ವೃತ್ತಿಮಾಸ್ಥಾಯಾತ್ಮವಿನಾಶಿನೀಮ್ ।**
**ನ್ಯಾಯತೋ ಯುಧ್ಯಮಾನಸ್ಯ ಪ್ರಾಣತ್ಯಾಗೋ ನ ಸಂಶಯಃ ॥೪೭॥**

ನಾನು ದುರ್ಯೋಧನನ ಸಮೀಪದಲ್ಲಿ ಶತ್ರುಗಳೆಲ್ಲರನ್ನೂ ವಧಿಸುವುದಾಗಿ ಪ್ರತಿಜ್ಞೆಯನ್ನೇನೋ ಮಾಡಿಬಿಟ್ಟೆನು. ಆದರೆ ನಾನೇನಾದರೂ ಆತ್ಮವಿನಾಶಕರವಾದ *ಪತಂಗಾಗ್ನಿವೃತ್ತಿಯನ್ನು ಆಶ್ರಯಿಸಿ ಪಾಂಡವರೊಡನೆ ನ್ಯಾಯರೀತಿಯಲ್ಲಿಯೇ ಯುದ್ಧಮಾಡಲು ಹೋದರೆ ಪ್ರಾಣಗಳನ್ನೇ ತೊರೆಯಬೇಕಾಗುವುದರಲ್ಲಿ ಸಂಶಯವೇ ಇಲ್ಲ.

---

*ಪತಂಗಾಗ್ನಿವೃತ್ತಿಃ :- ಪತಂಗವು ಬೆಂಕಿಯಿಂದ ಆಕರ್ಷಿತವಾಗಿ ತಾನೇ-ತಾನಾಗಿ ಬೆಂಕಿಯೊಳಗೆ ಬಿದ್ದು ಪ್ರಾಣತೊರೆಯುತ್ತದೆ. ಈ ವೃತ್ತಿಯನ್ನು ಅನುಸರಿಸುವುದೆಂದರೆ ತಾನೇ-ತಾನಾಗಿ ಪಾಂಡವರೊಡನೆ ಯುದ್ಧಕ್ಕೆ ಹೋಗಿ ಪ್ರಾಣತೊರೆಯುವುದು. ಅಶ್ವತ್ಥಾಮನ ಬಳಿಯಲ್ಲಿ ಮಹಾಸ್ತ್ರಗಳೇ ಇದ್ದರೂ, ಅವನು ಮಹಾಸಾಹಸಿಯೇ ಆಗಿದ್ದರೂ ಮತ್ತು ಚಿರಂಜೀವಿಯೇ ಆಗಿದ್ದರೂ ಪಾಂಡವರ ಮಹಾವಿಜಯದಿಂದ ಅಧೀರನಾಗಿ ಹೀಗೆ ಭಾವಿಸಿರಬಹುದು.

**ಛದ್ಮನಾ ಚ ಭವೇತ್ಸಿದ್ಧಿಃ ಶತ್ರೂಣಾಂ ಚ ಕ್ಷಯೋ ಮಹಾನ್ ।**
**ತತ್ರ ಸಂಶಯಿತಾದರ್ಥಾದ್ಯೋಽರ್ಥೋ ನಿಃಸಂಶಯೋ ಭವೇತ್ ।**
**ತಂ ಜನಾ ಬಹು ಮನ್ಯನ್ತೇ ಯೇ ಚ ಶಾಸ್ತ್ರವಿಶಾರದಾಃ ॥೬೯॥**

ವಂಚನೆಯ ಮಾರ್ಗದಿಂದಲೂ ಕಾರ್ಯಗಳು ಸಿದ್ಧಿಸುತ್ತವೆ. ಶತ್ರು ಪಕ್ಷದಲ್ಲಿ ಅಪಾರವಾದ ಜನಕ್ಷಯವೂ ಆಗುತ್ತದೆ. ಯಾವ ಮಾರ್ಗವನ್ನು ಅವಲಂಬಿಸುವುದರಿಂದ ಫಲಸಿದ್ಧಿಯಲ್ಲಿ ಸಂಶಯವಿರುವುದೋ–ಆ ಮಾರ್ಗವನ್ನು ಅವಲಂಬಿಸುವುದಕ್ಕಿಂತಲೂ ಯಾವ ಮಾರ್ಗವನ್ನು ಅವಲಂಬಿಸುವುದರಿಂದ ಫಲವು ನಿಃಸಂಶಯವಾಗಿ ಲಭಿಸುವುದೋ–ಆ ಮಾರ್ಗವನ್ನೇ ಅನುಸರಿಸುವುದು ಉತ್ತಮ. ಶಾಸ್ತ್ರವಿಶಾರದರಾದ ಜನರೂ ಹೀಗೆ ಮಾಡುವುದನ್ನೇ ಪ್ರಶಂಸೆಮಾಡುತ್ತಾರೆ.

**ಯಚ್ಚಾಪ್ಯತ್ರ ಭವೇದ್ವಾಚ್ಯಂ ಗರ್ಹಿತಂ ಲೋಕನಿನ್ದಿತಮ್ ।**
**ಕರ್ತವ್ಯಂ ತನ್ಮನುಷ್ಯೇಣ ಕ್ಷತ್ರಧರ್ಮೇಣ ವರ್ತತಾ ॥೭೦॥**

(ಇದನ್ನು ಸಾಮಾನ್ಯಜನರು ಹೀನಕಾರ್ಯವೆಂದು ನಿಂದಿಸಬಹುದು. ಆದರೆ :) ಈ ಲೋಕದಲ್ಲಿ ಜನರು ಯಾವ ಕಾರ್ಯವು ದೂಷಿತವಾದುದು; ಲೋಕನಿಂದನೆಗೆ ಕಾರಣವಾಗತಕ್ಕುದು ಎಂದು ಹೇಳುತ್ತಾರೆಯೋ–ಅಂತಹ ಕಾರ್ಯಗಳನ್ನೂ (ಕೆಲವು ಸಂದರ್ಭಗಳಲ್ಲಿ) ಕ್ಷತ್ರಿಯಧರ್ಮವನ್ನು ಅನುಸರಿಸುವ ಮನುಷ್ಯನು ಮಾಡಬೇಕಾದುದು ಕರ್ತವ್ಯವೇ ಆಗಿರುತ್ತದೆ.

**ನಿನ್ದಿತಾನಿ ಚ ಸರ್ವಾಣಿ ಕುತ್ಸಿತಾನಿ ಪದೇ ಪದೇ ।**
**ಸೋಪಧಾನಿ ಕೃತಾನ್ಯೇವ ಪಾಣ್ಡವೈರಕೃತಾತ್ಮಭಿಃ ॥೭೧॥**

(ಈ ನೀತಿಗೆ ಧರ್ಮಾತ್ಮರೆನಿಸಿಕೊಂಡಿರುವ ಪಾಂಡವರೂ ಹೊರತಾಗಿಲ್ಲ.) ಅಸಂಸ್ಕೃತವಾದ ಬುದ್ಧಿಯಿಂದ ಕೂಡಿರುವ ಪಾಂಡವರೂ ಪದೇ-ಪದೇ ನಿಂದಿತವಾದ ಮತ್ತು ಕುತ್ಸಿತವಾದ ಕಾರ್ಯಗಳನ್ನು ಮಾಡುತ್ತಲೇ ಬಂದಿರುತ್ತಾರೆ. ಇಷ್ಟೇ ಅಲ್ಲದೇ ಅವರು ಅನೇಕ ವಂಚನಾಕಾರ್ಯಗಳನ್ನೂ ಎಸಗಿದ್ದಾರೆ.

ಇದೇ ವಿಷಯದಲ್ಲಿ ಹಿಂದೆ ನ್ಯಾಯದೃಷ್ಟಿಯುಳ್ಳ, ತತ್ತ್ವಾರ್ಥಗಳನ್ನು ತಿಳಿದಿರುವ, ಧರ್ಮಚಿಂತಕರಾದ ಜನರು ಹೇಳಿರುವ ಯಥಾರ್ಥವಾದ

ಶ್ಲೋಕಗಳಿವೆ. (ಆ ಶ್ಲೋಕಗಳೇ ಈ ಸಮಯದಲ್ಲಿ ನಮಗೂ ಮಾರ್ಗದರ್ಶಕಗಳಾಗಿವೆ.)

**ಪರಿಶ್ರಾನ್ತೇ ವಿದೀರ್ಣೇ ವಾ ಭುಞ್ಜಾನೇ ವಾಪಿ ಶತ್ರುಭಿಃ ।**
**ಪ್ರಸ್ಥಾನೇ ವಾ ಪ್ರವೇಶೇ ವಾ ಪ್ರಹರ್ತವ್ಯಂ ರಿಪೋರ್ಬಲಮ್ ॥**

ಶತ್ರುಗಳ ಸೈನ್ಯವು ಬಹಳವಾಗಿ ಬಳಲಿರುವಾಗ, ಚೆಲ್ಲಾಪಿಲ್ಲಿಯಾಗಿರುವಾಗ, ಊಟಮಾಡುತ್ತಿರುವಾಗ, ಎಲ್ಲಿಗಾದರೂ ಹೊರಡುತ್ತಿರುವಾಗ, ಯಾವ ಸ್ಥಳಕ್ಕಾದರೂ ಪ್ರವೇಶಮಾಡುತ್ತಿರುವಾಗ–ಅಜಾಗರೂಕತೆಯಿಂದಿರುವ ಅಂತಹ ಶತ್ರುಸೈನ್ಯವನ್ನು ಪ್ರಹರಿಸುವುದು ಕರ್ತವ್ಯವೇ ಆಗಿರುತ್ತದೆ.

**ನಿದ್ರಾರ್ತಮರ್ಧರಾತ್ರೇ ಚ ತಥಾ ನಷ್ಟಪ್ರಣಾಯಕಮ್ ।**
**ಭಿನ್ನಯೋಧಂ ಬಲಂ ಯಚ್ಚ ದ್ವಿಧಾ ಯುಕ್ತಂ ಚ ಯದ್ಭವೇತ್ ॥**

ಯಾವ ಶತ್ರುಗಳ ಸೈನ್ಯವು ಅರ್ಧರಾತ್ರಿಯಲ್ಲಿ ನಿದ್ರಾವಶವಾಗಿರುತ್ತದೆಯೋ, ನಾಯಕನಿಂದ ಹೀನವಾಗಿರುತ್ತದೆಯೋ, ಯಾವ ಸೈನ್ಯದ ಮುಖ್ಯಯೋಧರೆಲ್ಲರೂ ಮರಣಹೊಂದಿರುತ್ತಾರೆಯೋ ಮತ್ತು ಯಾವ ಸೈನ್ಯದ ಪದಾಧಿಕಾರಿಗಳಲ್ಲಿ ಭಿನ್ನಾಭಿಪ್ರಾಯವಿರುತ್ತದೆಯೋ (ಸೈನ್ಯವು ಎರಡು ಭಾಗಗಳಾಗಿ ಒಡೆದಿರುತ್ತದೆಯೋ) – ಅಂತಹ ಶತ್ರುಸೈನ್ಯವನ್ನು ಅರ್ಥಸಿದ್ಧಿಯನ್ನು ಅಪೇಕ್ಷಿಸುವ ಕ್ಷತ್ರಿಯನು ಪ್ರಹರಿಸಲೇಬೇಕು."

ಮಹಾರಾಜ! ಪ್ರತಾಪವಂತನಾದ ದ್ರೋಣಪುತ್ರನು ಇವೇ ಮುಂತಾಗಿ ಚಿಂತಿಸುತ್ತಾ ಮಲಗಿದ್ದ ಪಾಂಚಾಲಸಹಿತರಾದ ಪಾಂಡವರನ್ನು ಅದೇ ರಾತ್ರಿಯಲ್ಲಿ ಸಂಹರಿಸಲು ನಿಶ್ಚಯಿಸಿಬಿಟ್ಟನು. ಇಂತಹ ಅತಿಕ್ರೂರವಾದ ಬುದ್ಧಿಯನ್ನಾಶ್ರಯಿಸಿ ಪಾಂಡವರನ್ನು ಸಂಹರಿಸಬೇಕೆಂದು ನಿಶ್ಚಯಿಸಿದ ಅಶ್ವತ್ಥಾಮನು ನಿದ್ರಾವಶರಾಗಿದ್ದ ತನ್ನ ಸೋದರಮಾವನನ್ನೂ ಮತ್ತು ಕೃತವರ್ಮನನ್ನೂ ಎಚ್ಚರಗೊಳಿಸಿದನು. ಎಚ್ಚರಗೊಂಡ ಮಹಾಬಲರಾದ, ಮಹಾತ್ಮರಾದ ಕೃಪ-ಕೃತವರ್ಮರು ಅಶ್ವತ್ಥಾಮನ ನಿಶ್ಚಯವನ್ನು ಅವನಿಂದಲೇ ಕೇಳಿ ತಿಳಿದುಕೊಂಡರು. ಮಹಾಪರಾಕ್ರಮಿಗಳಾಗಿದ್ದ ಅವರಿಬ್ಬರೂ ಅಶ್ವತ್ಥಾಮನ ಯೋಜನೆಯನ್ನು ಕೇಳಿ ನಾಚಿಕೆಗೊಂಡರೇ ಹೊರತು ಅವನಿಗೆ ಯುಕ್ತವಾದ ಯಾವ ಉತ್ತರವನ್ನು ಕೊಡಲೂ ಅವರಿಗೆ

ತೋಚಲೇ ಇಲ್ಲ. ಅಶ್ವತ್ಥಾಮನಾದರೋ ಸ್ವಲ್ಪ ಹೊತ್ತು ಹಾಗೆಯೇ ಚಿಂತಿಸುತ್ತಿದ್ದು ಕಂಬನಿದುಂಬಿದ ಕಣ್ಣುಗಳಿಂದ ಕೂಡಿದವನಾಗಿ ಈ ಮಾತುಗಳನ್ನು ಹೇಳಿದನು :

**ಹತೋ ದುರ್ಯೋಧನೋ ರಾಜಾ ಏಕವೀರೋ ಮಹಾಬಲಃ ।**
**ಯಸ್ಯಾರ್ಥೇ ವೈರಮಸ್ಮಾಭಿರಾಸಕ್ತಂ ಪಾಣ್ಡವೈಃ ಸಹ ॥೪೯॥**

"ನಾವೆಲ್ಲರೂ ಯಾವನ ಸಲುವಾಗಿ ಪಾಂಡವರೊಡನೆ ವೈರವನ್ನು ಕಟ್ಟಿಕೊಂಡೆವೋ ಅಂತಹ ಏಕೈಕವೀರನಾದ, ಮಹಾಬಲನಾದ ದುರ್ಯೋಧನರಾಜನು ಹತನಾದನು.

ಹನ್ನೊಂದು ಅಕ್ಷೌಹಿಣೀಸೈನ್ಯಕ್ಕೆ ಒಡೆಯನಾಗಿದ್ದ, ಶುದ್ಧವಿಕ್ರಮನಾದ ದುರ್ಯೋಧನನು ಯುದ್ಧದಲ್ಲಿ ಏಕಾಂಗಿಯಾಗಿದ್ದನು. ಅನೇಕ ಕ್ಷುದ್ರ ಮನುಷ್ಯರಿಂದ ಪರಿವೃತನಾಗಿದ್ದನು. ಅವನು ಭೀಮಸೇನನಿಂದ ಕೆಳಕ್ಕೆ ಬೀಳಿಸಲ್ಪಟ್ಟನು. ಇಷ್ಟು ಮಾತ್ರವಲ್ಲದೇ ಪರಮಕ್ಷುದ್ರನಾದ ಭೀಮಸೇನನು ಮೂರ್ಧಾಭಿಷಿಕ್ತನಾಗಿದ್ದ ದುರ್ಯೋಧನನ ತಲೆಯನ್ನು ಕಾಲಿನಿಂದ ಮೆಟ್ಟಿ ಅತ್ಯಂತಕ್ರೂರವಾದ, ಪರಮಹೇಯವಾದ ಕಾರ್ಯವನ್ನು ಮಾಡಿದನು. ಅದರಿಂದ ಪರಮಹರ್ಷಿತರಾದ ಪಾಂಚಾಲರು ಸಿಂಹನಾದಗಳನ್ನು ಮಾಡುತ್ತಿದ್ದಾರೆ ; ಕೂಗಾಡುತ್ತಿದ್ದಾರೆ ; ಅಟ್ಟಹಾಸದಿಂದ ನಗುತ್ತಿದ್ದಾರೆ; ಶಂಖಗಳನ್ನೂದುತ್ತಿದ್ದಾರೆ ; ದುಂದುಭಿಗಳನ್ನು ಬಾರಿಸುತ್ತಿದ್ದಾರೆ. ಶಂಖ ಧ್ವನಿಗಳಿಂದ ಸಮ್ಮಿಶ್ರವಾದ ನಾನಾವಿಧವಾದ ವಾದ್ಯಘೋಷಗಳ ಭಯಂಕರ ಧ್ವನಿಯು ವಾಯುವಿನಿಂದ ಒಯ್ಯಲ್ಪಟ್ಟು ಎಲ್ಲ ದಿಕ್ಕುಗಳನ್ನೂ ತುಂಬುತ್ತಿರು ವಂತೆ ಕಾಣುತ್ತಿದೆ. ಕೆನೆಯುತ್ತಿರುವ ಕುದುರೆಗಳ, ಘೀಳಿಡುತ್ತಿರುವ ಆನೆಗಳ ಮತ್ತು ಸಿಂಹನಾದಗಳನ್ನು ಮಾಡುತ್ತಿರುವ ಶೂರರ ಮಹಾನಿನಾದಗಳು ಕೇಳಿಬರುತ್ತಿವೆ. ಆನಂದತುಂದಿಲರಾಗಿ ಪೂರ್ವದಿಕ್ಕಿನ ಕಡೆಗೆ ವೇಗಪೂರ್ವಕ ವಾಗಿ ಪ್ರಯಾಣಮಾಡುತ್ತಿರುವ ಪಾಂಡವಯೋಧರ ರೋಮಾಂಚಕರವಾದ ರಥಚಕ್ರಗಳ ಶಬ್ದಗಳು ಕೇಳಿಬರುತ್ತಿವೆ. ಪಾಂಡವರು ಸೈನ್ಯಸಹಿತರಾದ ಧೃತರಾಷ್ಟ್ರನ ಎಲ್ಲ ಮಕ್ಕಳನ್ನೂ ಸಂಹರಿಸಿದರು. ಈ ಮಹಾಸಂಹಾರ ಕಾರ್ಯವು ನಡೆದನಂತರ ಕೌರವರ ಪಡೆಯಲ್ಲಿ ನಾವು ಮೂವರು ಮಾತ್ರವೇ ಉಳಿದುಕೊಂಡಿದ್ದೇವೆ.

ನಮ್ಮಲ್ಲಿ ಹಲವಾರು ಮಂದಿ ಯೋಧರಿಗೆ ನೂರು ಆನೆಗಳ ಬಲವಿದ್ದಿತು. ಕೆಲವರು ಎಲ್ಲ ಅಸ್ತ್ರಗಳಲ್ಲಿಯೂ ಪ್ರಾವೀಣ್ಯವನ್ನು ಪಡೆದುಕೊಂಡಿದ್ದರು. ಅಂತಹವರೆಲ್ಲರೂ ಪಾಂಡವರಿಂದ ಹತರಾದರು. ಇದನ್ನು ನಾನು ಕಾಲದ ವೈಪರೀತ್ಯವೆಂದೇ ಭಾವಿಸುತ್ತೇನೆ. ನಿಶ್ಚಯವಾಗಿಯೂ ಈ ಕಾರ್ಯದಿಂದ ಇಂತಹುದೇ ಪರಿಣಾಮವಾಗಬೇಕಾಗಿತ್ತೆಂದು ತೋರುತ್ತದೆ. ನಾವೆಲ್ಲರೂ ಅತ್ಯಂತದುಷ್ಕರವಾದ ಕಾರ್ಯವನ್ನೇ ಮಾಡಿದರೂ ಯುದ್ಧದ ಅಂತಿಮಫಲವು ಇಂತಹ ಘೋರರೂಪವಾಗಿ ಪರಿಣಮಿಸಿತು.

**ಭವತೋಽಸ್ತು ಯದಿ ಪ್ರಜ್ಞಾ ನ ಮೋಹಾದಪನೀಯತೇ ।**
**ವ್ಯಾಪನ್ನೇಽಸ್ಮಿನ್ಮಹತ್ಯರ್ಥೇ ಯನ್ನಃ ಶ್ರೇಯಸ್ತದುಚ್ಯತಾಮ್ ॥**

ಮೋಹದಿಂದ ನಿಮ್ಮ ಪ್ರಜ್ಞೆಯೇನಾದರೂ ಇನ್ನೂ ನಷ್ಟವಾಗಿ ಹೋಗಿರದಿದ್ದರೆ ನಮ್ಮ ಕಡೆಯ ಸರ್ವಾರ್ಥಗಳೂ ವಿನಾಶವಾಗಿ ಹೋಗಿರುವ ಈ ಸಮಯದಲ್ಲಿ ಯಾವ ಕಾರ್ಯವನ್ನು ಮಾಡುವುದರಿಂದ ನಮಗೆ ಶ್ರೇಯಸ್ಸುಂಟಾಗುತ್ತದೆಂಬುದನ್ನು ಹೇಳಿರಿ."

ಗನೆಯ ಅಧ್ಯಾಯವು ಮುಗಿಯಿತು.

೨ನೆಯ ಅಧ್ಯಾಯ ಸೌಪ್ತಿಕಪರ್ವ (ಮುಂದುವರಿದಿದೆ.)

## ಕೃಪರು ಅಶ್ವತ್ಥಾಮನಿಗೆ ದೈವದ ಪ್ರಾಬಲ್ಯವನ್ನು ವಿವರಿಸಿ ಹೇಳುತ್ತಾ ಮುಂದಿನ ಕರ್ತವ್ಯದ ವಿಷಯದಲ್ಲಿ ಸತ್ಪುರುಷರ ಸಲಹೆಯನ್ನು ಪಡೆಯುವಂತೆ ಪ್ರೇರಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

ಮಹಾರಾಜ! ಅಶ್ವತ್ಥಾಮನ ಮಾತನ್ನು ಕೇಳಿ ಕೃಪರು ಹೇಳುತ್ತಾರೆ :

"ಮಹಾಬಾಹುವೇ! ನೀನು ಯಾವ ಮಾತುಗಳನ್ನು ಹೇಳಿದೆಯೋ ಆ ಎಲ್ಲ ಮಾತುಗಳನ್ನೂ ನಾನೂ ಕೇಳಿದೆನು. ಈಗ ನೀನು ನನ್ನ ಮಾತುಗಳನ್ನೂ ಸ್ವಲ್ಪ ಕೇಳು.

**ಅಬದ್ಧಾ ಮಾನುಷಾಃ ಸರ್ವೇ ನಿಬದ್ಧಾಃ ಕರ್ಮಣೋರ್ದ್ವಯೋಃ ।**
**ದೈವೇ ಪುರುಷಕಾರೇ ಚ ಪರಂ ತಾಭ್ಯಾಂ ನ ವಿದ್ಯತೇ ॥೨॥**

ಜಗತ್ತಿನಲ್ಲಿರುವ ಮಾನವರೆಲ್ಲರೂ ದೈವಾನುಕೂಲ ಮತ್ತು ಪುರುಷಕಾರ (ಪುರುಷಪ್ರಯತ್ನ)–ಈ ಎರಡು ವಿಧವಾದ ಕರ್ಮಗಳಿಂದ ಬಂಧಿಸಲ್ಪಡುತ್ತಾರೆ. ದೈವ ಮತ್ತು ಪುರುಷಪ್ರಯತ್ನಗಳೆರಡನ್ನೂ ಬಿಟ್ಟು ಬೇರೆ ಯಾವುದರಿಂದಲೂ ಮನುಷ್ಯನು ಬಂಧಿತನಾಗಿರುವುದಿಲ್ಲ.

**ನ ಹಿ ದೈವೇನ ಸಿಧ್ಯನ್ತಿ ಕಾರ್ಯಾಣ್ಯೇಕೇನ ಸತ್ತಮ ।**
**ನ ಚಾಪಿ ಕರ್ಮಣೈಕೇನ ದ್ವಾಭ್ಯಾಂ ಸಿದ್ಧಸ್ತು ಯೋಗತಃ ॥೩॥**

ಸತ್ಪುರುಷರಲ್ಲಿ ಶ್ರೇಷ್ಠನಾದವನೇ! ಅದೃಷ್ಟವೊಂದರಿಂದಲೇ ಕಾರ್ಯಗಳು ಸಿದ್ಧಿಸುವುದಿಲ್ಲ. ಅಂತೆಯೇ ಪುರುಷಪ್ರಯತ್ನವೊಂದರಿಂದಲೂ ಕಾರ್ಯಗಳು ಸಿದ್ಧಿಸುವುದಿಲ್ಲ. ದೈವ ಮತ್ತು ಪುರುಷಪ್ರಯತ್ನ–ಈ ಎರಡೂ ಸೇರಿದಲ್ಲಿ ಕಾರ್ಯಗಳು ಸಿದ್ಧಿಸುತ್ತವೆ.

ಆ ಎರಡು ದೈವ-ಪುರುಷಕಾರಗಳಿಂದಲೇ ಉತ್ತಮಾಧಮರೂಪ ಗಳಾದ ಎಲ್ಲ ಕಾರ್ಯಗಳೂ ನಿಬದ್ಧವಾಗಿವೆ. ಈ ದೈವ ಮತ್ತು ಪುರುಷಕಾರಗಳಿಂದಲೇ ಪ್ರವೃತ್ತಿ ಮತ್ತು ನಿವೃತ್ತಿಗೆ ಸಂಬಂಧಿಸಿದ ಕಾರ್ಯಗಳೂ ನಡೆಯುತ್ತವೆ.

**ಪರ್ಜನ್ಯಃ ಪರ್ವತೇ ವರ್ಷನ್ಕಿನ್ನು ಸಾಧಯತೇ ಫಲಮ್ ।**
**ಕೃಷ್ಟೇ ಕ್ಷೇತ್ರೇ ತಥಾ ವರ್ಷನ್ಕಿನ್ನ ಸಾಧಯತೇ ಫಲಮ್ ॥೫॥**

ಪರ್ಜನ್ಯನು ಪರ್ವತದ ಮೇಲೆ ಮಳೆಗರೆಯುವುದರಿಂದ ಯಾವ ಫಲವನ್ನಾದರೂ ಪಡೆದುಕೊಳ್ಳುವನೇ? ಅದೇ ಪರ್ಜನ್ಯನು ಹಸನಾದ ಕ್ಷೇತ್ರದ (ಜಮೀನಿನ) ಮೇಲೆ ಮಳೆಯನ್ನು ಸುರಿಸುವುದರಿಂದ ಯಾವ ಫಲವನ್ನು ತಾನೇ ಪಡೆಯದೇ ಇದ್ದಾನು? (ಮಳೆಗರೆಯುವ ಕಾರ್ಯವು ಒಂದೇ ಆದರೂ ಪರ್ವತದ ಮೇಲೆ ಮಳೆಸುರಿದರೆ ಅದು ವ್ಯರ್ಥವಾಗುತ್ತದೆ. ಅದೇ ಮಳೆಯು ಉತ್ತಿರುವ ಕ್ಷೇತ್ರದ ಮೇಲೆ ಸುರಿದರೆ ಬೀಜಬಿತ್ತಲು ಮತ್ತು ಬೆಳೆಯಲು ಅನುಕೂಲವಾಗಿ ಫಲನೀಡುತ್ತದೆ. ಪರ್ವತದ ಮೇಲೆ ಮಳೆಬೀಳುವುದೂ ದೈವಯೋಗದಿಂದಲೇ. ಕ್ಷೇತ್ರದ ಮೇಲೆ ಮಳೆ ಬೀಳುವುದೂ ದೈವಯೋಗದಿಂದಲೇ. ಆದರೆ ಪರ್ವತದ ಮೇಲೆ ಮಳೆ ಬಿದ್ದಾಗ ಅಲ್ಲಿ ಪುರುಷಪ್ರಯತ್ನದ ಸಂಯೋಗವಿಲ್ಲದೇ ಇರುವುದರಿಂದ ವ್ಯರ್ಥ ವಾಗಿ ಹೋಗುತ್ತದೆ. ಕ್ಷೇತ್ರದ ಮೇಲೆ ಬಿದ್ದಾಗ ಅಲ್ಲಿ ಪುರುಷಪ್ರಯತ್ನದ

ಸಂಯೋಗವೂ ಇರುವುದರಿಂದ ಫಲನೀಡಲು ಸಾಧ್ಯವಾಗುತ್ತದೆ. ದೈವವು ಮಳೆಗರೆಯಬಹುದೇ ಹೊರತು ಬೆಳೆಯಾಗಲು ಪುರುಷಪ್ರಯತ್ನವು ಆವಶ್ಯಕ. ಹಾಗೆಯೇ ಮನುಷ್ಯನು ಉತ್ತು ಸಿದ್ಧಗೊಳಿಸುವ ಕ್ಷೇತ್ರದ ಮೇಲೆ ದೈವಿಕವಾದ ಮಳೆಯು ಅಗತ್ಯವಾಗಿ ಬರಲೇಬೇಕು. ಆದುದರಿಂದ ಯಾವುದೇ ಕಾರ್ಯವು ಸಿದ್ಧಿಸಬೇಕಾದರೂ ಮನುಷ್ಯಪ್ರಯತ್ನ ಮತ್ತು ದೈವದ ಬೆಂಬಲ – ಎರಡೂ ಇದ್ದೇ ತೀರಬೇಕು.)

**ಉತ್ಥಾನಂ ಚಾಪ್ಯದೈವಸ್ಯ ಹ್ಯನುತ್ಥಾನಂ ಚ ದೈವತಮ್ ।**
**ವ್ಯರ್ಥಂ ಭವತಿ ಸರ್ವತ್ರ ಪೂರ್ವಸ್ತತ್ರ ವಿನಿಶ್ಚಯಃ ॥೬॥**

ದೈವಬಲವಿಲ್ಲದ ಪುರುಷಪ್ರಯತ್ನವೂ–ಪುರುಷಪ್ರಯತ್ನವಿಲ್ಲದ ದೈವ ಬಲವೂ ಸರ್ವಪ್ರಕಾರದಿಂದಲೂ ವ್ಯರ್ಥವೇ ಆಗುತ್ತದೆ. (ಮನುಷ್ಯನು ಕೇವಲ ಉಳುವುದರಿಂದಲೂ ಪ್ರಯೋಜನವಾಗುವುದಿಲ್ಲ.) ಆದರೆ ಮೊದಲನೆಯ ದಾದ ದೈವದ ಸಹಯೋಗವಿಲ್ಲದೇ ಪುರುಷಪ್ರಯತ್ನ ವ್ಯರ್ಥವೆಂಬುದು ನಿಶ್ಚಿತ.

**ಸುವೃಷ್ಟೇ ಚ ಯಥಾ ದೇವೇ ಸಮ್ಯಕ್ಕ್ಷೇತ್ರೇ ಚ ಕರ್ಷಿತೇ ।**
**ಬೀಜಂ ಮಹಾಗುಣಂ ಭೂಯಾತ್ತಥಾ ಸಿದ್ಧಿರ್ಹಿ ಮಾನುಷೀ ॥೭॥**

ಚೆನ್ನಾಗಿ ಉತ್ತಿರುವ ಕ್ಷೇತ್ರದ ಮೇಲೆ ಪರ್ಜನ್ಯನೂ ಚೆನ್ನಾಗಿ ಮಳೆಗರೆಯಲಾಗಿ ಆ ಕ್ಷೇತ್ರದಲ್ಲಿ ಬಿತ್ತಲ್ಪಟ್ಟ ಬೀಜವು ಮಹಾಫಲ ದಾಯಕವಾಗುತ್ತದೆ. ಹೀಗೆ ಮನುಷ್ಯನ ಕಾರ್ಯಸಿದ್ಧಿಯು ದೈವ ಮತ್ತು ಪುರುಷಪ್ರಯತ್ನಗಳ ಸಹಯೋಗದಿಂದ ಮಾತ್ರವೇ ಸಾಧ್ಯವಾಗುತ್ತದೆ.

**ತಯೋರ್ದೈವಂ ವಿನಿಶ್ಚಿತ್ಯ ಸ್ವಯಂ ಚೈವ ಪ್ರವರ್ತತೇ ।**
**ಪ್ರಾಜ್ಞಾಃ ಪುರುಷಕಾರೇಷು ವರ್ತನ್ತೇ ದಾಕ್ಷ್ಯಮಾಶ್ರಿತಾಃ ॥೮॥**

ಈ ಎರಡರಲ್ಲಿ ದೈವವು ಆಗು-ಹೋಗುಗಳನ್ನು ತಾನೇ ನಿರ್ಣಯಿಸಿ ಕಾರ್ಯದಲ್ಲಿ ಪ್ರವೃತ್ತವಾಗುತ್ತದೆ. ಕುಶಲತೆಯನ್ನು ಆಶ್ರಯಿಸಿರುವ (ಕೌಶಲ್ಯದಿಂದ ಕಾರ್ಯಮಾಡುವುದರಿಂದ ಮಾತ್ರವೇ ಕಾರ್ಯಸಿದ್ಧಿಯನ್ನು ಪಡೆಯಬಹುದೆಂದು ಭಾವಿಸಿರತಕ್ಕ) ಪ್ರಾಜ್ಞರು ಯಾವಾಗಲೂ ಪುರುಷ ಪ್ರಯತ್ನಗಳಲ್ಲಿ ತೊಡಗುತ್ತಾರೆ.

**ತಾಭ್ಯಾಂ ಸರ್ವೇ ಹಿ ಕಾರ್ಯಾರ್ಥಾ ಮನುಷ್ಯಾಣಾಂ ನರರ್ಷಭ ।**
**ವಿಚೇಷ್ಟನ್ತಃ ಸ್ಮ ದೃಶ್ಯನ್ತೇ ನಿವೃತ್ತಾಸ್ತು ತಥೈವ ಚ ॥೯॥**

ನರಶ್ರೇಷ್ಠನೇ! ದೈವ ಮತ್ತು ಪುರುಷಕಾರ–ಈ ಎರಡರ ಪ್ರಭಾವದಿಂದ ಮನುಷ್ಯರ ಎಲ್ಲ ಕಾರ್ಯಾರ್ಥಗಳೂ ನಡೆಯುತ್ತಿರುವಂತೆಯೂ ಮತ್ತು ನಿಲ್ಲುತ್ತಿರುವಂತೆಯೂ ಕಾಣುತ್ತದೆ.

**ಕೃತಃ ಪುರುಷಕಾರಶ್ಚ ಸೋಽಪಿ ದೈವೇನ ಸಿದ್ಧ್ಯತಿ ।**
**ತಥಾಸ್ಯ ಕರ್ಮಣಃ ಕರ್ತುರಭಿನಿರ್ವರ್ತತೇ ಫಲಮ್ ॥೧೦॥**

ಒಂದು ಕಾರ್ಯದ ಸಿದ್ಧಿಗಾಗಿ ಪುರುಷಪ್ರಯತ್ನವನ್ನು ಮಾಡುತ್ತಿದ್ದರೆ ಆ ಕಾರ್ಯವು ದೈವದ ಸಹಯೋಗದಿಂದ ಸಿದ್ಧಿಸುತ್ತದೆ. ಕಾರ್ಯಕ್ಕೆ ಪ್ರೇರಕವೂ ದೈವವೇ ಆಗಿರುತ್ತದೆ. ದೈವದ ಪ್ರೇರಣೆಗೆ ಅನುಸಾರವಾಗಿ ಪುರುಷಪ್ರಯತ್ನವನ್ನೂ ಮಾಡುತ್ತಿದ್ದರೆ ಅದೇ ದೈವವೇ ಕಾರ್ಯವನ್ನು ಪೂರ್ತಿಗೊಳಿಸಿ ಫಲನೀಡುತ್ತದೆ.

**ಉತ್ಥಾನಂ ಚ ಮನುಷ್ಯಾಣಾಂ ದಕ್ಷಾಣಾಂ ದೈವವರ್ಜಿತಮ್ ।**
**ಅಫಲಂ ದೃಶ್ಯತೇ ಲೋಕೇ ಸಮ್ಯಗಪ್ಯುಪಪಾದಿತಮ್ ॥೧೧॥**

ಚತುರರಾದ ಮನುಷ್ಯರು ಮುಂದಾಲೋಚನೆಗಳನ್ನಿಟ್ಟುಕೊಂಡು ಸುವ್ಯವಸ್ಥಿತವಾದ ರೀತಿಯಿಂದ ಮಾಡಿದ ಪ್ರಯತ್ನಗಳೂ ಅದೃಷ್ಟ ಹೀನವಾಗಿದ್ದರೆ (ದೈವಬಲವಿಲ್ಲದಿದ್ದರೆ) ನಿಷ್ಫಲವಾಗಿರುವುದು ಅನೇಕ ಸಂದರ್ಭಗಳಲ್ಲಿ ಕಂಡುಬಂದಿದೆ.

**ತತ್ರಾಲಸಾ ಮನುಷ್ಯಾಣಾಂ ಯೇ ಭವನ್ತ್ಯಮನಸ್ವಿನಃ ।**
**ಉತ್ಥಾನಂ ತೇ ವಿಗರ್ಹನ್ತಿ ಪ್ರಾಜ್ಞಾನಾಂ ತನ್ನ ರೋಚತೇ ॥೧೨॥**

ಸುವ್ಯವಸ್ಥಿತವಾದ ರೀತಿಯಲ್ಲಿ ಮಾಡಿದ ಪ್ರಯತ್ನವೂ ದೈವಾನುಗ್ರಹ ವಿಲ್ಲದ ಕಾರಣ ವ್ಯರ್ಥವಾದುದನ್ನೇ ನೆಪವನ್ನಾಗಿಟ್ಟುಕೊಂಡು ಮನುಷ್ಯರಲ್ಲಿ ಜಿತೇಂದ್ರಿಯರಲ್ಲದವರು ಮತ್ತು ಸೋಮಾರಿಗಳಾದವರು ಪ್ರಯತ್ನವನ್ನೇ ನಿಂದಿಸುತ್ತಾರೆ. ಆದರೆ ಪ್ರಾಜ್ಞರಾದವರು ಮಾತ್ರ ಈ ಅಭಿಪ್ರಾಯವನ್ನು ಒಪ್ಪುವುದಿಲ್ಲ. ಅವರಿಗದು ರುಚಿಸುವುದಿಲ್ಲ.

**ಪ್ರಾಯಶೋ ಹಿ ಕೃತಂ ಕರ್ಮ ನಾಫಲಂ ದೃಶ್ಯತೇ ಭುವಿ ।**
**ಅಕೃತ್ವಾ ಚ ಪುನರ್ದುಃಖಂ ಕರ್ಮ ಪಶ್ಯೇನ್ಮಹಾಫಲಮ್ ॥೧೩॥**

ಪ್ರಾಜ್ಞರಾದವರು ಪುರುಷಪ್ರಯತ್ನವನ್ನೇ ನಿಂದಿಸಬಾರದೆಂಬುದಕ್ಕೆ ಕೊಡುವ ಕಾರಣವಿದು : ಪ್ರಾಯಶಃ ಈ ಪ್ರಪಂಚದಲ್ಲಿ ಮಾಡಿದ ಕರ್ಮವು ನಿಷ್ಫಲವಾಗಿರುವುದು ಎಲ್ಲೂ ಕಂಡುಬಂದಿಲ್ಲ. ಫಲವು ಲಭಿಸಲು ಸಾವಕಾಶವಾಗಬಹುದು. ಪುನಃ-ಪುನಃ ಪ್ರಯತ್ನಿಸುತ್ತಲೇ ಇರುವುದರಿಂದ ಫಲವು ಸಾವಕಾಶವಾಗಿಯೇ ಆದರೂ ಲಭಿಸಿಯೇ ತೀರುತ್ತದೆ. ಆದುದರಿಂದ ಮನುಷ್ಯನು ಪ್ರಯತ್ನಶೀಲನಾಗಲೇಬೇಕು. ಅದೃಷ್ಟವು ಇದೆಯೋ ಇಲ್ಲವೋ?–ಎಂಬ ಸಂಶಯದಿಂದ ಪ್ರಯತ್ನವನ್ನೇ ಮಾಡದಿದ್ದರೆ ಫಲವಂತೂ ಸಿಕ್ಕುವ ಸಂಭವವೇ ಇಲ್ಲ. ಕಾರ್ಯವನ್ನು ಮಾಡದಿರುವುದು ಮಹಾದುಃಖಕ್ಕೆ ಕಾರಣವಾಗುತ್ತದೆ. ಆದುದರಿಂದ ಕರ್ಮದಲ್ಲಿ ತೊಡಗಿರುವುದೇ ಹೆಚ್ಚು ಫಲದಾಯಕವಾಗಿರುತ್ತದೆ.

**ಚೇಷ್ಟಾಮಕುರ್ವನ್ಲಭತೇ ಯದಿ ಕಿಂಚಿದ್ಯದೃಚ್ಛಯಾ ।**
**ಯೋ ವಾ ನ ಲಭತೇ ಕೃತ್ವಾ ದುರ್ದರ್ಶೌ ತಾವುಭಾವಪಿ ॥೧೪॥**

ಪ್ರಯತ್ನವನ್ನೇ ಮಾಡದೇ ದೈವೇಚ್ಛೆಯಿಂದಲೇ ಫಲವನ್ನು ಪಡೆದುಕೊಂಡಿರತಕ್ಕವನು ; ಪದೇ-ಪದೇ ಪ್ರಯತ್ನವನ್ನು ಮಾಡುತ್ತಿದ್ದರೂ ಯಾವ ಫಲವನ್ನೂ ಪಡೆಯದೇ ಇರತಕ್ಕವನು–ಈ ಇಬ್ಬಗೆಯ ಜನರನ್ನೂ ಲೋಕದಲ್ಲಿ ಕಾಣುವುದು ಅಪರೂಪ.

**ಶಕ್ನೋತಿ ಜೀವಿತುಂ ದಕ್ಷೋ ನಾಲಸಃ ಸುಖಮೇಧತೇ ।**
**ದೃಶ್ಯನ್ತೇ ಜೀವಲೋಕೇಽಸ್ಮಿನ್ದಕ್ಷಾಃ ಪ್ರಾಯೋ ಹಿತೈಷಿಣಃ ॥೧೫॥**

ಪ್ರಯತ್ನಶೀಲನಾದ, ಚತುರನಾದ ಮನುಷ್ಯನು ಸುಖದಿಂದಲೇ ಜೀವನವನ್ನು ನಿರ್ವಹಿಸಲು ಸಮರ್ಥನಾಗಿರುತ್ತಾನೆ. ಆದರೆ ಸೋಮಾರಿಯಾದವನು ಯಾವ ಸುಖವನ್ನೂ ಹೊಂದುವುದಿಲ್ಲ. ಈ ಜೀವಲೋಕದಲ್ಲಿ ಚತುರರಾಗಿಯೂ ಪ್ರಯತ್ನಶೀಲರಾಗಿಯೂ ಇರತಕ್ಕವರು ಪ್ರಾಯಶಃ ಹಿತೈಷಿಗಳೂ ಆಗಿರುತ್ತಾರೆ.

**ಯದಿ ದಕ್ಷಃ ಸಮಾರಮ್ಭಾತ್ಕರ್ಮಣೋ ನಾಶ್ನುತೇ ಫಲಮ್ ।**
**ನಾಸ್ಯ ವಾಚ್ಯಂ ಭವೇತ್ಕಿಂಚಿಲ್ಲಬ್ಧವ್ಯಂ ವಾಧಿಗಚ್ಛತಿ ॥೧೬॥**

ಚತುರನಾದ ಮನುಷ್ಯನು ಕಾರ್ಯವನ್ನಾರಂಭಿಸಿ ಕಾರ್ಯಸಿದ್ಧಿಗೆ

ಸತತವಾಗಿ ಪ್ರಯತ್ನಿಸುತ್ತಿದ್ದರೆ ಅವನಿಗೆ ಅದರ ಫಲವನ್ನು ಅನುಭವಿಸಲು ಸಾಧ್ಯವಾಗದಿದ್ದರೆ ಅವನು ನಿಂದೆಗೆ ಪಾತ್ರನಾಗುವುದಿಲ್ಲ. ( 'ತನ್ನ ಕರ್ತವ್ಯವನ್ನು ಮಾಡಿದ್ದಾನೆ. ದೈವದೊಲುಮೆಯು ಪ್ರಾಪ್ತವಾಗಿಲ್ಲ'–ಎಂದು ಜನರು ಹೇಳುತ್ತಾರೆ. ದುರದೃಷ್ಟವೆನ್ನುತ್ತಾರೆ.) ಅವನು ತನ್ನ ಪ್ರಯತ್ನವನ್ನು ಆಲಸ್ಯವಿಲ್ಲದೇ ಮುಂದುವರಿಸಿದಲ್ಲಿ ಅವನಿಗೆ ಸಿಕ್ಕಬೇಕಾದ ಫಲವು ಲಭಿಸಿಯೇ ತೀರುತ್ತದೆ.

**ಅಕೃತ್ವಾ ಕರ್ಮ ಯೋ ಲೋಕೇ ಫಲಂ ವಿನ್ದತಿ ಧಿಷ್ಠಿತಃ ।**
**ಸ ತು ವಕ್ತವ್ಯತಾಂ ಯಾತಿ ದ್ವೇಷ್ಯೋ ಭವತಿ ಭೂಯಶಃ ॥೧೭॥**

ಯಾವನು ಯಾವುದೊಂದು ಕಾರ್ಯವನ್ನೂ ಮಾಡದೇ ಕುಳಿತು ಕೊಂಡೇ ಅದೃಷ್ಟವಶದಿಂದ ಫಲವನ್ನು ಪಡೆದುಕೊಳ್ಳುತ್ತಾನೆಯೋ– ಅಂತಹವನು ಪರನಿಂದೆಗೆ ಗುರಿಯಾಗುತ್ತಾನೆ. ಅಂತಹವನನ್ನು ಎಲ್ಲರೂ ಬಹಳವಾಗಿ ದ್ವೇಷಿಸುತ್ತಾರೆ.

**ಏವಮೇತದನಾದೃತ್ಯ ವರ್ತತೇ ಯಸ್ತ್ವತೋಽನ್ಯಥಾ ।**
**ಸ ಕರೋತ್ಯಾತ್ಮನೋಽನರ್ಥಾನೇಷ ಬುದ್ಧಿಮತಾಂ ನಯಃ ॥೧೮॥**

ಹೀಗೆ ದೈವ ಮತ್ತು ಪುರುಷಕಾರಗಳ ಸಹಯೋಗವನ್ನು ಅನಾದರಿಸಿ ಇದಕ್ಕೆ ವಿರುದ್ಧವಾದ ರೀತಿಯಲ್ಲಿ ಯಾವನು ವರ್ತಿಸುತ್ತಾನೆಯೋ– ಅಂತಹವನು ತನಗೆ ತಾನೇ ಅನರ್ಥವನ್ನು ತಂದುಕೊಳ್ಳುತ್ತಾನೆ. ಪ್ರಯತ್ನವನ್ನು ಮಾಡುತ್ತಾ ಕಾರ್ಯಸಿದ್ಧಿಗಾಗಿ ದೈವದ ಒಲುಮೆಯನ್ನು ಪಡೆದುಕೊಳ್ಳಬೇಕೆಂಬುದು ಬುದ್ಧಿವಂತರಾದವರ ನೀತಿಯಾಗಿದೆ.

**ಹೀನಂ ಪುರುಷಕಾರೇಣ ಯದಿ ದೈವೇನ ವಾ ಪುನಃ ।**
**ಕಾರಣಾಭ್ಯಾಮಥೈತಾಭ್ಯಾಮುತ್ಥಾನಮಫಲಂ ಭವೇತ್ ॥೧೯॥**

ಪ್ರಯತ್ನವೇ ಇಲ್ಲದೇ ಅದೃಷ್ಟದ ನಿರೀಕ್ಷಣೆ ; ಪ್ರಯತ್ನಿಸಿದರೂ ದೈವದ ಒಲುಮೆಯಿಲ್ಲದೇ ಇರುವುದು–ಈ ಎರಡೂ ಕಾರಣಗಳಿಂದಲೂ ಮನುಷ್ಯನ ಪ್ರಯತ್ನಗಳು ನಿಷ್ಫಲವಾಗುತ್ತವೆ.

**ಹೀನಂ ಪುರುಷಕಾರೇಣ ಕರ್ಮ ತ್ವಿಹ ನ ಸಿದ್ಧ್ಯತಿ ।**

**ದೈವತೇಭ್ಯೋ ನಮಸ್ಕೃತ್ಯ ಯಸ್ತ್ವರ್ಥಾನ್ಸಮ್ಯಗೀಹತೇ ।**
**ದಕ್ಷೋ ದಾಕ್ಷಿಣ್ಯಸಮ್ಪನ್ನೋ ನ ಸ ಮೋಘೈರ್ವಿಹನ್ಯತೇ ॥೨೦॥**

ಪುರುಷಪ್ರಯತ್ನವಿಲ್ಲದೇ ಈ ಲೋಕದಲ್ಲಿ ಯಾವ ಕರ್ಮಗಳೂ ಸಿದ್ಧಿಸುವುದಿಲ್ಲ. ಕಾರ್ಯದಕ್ಷನಾದ, ಔದಾರ್ಯಾದಿಗುಣಗಳಿಂದ ಸಂಪನ್ನನಾದ ಯಾವನು ದೇವತೆಗಳಿಗೂ ನಮಸ್ಕರಿಸುತ್ತಾ ಎಲ್ಲ ಕಾರ್ಯಗಳನ್ನೂ ವ್ಯವಸ್ಥಿತವಾದ ರೀತಿಯಲ್ಲಿ ಚೆನ್ನಾಗಿ ಮಾಡುತ್ತಾನೆಯೋ–ಅಂತಹವನು ಅಸಫಲತೆಯಿಂದ ಎಂದಿಗೂ ಬಾಧೆಪಡುವುದಿಲ್ಲ. (ಅಂತಹವನ ಕಾರ್ಯಗಳೆಲ್ಲವೂ ಸಿದ್ಧಿಸಿಯೇ ತೀರುವುವು.)

**ಸಮ್ಯಗೀಹಾ ಪುನರಿಯಂ ಯೋ ವೃದ್ಧಾನುಪಸೇವತೇ ।**
**ಆಪೃಚ್ಛತಿ ಚ ಯಚ್ಛ್ರೇಯಃ ಕರೋತಿ ಚ ಹಿತಂ ವಚಃ ॥೨೧॥**

ಪುನಃ ಈ ಸಮ್ಯಕ್ಪ್ರಯತ್ನವು ಯಾರಿಂದ ಮಾಡಲು ಸಾಧ್ಯವಾಗುತ್ತದೆಯೆಂದರೆ : ಯಾರು ವೃದ್ಧರನ್ನು ಸೇವಿಸುತ್ತಾರೆಯೋ, ತಮಗೆ ಯಾವುದು ಶ್ರೇಯಸ್ಸೆಂಬುದನ್ನು ವೃದ್ಧರಿಂದ ಕೇಳಿ ತಿಳಿದುಕೊಳ್ಳುತ್ತಾರೆಯೋ ಮತ್ತು ಆ ವೃದ್ಧರು ಹೇಳಿದ ಹಿತವಚನದಂತೆ ನಡೆದುಕೊಳ್ಳುತ್ತಾರೆಯೋ–ಅಂತಹವರು ಮಾತ್ರವೇ ಸಮ್ಯಕ್ಪ್ರಯತ್ನವನ್ನು ಮಾಡಬಲ್ಲರು.

**ಉತ್ಥಾಯೋತ್ಥಾಯ ಹಿ ಸದಾ ಪ್ರಷ್ಟವ್ಯಾ ವೃದ್ಧಸಮ್ಮತಾಃ ।**
**ತೇ ಸ್ಮ ಯೋಗೇ ಪರಂ ಮೂಲಂ ತನ್ಮೂಲಾ ಸಿದ್ಧಿರುಚ್ಯತೇ ॥೨೨॥**

ಅನುದಿನವೂ ಬೆಳಗಾಗುತ್ತಲೇ ಎದ್ದು, ವೃದ್ಧಸಮ್ಮತರಾದ ವಿದ್ವಾಂಸರ ಸಮೀಪಕ್ಕೆ ಹೋಗಿ, ಯಾವ ಕಾರ್ಯಮಾಡುವುದರಿಂದ ಹಿತವಾಗುವುದೆಂಬುದನ್ನು ಕೇಳಬೇಕು. ಏಕೆಂದರೆ : ವಸ್ತುಸಿದ್ಧಿಯನ್ನು ಅಥವಾ ಕಾರ್ಯಸಿದ್ಧಿಯನ್ನು ಪಡೆದುಕೊಳ್ಳಲು ವೃದ್ಧಸಮ್ಮತರಾದ ವಿದ್ವಾಂಸರೇ ಮೂಲಕಾರಣರಾಗಿರುತ್ತಾರೆ. ಅವರು ಹೇಳುವ ಉಪಾಯಗಳೇ ಕಾರ್ಯಸಿದ್ಧಿಗೆ ಮೂಲಕಾರಣಗಳಾಗಿರುತ್ತವೆ.

**ವೃದ್ಧಾನಾಂ ವಚನಂ ಶ್ರುತ್ವಾ ಯೋಽಭ್ಯುತ್ಥಾನಂ ಪ್ರಯೋಜಯೇತ್ ।**
**ಉತ್ಥಾನಸ್ಯ ಫಲಂ ಸಮ್ಯಕ್ತದಾ ಸ ಲಭತೇಽಚಿರಾತ್ ॥೨೩॥**

ವೃದ್ಧರ ಅಥವಾ ವೃದ್ಧಸಮ್ಮತರಾದವರ ಹಿತವಚನಗಳನ್ನು ಕೇಳಿ ಅವರು ಹೇಳಿದ ರೀತಿಯಲ್ಲಿ ಯಾವನು ಕಾರ್ಯವನ್ನು ಆರಂಭಿಸು ತ್ತಾನೆಯೋ–ಅವನು ಸಮ್ಯಕ್ಪ್ರಯತ್ನದ ಕಾರಣದಿಂದಾಗಿ ಒಳ್ಳೆಯ ಫಲವನ್ನು ಬಹಳ ಬೇಗ ಪಡೆದುಕೊಳ್ಳುತ್ತಾನೆ.

**ರಾಗಾತ್ಕ್ರೋಧಾದ್ಭಯಾಲ್ಲೋಭಾದ್ಯೋಽರ್ಥಾನೀಹತಿ ಮಾನವಃ ।**
**ಅನೀಶಶ್ಚಾವಮಾನೀ ಚ ಸ ಶೀಘ್ರಂ ಭ್ರಶ್ಯತೇ ಶ್ರಿಯಃ ॥೨೪॥**

ಯಾವ ಮನುಷ್ಯನು ರಾಗ-ಕ್ರೋಧ-ಭಯ-ಲೋಭಗಳಿಂದ ಅರ್ಥಸಿದ್ಧಿಯನ್ನು ಪಡೆಯಲು ಅಪೇಕ್ಷಿಸುತ್ತಾನೆಯೋ–ಅವನು ಅದನ್ನು ಪಡೆಯಲು ಅಸಮರ್ಥನಾಗಿ ಅವಮಾನಕ್ಕೂ ಗುರಿಯಾಗುತ್ತಾನೆ. ಅವನು ಬಹಳ ಬೇಗ ಐಶ್ವರ್ಯದಿಂದಲೂ ಭ್ರಷ್ಟನಾಗುತ್ತಾನೆ.

**ಸೋಽಯಂ ದುರ್ಯೋಧನೇನಾರ್ಥೋ ಲುಬ್ಧೇನಾದೀರ್ಘದರ್ಶಿನಾ ।**
**ಅಸಮರ್ಥ್ಯ ಸಮಾರಬ್ಧೋ ಮೂಢತ್ವಾದವಿಚಿನ್ತಿತಃ ॥೨೫॥**

**ಹಿತಬುದ್ಧೀನನಾದೃತ್ಯ ಸಮ್ಮನ್ತ್ರ್ಯ ಸಾಧುಭಿಃ ಸಹ ।**
**ವಾರ್ಯಮಾಣೋಽಕರೋದ್ವೈರಂ ಪಾಣ್ಡವೈರ್ಗುಣವತ್ತರೈಃ ॥೨೬॥**

ದುರ್ಯೋಧನನು ಮಹಾಲೋಭಿ. ಮುಂದೇನಾಗುವುದೆಂಬುದರ ಬಗೆಗೆ ತಿಳಿವಳಿಕೆಯಿಲ್ಲದವನು. ತಿಳಿದವರೊಡನೆ ಸಮಾಲೋಚನೆನಡೆಸಿ ನಿಶ್ಚಯಿಸದೇ ತಾನೂ ಚೆನ್ನಾಗಿ ವಿಮರ್ಶಿಸದೇ ಈ ಕಾರ್ಯವನ್ನು (ಯುದ್ಧವನ್ನು) ಕೈಗೊಂಡನು. ಅವನಿಗೆ ಹಿತವಾಗಬೇಕೆಂಬ ಮನಸ್ಸಿದ್ದವರ ಮಾತುಗಳೆಲ್ಲವನ್ನೂ ಅನಾದರಣೆಮಾಡಿದನು. ದುಷ್ಟರೊಡನೆ ಸಮಾ ಲೋಚನೆ ನಡೆಸಿದನು. ಹಿತಚಿಂತಕರಾದ ಮಿತ್ರರು ಎಷ್ಟೇ ಬೇಡವೆಂದರೂ ತನಗಿಂತಲೂ ಗುಣಶಾಲಿಗಳಾದ ಪಾಂಡವರೊಡನೆ ಹಗೆತನವನ್ನು ಬೆಳೆಸಿದನು.

**ಪೂರ್ವಮಪ್ಯತಿದುಃಶೀಲೋ ನ ದೈನ್ಯಂ ಕರ್ತುಮರ್ಹತಿ ।**
**ತಪತ್ಯರ್ಥೇ ವಿಪನ್ನೇ ಹಿ ಮಿತ್ರಾಣಾಂ ನ ಕೃತಂ ವಚಃ ॥೨೭॥**

ಹಿಂದೆಯೂ ಸಹ ದುರ್ಯೋಧನನು ಬಹಳ ದುಷ್ಟಸ್ವಭಾವದವನೇ

ಆಗಿದ್ದನು. ಅವನಿಗೆ ದೈನ್ಯ (ವಿನಯ) ವೆಂಬುದೇ ಇರಲಿಲ್ಲ. (ಯಾವಾಗಲೂ ದುರಭಿಮಾನಿಯಾಗಿರುತ್ತಿದ್ದನು.) ಸನ್ಮಿತ್ರರ ಮಾತನ್ನು ಕೇಳುತ್ತಿರಲಿಲ್ಲ. ಈ ಎಲ್ಲ ಕಾರಣಗಳಿಂದಾಗಿ ಸರ್ವಾರ್ಥಗಳೂ ನಾಶವಾಗಲು ಈಗವನು ಸಂಕಟಪಡುತ್ತಿದ್ದಾನೆ.

**ಅನುವರ್ತಾಮಹೇ ಯತ್ತು ತಂ ವಯಂ ಪಾಪಪೂರುಷಮ್ ।**
**ಅಸ್ಮಾನಪ್ಯನಯಸ್ತಸ್ಮಾತ್ಪ್ರಾಪ್ತೋಽಯಂ ದಾರುಣೋ ಮಹಾನ್ ॥೨೮॥**

ನಾವಾದರೋ ಆ ಪಾಪಿಷ್ಠನನ್ನೇ ಅನುಸರಿಸಿ ನಡೆಯುತ್ತಿದ್ದೆವು. ಆದುದರಿಂದಲೇ ನಮ್ಮನ್ನೂ ಸಹ ಈ ದಾರುಣವಾದ ಮತ್ತು ಮಹತ್ತರವಾದ ಅನೀತಿಯು ಆವರಿಸಿಕೊಂಡಿದೆ.

ಈ ವ್ಯಸನದಿಂದ ಸಂತಪ್ತವಾಗಿರುವ ನನ್ನ ಬುದ್ಧಿಯು ಬಹಳ ಚಿಂತೆಗೊಳಗಾಗಿದೆ. ಯಾವ ಮಾರ್ಗಾನುಸರಣೆಯಿಂದ ಆತ್ಮಕಲ್ಯಾಣ ವಾಗುವುದೆಂಬ ಬಗೆಗೆ ನನ್ನ ಬುದ್ಧಿಯು ವಿಮೋಹಗೊಂಡಿದೆ.

**ಮುಹ್ಯತಾ ತು ಮನುಷ್ಯೇಣ ಪ್ರಷ್ಟವ್ಯಾಃ ಸುಹೃದೋ ಜನಾಃ ।**
**ತತ್ರಾಸ್ಯ ಬುದ್ಧಿರ್ವಿನಯಸ್ತತ್ರ ಶ್ರೇಯಶ್ಚ ಪಶ್ಯತಿ ॥೩೦॥**

ಮನುಷ್ಯನು ಮೋಹಪರವಶನಾಗಿರುವಾಗ–ಕರ್ತವ್ಯಾಕರ್ತವ್ಯಗಳನ್ನು ನಿರ್ಧರಿಸಲು ಅಸಮರ್ಥನಾಗಿರುವಾಗ–ಸುಹೃದರಾದವರನ್ನು ಪ್ರಶ್ನಿಸಬೇಕು. ಅವರ ಸಲಹೆಯನ್ನು ಪಡೆದುಕೊಳ್ಳಬೇಕು. ಸುಹೃದರ ಸಂಪರ್ಕದಿಂದಾಗಿ ಬುದ್ಧಿಯು ತಿಳಿಯಾಗುತ್ತದೆ. ಹಿರಿಯರಲ್ಲಿ ವಿನಯಭಾವವುಂಟಾಗುತ್ತದೆ. ಶ್ರೇಯಸ್ಸಿನ ಮಾರ್ಗವನ್ನೂ ಕಂಡುಕೊಳ್ಳುತ್ತಾನೆ.

**ತತೋಽಸ್ಯ ಮೂಲಂ ಕಾರ್ಯಾಣಾಂ ಬುದ್ಧ್ಯಾ ನಿಶ್ಚಿತ್ಯ ವೈ ಬುಧಾಃ ।**
**ತೇಽತ್ರ ಪೃಷ್ಟಾ ಯಥಾ ಬ್ರೂಯುಸ್ತತ್ಕರ್ತವ್ಯಂ ತಥಾ ಭವೇತ್ ॥**

ಪ್ರಶ್ನಿಸಿದನಂತರ ವಿದ್ವಾಂಸರಾದ ಸುಹೃದರು ಕಾರ್ಯಗಳ ಮೂಲ ಕಾರಣವನ್ನು ಬುದ್ಧಿಯಲ್ಲಿ ವಿಮರ್ಶೆಮಾಡಿ, ಆ ಸಮಯದಲ್ಲಿ ಅನುಸರಿಸಬೇಕಾದ ಮಾರ್ಗವನ್ನು ನಿಶ್ಚಯಿಸಿ, ಯಾವ ರೀತಿಯಲ್ಲಿ ಸಲಹೆ ನೀಡುತ್ತಾರೆಯೋ ಅವರ ಸಲಹೆಯಂತೆಯೇ ಕಾರ್ಯಮಾಡುವುದು ಕರ್ತವ್ಯವಾಗಿರುತ್ತದೆ.

ಆದುದರಿಂದ ಈಗ ನಾವು ಮೂವರೂ ಧೃತರಾಷ್ಟ್ರ, ಗಾಂಧಾರೀ ಮತ್ತು ಮಹಾಮೇಧಾವಿಯಾದ ವಿದುರ–ಇವರ ಬಳಿಗೆ ಹೋಗಿ ನಮ್ಮ ಕರ್ತವ್ಯವೇನೆಂಬುದರ ಬಗೆಗೆ ಸಲಹೆಯನ್ನು ಕೇಳೋಣ. ನಮ್ಮ ಕೇಳಿಕೆಗೆ ಅವರು ಯಾವುದು ನಮಗೆ ಶ್ರೇಯಸ್ಕರವೋ ಅದನ್ನೇ ಹೇಳಿಯಾರು. ಅನಂತರ ನಾವು ಅವರ ಸಲಹೆಯಂತೆ ಕಾರ್ಯಮಾಡಬೇಕು. ಇದು ನನ್ನ ಸುನಿಶ್ಚಿತವಾದ ಬುದ್ಧಿಯಾಗಿದೆ.

**ಅನಾರಮ್ಭಾತ್ತು ಕಾರ್ಯಾಣಾಂ ನಾರ್ಥಃ ಸಮ್ಪದ್ಯತೇ ಕ್ವಚಿತ್ ।**
**ಕೃತೇ ಪುರುಷಕಾರೇ ತು ಯೇಷಾಂ ಕಾರ್ಯಂ ನ ಸಿಧ್ಯತಿ ।**
**ದೈವೇನೋಪಹತಾಸ್ತೇ ತು ನಾತ್ರ ಕಾರ್ಯಾ ವಿಚಾರಣಾ ॥೩೫॥**

ಕಾರ್ಯಗಳನ್ನು ಆರಂಭಿಸದೆಯೇ ಇದ್ದರೆ ಯಾವ ವಿಧವಾದ ಪ್ರಯೋಜನವೂ ಇಲ್ಲ. ಒಂದು ವೇಳೆ ಪುರುಷಪ್ರಯತ್ನಮಾಡಿದರೂ ಕಾರ್ಯಸಿದ್ಧಿಯಾಗದಿದ್ದರೆ ಅವರು ದೈವೋಪಹತರೆಂದೇ ತಿಳಿಯಬೇಕು. ಈ ವಿಷಯದಲ್ಲಿ ಪುನಃ ವಿಮರ್ಶಿಸುವ ಆವಶ್ಯಕತೆಯೇ ಇಲ್ಲ.”

ಎನೆಯ ಅಧ್ಯಾಯವು ಮುಗಿಯಿತು.

೩ನೆಯ ಅಧ್ಯಾಯ ಸೌಪ್ತಿಕಪರ್ವ (ಮುಂದುವರಿದಿದೆ.)

## ಅಶ್ವತ್ಥಾಮನು ಕೃಪ-ಕೃತವರ್ಮರಿಗೆ ಉತ್ತರಹೇಳಿ ತನ್ನ ನಿರ್ಧಾರವನ್ನು ತಿಳಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

“ಮಹಾರಾಜ! ಧರ್ಮಾರ್ಥಸಹಿತವಾದ, ಶುಭದಾಯಕವಾದ ಕೃಪರ ಮಾತನ್ನು ಕೇಳಿ ದುಃಖ-ಶೋಕಗಳಿಂದ ಯುಕ್ತನಾಗಿದ್ದ ಅಶ್ವತ್ಥಾಮನು ಪ್ರದೀಪ್ತವಾದ ಅಗ್ನಿಯಿಂದ ದಹಿಸಲ್ಪಡುವಂತೆ ಶೋಕಾಗ್ನಿಯಿಂದ ದಹಿಸಲ್ಪಡುತ್ತಿದ್ದನು. ಮನಸ್ಸನ್ನು ಬಹಳ ಕ್ರೂರವಾಗಿ ಪರಿವರ್ತಿಸಿಕೊಂಡು (ಕಠೋರಹೃದಯನಾಗಿ) ಕೃಪ-ಕೃತವರ್ಮರೊಡನೆ ಹೇಳಿದನು :

**ಪುರುಷೇ ಪುರುಷೇ ಬುದ್ಧಿರ್ಯಾ ಯಾ ಭವತಿ ಶೋಭನಾ ।**
**ತುಷ್ಯನ್ತಿ ಚ ಪೃಥಕ್ಸರ್ವೇ ಪ್ರಜ್ಞಯಾ ತೇ ಸ್ವಯಾ ಸ್ವಯಾ ॥೩॥**

“ಮಾತುಲ! ಲೋಕದಲ್ಲಿ ಪ್ರತಿಯೊಬ್ಬ ಮನುಷ್ಯನಿಗೂ ಪ್ರತ್ಯೇಕ-ಪ್ರತ್ಯೇಕವಾದ ಬುದ್ಧಿಯೇ ಇರುತ್ತದೆ. ಪ್ರತಿಯೊಬ್ಬರೂ ತನಗಿರುವ ಆ ಬುದ್ಧಿಯೇ ಇತರರ ಬುದ್ಧಿಗಿಂತಲೂ ಚುರುಕಾಗಿದೆಯೆಂದು ಭಾವಿಸುತ್ತಾನೆ. ಈ ಕಾರಣದಿಂದಲೇ ಪ್ರತಿಯೊಬ್ಬರೂ ತಮ-ತಮಗಿರುವ ಪ್ರಜ್ಞೆಯಿಂದಲೇ ಸಂತುಷ್ಟರಾಗುತ್ತಾರೆ.

**ಸರ್ವೋ ಹಿ ಮನ್ಯತೇ ಲೋಕ ಆತ್ಮಾನಂ ಬುದ್ಧಿಮತ್ತರಮ್ ।**
**ಸರ್ವಸ್ಯಾತ್ಮಾ ಬಹುಮತಃ ಸರ್ವಾತ್ಮಾನಂ ಪ್ರಶಂಸತಿ ॥೪॥**

ಲೋಕದಲ್ಲಿ ಎಲ್ಲರೂ ತಮ್ಮನ್ನು ಇತರರಿಗಿಂತಲೂ ಹೆಚ್ಚು ಬುದ್ಧಿವಂತರೆಂದು ಭಾವಿಸಿಕೊಳ್ಳುತ್ತಾರೆ. ಎಲ್ಲರೂ ತಮ್ಮ ಬುದ್ಧಿಯೇ ಅಧಿಕವಾದುದೆಂದೂ–ಮಹತ್ತ್ವಪೂರ್ಣವಾದುದೆಂದೂ ಭಾವಿಸುತ್ತಾರೆ. ಎಲ್ಲರೂ ತಮ್ಮ ಬುದ್ಧಿಯನ್ನೇ ಪ್ರಶಂಸೆಮಾಡಿಕೊಳ್ಳುತ್ತಿರುತ್ತಾರೆ.

**ಸರ್ವಸ್ಯ ಹಿ ಸ್ವಕಾ ಪ್ರಜ್ಞಾ ಸಾಧುವಾದೇ ಪ್ರತಿಷ್ಠಿತಾ ।**
**ಪರಬುದ್ಧಿಂ ಚ ನಿನ್ದನ್ತಿ ಸ್ವಾಂ ಪ್ರಶಂಸನ್ತಿ ಚಾಸಕೃತ್ ॥೫॥**

ಪ್ರತಿಯೊಬ್ಬರೂ ತಮ್ಮ ಪ್ರಜ್ಞೆಯು ಮಾತ್ರವೇ ನ್ಯಾಯರೀತಿಯ ವ್ಯವಹಾರದಲ್ಲಿ ಪ್ರತಿಷ್ಠಿತವಾಗಿರುವುದೆಂದು ಭಾವಿಸಿಕೊಳ್ಳುತ್ತಾರೆ. ಇತರರ ಬುದ್ಧಿಯನ್ನು ಪ್ರತಿಯೊಬ್ಬರೂ ನಿಂದಿಸುತ್ತಲೇ ಇರುತ್ತಾರೆ. ತಮ್ಮ ಬುದ್ಧಿಯನ್ನು ಪದೇ-ಪದೇ ಪ್ರಶಂಸೆಮಾಡಿಕೊಳ್ಳುತ್ತಿರುತ್ತಾರೆ.

**ಕಾರಣಾನ್ತರಯೋಗೇನ ಯೋಗೇ ಯೇಷಾಂ ಸಮಾಗತಿಃ ।**
**ಅನ್ಯೋನ್ಯೇನ ಚ ತುಷ್ಯನ್ತಿ ಬಹುಮನ್ಯನ್ತಿ ಚಾಸಕೃತ್ ॥೬॥**

ಕಾರಣಾಂತರಗಳಿಂದ ಇಬ್ಬರ ಬುದ್ಧಿಯೂ ಹೊಂದಿಕೊಂಡರೆ (ಒಂದಾದರೆ) ಆಗ ಅವರು ಪರಸ್ಪರವಾಗಿ ಸಂತುಷ್ಟಿಯನ್ನು ಹೊಂದುತ್ತಾರೆ. ಒಬ್ಬರು ಮತ್ತೊಬ್ಬರನ್ನು ಬಹಳವಾಗಿ ಗೌರವಿಸುತ್ತಾರೆ.

**ತಸ್ಯೈವ ತು ಮನುಷ್ಯಸ್ಯ ಸಾ ಸಾ ಬುದ್ಧಿಸ್ತದಾ ತದಾ ।**
**ಕಾಲಯೋಗೇ ವಿಪರ್ಯಾಸಂ ಪ್ರಾಪ್ಯಾನ್ಯೋನ್ಯಂ ವಿಪದ್ಯತೇ ॥೭॥**

ಪರಸ್ಪರವಾಗಿ ಗೌರವಿಸುತ್ತಿದ್ದ, ಪರಸ್ಪರಸಂಬಂಧದಿಂದ ಪರಿತುಷ್ಟವಾಗಿದ್ದ ಅದೇ ಮನುಷ್ಯರ ಬುದ್ಧಿಗಳೇ ಆಗಿಂದಾಗ್ಗೆ ಕಾಲಯೋಗದಿಂದ ವಿಪರ್ಯಾಸವನ್ನು ಹೊಂದಿ ಪರಸ್ಪರವಾಗಿ ವಿರೋಧವನ್ನೂ ಉಂಟುಮಾಡುತ್ತವೆ. ಕೆಲವು ವೇಳೆ ಹಿಂದಿನ ಬುದ್ಧಿಗಿಂತಲೂ ಭಿನ್ನವೂ ವಿರುದ್ಧವೂ ಆಗುತ್ತದೆ.

**ವಿಚಿತ್ರತ್ವಾತ್ತು ಚಿತ್ತಾನಾಂ ಮನುಷ್ಯಾಣಾಂ ವಿಶೇಷತಃ ।**
**ಚಿತ್ತವೈಕ್ಲವ್ಯಮಾಸಾದ್ಯ ಸಾ ಸಾ ಬುದ್ಧಿಃ ಪ್ರಜಾಯತೇ ॥೮॥**

ಎಲ್ಲ ಪ್ರಾಣಿಗಳ–ಅದರಲ್ಲಿಯೂ ವಿಶೇಷವಾಗಿ ಮನುಷ್ಯರ–ಬುದ್ಧಿಯು ಬಹಳ ವಿಚಿತ್ರವಾದುದರಿಂದ (ವಿಲಕ್ಷಣವಾದುದರಿಂದ–ಒಬ್ಬರ ಬುದ್ಧಿಗೂ ಮತ್ತೊಬ್ಬರ ಬುದ್ಧಿಗೂ ಭಿನ್ನತೆಯಿರುವುದರಿಂದ) ಭಿನ್ನ- ಭಿನ್ನವಾದ ಘರ್ಷಣೆಗಳ ಕಾರಣದಿಂದಾಗಿ ಬುದ್ಧಿಯಲ್ಲಿ ವ್ಯಾಕುಲತೆಯುಂಟಾಗುತ್ತದೆ. ಆ ವ್ಯಾಕುಲತೆಯನ್ನೇ ಆಶ್ರಯಿಸಿರುವ ಬುದ್ಧಿಯು ಶಾಂತಿಯನ್ನು ಕಾಣದೇ ನಾನಾಪ್ರಕಾರವಾಗಿ ಹುಟ್ಟಿಕೊಳ್ಳುತ್ತದೆ. (ನಾನಾಪ್ರಕಾರವಾಗಿ ಪರಿವರ್ತನೆ ಹೊಂದುತ್ತದೆ.)

(ಕಾರ್ಯವನ್ನು ಮಾಡುವಾಗ ಎಲ್ಲ ಸಮಯಗಳಲ್ಲಿಯೂ ಇತರರ ಸಲಹೆಯನ್ನೇ ಪಡೆಯಲು ಸಾಧ್ಯವಾಗುವುದಿಲ್ಲ. ಪಡೆಯಬೇಕಾದ ಆವಶ್ಯಕತೆಯೂ ಇಲ್ಲ. ಈ ಅಭಿಪ್ರಾಯದ ಹಿನ್ನೆಲೆಯಲ್ಲಿ ಅಶ್ವತ್ಥಾಮನು ಈ ಶ್ಲೋಕಗಳನ್ನು ಉದಾಹರಿಸುತ್ತಾನೆ.)

**ಯಥಾ ಹಿ ವೈದ್ಯಃ ಕುಶಲೋ ಜ್ಞಾತ್ವಾ ವ್ಯಾಧಿಂ ಯಥಾವಿಧಿ ।**
**ಭೈಷಜ್ಯಂ ಕುರುತೇ ಯೋಗಾತ್ಪ್ರಶಮಾರ್ಥಮಿತಿ ಪ್ರಭೋ ॥೯॥**

**ಏವಂ ಕಾರ್ಯಸ್ಯ ಯೋಗಾರ್ಥಂ ಬುದ್ಧಿಂ ಕುರ್ವನ್ತಿ ಮಾನವಾಃ ।**
**ಪ್ರಜ್ಞಯಾ ಹಿ ಸ್ವಯಾ ಯುಕ್ತಾಸ್ತಾಂ ಚ ನಿನ್ದನ್ತಿ ಮಾನವಾಃ ॥೧೦॥**

ಕುಶಲನಾದ ವೈದ್ಯನು ಶಾಸ್ತ್ರಾನುಸಾರವಾಗಿ ಚಿಂತಿಸಿ ರೋಗಿಯ ವ್ಯಾಧಿಯು ಯಾವುದೆಂಬುದನ್ನು ತಿಳಿದುಕೊಳ್ಳುತ್ತಾನೆ. ರೋಗಪ್ರಶಮನಾರ್ಥವಾಗಿ ಕ್ರಮವರಿತು ಔಷಧಿಯನ್ನೂ ಕೊಡುತ್ತಾನೆ. ಅದೇ ರೀತಿಯಲ್ಲಿ ಮನುಷ್ಯರು ಕಾರ್ಯದ ಸಿದ್ಧಿಗಾಗಿ ವಿವೇಕಶಕ್ತಿಯಿಂದ ವಿಚಾರಮಾಡಿ

ನಿಶ್ಚಯಾತ್ಮಕವಾದ ಬುದ್ಧಿಯನ್ನು ಆಶ್ರಯಿಸುತ್ತಾರೆ. ಆದರೆ ಅಂತಹ ವಿಚಾರಯುಕ್ತವಾದ ಬುದ್ಧಿಯನ್ನೇ ಅನ್ಯಮನುಷ್ಯರು ನಿಂದಿಸುತ್ತಾರೆ.

**ಅನ್ಯಯಾ ಯೌವನೇ ಮರ್ತ್ಯೋ ಬುದ್ಧ್ಯಾ ಭವತಿ ಮೋಹಿತಃ ।**
**ಮಧ್ಯೇಽನ್ಯಯಾ ಜರಾಯಾಂ ತು ಸೋಽನ್ಯಾಂ ರೋಚಯತೇ ಮತಿಮ್ ॥೧೧॥**

ಮನುಷ್ಯನು ಯೌವನಾವಸ್ಥೆಯಲ್ಲಿ ಒಂದು ವಿಧವಾದ ಬುದ್ಧಿಯಿಂದ ವಿಮೋಹಿತನಾಗುತ್ತಾನೆ. ಮಧ್ಯವಯಸ್ಸಿನಲ್ಲಿ ಯೌವನಾವಸ್ಥೆಯಲ್ಲಿದ್ದ ಬುದ್ಧಿಯು ಹೋಗಿ ಬೇರೆ ವಿಧವಾದ ಬುದ್ಧಿಯುಂಟಾಗುತ್ತದೆ. ವೃದ್ಧಾಪ್ಯದಲ್ಲಿ ಹಿಂದಿನ ಎರಡು ಪ್ರಕಾರವಾದ ಬುದ್ಧಿಗಳೂ ಇರುವುದಿಲ್ಲ. ಮತ್ತೊಂದು ವಿಧವಾದ ಬುದ್ಧಿಯನ್ನೇ ಮನುಷ್ಯನು ಆಶ್ರಯಿಸುತ್ತಾನೆ. (ಒಬ್ಬ ಮನುಷ್ಯನಿಗೆ ಹುಟ್ಟಿದಂದಿನಿಂದ ಸಾಯುವವರೆಗೆ ಒಂದೇ ಸಮನಾದ ಬುದ್ಧಿಯಿರುವುದಿಲ್ಲ. ಬುದ್ಧಿಯು ಸಂದರ್ಭಕ್ಕೆ ತಕ್ಕಂತೆ ವಯಸ್ಸಿಗೆ ತಕ್ಕಂತೆ ಬದಲಾಯಿಸುತ್ತದೆ.)

**ವ್ಯಸನಂ ವಾ ಮಹಾಘೋರಂ ಸಮೃದ್ಧಿಂ ಚಾಪಿ ತಾದೃಶೀಮ್ ।**
**ಅವಾಪ್ಯ ಪುರುಷೋ ಭೋಜ ಕುರುತೇ ಬುದ್ಧಿವೈಕೃತಮ್ ॥೧೨॥**

ಕೃತವರ್ಮನೇ! ಮನುಷ್ಯನು ಅತ್ಯಂತಘೋರವಾದ ಸಂಕಟದಲ್ಲಿ ಸಿಲುಕಿದಾಗ ಅಥವಾ ಅಪಾರವಾದ ಐಶ್ವರ್ಯಸಮೃದ್ಧಿಯನ್ನು ಹೊಂದಿದಾಗ ಬುದ್ಧಿವಿಕಾರವನ್ನು ಹೊಂದುತ್ತಾನೆ. ಒಬ್ಬನೇ ಮನುಷ್ಯನು ಸಂಕಟಬಂದಾಗ ದುಃಖಪಡುತ್ತಾನೆ. ಐಶ್ವರ್ಯವು ಲಭಿಸಿದಾಗ ಸಂತೋಷಪಡುತ್ತಾನೆ.

**ಏಕಸ್ಮಿನ್ನೇವ ಪುರುಷೇ ಸಾ ಸಾ ಬುದ್ಧಿಸ್ತದಾ ತದಾ ।**
**ಭವತ್ಯಕೃತಧರ್ಮತ್ವಾತ್ಸಾ ತಸ್ಯೈವ ನ ರೋಚತೇ ॥೧೩॥**

ನಾನು ಕೊಟ್ಟ ನಿದರ್ಶನದಂತೆ ಒಬ್ಬನೇ ಮನುಷ್ಯನಲ್ಲಿ ವಯಸ್ಸಿಗೆ ತಕ್ಕಂತೆ, ಸಂದರ್ಭಕ್ಕೆ ತಕ್ಕಂತೆ ಸುಖ-ದುಃಖಗಳಿಗೆ ಅನುಗುಣವಾಗಿ ಬುದ್ಧಿಯು ವ್ಯತ್ಯಾಸಹೊಂದುತ್ತಲೇ ಇರುತ್ತದೆ. (ಆಯಾ ಸಮಯಗಳಲ್ಲಿ

ತತ್ತತ್ಸಮಯಾನುಗುಣವಾದ ಬುದ್ಧಿಯೇ ಇರುತ್ತದೆ.) ಆಯಾ ಸಮಯಕ್ಕೆ ಅನುಗುಣವಾದ ಧರ್ಮವನ್ನು ಪರಿಪಾಲಿಸುವ ಬುದ್ಧಿಯುಂಟಾಗದಿದ್ದರೆ ಅವನ ಬುದ್ಧಿಯು ಅವನಿಗೇ ಹಿಡಿಸುವುದಿಲ್ಲ. (ಮಹಾವ್ಯಸನವು ಪ್ರಾಪ್ತ ವಾದಾಗ ಅದಕ್ಕನುಗುಣವಾದ ಬುದ್ಧಿಯೇ ಇರಬೇಕು. ಮಹಾವ್ಯಸನವು ಪ್ರಾಪ್ತವಾದಾಗ ಬುದ್ಧಿಯು ಉದ್ವೇಗಗೊಳ್ಳದೇ ಶಾಂತಿಯಿಂದಿರುವುದು ಸರಿ ಎನಿಸುವುದಿಲ್ಲ. ಪ್ರಕೃತಸಂದರ್ಭದಲ್ಲಿ ದುರ್ಯೋಧನನ ಮರಣದಿಂದ ಮಹಾಸಂಕಟವುಂಟಾಗಿದೆ. ಇದಕ್ಕೆ ಅನುಸಾರವಾದ ಬುದ್ಧಿಯೇ ಇರಬೇಕೆಂಬುದು ಅಶ್ವತ್ಥಾಮನ ಅಭಿಪ್ರಾಯವಾಗಿದೆ. ಇದಕ್ಕೆ ಅನುಸಾರ ವಾದ ಬುದ್ಧಿಯೆಂದರೆ ಪ್ರತೀಕಾರಬುದ್ಧಿ. ಅದಕ್ಕೆ ಬದಲಾಗಿ ಕೃಪರ ಸಲಹೆ ಯಂತೆ ನಡೆಯುವುದು ಅಶ್ವತ್ಥಾಮನಿಗೆ ರುಚಿಸುವುದಿಲ್ಲ. ಅಶ್ವತ್ಥಾಮನು ಕೃಪರ ಸಲಹೆಯನ್ನು ತರ್ಕಬದ್ಧವಾದ ಮಾತುಗಳಿಂದ ತಿರಸ್ಕರಿಸುತ್ತಾನೆ.)

**ನಿಶ್ಚಿತ್ಯ ತು ಯಥಾಪ್ರಜ್ಞಂ ಯಾಂ ಮತಿಂ ಸಾಧು ಪಶ್ಯತಿ ।**
**ತಯಾ ಪ್ರಕುರುತೇ ಭಾವಂ ಸಾ ತಸ್ಯೋದ್ಯೋಗಕಾರಿಕಾ ॥೧೪॥**

ಮನುಷ್ಯನು ತನಗಿರುವ ವಿವೇಕಕ್ಕೆ ಅನುಸಾರವಾಗಿ ಸಮಾಲೋಚಿಸಿ 'ಇಂತಹುದೇ ಕಾರ್ಯವನ್ನು ಮಾಡುವುದು ಸಾಧು'–ಎಂದು ಯಾವ ಬುದ್ಧಿಯ ಮೂಲಕವಾಗಿ ನಿಶ್ಚಯಿಸುತ್ತಾನೆಯೋ–ಆ ಬುದ್ಧಿಯ ಮೂಲಕವಾಗಿಯೇ ಅವನು ಕಾರ್ಯಸಿದ್ಧಿಗೆ ಪ್ರಯತ್ನಿಸುತ್ತಾನೆ. ಆ ಬುದ್ಧಿಯೇ ಅವನನ್ನು ಕಾರ್ಯಪ್ರವೃತ್ತನಾಗುವಂತೆ ಪ್ರೇರಿಸುತ್ತದೆ.

**ಸರ್ವೋ ಹಿ ಪುರುಷೋ ಭೋಜ ಸಾಧ್ವೇತದಿತಿ ನಿಶ್ಚಿತಃ ।**
**ಕರ್ತುಮಾರಭತೇ ಪ್ರೀತೋ ಮರಣಾದಿಷು ಕರ್ಮಸು ॥೧೫॥**

ಭೋಜಕುಲಾವತಂಸನೇ! ಕೃತವರ್ಮ! ಯಾವ ಮನುಷ್ಯನೇ ಆಗಲೀ–ಯಾವುದೇ ಕಾರ್ಯವನ್ನು ಮಾಡಬೇಕಾಗಿ ಬಂದರೂ–'ಇದು ಚೆನ್ನಾಗಿದೆ–ಹೀಗೆಯೇ ಮಾಡಬೇಕು'–ಎಂದು ನಿಶ್ಚಯಿಸಿ ಪ್ರಸನ್ನವಾದ ಮನಸ್ಸಿನಿಂದಲೇ ಕಾರ್ಯವನ್ನು ಮಾಡಲು ಪ್ರಾರಂಭಿಸುತ್ತಾನೆ. ಹೀಗೆ ನಿಶ್ಚಯಿಸಿ ಪ್ರಸನ್ನಮನಸ್ಕನಾಗಿ ಕಾರ್ಯಮಾಡುವಾಗ ಅವನು ಹಿಂಸಾ-

ಮರಣಾದಿ ಕರ್ಮಗಳಲ್ಲಿಯೂ ತೊಡಗಬಹುದು. ಮರಣಕ್ಕೆ ಕಾರಣವಾದ ಯುದ್ಧವೇ ಮೊದಲಾದ ಕರ್ಮಗಳಲ್ಲಿ ತೊಡಗುವಾಗಲೂ ಮನುಷ್ಯನು– 'ಈ ಕಾರ್ಯವನ್ನು ಮಾಡುವುದು ಸಾಧುವಾಗಿದೆ'–ಎಂದುಕೊಂಡೇ ಮಾಡುತ್ತಾನೆ. ಕಾರ್ಯವು ಕೆಟ್ಟುದೆಂದು ಮನಸ್ಸಿನಲ್ಲಿ ಭಾವಿಸಿಕೊಂಡು ಆ ಕಾರ್ಯವನ್ನು ಮಾಡಲು ಹೋಗುವುದಿಲ್ಲ. ಕೆಟ್ಟುದೆಂದು ಮನಸ್ಸಿನಲ್ಲಿ ಭಾವಿಸಿಕೊಂಡು ಆ ಕಾರ್ಯವನ್ನು ಮಾಡಲೂ ಅವನಿಗೆ ಸಾಧ್ಯ ವಾಗುವುದಿಲ್ಲ. ಶತ್ರುವಿನ ಸಂಹಾರಕ್ಕೆ ಈ ಮಾರ್ಗವೇ ಸರಿ ಎಂದೇ ಭಾವಿಸಿ ಪ್ರಸನ್ನಮನಸ್ಕನಾಗಿಯೇ ಕರ್ಮವನ್ನು ಮಾಡುತ್ತಾನೆ. ಆದರಿಂದ ಪ್ರಾಪ್ತವಾಗುವ ಶತ್ರುವಿನಾಶದ ಫಲದಿಂದ ಸಂತೋಷವನ್ನೂ ಪಡೆಯುತ್ತಾನೆ.

**ಸರ್ವೇ ಹಿ ಬುದ್ಧಿಮಾಜ್ಞಾಯ ಪ್ರಜ್ಞಾಂ ವಾಪಿ ಸ್ವಕಾಂ ನರಾಃ ।**
**ಚೇಷ್ಟನ್ತೇ ವಿವಿಧಾಂ ಚೇಷ್ಟಾಂ ಹಿತಮಿತ್ಯೇವ ಜಾನತೇ ॥೧೬॥**

ಎಲ್ಲ ಜನರೂ ತಮ್ಮ ಬುದ್ಧಿಯ ಅಥವಾ ವಿವೇಕದ ಆಶ್ರಯವನ್ನು ಹೊಂದಿ ನಾನಾವಿಧವಾದ ಕಾರ್ಯಗಳನ್ನು ಮಾಡುತ್ತಿರುತ್ತಾರೆ. ತಾವು ಮಾಡುತ್ತಿರುವ ಕಾರ್ಯಗಳೆಲ್ಲವೂ ಹಿತಕರವಾದುದೆಂದೇ ಅವರು ಭಾವಿಸಿಕೊಳ್ಳುತ್ತಾರೆ. ಇಂದಿನ ಮಹಾವ್ಯಸನದಿಂದ ನನ್ನ ಅಂತರಂಗದಲ್ಲಿ ಹುಟ್ಟಿರುವ ಮತ್ತು ಈ ಮಹಾಶೋಕವನ್ನು ವಿನಾಶಗೊಳಿಸುವ ಬುದ್ಧಿಯ ಸ್ವರೂಪವನ್ನು ನಿಮ್ಮಿಬ್ಬರಿಗೂ ತಿಳಿಸುತ್ತೇನೆ ; ಕೇಳಿರಿ. ಗುಣವಂತನಾದ ಪ್ರಜಾಪತಿಬ್ರಹ್ಮನು ಪ್ರಜೆಗಳನ್ನು ಸೃಷ್ಟಿಸಿ ಅವರವರ ಕರ್ಮಗಳನ್ನು ವಿಧಾಯಕಮಾಡಿರುತ್ತಾನೆ ಮತ್ತು ಒಂದೊಂದು ವರ್ಣಕ್ಕೂ ವಿಶೇಷವಾದ ಒಂದೊಂದು ಗುಣವನ್ನೂ ಸಂಯೋಜಿಸಿದ್ದಾನೆ.

**ಬ್ರಾಹ್ಮಣೇ ವೇದಮಗ್ರ್ಯಂ ತು ಕ್ಷತ್ರಿಯೇ ತೇಜ ಉತ್ತಮಮ್ ।**
**ದಾಕ್ಷ್ಯಂ ವೈಶ್ಯೇ ಚ ಶೂದ್ರೇ ಚ ಸರ್ವವರ್ಣಾನುಕೂಲತಾಮ್ ॥**

ಬ್ರಾಹ್ಮಣನಲ್ಲಿ ಸರ್ವಶ್ರೇಷ್ಠವಾದ ವೇದ, ಕ್ಷತ್ರಿಯನಲ್ಲಿ ಉತ್ತಮವಾದ ತೇಜಸ್ಸು, ವೈಶ್ಯನಲ್ಲಿ ಕೃಷಿ-ವಾಣಿಜ್ಯಗಳಲ್ಲಿ ಕುಶಲತೆ, ಶೂದ್ರನಲ್ಲಿ ಉಳಿದ ಮೂರು ವರ್ಣದವರಿಗೂ ಅನುಕೂಲವಾಗಿರುವುದು–ಈ ವಿಶೇಷಗುಣ ಗಳನ್ನು ಸ್ಥಾಪನೆಮಾಡಿದ್ದಾನೆ.

**ಅದಾನ್ತೋ ಬ್ರಾಹ್ಮಣೋಽಸಾಧುರ್ನಿಸ್ತೇಜಾಃ ಕ್ಷತ್ರಿಯೋಽಧಮಃ ।**
**ಅದಕ್ಷೋ ನಿನ್ದ್ಯತೇ ವೈಶ್ಯಃ ಶೂದ್ರಶ್ಚ ಪ್ರತಿಕೂಲವಾನ್ ॥೨೦॥**

ವೇದಗಳನ್ನು ಅಧ್ಯಯನಮಾಡಿ ಇಂದ್ರಿಯಗಳನ್ನು ವಶಪಡಿಸಿಕೊಳ್ಳದಿರುವ ಬ್ರಾಹ್ಮಣನು ಅಧಮನು. ತೇಜಸ್ಸಿನಿಂದ (ಪೌರುಷದಿಂದ) ವಿಹೀನನಾದ ಕ್ಷತ್ರಿಯನು ಅಧಮನು. ಕುಶಲತೆಯಿಲ್ಲದ ವೈಶ್ಯನು ನಿಂದ್ಯನು. ಈ ಮೂರು ವರ್ಣದವರಿಗೂ ಪ್ರತಿಕೂಲಕಾರಿಯಾದ ಶೂದ್ರನು ನಿಂದ್ಯನು.

**ಸೋಽಸ್ಮಿ ಜಾತಃ ಕುಲೇ ಶ್ರೇಷ್ಠೇ ಬ್ರಾಹ್ಮಣಾನಾಂ ಸುಪೂಜಿತೇ ।**
**ಮನ್ದಭಾಗ್ಯತಯಾಸ್ಮ್ಯೇತಂ ಕ್ಷತ್ರಧರ್ಮಮನುಷ್ಠಿತಃ ॥೨೧॥**

ನಾನು ಸಂಪೂಜಿತವಾದ ಮತ್ತು ಶ್ರೇಷ್ಠವಾದ ಬ್ರಾಹ್ಮಣಕುಲದಲ್ಲಿಯೇ ಹುಟ್ಟಿದ್ದೇನೆ. ಆದರೆ ದೌರ್ಭಾಗ್ಯದ ಕಾರಣದಿಂದಾಗಿ ಕ್ಷತ್ರಧರ್ಮದ ಅನುಸರಣೆಯನ್ನು ಮಾಡುತ್ತಿದ್ದೇನೆ.

**ಕ್ಷತ್ರಧರ್ಮಂ ವಿದಿತ್ವಾಹಂ ಯದಿ ಬ್ರಾಹ್ಮಣ್ಯಮಾಶ್ರಿತಃ ।**
**ಪ್ರಕುರ್ಯಾಂ ಸುಮಹತ್ಕರ್ಮ ನ ಮೇ ತತ್ಸಾಧುಸಮ್ಮತಮ್ ॥೨೨॥**

ಕ್ಷತ್ರಧರ್ಮವನ್ನು ಚೆನ್ನಾಗಿ ತಿಳಿದುಕೊಂಡಿರುವ ನಾನು ಪುನಃ ಈಗೇನಾದರೂ ಬ್ರಾಹ್ಮಣ್ಯವನ್ನು ಆಶ್ರಯಿಸಿ ಮಹತ್ತ್ವದಿಂದ ಯುಕ್ತವಾದ ಯಾವುದೇ ಕಾರ್ಯವನ್ನು ಮಾಡಿದರೂ–ಆ ನನ್ನ ಕಾರ್ಯವು ಸತ್ಪುರುಷರ ಮಾನ್ಯತೆಯನ್ನು ಪಡೆಯುವುದಿಲ್ಲ.

**ಧಾರಯಂಶ್ಚ ಧನುರ್ದಿವ್ಯಂ ದಿವ್ಯಾನ್ಯಸ್ತ್ರಾಣಿ ಚಾಹವೇ ।**
**ಪಿತರಂ ನಿಹತಂ ದೃಷ್ಟ್ವಾ ಕಿಂ ನು ವಕ್ಷ್ಯಾಮಿ ಸಂಸದಿ ॥೨೩॥**

ದಿವ್ಯವಾದ ಧನುಸ್ಸನ್ನೂ ದಿವ್ಯವಾದ ಅಸ್ತ್ರಗಳನ್ನೂ ಹಿಡಿದಿರುವ ನಾನು, ನನ್ನ ತಂದೆಯು ಯುದ್ಧದಲ್ಲಿ ಹತನಾದುದನ್ನು ನೋಡಿಯೂ ಅದಕ್ಕೆ ತಕ್ಕುದಾದ ಪ್ರತೀಕಾರಮಾಡದಿದ್ದರೆ–ತುಂಬಿದ ವೀರರ ಸಭೆಯಲ್ಲಿ ಈ ಪ್ರಶ್ನೆಯನ್ನೇ ಕೇಳುವ ಜನರಿಗೆ ಏನೆಂದು ಉತ್ತರ ಹೇಳಲಿ?

ಆದುದರಿಂದ ನಾನು ನನ್ನ ತಂದೆಯನ್ನು ಸಂಹಾರಮಾಡಿದುದಕ್ಕೆ ಪ್ರತೀಕಾರವನ್ನು ಮಾಡಲೇಬೇಕಾಗಿದೆ. ಈಗ ನಾನು ನನಗೆ ಸರಿದೋರಿದಂತೆ

ಕ್ಷತ್ರಧರ್ಮವನ್ನೇ ಆಶ್ರಯಿಸಿ ದುರ್ಯೋಧನರಾಜನ ಮತ್ತು ಮಹಾತ್ಮನಾದ ನನ್ನ ತಂದೆಯ ಮಾರ್ಗವನ್ನೇ ಅನುಸರಿಸುತ್ತೇನೆ.

**ಅದ್ಯ ಸ್ವಪ್ಸ್ಯನ್ತಿ ಪಞ್ಚಾಲಾ ವಿಶ್ವಸ್ತಾ ಜಿತಕಾಶಿನಃ ।**
**ವಿಮುಕ್ತಯುಗ್ಯಕವಚಾ ಹರ್ಷೇಣ ಚ ಸಮನ್ವಿತಾಃ ॥೨೫॥**

**ಜಯಂ ಮತ್ವಾತ್ಮನಶ್ಚೈವ ಶ್ರಾನ್ತಾ ವ್ಯಾಯಾಮಕರ್ಶಿತಾಃ ।**
**ತೇಷಾಂ ನಿಶಿ ಪ್ರಸುಪ್ತಾನಾಂ ಸುಸ್ಥಾನಾಂ ಶಿಬಿರೇ ಸ್ವಕೇ ।**
**ಅವಸ್ಕನ್ದಂ ಕರಿಷ್ಯಾಮಿ ಶಿಬಿರಸ್ಯಾದ್ಯ ದುಷ್ಕರಮ್ ॥೨೬॥**

ತಮಗೆ ವಿಜಯವು ಲಭಿಸಿರುವುದೆಂದು ಭಾವಿಸಿ ವಿಜಯದಿಂದ ಉಲ್ಲಸಿತರಾಗಿರುವ ಪಾಂಚಾಲಯೋಧರು ಆನಂದತುಂದಿಲರಾಗಿ ರಥದಿಂದ ಕುದುರೆಗಳನ್ನು ಬಿಚ್ಚಿ, ಕವಚಗಳನ್ನೂ ತೆಗೆದು, ಹದಿನೆಂಟು ದಿವಸಗಳ ನಿರಂತರಯುದ್ಧದಿಂದ ಬಹಳವಾಗಿ ಗಾಯಗೊಂಡು ಬಳಲಿರುವ ಕಾರಣ ಯಾವ ವಿಧವಾದ ಆತಂಕವೂ ಇಲ್ಲದೇ ಇಂದು ವಿಶ್ವಾಸಪೂರ್ವಕವಾಗಿ ಮಲಗಿ ನಿದ್ರಿಸುತ್ತಿದ್ದಾರೆ. ಹೀಗೆ ರಾತ್ರಿಯಲ್ಲಿ ನಿದ್ರಿಸುತ್ತಿರುವ ಪಾಂಚಾಲಯೋಧರ ಶಿಬಿರಗಳಿಗೆ ಮುತ್ತಿಗೆಯನ್ನು ಹಾಕಿ ಇತರರಿಂದ ಮಾಡಲು ದುಃಸಾಧ್ಯವಾದ ಸಂಹಾರಕಾರ್ಯವನ್ನು ಮಾಡುತ್ತೇನೆ.

**ತಾನವಸ್ಕನ್ದ್ಯ ಶಿಬಿರೇ ಪ್ರೇತಭೂತವಿಚೇತಸಃ ।**
**ಸೂದಯಿಷ್ಯಾಮಿ ವಿಕ್ರಮ್ಯ ಮಘವಾನಿವ ದಾನವಾನ್ ॥೨೭॥**

ಇಂದ್ರನು ದಾನವರನ್ನು ಆಕ್ರಮಿಸಿದಂತೆ–ನಾನೂ ಈಗ ಶಿಬಿರದಲ್ಲಿ ಆ ಪಾಂಚಾಲಯೋಧರನ್ನು ಆಕ್ರಮಿಸಿ ಪ್ರೇತಗಳಂತೆ (ಸತ್ತವರಂತೆ) ಚೇತನಾರಹಿತರಾಗಿ (ನಿದ್ರಾವಶರಾಗಿ) ಬಿದ್ದಿರುವ ಅವರನ್ನು ಪರಾಕ್ರಮದಿಂದಲೇ ಕೊಲ್ಲುತ್ತೇನೆ.

ಧಗ-ಧಗಿಸುವ ಅಗ್ನಿಯು ಹುಲ್ಲುಮೆದೆಯನ್ನು ಕ್ಷಣಮಾತ್ರದಲ್ಲಿ ಭಸ್ಮಮಾಡಿಬಿಡುವಂತೆ–ಈಗಲೇ ನಾನು ಶಿಬಿರಕ್ಕೆ ಹೋಗಿ ಒಂದೇ ಕಡೆಯಲ್ಲಿ ಮಲಗಿರುವ ಧೃಷ್ಟದ್ಯುಮ್ನನೇ ಮೊದಲಾದ ಪಾಂಚಾಲಯೋಧರನ್ನು ಪರಾಕ್ರಮವನ್ನು ಪ್ರದರ್ಶಿಸಿಯೇ ಸಂಹರಿಸುತ್ತೇನೆ. ಪಾಂಚಾಲರನ್ನು ಸಂಹರಿಸಿದ ನಂತರವೇ ನಾನು ಮನಃಶಾಂತಿಯನ್ನು ಪಡೆಯುತ್ತೇನೆ.

ಪ್ರಳಯಕಾಲದಲ್ಲಿ ಕ್ರುದ್ಧನಾದ, ಪಿನಾಕಪಾಣಿಯಾದ ರುದ್ರನು ತಾನೇ ಪ್ರಾಣಿಗಳ ಮಧ್ಯದಲ್ಲಿ ನಿಂತು ಸಂಹಾರಕಾರ್ಯವನ್ನು ಮಾಡುವಂತೆ–ನಾನು ಪಾಂಚಾಲರ ಮಧ್ಯದಲ್ಲಿ ನಿಂತು ಅವರನ್ನು ಸಂಹಾರಮಾಡುತ್ತಾ ಕಾಲರೂಪನೇ ಆಗುತ್ತೇನೆ. ಇಂದು ನಾನು ಎಲ್ಲ ಪಾಂಚಾಲರನ್ನೂ ಸಂಹರಿಸುವುದು ಮಾತ್ರವಲ್ಲದೇ ಅವರೆಲ್ಲರನ್ನೂ ತುಂಡು-ತುಂಡುಗಳಾಗಿ ಕತ್ತರಿಸಿದ ಬಳಿಕ ಪರಮಹೃಷ್ಟನಾಗಿ ಪಾಂಡುವಿನ ಮಕ್ಕಳನ್ನೂ ಮರ್ದನ ಮಾಡಿಬಿಡುತ್ತೇನೆ. ನಾನೀಗ ಸಂಹರಿಸಲಿರುವ ಎಲ್ಲ ಪಾಂಚಾಲಯೋಧರ ಶರೀರಗಳಿಂದ ಭೂಮಿಯನ್ನು ಮುಚ್ಚಿ ಭೂದೇವಿಯನ್ನು ಶರೀರಧಾರಿಣಿ ಯನ್ನಾಗಿ ಮಾಡುತ್ತೇನೆ. ಒಬ್ಬೊಬ್ಬ ಪಾಂಚಾಲಯೋಧನನ್ನೂ ಶಸ್ತ್ರಗಳಿಂದ ನಖ-ಶಿಖಾಂತವಾಗಿ ಚುಚ್ಚಿ-ಚುಚ್ಚಿ ಸಾಯಿಸಿ ನನ್ನ ತಂದೆಯ ಋಣದಿಂದ ಮುಕ್ತನಾಗುತ್ತೇನೆ. ಈಗ ನಾನು ಎಲ್ಲ ಪಾಂಚಾಲರನ್ನೂ ದುರ್ಯೋಧನ-ಕರ್ಣ-ಭೀಷ್ಮ-ಜಯದ್ರಥರು ಹೋಗಿರುವ ಅತಿದುರ್ಗಮವಾದ ಹಾದಿಯನ್ನೇ ಹಿಡಿದುಹೋಗುವಂತೆ ಮಾಡುತ್ತೇನೆ.

ಈ ರಾತ್ರಿಯಲ್ಲಿ ನಾನು ಪಾಂಚಾಲರಾಜನಾದ ಧೃಷ್ಟದ್ಯುಮ್ನನ ಶಿರಸ್ಸನ್ನು ಪಶುವಿನ ತಲೆಯಂತೆ ಬಲಪೂರ್ವಕವಾಗಿ ಜಜ್ಜಿಹಾಕುತ್ತೇನೆ. ಇಂದಿನ ರಾತ್ರಿಯ ಯುದ್ಧದಲ್ಲಿ ನಾನು ನಿಶ್ಚಿಂತೆಯಿಂದ ಮಲಗಿರುವ ಪಾಂಡು-ಪಾಂಚಾಲರ ಮಕ್ಕಳನ್ನೂ ನಿಶಿತವಾದ ಈ ನನ್ನ ಕತ್ತಿಯಿಂದ ಕತ್ತರಿಸಿಬಿಡುತ್ತೇನೆ.

**ಅದ್ಯ ಪಾಞ್ಚಾಲಸೇನಾಂ ತಾಂ ನಿಹತ್ಯ ನಿಶಿ ಸೌಪ್ತಿಕೇ ।**
**ಕೃತಕೃತ್ಯಃ ಸುಖೀ ಚೈವ ಭವಿಷ್ಯಾಮಿ ಮಹಾಮತೇ ॥೩೬॥**

ಮಹಾಮೇಧಾವಿಯೇ! ಮಾತುಲ! ಈ ರಾತ್ರಿ ಮಲಗಿರುವ ಸಮಯದಲ್ಲಿ ಆ ಪಾಂಚಾಲಸೈನ್ಯವನ್ನು ನಾನು ಸಂಪೂರ್ಣವಾಗಿ ಸಂಹಾರ ಮಾಡಿ ಕೃತಕೃತ್ಯನೂ–ಪರಮಸುಖಿಯೂ ಆಗುತ್ತೇನೆ.”

ಇನೆಯ ಅಧ್ಯಾಯವು ಮುಗಿಯಿತು.

## ಕೃಪರು ಬೆಳಗಾದ ಮೇಲೆ ಯುದ್ಧಮಾಡಲು ಅಶ್ವತ್ಥಾಮನಿಗೆ ಸಲಹೆ ನೀಡಿದುದು : ಅಶ್ವತ್ಥಾಮನು ಮಲಗಿರುವವರನ್ನೇ ಸಂಹರಿಸಲು ಆಗ್ರಹಪಡಿಸಿದುದು

ಕೃಪಾಚಾರ್ಯರು ಅಶ್ವತ್ಥಾಮನಿಗೆ ಹೇಳಿದ ಮಾತನ್ನು ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಅಶ್ವತ್ಥಾಮನ ನಿರ್ಧಾರವನ್ನು ತಿಳಿದು ಕೃಪರು ಅಶ್ವತ್ಥಾಮನಿಗೆ ಹೇಳುತ್ತಾರೆ :

**ದಿಷ್ಟ್ಯಾ ತೇ ಪ್ರತಿಕರ್ತವ್ಯಮತಿರ್ಜಾತೇಯಮಚ್ಯುತ ।**
**ನ ತ್ವಾಂ ವಾರಯಿತುಂ ಶಕ್ತೋ ವಜ್ರಪಾಣಿರಪಿ ಸ್ವಯಮ್ ॥೧॥**

"ಪ್ರತಿಜ್ಞೆಯಿಂದ ವಿಚಲಿತನಾಗದೇ ಇರತಕ್ಕವನೇ! ದ್ರೋಣಪುತ್ರ! ಅದೃಷ್ಟವಶಾತ್ ಶತ್ರುಗಳಿಗೆ ಪ್ರತೀಕಾರಮಾಡುವ ಬುದ್ಧಿಯು ನಿನಗುಂಟಾಗಿದೆ. ವಜ್ರಪಾಣಿಯಾದ ಇಂದ್ರನೇ ಸಾಕ್ಷಾತ್ತಾಗಿ ಬಂದರೂ ನಿನ್ನನ್ನು ಈ ಕಾರ್ಯದಿಂದ ವಿಮುಖನನ್ನಾಗಿ ಮಾಡಲಾರನು. ಆದರೆ ನಾನು ಸಮಯೋಚಿತವಾದ ಮಾತನ್ನು ನಿನ್ನೊಡನೆ ಹೇಳುತ್ತೇನೆ ; ಕೇಳು. ಈಗ ನೀನು ಕವಚವನ್ನು ತೆಗೆದು ರಥದ ಧ್ವಜವನ್ನು ಕೆಳಗಿಳಿಸಿ ವಿಶ್ರಮಿಸು. ಪ್ರಾತಃಕಾಲವಾದೊಡನೆಯೇ ನಾವಿಬ್ಬರೂ (ಪಾಂಡವರೊಡನೆ ಯುದ್ಧಮಾಡಲಿರುವ) ನಿನ್ನನ್ನೇ ಅನುಸರಿಸಿ ಬರುತ್ತೇವೆ.

ನಾನೂ ಮತ್ತು ಸಾತ್ವತವಂಶೀಯನಾದ ಕೃತವರ್ಮನೂ ಕವಚಗಳನ್ನು ಧರಿಸಿ ರಥಗಳಲ್ಲಿ ಕುಳಿತು ಶತ್ರುಗಳನ್ನು ಎದುರಿಸಲು ಮುಂಭಾಗದಲ್ಲಿ ಹೋಗುವ ನಿನ್ನನ್ನೇ ಅನುಸರಿಸಿ ಬರುತ್ತೇವೆ. ರಥಿಗಳಲ್ಲಿ ಶ್ರೇಷ್ಠನಾದವನೇ! ನಾಳೆಯೇ ನೀನು ನಮ್ಮಿಬ್ಬರ ಸಹಾಯವನ್ನೂ ಪಡೆದುಕೊಂಡು ಯುದ್ಧದಲ್ಲಿ ಅನುಚರರಿಂದ ಕೂಡಿದ ಎಲ್ಲ ಪಾಂಚಾಲರನ್ನೂ ಪರಾಕ್ರಮದಿಂದ ಸಂಹರಿಸುವೆ. ಅಶ್ವತ್ಥಾಮ! ನೀನು ಅತುಲವಾದ ಪರಾಕ್ರಮವನ್ನು ತೋರುತ್ತಾ ರಣಾಂಗಣದಲ್ಲಿ ಎಲ್ಲ ಶತ್ರುಗಳನ್ನೂ ಸಂಹರಿಸಲು ಸಮರ್ಥ

ನಾಗಿರುವೆ. ಆದರೆ ನೀನು ಬಹಳ ದಿವಸಗಳಿಂದಲೂ ನಿದ್ರೆಯಿಲ್ಲದೇ ಜಾಗ್ರತನಾಗಿಯೇ ಇರುವೆ. (ಇದರಿಂದ ನಿನಗೆ ಬಹಳ ದಣಿವಾಗಿದೆ.) ಈ ರಾತ್ರಿಯಲ್ಲಾದರೂ ಸ್ವಲ್ಪ ವಿಶ್ರಮಿಸಿಕೊ. ಬೆಳಗಾಗುವವರೆಗಾದರೂ ಮಲಗಿ ನಿದ್ರೆಮಾಡು. ನಿದ್ರೆಯನ್ನು ಪೂರೈಸಿಕೊಂಡು ದಣಿವಾರಿಸಿಕೊಂಡು ಸ್ವಸ್ಥ ಚಿತ್ತನಾಗು. ಬೆಳಗಾದೊಡನೆಯೇ ನೀನು ಶತ್ರುಗಳೊಡನೆ ಸಂಘರ್ಷಿಸಿ ಅವರೆಲ್ಲರನ್ನೂ ಸಂಹರಿಸುವುದರಲ್ಲಿ ಸಂಶಯವೇ ಇಲ್ಲ. ರಥಿಗಳಲ್ಲಿ ಶ್ರೇಷ್ಠನಾದ, ಆಯುಧಗಳನ್ನು ಧರಿಸಿರುವ ನಿನ್ನನ್ನು ದೇವತೆಗಳ ರಾಜನಾದ ಇಂದ್ರನೂ ಜಯಿಸುವ ಸಾಹಸವನ್ನು ಮಾಡಲಾರನು. ಕೃಪನೊಡನೆ ಹೋಗುವ, ಕೃತವರ್ಮನಿಂದ ಸಂರಕ್ಷಿತನಾದ, ಕೋಪಗೊಂಡ ಅಶ್ವತ್ಥಾಮನನ್ನು ಎದುರಿಸಿ ದೇವರಾಜನಾದರೂ ಯುದ್ಧಮಾಡುವನೇ? ಆದುದರಿಂದ ಬೆಳಗಾದೊಡನೆಯೇ ನಾವು ಮೂವರೂ ಸೇರಿ ಪಾಂಡು-ಪಾಂಚಾಲರೊಡನೆ ಯುದ್ಧಮಾಡಲು ಹೋಗೋಣ. ಈ ರಾತ್ರಿಯಲ್ಲಿ ವಿಶ್ರಾಂತಿಯನ್ನು ಪಡೆದು ನಿದ್ರೆಯನ್ನು ಪೂರೈಸಿಕೊಂಡು, ಶಾರೀರಕವಾದ ಆತಂಕಗಳನ್ನು ಕಳೆದುಕೊಂಡು ಪ್ರಾತಃಕಾಲದಲ್ಲಿ ಶತ್ರುಗಳನ್ನು ಸಂಹಾರ ಮಾಡೋಣ. ನಿನ್ನಲ್ಲಿ ಅನೇಕ ದಿವ್ಯಾಸ್ತ್ರಗಳಿವೆ. ನನ್ನಲ್ಲಿಯೂ ಅನೇಕ ದಿವ್ಯಾಸ್ತ್ರಗಳಿವೆ. ಇದರಲ್ಲಿ ಸಂಶಯವೇ ಇಲ್ಲ. ಕೃತವರ್ಮನಾದರೋ ಮಹಾಧನುಷ್ಮಂತನು. ಯುದ್ಧದಲ್ಲಿ ಸದಾ ಕುಶಲನು. ನಾವು ಮೂವರೂ ಒಟ್ಟಾಗಿ ಸೇರಿ ನಮ್ಮನ್ನು ಎದುರಿಸಲು ಬರುವ ಎಲ್ಲ ಶತ್ರುಗಳನ್ನೂ ಬಲಪೂರ್ವಕವಾಗಿ ಯುದ್ಧದಲ್ಲಿ ಸಂಹರಿಸಿ ಮಹಾನಂದವನ್ನು ಪಡೆಯೋಣ. ಆದುದರಿಂದ ನೀನು ಮನಸ್ಸಿನ ಅಸ್ಥಿರತೆಯನ್ನು ದೂರಮಾಡಿ ಮಲಗು. ಈ ರಾತ್ರಿಯನ್ನು ಸುಖದಿಂದ ಕಳೆ. ದಣಿವಾರಿಸಿಕೊ. ರಥದಲ್ಲಿ ಕುಳಿತು ವೇಗದಿಂದ ಹೋಗುತ್ತಿರುವ, ರಥಿಗಳಲ್ಲಿ ಶ್ರೇಷ್ಠನಾದ, ನರೋತ್ತಮನಾದ ನಿನ್ನನ್ನು ಶತ್ರುತಾಪಿಗಳಾದ, ಕವಚಧಾರಿಗಳಾದ, ಧನುಷ್ಮಂತರಾದ ನಾನೂ ಮತ್ತು ಕೃತವರ್ಮನೂ ಇಬ್ಬರೂ ಒಟ್ಟಾಗಿಯೇ ಹಿಂಬಾಲಿಸುವೆವು. ಹಾಗೆ ಹೋಗುವ ನೀನು ಪಾಂಡು-ಪಾಂಚಾಲರಿರುವ ಶಿಬಿರಗಳಿಗೆ ಹೋಗಿ ನಿನ್ನ ಹೆಸರನ್ನು ಘೋಷಿಸಿ ಅನಂತರ ನಿನ್ನೊಡನೆ ಯುದ್ಧಮಾಡಲು ಬರುವ ಶತ್ರುಗಳ ಮಹಾಸಂಹಾರವನ್ನು ಮಾಡಬಹುದಾಗಿದೆ. ಪ್ರಾತಃಕಾಲದಲ್ಲಿ,

ಸುನಿರ್ಮಲವಾದ ಹಗಲಿನಲ್ಲಿ ನಮ್ಮ ಸಹಯೋಗದಿಂದ ಅವರೆಲ್ಲರನ್ನೂ ಸಂಹರಿಸಿ–ಮಹಾಸುರರನ್ನು ಸಂಹರಿಸಿದನಂತರ ಇಂದ್ರನು ವಿಹರಿಸಿದಂತೆ–ನೀನೂ ಇಚ್ಛಾನುಸಾರವಾಗಿ ವಿಹರಿಸು. ಸರ್ವದಾನವರ ಹಂತಕನಾದ ಇಂದ್ರನು ಕ್ರುದ್ಧನಾಗಿ ದೈತ್ಯಸೈನ್ಯವನ್ನು ಸಂಹರಿಸಿದಂತೆ–ನೀನೂ ಪಾಂಚಾಲರ ವಿಪುಲಸೈನ್ಯವನ್ನೂ ಜಯಿಸಲು ಸಮರ್ಥನಾಗಿರುವೆ. ನನ್ನಿಂದ ಸಹಿತನಾದ ಮತ್ತು ಕೃತವರ್ಮನಿಂದ ರಕ್ಷಿತನಾದ ನಿನ್ನ ವೇಗವನ್ನು ವಿಭುವಾದ, ವಜ್ರಪಾಣಿಯಾದ ಸಾಕ್ಷಾತ್ ಇಂದ್ರನೂ ಸಹಿಸಿಕೊಳ್ಳಲಾರನು. ಮಗು! ನಾನೂ ಮತ್ತು ಕೃತವರ್ಮನೂ ಯುದ್ಧದಲ್ಲಿ ಪಾಂಡವರನ್ನು ಪರಾಜಯಗೊಳಿಸದೇ ಯಾವಾಗಲೂ ಹಿಂದಕ್ಕೆ ಸರಿಯುವುದಿಲ್ಲ. ಕ್ರುದ್ಧರಾಗಿ ನಮ್ಮೊಡನೆ ಯುದ್ಧಮಾಡಲು ಬರುವ ಪಾಂಡು-ಪಾಂಚಾಲರನ್ನು ಸಂಹರಿಸಿ ನಾವೆಲ್ಲರೂ ಒಟ್ಟಾಗಿಯೇ ಯುದ್ಧದಿಂದ ಹಿಂದಿರುಗೋಣ. ಒಂದು ವೇಳೆ ಅವರಿಂದ ನಾವೇ ಹತರಾದರೂ ಒಟ್ಟಾಗಿಯೇ ಸ್ವರ್ಗಕ್ಕೆ ಹೋಗೋಣ. ಆಚಾರ್ಯಪುತ್ರ! ಬೆಳಗಾಗುತ್ತಲೇ ನಾವು ಸರ್ವೋಪಾಯಗಳಿಂದಲೂ ನಿನಗೆ ಯುದ್ಧದಲ್ಲಿ ಸಹಾಯಕರಾಗುತ್ತೇವೆ. ನಿಷ್ಪಾಪನೇ! ಮಹಾಬಾಹುವೇ! ನಾನು ಸತ್ಯವಚನವನ್ನು ಹೇಳುತ್ತಿದ್ದೇನೆ.”

ಕೃಪಾಚಾರ್ಯರು ತಮ್ಮ ಸೋದರಳಿಯನಿಗೆ ಹಿತಕರವಾದ ಈ ಮಾತನ್ನು ಹೇಳಿದನಂತರ ಕ್ರೋಧದಿಂದ ಕೆಂಪಾದ ಕಣ್ಣುಗಳನ್ನು ಹೊಂದಿದ್ದ ಅಶ್ವತ್ಥಾಮನು ಸೋದರಮಾವನೊಡನೆ ಹೇಳಿದನು :

**ಆತುರಸ್ಯ ಕುತೋ ನಿದ್ರಾ ನರಸ್ಯಾಮರ್ಷಿತಸ್ಯ ಚ ।**
**ಅರ್ಥಾಂಶ್ಚಿಂತಯತಶ್ಚಾಪಿ ಕಾಮಯಾನಸ್ಯ ವಾ ಪುನಃ ॥೨೧॥**
**ತದಿದಂ ಸಮನುಪ್ರಾಪ್ತಂ ಪಶ್ಯ ಮೇಽದ್ಯ ಚತುಷ್ಟಯಮ್ ।**
**ಯಸ್ಯ ಭಾಗಶ್ಚತುರ್ಥೋ ಮೇ ಸ್ವಪ್ನಮಹ್ನಾಯ ನಾಶಯೇತ್ ॥೨೨॥**

“ಮಾತುಲ! ಶೋಕಾತುರನಾದವನಿಗೆ, ಕ್ರೋಧಾಭಿಭೂತನಾದವನಿಗೆ, ಗುರಿಯನ್ನು ಸಾಧಿಸುವ ವಿಷಯವಾಗಿ ಚಿಂತಿಸುತ್ತಿರುವವನಿಗೆ, ಯಾವುದೋ ಕಾಮನೆಯಲ್ಲಿ ಆಸಕ್ತನಾದವನಿಗೆ – ನಿದ್ರೆಯಲ್ಲಿ ಬರುತ್ತದೆ? ಈಗ ನೋಡು!

ಈ ನಾಲ್ಕೂ ಈಗ ನನಗೇ ಬಂದೊದಗಿವೆ. ನಾಲ್ಕರಲ್ಲಿ ಒಂದಿದ್ದರೂ ಅದು ನನ್ನ ನಿದ್ರೆಯನ್ನು ಕೂಡಲೇ ನಾಶಮಾಡಬಲ್ಲುದು.

**ಕಿಂ ನಾಮ ದುಃಖಂ ಲೋಕೇಽಸ್ಮಿನ್ಪಿತುರ್ವಧಮನುಸ್ಮರನ್ ।**
**ಹೃದಯಂ ನಿರ್ದಹನ್ಮೇಽದ್ಯ ರಾತ್ರ್ಯಹಾನಿ ನ ಶಾಮ್ಯತಿ ॥೨೩॥**

ನನ್ನ ತಂದೆಯ ವಧೆಯನ್ನು ಸ್ಮರಿಸಿಕೊಳ್ಳುತ್ತಾ ನನಗೆ ಯಾವ ವಿಧವಾದ ದುಃಖವಾಗುತ್ತದೆಯೆಂಬುದನ್ನು ಹೇಳಲು ಸಾಧ್ಯವಾಗುತ್ತಿಲ್ಲ. ಆ ದುಃಖವು ನನ್ನ ಹೃದಯವನ್ನು ಹಗಲಿನಲ್ಲಿಯೂ ಮತ್ತು ರಾತ್ರಿಯಲ್ಲಿಯೂ ದಹಿಸುತ್ತಿದ್ದು ಅದರ ಉಪಶಮನವೇ ಆಗುತ್ತಿಲ್ಲ. ಅದರಲ್ಲಿಯೂ ವಿಶೇಷವಾಗಿ ಆ ಪಾಪಿಷ್ಠರು ನನ್ನ ತಂದೆಯನ್ನು ಹೇಗೆ ಕೊಂದರೆಂಬುದರ ಸ್ಮರಣೆಯು ನನ್ನ ಮರ್ಮಸ್ಥಳಗಳನ್ನೇ ಕತ್ತರಿಸಿಹಾಕುತ್ತಿದೆ. ನಿನಗೆ ತಿಳಿದಿರುವಂತೆ ಈ ಘಟನೆಗಳೆಲ್ಲವೂ ನಿನ್ನ ಪ್ರತ್ಯಕ್ಷದಲ್ಲಿಯೇ ನಡೆಯಿತು. ಇಂತಹ ದುರ್ಘಟನೆಯು ನಡೆದನಂತರವೂ ನನ್ನಂತಹವನು ಈ ಲೋಕದಲ್ಲಿ ಕ್ಷಣಮಾತ್ರವಾದರೂ ಹೇಗೆ ಜೀವಿಸಿದ್ದಾನು?

**ದ್ರೋಣೋ ಹತೇತಿ ಯದ್ವಾಚಃ ಪಞ್ಚಾಲಾನಾಂ ಶೃಣೋಮ್ಯಹಮ್।**
**ಧೃಷ್ಟದ್ಯುಮ್ನಮಹತ್ವಾ ತು ನಾಹಂ ಜೀವಿತುಮುತ್ಸಹೇ ॥೨೬॥**

ಧೃಷ್ಟದ್ಯುಮ್ನನಿಂದ ದ್ರೋಣರು ಹತರಾದರೆಂಬ ಪಾಂಚಾಲರ ಮಾತನ್ನು ಕೇಳುತ್ತಲೇ ಇದ್ದೇನೆ. ಆದುದರಿಂದ ಪಿತೃಹಂತಕನಾದ ಧೃಷ್ಟದ್ಯುಮ್ನನನ್ನು ಸಂಹರಿಸದೇ ನಾನು ಜೀವದಿಂದಿರಲು ಇಚ್ಛಿಪಡುವುದಿಲ್ಲ.

ನನ್ನ ತಂದೆಯನ್ನು ಕೊಂದುದರಿಂದ ಧೃಷ್ಟದ್ಯುಮ್ನನೂ ಮತ್ತು ಅವನ ಸಂಗಡಿಗರೂ ನನ್ನಿಂದ ವಧಿಸಲ್ಪಡತಕ್ಕವರೇ ಸರಿ.

ಮಾತುಲ! ಮುರಿದುಹೋದ ತೊಡೆಗಳಿಂದ ಕೂಡಿದ್ದ ದುರ್ಯೋಧನ ರಾಜನು ಮಾಡುತ್ತಿದ್ದ ವಿಲಾಪವನ್ನು ನಾನು ಕೇಳಿದೆನು. ಸಾರ್ವಭೌಮನು ಮಾಡುತ್ತಿದ್ದ ಆ ವಿಲಾಪವು ಎಂತಹ ಕ್ರೂರಿಯ ಹೃದಯವನ್ನಾದರೂ ದಹಿಸದೇ ಇರುವುದೇ?

**ಕಸ್ಯ ಹ್ಯಕರುಣಾಸ್ಯಾಪಿ ನೇತ್ರಾಭ್ಯಾಮಶ್ರು ನಾವ್ರಜೇತ್ ।**
**ನೃಪತೇರ್ಭಗ್ನಸಕ್ಥಸ್ಯ ಶ್ರುತ್ವಾ ತಾದೃಗ್ವಚಃ ಪುನಃ ॥೨೮॥**

ಭಗ್ನೋರುವಾಗಿದ್ದ ರಾಜನ ಅಂತಹ ಹೃದಯವಿದಾರಿಯಾದ ಮಾತುಗಳನ್ನು ಕೇಳಿದನಂತರ ನಿಷ್ಕರುಣಿಯೇ ಆಗಿದ್ದರೂ, ಯಾವನಿಗೆ ತಾನೇ ಕಣ್ಣುಗಳಿಂದ ಕಂಬನಿಯು ಹೊರಬರುವುದಿಲ್ಲ?

**ಯಶ್ಚಾಯಂ ಮಿತ್ರಪಕ್ಷೋ ಮೇ ಮಯಿ ಜೀವತಿ ನಿರ್ಜಿತಃ ।**
**ಶೋಕಂ ಮೇ ವರ್ಧಯತ್ಯೇಷ ವಾರಿವೇಗ ಇವಾರ್ಣವಮ್ ।**
**ಏಕಾಗ್ರಮನಸೋ ಮೇಽದ್ಯ ಕುತೊ ನಿದ್ರಾ ಕುತಃ ಸುಖಮ್ ॥೨೯॥**

ನಾನು ಜೀವಿಸಿರುವಾಗಲೇ ನನ್ನ ಮಿತ್ರಪಕ್ಷವು ನಿರ್ಜಿತವಾಯಿತು. ನೀರಿನ ಪ್ರವಾಹವು ಸಮುದ್ರವನ್ನು ವರ್ಧಿಸುವಂತೆ–ಮಿತ್ರಪಕ್ಷದ ಅಪಜಯವು ನನ್ನ ಶೋಕವನ್ನು ಹೆಚ್ಚಿಸುತ್ತದೆ. ಶತ್ರುಗಳಿಗೆ ಪ್ರತೀಕಾರವನ್ನು ಮಾಡಬೇಕೆಂಬುವುದರಲ್ಲಿಯೇ ಏಕಾಗ್ರಚಿತ್ತನಾಗಿರುವ ನನಗೆ ಸುಖ ವೆಲ್ಲಿಯದು? ನಿದ್ರೆಯೆಲ್ಲಿಯದು? (ನೀನು ಹೇಳಿದಂತೆ ನಾವು ಮೂವರೂ ಸೇರಿ ಅವರೊಡನೆ ನೇರವಾಗಿ ಯುದ್ಧಮಾಡುವುದರಿಂದ ಯಾವ ಪ್ರಯೋಜನವೂ ಕಾಣುವುದಿಲ್ಲ. ಏಕೆಂದರೆ :

**ವಾಸುದೇವಾರ್ಜುನಾಭ್ಯಾಂ ಚ ತಾನಹಂ ಪರಿರಕ್ಷಿತಾನ್ ।**
**ಅವಿಷಹ್ಯತಮಾನ್ಮನ್ಯೇ ಮಹೇನ್ದ್ರೇಣಾಪಿ ಸತ್ತಮ ॥೩೦॥**

ವಾಸುದೇವಾರ್ಜುನರಿಂದ ಸಂರಕ್ಷಿಸಲ್ಪಡುವ ಪಾಂಡವ-ಪಾಂಚಾಲರು ಮಹೇಂದ್ರನಿಂದಲೂ ಅಜೇಯರೆಂಬುದು ನನ್ನ ಅಭಿಮತವಾಗಿದೆ.

**ನ ಚಾಪಿ ಶಕ್ತಃ ಸಂಯನ್ತುಂ ಕೋಪಮೇತಂ ಸಮುತ್ಥಿತಮ್ ।**
**ತಂ ನ ಪಶ್ಯಾಮಿ ಲೋಕೇಽಸ್ಮಿನ್ಯೋ ಮಾಂ**
**ಕೋಪಾನ್ನಿವರ್ತಯೇತ್ ॥೩೧॥**

ಮಾತುಲ! ಮೇಲಾಗಿ ನನ್ನ ಹೃದಯದಲ್ಲಿ ಹುಟ್ಟಿರುವ ಈ ಕೋಪವನ್ನು (ಬೆಳಗಿನವರೆಗೂ) ತಡೆಹಿಡಿಯಲೂ ನಾನು ಸಮರ್ಥನಾಗಿಲ್ಲ. ಎರಡನೆಯದಾಗಿ : ಈ ಲೋಕದಲ್ಲಿ ನನ್ನ ಕೋಪವನ್ನು ಉಪಶಮನ ಗೊಳಿಸುವ ಸಾಮರ್ಥ್ಯವಿರುವವನನ್ನೂ ನಾನು ಕಾಣುತ್ತಿಲ್ಲ.

ಈ ಎಲ್ಲ ಕಾರಣಗಳಿಂದ ಶತ್ರುಗಳನ್ನು ಇದೇ ವಿಧಾನದಿಂದ ಸಂಹರಿಸಬೇಕೆಂಬುದು ನನ್ನ ದೃಢವಾದ ಬುದ್ಧಿಯಾಗಿದೆ ಮತ್ತು ಇದೇ ಸರಿಯಾದ ವಿಧಾನವೆಂಬುದೂ ನನ್ನ ಅಭಿಪ್ರಾಯವಾಗಿದೆ. ವಾರ್ತಾವಾಹಕರಿಂದ ಹೇಳಲ್ಪಟ್ಟ ಮಿತ್ರಪಕ್ಷದ ಪರಾಭವವಾರ್ತೆಯೂ, ಶತ್ರುಗಳಾದ ಪಾಂಡವರ ವಿಜಯವಾರ್ತೆಯೂ ನನ್ನ ಹೃದಯವನ್ನು ದಹಿಸುತ್ತಿದೆಯೋ ಎಂಬಂತೆ ಕಾಣುತ್ತಿದೆ.

ನಾನಂತೂ ಶತ್ರುಗಳೆಲ್ಲರೂ ಮಲಗಿರುವಾಗಲೇ ಅವರೆಲ್ಲರ ಸಂಹಾರವನ್ನೂ ಮಾಡಿ, ಅನಂತರ ಕೋಪದಿಂದುಂಟಾದ ಶರೀರದ ಶಾಖವನ್ನು ಆರಿಸಿಕೊಂಡು (ಆತಂಕರಹಿತನಾಗಿ) ವಿಶ್ರಾಂತಿಯನ್ನು ಪಡೆಯುತ್ತೇನೆ. ಬಳಿಕ ಸುಖವಾಗಿ ನಿದ್ರೆಯನ್ನೂ ಮಾಡುತ್ತೇನೆ.”

ಳನೆಯ ಅಧ್ಯಾಯವು ಮುಗಿಯಿತು.

೫ನೆಯ ಅಧ್ಯಾಯ ಸೌಪ್ತಿಕಪರ್ವ (ಮುಂದುವರಿದಿದೆ.)

## ಕೃಪಾಶ್ವತ್ಥಾಮರ ಸಂವಾದ: ಮೂವರೂ ಪಾಂಡವರ ಶಿಬಿರದ ಕಡೆಗೆ ತೆರಳಿದುದು

ಅಶ್ವತ್ಥಾಮನ ನಿರ್ಧಾರವನ್ನು ಕೇಳಿದನಂತರ ಕೃಪರು ಹೇಳುತ್ತಾರೆ :

**ಶುಶ್ರೂಷುರಪಿ ದುರ್ಮೇಧಾಃ ಪುರುಷೋಽನಿಯತೇನ್ದ್ರಿಯಃ ।**
**ನಾಲಂ ವೇದಯಿತುಂ ಕೃತ್ಸ್ನೌ ಧರ್ಮಾರ್ಥಾವಿತಿ ಮೇ ಮತಿಃ ॥೧॥**

“ದ್ರೋಣಪುತ್ರ! ಜಿತೇಂದ್ರಿಯನಲ್ಲದವನೂ ಮತ್ತು ಒಳ್ಳೆಯ ಮೇಧಾಶಕ್ತಿಯಿಲ್ಲದವನೂ–ಧರ್ಮಾರ್ಥಗಳ ವಿಷಯವನ್ನು ಕೇಳಿ ತಿಳಿದು ಕೊಳ್ಳುವ ಇಚ್ಛೆಯುಳ್ಳವನಾಗಿದ್ದರೂ–ಅವನಿಗೆ ಧರ್ಮಾರ್ಥಗಳನ್ನು ಪರಿ ಪೂರ್ಣವಾಗಿ ಗ್ರಹಿಸುವ ಸಾಮರ್ಥ್ಯವಿರುವುದಿಲ್ಲವೆಂದು ನಾನು ಭಾವಿಸುತ್ತೇನೆ.

**ತಥೈವ ತಾವನ್ಮೇಧಾವೀ ವಿನಯಂ ಯೋ ನ ಶಿಕ್ಷತೇ ।**
**ನ ಚ ಕಿಂಚನ ಜಾನಾತಿ ಸೋಽಪಿ ಧರ್ಮಾರ್ಥನಿಶ್ಚಯಮ್ ॥೨॥**

ಅದೇ ರೀತಿಯಲ್ಲಿ ಎಲ್ಲ ವಿಷಯಗಳನ್ನೂ ಗ್ರಹಿಸುವ ಶಕ್ತಿಯುಳ್ಳ

ಮೇಧಾವಿಯೇ ಆಗಿದ್ದರೂ ವಿನಯಶೀಲತೆಯನ್ನು ಕಲಿತಿರದಿದ್ದರೆ ಅಂತಹವನೂ ಧರ್ಮಾರ್ಥಗಳ ನಿರ್ಣಯವನ್ನು ಸ್ವಲ್ಪವಾದರೂ ತಿಳಿದುಕೊಳ್ಳಲು ಸಮರ್ಥನಾಗುವುದಿಲ್ಲ.

**ಚಿರಂ ಹ್ಯಪಿ ಜಡಃ ಶೂರಃ ಪಣ್ಡಿತಂ ಪರ್ಯುಪಾಸ್ಯ ಹಿ ।**
**ನ ಸ ಧರ್ಮಾನ್ವಿಜಾನಾತಿ ದರ್ವೀ ಸೂಪರಸಾನಿವ ॥೩॥**

ಯಾವನ ಬುದ್ಧಿಯು ಜಡವಾಗಿರುವುದೋ ಅವನು ಶೂರನೇ ಆಗಿದ್ದರೂ, ಚಿರಕಾಲ ವಿದ್ವಾಂಸರ ಸೇವೆಯನ್ನು ಮಾಡಿದ್ದರೂ–ಸವುಟು ತೊವ್ವೆಯಲ್ಲಿಯೇ ಮುಳುಗಿದ್ದರೂ ಅದರ ರುಚಿಯನ್ನು ತಿಳಿದುಕೊಳ್ಳದಿರುವಂತೆ–ಧರ್ಮಾರ್ಥಗಳ ನಿರ್ಣಯವನ್ನು ತಿಳಿದುಕೊಳ್ಳಲಾರನು.

**ಮುಹೂರ್ತಮಪಿ ತಂ ಪ್ರಾಜ್ಞಃ ಪಣ್ಡಿತಂ ಪರ್ಯುಪಾಸ್ಯ ಹಿ ।**
**ಕ್ಷಿಪ್ರಂ ಧರ್ಮಾನ್ವಿಜಾನಾತಿ ಜಿಹ್ವಾ ಸೂಪರಸಾನಿವ ॥೪॥**

ಬುದ್ಧಿವಂತನಾದವನು ಮುಹೂರ್ತಕಾಲ ಮಾತ್ರ (ಸ್ವಲ್ಪವೇ ದಿನಗಳು) ವಿದ್ವಾಂಸರ ಸೇವೆಮಾಡಿದರೂ–ನಾಲಿಗೆಯು ತೊವ್ವೆಯ ರುಚಿಯನ್ನು ಬಹಳ ಬೇಗ ಗ್ರಹಿಸುವಂತೆ–ಧರ್ಮಾರ್ಥಗಳ ನಿರ್ಣಯವನ್ನು ಬಹಳ ಬೇಗ ಗ್ರಹಿಸುತ್ತಾನೆ.

**ಶುಶ್ರೂಷುಸ್ತ್ವೇವ ಮೇಧಾವೀ ಪುರುಷೋ ನಿಯತೇನ್ದ್ರಿಯಃ ।**
**ಜಾನೀಯಾದಾಗಮಾನ್ಸರ್ವಾನ್ಗ್ರಾಹ್ಯಂ ಚ ನ ವಿರೋಧಯೇತ್ ॥೫॥**

ಮೇಧಾವಿಯಾಗಿರತಕ್ಕವನು, ಜಿತೇಂದ್ರಿಯನಾಗಿರತಕ್ಕವನು, ವಿದ್ವಾಂಸರ ಸೇವೆಯಲ್ಲಿಯೂ ಮತ್ತು ಅವರು ಮಾಡುವ ಉಪದೇಶಗಳನ್ನು ಕೇಳುವುದರಲ್ಲಿಯೂ ಇಚ್ಛೆಯಿರುವವನು–ಎಲ್ಲ ಶಾಸ್ತ್ರಗಳನ್ನೂ ತಿಳಿದುಕೊಳ್ಳುತ್ತಾನೆ ಮತ್ತು ಗ್ರಹಣೆಗೆ ಯೋಗ್ಯವಾದುದನ್ನು ವಿರೋಧಿಸಲೂ ಹೋಗುವುದಿಲ್ಲ.

**ಅನೇಯಸ್ತ್ವವಮಾನೀ ಯೋ ದುರಾತ್ಮಾ ಪಾಪಪೂರುಷಃ ।**
**ದಿಷ್ಟಮುತ್ಸೃಜ್ಯ ಕಲ್ಯಾಣಂ ಕರೋತಿ ಬಹುಪಾಪಕಮ್ ॥೬॥**

ಸನ್ಮಾರ್ಗದಲ್ಲಿ ಹೋಗಲು ಯಾವನು ಅಸಮರ್ಥನೋ, ಯಾವನನ್ನು ಸನ್ಮಾರ್ಗಕ್ಕೆ ತರಲು ಅಸಾಧ್ಯವೋ, ಯಾವನು ಇತರರನ್ನು ಅವಮಾನ

ಗೊಳಿಸುವುದರಲ್ಲಿಯೇ ನಿರತನಾಗಿರುತ್ತಾನೆಯೋ–ಅಂತಹ ದುಷ್ಟವಾದ ಮನಸ್ಸುಳ್ಳ ಪಾಪಿಷ್ಠನಾದ ಮನುಷ್ಯನು ಸದುಪದೇಶವನ್ನೂ ಮತ್ತು ಮಂಗಳಕರವಾದ ಮಾರ್ಗವನ್ನೂ ತಿರಸ್ಕರಿಸಿ ಬಹುಪಾಪಸಂಘಟಕವಾದ ಕಾರ್ಯವನ್ನೇ ಮಾಡುತ್ತಾನೆ.

**ನಾಥವನ್ತಂ ತು ಸುಹೃದಃ ಪ್ರತಿಷೇಧನ್ತಿ ಪಾತಕಾತ್ ।**
**ನಿವರ್ತತೇ ತು ಲಕ್ಷ್ಮೀವಾನ್ನಾಲಕ್ಷ್ಮೀವಾನ್ನಿವರ್ತತೇ ॥೭॥**

ನಾಥವಂತನನ್ನು (ಯಾರಿಗೆ ಹೇಳುವವರು-ಕೇಳುವವರು ಇರುತ್ತಾರೆಯೋ ಅಂತಹವನನ್ನು) ಸುಹೃದರು ಪಾಪಕರ್ಮದಿಂದ (ಪಾಪಕರ್ಮಗಳನ್ನು ಮಾಡದಂತೆ) ತಡೆಯುತ್ತಾರೆ. ಸೌಭಾಗ್ಯಶಾಲಿಯಾದವನು ಸುಹೃದರ ಮಾತನ್ನು ಕೇಳಿ ಪಾಪಕರ್ಮದಿಂದ ದೂರ ಸರಿಯುತ್ತಾನೆ. ದೌರ್ಭಾಗ್ಯನಾದವನು ಸುಹೃದರು ಹೇಳಿದುದನ್ನು ತಿರಸ್ಕರಿಸಿ ಪಾಪಕರ್ಮದಿಂದ ಹಿಂದಿರುಗುವುದಿಲ್ಲ.

**ಯಥಾ ಹ್ಯುಚ್ಚಾವಚೈರ್ವಾಕ್ಯೈಃ ಕ್ಷಿಪ್ತಚಿತ್ತೋ ನಿಯಮ್ಯತೇ ।**
**ತಥೈವ ಸುಹೃದಾ ಶಕ್ಯೋ ನ ಶಕ್ಯಸ್ತ್ವವಸೀದತಿ ॥೮॥**

ಅಶಾಂತವಾದ ಮನಸ್ಸಿನಿಂದ ಕೂಡಿರುವವನನ್ನು ಅವನ ಸ್ನೇಹಿತರು ನಾನಾವಿಧವಾದ ಹಿತವಾಕ್ಯಗಳಿಂದ ನಿಯಂತ್ರಿಸುತ್ತಾರೆ. ಹೀಗೆ ಸುಹೃದರ ಮಾತಿನಂತೆ ಅವರ ನಿಯಂತ್ರಣಕ್ಕೆ ಒಳಪಡುವವನು (ಅವರು ಹೇಳಿದಂತೆ ಕೇಳುವವನು) ಸುಖಿಯಾಗುತ್ತಾನೆ. ಸುಹೃದರು ಹೇಳಿದ ಮಾತನ್ನು ಕೇಳದೇ ಚಂಚಲಚಿತ್ತನಾಗಿ ಮನಬಂದಂತೆ ವರ್ತಿಸುವವನು ಹಾಳಾಗುತ್ತಾನೆ.

**ತಥೈವ ಸುಹೃದಂ ಪ್ರಾಜ್ಞಂ ಕುರ್ವಾಣಂ ಕರ್ಮ ಪಾಪಕಮ್ ।**
**ಪ್ರಾಜ್ಞಾಃ ಸಮ್ಪ್ರತಿಷೇಧನ್ತಿ ಯಥಾಶಕ್ತಿ ಪುನಃ ಪುನಃ ॥೯॥**

ವಿದ್ವಾಂಸರಾದವರು ಪಾಪಕರ್ಮದಲ್ಲಿ ಪ್ರವೃತ್ತನಾಗಲಿರುವ ಪ್ರಾಜ್ಞನಾದ ತಮ್ಮ ಸ್ನೇಹಿತನನ್ನು ಸಾಧ್ಯವಾದಮಟ್ಟಿಗೂ ಪುನಃ-ಪುನಃ ಹಿತವಾಕ್ಯಗಳನ್ನು ಹೇಳಿ ಪಾಪಕರ್ಮದಿಂದ ವಿಮುಖನನ್ನಾಗಿ ಮಾಡಲು ಪ್ರಯತ್ನಿಸುತ್ತಾರೆ. (ದ್ರೋಣಪುತ್ರ! ಅದೇ ರೀತಿಯಲ್ಲಿ ನಾನಾದರೂ ನಿನ್ನನ್ನು ಈ ಪಾಪಕರ್ಮದಿಂದ ತಡೆಯಲು ಬಹಳವಾಗಿ ಪ್ರಯತ್ನಿಸುತ್ತಿದ್ದೇನೆ.)

ಸ ಕಲ್ಯಾಣೇ ಮನಃ ಕೃತ್ವಾ ನಿಯಮ್ಯಾತ್ಮಾನಮಾತ್ಮನಾ ।
ಕುರು ಮೇ ವಚನಂ ತಾತ ಯೇನ ಪಶ್ಚಾನ್ನ ತಪ್ಯಸೇ ॥೧೦॥

ಮಗು, ಅಶ್ವತ್ಥಾಮ! ನನ್ನ ಮಾತಿನಂತೆ ನಡೆದುಕೋ. ಎತ್ತೆತ್ತಲೋ ಹರಿದು ಹೋಗುತ್ತಿರುವ ನಿನ್ನ ಮನಸ್ಸನ್ನು ನಿಯಂತ್ರಿಸಿ ಅದೇ ಮನಸ್ಸನ್ನು ಶುಭಕಾರ್ಯದಲ್ಲಿ ಸ್ಥಿರಗೊಳಿಸು. ಹೀಗೆ ಮಾಡುವುದರಿಂದ ನೀನು ಮುಂದೆ ಪಶ್ಚಾತ್ತಾಪಪಡಬೇಕಾಗುವುದಿಲ್ಲ.

ನ ವಧಃ ಪೂಜ್ಯತೇ ಲೋಕೇ ಸುಪ್ತಾನಾಮಿಹ ಧರ್ಮತಃ ।
ತಥೈವಾಪಾಸ್ತಶಸ್ತ್ರಾಣಾಂ ವಿಮುಕ್ತರಥವಾಜಿನಾಮ್ ॥೧೧॥

ಯೇ ಚ ಬ್ರೂಯುಸ್ತವಾಸ್ಮೀತಿ ಯೇ ಚ ಸ್ಯುಃ ಶರಣಾಗತಾಃ ।
ವಿಮುಕ್ತಮೂರ್ಧಜಾ ಯೇ ಚ ಯೇ ಚಾಪಿ ಹತವಾಹನಾಃ ॥೧೨॥

ಯಾರು ಮಲಗಿರುವರೋ, ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟಿರುವರೋ, ರಥಗಳಿಂದ ಕುದುರೆಗಳನ್ನು ಬಿಚ್ಚಿರುವರೋ, 'ನಾನು ನಿನ್ನವನು'–ಎಂದು ಹೇಳುವರೋ, ಶರಣಾಗತರೋ, ಬಿಚ್ಚಿದ ಕೂದಲುಗಳಿಂದ ಕೂಡಿರುವರೋ, ವಾಹನಗಳನ್ನು ಕಳೆದುಕೊಂಡಿರುವರೋ–ಅಂತಹವರ ವಧೆಯು ಧರ್ಮದ ದೃಷ್ಟಿಯಿಂದ ಪ್ರಶಂಸೆಗೆ ಪಾತ್ರವಾಗುವುದಿಲ್ಲ.

ಅದ್ಯ ಸ್ವಪ್ಸ್ಯಂತಿ ಪಾಞ್ಚಾಲಾ ವಿಮುಕ್ತಕವಚಾ ವಿಭೋ ।
ವಿಶ್ವಸ್ತಾ ರಜನೀಂ ಸರ್ವೇ ಪ್ರೇತಾ ಇವ ವಿಚೇತಸಃ ॥೧೩॥

ಯಸ್ತೇಷಾಂ ತದವಸ್ಥಾನಾಂ ದ್ರುಹ್ಯೇತ ಪುರುಷೋಽನೃಜುಃ ।
ವ್ಯಕ್ತಂ ಸ ನರಕೇ ಮಜ್ಜೇದಗಾಧೇ ವಿಪುಲೇಽಪ್ಲವೇ ॥೧೪॥

ಈ ರಾತ್ರಿಯಲ್ಲಿ ಎಲ್ಲ ಪಾಂಚಾಲರೂ ತಮ್ಮ-ತಮ್ಮ ಕವಚಗಳನ್ನು ಬಿಚ್ಚಿ ನಿಶ್ಚಿಂತರಾಗಿ ಪ್ರೇತಗಳೋಪಾದಿಯಲ್ಲಿ ಎಚ್ಚರದಪ್ಪಿ ಮಲಗಿರುತ್ತಾರೆ. ಅಂತಹ ಅವಸ್ಥೆಯಲ್ಲಿರುವ ಪಾಂಚಾಲಯೋಧರ ವಿಷಯದಲ್ಲಿ ಯಾವ ಕ್ರೂರಿಯಾದ ಮನುಷ್ಯನು ದ್ರೋಹವೆಸಗುತ್ತಾನೆಯೋ–ಅವನು ಅಗಾಧವಾದ ಮತ್ತು ವಿಶಾಲವಾದ, ದಾಟಲು ಸಾಧ್ಯವಾಗುವ ನೌಕೆಯೇ ಇಲ್ಲದ (ತಪ್ಪಿಸಿಕೊಳ್ಳಲಾಗದ) ಮಹಾನರಕದಲ್ಲಿ ಬೀಳುತ್ತಾನೆಂಬುದು ಸ್ಪಷ್ಟವಾಗಿಯೇ ಇದೆ.

ದ್ರೋಣಪುತ್ರ! ನೀನು ಪ್ರಪಂಚದಲ್ಲಿರುವ ಎಲ್ಲ ಅಸ್ತ್ರವಿದರಲ್ಲೂ ಶ್ರೇಷ್ಠನಾದವನೆಂಬ ಖ್ಯಾತಿಯನ್ನು ಪಡೆದಿರುವೆ. ಈ ವಿಶ್ವದಲ್ಲಿ ಇದುವರೆಗೂ ನಿನ್ನ ವಿಷಯದಲ್ಲಿ ಅತ್ಯಲ್ಪವಾದ ದೋಷವಾದರೂ ಕಂಡುಬರುವುದಿಲ್ಲ. (ಈ ವಿಷಯದಲ್ಲಿಯೂ ನೀನು ದೋಷಕ್ಕೆ ಭಾಗಿಯಾಗುವುದು ಸರಿಯಲ್ಲ.) ನಾಳೆಯ ಬೆಳಿಗ್ಗೆ ಸೂರ್ಯೋದಯವಾಗುತ್ತಲೇ ಸೂರ್ಯಸದೃಶನಾದ ನೀನು ಎಲ್ಲ ಪ್ರಾಣಿಗಳ ಸಮಕ್ಷದಲ್ಲಿಯೇ ಪುನಃ ಶತ್ರುಗಳೊಡನೆ ಯುದ್ಧಮಾಡಿ ಅವರನ್ನು ಜಯಿಸು.

**ಅಸಮ್ಭಾವಿತರೂಪಂ ಹಿ ತ್ವಯಿ ಕರ್ಮ ವಿಗರ್ಹಿತಮ್ ।**
**ಶುಕ್ಲೇ ರಕ್ತಮಿವ ನ್ಯಸ್ತಂ ಭವೇದಿತಿ ಮತಿರ್ಮಮ ॥೧೭॥**

ಬಿಳಿಯ ಬಟ್ಟೆಯ ಮೇಲೆ ಕೆಂಪುಕಲೆಯಂತೆ–ನಿನ್ನಲ್ಲಿ ನಿಂದಿತವಾದ ಕರ್ಮವಿರುವುದು ಅಸಂಭಾವಿತವಾದ (ಊಹಿಸಲೂ ಅಶಕ್ಯವಾದ) ವಿಷಯವೆಂಬುದು ನನ್ನ ಭಾವನೆಯಾಗಿದೆ. (ಇದರಿಂದ ನಿನ್ನ ಕೀರ್ತಿಗೆ ಕಳಂಕವುಂಟಾಗುತ್ತದೆ.)"

ಅಶ್ವತ್ಥಾಮನು ಹೇಳುತ್ತಾನೆ :

"ಮಾತುಲ! ಧರ್ಮದ ಸಂಬಂಧವಾಗಿ ನೀನು ಯಾವ ಮಾತುಗಳನ್ನಾಡಿದೆಯೋ ಆ ಮಾತುಗಳೆಲ್ಲವೂ ಯಥಾರ್ಥವಾದುವೇ ಆಗಿವೆ. ಅದರಲ್ಲಿ ಸಂದೇಹವೇ ಇಲ್ಲ. ಆದರೆ ಈ ಮೊದಲೇ ಪಾಂಡವರು ಧರ್ಮದ ಮರ್ಯಾದೆಯನ್ನು ನೂರಾರು ಚೂರುಗಳಾಗಿ ಒಡೆದುಹಾಕಿದ್ದಾರೆ. ನಿಮ್ಮ ಮತ್ತು ಭೂಪಾಲರ ಪ್ರತ್ಯಕ್ಷದಲ್ಲಿಯೇ ಶಸ್ತ್ರನ್ಯಾಸಮಾಡಿದ ನನ್ನ ತಂದೆಯನ್ನು ಧೃಷ್ಟದ್ಯುಮ್ನನು ಸಂಹರಿಸಿದನು. ರಥಿಗಳಲ್ಲಿ ಶ್ರೇಷ್ಠನಾದ ಕರ್ಣನು ತನ್ನ ರಥದ ಚಕ್ರವು ಭೂಮಿಯಲ್ಲಿ ಹುದುಗಿಕೊಳ್ಳಲಾಗಿ ಮಹಾವ್ಯಸನದಲ್ಲಿ ಮಗ್ನನಾಗಿದ್ದನು. ಆ ಸಮಯದಲ್ಲಿಯೇ ಅವನು ಗಾಂಡೀವಿಯಿಂದ ಹತನಾದನು. ಅದೇ ರೀತಿಯಲ್ಲಿ ಭೀಷ್ಮನೂ ಸಹ ಶಸ್ತ್ರನ್ಯಾಸಮಾಡಿ ನಿರಾಯುಧನಾಗಿದ್ದನು. ಆ ಸಮಯದಲ್ಲಿ ಶಿಖಂಡಿಯನ್ನು ಮುಂದೆಮಾಡಿಕೊಂಡು ಅರ್ಜುನನು ಪಿತಾಮಹನನ್ನು ಸಂಹರಿಸಿದನು. ಮಹಾಧನುಷ್ಮಂತನಾದ ಭೂರಿಶ್ರವಸನು ರಣರಂಗದಲ್ಲಿ ಪ್ರಾಯೋಪವೇಶವ್ರತಸ್ಥನಾಗಿ ದರ್ಭಾಸನದಲ್ಲಿ ಕುಳಿತಿದ್ದನು. ಆ ಸಮಯದಲ್ಲಿ ಎಲ್ಲ ರಾಜರೂ 'ಅಸಾಧು!'

ಎಂದು ಕೂಗಿಕೊಳ್ಳುತ್ತಿದ್ದಾಗ ಸಾತ್ಯಕಿಯು ಪ್ರಾಯೋಪವೇಶಸ್ಥನಾಗಿದ್ದ ಭೂರಿಶ್ರವಸನನ್ನು ಹಿಂದು-ಮುಂದು ನೋಡದೇ ಕತ್ತರಿಸಿದನು. ಭೀಮಸೇನನೂ ಸಹ ರಣಭೂಮಿಯಲ್ಲಿ ದುರ್ಯೋಧನನೊಡನೆ ಗದಾ ಯುದ್ಧದಲ್ಲಿ ತೊಡಗಿದ್ದಾಗ ಎಲ್ಲ ರಾಜರೂ ನೋಡುತ್ತಿದ್ದಂತೆಯೇ ಅಧರ್ಮಮಾರ್ಗದಿಂದ ದುರ್ಯೋಧನನನ್ನು ಸಂಹರಿಸಿದನು. ಆ ಸಮಯದಲ್ಲಿ ದುರ್ಯೋಧನನು ಏಕಾಕಿಯಾಗಿದ್ದನು. ಶತ್ರುಪಕ್ಷದ ಅನೇಕ ಮಹಾರಥರು ಅವನನ್ನು ಸುತ್ತುವರಿದು ನಿಂತಿದ್ದರು. ಅಂತಹ ಸಮಯದಲ್ಲಿ ಭೀಮಸೇನನೂ ನರವ್ಯಾಘ್ರನಾದ ದುರ್ಯೋಧನನನ್ನು ಅಧರ್ಮಮಾರ್ಗದಿಂದ ಕೆಳಕ್ಕೆ ಬೀಳಿಸಿದನು. ಮಾತುಲ! ನಾನು ಹಿಂದೆಯೇ ಹೇಳಿದಂತೆ ನಾನು ಇದೇ ಕಿವಿಗಳಿಂದ ಕೇಳಿದ, ಭಗ್ನೋರುವಾಗಿದ್ದ ದುರ್ಯೋಧನನ ವಿಲಾಪವೂ– ಸಂದೇಶವಾಹಕರು ಹೇಳಿದ ಮಾತುಗಳೂ ನನ್ನ ಮರ್ಮಸ್ಥಳಗಳನ್ನು ಕತ್ತರಿಸುತ್ತಿವೆ.

**ಪಿತೃಹನ್ತೄನಹಂ ಹತ್ವಾ ಪಞ್ಚಾಲಾನ್ನಿಶಿ ಸೌಪ್ತಿಕೇ ।**
**ಕಾಮಂ ಕೀಟಃ ಪತಙ್ಗೋ ವಾ ಜನ್ಮ ಪ್ರಾಪ್ಯ ಭವಾಮಿ ವೈ ॥೨೭॥**

ಪಿತೃಹಂತಕರಾದ ಪಾಂಚಾಲರನ್ನು ಈ ರಾತ್ರಿ ಅವರು ಮಲಗಿರುವ ವೇಳೆಯಲ್ಲಿಯೇ ಸಂಹರಿಸಿ, ಅದರ ದುಷ್ಫಲವಾಗಿ ಹುಳುವಾಗಿಯೋ ಚಿಟ್ಟೆಯಾಗಿಯೋ ಜನ್ಮತಾಳುತ್ತೇನೆ. ಇದು ನನಗೆ ಗ್ರಾಹ್ಯವೇ ಆಗಿದೆ. ನಾನು ಉದ್ದೇಶಿಸಿರುವ ಈ ಕಾರ್ಯವನ್ನು ಮಾಡುವುದಕ್ಕಾಗಿ ಅವಸರಪಡುತ್ತಿದ್ದೇನೆ. ಇಷ್ಟು ಅವಸರದಲ್ಲಿರುವ ನನಗೆ ನಿದ್ರೆಯು ಹೇಗೆ ಬಂದೀತು? ಸುಖವಾದರೂ ಹೇಗೆ ಉಂಟಾದೀತು?

**ನ ಸ ಜಾತಃ ಪುಮಾಂಲ್ಲೋಕೇ ಕಶ್ಚಿನ್ನ ಸ ಭವಿಷ್ಯತಿ ।**
**ಯೋ ಮೇ ವ್ಯಾವರ್ತಯೇದೇತಾಂ ವಧೇ ತೇಷಾಂ ಕೃತಾಂ ಮತಿಮ್ ॥೨೮॥**

ಆ ಪಾಂಚಾಲಾಪಸದರನ್ನು ಸಂಹರಿಸಬೇಕೆಂದು ದೃಢನಿಶ್ಚಯದಿಂದ ಕೂಡಿರುವ ನನ್ನ ಬುದ್ಧಿಯನ್ನು ಪರಿವರ್ತಿಸುವ ಸಾಮರ್ಥ್ಯವಿರತಕ್ಕವನು ಈ ಲೋಕದಲ್ಲಿ ಇದುವರೆಗೂ ಹುಟ್ಟಿಯೂ ಇಲ್ಲ; ಮುಂದೆ ಹುಟ್ಟುವುದೂ ಇಲ್ಲ.”

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಪ್ರತಾಪವಂತನಾದ ದ್ರೋಣಪುತ್ರನು ಕೃಪ-ಕೃತವರ್ಮರಿಗೆ ಹೀಗೆ ಹೇಳಿದ ಬಳಿಕ ಏಕಾಂತದಲ್ಲಿ ರಥಕ್ಕೆ ಕುದುರೆಗಳನ್ನು ಹೂಡಿ ಶತ್ರುಗಳು ಮಲಗಿದ್ದ ಶಿಬಿರದ ಕಡೆಗೆ ಹೊರಟನು. ಮಹಾತ್ಮರಾದ ಭೋಜ-ಶಾರದ್ವತರಿಬ್ಬರೂ ಹೊರಡಲನುವಾಗಿದ್ದ ಅಶ್ವತ್ಥಾಮನನ್ನು ಸಂಧಿಸಿ – **'ಕಿಮರ್ಥಂ ಸ್ಯನ್ದನೋ ಯುಕ್ತಃ ಕಿಞ್ಚ ಕಾರ್ಯಂ ಚಿಕೀರ್ಷಿತಮ್'** – 'ಏಕೆ ರಥವನ್ನು ಸಜ್ಜುಗೊಳಿಸಿದೆ? ಯಾವ ಕಾರ್ಯವನ್ನು ಮಾಡಬೇಕೆಂಬ ಇಚ್ಛೆಯು ನಿನಗುಂಟಾಗಿದೆ?'–ಎಂದು ಪ್ರಶ್ನಿಸಿದರು.

"ಮಾನವಶ್ರೇಷ್ಠನೇ! ನಾವಿಬ್ಬರೂ ನಿನಗೆ ಸಹಾಯಮಾಡುವ ಸಲುವಾಗಿಯೇ ನಿನ್ನ ಜೊತೆಯಲ್ಲಿ ಬಂದಿದ್ದೇವೆ. ನಿನ್ನ ಸುಖ-ದುಃಖಗಳೆರಡರಲ್ಲಿಯೂ ನಾವು ಸಮಭಾಗಿಗಳಾಗಿದ್ದೇವೆ. ನಮ್ಮನ್ನು ನೀನು ಸಂದೇಹಿಸುವ ಕಾರಣವಿಲ್ಲ"–ಎಂದೂ ಅವರು ಹೇಳಿದರು.

ತಂದೆಯ ವಧಪ್ರಸಂಗವನ್ನು ಸ್ಮರಿಸಿಕೊಂಡ ಅಶ್ವತ್ಥಾಮನು ಪರಮಕ್ರುದ್ಧನಾಗಿ ತಾನೇನು ಮಾಡಲು ಹೊರಟಿರುವನೆಂಬ ವಿಷಯವನ್ನು ಯಥಾವತ್ತಾಗಿಯೇ ಅವರೊಡನೆ ಹೇಳಿದನು :

**ಹತ್ವಾ ಶತಸಹಸ್ರಾಣಿ ಯೋಧಾನಾಂ ನಿಶಿತೈಃ ಶರೈಃ ।**
**ನ್ಯಸ್ತಶಸ್ತ್ರೋ ಮಮ ಪಿತಾ ಧೃಷ್ಟದ್ಯುಮ್ನೇನ ಪಾತಿತಃ ॥೩೪॥**

"ನನ್ನ ತಂದೆಯವರು ನಿಶಿತವಾದ ಬಾಣಗಳಿಂದ ಲಕ್ಷೋಪಲಕ್ಷ ಸೈನಿಕರನ್ನು ಸಂಹರಿಸಿ ಶಸ್ತ್ರಸಂನ್ಯಾಸಮಾಡಿದ್ದ ಸಮಯದಲ್ಲಿ ಧೃಷ್ಟದ್ಯುಮ್ನನಿಂದ ಹತರಾದರು.

**ತಂ ತಥೈವ ಹನಿಷ್ಯಾಮಿ ನ್ಯಸ್ತಧರ್ಮಾಣಮದ್ಯ ವೈ ।**
**ಪುತ್ರಂ ಪಾಞ್ಚಾಲರಾಜಸ್ಯ ಪಾಪಂ ಪಾಪೇನ ಕರ್ಮಣಾ ॥೩೫॥**

ಧರ್ಮವನ್ನು ಪರಿತ್ಯಜಿಸಿ ನಮ್ಮ ತಂದೆಯನ್ನು ಕೊಂದ ಪಾಪಿಷ್ಠನಾದ ಆ ಪಾಂಚಾಲರಾಜಪುತ್ರನನ್ನು–ಅವನು ಶಸ್ತ್ರಾಸ್ತ್ರಗಳೆಲ್ಲವನ್ನೂ ತೆಗೆದಿಟ್ಟಿರುವ ಸಮಯದಲ್ಲಿಯೇ-ಧರ್ಮಬಾಹಿರವಾದ ರೀತಿಯಲ್ಲಿಯೇ ಸಂಹರಿಸುತ್ತೇನೆ.

**ಕಥಂ ಚ ನಿಹತಃ ಪಾಪಃ ಪಾಞ್ಚಾಲ್ಯಃ ಪಶುವನ್ಮಯಾ ।**
**ಶಸ್ತ್ರೇಣ ವಿಜಿತಾಲ್ಲೋಕಾನ್ನಾಪ್ನುಯಾದಿತಿ ಮೇ ಮತಿಃ ॥೩೬॥**

ಪಶುವಿನಂತೆ ನನ್ನ ಕೈಯಿಂದ ಹತನಾಗುವ ಪಾಪಿಷ್ಠನಾದ ಧೃಷ್ಟದ್ಯುಮ್ನನು–ಶಸ್ತ್ರಾಘಾತದಿಂದ ಮರಣಹೊಂದುವವರಿಗೆ ಲಭ್ಯವಾಗುವ ಪುಣ್ಯಲೋಕಗಳನ್ನು ಯಾವ ರೀತಿಯಲ್ಲಿಯೂ ಪಡೆಯಕೂಡದೆಂಬುದೇ ನನ್ನ ಅಭಿಮತವಾಗಿದೆ.

ಆದುದರಿಂದ ರಥಶ್ರೇಷ್ಠರಾದ, ಶತ್ರುತಾಪಿಗಳಾದ ನೀವೂ ಸಹ ಕ್ಷಿಪ್ರವಾಗಿ ಕವಚಗಳನ್ನು ಧರಿಸಿ, ಕತ್ತಿಗಳನ್ನೂ ಮತ್ತು ಶ್ರೇಷ್ಠವಾದ ಧನುಸ್ಸುಗಳನ್ನೂ ಹಿಡಿದು, ರಥದಲ್ಲಿ ಕುಳಿತು ನನ್ನನ್ನು ಪ್ರತೀಕ್ಷಿಸಿರಿ. (ನಾನು ಶಿಬಿರದಲ್ಲಿ ಮಾಡುವ ಕಾರ್ಯವನ್ನು ಕಾದು ನೋಡುತ್ತಿರಿ.)"

ಮಹಾರಾಜ! ಅಶ್ವತ್ಥಾಮನು ಹೀಗೆ ಹೇಳಿ ರಥದಲ್ಲಿ ಕುಳಿತು ಶತ್ರುಗಳಿಗೆ ಅಭಿಮುಖವಾಗಿ ಹೊರಟನು. ಹಾಗೆ ಹೊರಟ ಅಶ್ವತ್ಥಾಮನನ್ನು ಅನುಸರಿಸಿ ಕೃಪರೂ ಸಾತ್ವತವಂಶೀಯನಾದ ಕೃತವರ್ಮನೂ ಹೊರಟರು. ಶತ್ರುಗಳಿಗೆ ಅಭಿಮುಖವಾಗಿ ಹೋಗುತ್ತಿದ್ದ ಆ ಮೂವರೂ–ಯಜ್ಞದಲ್ಲಿ ಆಹುತಿಯನ್ನು ಪಡೆದು ಪ್ರಜ್ವಲಿಸುವ ತ್ರೇತಾಗ್ನಿಗಳಂತೆಯೇ–ಪ್ರಕಾಶಿಸುತ್ತಿದ್ದರು. ಪಾಂಡು-ಪಾಂಚಾಲಯೋಧರೆಲ್ಲರೂ ಸುಖವಾಗಿ ಮಲಗಿ ನಿದ್ರಿಸುತ್ತಿದ್ದ ಶಿಬಿರದ ಸಮೀಪಕ್ಕೆ ಮೂವರೂ ತೆರಳಿದರು. ಮಹಾರಥನಾದ ದ್ರೌಣಿಯು ಶಿಬಿರದ ಹೆಬ್ಬಾಗಿಲಿನ ಬಳಿಗೆ ಹೋಗಿ ನಿಂತುಕೊಂಡನು."

೫ನೆಯ ಅಧ್ಯಾಯವು ಮುಗಿಯಿತು.

೬ನೆಯ ಅಧ್ಯಾಯ ಸೌಪ್ತಿಕಪರ್ವ (ಮುಂದುವರಿದಿದೆ.)

## ಅಶ್ವತ್ಥಾಮನು ಶಿಬಿರದ ಹೆಬ್ಬಾಗಿಲಿನಲ್ಲಿ ಅದ್ಭುತಾಕಾರನಾದ ಪುರುಷನನ್ನು ಕಂಡು ಅವನ ಮೇಲೆ ಅಸ್ತ್ರಗಳನ್ನು ಪ್ರಯೋಗಿಸಿದುದು : ಅಸ್ತ್ರಗಳೆಲ್ಲಾ ಮುಗಿದುಹೋಗಲಾಗಿ ವ್ಯಾಕುಲಗೊಂಡು ಶಿವನನ್ನು ಶರಣುಹೊಂದಿದುದು

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ಶಿಬಿರದ ಮಹಾದ್ವಾರದ ಬಳಿಯಲ್ಲಿ ನಿಂತಿದ್ದ ಅಶ್ವ

ತ್ಥಾಮನನ್ನು ನೋಡಿ ಕೃಪ-ಕೃತವರ್ಮರೇನು ಮಾಡಿದರೆಂಬುದನ್ನು ನನ್ನೊಡನೆ ಹೇಳು."

"ಮಹಾರಾಜ! ಮಹಾರಥನಾದ, ಕ್ರೋಧಾಭಿಭೂತನಾಗಿದ್ದ ಅಶ್ವತ್ಥಾಮನು–ಕೃತವರ್ಮನಿಗೂ ಕೃಪರಿಗೂ ಹೋಗಿಬರುತ್ತೇನೆಂದು ಹೇಳಿ ಪಾಂಡು-ಪಾಂಚಾಲಯೋಧರು ಮಲಗಿದ್ದ ಶಿಬಿರದ ಬಾಗಿಲ ಬಳಿಗೆ ಬಂದನು.

**ತತ್ರ ಭೂತಂ ಮಹಾಕಾಯಂ ಚನ್ದ್ರಾರ್ಕಸದೃಶದ್ಯುತಿಮ್ ।**
**ಸೋಽಪಶ್ಯದ್ದ್ವಾರಮಾಶ್ರಿತ್ಯ ತಿಷ್ಠನ್ತಂ ಲೋಮಹರ್ಷಣಮ್ ॥೩॥**

**ವಸಾನಂ ಚರ್ಮ ವೈಯಾಘ್ರಂ ಮಹಾರುಧಿರವಿಸ್ರವಮ್ ।**
**ಕೃಷ್ಣಾಜಿನೋತ್ತರಾಸಙ್ಗಂ ನಾಗಯಜ್ಞೋಪವೀತಿನಮ್ ॥೪॥**

**ಬಾಹುಭಿಃ ಸ್ವಾಯತೈಃ ಪೀನೈರ್ನಾನಾಪ್ರಹರಣೋದ್ಯತೈಃ ।**
**ಬದ್ಧಾಙ್ಗದಮಹಾಸರ್ಪಂ ಜ್ವಾಲಾಮಾಲಾಕುಲಾನನಮ್ ॥೫॥**

**ದಂಷ್ಟ್ರಾಕರಾಲವದನಂ ವ್ಯಾದಿತಾಸ್ಯಂ ಭಯಾನಕಮ್ ।**
**ನಯನಾನಾಂ ಸಹಸ್ರೈಶ್ಚ ವಿಚಿತ್ರೈರಭಿಭೂಷಿತಮ್ ॥೬॥**

ಶಿಬಿರದ ಬಾಗಿಲಿನ ಬಳಿಯಲ್ಲಿ ಅಶ್ವತ್ಥಾಮನು ಒಂದು ಮಹಾಭೂತವನ್ನು (ಅದ್ಭುತಪುರುಷನನ್ನು) ನೋಡಿದನು. ಆ ಮಹಾಪುರುಷನಿಗೆ ದೊಡ್ಡದಾದ ಶರೀರವಿದ್ದಿತು. ಅವನು ಸೂರ್ಯ-ಚಂದ್ರರ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದನು. ರೋಮಾಂಚಕರನಾಗಿದ್ದನು. ಅತ್ಯಧಿಕವಾಗಿ ರಕ್ತವನ್ನು ಸುರಿಸುತ್ತಿದ್ದ ವ್ಯಾಘ್ರಾಜಿನವನ್ನು ಆ ಮಹಾಪುರುಷನು ಉಟ್ಟುಕೊಂಡಿದ್ದನು. ಕೃಷ್ಣಾಜಿನವನ್ನು ಉತ್ತರೀಯವನ್ನಾಗಿ ಹೊದ್ದುಕೊಂಡಿದ್ದನು. ಸರ್ಪವನ್ನೇ ಯಜ್ಞೋಪವೀತವನ್ನಾಗಿ ಧರಿಸಿಕೊಂಡಿದ್ದನು. ಅವನಿಗೆ ಉದ್ದವಾದ ಮತ್ತು ದಪ್ಪವಾದ ಬಾಹುಗಳಿದ್ದುವು. ಕೈಗಳಲ್ಲಿ ನಾನಾವಿಧವಾದ ಆಯುಧಗಳನ್ನು ಧರಿಸಿದ್ದನು. ಶತ್ರುಗಳನ್ನು ಪ್ರಹರಿಸಲು ಅವನು ಆಯುಧಗಳನ್ನು ಮೇಲಕ್ಕೆತ್ತಿರುವನೋ ಎಂಬಂತೆ ಭಾಸವಾಗುತ್ತಿದ್ದಿತು. ಅಂಗದಾಭರಣಗಳ ಸ್ಥಾನದಲ್ಲಿ ಎರಡು ತೋಳುಗಳಿಗೂ ಸರ್ಪಗಳನ್ನೇ ಸುತ್ತಿಕೊಂಡಿದ್ದನು. ಅವನ ಮುಖವು ಜ್ವಾಲೆಗಳ ಸಾಲುಗಳಿಂದ

ಅಲಂಕೃತವಾಗಿದ್ದಿತು. ಮುಖವು ಕೋರೆದಾಡೆಗಳಿಂದ ಕೂಡಿದ್ದಿತು. ಆ ಮಹಾಪುರುಷನು ಬಾಯನ್ನು ಅಗಲವಾಗಿ ತೆರೆದಿದ್ದನು. ಅತ್ಯಂತ ಭಯಂಕರಾಕಾರನಾಗಿದ್ದನು. ವಿಚಿತ್ರವಾದ ಸಾವಿರಾರು ಕಣ್ಣುಗಳಿಂದ ಸಮಲಂಕೃತನಾಗಿದ್ದನು. ಅಂತಹ ಅದ್ಭುತಪುರುಷನನ್ನು ಅಶ್ವತ್ಥಾಮನು ಶಿಬಿರದ ಮಹಾದ್ವಾರದಲ್ಲಿ ಕಂಡನು.



ಆ ಮಹಾಪುರುಷನ ಶರೀರವನ್ನೂ ವೇಷವನ್ನೂ ವರ್ಣಿಸಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ. ಒಂದು ವೇಳೆ ಮಹಾಕಾಯಗಳೆನಿಸಿದ ಪರ್ವತಗಳೇ ಆ ಮಹಾಭೂತವನ್ನು ನೋಡಿದ್ದರೂ ಅವುಗಳೂ ಭಯದಿಂದ ಸೀಳಿಹೋಗುತ್ತಿದ್ದುವು. ಆ ಮಹಾಪುರುಷನ ಬಾಯಿಯಿಂದಲೂ,

ಮೂಗಿನ ಹೊಳ್ಳೆಗಳಿಂದಲೂ, ಕಿವಿಗಳಿಂದಲೂ ಮತ್ತು ಸಾವಿರಾರು ಕಣ್ಣುಗಳಿಂದಲೂ ಮಹಾಜ್ವಾಲೆಗಳು ಹೊರಬರುತ್ತಿದ್ದುವು.

**ತಥಾ ತೇಜೋಮರೀಚಿಭ್ಯಃ ಶಙ್ಖಚಕ್ರಗದಾಧರಾಃ ।**
**ಪ್ರಾದುರಾಸನ್ಹೃಷೀಕೇಶಾಃ ಶತಶೋಽಥ ಸಹಸ್ರಶಃ ॥೯॥**

ಆ ಮಹಾಪುರುಷನ ತೇಜಸ್ಸಿನ ಕಿರಣಗಳಿಂದ ಶಂಖ-ಚಕ್ರ-ಗದೆಗಳನ್ನು ಧರಿಸಿದ್ದ ನೂರಾರು-ಸಾವಿರಾರು ವಿಷ್ಣುಗಳು (ವೈಷ್ಣವಗಣಗಳು) ಪ್ರಕಟವಾಗುತ್ತಿದ್ದರು. ಲೋಕಕ್ಕೇ ಭಯವನ್ನುಂಟುಮಾಡುವ ಪರಮಾದ್ಭುತ ವಾದ ಭೂತವನ್ನು ನೋಡಿಯೂ ಅಶ್ವತ್ಥಾಮನು ವ್ಯಥೆಗೊಳ್ಳದೇ ದಿವ್ಯಾಸ್ತ್ರಗಳಿಂದ ಆ ಮಹಾಭೂತವನ್ನು ಮುಚ್ಚತೊಡಗಿದನು.

ಸಮುದ್ರದಲ್ಲಿರುವ ಬಡಬಾಗ್ನಿಯು ಜಲರಾಶಿಗಳನ್ನೇ ಕುಡಿಯು ವಂತೆ–ಅಶ್ವತ್ಥಾಮನು ಬಿಟ್ಟ ಎಲ್ಲ ಅಸ್ತ್ರಸಮೂಹಗಳನ್ನೂ ಆ ಮಹಾಭೂತವು ನುಂಗಿಬಿಟ್ಟಿತು. ಅಶ್ವತ್ಥಾಮನು ಯಾವ ಯಾವ ಶಸ್ತ್ರಾಸ್ತ್ರಗಳನ್ನು ಬಿಡುತ್ತಿ ದ್ದನೋ–ಅವುಗಳೆಲ್ಲವನ್ನೂ ಆ ಮಹಾಭೂತವು ಕ್ಷಣಮಾತ್ರದಲ್ಲಿ ನುಂಗಿ ಹಾಕುತ್ತಿದ್ದಿತು. ತಾನು ಪ್ರಯೋಗಿಸಿದ ಬಾಣಗಳ ಸಮೂಹಗಳೆಲ್ಲವೂ ನಿರರ್ಥಕವಾದುದನ್ನು ಕಂಡು ಅಶ್ವತ್ಥಾಮನು–ಪ್ರದೀಪ್ತವಾದ ಅಗ್ನಿಯ ಜ್ವಾಲೆಯೋಪಾದಿಯಲ್ಲಿದ್ದ ರಥಶಕ್ತಿಯನ್ನು ಆ ಮಹಾಪುರುಷನ ಮೇಲೆ ಪ್ರಯೋಗಿಸಿದನು. ಪ್ರಳಯಕಾಲದಲ್ಲಿ ದೊಡ್ಡ ಉಲ್ಕೆಯು ಸೂರ್ಯನನ್ನು ಅಪ್ಪಳಿಸಿ ನುಚ್ಚುನೂರಾಗಿ ಆಕಾಶದಿಂದ ಕೆಳಕ್ಕೆ ಬೀಳುವಂತೆ–ದೀಪ್ತವಾದ ಅಗ್ರಭಾಗದಿಂದ ಕೂಡಿದ್ದ ದ್ರೌಣಿಪ್ರಮುಕ್ತವಾದ ರಥಶಕ್ತಿಯು ಆ ಮಹಾ ಪುರುಷನಿಗೆ ಬಡಿದು ಸೀಳಿಹೋಗಿ ಕೆಳಕ್ಕೆ ಬಿದ್ದಿತು. ರಥಶಕ್ತಿಯೂ ನಷ್ಟವಾಗಿ ಹೋದನಂತರ ಅಶ್ವತ್ಥಾಮನು ಸುವರ್ಣಮಯವಾದ ಹಿಡಿಯಿಂದ ಕೂಡಿದ್ದ, ಆಕಾಶದಂತೆ ನಿರ್ಮಲವಾದ ಕಾಂತಿಯಿಂದ ಕೂಡಿದ್ದ, ದಿವ್ಯವಾದ ಕತ್ತಿ ಯನ್ನು–ಬಿಲದಿಂದ ಹೊಳೆಯುತ್ತಿರುವ ಹಾವನ್ನು ಹೊರತೆಗೆಯುವಂತೆ– ಒರೆ ಯಿಂದ ಹೊರತೆಗೆದನು. ಅನಂತರ ಧೀಮಂತನಾದ ಅಶ್ವತ್ಥಾಮನು ಶ್ರೇಷ್ಠವಾದ ಆ ಖಡ್ಗವನ್ನು ಮಹಾಪುರುಷನ ಮೇಲೆ ರಭಸದಿಂದ ಎಸೆದನು. ಆ ಖಡ್ಗವು ಮಹಾಪುರುಷನ ಬಳಿಗೆ ಹೋಗಿ–ಮುಂಗುಸಿಯು ಬಿಲವನ್ನು ಸೇರುವಂತೆ–ಆ

ಮಹಾಪುರುಷನ ಶರೀರದಲ್ಲಿ ವಿಲೀನವಾಯಿತು. ಅದನ್ನು ನೋಡಿ ಪರಮ ಕ್ರುದ್ಧನಾದ ಅಶ್ವತ್ಥಾಮನು ಇಂದ್ರನ ಧ್ವಜದಂತಿದ್ದ ಜಾಜ್ವಲ್ಯಮಾನವಾಗಿದ್ದ ಗದೆಯನ್ನು ವೇಗದಿಂದ ತಿರುಗಿಸಿ ರಭಸದಿಂದ ಆ ಮಹಾಪುರುಷನ ಕಡೆಗೆ ಎಸೆದನು. ಮಹಾಪುರುಷನು ಆ ಮಹಾಗದೆಯನ್ನೂ ನುಂಗಿಬಿಟ್ಟನು. ಎಲ್ಲ ಆಯುಧಗಳೂ ಮುಗಿದುಹೋಗಲಾಗಿ ಅಶ್ವತ್ಥಾಮನು ದಿಕ್ಕುಗಾಣದೇ ಅತ್ತಲಿತ್ತ ನೋಡುತ್ತಿದ್ದಾಗ ಅಸಂಖ್ಯಾತರಾದ ಜನಾರ್ದನರಿಂದ (ವೈಷ್ಣವ ಗಣಗಳಿಂದ) ಆಕಾಶವೇ ತುಂಬಿಹೋಗಿರುವುದನ್ನು ನೋಡಿದನು. ಆಯುಧ ಗಳಿಂದ ರಹಿತನಾಗಿದ್ದ ದ್ರೋಣಪುತ್ರನು ಪರಮಾದ್ಭುತವಾದ ಆ ದೃಶ್ಯವನ್ನು ನೋಡಿ ಪರಿತಪಿಸುತ್ತಾ, ಕೃಪರು ಹೇಳಿದ್ದ ಮಾತುಗಳನ್ನು ಸ್ಮರಿಸಿಕೊಂಡು ತನ್ನಲ್ಲಿಯೇ ಹೀಗೆ ಹೇಳಿಕೊಂಡನು :

**ಬ್ರುವತಾಮಪ್ರಿಯಂ ಪಥ್ಯಂ ಸುಹೃದಾಂ ನ ಶೃಣೋತಿ ಯಃ ।**
**ಸ ಶೋಚತ್ಯಾಪದಂ ಪ್ರಾಪ್ಯ ಯಥಾಹಮತಿವರ್ತ್ಯ ತೌ ॥೧೯॥**

"ಅಪ್ರಿಯವಾದರೂ ಹಿತಕರವಾದ ಮಾತುಗಳನ್ನು ಹೇಳುವ ಸ್ನೇಹಿತರ ಸಲಹೆಗಳನ್ನು ಯಾವನು ಕೇಳುವುದಿಲ್ಲವೋ–ಅವನು ಸುಹೃದರು ಹೇಳಿದ ಮಾತನ್ನು ಉಲ್ಲಂಘಿಸಿ ನಾನೀಗ ಆ ಇಬ್ಬರ ಮಾತನ್ನೂ ಮೀರಿ ಕಷ್ಟದಲ್ಲಿ ಸಿಕ್ಕಿಹಾಕಿಕೊಂಡಿರುವಂತೆ–ಕಷ್ಟದಲ್ಲಿ ಸಿಲುಕಿಕೊಂಡು ದುಃಖಿಸುತ್ತಾನೆ.

**ಶಾಸ್ತ್ರದೃಷ್ಟಾನವಿದ್ವಾನ್ಯಃ ಸಮತೀತ್ಯ ಜಿಘಾಂಸತಿ ।**
**ಸ ಪಥಃ ಪ್ರಚ್ಯುತೋ ಧರ್ಮಾತ್ಕುಪಥೇ ಪ್ರತಿಹನ್ಯತೇ ॥೨೦॥**

ಯಾವ ಮೂಢನು ಶಾಸ್ತ್ರದರ್ಶಿಗಳಾದ ಪುರುಷರ ಮಾತನ್ನು ಮೀರಿ ಅವಧ್ಯರನ್ನು ಸಂಹರಿಸಲು ಇಚ್ಛಿಪಡುತ್ತಾನೆಯೋ–ಅವನು ಧರ್ಮಮಾರ್ಗ ದಿಂದ ಭ್ರಷ್ಟನಾಗಿ ಕುತ್ಸಿತವಾದ ಮಾರ್ಗವನ್ನೇ ಅವಲಂಬಿಸಿ ನಾಶ ಹೊಂದುತ್ತಾನೆ.

**ಗೋಬ್ರಾಹ್ಮಣನೃಪಸ್ತ್ರೀಷು ಸಖ್ಯುರ್ಮಾತುರ್ಗುರೋಸ್ತಥಾ ।**
**ವೃದ್ಧಬಾಲಜಡಾನ್ಧೇಷು ಸುಪ್ತಭೀತೋತ್ಥಿತೇಷು ಚ ।**
**ಮತ್ತೋನ್ಮತ್ತಪ್ರಮತ್ತೇಷು ನ ಶಸ್ತ್ರಾಣಿ ಚ ಪಾತಯೇತ್ ॥೨೧॥**

ಹಸು, ಬ್ರಾಹ್ಮಣ, ರಾಜ, ಹೆಂಗಸು, ಸ್ನೇಹಿತ, ತಾಯಿ, ಗುರು, ವೃದ್ಧ, ಬಾಲಕ, ಜಡನಾಗಿರತಕ್ಕವನು, ಕುರುಡ, ಮಲಗಿರುವವನು, ಹೆದರಿದವನು, ಆಗ ತಾನೇ ಹಾಸಿಗೆಯಿಂದ ಮೇಲೆದ್ದು ಕುಳಿತವನು, ಮದ್ಯವನ್ನು ಕುಡಿದು ಮತ್ತನಾಗಿರತಕ್ಕವನು, ಮಿತಿಮೀರಿ ಮದ್ಯಕುಡಿದು ಪ್ರಮತ್ತನಾಗಿರುವವನು ಮತ್ತು ಹುಚ್ಚ–ಇವರ ಮೇಲೆ ಯಾವುದೇ ಕಾರಣದಿಂದಲೂ ಶಸ್ತ್ರಗಳನ್ನು ಪ್ರಯೋಗಿಸಬಾರದು ಎಂಬುದಾಗಿ ಗುರುಜನರು ಹಿಂದಿನಿಂದಲೂ ಮಾನವರಿಗೆ ಉಪದೇಶಮಾಡಿಕೊಂಡೇ ಬಂದಿರುತ್ತಾರೆ. ನಾನಾದರೋ ಶಾಸ್ತ್ರೋಕ್ತವಾದ ಈ ಸನಾತನಧರ್ಮಮಾರ್ಗವನ್ನು ಉಲ್ಲಂಘಿಸಿ ಕುತ್ಸಿತಮಾರ್ಗವನ್ನು ಹಿಡಿದು ಮಾಡಬಾರದ ಕೆಲಸವನ್ನು ಮಾಡಲು ಪ್ರಾರಂಭಿಸಿ ಇಂತಹ ಘೋರವಾದ ಆಪತ್ತಿಗೆ ಒಳಗಾಗಿದ್ದೇನೆ.

**ತಾಂ ಚಾಪದಂ ಘೋರತರಾಂ ಪ್ರವದನ್ತಿ ಮನೀಷಿಣಃ ।**
**ಯದುದ್ಯಮ್ಯ ಮಹತ್ಕೃತ್ಯಂ ಭಯಾದಪಿ ನಿವರ್ತತೇ ।**
**ಅಶಕ್ತಶ್ಚೈವ ತತ್ಕರ್ತುಂ ಕರ್ಮ ಶಕ್ತಿಬಲಾದಿಹ ॥೨೫॥**

ಧರ್ಮಕಾರ್ಯವೇ ಆಗಲೀ, ಅಧರ್ಮಕಾರ್ಯವೇ ಆಗಲೀ–ಯಾವುದಾದರೂ ಮಹಾಕಾರ್ಯವನ್ನು ಆರಂಭಿಸಿ ಭಯದಿಂದ ಹಿಮ್ಮೆಟ್ಟುವುದು ಮತ್ತು ಆ ಕಾರ್ಯವನ್ನು ಮಾಡಲು ಶಕ್ತಿ ಮತ್ತು ಬಲಗಳಿಲ್ಲದೇ ಅಶಕ್ತನಾಗಿ ಹಿಂಜರಿಯುವುದು–ಈ ಎರಡೂ ಮನುಷ್ಯನಿಗೆ ಒದಗಿಬರುವ ಅತಿ ಘೋರವಾದ ಆಪತ್ತುಗಳೆಂದು ವಿದ್ವಾಂಸರಾದವರು ಹೇಳುತ್ತಾರೆ.

**ನ ಹಿ ದೈವಾದ್ಗರೀಯೋ ವೈ ಮಾನುಷಂ ಕರ್ಮ ಕಥ್ಯತೇ ।**
**ಮಾನುಷ್ಯಂ ಕುರುತಃ ಕರ್ಮ ಯದಿ ದೈವಾನ್ನ ಸಿಧ್ಯತಿ ।**
**ಸ ಪಥಃ ಪ್ರಚ್ಯುತೋ ಧರ್ಮಾದ್ವಿಪದಂ ಪ್ರತಿಪದ್ಯತೇ ॥೨೬॥**

ಮನುಷ್ಯನ ಪ್ರಯತ್ನವು ದೈವದ ಸಂಕಲ್ಪಕ್ಕಿಂತಲೂ ಹೆಚ್ಚಿನದಲ್ಲವೆಂದು ವಿದ್ವಾಂಸರು ಹೇಳುತ್ತಾರೆ. ಮನುಷ್ಯಸಂಬಂಧವಾದ ಕಾರ್ಯವು ದೈವಾನುಗ್ರಹವಿಲ್ಲದೇ ಸಿದ್ಧಿಸದಿದ್ದರೆ ಮನುಷ್ಯನು ಹೊರಟಿರುವ ಆ ಮಾರ್ಗವು ಧರ್ಮಬಾಹಿರವೆಂದೂ ಹೇಳಬಹುದಾಗಿದೆ. ಆ ದುರ್ಮಾರ್ಗಾನುಸರಣೆಯಿಂದ ಕಾರ್ಯವು ಸಿದ್ಧಿಸದಿರುವುದು ಮಾತ್ರವಲ್ಲದೇ ಮನುಷ್ಯನು ಆಪತ್ತಿನಲ್ಲಿಯೂ ಸಿಕ್ಕಿಹಾಕಿಕೊಳ್ಳುತ್ತಾನೆ.

**ಪ್ರತಿಜ್ಞಾನಂ ಹ್ಯವಿಜ್ಞಾನಂ ಪ್ರವದನ್ತಿ ಮನೀಷಿಣಃ ।**
**ಯದಾರಭ್ಯ ಕ್ರಿಯಾಂ ಕಾಞ್ಚಿದ್ಭಯಾದಿಹ ನಿವರ್ತತೇ ॥೨೭॥**

ಯಾವುದಾದರೂ ಕಾರ್ಯವನ್ನು ಆರಂಭಿಸಿದ ಬಳಿಕ ಭಯದ ಕಾರಣದಿಂದ – ಪ್ರಾರಂಭಿಸಿದ ಆ ಕಾರ್ಯದಿಂದ ಹಿಮ್ಮೆಟ್ಟಿದ್ದೇ ಆದರೆ–ಆ ಕಾರ್ಯಕ್ಕಾಗಿ ಮಾಡಿದ ಪ್ರತಿಜ್ಞೆಯು ಅಜ್ಞಾನದಿಂದ ಅಥವಾ ಮೂರ್ಖತೆಯಿಂದ ಮಾಡಿದುದೆಂದು ವಿದ್ವಾಂಸರು ಹೇಳುತ್ತಾರೆ.

ಈ ಸಮಯದಲ್ಲಿ ನಾನು ಮಾಡಲು ಹೊರಟಿರುವ ದುಷ್ಕರ್ಮದಿಂದಲೇ ಭಯವು ನನ್ನನ್ನು ಆವರಿಸಿದೆ. ಆಚಾರ್ಯದ್ರೋಣರ ಪುತ್ರನಾದ ಅಶ್ವತ್ಥಾಮನು ಯಾವುದೇ ಕಾರಣದಿಂದಲೂ ಯುದ್ಧದಿಂದ ಹಿಂದಿರುಗತಕ್ಕವನಲ್ಲ. ಆದರೆ ಈ ಮಹಾಭೂತವು ದೈವದಂಡದೋಪಾದಿಯಲ್ಲಿ ಎದ್ದು ನಿಂತಿದೆ. ನಾನು ಎಷ್ಟೇ ಯೋಚಿಸಿದರೂ ಈ ಮಹಾಭೂತವು ಯಾವುದೆಂಬುದೇ ನನಗೆ ತಿಳಿಯುತ್ತಿಲ್ಲ. ನನ್ನ ಬುದ್ಧಿಯು ಅಧರ್ಮಮಾರ್ಗದಲ್ಲಿ ಪ್ರವರ್ತಿಸಿ ಕಲುಷಿತವಾಗಿರುವುದರಿಂದಲೇ ಈ ಘೋರವಾದ ಫಲವುಂಟಾಗಿದೆಯೆಂಬುದು ನಿಶ್ಚಯ. ಅಧರ್ಮದಿಂದ ಕಲುಷಿತವಾಗಿರುವ ನನ್ನ ಬುದ್ಧಿಗೆ ಪ್ರತಿಘಾತವನ್ನುಂಟುಮಾಡುವ ಸಲುವಾಗಿಯೇ ಈ ಭೂತವು ಕಲ್ಪಿತವಾಗಿದೆ. ನಾನು ಯುದ್ಧದಿಂದ ಹಿಂದಿರುಗಬೇಕೆಂಬುದೇ ವಿಧಿವಿಹಿತವಾಗಿರಬಹುದು. ದೈವಾನುಕೂಲವಿಲ್ಲದೇ ಬೇರೆ ಯಾವುದೇ ವಿಧಾನದಿಂದಲೂ ನಾನು ಯುದ್ಧಸಂಬಂಧವಾದ ಪ್ರಯತ್ನವನ್ನು ಮುಂದುವರಿಸಲು ಸಾಧ್ಯವಾಗುವುದಿಲ್ಲ. ಆದುದರಿಂದ ನಾನೀಗಲೇ ವಿಭುವಾದ ಮಹಾದೇವನನ್ನು ಶರಣುಹೊಂದುತ್ತೇನೆ. ಆ ನನ್ನ ಸ್ವಾಮಿಯೇ ದೈವದಂಡದಂತಿರುವ ಈ ಮಹಾಭೂತವನ್ನು ವಿನಾಶಗೊಳಿಸುತ್ತಾನೆ.

**ಕಪರ್ದಿನಂ ದೇವದೇವಮುಮಾಪತಿಮನಾಮಯಮ್ ।**
**ಕಪಾಲಮಾಲಿನಂ ರುದ್ರಂ ಭಗನೇತ್ರಹರಂ ಹರಮ್ ॥೩೩॥**

**ಸ ಹಿ ದೇವೋಽತ್ಯಗಾದ್ದೇವಾಂಸ್ತಪಸಾ ವಿಕ್ರಮೇಣ ಚ ।**
**ತಸ್ಮಾಚ್ಛರಣಮಭ್ಯೇಮಿ ಗಿರಿಶಂ ಶೂಲಪಾಣಿನಮ್ ॥೩೪॥**

ಭಗವಾನ್ ಶಂಕರನು ತಪಸ್ಸಿನಿಂದಲೂ ಮತ್ತು ಪರಾಕ್ರಮದಿಂದಲೂ

ಎಲ್ಲ ದೇವತೆಗಳನ್ನೂ ಅತಿಶಯಿಸಿದ್ದಾನೆ. ಆದುದರಿಂದ ಜಟಾ ಸಮೂಹದಿಂದ ಕೂಡಿರುವ ಕಪರ್ದಿಯನ್ನು, ದೇವದೇವನನ್ನು, ಉಮಾ ಪತಿಯನ್ನು, ರೋಗರಹಿತನಾಗಿರುವವನನ್ನು, ಕಪಾಲಗಳನ್ನೇ ಮಾಲೆಗಳ ರೂಪದಲ್ಲಿ ಧರಿಸಿರುವ ಕಪಾಲಮಾಲಿಯನ್ನು, ರುದ್ರನನ್ನು, ದಕ್ಷಯಜ್ಞದಲ್ಲಿ ಭಾಗವಹಿಸಿ ದ್ವಾದಶಾದಿತ್ಯರಲ್ಲೊಬ್ಬನಾದ ಭಗನ ಕಣ್ಣುಗಳನ್ನು ಅಪಹರಿಸಿದ ಭಗನೇತ್ರಾಪಹಾರಕನನ್ನು, ಪಾಪಗಳನ್ನು ಹೋಗಲಾಡಿಸುವ ಹರನನ್ನು, ಪರ್ವತಶಾಯಿಯಾದ ಗಿರೀಶನನ್ನು, ಶೂಲವನ್ನು ಕೈಯಲ್ಲಿ ಹಿಡಿದಿರುವ ಶೂಲಪಾಣಿಯನ್ನು ಶರಣು ಹೊಂದುತ್ತೇನೆ."

೬ನೆಯ ಅಧ್ಯಾಯವು ಮುಗಿಯಿತು.

೭ನೆಯ ಅಧ್ಯಾಯ ಸೌಪ್ತಿಕಪರ್ವ (ಮುಂದುವರಿದಿದೆ.)

## ಅಶ್ವತ್ಥಾಮನು ಶಿವನನ್ನು ಸ್ತೋತ್ರಮಾಡಿದುದು : ಅಶ್ವತ್ಥಾಮನ ಮುಂದೆ ಅಗ್ನಿವೇದೀ ಮತ್ತು ಭೂತಗಣಗಳು ಕಾಣಿಸಿಕೊಂಡುದು : ಅಶ್ವತ್ಥಾಮನು ಆ ಅಗ್ನಿವೇದಿಯಲ್ಲಿ ಆತ್ಮಸಮರ್ಪಣಮಾಡಿ ಸುಪ್ರೀತನಾದ ಈಶ್ವರನಿಂದ ಖಡ್ಗವನ್ನು ಪಡೆದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ದ್ರೋಣಪುತ್ರನು ಹೀಗೆ ಶ್ರೀಶಂಕರನನ್ನು ಪ್ರಸನ್ನ ಗೊಳಿಸಲು ನಿಶ್ಚಯಿಸಿ ರಥದ ಆಸನದಿಂದ ಕೆಳಗಿಳಿದು ಕೈಜೋಡಿಸಿ ನಿಂತು ಸ್ತೋತ್ರಮಾಡಲು ಉಪಕ್ರಮಿಸಿದನು.

ಉಗ್ರಂ ಸ್ಥಾಣುಂ ಶಿವಂ ರುದ್ರಂ ಶರ್ವಮೀಶಾನಮೀಶ್ವರಮ್ ।
ಗಿರಿಶಂ ವರದಂ ದೇವಂ ಭವಭಾವನಮೀಶ್ವರಮ್ ॥೨॥

ಶಿತಿಕಣ್ಠಮಜಂ ಶುಕ್ರಂ ದಕ್ಷಕ್ರತುಹರಂ ಹರಮ್ ।
ವಿಶ್ವರೂಪಂ ವಿರೂಪಾಕ್ಷಂ ಬಹುರೂಪಮುಮಾಪತಿಮ್ ॥೩॥

ಸ್ಮಶಾನವಾಸಿನಂ ದೃಪ್ತಂ ಮಹಾಗಣಪತಿಂ ವಿಭುಮ್ ।
ಖಟ್ವಾಙ್ಗಧಾರಿಣಂ ರುದ್ರಂ ಜಟಿಲಂ ಬ್ರಹ್ಮಚಾರಿಣಮ್ ॥೪॥

**ಮನಸಾ ಸುವಿಶುದ್ಧೇನ ದುಷ್ಕರೇಣಾಲ್ಪಚೇತಸಾ ।**
**ಸೋಽಹಮಾತ್ಮೋಪಹಾರೇಣ ಯಕ್ಷ್ಯೇ ತ್ರಿಪುರಘಾತಿನಮ್ ॥೫॥**

ಅಪರಾಧಕ್ಕೆ ತಕ್ಕುದಾದ ಶಿಕ್ಷೆಯನ್ನು ವಿಧಿಸುವ ಉಗ್ರನನ್ನು, ಅಚಲನಾದ ಸ್ಥಾಣುವನ್ನು, ಮಂಗಳಕರನಾದ ಶಿವನನ್ನು, ಬ್ರಹ್ಮನ ಭ್ರೂಮಧ್ಯದಿಂದ ಜನಿಸಿ ಹುಟ್ಟುತ್ತಲೇ ಅಳುತ್ತಿದ್ದ ರುದ್ರನನ್ನು ಅಥವಾ ದ್ರೋಹಿಗಳನ್ನು ಅಳುವಂತೆ ಮಾಡುವವನನ್ನು, ಶರ್ವನನ್ನು, ಅಷ್ಟದಿಕ್ಪಾಲಕರಲ್ಲೊಬ್ಬನಾದ ಈಶಾನಮೂರ್ತಿಯನ್ನು, ಈಶ್ವರನನ್ನು, ಗಿರಿಶಾಯಿಯನ್ನು, ವರದನನ್ನು ದೇವದೇವನನ್ನು, ಸಂಪೂರ್ಣಜಗತ್ತಿನ ಉತ್ಪತ್ತಿಗೆ ಕಾರಣನಾದ ಭವಭಾವನನನ್ನು, ಪರಮೇಶ್ವರನನ್ನು, ಕಪ್ಪಾದ ಕಂಠದಿಂದ ಕೂಡಿರುವ ಶಿತಿಕಂಠನನ್ನು, ಜನ್ಮರಹಿತನಾದ ಅಜನನ್ನು, ಶುದ್ಧಾತ್ಮನಾದ ಶುಕ್ರನನ್ನು, ದಕ್ಷನ ಯಜ್ಞವನ್ನು ಧ್ವಂಸಮಾಡಿದ ದಕ್ಷಕ್ರತುಹರನನ್ನು, ಸರ್ವಪಾಪಗಳನ್ನೂ ಹೋಗಲಾಡಿಸುವ ಹರನನ್ನು, ವಿಶ್ವವೇ ಸ್ವರೂಪವಾಗಿರುವ ವಿಶ್ವರೂಪನನ್ನು, ಭಯಂಕರವಾದ ಕಣ್ಣುಗಳನ್ನು ಹೊಂದಿರುವ ವಿರೂಪಾಕ್ಷನನ್ನು, ಅನೇಕ ರೂಪಗಳನ್ನು ಧರಿಸಿರುವ ಬಹುರೂಪನನ್ನು, ಉಮಾದೇವಿಯ ಪ್ರಾಣಪ್ರಿಯ ನಾದ ಉಮಾಪತಿಯನ್ನು, ಪಿತೃಭೂಮಿಯಲ್ಲಿಯೇ ವಾಸಮಾಡುವ ಶ್ಮಶಾನವಾಸಿಯನ್ನು, ಶಕ್ತಿ-ಸಾಮರ್ಥ್ಯಗಳಿಂದ ದೃಪ್ತನಾಗಿರುವವನನ್ನು, ಮಹಾಗಣಗಳಿಗೆ ಒಡೆಯನಾದ ಮಹಾಗಣಪತಿಯನ್ನು, ಸರ್ವವ್ಯಾಪಿಯಾದ ವಿಭುವನ್ನು, ತ್ರಿಶೂಲವನ್ನು ಹಿಡಿದಿರುವ ಖಟ್ವಾಂಗಪಾಣಿಯನ್ನು, ಭಯಂಕರ ಸ್ವರೂಪನಾದ ರುದ್ರನನ್ನು, ಜಟೆಯನ್ನು ಧರಿಸಿರುವ ಜಟಿಲನನ್ನು, ಸರ್ವದಾ ಧ್ಯಾನಯೋಗದಲ್ಲಿಯೇ ಇರುವ ಬ್ರಹ್ಮಚಾರಿಯನ್ನು, ಅಸುರರ ಮೂರು ಪಟ್ಟಣಗಳನ್ನೂ ವಿನಾಶಗೊಳಿಸಿದ ತ್ರಿಪುರಘಾತಿಯನ್ನು–ಪರಿಶುದ್ಧವಾದ ಮನಸ್ಸಿನಿಂದ ಕೂಡಿದವನಾಗಿ ದುರ್ಬಲವಾದ ಮನಸ್ಸುಳ್ಳವರಿಂದ ಮಾಡಲು ದುಷ್ಕರವಾದ ಆತ್ಮೋಪಹಾರರೂಪವಾದ (ತನ್ನನ್ನೇ ಬಲಿಯನ್ನಾಗಿ ಕೊಟ್ಟುಕೊಳ್ಳುವ) ವಿಧಾನದಿಂದ ಪೂಜೆಮಾಡುತ್ತೇನೆ.

**ಸ್ತುತಂ ಸ್ತುತ್ಯಂ ಸ್ತೂಯಮಾನಮಮೋಘಂ ಕೃತ್ತಿವಾಸಸಮ್ ।**
**ವಿಲೋಹಿತಂ ನೀಲಕಣ್ಠಮಸಹ್ಯಂ ದುರ್ನಿವಾರಣಮ್ ॥೬॥**

ಶುಕ್ರಂ ಬ್ರಹ್ಮಸೃಜಂ ಬ್ರಹ್ಮ ಬ್ರಹ್ಮಚಾರಿಣಮೇವ ಚ ।
ವ್ರತವನ್ತಂ ತಪೋನಿಷ್ಠಮನನ್ತಂ ತಪತಾಂ ಗತಿಮ್ ॥೭॥

ಬಹುರೂಪಂ ಗಣಾಧ್ಯಕ್ಷಂ ತ್ರ್ಯಕ್ಷಂ ಪಾರಿಷದಪ್ರಿಯಮ್ ।
ಧನಾಧ್ಯಕ್ಷೇಕ್ಷಿತಮುಖಂ ಗೌರೀಹೃದಯವಲ್ಲಭಮ್ ॥೮॥

ಕುಮಾರಪಿತರಂ ಪಿಙ್ಗಂ ಗೋವೃಷೋತ್ತಮವಾಹನಮ್ ।
ತನುವಾಸಸಮತ್ಯುಗ್ರಮುಮಾಭೂಷಣತತ್ಪರಮ್ ॥೯॥

ಪರಂ ಪರೇಭ್ಯಃ ಪರಮಂ ಪರಂ ಯಸ್ಮಾನ್ನ ವಿದ್ಯತೇ ।
ಇಷ್ವಸ್ತ್ರೋತ್ತಮಭರ್ತಾರಂ ದಿಗನ್ತಂ ದೇಶರಕ್ಷಿಣಮ್ ॥೧೦॥

ಹಿರಣ್ಯಕವಚಂ ದೇವಂ ಚನ್ದ್ರಮೌಲಿವಿಭೂಷಣಮ್ ।
ಪ್ರಪದ್ಯೇ ಶರಣಂ ದೇವಂ ಪರಮೇಣ ಸಮಾಧಿನಾ ॥೧೧॥

ಮಹಾದೇವ! ನೀನು ಸ್ತುತನೂ, ಸ್ತುತ್ಯನೂ ಮತ್ತು ಸ್ತೂಯಮಾನನೂ ಆಗಿರುವೆ. (ಹಿಂದೆ ಋಷಿ-ಮುನಿಗಳು ನಿನ್ನನ್ನು ಸ್ತೋತ್ರ ಮಾಡುತ್ತಿದ್ದರು. ಮುಂದೆಯೂ ಮಾಡುತ್ತಾರೆ. ಈಗಲೂ ಅಹರ್ನಿಶಿ ಮಾಡುತ್ತಲೇ ಇದ್ದಾರೆ.) ನೀನು ಅಮೋಘನು. (ನಿನ್ನಲ್ಲಿ ಮಾಡಿದ ಪ್ರಾರ್ಥನೆಯು ಎಂದಿಗೂ ವ್ಯರ್ಥವಾಗುವುದೇ ಇಲ್ಲ ಅಥವಾ ನಿನ್ನ ಸಂಕಲ್ಪಗಳೊಂದೂ ವ್ಯರ್ಥವಾಗುವುದಿಲ್ಲ.) ನೀನು ಕೃತ್ತಿವಾಸನು. (ಚರ್ಮವನ್ನೇ ಬಟ್ಟೆಯನ್ನಾಗಿ ಧರಿಸಿರುವವನು.) ನೀನು ವಿಲೋಹಿತನು. (ಅತಿಕೆಂಪಾದ ದೇಹಕಾಂತಿಯುಳ್ಳವನು). ನೀಲಕಂಠನು. (ಕಪ್ಪಾದ ಕುತ್ತಿಗೆಯಿಂದ ಕೂಡಿರುವವನು.) ಅಸಹ್ಯನು. (ನಿನ್ನ ವೇಗವನ್ನು ಸಹಿಸಲು ಯಾರಿಂದಲೂ ಸಾಧ್ಯವಾಗುವುದಿಲ್ಲ.) ದುರ್ನಿವಾರಣನು. (ಮೇಲೆ ಬೀಳಲು ಬರುವ ನಿನ್ನನ್ನು ದೂರಸರಿಸಲು ಯಾರಿಂದಲೂ ಸಾಧ್ಯವಾಗುವುದಿಲ್ಲ.) ನೀನು ಶುಕ್ರಸ್ವರೂಪನು. ಬ್ರಹ್ಮನನ್ನು ಹುಟ್ಟಿಸಿದವನೂ ಮತ್ತು ಬ್ರಹ್ಮನೂ ಸಹ ನೀನೇ ಆಗಿರುವೆ. ನೀನು ಬ್ರಹ್ಮಚಾರಿಯು. ವ್ರತನಿಷ್ಠನು. ತಪೋನಿಷ್ಠನು. ಅಂತರಹಿತನು. ತಪಸ್ವಿಗಳೆಲ್ಲರಿಗೂ ಶರಣ್ಯನು. ಬಹುರೂಪಧರನು. ಪ್ರಮಥಗಣಗಳಿಗೆ ಅಧ್ಯಕ್ಷನಾಗಿರತಕ್ಕವನು. ಮುಕ್ಕಣ್ಣನು. ಪಾರಿಷದರೆಲ್ಲರಿಗೂ ಬಹಳ ಪ್ರಿಯನಾಗಿರತಕ್ಕವನು. ಧನಾಧ್ಯಕ್ಷನಾದ

ಕುಬೇರನು ನಿನ್ನ ಸುಂದರವಾದ ಮುಖವನ್ನು ಸರ್ವದಾ ನೋಡುತ್ತಲೇ ಇರುತ್ತಾನೆ. ನೀನು ಗೌರೀದೇವಿಯ ಹೃದಯವಲ್ಲಭನಾಗಿರುವೆ. ನೀನು ಕುಮಾರಸ್ವಾಮಿಯ ತಂದೆಯು. ಪಿಂಗಳವರ್ಣನು. ವೃಷಭವೇ ನಿನ್ನ ಶ್ರೇಷ್ಠವಾಹನವಾಗಿದೆ. ಸೂಕ್ಷ್ಮವಾದ ವಸ್ತ್ರವನ್ನು ಧರಿಸಿರುವೆ. ಅತ್ಯುಗ್ರ ನಾಗಿರುವೆ. ಉಮಾದೇವಿಯನ್ನು ಅಲಂಕರಿಸುವುದರಲ್ಲಿಯೇ ನಿರತನಾಗಿರ ತಕ್ಕವನು. ಬ್ರಹ್ಮಾದಿದೇವತೆಗಳಿಗಿಂತಲೂ ನೀನು ಶ್ರೇಷ್ಠನಾದವನು. ಪರಾತ್ಪರನು. ನಿನಗಿಂತಲೂ ಶ್ರೇಷ್ಠರಾದವರು ಬೇರೆ ಯಾರೂ ಇರುವುದಿಲ್ಲ. ನೀನು ಶ್ರೇಷ್ಠವಾದ ಧನುಸ್ಸನ್ನು ಧರಿಸಿರುವೆ. ನೀನು ದಿಕ್ಕುಗಳೇ ಅಂತವಾಗಿ ಇರುವವನು. (ನಿನ್ನ ರೂಪವು ದಿಗಂತಗಳವರೆಗೂ ವ್ಯಾಪಿಸಿದೆ.) ಎಲ್ಲ ದೇಶಗಳನ್ನೂ ರಕ್ಷಿಸುವವನೂ ನೀನೇ ಆಗಿರುವೆ. ಸುವರ್ಣಮಯವಾದ ಕವಚವನ್ನು ಧರಿಸಿರುವೆ. ನೀನು ದಿವ್ಯಸ್ವರೂಪನು. ಚಂದ್ರನೇ ನಿನಗೆ ಶಿರೋಭೂಷಣನಾಗಿರುವನು. ಅಂತಹ ದೇವದೇವನಾದ ನಿನ್ನನ್ನು ಪರಮೈಕಾಗ್ರತೆಯಿಂದ ಶರಣುಹೊಂದುತ್ತೇನೆ.

ಅತ್ಯಂತದುಷ್ಕರವಾದ ಮತ್ತು ಭಯಂಕರವಾದ ಈ ವಿಪತ್ತಿನಿಂದ ಪಾರಾಗುವಂತಾದರೆ–ಶುಚಿಯಾದ ಸರ್ವಭೂತೋಪಹಾರದಿಂದ ಪರಮ ಪಾವನನಾದ ಪರಮೇಶ್ವರನ ಪೂಜೆಯನ್ನು ಮಾಡುತ್ತೇನೆ."

ಮಹಾರಾಜ! ಅಶ್ವತ್ಥಾಮನ ಆತ್ಮಸಮರ್ಪಣದ ದೃಢನಿಶ್ಚಯವನ್ನು ತಿಳಿದು, ಅವನು ಮಾಡಿದ ಪೂರ್ವಕರ್ಮಗಳ ಸುಯೋಗದಿಂದಾಗಿ ಅವನ ಮುಂದೆ ಸುವರ್ಣಮಯವಾದ ವೇದಿಯೊಂದು ಕಾಣಿಸಿಕೊಂಡಿತು. ಮರುಕ್ಷಣದಲ್ಲಿಯೇ ಆ ವೇದಿಯಲ್ಲಿ ಯಜ್ಞೇಶ್ವರನು ಉದಯಿಸಿದನು. ಯಜ್ಞೇಶ್ವರನು ತನ್ನ ಜ್ವಾಲೆಗಳಿಂದ ದಿಕ್ಕುಗಳನ್ನೂ, ಉಪದಿಕ್ಕುಗಳನ್ನೂ, ಆಕಾಶವನ್ನೂ ತುಂಬುತ್ತಿರುವಂತೆ ಕಾಣುತ್ತಿದ್ದನು. ಆ ಸಮಯದಲ್ಲಿ ಆನೆ ಮತ್ತು ಪರ್ವತಗಳಿಗೆ ಸದೃಶವಾದ ಭೂತಗಳು ಪ್ರಾದುರ್ಭವಿಸಿದುವು. ಅವುಗಳು ಪ್ರದೀಪ್ತವಾದ ಮುಖಗಳಿಂದಲೂ ಕಣ್ಣುಗಳಿಂದಲೂ ಕೂಡಿದ್ದುವು. ಆ ಭೂತಗಣಗಳಿಗೆ ಹಲವು ಕಾಲುಗಳೂ, ತಲೆಗಳೂ, ಭುಜಗಳೂ ಇದ್ದುವು. ರತ್ನಖಚಿತವಾದ ಮತ್ತು ವಿಚಿತ್ರವಾದ ಅಂಗದ

ಗಳನ್ನು ಅವುಗಳು ಧರಿಸಿದ್ದುವು. ಆ ಭೂತಗಣಗಳು ತಮ್ಮ ಕೈಗಳನ್ನು ಮೇಲೆತ್ತಿದ್ದುವು. ಆ ಭೂತಗಣಗಳಲ್ಲಿ ಕೆಲವು ಗಣಗಳು ನಾಯಿ, ಹಂದಿ ಮತ್ತು ಒಂಟೆಗಳ ರೂಪಗಳನ್ನು ಹೊಂದಿದ್ದುವು. ಕೆಲವು ಕುದುರೆ, ಗುಳ್ಳೆನರಿ ಮತ್ತು ಹಸುವಿನ ಮುಖಗಳನ್ನು ಹೊಂದಿದ್ದುವು. ಕೆಲವು ಭೂತಗಣಗಳು ಕರಡಿ ಮತ್ತು ಬೆಕ್ಕುಗಳ ಮುಖಗಳಿಂದ ಕೂಡಿದ್ದುವು. ಕೆಲವಕ್ಕೆ ವ್ಯಾಘ್ರ ಮತ್ತು ಚಿರತೆಯ ಮುಖಗಳಿದ್ದು, ಕೆಲವು ಗಣಗಳು ಕಾಗೆಯ ಮುಖಗಳನ್ನು ಹೊಂದಿದ್ದುವು. ಕೆಲವಕ್ಕೆ ಕಪಿಗಳ ಮುಖಗಳಿದ್ದುವು. ಗಿಣಿಯ ಮುಖದ ಹಲವಾರು ಗಣಗಳಿದ್ದುವು. ಕೆಲವು ಗಣಗಳು ಹೆಬ್ಬಾವಿನ ಮುಖಗಳನ್ನು ಹೊಂದಿದ್ದುವು. ಕೆಲವು ಗಣಗಳು ಬಿಳಿಯ ಕಾಂತಿಯಿಂದ ಕೂಡಿದ ಹಂಸಗಳ ಮುಖಗಳನ್ನು ಹೊಂದಿದ್ದುವು. ಕೆಲವು ಗಣಗಳು ಮರಕುಟುಕಹಕ್ಕಿಗಳ ಮುಖಗಳನ್ನೂ ನವಿಲಿನ ಮುಖಗಳನ್ನೂ ಹೊಂದಿದ್ದುವು. ರುದ್ರನ ಆ ಗಣಗಳಲ್ಲಿ ಆಮೆ, ಮೊಸಳೆ, ಮೊಲ, ಮಹಾಮಕರ, ತಿಮಿ, ಸಿಂಹ, ಕ್ರೌಂಚ, ಕಾಡುಪಾರಿವಾಳ, ಪಾರಿವಾಳ, ಆನೆ, ನೀರುಕಾಗೆ–ಇವೇ ಮೊದಲಾದ ಪಶು-ಪಕ್ಷಿಗಳ ಮುಖದವೂ ಇದ್ದುವು.

ರುದ್ರನ ಆ ಮಹಾಗಣಗಳಲ್ಲಿ ಕೆಲವಕ್ಕೆ ಕೈಗಳಲ್ಲಿ ಕಿವಿಗಳಿದ್ದುವು. ಕೆಲವು ಸಾವಿರ ಕಣ್ಣುಗಳನ್ನು ಹೊಂದಿದ್ದುವು. ಕೆಲವಕ್ಕೆ ದೊಡ್ಡದಾದ ಹೊಟ್ಟೆಗಳಿದ್ದುವು. ಕೆಲವು ಗಣಗಳ ಶರೀರದಲ್ಲಿ ಮಾಂಸವೇ ಇರಲಿಲ್ಲ. ಕೆಲವು ಗಣಗಳು ಕಾಗೆ ಮತ್ತು ಗಿಡಗಪಕ್ಷಿಯ ಮುಖಗಳನ್ನು ಹೊಂದಿದ್ದುವು. ಕೆಲವಕ್ಕೆ ತಲೆಯೇ ಇರಲಿಲ್ಲ. ಕೆಲವಕ್ಕೆ ಕರಡಿಯ ಮುಖಗಳಿದ್ದುವು. ಆ ಮಹಾಗಣಗಳಿಗೆ ಪ್ರದೀಪ್ತವಾದ ಕಣ್ಣು-ನಾಲಿಗೆ ಗಳಿದ್ದುವು. ಬೆಂಕಿಯ ಜ್ವಾಲೆಗಳಿಗೆ ಸಮಾನವಾದ ಕಾಂತಿಯಿಂದ ಆ ಭೂತಗಣಗಳು ಬೆಳಗುತ್ತಿದ್ದುವು. ಆ ಮಹಾಗಣಗಳ ತಲೆಗೂದಲುಗಳು ಅಗ್ನಿಯ ಜ್ವಾಲೆಗಳಿಗೆ ಸಮಾನವಾಗಿ ಕಾಣಿಸುತ್ತಿದ್ದುವು. ಅವುಗಳ ರೋಮಕೋಟಿಗಳೂ ಪ್ರಜ್ವಲಿಸುತ್ತಿರುವಂತೆ ಕಾಣುತ್ತಿದ್ದುವು. ಅವು ಗಳಲ್ಲಿ ಕೆಲವಕ್ಕೆ ನಾಲ್ಕು ಭುಜಗಳಿದ್ದುವು. ಕೆಲವು ಆಡಿನ ಮುಖ ಗಳನ್ನೂ ಮತ್ತೆ ಕೆಲವು ಮೇಕೆಯ ಮುಖಗಳನ್ನೂ ಹೊಂದಿದ್ದುವು. ಕೆಲವು ಗಣಗಳ ಮುಖ, ವರ್ಣ ಮತ್ತು ಕಾಂತಿಗಳು ಶಂಖದಂತಿದ್ದುವು. ಅವು ಶಂಖಗಳಿಂದಲೇ ಮಾಡಿದ ಮಾಲೆಗಳನ್ನು ಧರಿಸಿದ್ದುವು.

ಅವುಗಳ ಧ್ವನಿಯು ಶಂಖದ ಧ್ವನಿಗೆ ಅನುರೂಪವಾಗಿದ್ದಿತು. ಕೆಲವು ಗಣಗಳು ಜಟೆಗಳನ್ನು ಧರಿಸಿದ್ದುವು. ಕೆಲವು ಐದು ಶಿಖೆಗಳನ್ನು ಹೊಂದಿದ್ದುವು. ಕೆಲವು ಗಣಗಳ ತಲೆಗಳು ಬೋಳಾಗಿದ್ದುವು. ಕೆಲವು ಗಣಗಳಿಗೆ ತೆಳುವಾದ ಹೊಟ್ಟೆಗಳಿದ್ದುವು. ನಾಲ್ಕು ಕೋರೆದಾಡೆಗಳೂ, ನಾಲ್ಕು ನಾಲಿಗೆಗಳೂ ಕೆಲವು ಗಣಗಳಿಗಿದ್ದುವು. ಕೆಲವು ಗಣಗಳು ಗೂಟದಂತಹ ಕಿವಿಗಳನ್ನು ಹೊಂದಿದ್ದುವು. ಕಿರೀಟಗಳನ್ನು ಧರಿಸಿದ್ದುವು. ಕೆಲವು ಗಣಗಳು ಮೌಂಜಿಯನ್ನು ಸೊಂಟದಲ್ಲಿ ಸುತ್ತಿಕೊಂಡಿದ್ದುವು. ಕೆಲವು ಗಣಗಳಿಗೆ ಗುಂಗುರು ಕೂದಲುಗಳಿದ್ದುವು. ಕೆಲವು ಗಣಗಳಿಗೆ ಶಿರಸ್ತ್ರಾಣಗಳೂ ಕೆಲವು ಗಣಗಳಿಗೆ ಕಿರೀಟಗಳೂ ಇದ್ದುವು. ಕೆಲವು ಗಣಗಳ ಮುಖಗಳು ಬಹಳ ಸುಂದರವಾಗಿದ್ದು ಚೆನ್ನಾಗಿ ಅಲಂಕಾರವನ್ನು ಮಾಡಿಕೊಂಡಿದ್ದುವು. ಕೆಲವು ಗಣಗಳು ಕಮಲ ಮತ್ತು ಕನ್ನೈದಿಲೆಗಳಿಂದ ಮಾಡಿದ ಕಿರೀಟಗಳನ್ನು ಧರಿಸಿದ್ದುವು. ಕೆಲವು ಗಣಗಳು ಸುವರ್ಣಮಯವಾದ ಕಿರೀಟಗಳನ್ನೇ ಧರಿಸಿದ್ದುವು. ಅಲ್ಲಿ ನೆರೆದಿದ್ದ ನೂರಾರು-ಸಾವಿರಾರು ಭೂತಗಣಗಳು ಅದ್ಭುತವಾದ ಮಹಿಮೆಯಿಂದಲೂ ಕೂಡಿದ್ದುವು. ಅವುಗಳಲ್ಲಿ ಕೆಲವು ಶತಘ್ನಿಗಳನ್ನೂ ವಜ್ರಾಯುಧಗಳನ್ನೂ ಕೈಗಳಲ್ಲಿ ಹಿಡಿದಿದ್ದುವು. ಕೆಲವು ಮುಸಲಾಯುಧಪಾಣಿಗಳಾಗಿದ್ದುವು. ಕೆಲವು ಭುಷುಂಡಿಗಳನ್ನೂ, ಪಾಶಗಳನ್ನೂ, ದಂಡಗಳನ್ನೂ ಹಿಡಿದಿದ್ದುವು. ಕೆಲವು ಗಣಗಳು ಬೆನ್ನಿನಲ್ಲಿ ವಿಚಿತ್ರವಾದ ಬಾಣಗಳಿಂದ ತುಂಬಿದ್ದ ಬತ್ತಳಿಕೆಗಳನ್ನು ಕಟ್ಟಿಕೊಂಡಿದ್ದುವು. ಎಲ್ಲ ಭೂತಗಣಗಳೂ ಪತಾಕ-ಧ್ವಜ-ಘಂಟೆಗಳನ್ನೂ, ಗಂಡುಗೊಡಲಿಗಳನ್ನೂ ಹೊಂದಿದ್ದುವು. ಕೆಲವು ಭೂತಗಣಗಳು ದೊಡ್ಡ-ದೊಡ್ಡ ಹಗ್ಗಗಳನ್ನು ಎತ್ತಿದ ಕೈಗಳಿಂದ ಹಿಡಿದಿದ್ದುವು. ಕೆಲವು ಭೂತಗಣಗಳು ಕೈಯಲ್ಲಿ ದೊಣ್ಣೆಗಳನ್ನೂ, ಕೆಲವು ಕಂಬಗಳನ್ನೂ, ಕೆಲವು ಭೂತಗಣಗಳು ಖಡ್ಗಗಳನ್ನೂ ಹಿಡಿದಿದ್ದುವು. ಕೆಲವು ಭೂತಗಣಗಳಿಗೆ ಸರ್ಪಗಳಿಂದಲೇ ಮಾಡಿದ ಎತ್ತರವಾದ ಕಿರೀಟಗಳಿದ್ದುವು. ಕೆಲವು ಭೂತಗಣಗಳು ಖಡ್ಗಗಳನ್ನೂ ಹಿಡಿದಿದ್ದುವು. ಕೆಲವು ಭೂತಗಣಗಳಿಗೆ ಸರ್ಪಗಳಿಂದಲೇ ಮಾಡಿದ ಎತ್ತರವಾದ ಕಿರೀಟಗಳಿದ್ದುವು. ಕೆಲವು ಭೂತಗಣಗಳು ಮಹಾಸರ್ಪಗಳನ್ನೇ ಅಂಗದಾಭರಣಗಳಂತೆ ಧರಿಸಿದ್ದುವು. ಚಿತ್ರ-ವಿಚಿತ್ರವಾದ ಆಭರಣಗಳನ್ನು ತೊಟ್ಟಿದ್ದುವು. ಕೆಲವು ಭೂತಗಣಗಳು ಧೂಳಿನಿಂದ ಧೂಸರಿತವಾಗಿದ್ದುವು. ಕೆಲವು ಕೆಸರಿನಿಂದ ಲೇಪಿತವಾಗಿದ್ದುವು. ಎಲ್ಲ ಭೂತಗಣಗಳೂ ಸಾಮಾನ್ಯವಾಗಿ ಬಿಳಿಯ ವಸ್ತ್ರಗಳನ್ನು ತೊಟ್ಟು,

ಬಿಳಿಯ ಹೂವಿನ ಮಾಲೆಗಳಿಂದ ಸಮಲಂಕೃತವಾಗಿದ್ದುವು. ಪಾರಿಷದರಲ್ಲಿ ಕೆಲವರ ಅಂಗಗಳು ನೀಲಿಬಣ್ಣದುವುಗಳಾಗಿದ್ದುವು. ಕೆಲವರ ಅಂಗಗಳು ಪಿಂಗಳವರ್ಣದುವುಗಳಾಗಿದ್ದುವು. ಕೆಲವು ಪಾರಿಷದರು ತಮ್ಮ ತಲೆಗಳನ್ನು ಬೋಳಿಸಿಕೊಂಡಿದ್ದರು. ಸುವರ್ಣದ ಕಾಂತಿಯಿಂದ ಕೂಡಿದ್ದ, ಪರಮ ಹೃಷ್ಟರಾಗಿದ್ದ ಆ ಪಾರಿಷದರು ಭೇರೀ, ಮೃದಂಗ, ಶಂಖ, ಝರ್ಝರ, ದುಂದುಭಿ, ಗೋಮುಖ–ಇವೇ ಮೊದಲಾದ ವಾದ್ಯಗಳನ್ನು ಬಾರಿಸುತ್ತಿದ್ದರು. ಕೆಲವರು ಗಾಯನಮಾಡುತ್ತಲೂ ನೃತ್ಯಮಾಡುತ್ತಲೂ ಇದ್ದರು. ಮಹಾರಥರಾದ ಪಾರಿಷದರಲ್ಲಿ ಕೆಲವರು ಹಾರುತ್ತಿದ್ದರು ; ಕುಪ್ಪಳಿಸುತ್ತಿದ್ದರು ; ನೆಗೆಯುತ್ತಿದ್ದರು ; ಬಹಳ ವೇಗವಾಗಿ ಓಡುತ್ತಿದ್ದರು. ಕೆಲವರು ಬೋಳುತಲೆಯವರಾಗಿದ್ದರು. ಕೆಲವರ ತಲೆಗಳಲ್ಲಿ ಕೂದಲು ಗಳಿದ್ದು ಅವರು ವೇಗದಿಂದ ಹೋಗುತ್ತಿದ್ದಾಗ ಆ ಕೂದಲುಗಳು ಗಾಳಿಯಿಂದ ಮೇಲಕ್ಕೆ ಹಾರಿಸಲ್ಪಡುತ್ತಿದ್ದುವು.

ಆ ಭೂತಗಣಗಳು ಮದಿಸಿದ ಆನೆಗಳೋಪಾದಿಯಲ್ಲಿ ಬಾರಿ-ಬಾರಿಗೂ ಗರ್ಜನೆಮಾಡುತ್ತಿದ್ದುವು. ಅವುಗಳು ಶೂಲಗಳನ್ನೂ, ಪಟ್ಟಿಶಗಳನ್ನೂ ಕೈಗಳಲ್ಲಿ ಹಿಡಿದಿದ್ದುವು. ಘೋರವಾದ ರೂಪವನ್ನು ಧರಿಸಿ ಭಯಂಕರವಾಗಿ ಕಾಣುತ್ತಿದ್ದುವು. ಆ ಭೂತಗಣಗಳು ನಾನಾವರ್ಣಗಳ ವಸ್ತ್ರಗಳನ್ನು ಧರಿಸಿದ್ದುವು. ಚಿತ್ರವಾದ ಮಾಲೆಗಳನ್ನು ಧರಿಸಿ ಚಂದನವನ್ನು ಲೇಪಿಸಿಕೊಂಡಿದ್ದುವು. ರತ್ನಖಚಿತವಾದ ಮತ್ತು ಚಿತ್ರವಾದ ಅಂಗದಗಳನ್ನು ಧರಿಸಿದ್ದುವು. ಎಲ್ಲ ಭೂತಗಣಗಳೂ ತಮ್ಮ ಕೈಗಳನ್ನು ಮೇಲಕ್ಕೆತ್ತಿದ್ದುವು. ಶೂರರಾದ ಆ ಪಾರಿಷದರು ಶತ್ರುಗಳಿಂದ ಸಹಿಸಲು ಅಸಾಧ್ಯವಾದ ಪರಾಕ್ರಮವುಳ್ಳವರಾಗಿದ್ದರು. ಬಲಪೂರ್ವಕವಾಗಿ ಶತ್ರುಗಳನ್ನು ಸಂಹರಿ ಸುವ ಸಾಮರ್ಥ್ಯವನ್ನು ಹೊಂದಿದ್ದರು. ರಕ್ತವನ್ನೂ, ವಸೆಯನ್ನೂ ಕುಡಿಯು ತ್ತಿದ್ದರು. ಮಾಂಸವನ್ನೂ, ಕರುಳನ್ನೂ ತಿನ್ನುತ್ತಿದ್ದರು. ಕೆಲವು ಪಾರಿಷದರ ತಲೆಗಳ ಮೇಲೆ ಶಿಖೆಗಳಿದ್ದುವು. ಕೆಲವು ಪಾರಿಷದರು ಬೆಟ್ಟಕರ್ಣಿಗಲೇ ಹೂಗಳನ್ನು ಮುಡಿದಿದ್ದರು. ಎಲ್ಲ ಪಾರಿಷದರೂ ಹರ್ಷಯುಕ್ತ ರಾಗಿದ್ದರು. ಕೆಲವರಿಗೆ ಗಡಿಗೆಯಂತಹ ಹೊಟ್ಟೆಯಿದ್ದಿತು. ಕೆಲವರು ಬಹಳ ಕುಳ್ಳರಾಗಿಯೂ ಕೆಲವರು ದೀರ್ಘಕಾಯರಾಗಿಯೂ ಇದ್ದರು.

ಕೆಲವರು ಹೆಚ್ಚು ಎತ್ತರವಾಗಿದ್ದು ಬಳುಕಾಡುತ್ತಿದ್ದರು. ಕೆಲವರು ಮಹಾ ಭಯಂಕರವಾಗಿ ಕಾಣುತ್ತಿದ್ದರು. ಕೆಲವರು ವಿಕಾರವಾದ ರೂಪವುಳ್ಳವರಾಗಿದ್ದರು. ಕೆಲವರಿಗೆ ಕಪ್ಪಾದ ಮತ್ತು ಉದ್ದವಾದ ತುಟಿಗಳಿದ್ದುವು. ಕೆಲವರಿಗೆ ದೊಡ್ಡದಾದ ಲಿಂಗಗಳೂ ಮತ್ತೆ ಕೆಲವರಿಗೆ ದೊಡ್ಡದಾದ ವೃಷಣಗಳೂ ಇದ್ದುವು. ಕೆಲವು ಪಾರಿಷದರ ಮೊಣಕಾಲಿನ ಹಿಂಭಾಗವು ಬಹಳ ದೊಡ್ಡದಾಗಿದ್ದಿತು. ಕೆಲವು ಪಾರಿಷದರು ಬಹುಮೂಲ್ಯವಾದ ಕಿರೀಟಗಳನ್ನು ಧರಿಸಿದ್ದರು. ಕೆಲವರು ಮುಂಡರಾಗಿಯೂ ಕೆಲವರು ಜಟಾಧಾರಿಗಳಾಗಿಯೂ ಇದ್ದರು. ಅವರು ಸೂರ್ಯ-ಚಂದ್ರ-ಗ್ರಹ-ನಕ್ಷತ್ರಗಳಿಂದ ಯುಕ್ತವಾದ ಆಕಾಶವನ್ನೇ ಭೂಮಿಯ ಮೇಲೆ ಕೆಡಹುವಷ್ಟು ಸಮರ್ಥರಾಗಿದ್ದರು. ಭೂಮಂಡಲದಲ್ಲಿರುವ ನಾಲ್ಕು ವಿಧವಾದ ಪ್ರಾಣಿಗಳ ಸಮುದಾಯವನ್ನೂ ಸಂಪೂರ್ಣವಾಗಿ ವಿನಾಶಮಾಡುವ ಉತ್ಸಾಹಶಕ್ತಿಯನ್ನು ಹೊಂದಿದ್ದರು. ಅವರು ಸದಾ ನಿರ್ಭಯರಾಗಿರುತ್ತಿದ್ದರು. *ಹರನ ಹುಬ್ಬುಗಂಟನ್ನೂ ಸಹಿಸಿಕೊಳ್ಳುತ್ತಿದ್ದರು. ಅವರು ಪ್ರತಿದಿನವೂ ಸ್ವೇಚ್ಛಾನುಸಾರವಾಗಿ ಕಾರ್ಯಗಳನ್ನು ಮಾಡುತ್ತಿದ್ದರು. ಮೂರು ಲೋಕಗಳ ಈಶ್ವರರಿಗೂ ಈಶ್ವರರಾಗಿದ್ದರು. ಆ ಪಾರಿಷದರು ನಿತ್ಯವೂ ಆನಂದದಲ್ಲಿ ಮಗ್ನರಾಗಿರುತ್ತಿದ್ದರು. ವಾಕ್ಕುಗಳಿಗೆ ಅಧೀಶರಾಗಿದ್ದರು. ಮಾತ್ಸರ್ಯವೆಂಬುದೇ ಅವರಿಗೆ ಇರಲಿಲ್ಲ. ಅವರು ಅಣಿಮಾದಿ ಅಷ್ಟೈಶ್ವರ್ಯಗಳನ್ನೂ ಸಿದ್ಧ ಮಾಡಿಕೊಂಡಿದ್ದರು. ನಿರಭಿಮಾನಿಗಳಾಗಿದ್ದರು. ಭಗವಾನ್ ಶಂಕರನು ಅನುದಿನವೂ ಪಾರಿಷದರ ಅಸಾಧಾರಣವಾದ ಕರ್ಮಗಳನ್ನು ವೀಕ್ಷಿಸುತ್ತ ಆಶ್ಚರ್ಯಭರಿತನಾಗುತ್ತಿದ್ದನು. ಆ ಎಲ್ಲ ಪಾರಿಷದರೂ ಏಕಾಗ್ರವಾದ ಮನಸ್ಸು, ಮಾತು ಮತ್ತು ಕರ್ಮಗಳಿಂದ ಪರಶಿವನನ್ನು ನಿತ್ಯವೂ ಆರಾಧಿಸುತ್ತಾರೆ. ಮನೋವಾಕ್ಕಾಯಕರ್ಮಗಳಿಂದ ಅನುದಿನವೂ

---

*ಹರಸ್ಯ ಭ್ರುಕುಟೀಸಹಾಃ = ಪಾರಿಷದರು ಅತ್ಯಂತನಿರ್ಭಯರಾಗಿದ್ದರೆಂಬುದಕ್ಕೆ ಈ ವಿಶೇಷಣವನ್ನು ಹೇಳಿದೆ. ಭ್ರುಕುಟಿ ಎಂದರೆ ಹುಬ್ಬುಗಂಟಿಕ್ಕುವುದು. ಹರನ ಹುಬ್ಬುಗಂಟನ್ನು ಸಹಿಸುತ್ತಿದ್ದರೆಂದರೆ ಹರನು ಕೋಪಗೊಂಡರೂ ಅವರು ಭಯಪಡುತ್ತಿರಲಿಲ್ಲ – ಎಂದರ್ಥ.

ತನ್ನನ್ನು ಆರಾಧಿಸುವ ಭಕ್ತರನ್ನು ಮಹಾದೇವನು ತನ್ನ ಔರಸಪುತ್ರರಂತೆಯೇ ರಕ್ಷಣೆಮಾಡುತ್ತಾನೆ. ಬಹುಮಂದಿ ಪಾರಿಷದರು ಪರಮಕ್ರುದ್ಧರಾಗಿ ಬ್ರಹ್ಮದ್ವೇಷಿಗಳ ರಕ್ತವನ್ನೂ ವಸೆಯನ್ನೂ ಸದಾಕಾಲದಲ್ಲಿಯೂ ಕುಡಿಯುತ್ತಿರುತ್ತಾರೆ.

***ಚತುರ್ವಿಧಾತ್ಮಕಂ ಸೋಮಂ ಯೇ ಪಿಬನ್ತಿ ಚ ಸರ್ವದಾ ।**
**ಶ್ರುತೇನ ಬ್ರಹ್ಮಚರ್ಯೇಣ ತಪಸಾ ಚ ದಮೇನ ಚ ।**
**ಯೇ ಸಮಾರಾಧ್ಯ ಶೂಲಾಙ್ಕಂ ಭವಸಾಯುಜ್ಯಮಾಗತಾಃ ॥೪೫॥**

ನಾಲ್ಕು ವಿಧವಾದ ಸೋಮರಸವನ್ನು ಯಾರು ಸರ್ವಕಾಲದಲ್ಲಿಯೂ ಪಾನಮಾಡುತ್ತಿರುತ್ತಾರೆಯೋ–ಅಂತಹ ಶಿವನ ಪಾರಿಷದರು ವೇದಾಧ್ಯಯನ, ಬ್ರಹ್ಮಚರ್ಯೆ, ತಪಸ್ಸು ಮತ್ತು ಇಂದ್ರಿಯನಿಗ್ರಹಗಳಿಂದ ಶೂಲಾಂಕನಾದ ಪರಶಿವನನ್ನು ಆರಾಧಿಸಿ ಭವನ ಸಾಯುಜ್ಯವನ್ನೇ ಹೊಂದಿದ್ದಾರೆ. ಶಿವನ ಆತ್ಮಸ್ವರೂಪವೇ ಆಗಿರುವ ಮಹಾಭೂತಗಣಗಳೊಡನೆಯೂ, ಪಾರ್ವತಿಯೊಡನೆಯೂ, ಭೂತ-ವರ್ತಮಾನ ಮತ್ತು ಭವಿಷ್ಯಗಳಿಗೆ ಸ್ವಾಮಿಯಾದ ಪರಮೇಶ್ವರನು ಯಜ್ಞಗಳ ಹವಿರ್ಭಾಗಗಳನ್ನು ಭುಂಜಿಸುತ್ತಾನೆ. ಪರಮೇಶ್ವರನ ಪಾರಿಷದರು ನಾನಾವಿಧವಾದ ವಾದ್ಯಘೋಷಗಳಿಂದಲೂ, ಅಟ್ಟಹಾಸಗಳಿಂದಲೂ, ಸಿಂಹನಾದಗಳಿಂದಲೂ, ಕೂಗುವಿಕೆಯಿಂದಲೂ, ಗರ್ಜನೆಗಳಿಂದಲೂ–ಪ್ರಪಂಚವನ್ನೇ ಭಯಗೊಳಿಸುತ್ತಾ ಅಶ್ವತ್ಥಾಮನ ಬಳಿಗೆ ಬಂದರು. ಮಹಾವರ್ಚಸ್ಸಿನಿಂದ ಕೂಡಿದ್ದ ಪಾರಿಷದರು ತಮ್ಮ ಪ್ರಭೆಯನ್ನು ಸುತ್ತಲೂ ಹರಡುತ್ತಾ ಮಹಾದೇವನನ್ನು ಪರಿ-ಪರಿಯಾಗಿ ಸ್ತೋತ್ರಮಾಡುತ್ತಿದ್ದರು. ದ್ರೋಣರ ಮಗನಾದ ಅಶ್ವತ್ಥಾಮನ ಮಹಿಮೆಯನ್ನು ಹೆಚ್ಚಿಸಬೇಕೆಂಬ ಆಶಯವುಳ್ಳವರಾಗಿದ್ದರು. ಅಶ್ವತ್ಥಾಮನ

---

*ಚತುರ್ವಿಧಾತ್ಮಕಂ ಸೋಮಂ – ಎಂಬುದಕ್ಕೆ ವ್ಯಾಖ್ಯಾನಕಾರರು ಹೀಗೆ ಅರ್ಥ ಮಾಡಿರುತ್ತಾರೆ : ಅನ್ನರೂಪಂ, ಲತಾರಸರೂಪಂ, ಅಮೃತರೂಪಂ, ಚನ್ದ್ರಮಣ್ಡಲರೂಪಂ–ಅನ್ನರೂಪವಾದುದು; ಲತಾರಸರೂಪವಾದುದು; ಅಮೃತರೂಪವಾದುದು ಮತ್ತು ಚಂದ್ರಮಂಡಲರೂಪವಾದುದು.

ಪರಾಕ್ರಮವೆಷ್ಟಿದೆಯೆಂಬುದನ್ನು ತಿಳಿಯುವ ಆಸಕ್ತಿಯನ್ನೂ ಹೊಂದಿದ್ದರು. ಮಲಗಿದ್ದವರ ಸಂಹಾರವು ಹೇಗೆ ನಡೆಯುವುದೆಂಬುದನ್ನು ನೋಡಬೇಕೆನ್ನುವ ಆಶಯವೂ ಅವರಿಗಿದ್ದಿತು. ಭಯಂಕರವಾಗಿದ್ದ ಪರಿಘಾಯುಧಗಳನ್ನೂ, ಕೊಳ್ಳಿಗಳನ್ನೂ, ತ್ರಿಶೂಲಗಳನ್ನೂ, ಪಟ್ಟಿಶಗಳನ್ನೂ ಹಿಡಿದಿದ್ದ ಘೋರರೂಪರಾಗಿದ್ದ ಮಹಾದೇವನ ಪಾರಿಷದರು ಎಲ್ಲ ಕಡೆಗಳಿಂದಲೂ ಅಶ್ವತ್ಥಾಮನಿದ್ದ ಸ್ಥಳಕ್ಕೆ ಆಗಮಿಸಿದರು. ಭೂತನಾಥನ ಆ ಪಾರಿಷದರು ದರ್ಶನಮಾತ್ರದಿಂದಲೇ ಮೂರು ಲೋಕಗಳಿಗೂ ಭಯವನ್ನುಂಟು ಮಾಡುವವರಾಗಿದ್ದರು. ಅಂತಹ ಭಯಂಕರರಾದ ಪಾರಿಷದರನ್ನು ನೋಡಿಯೂ ಮಹಾಬಲನಾದ ಅಶ್ವತ್ಥಾಮನು ಸ್ವಲ್ಪವಾದರೂ ವ್ಯಥೆಪಡಲಿಲ್ಲ. ಧನುಷ್ಪಾಣಿಯಾಗಿದ್ದ, ಗೋಧಾಂಗುಲಿತ್ರಗಳನ್ನು (ಬೆರಳುಗಳನ್ನು ರಕ್ಷಿಸುವ ಚರ್ಮದ ಚೀಲಗಳನ್ನು) ಧರಿಸಿದ್ದ ಅಶ್ವತ್ಥಾಮನು ತನ್ನನ್ನೇ ಮಹಾದೇವನಿಗೆ ಉಪಹಾರವನ್ನಾಗಿ ಅರ್ಪಿಸಿಕೊಂಡನು.

**ಧನೂಂಷಿ ಸಮಿಧಸ್ತತ್ರ ಪವಿತ್ರಾಣಿ ಶಿತಾಃ ಶರಾಃ ।**
**ಹವಿರಾತ್ಮವತಶ್ಚಾತ್ಮಾ ತಸ್ಮಿನ್ಭಾರತ ಕರ್ಮಣಿ ॥೫೩॥**

ಭಾರತನೇ! ಆತ್ಮಸಮರ್ಪಣರೂಪವಾದ ಆ ಯಜ್ಞಕಾರ್ಯದಲ್ಲಿ ಆತ್ಮಬಲಸಂಪನ್ನನಾದ ಅಶ್ವತ್ಥಾಮನ ಧನುಸ್ಸುಗಳೇ ಸಮಿತ್ತುಗಳಾಗಿದ್ದುವು. ನಿಶಿತವಾದ ಬಾಣಗಳೇ ದರ್ಭೆಗಳಾಗಿದ್ದುವು. ಅಶ್ವತ್ಥಾಮನ ಶರೀರವೇ ಹವಿಸ್ಸಾಗಿದ್ದಿತು.

**ತತಃ ಸೌಮ್ಯೇನ ಮನ್ತ್ರೇಣ ದ್ರೋಣಪುತ್ರಃ ಪ್ರತಾಪವಾನ್ ।**
**ಉಪಹಾರಂ ಮಹಾಮನ್ಯುರಥಾತ್ಮಾನಮುಪಾಹರತ್ ॥೫೪॥**

ಅನಂತರ ಪ್ರತಾಪವಂತನಾದ, ಮಹಾಕೋಪಿಷ್ಠನಾದ ಅಶ್ವತ್ಥಾಮನು ಸೋಮ (ರುದ್ರ) ದೇವತಾತ್ಮಕವಾದ ಮಂತ್ರದಿಂದ ತನ್ನ ಶರೀರವನ್ನೇ ಹವಿಸ್ಸನ್ನಾಗಿ ಅಗ್ನಿಯಲ್ಲಿ ಸಮರ್ಪಿಸಿಕೊಂಡನು.

ಭಯಂಕರಕರ್ಮನಾದ, ಅಚ್ಯುತನಾದ, ಮಹಾತ್ಮನಾದ ರುದ್ರನನ್ನು ಭಯಂಕರವಾದ ಕರ್ಮದಿಂದಲೇ ತಣಿಸುತ್ತಾ ಮತ್ತು ಸ್ತೋತ್ರಮಾಡುತ್ತಾ ಅಶ್ವತ್ಥಾಮನು ಬದ್ಧಾಂಜಲಿಯಾಗಿ ಹೇಳಿದನು :

**ಇಮಮಾತ್ಮಾನಮದ್ಯಾಹಂ ಜಾತಮಾಙ್ಗಿರಸೇ ಕುಲೇ ।**
**ಸ್ವಗ್ನೌ ಜುಹೋಮಿ ಭಗವನ್ಪ್ರತಿಗೃಹ್ಣೀಷ್ವ ಮಾಂ ಬಲಿಮ್ ॥೫೬॥**

"ಭಗವನ್! ಮಹಾದೇವ! ಅಂಗೀರಸವಂಶೋತ್ಪನ್ನನಾದ ನಾನು ಈಗ ಈ ನನ್ನ ದೇಹವನ್ನು ಪ್ರಜ್ವಲಿಸುತ್ತಿರುವ ಅಗ್ನಿಯಲ್ಲಿ ಆಹುತಿಯನ್ನಾಗಿ ಅರ್ಪಿಸುತ್ತಿದ್ದೇನೆ. ಬಲಿರೂಪನಾದ ಈ ನನ್ನನ್ನು ದಯಮಾಡಿ ಪ್ರತಿಗ್ರಹಿಸು.

**ಭವದ್ಭಕ್ತ್ಯಾ ಮಹಾದೇವ ಪರಮೇಣ ಸಮಾಧಿನಾ ।**
**ಅಸ್ಯಾಮಾಪದಿ ವಿಶ್ವಾತ್ಮನ್ನುಪಾಕುರ್ಮಿ ತವಾಗ್ರತಃ ॥೫೭॥**

ವಿಶ್ವಾತ್ಮನೇ! ಮಹಾದೇವ! ನನಗೆ ಒದಗಿರುವ ಈ ಆಪತ್ತಿನ ಸಮಯದಲ್ಲಿ ನಿನ್ನಲ್ಲಿ ವಿಶೇಷವಾದ ಭಕ್ತಿಭಾವದಿಂದ ಪರಮೈಕಾಗ್ರತೆಯಿಂದ ನಿನ್ನನ್ನೇ ಕುರಿತು ಧ್ಯಾನಮಾಡುತ್ತಾ ಈ ನನ್ನ ಶರೀರವನ್ನು ಬಲಿರೂಪವಾಗಿ ಅರ್ಪಿಸುತ್ತಿದ್ದೇನೆ. (ದಯಮಾಡಿ ಸ್ವೀಕರಿಸು.)

**ತ್ವಯಿ ಸರ್ವಾಣಿ ಭೂತಾನಿ ಸರ್ವಭೂತೇಷು ಚಾಸಿ ವೈ ।**
**ಗುಣಾನಾಂ ಹಿ ಪ್ರಧಾನಾನಾಮೇಕತ್ವಂ ತ್ವಯಿ ತಿಷ್ಠತಿ ॥೫೮॥**

ಪ್ರಭುವೇ! ಎಲ್ಲ ಪ್ರಾಣಿಗಳೂ ನಿನ್ನಲ್ಲಿಯೇ ಇವೆ. ಎಲ್ಲ ಪ್ರಾಣಿಗಳಲ್ಲಿಯೂ ನೀನಿರುವೆ. ಎಲ್ಲ ಪ್ರಧಾನಗುಣಗಳೂ ಒಂದಾಗಿ ಸೇರಿ ನಿನ್ನಲ್ಲಿಯೇ ಪ್ರತಿಷ್ಠಿತವಾಗಿವೆ.

**ಸರ್ವಭೂತಾಶ್ರಯ ವಿಭೋ ಹವಿರ್ಭೂತಮವಸ್ಥಿತಮ್ ।**
**ಪ್ರತಿಗೃಹಾಣ ಮಾಂ ದೇವ ಯದ್ಯಶಕ್ಯಾಃ ಪರೇ ಮಯಾ ॥೫೯॥**

ಸರ್ವಭೂತಗಳಿಗೂ ಆಶ್ರಯಭೂತನಾದವನೇ! ವಿಭುವೇ! ಶತ್ರುಗಳು ನನ್ನಿಂದ ಪರಾಭವಹೊಂದುವ ಸಾಧ್ಯತೆಯೇ ಇಲ್ಲದಿದ್ದರೆ ಹವಿಸ್ಸಿನ ರೂಪದಲ್ಲಿ ಆತ್ಮವನ್ನೇ ಬಲಿಗೊಡಲು ಸಿದ್ಧನಾಗಿರುವ ನನ್ನನ್ನು ಪ್ರತಿಗ್ರಹಿಸು."

ಮಹಾರಾಜ! ದ್ರೋಣಪುತ್ರನಾದ ಅಶ್ವತ್ಥಾಮನು ಹೀಗೆ ಹೇಳುತ್ತಾ ಪ್ರಜ್ವಲಿತವಾದ ಅಗ್ನಿಯಿಂದ ದೇದೀಪ್ಯಮಾನವಾಗಿ ಪ್ರಕಾಶಿತವಾದ ವೇದಿಯನ್ನು ಹತ್ತಿ ದೇಹದ ಮೇಲಿನ ಮೋಹವನ್ನು ಸಂಪೂರ್ಣವಾಗಿ

ಪರಿತ್ಯಜಿಸಿ, ಧಗ-ಧಗನೆ ಉರಿಯುತ್ತಿದ್ದ ಯಜ್ಞೇಶ್ವರನ ಮಧ್ಯಭಾಗದಲ್ಲಿ ಕುಳಿತನು.

ಕೈಗಳೆರಡನ್ನೂ ಮೇಲೆತ್ತಿ ನಿಶ್ಚೇಷ್ಟನಾಗಿ ಹವಿಸ್ಸಿನ ರೂಪದಲ್ಲಿ ಕುಳಿತಿದ್ದ ಅಶ್ವತ್ಥಾಮನನ್ನು ನೋಡಿ ಸಾಕ್ಷಾತ್ ಭಗವಾನ್ ಮಹಾದೇವನು ನಗುತ್ತಿರುವನೋ ಎಂಬಂತೆ ಪ್ರಸನ್ನವಾದ ಮುಖಭಾವದಿಂದ ಕೂಡಿದವನಾಗಿ ಅಶ್ವತ್ಥಾಮನೊಡನೆ ಹೇಳಿದನು :

**ಸತ್ಯಶೌಚಾರ್ಜವತ್ಯಾಗೈಸ್ತಪಸಾ ನಿಯಮೇನ ಚ ।**
**ಕ್ಷಾನ್ತ್ಯಾ ಭಕ್ತ್ಯಾ ಚ ಧೃತ್ಯಾ ಚ ಬುದ್ಧ್ಯಾ ಚ ವಚಸಾ ತಥಾ ॥೬೨॥**

**ಯಥಾವದಹಮಾರಾದ್ಧಃ ಕೃಷ್ಣೇನಾಕ್ಲಿಷ್ಟಕರ್ಮಣಾ ।**
**ತಸ್ಮಾದಿಷ್ಟತಮಃ ಕೃಷ್ಣಾದನ್ಯೋ ಮಮ ನ ವಿದ್ಯತೇ ॥೬೩॥**

“ಕಷ್ಟಸಾಧ್ಯವಾದ ಕಾರ್ಯಗಳನ್ನು ಬಹಳ ಸುಲಭವಾಗಿಯೇ ಮಾಡಿ ಮುಗಿಸುವ ಶ್ರೀಕೃಷ್ಣನು–ಸತ್ಯ, ಶೌಚ, ಸರಳತೆ, ತ್ಯಾಗ, ತಪಸ್ಸು, ನಿಯಮ, ಕ್ಷಮೆ, ಭಕ್ತಿ, ಧೈರ್ಯ, ಬುದ್ಧಿ ಮತ್ತು ಮಾತುಗಳ ಮೂಲಕವಾಗಿ ಯಥೋಚಿತವಾದ ರೀತಿಯಲ್ಲಿ ನನ್ನನ್ನು ಆರಾಧಿಸಿದ್ದಾನೆ. ಆದುದರಿಂದ ಶ್ರೀಕೃಷ್ಣನಿಗಿಂತಲೂ ಪರಮಪ್ರಿಯನಾದವನು ನನಗೆ ಬೇರೊಬ್ಬನಿರುವುದಿಲ್ಲ.

ಪರಮಪ್ರಿಯನಾದ ಶ್ರೀಕೃಷ್ಣನನ್ನು ಸಮ್ಮಾನಿಸುವ ಸಲುವಾಗಿಯೂ ಮತ್ತು ನಿನ್ನನ್ನು ಪರೀಕ್ಷಿಸುವ ಸಲುವಾಗಿಯೂ ನಾನು ಪಾಂಚಾಲರನ್ನು ಸರ್ವಾತ್ಮನಾ ರಕ್ಷಿಸುತ್ತಿದ್ದೆನು. ನಿನ್ನ ಮೇಲೆ ನಾನಾವಿಧವಾದ ಮಾಯಾ ವಿದ್ಯೆಗಳನ್ನೂ ಪ್ರಯೋಗಿಸಿದೆನು. ಪಾಂಚಾಲರನ್ನು ಇದುವರೆಗೂ ನಾನು ರಕ್ಷಿಸಿಕೊಂಡಿದ್ದುದರಿಂದ ಶ್ರೀಕೃಷ್ಣನಿಗೆ ಸಮ್ಮಾನಮಾಡಿದಂತೆಯೇ ಆಗಿದೆ. ಆದರೆ ಈಗ ಪಾಂಚಾಲರು ಕಾಲನಿಂದಲೇ ಪರಾಜಿತರಾಗಿರುವುದರಿಂದ ಅವರ ಜೀವಿತವು ಹೆಚ್ಚುಕಾಲ ಉಳಿದುಕೊಂಡಿರುವುದಿಲ್ಲ. (ಅವರು ಸಾಯುವ ಕಾಲವು ಬಂದಿದೆ.)”

**ಏವಮುಕ್ತ್ವಾ ಮಹಾತ್ಮಾನಂ ಭಗವಾನಾತ್ಮನಸ್ತನುಮ್ ।**
**ಆವಿವೇಶ ದದೌ ಚಾಸ್ಮೈ ವಿಮಲಂ ಖಡ್ಗಮುತ್ತಮಮ್ ॥೬೬॥**

ಮಹಾರಾಜ! ಮಹಾದೇವನು ಮಹಾತ್ಮನಾದ ಅಶ್ವತ್ಥಾಮ

ನೊಡನೆ ಹೀಗೆ ಹೇಳಿ ತನ್ನ ಶರೀರವನ್ನು (ತನ್ನ ಅಂಶವನ್ನು) ಅಶ್ವತ್ಥಾಮನ ಶರೀರದಲ್ಲಿ ಐಕ್ಯಗೊಳಿಸಿ ವಿಮಲವಾದ ಮತ್ತು ಶ್ರೇಷ್ಠವಾದ ಖಡ್ಗವನ್ನು ದಯಪಾಲಿಸಿದನು. ಮಹಾದೇವನ ಆವೇಶವಾದೊಡನೆಯೇ ಅಶ್ವತ್ಥಾಮನು ಇನ್ನೂ ಅಧಿಕವಾದ ಮಹಾತೇಜಸ್ಸಿನಿಂದ ಪ್ರಜ್ವಲಿಸಿದನು. ದೇವದತ್ತವಾದ ಆ



ಮಹಾತೇಜಸ್ಸಿನಿಂದ ಅಶ್ವತ್ಥಾಮನು ಯುದ್ಧದಲ್ಲಿ ವೇಗವಂತನೂ ಆದನು. ಸಾಕ್ಷಾತ್ ಮಹಾದೇವನಂತೆಯೇ ಶತ್ರುವಿನ ಶಿಬಿರದ ಕಡೆಗೆ ಹೋಗುತ್ತಿದ್ದ ಅಶ್ವತ್ಥಾಮನನ್ನು ಮಹಾಭೂತಗಣಗಳೂ–ರಾಕ್ಷಸರೂ ಅದೃಶ್ಯರಾಗಿಯೇ ಅನುಸರಿಸಿ ಹೋದರು.”

ಏನೆಯ ಅಧ್ಯಾಯವು ಮುಗಿಯಿತು.

## ಅಶ್ವತ್ಥಾಮನು ಮಲಗಿ ನಿದ್ರಿಸುತ್ತಿದ್ದ ಪಾಂಚಾಲರೇ ಮೊದಲಾದ ಸಮಸ್ತಯೋಧರನ್ನೂ ಸಂಹರಿಸಿದುದು : ತಪ್ಪಿಸಿಕೊಂಡು ಶಿಬಿರದಿಂದ ಹೊರಕ್ಕೆ ಓಡಿಹೋಗುತ್ತಿದ್ದ ಸೈನಿಕರನ್ನು ಕೃಪ-ಕೃತವರ್ಮರು ಸಂಹಾರಮಾಡಿದುದು

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ಮಹಾರಥನಾದ ಅಶ್ವತ್ಥಾಮನು ನೀನು ಹೇಳಿದ ರೀತಿಯಲ್ಲಿ ಶಿಬಿರವನ್ನು ಪ್ರವೇಶಿಸಲಾಗಿ ಕೃಪ-ಕೃತವರ್ಮರು ಭಯಾರ್ತರಾಗಿ ವ್ಯಥೆಪಡಲಿಲ್ಲವೇ? ಕ್ಷುದ್ರರಾದ ದ್ವಾರಪಾಲಕರು ಕೃಪ-ಕೃತವರ್ಮರನ್ನು ತಡೆಯಲಿಲ್ಲವೇ? ಶಿಬಿರವನ್ನು ರಕ್ಷಿಸುತ್ತಿದ್ದವರಾರೂ ಅವರನ್ನು ನೋಡಲೇ ಇಲ್ಲವೇ? ಮಹಾರಥರಾದ ಅವರಿಬ್ಬರೂ ರಾತ್ರಿಯಲ್ಲಿ ಮಲಗಿದ್ದವರನ್ನು ಕೊಲೆಮಾಡುವುದು ಅಸಹ್ಯವೆಂದು ಭಾವಿಸಿ ಹಿಂದಿರುಗಲಿಲ್ಲವೇ? ಶಿಬಿರವನ್ನೇ ಧ್ವಂಸಮಾಡಿ ಸೋಮಕ-ಪಾಂಡವರನ್ನು ಸಂಹರಿಸಿದನಂತರವೇ ಹಿಂದಿರುಗಿದರೇ? ಯುದ್ಧಮಾಡುತ್ತಿದ್ದ ಸಮಯದಲ್ಲಿ ದುರ್ಯೋಧನನ ಶ್ರೇಷ್ಠವಾದ ಮಾರ್ಗವನ್ನೇ ಹಿಡಿದು ಹೋಗಿ ಪಾಂಚಾಲರಿಂದಲೇ ಹತರಾಗಿ ಭೂಮಿಯ ಮೇಲೆ ಮಲಗಲಿಲ್ಲವೇ? ಕೃಪ-ಕೃತವರ್ಮರಿಬ್ಬರೂ ಆ ಸಮಯದಲ್ಲಿ ಯಾವುದಾದರೂ ಸಾಹಸಕಾರ್ಯದಲ್ಲಿ ತೊಡಗಿದ್ದರೇ?–ಈ ವಿಷಯವನ್ನು ನನಗೆ ಯಥಾವತ್ತಾಗಿ ಹೇಳು."

"ಮಹಾರಾಜ! ಮಹಾತ್ಮನಾದ ಅಶ್ವತ್ಥಾಮನು ಶಿಬಿರವನ್ನು ಪ್ರವೇಶಿಸಲಾಗಿ ಕೃಪ-ಕೃತವರ್ಮರಿಬ್ಬರೂ ಶಿಬಿರದ ಮಹಾದ್ವಾರದಲ್ಲಿಯೇ ಉಳಿದರು. ಮಹಾರಥರಾದ ಕೃಪ-ಕೃತವರ್ಮರು ತನ್ನನ್ನೇ ಅನುಸರಿಸಿ ಬರಲು ಪ್ರಯತ್ನಿಸುತ್ತಿರುವುದನ್ನು ನೋಡಿ ಪ್ರಹೃಷ್ಟನಾದ ಅಶ್ವತ್ಥಾಮನು ಅವರನ್ನು ಕುರಿತು ಮೆಲ್ಲನೆ ಈ ಮಾತುಗಳನ್ನು ಹೇಳಿದನು :

"ಪ್ರಯತ್ನಶೀಲರಾದ ನೀವಿಬ್ಬರೇ ವಿಶ್ವದ ಎಲ್ಲ ಕ್ಷತ್ರಿಯರನ್ನೂ ನಾಶಮಾಡಲು ಸಮರ್ಥರಾಗಿರುವಿರಿ. ಹೀಗಿರುವಾಗ ಅಳಿದುಳಿದಿರುವ ಅದರಲ್ಲಿಯೂ ವಿಶೇಷವಾಗಿ ಮಲಗಿರುವವರ ವಿಷಯದಲ್ಲಿ ಹೇಳುವುದೇನಿದೆ?

(ಇವರನ್ನು ನೀವು ಕ್ಷಣಮಾತ್ರದಲ್ಲಿಯೇ ಧ್ವಂಸಮಾಡಬಲ್ಲಿರಿ.) ಆದರೆ ನೀವು ನನ್ನನ್ನು ಅನುಸರಿಸಿ ಬರುವ ಅವಶ್ಯಕತೆಯಿಲ್ಲ. ನಾನೊಬ್ಬನೇ ಈ ಶಿಬಿರವನ್ನು ಪ್ರವೇಶಿಸಿ ಕಾಲನಂತೆ ಸರ್ವತ್ರಸಂಚರಿಸುತ್ತಾ ಎಲ್ಲರನ್ನೂ ಧ್ವಂಸಮಾಡುತ್ತೇನೆ. ಆದರೆ ನಾನು ಹಾಗೆ ಸಂಚರಿಸುತ್ತಿರುವಾಗ ಯಾವನೊಬ್ಬನಾಗಲೀ ಜೀವಸಹಿತನಾಗಿ ಈ ಶಿಬಿರದಿಂದ ಹೊರಕ್ಕೆ ತಪ್ಪಿಸಿಕೊಂಡು ಹೋಗಬಾರದು. ಹಾಗೆ ನೀವು ಈ ಶಿಬಿರದ ಮಹಾದ್ವಾರದಲ್ಲಿಯೇ ಇದ್ದು ಕಾರ್ಯಮಾಡಬೇಕು. ಇದು ನನ್ನ ನಿಶ್ಚಿತವಾದ ಅಭಿಪ್ರಾಯವಾಗಿದೆ."

ಹೀಗೆ ಹೇಳಿ ಕೃಪ-ಕೃತವರ್ಮರಿಬ್ಬರನ್ನೂ ಶಿಬಿರದ ಮಹಾದ್ವಾರ ದಲ್ಲಿಯೇ ನಿಲ್ಲಿಸಿ, ತಾನು ಮಹಾದ್ವಾರದ ಮೂಲಕವಾಗಿ ಹೋಗದೇ, ಭಯವನ್ನು ಸಂಪೂರ್ಣವಾಗಿ ತ್ಯಜಿಸಿ, ಬೇರೊಂದು ಕಡೆಯಿಂದ ನೆಗೆದು ಪಾಂಡವರ ಮಹಾಶಿಬಿರವನ್ನು ಪ್ರವೇಶಿಸಿದನು. ಯಾರು ಎಲ್ಲಿ ಮಲಗಿರುವರೆಂಬುದನ್ನು ಚೆನ್ನಾಗಿ ತಿಳಿದುಕೊಂಡಿದ್ದ ಮಹಾಬಾಹುವಾದ ಅಶ್ವತ್ಥಾಮನು ಧೃಷ್ಟದ್ಯುಮ್ನನು ಮಲಗಿದ್ದ ಶಿಬಿರವನ್ನು ಮೆಲ್ಲನೆ ಪ್ರವೇಶಿಸಿದನು.

ಪಾಂಚಾಲಯೋಧರು ಹಗಲಿನಲ್ಲಿ ಮಹಾಯುದ್ಧದಲ್ಲಿ ತೊಡಗಿದ್ದು ಪರಾಕ್ರಮದಿಂದ ಶತ್ರುಗಳೊಡನೆ ಕಾದಾಡಿ ಬಹಳವಾಗಿ ಬಳಲಿದ್ದರು. ಅಂದಿನ ರಾತ್ರಿಯಲ್ಲಿ ಯಾವ ವಿಧವಾದ ಆತಂಕವೂ ಇಲ್ಲದೇ ನಿಶ್ಚಿಂತರಾಗಿ ತಮ್ಮ-ತಮ್ಮ ಸೈನಿಕರಿಂದ ಪರಿವೃತರಾಗಿ ಮಲಗಿ ನಿದ್ರಿಸುತ್ತಿದ್ದರು. ಅಶ್ವತ್ಥಾಮನು ಧೃಷ್ಟದ್ಯುಮ್ನನು ತಂಗಿದ್ದ ಭವನವನ್ನು ಪ್ರವೇಶಿಸಿ ಶ್ರೇಷ್ಠವಾದ ಹೂವಿನ ಹಾರಗಳಿಂದ ಸಮಲಂಕೃತವಾಗಿದ್ದ, ಧೂಪಗಳಿಂದಲೂ ಚಂದನ ಚೂರ್ಣಗಳಿಂದಲೂ ಸುವಾಸಿತವಾಗಿದ್ದ, ಬಹುಮೂಲ್ಯವಾದ ಹಚ್ಚಡದಿಂದ ಹೊದ್ದಿಸಲ್ಪಟ್ಟಿದ್ದ, ಶುದ್ಧವಾದ ರೇಷ್ಮೆಯಿಂದ ಮಾಡಿದ್ದ ದೊಡ್ಡದಾದ ಹಾಸಿಗೆಯಲ್ಲಿ ಮಲಗಿದ್ದ ಧೃಷ್ಟದ್ಯುಮ್ನನನ್ನು ಬಹಳ ಹತ್ತಿರದಿಂದಲೇ ನೋಡಿದನು. ನಿಶ್ಚಿಂತನಾಗಿ ಮತ್ತು ಭಯರಹಿತನಾಗಿ ಹಾಸಿಗೆಯ ಮೇಲೆ ಮಲಗಿದ್ದ ಮಹಾತ್ಮನಾದ ಧೃಷ್ಟದ್ಯುಮ್ನನನ್ನು ಅಶ್ವತ್ಥಾಮನು ಕಾಲಿನಿಂದ ತಿವಿದು ಎಚ್ಚರಗೊಳಿಸಿದನು. ರಣದುರ್ಮದನಾದ, ಮಹಾತ್ಮನಾದ ಧೃಷ್ಟದ್ಯುಮ್ನನು ಅಶ್ವತ್ಥಾಮನ ಪಾದಸ್ಪರ್ಶವಾದೊಡನೆಯೇ ಎಚ್ಚರ ಗೊಂಡು ತನ್ನನ್ನು ಎಚ್ಚರಿಸಿದವನು ಮಹಾರಥನಾದ ಅಶ್ವತ್ಥಾಮನೆಂಬು

ದನ್ನು ತಿಳಿದುಕೊಂಡನು. ಒಡನೆಯೇ ಹಾಸಿಗೆಯಿಂದ ಮೇಲೇಳಲು ಧೃಷ್ಟದ್ಯುಮ್ನನು ಪ್ರಯತ್ನಿಸಿದನು. ಅಷ್ಟರಲ್ಲಿಯೇ ಮಹಾಬಲನಾದ ಅಶ್ವತ್ಥಾಮನು ತನ್ನೆರಡು ಕೈಗಳಿಂದಲೂ ಅವನ ತಲೆಗೂದಲನ್ನು ಹಿಡಿದು ಮೇಲೆತ್ತಿ ಅತ್ಯಂತರಭಸದಿಂದ ನೆಲಕ್ಕೆ ಅಪ್ಪಳಿಸಿದನು. ಬಲಪೂರ್ವಕವಾಗಿ ಅಶ್ವತ್ಥಾಮನಿಂದ ಅಪ್ಪಳಿಸಲ್ಪಟ್ಟ ಧೃಷ್ಟದ್ಯುಮ್ನನಿಗೆ ಭಯದ ಕಾರಣದಿಂದಲೂ ಮತ್ತು ನಿದ್ರೆಯ ಜಡರಿನಿಂದ ಕೂಡಿದ್ದುದರಿಂದಲೂ ಅಶ್ವತ್ಥಾಮನ ಹಿಡಿತದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲೇ ಇಲ್ಲ. ಆಗ ಅಶ್ವತ್ಥಾಮನು ಕೂಗಿಕೊಳ್ಳುತ್ತಿದ್ದ ಮತ್ತು ಚಡಪಡಿಸುತ್ತಿದ್ದ ಧೃಷ್ಟದ್ಯುಮ್ನನನ್ನು ಕೆಳಕ್ಕೆ ಬೀಳಿಸಿ ತನ್ನೆರಡು ಕಾಲುಗಳಿಂದಲೂ ಅವನ ಕಂಠವನ್ನೂ ಮತ್ತು ಎದೆಯನ್ನೂ ಮೆಟ್ಟಿಕೊಂಡು ಪಶುವನ್ನು ಕೊಲ್ಲುವಂತೆ ಕೊಲ್ಲಲು ಉಪಕ್ರಮಿಸಿದನು. ಆ ಸಮಯದಲ್ಲಿ ಧೃಷ್ಟದ್ಯುಮ್ನನು ತನ್ನ ಉಗುರುಗಳಿಂದಲೇ ಅಶ್ವತ್ಥಾಮನನ್ನು ಪರಚುತ್ತಾ ಅಸ್ಪಷ್ಟವಾಗಿ ಈ ಮಾತುಗಳನ್ನು ಹೇಳಿದನು.

ಆಚಾರ್ಯಪುತ್ರ ಶಸ್ತ್ರೇಣ ಜಹಿ ಮಾಂ ಮಾ ಚಿರಂ ಕೃಥಾಃ ।
ತ್ವತ್ಕೃತೇ ಸುಕೃತಾನ್ಲೋಕಾನ್ಗಚ್ಛೇಯಂ ದ್ವಿಪದಾಂ ವರ ॥೨೦॥

"ಮಾನವಶ್ರೇಷ್ಠನೇ! ಆಚಾರ್ಯಪುತ್ರ! ನನ್ನನ್ನು ಯಾವುದಾದರೂ ಶಸ್ತ್ರದಿಂದ ಕೂಡಲೇ ಸಂಹರಿಸು. ತಡಮಾಡಬೇಡ. ನೀನು ನನ್ನನ್ನು ಶಸ್ತ್ರದಿಂದ ಸಂಹರಿಸಿದ ಕಾರಣದಿಂದ ನಾನು ಪುಣ್ಯಲೋಕಗಳನ್ನು ಪಡೆದುಕೊಳ್ಳುತ್ತೇನೆ."

ಮಹಾರಾಜ! ಮಹಾಬಲಿಷ್ಠನಾದ ಅಶ್ವತ್ಥಾಮನಿಂದ ಆಕ್ರಮಿಸಲ್ಪಟ್ಟಿದ್ದ, ಶತ್ರುತಾಪಕನಾದ, ದ್ರುಪದನ ಮಗನು ಇಷ್ಟುಮಾತ್ರ ಹೇಳಿ ಸುಮ್ಮನಾದನು. ಧೃಷ್ಟದ್ಯುಮ್ನನು ಅವ್ಯಕ್ತವಾಗಿ ಹೇಳಿದ ಮಾತನ್ನು ಕೇಳಿದ ಅಶ್ವತ್ಥಾಮನು ಹೇಳಿದನು :

ಆಚಾರ್ಯಘಾತಿನಾಂ ಲೋಕಾ ನ ಸನ್ತಿ ಕುಲಪಾಂಸನ ।
ತಸ್ಮಾಚ್ಛಸ್ತ್ರೇಣ ನಿಧನಂ ನ ತ್ವಮರ್ಹಸಿ ದುರ್ಮತೇ ॥೨೧॥

"ಪಾಂಚಾಲಕುಲಕಳಂಕನೇ! ಆಚಾರ್ಯರನ್ನು ಸಂಹರಿಸಿದವರಿಗೆ

ಯಾವ ಪುಣ್ಯಲೋಕಗಳೂ ಇಲ್ಲ. ಆದುದರಿಂದ, ದುರ್ಮತಿಯೇ! ನೀನು ಶಸ್ತ್ರದಿಂದ ಮಾಡಲ್ಪಡುವ ವಧೆಗೆ ಅರ್ಹನಾಗಿರುವುದಿಲ್ಲ."

ಮಹಾರಾಜ! ಕ್ರುದ್ಧನಾದ ಅಶ್ವತ್ಥಾಮನು ಹೀಗೆ ಹೇಳುತ್ತಾ – ಮದಿಸಿದ



ಆನೆಯನ್ನು ಸಿಂಹವು ಸಂಹರಿಸುವಂತೆ – ಭಯಂಕರವಾಗಿ ಕಾಲಿನಿಂದಲೂ, ಮೊಣಕಾಲಿನಿಂದಲೂ, ಮಂಡಿಯಿಂದಲೂ ಧೃಷ್ಟದ್ಯುಮ್ನನ ಮರ್ಮಸ್ಥಳಗಳಲ್ಲಿ ಪ್ರಹರಿಸಿ ಸಂಹರಿಸಿದನು. ಪ್ರಾಣಬಿಡುವುದರಲ್ಲಿದ್ದ ಧೃಷ್ಟದ್ಯುಮ್ನನ ಆರ್ತನಾದದಿಂದ ಆ ಶಿಬಿರದಲ್ಲಿದ್ದ ಸ್ತ್ರೀಯರೂ ಮತ್ತು ರಕ್ಷಕರೂ ಎಚ್ಚರಗೊಂಡರು. ಅತಿಮಾನುಷವಾದ ಪರಾಕ್ರಮದಿಂದ ಕೂಡಿದ್ದ ಅಶ್ವತ್ಥಾಮನು ಧೃಷ್ಟದ್ಯುಮ್ನನನ್ನು ಪ್ರಹರಿಸುತ್ತಿರುವುದನ್ನು

ಕಂಡು ಸ್ತ್ರೀಯರೂ ಮತ್ತು ಅಂಗರಕ್ಷಕರೂ ಅಶ್ವತ್ಥಾಮನನ್ನು ಯಾವುದೋ ಭೂತವಿರಬಹುದೆಂದೇ ಬಗೆದು ಭಯದಿಂದ ಉದ್ವಿಗ್ನರಾಗಿ ಮಾತೇ ಹೊರಡದೆ ಸುಮ್ಮನಿದ್ದರು.

ತೇಜಸ್ವಿಯಾದ ಅಶ್ವತ್ಥಾಮನು ಆ ಉಪಾಯದಿಂದ ಧೃಷ್ಟದ್ಯುಮ್ನನನ್ನು ಯಮನ ಮನೆಗೆ ಕಳುಹಿಸಿ, ಶಿಬಿರದಿಂದ ಹೊರಟು ಸುಂದರವಾದ ತನ್ನ ರಥದ ಬಳಿಗೆ ಬಂದು ಅದರಲ್ಲಿ ಹತ್ತಿಕುಳಿತನು. ಅನಂತರ ಬಲಿಷ್ಠನಾದ ಅಶ್ವತ್ಥಾಮನು ಉಳಿದ ಶತ್ರುಗಳನ್ನೂ ಸಂಹರಿಸುವ ಇಚ್ಛೆಯಿಂದ ಧೃಷ್ಟದ್ಯುಮ್ನನ ಶಿಬಿರದಿಂದ ಹೊರಟು ರಥಚಕ್ರಗಳಿಂದ ಎಲ್ಲ ದಿಕ್ಕು ಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಾ ಮತ್ತೊಂದು ಶಿಬಿರವನ್ನು ಆಕ್ರಮಿಸಿದನು. ಮಹಾರಥನಾದ ದ್ರೋಣಪುತ್ರನು ಧೃಷ್ಟದ್ಯುಮ್ನನ ಶಿಬಿರದಿಂದ ಹೊರಟುಹೋದನಂತರ ಭಯದಿಂದ ಸ್ತಂಭೀಭೂತರಾಗಿದ್ದ ಸ್ತ್ರೀಯರೂ ಮತ್ತು ರಕ್ಷಕರೂ ಗಟ್ಟಿಯಾಗಿ ಅಳತೊಡಗಿದರು.

ತಮ್ಮ ರಾಜನು ಹತನಾದುದನ್ನು ನೋಡಿ ಧೃಷ್ಟದ್ಯುಮ್ನನ ಕ್ಷತ್ರಿಯ ಸೈನಿಕರು ಅತ್ಯಂತಶೋಕಾವಿಷ್ಟರಾಗಿ ವಿಲಪಿಸತೊಡಗಿದರು. ಸ್ತ್ರೀಯರ ರೋದನಶಬ್ದದಿಂದ ಸಮೀಪದಲ್ಲಿಯೇ ಇದ್ದ ಕ್ಷತ್ರಿಯಶ್ರೇಷ್ಠರು ಎಚ್ಚರಗೊಂಡು ಒಡನೆಯೇ ಕವಚಗಳನ್ನು ಧರಿಸಿ ಯುದ್ಧಸನ್ನದ್ಧರಾಗಿ ಇದೇನಿರಬಹುದೆಂದು ವಿಚಾರಿಸತೊಡಗಿದರು. ಅಶ್ವತ್ಥಾಮನನ್ನು ನೋಡಿ ಭಯಭೀತರಾಗಿದ್ದ ಆ ಸ್ತ್ರೀಯರು ದೀನಧ್ವನಿಯಿಂದ 'ಓಡಿಹೋಗಿರಿ! ಓಡಿಹೋಗಿರಿ!' ಎಂದು ಕೂಗಿಕೊಂಡರು.

**ರಾಕ್ಷಸೋ ವಾ ಮನುಷ್ಯೋ ವಾ ನೈನಂ ಜಾನೀಮಹೇ ವಯಮ್ ।**
**ಹತ್ವಾ ಪಾಞ್ಚಾಲರಾಜಾನಂ ರಥಮಾರುಹ್ಯ ತಿಷ್ಠತಿ ॥೩೨॥**

"ಕ್ಷತ್ರಿಯವೀರರೇ! ಅವನೇನು ರಾಕ್ಷಸನೋ ಅಥವಾ ಮನುಷ್ಯನೋ ಎಂಬುದೇ ನಮಗೆ ತಿಳಿಯದು. ಪಾಂಚಾಲರಾಜನಾದ ಧೃಷ್ಟದ್ಯುಮ್ನನನ್ನು ಸಂಹರಿಸಿ ಈಗ ಅವನು ರಥವನ್ನು ಹತ್ತಿ ಕುಳಿತಿದ್ದಾನೆ."

ಸ್ತ್ರೀಯರಾಡಿದ ಆ ಮಾತನ್ನು ಕೇಳಿದನಂತರ ಆ ಯೋಧಪ್ರಮುಖ ರೆಲ್ಲರೂ ಒಡನೆಯೇ ಅಶ್ವತ್ಥಾಮನನ್ನು ಆಕ್ರಮಿಸಿದರು. ತನ್ನ ಮೇಲೆ

ಬೀಳಲು ಬರುತ್ತಿದ್ದ ಆ ಪಾಂಚಾಲಯೋಧರೆಲ್ಲರನ್ನೂ ದ್ರೌಣಿಯು ರೌದ್ರಾಸ್ತ್ರದಿಂದ ಸಂಹರಿಸಿದನು. ಹೀಗೆ ಅಶ್ವತ್ಥಾಮನು ಧೃಷ್ಟದ್ಯುಮ್ನನನ್ನೂ ಮತ್ತು ಅವನ ಅನುಯಾಯಿಗಳನ್ನೂ ಸಂಹರಿಸಿದನಂತರ ಮತ್ತೊಂದು ಶಿಬಿರದೊಳಗೆ ಪ್ರವೇಶಿಸಿ ಅಲ್ಲಿ ಹಾಸಿಗೆಯೊಂದರಲ್ಲಿ ಮಲಗಿ ನಿದ್ರಿಸುತ್ತಿದ್ದ ಉತ್ತಮೌಜಸನನ್ನು ಸಮೀಪದಲ್ಲಿಯೇ ನೋಡಿದನು. ಒಡನೆಯೇ ದ್ರೌಣಿಯು ಅವನ ತಲೆಗೂದಲನ್ನು ಹಿಡಿದೆತ್ತಿ ನೆಲಕ್ಕಪ್ಪಳಿಸಿ ಪರಾಕ್ರಮದಿಂದ ಅವನ ಕಂಠವನ್ನೂ ಮತ್ತು ಎದೆಯನ್ನೂ ಎರಡು ಕಾಲುಗಳಿಂದಲೂ ಮೆಟ್ಟಿಕೊಂಡು ಧೃಷ್ಟದ್ಯುಮ್ನನನ್ನು ಸಂಹರಿಸಿದಂತೆಯೇ ದಾರುಣವಾಗಿ ಕೂಗಿಕೊಳ್ಳುತ್ತಿದ್ದ ಅರಿಂದಮನಾದ ಉತ್ತಮೌಜಸನನ್ನೂ ಸಂಹರಿಸಿದನು. ಉತ್ತಮೌಜಸನು ರಾಕ್ಷಸನಿಂದ ಹತನಾದನೆಂದು ತಿಳಿದ ಯುಧಾಮನ್ಯುವು ಗದೆಯನ್ನೆತ್ತಿಕೊಂಡು ವೇಗವಾಗಿ ಬಂದು ಅಶ್ವತ್ಥಾಮನ ಎದೆಯನ್ನು ಗದೆಯಿಂದ ಅಪ್ಪಳಿಸಿದನು. ಮರುಕ್ಷಣದಲ್ಲಿಯೇ ದ್ರೌಣಿಯು ಮುಂದೆ ಧಾವಿಸಿ ಯುಧಾಮನ್ಯುವನ್ನು ಹಿಡಿದೆಳೆದು ನೆಲದ ಮೇಲೆ ಬೀಳಿಸಿ ಪಶುವಿನಂತೆ ವಿಲಿ-ವಿಲಿಗುಟ್ಟುತ್ತಿದ್ದ ಅವನನ್ನೂ ಉತ್ತಮೌಜಸನನ್ನು ಸಂಹರಿಸಿದಂತೆಯೇ ಮಂಡಿ-ಮೊಣಕಾಲುಗಳಿಂದ ಗುದ್ದಿ ಸಾಯಿಸಿದನು. ವೀರನಾದ ಅಶ್ವತ್ಥಾಮನು ಹೀಗೆ ಯುಧಾಮನ್ಯುವನ್ನು ಸಂಹರಿಸಿ ಮಲಗಿದ್ದ ಇತರ ಮಹಾರಥರನ್ನೂ ಹಿಂದಿನಂತೆಯೇ ಆಕ್ರಮಿಸಿದನು. ಅವರೆಲ್ಲರೂ ನಿದ್ರೆಯ ಗುಂಗಿನಲ್ಲಿದ್ದುದರಿಂದ ಗಾಬರಿಗೊಂಡು ನಡುಗುತ್ತಿದ್ದರು ಮತ್ತು ಚಡಪಡಿಸುತ್ತಿದ್ದರು. ಯಜ್ಞದಲ್ಲಿ ಶಮಿತೃವು ಪಶುಗಳನ್ನು ಸಂಹರಿಸುವಂತೆ–ಅಶ್ವತ್ಥಾಮನು ಅವರೆಲ್ಲರನ್ನೂ ಸಂಹರಿಸಿದನು.

ಬಳಿಕ ಖಡ್ಗಯುದ್ಧವಿಶಾರದನಾದ ಅಶ್ವತ್ಥಾಮನು ಕೈಯಲ್ಲಿ ಖಡ್ಗವನ್ನು ಹಿಡಿದು ಶಿಬಿರದ ಒಂದೊಂದು ಭಾಗದಲ್ಲಿಯೂ ಪ್ರತ್ಯೇಕ-ಪ್ರತ್ಯೇಕವಾದ ಮಾರ್ಗಗಳಲ್ಲಿ (ಖಡ್ಗಯುದ್ಧದ ಕ್ರಮದಲ್ಲಿ) ಸಂಚರಿಸುತ್ತಾ ಅಲ್ಲಿ ಮಲಗಿದ್ದ ಎಲ್ಲ ಯೋಧರನ್ನೂ ಸಂಹರಿಸುತ್ತಿದ್ದನು. ಸೈನ್ಯಗಳ ಸಮೂಹದಲ್ಲಿ ಬಳಲಿ-ಬೆಂಡಾಗಿ ಆಯುಧಗಳನ್ನು ಕೆಳಗಿಟ್ಟು ನಿಶ್ಚಿಂತೆಯಿಂದ ಮಲಗಿ ನಿದ್ರಿಸುತ್ತಿದ್ದ ಮಧ್ಯಮವರ್ಗದ ಸೇನಾರಕ್ಷಕರನ್ನು ನೋಡಿದ ದ್ರೌಣಿಯು ಅವರೆಲ್ಲರನ್ನೂ ಕ್ಷಣಮಾತ್ರದಲ್ಲಿ ಕತ್ತಿಯಿಂದ ಸಂಹರಿಸಿದನು. ಕಾಲನಿಂದಲೇ

ಪ್ರಚೋದಿತನಾದ ಯಮರಾಜನಂತೆ–ರಕ್ತದಿಂದ ತೋಯ್ದುಹೋಗಿದ್ದ ಅಂಗಾಂಗಗಳಿಂದ ಕೂಡಿದ್ದ ಅಶ್ವತ್ಥಾಮನು ಶ್ರೇಷ್ಠವಾದ ಕತ್ತಿಯಿಂದ ಯೋಧರನ್ನೂ, ಕುದುರೆಗಳನ್ನೂ, ಆನೆಗಳನ್ನೂ ತುಂಡು-ತುಂಡುಗಳಾಗಿ ಕತ್ತರಿಸುತ್ತಿದ್ದನು. ಸತ್ತುಹೋಗುವುದರಲ್ಲಿದ್ದ ಯೋಧರು ಕೈಕಾಲುಗಳನ್ನು ಒದರುತ್ತಾ ಚಡಪಡಿಸುತ್ತಿದ್ದುದರಿಂದ, ಯೋಧರನ್ನು ಪ್ರಹರಿಸಲು ಕತ್ತಿಯನ್ನು ಮೇಲೆತ್ತುತ್ತಿದ್ದುದರಿಂದ ಮತ್ತು ಕತ್ತಿಯನ್ನು ಯೋಧರ ಅಂಗಾಂಗಗಳಲ್ಲಿ ಪ್ರಹರಿಸುತ್ತಿದ್ದುದರಿಂದ–ಈ ಮೂರು ಕಾರಣಗಳಿಂದ ಅಶ್ವತ್ಥಾಮನು ರಕ್ತಸ್ನಾನವನ್ನೇ ಮಾಡುತ್ತಿದ್ದನು. (ಅಶ್ವತ್ಥಾಮನು ಹತ್ತಿರ ದಲ್ಲಿಯೇ ನಿಂತು ಯೋಧರನ್ನು ಕತ್ತರಿಸುತ್ತಿದ್ದುದರಿಂದ ಅವರು ಪ್ರಾಣ ಸಂಕಟದಿಂದ ಹೊರಳಾಡುತ್ತಿದ್ದಾಗ ಅವರ ಶರೀರದಿಂದ ರಕ್ತವು ಚಿಮ್ಮಿ ಅಶ್ವತ್ಥಾಮನ ಮೇಲೆ ಬೀಳುತ್ತಿದ್ದಿತು. ಕತ್ತಿಯನ್ನು ಮೇಲೆತ್ತಿದ್ದಾಗ, ಹಿಂದೆ ಪ್ರಹರಿಸಿದಾಗ ಅಂಟಿಕೊಂಡಿದ್ದ ಪ್ರಾಣಿಗಳ ರಕ್ತವು ಅಶ್ವತ್ಥಾಮನ ಮೇಲೆ ತೊಟ್ಟಿಕ್ಕುತ್ತಿದ್ದಿತು. ಕತ್ತಿಯನ್ನು ತಿರುಗಿಸುತ್ತಾ ಅಂಗಾಂಗಗಳನ್ನು ಅದರಿಂದ ಪ್ರಹರಿಸುವಾಗ ಪ್ರಾಣಿಗಳ ಶರೀರದಿಂದ ರಕ್ತವು ಹೊರಹೊಮ್ಮಿ ಅಶ್ವತ್ಥಾಮನ ಮೇಲೆ ಬೀಳುತ್ತಿದ್ದಿತು. ಈ ಮೂರು ರೀತಿಗಳಲ್ಲಿಯೂ ಅಶ್ವತ್ಥಾಮನ ಮೇಲೆ ರಕ್ತವು ಸುರಿಯುತ್ತಿದ್ದು ಅವನು ರಕ್ತದಿಂದಲೇ ಸ್ನಾನಮಾಡುತ್ತಿರುವನೋ ಎಂಬಂತೆ ಕಾಣುತ್ತಿದ್ದನು.) ಶತ್ರುಗಳೊಡನೆ ಯುದ್ಧಮಾಡುತ್ತಿದ್ದ ಅಶ್ವತ್ಥಾಮನು ಆ ಸಮಯದಲ್ಲಿ ರಕ್ತಸ್ವರೂಪನೇ ಆಗಿಬಿಟ್ಟಿದ್ದನು. ಅವನ ಕೈಯಲ್ಲಿದ್ದ ಖಡ್ಗವೂ ರಕ್ತವರ್ಣದಿಂದ ಥಳ-ಥಳಿಸುತ್ತಿದ್ದಿತು. ಅವನ ಶರೀರವು ಅಮಾನುಷವಾದಂತೆ ಕಾಣುತ್ತಿದ್ದು ಅತ್ಯಂತ ಭಯಂಕರವಾಗಿ ಪ್ರಕಾಶಿಸುತ್ತಿದ್ದಿತು. ಎಚ್ಚರಗೊಂಡ ಯೋಧರೆಲ್ಲರೂ ಕೋಲಾಹಲಶಬ್ದಗಳಿಂದ ಕಿಂಕರ್ತವ್ಯತಾಮೂಢರಾಗಿದ್ದರು. ಪರಸ್ಪರವಾಗಿ ಒಬ್ಬರು ಮತ್ತೊಬ್ಬರನ್ನು ಶೂನ್ಯದೃಷ್ಟಿಯಿಂದ ನೋಡುತ್ತಿದ್ದರು. ಅಶ್ವತ್ಥಾಮನನ್ನೂ ಅವನು ಮಾಡುತ್ತಿದ್ದ ಭಯಂಕರವಾದ ಸಂಹಾರ ಕಾರ್ಯವನ್ನೂ ನೋಡಿ ಅವರೆಲ್ಲರೂ ವ್ಯಥಿತರಾದರು. ಶತ್ರುಸೂದನರಾದ ಆ ಕ್ಷತ್ರಿಯರು ಅಶ್ವತ್ಥಾಮನ ಘೋರರೂಪವನ್ನು ನೋಡಿ ಅವನೊಬ್ಬ ರಾಕ್ಷಸನೇ ಇರಬಹುದೆಂದು ನಿಶ್ಚಯಿಸಿ ಭಯದಿಂದ ಕಣ್ಣುಗಳನ್ನು ಮುಚ್ಚಿಕೊಳ್ಳು

ತ್ತಿದ್ದರು. ಘೋರರೂಪಿಯಾದ ಅಶ್ವತ್ಥಾಮನು ಕಾಲನಂತೆಯೇ ಶಿಬಿರದಲ್ಲಿ ಸಂಚರಿಸುತ್ತಿದ್ದಾಗ ದ್ರೌಪದಿಯ ಐವರು ಮಕ್ಕಳನ್ನೂ ಮತ್ತು ಹತಶೇಷರಾಗಿ ಉಳಿದಿದ್ದ ಸೋಮಕರನ್ನೂ ನೋಡಿದನು. ಕೋಲಾಹಲಶಬ್ದದಿಂದ ಭಯಗೊಂಡು ಎಚ್ಚೆತ್ತ ಮಹಾರಥರಾದ ದ್ರೌಪದಿಯ ಐವರು ಮಕ್ಕಳೂ ತಮ್ಮ ಸೋದರಮಾವನಾದ ಧೃಷ್ಟದ್ಯುಮ್ನನು ಹತನಾದನೆಂದು ತಿಳಿದೊಡನೆಯೇ ಧನುಷ್ಪಾಣಿಗಳಾಗಿ ಯುದ್ಧಸನ್ನದ್ಧರಾದರು.

ಸ್ವಲ್ಪವೂ ಭಯವೇ ಇಲ್ಲದವರಂತೆ ದ್ರೌಪದೇಯರು ಬಾಣಗಳ ಸಮೂಹಗಳಿಂದ ಅಶ್ವತ್ಥಾಮನನ್ನು ಕವಿದುಬಿಟ್ಟರು. ಭಯಂಕರವಾದ ಆ ಕೋಲಾಹಲಶಬ್ದಗಳಿಂದ ಎಚ್ಚರಗೊಂಡ ಪ್ರಭದ್ರಕರೂ ಮತ್ತು ಶಿಖಂಡಿಯೂ ಬಾಣಗಳಿಂದ ದ್ರೋಣಪುತ್ರನನ್ನು ಪ್ರಹರಿಸತೊಡಗಿದರು. ತನ್ನ ಮೇಲೆ ಸತತವಾಗಿ ಬಾಣಗಳ ಮಳೆಗರೆಯುತ್ತಿದ್ದ ದ್ರೌಪದೇಯರನ್ನೂ, ಪ್ರಭದ್ರಕರನ್ನೂ ಮತ್ತು ಶಿಖಂಡಿಯನ್ನೂ ನೋಡಿ ಆ ಮಹಾರಥರೆಲ್ಲರನ್ನೂ ಸಂಹರಿಸುವ ಇಚ್ಛೆಯುಳ್ಳವನಾಗಿದ್ದ ಅಶ್ವತ್ಥಾಮನು ಗಟ್ಟಿಯಾಗಿ ಸಿಂಹನಾದ ವನ್ನು ಮಾಡಿದನು. ಪರಮಕ್ರುದ್ಧನಾಗಿದ್ದ ಅಶ್ವತ್ಥಾಮನು ತಂದೆಯ ವಧೆಯನ್ನು ಸ್ಮರಿಸಿಕೊಳ್ಳುತ್ತಾ ರಥದ ಆಸನದಿಂದ ಕೆಳಗಿಳಿದು, ಸಹಸ್ರ ಚಂದ್ರರ ಚಿಹ್ನೆಗಳಿಂದ ಕೂಡಿದ್ದ ವಿಮಲವಾಗಿದ್ದ ಗುರಾಣಿಯನ್ನೂ–ಸುವರ್ಣವಿಭೂಷಿತವಾಗಿದ್ದ, ದಿವ್ಯವಾಗಿದ್ದ ಮತ್ತು ನಿರ್ಮಲವಾಗಿದ್ದ ಕತ್ತಿಯನ್ನೂ ಹಿಡಿದು ದ್ರೌಪದೇಯರ ಕಡೆಗೆ ಧಾವಿಸಿದನು. ಬಲಿಷ್ಠನಾದ ಅಶ್ವತ್ಥಾಮನು ದ್ರೌಪದೇಯರನ್ನು ಆಕ್ರಮಿಸಿ ಆ ಮಹಾಯುದ್ಧದಲ್ಲಿ ಪ್ರತಿವಿಂಧ್ಯನ ಹೊಟ್ಟೆಯಲ್ಲಿ ಕತ್ತಿಯಿಂದ ತಿವಿದು ಅವನನ್ನು ಸಂಹರಿಸಿದನು. ಪ್ರತಿವಿಂಧ್ಯನು ಹತನಾಗಿ ಕೆಳಗೆ ಬಿದ್ದಬಳಿಕ ಪ್ರತಾಪವಂತನಾದ ಸುತ ಸೋಮನು ಅಶ್ವತ್ಥಾಮನನ್ನು ಪ್ರಾಸಾಯುಧದಿಂದ ಪ್ರಹರಿಸಿ ಪುನಃ ಕತ್ತಿ ಯನ್ನೆತ್ತಿಕೊಂಡು ದ್ರೋಣಪುತ್ರನ ಬಳಿಗೆ ಧಾವಿಸಿದನು. ಅಶ್ವತ್ಥಾಮನು ಕತ್ತಿಯಿಂದ ಯುಕ್ತವಾಗಿದ್ದ ಸುತಸೋಮನ ತೋಳನ್ನೇ ಕತ್ತರಿಸಿ ಪುನಃ ಅವನ ಪಕ್ಕೆಯನ್ನೂ ಖಡ್ಗದಿಂದ ಪ್ರಹರಿಸಿದನು. ಅದರಿಂದ ಸುತಸೋಮನ ಎದೆಯೊಡೆದು ಅವನೂ ಕೆಳಗುರುಳಿದನು. ಅನಂತರ ನಕುಲನ ಮಗನಾದ, ವೀರ್ಯವಂತನಾದ ಶತಾನೀಕನು ತನ್ನೆರಡು ಭುಜಗಳಿಂದಲೂ ರಥಚಕ್ರವನ್ನು

ಮೇಲೆತ್ತಿ ಅತ್ಯಂತ ರಭಸದಿಂದ ಅಶ್ವತ್ಥಾಮನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಶತಾನೀಕನ ರಥಚಕ್ರದ ಪ್ರಹಾರವನ್ನು ತಪ್ಪಿಸಿಕೊಂಡ ಅಶ್ವತ್ಥಾಮನು ಕೈಯಲ್ಲಿದ್ದ ಕತ್ತಿಯಿಂದ ಚಕ್ರವನ್ನು ಬಿಟ್ಟ ಶತಾನೀಕನನ್ನು ಪ್ರಹರಿಸಿದನು. ವಿಹ್ವಲನಾಗಿ ಭೂಮಿಯ ಮೇಲೆ ಬಿದ್ದ ನಾಕುಲಿಯ ತಲೆಯನ್ನು ಅಶ್ವತ್ಥಾಮನು ಕತ್ತರಿಸಿದನು. ಅನಂತರ ಶ್ರುತಕರ್ಮನು ಪರಿಘಾಯುಧವನ್ನೆತ್ತಿಕೊಂಡು ಅಶ್ವತ್ಥಾಮನನ್ನು ಅಟ್ಟಿಸಿಕೊಂಡು ಹೋಗಿ ಗುರಾಣಿಯನ್ನು ಹಿಡಿದಿದ್ದ ಅವನ ಎಡಗೈಯನ್ನು ಬಲವಾಗಿ ಪ್ರಹರಿಸಿದನು. ಅಶ್ವತ್ಥಾಮನು ಆ ಪ್ರಹಾರವನ್ನು ಲೆಕ್ಕಿಸದೇ ಶ್ರೇಷ್ಠವಾದ ಕತ್ತಿಯಿಂದ ಶ್ರುತಕರ್ಮನ ಮುಖದಲ್ಲಿ ಪ್ರಹರಿಸಿದನು. ಆದರಿಂದ ಶ್ರುತಕರ್ಮನು ವಿಕಾರಹೊಂದಿದ ಮುಖದಿಂದ ಕೂಡಿದವನಾಗಿ ಎಚ್ಚರದಪ್ಪಿ ಭೂಮಿಯಲ್ಲಿ ಬಿದ್ದು ಅಸುನೀಗಿದನು. ಆ ಕೋಲಾಹಲಶಬ್ದವನ್ನು ಕೇಳಿ ವೀರನಾದ, ಮಹಾರಥನಾದ ಶ್ರುತಕೀರ್ತಿಯು ಅಶ್ವತ್ಥಾಮನ ಬಳಿಗೆ ಬಂದು ಅವನನ್ನು ಬಾಣಗಳ ಸಮೂಹದಿಂದ ಮುಚ್ಚಿದನು. ಅಶ್ವತ್ಥಾಮನು ಶ್ರುತಕೀರ್ತಿಯ ಬಾಣವರ್ಷವನ್ನು ಗುರಾಣಿಯಿಂದಲೇ ನಿವಾರಣೆಮಾಡಿಕೊಳ್ಳುತ್ತಾ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿದ್ದ, ಕುಂಡಲಗಳಿಂದ ಯುಕ್ತವಾಗಿದ್ದ ಶ್ರುತಕೀರ್ತಿಯ ಶಿರಸ್ಸನ್ನು ಶರೀರದಿಂದ ಪ್ರತ್ಯೇಕಗೊಳಿಸಿದನು. ಅನಂತರ ಭೀಷ್ಮಹಂತಕನಾದ, ಬಲಿಷ್ಠನಾದ ಶಿಖಂಡಿಯು ಎಲ್ಲ ಪ್ರಭದ್ರಕರಿಂದ ಕೂಡಿಕೊಂಡು ನಾನಾವಿಧವಾದ ಆಯುಧಗಳಿಂದ ವೀರನಾದ ಅಶ್ವತ್ಥಾಮನನ್ನು ಎಲ್ಲ ಕಡೆಗಳಿಂದಲೂ ಪ್ರಹರಿಸತೊಡಗಿದನು. ಮತ್ತೊಂದು ನಿಶಿತವಾದ ಬಾಣದಿಂದ ಅಶ್ವತ್ಥಾಮನ ಹುಬ್ಬುಗಳ ನಡುವೆ ಪ್ರಹರಿಸಿದನು. ಕ್ರೋಧಾಭಿಭೂತನಾಗಿದ್ದ, ಮಹಾಬಲಿಷ್ಠನಾಗಿದ್ದ ಅಶ್ವತ್ಥಾಮನು ಶಿಖಂಡಿಯ ಬಳಿಗೆ ಬಂದು ಅವನನ್ನು ಎರಡು ಭಾಗವಾಗಿ ಕತ್ತರಿಸಿಬಿಟ್ಟನು. ಹೀಗೆ ಶಿಖಂಡಿಯನ್ನು ಸಂಹರಿಸಿ ಕೋಪಾವಿಷ್ಟನಾಗಿದ್ದ, ಶತ್ರುತಾಪಕನಾದ, ವೇಗವಂತನಾದ ಅಶ್ವತ್ಥಾಮನು ಪ್ರಭದ್ರಕರನ್ನೂ ಆಕ್ರಮಿಸಿದನು. ಅಂತೆಯೇ ವಿರಾಟನ ಅಳಿದುಳಿದಿದ್ದ ಸೈನ್ಯವನ್ನೂ ಬಹಳ ಬೇಗ ಆಕ್ರಮಿಸಿದನು. ಮಹಾಬಲನಾದ ಅಶ್ವತ್ಥಾಮನು ಎಲ್ಲ ಕಡೆಗಳಲ್ಲಿಯೂ ಹುಡುಕಿ-ಹುಡುಕಿ ದ್ರುಪದರಾಜನ ಮಕ್ಕಳನ್ನೂ, ಮೊಮ್ಮಕ್ಕಳನ್ನೂ, ಸುಹೃದರನ್ನೂ

ಸಂಹರಿಸಿದನು. ಕತ್ತಿಯನ್ನು ವರಸೆ-ವರಸೆಯಾಗಿ ತಿರುಗಿಸುತ್ತಾ ಖಡ್ಗ ಯುದ್ಧಮಾಡುವುದರಲ್ಲಿ ಅತ್ಯಂತಕುಶಲನಾಗಿದ್ದ ಅಶ್ವತ್ಥಾಮನು ಬೇರೆ-ಬೇರೆ ಯೋಧರ ಬಳಿಗೂ ಹೋಗಿ ನಿದ್ರಿಸುತ್ತಿದ್ದ ಅವರೆಲ್ಲರನ್ನೂ ಕತ್ತಿಯಿಂದ ಕತ್ತರಿಸಿಹಾಕುತ್ತಿದ್ದನು.

**ಕಾಲೀಂ ರಕ್ತಾಸ್ಯನಯನಾಂ ರಕ್ತಮಾಲ್ಯಾನುಲೇಪನಾಮ್ ।**
**ರಕ್ತಾಮ್ಬರಧರಾಮೇಕಾಂ ಪಾಶಹಸ್ತಾಂ ಕುಟುಮ್ಬಿನೀಮ್ ॥೬೯॥**

**ದದೃಶುಃ ಕಾಲರಾತ್ರಿಂ ತೇ ಗಾಯಮಾನಾಮವಸ್ಥಿತಾಮ್ ।**
**ನರಾಶ್ವಕುಞ್ಜರಾನ್ಪಾಶೈರ್ಬಧ್ವಾ ಘೋರೈಃ ಪ್ರತಸ್ಥುಷೀಮ್ ॥೭೦॥**

ಆ ಸಮಯದಲ್ಲಿ ಪಾಂಡವಪಕ್ಷದ ಯೋಧರು ಮೂರ್ತಿಮತ್ತಾದ ಕಾಳರಾತ್ರಿಯನ್ನೇ ಸ್ವಪ್ನದಲ್ಲಿ ನೋಡಿದರು. ಅವಳು ಕಪ್ಪಾಗಿದ್ದಳು. ಮುಖ-ನೇತ್ರಗಳು ಕೆಂಪಾಗಿದ್ದುವು. ಕೆಂಪುಹೂಗಳ ಮಾಲೆಯನ್ನು ಧರಿಸಿದ್ದಳು. ರಕ್ತಚಂದನವನ್ನು ಲೇಪಿಸಿಕೊಂಡಿದ್ದಳು. ಕೆಂಪಾದ ವಸ್ತ್ರವನ್ನುಟ್ಟಿದ್ದಳು. ಏಕಾಕಿನಿಯಾಗಿದ್ದಳು. ಪಾಶವನ್ನು ಹಿಡಿದಿದ್ದಳು. ತನ್ನ ಸಖೀಜನರಿಂದ ಪರಿವೃತಳಾಗಿದ್ದಳು. ಗಾಯನಮಾಡುತ್ತಿದ್ದಳು. ಗಜಾಶ್ವ-ಮಾನವರನ್ನು ಘೋರವಾದ ಪಾಶಗಳಿಂದ ಬಂಧಿಸಿ ಎಳೆದುಕೊಂಡು ಹೋಗುತ್ತಿದ್ದಳು.

**ವಹನ್ತೀಂ ವಿವಿಧಾನ್ಪ್ರೇತಾನ್ಪಾಶಬದ್ಧಾನ್ವಿಮೂರ್ಧಜಾನ್ ।**
**ತಥೈವ ಚ ಸದಾ ರಾಜನ್ನ್ಯಸ್ತಶಸ್ತ್ರಾನ್ಮಹಾರಥಾನ್ ॥೭೧॥**

**ಸ್ವಪ್ನೇ ಸುಪ್ತಾನ್ನಯನ್ತೀಂ ತಾಂ ರಾತ್ರಿಷ್ವನ್ಯಾಸು ಮಾರಿಷ ।**
**ದದೃಶುರ್ಯೋಧಮುಖ್ಯಾಸ್ತೇ ಘ್ನನ್ತಂ ದ್ರೌಣಿಂ ಚ ಸರ್ವದಾ ॥೭೨॥**

ಪಾಂಡವರ ಕಡೆಯ ಮುಖ್ಯ-ಮುಖ್ಯಯೋಧರು ಹಿಂದಿನ ರಾತ್ರಿಗಳಲ್ಲಿಯೂ ತಮ್ಮ ಸ್ವಪ್ನದಲ್ಲಿ ಆ ಕಾಳರಾತ್ರಿಯನ್ನು ಕಾಣುತ್ತಲೇ ಇದ್ದರು. ಕೇಶದಿಂದ ವಿಹೀನವಾದ ಅನೇಕಪ್ರೇತಗಳನ್ನು ಕೈಯ್ಯಲ್ಲಿದ್ದ ಪಾಶಗಳಿಂದ ಬಂಧಿಸಿ ಕಾಳರಾತ್ರಿಯು ಸೆಳೆದುಕೊಂಡು ಹೋಗುತ್ತಿದ್ದುದನ್ನು ನೋಡುತ್ತಿದ್ದರು. ಶಸ್ತ್ರಗಳನ್ನು ಕೆಳಗಿಟ್ಟು ಮಲಗಿರುತ್ತಿದ್ದ ಮಹಾ ರಥರನ್ನೂ ಸೆಳೆದುಕೊಂಡು ಹೋಗುತ್ತಿದ್ದುದನ್ನು ಯೋಧಪ್ರಮುಖರು

ಸ್ವಪ್ನದಲ್ಲಿ ಕಾಣುತ್ತಿದ್ದರು. ಅಂತೆಯೇ ಅವರು ಅಶ್ವತ್ಥಾಮನು ಎಲ್ಲ ಯೋಧರನ್ನೂ ಸಂಹರಿಸುತ್ತಿದ್ದ ಭಯಂಕರದೃಶ್ಯವನ್ನೂ ಸ್ವಪ್ನದಲ್ಲಿ ಕಾಣುತ್ತಿದ್ದರು.

**ಯತಃ ಪ್ರಭೃತಿ ಸಂಗ್ರಾಮಃ ಕುರುಪಾಣ್ಡವಸೇನಯೋಃ ।**
**ತತಃ ಪ್ರಭೃತಿ ತಾಂ ಕನ್ಯಾಮಪಶ್ಯನ್ದ್ರೌಣಿಮೇವ ಚ ॥೭೩॥**

**ತಾಂಸ್ತು ದೈವಹತಾನ್ಪೂರ್ವಂ ಪಶ್ಚಾದ್ದ್ರೌಣಿರ್ವ್ಯಪಾತಯತ್ ।**
**ತ್ರಾಸಯನ್ಸರ್ವಭೂತಾನಿ ವಿನದನ್ಭೈರವಾನ್ರವಾನ್ ॥೭೪॥**

ಕುರು-ಪಾಂಡವಸೈನಿಕರ ನಡುವೆ ಎಂದು ಯುದ್ಧವು ಪ್ರಾರಂಭವಾಯಿತೋ ಅಂದಿನಿಂದಲೂ ಪಾಂಡವಯೋಧಪ್ರಮುಖರು ಸ್ವಪ್ನದಲ್ಲಿ ಕನ್ಯೆಯಾದ ಕಾಳರಾತ್ರಿಯನ್ನೂ ಮತ್ತು ಅಶ್ವತ್ಥಾಮನನ್ನೂ ಕಾಣುತ್ತಲೇ ಇದ್ದರು. ದೈವದಿಂದ ಮೊದಲೇ ಹತರಾಗಿಹೋಗಿದ್ದ ಪಾಂಚಾಲ-ಪ್ರಭದ್ರಕಯೋಧರನ್ನು ಅನಂತರ ಅಶ್ವತ್ಥಾಮನು ನಿಮಿತ್ತಮಾತ್ರನಾಗಿ ಸಂಹರಿಸಿದನು. ಎಲ್ಲ ಪ್ರಾಣಿಗಳನ್ನೂ ತನ್ನ ಘೋರವಾದ ರೂಪದಿಂದ ಭಯಪಡಿಸುತ್ತಾ ಭಯಂಕರವಾಗಿ ಗರ್ಜನೆಮಾಡುತ್ತಾ ಸಂಹರಿಸಿದನು. ದೈವೋಪಹತರಾದ ಆ ವೀರರು ತಮಗೆ ಹಿಂದಿನ ದಿನಗಳಲ್ಲಾದ ಸ್ವಪ್ನವನ್ನು ಸ್ಮರಿಸಿಕೊಳ್ಳುತ್ತಾ 'ಆ ಸ್ವಪ್ನವೇ ಇಂದು ನಿಜವಾಗಿದೆ'–ಎಂದು ಭಾವಿಸಿದರು. ಆ ಮಹಾಕೋಲಾಹಲಧ್ವನಿಯಿಂದ ಪಾಂಡವರ ಶಿಬಿರದಲ್ಲಿ ಮಲಗಿದ್ದ ನೂರಾರು-ಸಾವಿರಾರು ಧನುರ್ಧಾರಿಗಳಾದ ಯೋಧರು ಎಚ್ಚರಗೊಂಡರು. ಕಾಲಪ್ರೇರಿತನಾದ ಯಮನಂತೆ–ಅಶ್ವತ್ಥಾಮನು ನಿರಾಯುಧರಾಗಿದ್ದ ಆ ಯೋಧರಲ್ಲಿ ಒಬ್ಬನ ಕಾಲುಗಳನ್ನೇ ಕತ್ತರಿಸಿದನು. ಮತ್ತೊಬ್ಬನ ಸೊಂಟದ ಮುಂಭಾಗವನ್ನೇ ತುಂಡರಿಸಿದನು. ಮಗದೊಬ್ಬನ ಪಕ್ಕೆಯ ಎಲುಬುಗಳನ್ನೇ ಮುರಿದುಹಾಕಿದನು. ಭಯಂಕರವಾದ ರೀತಿಯಲ್ಲಿ ಮರ್ದಿಸಿ ಉಂಡೆಯಾಗಿ ಮಾಡಲ್ಪಟ್ಟಿದ್ದ ಯೋಧರಿಂದಲೂ, ಭಯೋನ್ಮತ್ತರಾಗಿ ಕಿರುಚಿಕೊಳ್ಳುತ್ತಿದ್ದವರಿಂದಲೂ ಮತ್ತು ಆನೆ-ಕುದುರೆಗಳ ತುಳಿತಗಳಿಂದ ಮಥಿತರಾದ ಯೋಧರಿಂದಲೂ ಶಿಬಿರದ ಭೂಪ್ರದೇಶವು ವ್ಯಾಪ್ತವಾಗಿದ್ದಿತು. ನಿದ್ರೆಯಲ್ಲಿದ್ದಾಗ ಶಸ್ತ್ರ-ಖಡ್ಗಪ್ರಹಾರಗಳಿಂದ ಗಾಯಗೊಂಡು

ಪ್ರಾಣೋತ್ಕ್ರಮಣಾವಸ್ಥೆಯಲ್ಲಿ ನರಳುತ್ತಿದ್ದ ಪಾಂಡವಯೋಧರು ‘ಅಯ್ಯೋ! ಇದೇನಿದು? ರಾತ್ರಿಯಲ್ಲಿ ಕತ್ತಿಯನ್ನು ಹಿಡಿದು ನಮ್ಮೆಲ್ಲರನ್ನೂ ಕತ್ತರಿಸುತ್ತಿರುವ ಇವನಾರು? ಎಲ್ಲ ಕಡೆಗಳಿಂದಲೂ ಅವ್ಯಾಹತವಾಗಿ ಬರುತ್ತಿರುವ ಈ ಘೋರಶಬ್ದವು ಯಾವುದು? ಇವನೇನು ಮಾಡುತ್ತಿರುವನು?’–ಇವೇ ಮುಂತಾಗಿ ಹೇಳಿಕೊಂಡು ಕಿರುಚಿಕೊಳ್ಳುತ್ತಿದ್ದರು. ಹೀಗೆ ಅವರೆಲ್ಲರಿಗೂ ಅಶ್ವತ್ಥಾಮನು ಸಾಕ್ಷಾತ್ ಯಮರಾಜನೇ ಆದನು. ಅಸ್ತ್ರ-ಶಸ್ತ್ರಗಳನ್ನು ತೆಗೆದಿಟ್ಟು, ಕವಚಗಳನ್ನು ಬಿಚ್ಚಿಟ್ಟಿದ್ದ ಮತ್ತು ಕವಚಾಯುಧಗಳಿಂದ ಸಹಿತರಾಗಿಯೂ ಇದ್ದ ಪಾಂಡು-ಸೃಂಜಯಯೋಧರನ್ನು, ಪ್ರಹರಿಸುವವರಲ್ಲಿ ಶ್ರೇಷ್ಠನಾದ ಅಶ್ವತ್ಥಾಮನು ಮೃತ್ಯುಲೋಕಕ್ಕೆ ಕಳುಹಿಸಿಕೊಟ್ಟನು.

ನಿದ್ರೆಯಿಂದ ಅಂಧಪ್ರಾಯರಾಗಿದ್ದ, ಮತಿಗೆಟ್ಟವರಂತಿದ್ದ ಯೋಧರು ಘೋರವಾದ ಆ ಕೋಲಾಹಲಶಬ್ದವನ್ನು ಕೇಳಿ ಭಯಗೊಂಡು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹಾರುತ್ತಾ ಭಯಪೀಡಿತರಾಗಿ ಅಲ್ಲಲ್ಲಿಯೇ ಅವಿತಿಟ್ಟುಕೊಳ್ಳುತ್ತಿದ್ದರು. ಕೆಲವರ ತೊಡೆಗಳು ನಿಶ್ಚಲವಾದಂತಾಗಿ ಅವರ ಕಾಲುಗಳು ಬಗ್ಗಿಸಲು ಸಾಧ್ಯವಾಗದೇ ಸೆಟೆದುಕೊಂಡಿದ್ದುವು. ಮೋಹಪರವಶತೆಯಿಂದಾಗಿ ಅವರ ಬಲೋತ್ಸಾಹಗಳು ಉಡುಗಿಹೋಗಿದ್ದುವು. ಬಹಳ ಭಯಗೊಂಡು ಅವರೆಲ್ಲರೂ ಗಟ್ಟಿಯಾಗಿ ಕೂಗಿಕೊಳ್ಳುತ್ತಾ ಒಬ್ಬರನ್ನೊಬ್ಬರು ಅಪ್ಪಿಕೊಳ್ಳುತ್ತಿದ್ದರು.

ಪುನಃ ಅಶ್ವತ್ಥಾಮನು ಭಯಂಕರವಾದ ಶಬ್ದದಿಂದ ಕೂಡಿದ್ದ ರಥವನ್ನು ಹತ್ತಿ ಧನುಷ್ಪಾಣಿಯಾಗಿ ಬೇರೆಯ ಯೋಧರನ್ನೂ ಬಾಣಗಳ ಮೂಲಕವಾಗಿ ಯಮನ ಮನೆಗೆ ಕಳುಹಿಸಿಕೊಟ್ಟನು. ಪ್ರಾಣವನ್ನುಳಿಸಿಕೊಳ್ಳಲು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹಾರುತ್ತಿದ್ದ ಯೋಧರನ್ನೂ, ತನ್ನ ಮೇಲೆ ಬೀಳಲು ಬರುತ್ತಿದ್ದ ಇತರ ಶೂರಯೋಧರನ್ನೂ, ಅವರೆಷ್ಟೇ ದೂರದಲ್ಲಿದ್ದರೂ ಒಬ್ಬರನ್ನೂ ಬಿಡದೇ ಸಂಹರಿಸಿ ಕಾಳರಾತ್ರಿಗೆ ಅರ್ಪಿಸಿಬಿಡುತ್ತಿದ್ದನು. ಅದೇ ರೀತಿಯಲ್ಲಿ ರಥದ ಅಗ್ರಭಾಗದಲ್ಲಿಯೇ

ನಿಂತು ಶತ್ರುಗಳನ್ನು ಮರ್ದಿಸುತ್ತಿದ್ದನು. ಎಲ್ಲೆಡೆಗಳಲ್ಲಿಯೂ ಸಂಚರಿಸುತ್ತಾ ವಿಧ-ವಿಧವಾದ ಬಾಣಗಳ ವರ್ಷಗಳಿಂದಲೂ ಶತ್ರುಯೋಧರನ್ನು ಮುಚ್ಚಿಬಿಡುತ್ತಿದ್ದನು. ಮತ್ತೊಮ್ಮೆ ದ್ರೌಣಿಯು ನೂರು ಚಂದ್ರರ ಚಿಹ್ನೆಗಳಿಂದ ಕೂಡಿದ್ದ ವಿಚಿತ್ರವಾದ ಗುರಾಣಿಯನ್ನೂ ಆಕಾಶವರ್ಣದಿಂದ ಕೂಡಿದ್ದ (ಸುವಿಮಲವಾಗಿದ್ದ) ಕತ್ತಿಯನ್ನೂ ಹಿಡಿದು ಎಲ್ಲ ಕಡೆಗಳಲ್ಲಿಯೂ ಸಂಚರಿಸತೊಡಗಿದನು. ಆನೆಯು ಮಹಾಸರೋವರವನ್ನು ಅಲ್ಲೋಲ-ಕಲ್ಲೋಲಗೊಳಿಸುವಂತೆ–ಯುದ್ಧದುರ್ಮದನಾದ ಅಶ್ವತ್ಥಾಮನು ಪಾಂಡವರ ಶಿಬಿರವನ್ನು ಅಲ್ಲೋಲ-ಕಲ್ಲೋಲಗೊಳಿಸಿಬಿಟ್ಟನು. ನಿದ್ರೆಯಿಂದ ಪೀಡಿತರಾಗಿದ್ದ ಮತ್ತು ಅನೇಕದಿವಸಗಳಿಂದಲೂ ಸರಿಯಾಗಿ ನಿದ್ರೆಯಿಲ್ಲದೇ ಬುದ್ಧಿಗೆಟ್ಟಿದ್ದ ಯೋಧರು ಆ ಕೋಲಾಹಲಶಬ್ದದಿಂದ ಎಚ್ಚರಗೊಂಡು ಮಲಗಿದ್ದ ಸ್ಥಳದಿಂದ ಮೇಲಕ್ಕೆ ಹಾರುತ್ತಿದ್ದರು. ಭಯಪೀಡಿತರಾಗಿ ಇಲ್ಲಿಂದಲ್ಲಿಗೂ-ಅಲ್ಲಿಂದಿಲ್ಲಿಗೂ ಓಡಾಡುತ್ತಿದ್ದರು. ಕೆಲವು ಯೋಧರು ವಿಕಾರವಾದ ರೀತಿಯಲ್ಲಿ ಕೂಗಿಕೊಳ್ಳುತ್ತಾ ಬಾಯಿಗೆ ಬಂದುದನ್ನು ಸರಿ-ತಪ್ಪೆಂಬ ವಿವೇಚನೆಯಿಲ್ಲದೆಯೇ ಒದರುತ್ತಿದ್ದರು. ಅವರಿಗೆ ಯುದ್ಧಮಾಡಲು ಶಸ್ತ್ರಗಳಾಗಲೀ ಕವಚಗಳಾಗಲೀ ಸಿಕ್ಕುತ್ತಲೇ ಇರಲಿಲ್ಲ. ಕೆಲವು ಯೋಧರು ತಲೆಗೆದರಿಕೊಂಡಿದ್ದರು. ಆ ಸಮಯದಲ್ಲಿ ಯಾರೂ ಯಾರನ್ನೂ ಗುರುತಿಸಲು ಸಾಧ್ಯವಾಗುತ್ತಿರಲಿಲ್ಲ. ಕೆಲವರು ಮೇಲಕ್ಕೆ ಹಾರಿ ಕೆಳಕ್ಕೆ ಬೀಳುತ್ತಿದ್ದರು. ಬಹಳವಾಗಿ ಬಳಲಿದ್ದ ಕೆಲವರು ಅಲ್ಲಿಯೇ ಮಂಡಲಾಕಾರವಾಗಿ ಸುತ್ತುತ್ತಿದ್ದರು. ಕೆಲವು ಯೋಧರು ಭಯದಿಂದ ಮಲವಿಸರ್ಜನೆಯನ್ನೇ ಮಾಡುತ್ತಿದ್ದರು. ಕೆಲವರು ಮೂತ್ರವಿಸರ್ಜನೆಯನ್ನು ಮಾಡುತ್ತಿದ್ದರು. ಆನೆಗಳೂ ಮತ್ತು ಕುದುರೆಗಳೂ ಕಟ್ಟಿದ್ದ ಹಗ್ಗಗಳನ್ನು ಕಡಿದುಕೊಂಡು ಒಂದುಗೂಡಿ ಓಡಿಹೋಗುತ್ತಾ ಯೋಧರಿಗೆ ಬಹಳ ವ್ಯಾಕುಲವನ್ನುಂಟುಮಾಡುತ್ತಿದ್ದುವು. ಅಲ್ಲಿದ್ದ ಕೆಲವು ಯೋಧರು ಭಯಗೊಂಡು ನೆಲದಲ್ಲಿಯೇ ಹುದುಗಿಕೊಳ್ಳುತ್ತಿದ್ದರು. ಹಾಗೆ ಬಚ್ಚಿಟ್ಟುಕೊಂಡಿರುತ್ತಿದ್ದ ಯೋಧರನ್ನು ಆನೆ-ಕುದುರೆಗಳು ತುಳಿದು ಧ್ವಂಸಮಾಡುತ್ತಿದ್ದುವು. ಅಶ್ವತ್ಥಾಮನ ಸಂಹಾರಕಾರ್ಯವು ಹೀಗೆ ನಡೆಯುತ್ತಿರಲಾಗಿ, ದುಷ್ಟರಾದ ರಾಕ್ಷಸರು ಅತ್ಯಾನಂದದಿಂದ ಗರ್ಜನೆಮಾಡುತ್ತಿದ್ದರು. ಆನಂದ

ಭರಿತವಾಗಿದ್ದ ಆ ಭೂತ-ಪ್ರೇತ-ಪಿಶಾಚಿಗಳಿಂದ ಮಾಡಲ್ಪಟ್ಟ ಮಹಾ ಗರ್ಜನೆಯ ಕೋಲಾಹಲಶಬ್ದವು ಎಲ್ಲ ದಿಕ್ಕುಗಳಲ್ಲಿಯೂ ಮತ್ತು ಆಕಾಶ ದಲ್ಲಿಯೂ ತುಂಬಿಕೊಂಡಿತು. ಅಶ್ವತ್ಥಾಮನ ಖಡ್ಗಕ್ಕೆ ಲಕ್ಷ್ಯರಾಗಿ ಅಸು ನೀಗುತ್ತಿದ್ದ ಯೋಧರ ಆರ್ತನಾದಗಳನ್ನು ಕೇಳಿ ಭಯಗೊಂಡ ಆನೆ-ಕುದುರೆಗಳು ಬಂಧನದಿಂದ ಬಿಡಿಸಿಕೊಂಡು ಶಿಬಿರದಲ್ಲಿದ್ದ ಜನರನ್ನು ಕಾಲುಗಳಿಂದ ತುಳಿದು ಮರ್ದನಮಾಡುತ್ತಾ ಎಲ್ಲ ದಿಕ್ಕುಗಳಲ್ಲಿಯೂ ಸುತ್ತಾಡುತ್ತಿದ್ದುವು. ಹಾಗೆ ಪಾಂಡವರ ಶಿಬಿರದ ಸುತ್ತಲೂ ಸುತ್ತಾಡುತ್ತಿದ್ದ ಆನೆ-ಕುದುರೆಗಳ ಕಾಲುಗಳ ಪಾದಸಂಘಟ್ಟನೆಗಳಿಂದ ಹುಟ್ಟಿದ ಧೂಳಿಯು ಆ ರಾತ್ರಿಯ ಕತ್ತಲನ್ನು ಇಮ್ಮಡಿಗೊಳಿಸಿತು. ಅಂತಹ ಘೋರವಾದ ಕತ್ತಲೆಯು ಪ್ರಾಪ್ತವಾಗಲಾಗಿ ಅಲ್ಲಿದ್ದ ಎಲ್ಲ ಜನರೂ ಕಿಂಕರ್ತವ್ಯತಾಮೂಢರಾದರು. ಪಿತೃಗಳಿಗೆ ತಮ್ಮ ಮಕ್ಕಳು ಎಲ್ಲಿದ್ದಾರೆಂಬುದು ತಿಳಿಯುತ್ತಿರಲಿಲ್ಲ. ಅಣ್ಣ-ತಮ್ಮಂದಿರಿಗೆ ತಮ್ಮ ಸಹೋದರರೇ ತಿಳಿಯುತ್ತಿರಲಿಲ್ಲ. ಆನೆಗಳು ಆನೆಗಳನ್ನೇ ಆಕ್ರಮಿಸುತ್ತಿದ್ದುವು. ಸವಾರರಿಲ್ಲದ ಕುದುರೆಗಳು ಕುದುರೆಗಳನ್ನೇ ಆಕ್ರಮಿಸಿ ಒಂದು ಮತ್ತೊಂದನ್ನು ನಾನಾಬಗೆಯ ಪ್ರಹಾರಗಳಿಂದ ಗಾಯಗೊಳಿಸುತ್ತಿದ್ದುವು. ಒಂದು ಆನೆಯು ಮತ್ತೊಂದು ಆನೆಯನ್ನೂ–ಒಂದು ಕುದುರೆಯು ಮತ್ತೊಂದು ಕುದುರೆಯನ್ನೂ ಭಗ್ನಗೊಳಿಸಿ ತುಳಿದುಹಾಕುತ್ತಿದ್ದುವು. ಪರಸ್ಪರವಾಗಿ ಪ್ರಹರಿಸುತ್ತಿದ್ದ ಆನೆ-ಕುದುರೆಗಳೂ ಭಗ್ನವಾಗಿ (ಮೂಳೆಗಳು ಮುರಿದು) ಕೆಳಗೆ ಬೀಳುತ್ತಿದ್ದುವು. ತಮ್ಮೆದುರಾಗಿ ಸಿಕ್ಕಿದ ಬೇರೆ ಆನೆ-ಕುದುರೆಗಳನ್ನು ಕೆಳಕ್ಕೆ ಬೀಳಿಸುತ್ತಿದ್ದುವು. ಹಾಗೆ ಕೆಳಕ್ಕೆ ಬೀಳಿಸಿದ ನಂತರ ತುಳಿದು-ತುಳಿದು ತುಂಡು-ತುಂಡುಮಾಡಿಬಿಡುತ್ತಿದ್ದುವು. ಬುದ್ಧಿಗೆಟ್ಟಿದ್ದ, ನಿದ್ರೆಯಿಂದ ತೂಕಡಿಸುತ್ತಿದ್ದ ಮತ್ತು ಕತ್ತಲಿನಿಂದ ಆವರಿಸಲ್ಪಟ್ಟಿದ್ದ ಅನೇಕಜನರು ಕಾಲಚೋದಿತರಾಗಿ ತಮ್ಮ ಕಡೆಯ ಜನರನ್ನೇ ಸಂಹಾರಮಾಡುತ್ತಿದ್ದರು. ದ್ವಾರಪಾಲಕರು ಮಹಾದ್ವಾರಗಳನ್ನೂ–ಗುಲ್ಮರಕ್ಷಕರು ಗುಲ್ಮಗಳನ್ನೂ ಪರಿತ್ಯಜಿಸಿ ಶಕ್ತಿಮೀರಿ ಓಡಿಹೋಗುತ್ತಿದ್ದರು. ಆದರೆ ಬುದ್ಧಿಗೆಟ್ಟಿದ್ದ ಅವರಿಗೆ ತಾವು ಯಾವ ದಿಕ್ಕಿನೆಡೆಗೆ ಓಡಿಹೋಗುತ್ತಿದ್ದೇವೆಂಬುದೇ ತಿಳಿಯುತ್ತಿರಲಿಲ್ಲ.

ಹಾಗೆ ಓಡಿಹೋಗುತ್ತಿದ್ದ ಸೈನಿಕರಲ್ಲಿ ಒಬ್ಬರು ಮತ್ತೊಬ್ಬರನ್ನು ಗುರುತಿಸಲಾಗುತ್ತಿರಲಿಲ್ಲ. ತಮ್ಮ ಜೊತೆಯಲ್ಲಿ ಓಡಿಬರುತ್ತಿರುವವರು ಯಾರೆಂಬುದೂ ಅವರಿಗೆ ತಿಳಿಯುತ್ತಿರಲಿಲ್ಲ. ದೈವದಿಂದಲೇ ನಷ್ಟವಾಗಿ ಹೋದ ಬುದ್ಧಿಯಿಂದ ಕೂಡಿದ್ದ ಅವರೆಲ್ಲರೂ – 'ತಾತ! ಪುತ್ರ!'– ಎಂಬುದಾಗಿ ಕೂಗಿಕೊಳ್ಳುತ್ತಿದ್ದರು. ತಮ್ಮ ಬಂಧುಗಳನ್ನು ಮಲಗಿದ್ದಲ್ಲಿಯೇ ಬಿಟ್ಟು ಎಲ್ಲ ದಿಕ್ಕುಗಳಿಗೂ ಪಲಾಯನಮಾಡುತ್ತಿದ್ದರು. ಅಲ್ಲಿಯೇ ಉಳಿದಿದ್ದ ಜನರು ನಾಮ ಮತ್ತು ಗೋತ್ರಗಳನ್ನು ಹೇಳಿಕೊಂಡು ರೋದನ ಮಾಡುತ್ತಿದ್ದರು. ಕೆಲವರು ವಿಕಾರವಾಗಿ ಹಾಹಾಕಾರಮಾಡುತ್ತಾ ನೆಲದ ಮೇಲೆ ಬೀಳುತ್ತಿದ್ದರು. ರಣೋನ್ಮತ್ತನಾದ ಅಶ್ವತ್ಥಾಮನು ಎಲ್ಲೆಲ್ಲಿ ಯಾರು-ಯಾರು ಇರುವರೆಂಬುದನ್ನು ತಿಳಿದು ಯಾರೊಬ್ಬರನ್ನೂ ಬಿಡದೇ ಎಲ್ಲರನ್ನೂ ಸಂಹಾರಮಾಡುತ್ತಿದ್ದನು. ಬಾರಿ-ಬಾರಿಗೂ ಅಶ್ವತ್ಥಾಮನಿಂದ ಹಿಂಸಿಸಲ್ಪಡುತ್ತಿದ್ದ ಮೂಢರಾಗಿದ್ದ ಹಲವಾರು ಕ್ಷತ್ರಿಯರು ಭಯಪೀಡಿತ ರಾಗಿ ಶಿಬಿರದಿಂದ ಹೊರಕ್ಕೆ ಹೋಗಲು ಪ್ರಯತ್ನಿಸುತ್ತಿದ್ದರು. ಭಯಗೊಂಡು ಜೀವವನ್ನುಳಿಸಿಕೊಳ್ಳುವ ಇಚ್ಛೆಯಿಂದ ಶಿಬಿರದಿಂದ ಹೊರಹೊರಟ ಕ್ಷತ್ರಿಯರನ್ನು ಶಿಬಿರದ ಮಹಾದ್ವಾರದ ಬಳಿಯಲ್ಲಿ ನಿಂತಿದ್ದ ಕೃಪ-ಕೃತ ವರ್ಮರು ಸಂಹರಿಸುತ್ತಿದ್ದರು. ಶಿಬಿರದಿಂದ ತಪ್ಪಿಸಿಕೊಂಡು ಹೊರಬರುತ್ತಿದ್ದ ಕ್ಷತ್ರಿಯರ ಯಂತ್ರ-ಕವಚಗಳು ಜಾರಿಹೋಗಿರುತ್ತಿದ್ದುವು. ಅವರ ತಲೆಗೂದಲುಗಳು ಕೆದರಿರುತ್ತಿದ್ದುವು. ಪ್ರಾಣಗಳನ್ನುಳಿಸಬೇಕೆಂದು ಅವರು ಕೈಮುಗಿದು ಕೇಳಿಕೊಳ್ಳುತ್ತಿದ್ದರು. ಭಯಭೀತರಾಗಿ ನಡುಗುತ್ತಾ ನೆಲದಲ್ಲಿ ಬೀಳುತ್ತಿದ್ದರು. ಅಂತಹವರಲ್ಲಿ ಒಬ್ಬನನ್ನಾದರೂ ಕೃಪ-ಕೃತವರ್ಮರು ಬಿಡುತ್ತಿರಲಿಲ್ಲ. ಶಿಬಿರದಿಂದ ಹೊರಹೊರಟ ಯಾವ ಕ್ಷತ್ರಿಯನಾದರೂ ಕೃಪ-ಕೃತವರ್ಮರಿಂದ ತಪ್ಪಿಸಿಕೊಂಡು ಜೀವಸಹಿತವಾಗಿ ಹೊರಕ್ಕೆ ಹೋಗಲಾಗಲಿಲ್ಲ. ಮಹಾರಾಜ! ಕೃಪರೂ ಮತ್ತು ದುರ್ಮತಿಯಾದ ಕೃತವರ್ಮನೂ ದ್ರೋಣಪುತ್ರನಾದ ಅಶ್ವತ್ಥಾಮನಿಗೆ ಹೆಚ್ಚು ಪ್ರಿಯ ವನ್ನುಂಟುಮಾಡಬೇಕೆನ್ನುವ ಇಚ್ಛೆಯಿಂದ ಶಿಬಿರದ ಮೂರು ಕಡೆಗಳಲ್ಲಿ ಬೆಂಕಿಯನ್ನು ಹೊತ್ತಿಸಿದರು. ಅಗ್ನಿದೇವನು ಜಾಜ್ವಲ್ಯಮಾನವಾಗಿ ಉರಿಯು ತ್ತಿದ್ದಾಗ ಪ್ರಕಾಶಮಾನವಾಗಿ ಕಾಣುತ್ತಿದ್ದ ಆ ಶಿಬಿರದಲ್ಲಿ ಪಿತೃನಂದನನಾದ

ಅಶ್ವತ್ಥಾಮನು ಸಿದ್ಧಹಸ್ತನಾದ ಯೋಧನೋಪಾದಿಯಲ್ಲಿ ಖಡ್ಗವನ್ನು ಝಳಪಿಸುತ್ತಾ ಸಂಚರಿಸುತ್ತಿದ್ದನು. ಆ ಸಮಯದಲ್ಲಿ ಕೆಲವು ವೀರ ಯೋಧರು ಶಸ್ತ್ರಪಾಣಿಗಳಾಗಿ ಅಶ್ವತ್ಥಾಮನ ಮೇಲೆ ಬೀಳಲು ಬರುತ್ತಿದ್ದರು. ಕೆಲವರು ಪಲಾಯನಮಾಡುತ್ತಿದ್ದರು. ದ್ವಿಜಶ್ರೇಷ್ಠನಾದ ಅಶ್ವತ್ಥಾಮನು ತನ್ನನ್ನು ಎದುರಿಸಲು ಬಂದವರನ್ನೂ ಮತ್ತು ಪಲಾಯನಮಾಡುತ್ತಿದ್ದವರನ್ನೂ ಖಡ್ಗದಿಂದ ಕತ್ತರಿಸುತ್ತಿದ್ದನು. ಕ್ರೋಧಾಭಿಭೂತನಾಗಿದ್ದ, ವೀರ್ಯವಂತನಾಗಿದ್ದ ಅಶ್ವತ್ಥಾಮನು ಕೆಲವರನ್ನು ಎಳ್ಳುಗಿಡದ–ಕಾಂಡವನ್ನು ಕತ್ತರಿಸುವಷ್ಟೇ ಸುಲಭವಾಗಿ ನಡುವಿನ ಪ್ರದೇಶದಲ್ಲಿ ಕತ್ತರಿಸಿ ಕೆಳಕ್ಕೆ ಬೀಳಿಸುತ್ತಿದ್ದನು. ಬಹಳವಾಗಿ ಗಾಯಗೊಂಡು ಕಿರುಚುತ್ತಾ ಬಿದ್ದಿದ್ದ ಗಜಾಶ್ವ-ನರಶ್ರೇಷ್ಠರಿಂದ ಭೂಮಿಯು ವ್ಯಾಪ್ತವಾಗಿದ್ದಿತು. ಸಾವಿರಾರು ಯೋಧರು ಅಶ್ವತ್ಥಾಮನಿಂದ ಸಂಹರಿಸಲ್ಪಟ್ಟು ಕೆಳಕ್ಕೆ ಬೀಳುತ್ತಿರುವಾಗ ಹಲವು ಮುಂಡಗಳು ಇದ್ದಕ್ಕಿದ್ದಂತೆಯೇ ಎದ್ದುನಿಲ್ಲುತ್ತಿದ್ದುವು. ಹಲವಾರು ಕಬಂಧಗಳು ಎದ್ದುನಿಂತು ಮರುಕ್ಷಣದಲ್ಲಿಯೇ ಬಿದ್ದುಹೋಗುತ್ತಿದ್ದುವು. ಅಶ್ವತ್ಥಾಮನು, ಆಯುಧಗಳಿಂದಲೂ ಮತ್ತು ಅಂಗದಗಳಿಂದಲೂ ಯುಕ್ತವಾಗಿದ್ದ ತೋಳುಗಳನ್ನೂ, ಶಿರಸ್ಸುಗಳನ್ನೂ, ಆನೆಯ ಸೊಂಡಿಲುಗಳಿಗೆ ಸಮಾನವಾಗಿದ್ದ ತೊಡೆಗಳನ್ನೂ, ಹಸ್ತಗಳನ್ನೂ, ಕಾಲುಗಳನ್ನೂ ತುಂಡು-ತುಂಡಾಗಿ ಕತ್ತರಿಸುತ್ತಿದ್ದನು. ಮಹಾತ್ಮನಾದ ಅಶ್ವತ್ಥಾಮನು ಕೆಲವರ ಪೃಷ್ಠಭಾಗಗಳನ್ನು ಕತ್ತರಿಸಿದನು. ಕೆಲವರ ಎಡ-ಬಲಪಾರ್ಶ್ವಗಳನ್ನು ಕತ್ತರಿಸಿದನು. ಕೆಲವರ ಶಿರಸ್ಸುಗಳನ್ನು ಕತ್ತರಿಸಿದನು. ಹೀಗೆ ಕತ್ತರಿಸುತ್ತಿದ್ದಾಗ ಕತ್ತರಿಸಲ್ಪಟ್ಟ ಕೆಲವರ ಮುಖಗಳು ಹಿಂದು-ಮುಂದಾಗುತ್ತಿದ್ದುವು. ಅಶ್ವತ್ಥಾಮನು ಕೆಲವರನ್ನು ಕಟಿಪ್ರದೇಶದಲ್ಲಿ ಕತ್ತರಿಸುತ್ತಿದ್ದನು. ಕೆಲವರನ್ನು ಕಿವಿಯ ಪ್ರದೇಶದಲ್ಲಿ ಕತ್ತರಿಸುತ್ತಿದ್ದನು. ಕೆಲವರನ್ನು ಕುತ್ತಿಗೆಯ ಪ್ರದೇಶದಲ್ಲಿ ಕತ್ತರಿಸಿ ತಲೆಗಳು ಶರೀರದೊಳಕ್ಕೆ ಸೇರಿಕೊಳ್ಳುವಂತೆ ಮಾಡುತ್ತಿದ್ದನು. ಹೀಗೆ ಅಶ್ವತ್ಥಾಮನು ಶಿಬಿರಪ್ರದೇಶದಲ್ಲಿ ಸಂಚರಿಸುತ್ತಾ ಅನೇಕ ಯೋಧರನ್ನು ಸಂಹರಿಸುತ್ತಿದ್ದಾಗ ಆ ರಾತ್ರಿಯು ಅಂಧಕಾರದ ಕಾರಣದಿಂದಾಗಿ ಘೋರವಾಗಿಯೂ ಭಯಂಕರವಾಗಿಯೂ ಕಾಣುತ್ತಿದ್ದಿತು. ಕತ್ತಿಯ ಪೆಟ್ಟುತಿಂದು ಅಲ್ಪಪ್ರಾಣರಾಗಿದ್ದವರಿಂದಲೂ–ಕತ್ತಿ

ಯಿಂದ ಹತರಾದ ಸಾವಿರಾರು ಗಜಾಶ್ವ-ಯೋಧರಿಂದಲೂ ಆವೃತವಾಗಿದ್ದ ಭೂಮಿಯು ಬಹಳ ಭಯಂಕರವಾಗಿ ಕಾಣುತ್ತಿದ್ದಿತು. ಯಕ್ಷರಿಂದಲೂ ರಾಕ್ಷಸರಿಂದಲೂ ವ್ಯಾಪ್ತವಾಗಿದ್ದ, ಅಶ್ವತ್ಥಾಮನಿಂದ ವಿಧ್ವಸ್ತವಾದ ರಥಾಶ್ವ-ಗಜಗಳಿಂದ ಬಹಳ ಭಯಂಕರವಾಗಿ ಕಾಣುತ್ತಿದ್ದ ಶಿಬಿರ ಪ್ರದೇಶದಲ್ಲಿ ಕ್ರುದ್ಧನಾದ ಅಶ್ವತ್ಥಾಮನಿಂದ ಕತ್ತರಿಸಲ್ಪಡುತ್ತಿದ್ದ ಯೋಧರ ಶರೀರಗಳು ಸತತವಾಗಿ ಬೀಳುತ್ತಲೇ ಇದ್ದುವು. ಹಾಗೆ ಕತ್ತರಿಸಲ್ಪಡುತ್ತಿದ್ದವರಲ್ಲಿ ಕೆಲವರು ತಮ್ಮ ಸೋದರರನ್ನೂ, ಕೆಲವರು ಪಿತೃಗಳನ್ನೂ, ಕೆಲವರು ಪುತ್ರರನ್ನೂ ಸಹಾಯಕ್ಕಾಗಿ ಕರೆಯುತ್ತಿದ್ದರು. ಭಯಂಕರವಾದ ಸಂಹಾರಕಾರ್ಯವನ್ನು ನೋಡುತ್ತಿದ್ದ ಕೆಲವರು ಹೀಗೆ ಮಾತನಾಡಿಕೊಳ್ಳುತ್ತಿದ್ದರು : “ಮಲಗಿದ್ದ ನಮ್ಮ ಮೇಲೆ ಕ್ರೂರಕರ್ಮಿಗಳಾದ ಈ ರಾಕ್ಷಸರು ದಾಳಿ ನಡೆಸುತ್ತಿರುವಂತೆ ರಣರಂಗದಲ್ಲಿ ಕ್ಷುದ್ರರಾದ ಧೃತರಾಷ್ಟ್ರನ ಮಕ್ಕಳೂ ದಾಳಿ ನಡೆಸಲಿಲ್ಲ.

**ಅಸಾನ್ನಿಧ್ಯಾದ್ಧಿ ಪಾರ್ಥಾನಾಮಿದಂ ನಃ ಕದನಂ ಕೃತಮ್ ।**
**ನ ಚಾಸುರೈರ್ನ ಗಂಧರ್ವೈರ್ನ ಚ ಯಕ್ಷೈರ್ನ ರಾಕ್ಷಸೈಃ ॥೧೨೩॥**

**ಶಕ್ಯೋ ವಿಜೇತುಂ ಕೌನ್ತೇಯೋ ಗೋಪ್ತಾ ಯಸ್ಯ ಜನಾರ್ದನಃ ।**
**ಬ್ರಹ್ಮಣ್ಯಃ ಸತ್ಯವಾಗ್ದಾನ್ತಃ ಸರ್ವಭೂತಾನುಕಮ್ಪಕಃ ॥೧೨೪॥**

ಕುಂತಿಯ ಮಕ್ಕಳು ಇಲ್ಲಿ ಇರದೇ ಇರುವುದರಿಂದ ಈ ರಾಕ್ಷಸರು ನಮ್ಮನ್ನು ಸಂಹಾರಮಾಡುತ್ತಿದ್ದಾರೆ. ಬ್ರಾಹ್ಮಣಪ್ರಿಯನಾದ, ಸತ್ಯನಿಷ್ಠನಾದ, ಜಿತೇಂದ್ರಿಯನಾದ, ಸರ್ವಪ್ರಾಣಿಗಳ ವಿಷಯದಲ್ಲಿಯೂ ಅನುಕಂಪವನ್ನು ಹೊಂದಿರುವ ಜನಾರ್ದನನಿಂದ ರಕ್ಷಿಸಲ್ಪಡುವ ಅರ್ಜುನನನ್ನು ಪರಾಜಯಗೊಳಿಸಲು ಗಂಧರ್ವಾಸುರ-ಯಕ್ಷ-ರಾಕ್ಷಸರಿಂದಲೂ ಶಕ್ಯವಿಲ್ಲ.

**ನ ಚ ಸುಪ್ತಂ ಪ್ರಮತ್ತಂ ವಾ ನ್ಯಸ್ತಶಸ್ತ್ರಂ ಕೃತಾಞ್ಜಲಿಮ್ ।**
**ಧಾವನ್ತಂ ಮುಕ್ತಕೇಶಂ ವಾ ಹನ್ತಿ ಪಾರ್ಥೋ ಧನಂಜಯಃ ॥೧೨೫॥**

ಮಲಗಿದ್ದವನನ್ನೂ, ಎಚ್ಚರದಪ್ಪಿರುವವನನ್ನೂ, ನಿರಾಯುಧನನ್ನೂ, ಕೈಮುಗಿದು ಪ್ರಾಣಭಿಕ್ಷೆಯನ್ನು ಕೇಳುತ್ತಿರುವವನನ್ನೂ, ಓಡಿಹೋಗು

ತ್ತಿರುವವನನ್ನೂ, ಬಿಚ್ಚಿದ ತಲೆಗೂದಲುಳ್ಳವನನ್ನೂ–ಧನಂಜಯನು ಎಂದಿಗೂ ಕೊಲ್ಲತಕ್ಕವನಲ್ಲ.

**ತದಿದಂ ನಃ ಕೃತಂ ಘೋರಂ ರಕ್ಷೋಭಿಃ ಕ್ರೂರಕರ್ಮಭಿಃ ॥೧೨೬॥**

ಕ್ರೂರಕರ್ಮಿಗಳಾದ ರಾಕ್ಷಸರೇ ಭಯಂಕರವಾದ ಈ ಹನನಕಾರ್ಯವನ್ನು ನಮ್ಮ ಮೇಲೆ ನಡೆಸುತ್ತಿದ್ದಾರೆ."

ಇವೇ ಮುಂತಾಗಿ ಹೇಳಿಕೊಂಡು ವಿಲಪಿಸುತ್ತಾ ಅನೇಕಯೋಧರು ಅಶ್ವತ್ಥಾಮನ ಕತ್ತಿಯ ಪ್ರಹಾರಗಳಿಂದ ಬಹಳವಾಗಿ ಗಾಯಗೊಂಡು ಭೂಮಿಯ ಮೇಲೆ ಮಲಗಿದ್ದರು.

ಮುಹೂರ್ತಕಾಲವು ಕಳೆದನಂತರ ಕೂಗಿಕೊಳ್ಳುತ್ತಿದ್ದ ಮತ್ತು ವಿಲಾಪಮಾಡುತ್ತಿದ್ದ ಮನುಷ್ಯರ ಮಹಾಭಯಂಕರವಾದ ಕೋಲಾಹಲ ಶಬ್ದವು ಉಡುಗಿಹೋಯಿತು. ರಕ್ತದಿಂದ ಒದ್ದೆಯಾಗಿದ್ದ ಆ ರಣಭೂಮಿ ಯಲ್ಲಿ ಸ್ವಲ್ಪಹೊತ್ತಿನ ಮುಂಚೆ ಭಯಂಕರವಾದ ರೀತಿಯಲ್ಲಿ ಎದ್ದಿದ್ದ ಧೂಳೂ ಕ್ಷಣಮಾತ್ರದಲ್ಲಿ ಅದೃಶ್ಯವಾಯಿತು. ಪ್ರಳಯಕಾಲದಲ್ಲಿ ಕ್ರುದ್ಧ ನಾದ ಪಶುಪತಿಯು ಸಮಸ್ತಪ್ರಾಣಿಗಳನ್ನೂ ಧ್ವಂಸಮಾಡುವಂತೆ–ಕ್ರುದ್ಧ ನಾದ ಅಶ್ವತ್ಥಾಮನು ಪ್ರಾಣವುಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದ, ಉದ್ವಿಗ್ನ ರಾಗಿದ್ದ ಮತ್ತು ನಿರುತ್ಸಾಹಿಗಳಾಗಿದ್ದ ಸಾವಿರಾರು ಯೋಧರನ್ನು ಸಂಹಾರ ಮಾಡಿದನು. ಪರಸ್ಪರವಾಗಿ ಆಲಿಂಗನಮಾಡಿಕೊಂಡು ಮಲಗಿದ್ದವರನ್ನೂ, ಓಡಿಹೋಗುತ್ತಿದ್ದವರನ್ನೂ, ಪ್ರಾಣಭಯದಿಂದ ಮುಚ್ಚಿಟ್ಟುಕೊಂಡಿದ್ದವ ರನ್ನೂ, ತನ್ನೊಡನೆ ಯುದ್ಧಮಾಡಲು ಬಂದವರನ್ನೂ ಅಶ್ವತ್ಥಾಮನು ಯಾವ ವಿಧವಾದ ತಾರತಮ್ಯವೂ ಇಲ್ಲದೇ ಸಂಹರಿಸಿದನು. ಕೃಪ-ಕೃತವರ್ಮರು ಹೊತ್ತಿಸಿದ ಬೆಂಕಿಯಿಂದ ಅನೇಕರು ದಗ್ಧರಾಗಿಹೋದರು. ಅನೇಕರು ಅಶ್ವತ್ಥಾಮನಿಂದ ಮಥಿಸಲ್ಪಟ್ಟರು. ಕೆಲವರು ಯೋಧರು ಆ ಗಾಢಾಂಧಕಾರದಲ್ಲಿ ತಮ್ಮನ್ನು ಸಂಹರಿಸುತ್ತಿರುವವರು ಯಾರೆಂದು ಗುರುತಿಸಲಾಗದೇ ಪರಸ್ಪರವಾಗಿಯೇ ಬಡಿದಾಡಿ, ಒಬ್ಬರು ಮತ್ತೊಬ್ಬರನ್ನು ಯಮನ ಮನೆಗೆ ಕಳುಹಿಸಿದರು. ಆ ಮಹಾಕಾಳರಾತ್ರಿಯಲ್ಲಿ ಅರ್ಧಭಾಗವು ಕಳೆಯುವುದರಲ್ಲಿದ್ದಾಗಲೇ ಅಶ್ವತ್ಥಾಮನು ಪಾಂಡವರ ಮಹಾಸೈನ್ಯವನ್ನು ಯಮನ ಮನೆಗೆ ಕಳುಹಿಸಿಬಿಟ್ಟನು. ಆ ಕಾಳರಾತ್ರಿಯು ನಿಶಾಚಾರಿ

ಗಳಾದ ಪ್ರಾಣಿಗಳಿಗೆ ಅತ್ಯಂತಹರ್ಷವನ್ನುಂಟುಮಾಡುವುದಾಗಿದ್ದಿತು. ಪಾಂಡವರ ಕಡೆಯ ಗಜಾಶ್ವ-ಪದಾತಿಸೈನಿಕರಿಗೆ ಅತಿಭಯಂಕರವೂ ಕ್ಷಯ ಕರವೂ ಆಗಿದ್ದಿತು. ಮನುಷ್ಯರ ಮಾಂಸವನ್ನು ತಿನ್ನುತ್ತಾ-ರಕ್ತವನ್ನು ಕುಡಿಯುತ್ತಾ ಇದ್ದ ಅನೇಕ ಪಿಶಾಚರೂ ಮತ್ತು ರಾಕ್ಷಸರೂ ಅಲ್ಲಿ ಕಾಣಿಸಿಕೊಂಡರು. ಆ ರಾಕ್ಷಸ-ಪಿಶಾಚರು ಮಹಾಭಯಂಕರರಾಗಿದ್ದರು. ಕಂದು ಹಳದೀಬಣ್ಣದ ಶರೀರಗಳನ್ನು ಹೊಂದಿದ್ದರು. ಅವರ ಹಲ್ಲುಗಳು ಪರ್ವತೋಪಮವಾಗಿದ್ದುವು. (ಬಹಳ ದೊಡ್ಡದಾಗಿದ್ದುವು.) ಅವರು ಧೂಳಿ ನಿಂದ ಧೂಸರಿತರಾಗಿದ್ದರು. ಜಟಾಧಾರಿಗಳಾಗಿದ್ದರು. ಅವರ ಹಣೆಯ ಎಲುಬು ನೀಳವಾಗಿದ್ದಿತು. ಆ ರಾಕ್ಷಸ-ಪಿಶಾಚರಿಗೆ ಐದು ಕಾಲುಗಳಿದ್ದುವು. ಅವರೆಲ್ಲರೂ ದೊಡ್ಡ-ದೊಡ್ಡ ಹೊಟ್ಟೆಗಳುಳ್ಳವರಾಗಿದ್ದರು. ಅವರ ಬೆರಳು ಗಳೆಲ್ಲವೂ ಹಿಂದು-ಮುಂದಾಗಿದ್ದುವು. ಅವರು ಕಠೋರವಾದ ಸ್ವಭಾವ ವುಳ್ಳವರಾಗಿದ್ದರು. ವಿರೂಪರಾಗಿಯೂ, ಭಯಂಕರವಾದ ಧ್ವನಿಯುಳ್ಳವ ರಾಗಿಯೂ ಇದ್ದರು. ಚಿಕ್ಕ-ಚಿಕ್ಕ ಗಂಟೆಗಳ ಸರಗಳಿಂದ ತಮ್ಮನ್ನು ಅಲಂಕರಿಸಿ ಕೊಂಡಿದ್ದರು. ಅವರ ಕುತ್ತಿಗೆಗಳು ಕಪ್ಪಾಗಿದ್ದುವು. ಅವರು ಮಹಾ ಭಯಂಕರರಾಗಿದ್ದರು. ಅವರೆಲ್ಲರೂ ಆ ಸ್ಥಳಕ್ಕೆ ಪತ್ನೀ-ಪುತ್ರಸಹಿತರಾಗಿಯೇ ಬಂದಿದ್ದರು. ಅವರು ಅತ್ಯಂತಕ್ರೂರಿಗಳಾಗಿಯೂ ಮತ್ತು ನಿರ್ದಯ ರಾಗಿಯೂ ಇದ್ದರು. ಅವರ ಕಡೆಗೆ ನೋಡಲು ಕೂಡ ಸಾಮಾನ್ಯರಾದವರಿಂದ ಸಾಧ್ಯವಾಗುತ್ತಿರಲಿಲ್ಲ. ಅನೇಕರಾಕ್ಷಸರ ಇಂತಹ ವಿಧ-ವಿಧವಾದ ರೂಪ ಗಳು ಅಲ್ಲಿ ಕಾಣಿಸಿಕೊಂಡುವು. ಯೋಧರ ರಕ್ತವನ್ನು ಕುಡಿದು ಪರಮಹೃಷ್ಟರಾದ ಆ ರಾಕ್ಷಸರು ಗುಂಪು-ಗುಂಪಾಗಿ ನೃತ್ಯಮಾಡುತ್ತಿದ್ದರು. ಕೆಲವರು ರಕ್ತ-ಮಾಂಸಗಳನ್ನು ಆಸ್ವಾದನೆಮಾಡುತ್ತಾ, 'ಓಹೋ! ಇದು ಬಹಳ ಚೆನ್ನಾಗಿದೆ ; ಇದು ಬಹಳ ಪವಿತ್ರವಾಗಿದೆ ; ಇದು ಬಹಳ ರುಚಿಕರವಾಗಿದೆ'– ಎಂದು ಹೇಳುತ್ತಾ ಚಪ್ಪರಿಸುತ್ತಿದ್ದರು. ಮೇದಸ್ಸು, ಮಜ್ಜೆ, ಅಸ್ಥಿ, ರಕ್ತ ಮತ್ತು ಮಾಂಸಗಳನ್ನು ಆತುರವಾಗಿ ತಿನ್ನುವ ಸ್ವಭಾವವುಳ್ಳ ಮಾಂಸಜೀವಿಗಳಾದ ಆ ರಾಕ್ಷಸರು ಯೋಧರ ಮಾಂಸವನ್ನು ಯಥೇಚ್ಛವಾಗಿ ತಿನ್ನುತ್ತಿದ್ದರು. ಹೊಟ್ಟೆಯೇ ಇಲ್ಲದಿದ್ದ ಕೆಲವು ರಾಕ್ಷಸರು ವಸೆಯನ್ನು ಕುಡಿದು ನಾಲ್ಕು ದಿಕ್ಕುಗಳಲ್ಲಿಯೂ

ತಿರುಗುತ್ತಿದ್ದರು. ಹಸಿಯ ಮಾಂಸವನ್ನೇ ತಿನ್ನುತ್ತಿದ್ದ ಭಯಂಕರಾದ ಆ ರಾಕ್ಷಸರಿಗೆ ಬಗೆ-ಬಗೆಯ ಮುಖಗಳಿದ್ದುವು. ಆ ಮಹಾಜನಸಂಹಾರದಿಂದ ತೃಪ್ತರಾದ ಮತ್ತು ಸಂತೋಷಭರಿತರಾದ, ಕ್ರೂರಕರ್ಮಿಗಳಾದ ಮತ್ತು ಘೋರರೂಪಿಗಳಾದ ರಾಕ್ಷಸರ ಸಮೂಹಗಳು ಅನೇಕವಾಗಿದ್ದುವು. ಒಂದೊಂದು ಸಮೂಹದಲ್ಲಿಯೂ ಹತ್ತುಸಾವಿರ, ಲಕ್ಷ, ಹತ್ತುಲಕ್ಷ ರಾಕ್ಷಸರಿರುತ್ತಿದ್ದರು. ಪ್ರಾತಃಕಾಲವಾಗುತ್ತಲೇ ಅಶ್ವತ್ಥಾಮನು ಶಿಬಿರದಿಂದ ಹೊರಡಲನುವಾದನು. ಆ ವೇಳೆಗೆ ರಕ್ತದಿಂದ ತೋಯ್ದುಹೋಗಿದ್ದ ಅಶ್ವತ್ಥಾಮನ ಕತ್ತಿಯ ಹಿಡಿಯು ಅವನ ಕೈಯೊಡನೆ ಸೇರಿಕೊಂಡು ಹಸ್ತ ಮತ್ತು ಕತ್ತಿಯ ಹಿಡಿಗಳು ಒಂದೇ ಆಗಿಬಿಟ್ಟಿರುವಂತೆ ಕಾಣುತ್ತಿದ್ದುವು. ಪ್ರಳಯಕಾಲದಲ್ಲಿ ಎಲ್ಲ ಪ್ರಾಣಿಗಳನ್ನೂ ಭಸ್ಮಮಾಡಿದ ಅಗ್ನಿಯಂತೆ–ಜನಕ್ಷಯವಾದನಂತರ ದುರ್ಗಮವಾಗಿದ್ದ (ಪೂರೈಸಿಕೊಳ್ಳಲು ಅಸಾಧ್ಯವೆನಿಸಿದ್ದ.) ತನ್ನ ಇಚ್ಛೆಯನ್ನು ಪೂರೈಸಿಕೊಂಡು ಅಶ್ವತ್ಥಾಮನು ಬಹಳವಾಗಿ ಪ್ರಕಾಶಿಸಿದನು. ತನ್ನ ತಂದೆಯ ದುರ್ಗಮವಾದ ಮಾರ್ಗವನ್ನೇ ಹಿಡಿದು ಹೋಗುತ್ತಾ (ತಂದೆಯು ಅನುಸರಿಸಿದ ದುರ್ಗಮವಾದ ಕ್ಷತ್ರಧರ್ಮದ ಮಾರ್ಗವನ್ನೇ ಅನುಸರಿಸುತ್ತಾ) ಅಶ್ವತ್ಥಾಮನು ತಾನು ಮಾಡಿದ್ದ ಪ್ರತಿಜ್ಞೆಯಂತೆ ಹನನಕಾರ್ಯವನ್ನು ಸಂಪೂರ್ಣವಾಗಿ ಮುಗಿಸಿ ಚಿಂತಾ-ಶೋಕಗಳಿಂದ ವಿಮುಕ್ತನಾದನು. ಯಾವ ರೀತಿಯಲ್ಲಿ ಯೋಧರೆಲ್ಲರೂ ಮಲಗಿದ್ದ ಸಮಯದಲ್ಲಿ ಯಾರಿಗೂ ತಿಳಿಯದ ರೀತಿಯಲ್ಲಿ ಅಶ್ವತ್ಥಾಮನು ಶಿಬಿರವನ್ನು ಪ್ರವೇಶಿಸಿದನೋ–ಅದೇ ರೀತಿಯಲ್ಲಿ ಎಲ್ಲರನ್ನೂ ಸಂಹರಿಸಿದನಂತರ ಶಿಬಿರವು ನಿಶ್ಶಬ್ದವಾಗಿರಲಾಗಿ ಅಲ್ಲಿಂದ ಹೊರಟುಬಿಟ್ಟನು. ವೀರ್ಯವಂತನಾದ ಅಶ್ವತ್ಥಾಮನು ಶಿಬಿರದಿಂದ ಹೊರಟು ಶಿಬಿರದ ದ್ವಾರದ ಬಳಿಯಲ್ಲಿದ್ದ ಕೃಪ-ಕೃತವರ್ಮರೊಡನೆ ಸೇರಿ ಪರಮಹೃಷ್ಟನಾಗಿ ಅವರನ್ನೂ ಸಂತೋಷಗೊಳಿಸುತ್ತಾ ತಾನು ಮಾಡಿದ ಕಾರ್ಯಗಳೆಲ್ಲವನ್ನೂ ಅವರಿಗೆ ವಿವರಿಸಿ ಹೇಳಿದನು. ಅಶ್ವತ್ಥಾಮನಿಗೆ ಪ್ರಿಯವನ್ನುಂಟುಮಾಡುವವರಾಗಿದ್ದ ಕೃಪ-ಕೃತವರ್ಮರೂ ಸಾವಿರಾರು ಮಂದಿ ಪಾಂಚಾಲ-ಸೃಂಜಯರನ್ನು ತಾವೂ ಕೊಂದೆವೆಂಬ ಪ್ರಿಯವಾರ್ತೆಯನ್ನು ಅಶ್ವತ್ಥಾಮನಿಗೆ ತಿಳಿಸಿದರು. ಮೂವರೂ ಆನಂದತುಂದಿಲರಾಗಿ ಗಟ್ಟಿಯಾಗಿ ಗರ್ಜನೆಗಳನ್ನು ಮಾಡುತ್ತಾ ಚಪ್ಪಾಳೆಗಳನ್ನು ತಟ್ಟಿದರು.

ಹೀಗೆ ಮಲಗಿದ್ದ ಮತ್ತು ಎಚ್ಚರದಪ್ಪಿದ್ದ ಸೋಮಕಜನರ ಕ್ಷಯದಲ್ಲಿ ಆ ಕಾಳರಾತ್ರಿಯು ಅತ್ಯಂತಭಯಂಕರವಾಗಿದ್ದಿತು. ಮಹಾರಾಜ! ಕಾಲದ ಗತಿಯನ್ನು ಉಲ್ಲಂಘಿಸಿ ನಡೆಯಲು ಯಾರಿಂದಲೂ ಸಾಧ್ಯವಾಗುವುದಿಲ್ಲ ವೆಂಬುದರಲ್ಲಿ ಸಂಶಯವೇ ಇಲ್ಲ. ನಮ್ಮ (ಕೌರವರ) ಪಕ್ಷದವರೆಲ್ಲರನ್ನೂ ಸಂಪೂರ್ಣವಾಗಿ ಸಂಹರಿಸಿ ವಿಜಯವನ್ನು ಪಡೆದು ನಿಶ್ಚಿಂತೆಯಿಂದ ಮಲಗಿದ್ದ ಪಾಂಡು-ಪಾಂಚಾಲಯೋಧರು ಹೀಗೆ ಹತರಾದರು."

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ :

"ಸಂಜಯ! ನನ್ನ ಮಗನ ವಿಜಯದಲ್ಲಿಯೇ ದೃಢವ್ರತನಾಗಿದ್ದ, ಮಹಾರಥನಾದ ಅಶ್ವತ್ಥಾಮನು ಇಂತಹ ಮಹಾಪರಾಕ್ರಮಯುಕ್ತವಾದ ಕಾರ್ಯವನ್ನು ಹಿಂದೆಯೇ ಏಕೆ ಮಾಡಲಿಲ್ಲ? ಮಹಾತ್ಮನಾದ ದ್ರೋಣ ಪುತ್ರನು ದುರ್ಯೋಧನನು ಹತನಾದನಂತರವೇ ಈ ಕ್ಷುದ್ರಕರ್ಮವನ್ನೇಕೆ ಮಾಡಿದನು? ಈ ವಿಷಯವನ್ನು ನನಗೆ ತಿಳಿಸು."

**ತೇಷಾಂ ನೂನಂ ಭಯಾನ್ನಾಸೌ ಕೃತವಾನ್ಕುರುನನ್ದನ ।**
**ಅಸಾನ್ನಿಧ್ಯಾದ್ಧಿ ಪಾರ್ಥಾನಾಂ ಕೇಶವಸ್ಯ ಚ ಧೀಮತಃ ।**
**ಸಾತ್ಯಕೇಶ್ಚಾಪಿ ಕರ್ಮೇದಂ ದ್ರೋಣಪುತ್ರೇಣ ಸಾಧಿತಮ್ ॥೧೫॥**

"ಕುರುನಂದನನೇ! ನಿಶ್ಚಯವಾಗಿಯೂ ಪಾಂಡವ-ಕೇಶವ-ಸಾತ್ಯಕಿಯರ ಭಯದಿಂದಾಗಿ ಅಶ್ವತ್ಥಾಮನು ಹಿಂದೆ ಈ ಕ್ಷುದ್ರಕಾರ್ಯವನ್ನು ಮಾಡಲು ಮನಸ್ಸು ಮಾಡಲಿಲ್ಲ. ಐವರು ಪಾಂಡವರು, ಧೀಮಂತನಾದ ಶ್ರೀಕೃಷ್ಣ ಮತ್ತು ಸಾತ್ಯಕಿ–ಇವರು ಆ ಶಿಬಿರದ ಬಳಿ ಇಲ್ಲದಿದ್ದುದರಿಂದಲೇ ಅಶ್ವತ್ಥಾಮನು ಈ ಕ್ಷುದ್ರಕರ್ಮವನ್ನು ಸಾಧಿಸಿದನು. ಪಾಂಡವ-ಕೃಷ್ಣ-ಸಾತ್ಯಕಿಯರ ಸಮಕ್ಷದಲ್ಲಿ ಯಾರು ತಾನೇ ಅವರ ಸೈನಿಕರನ್ನು ಈ ರೀತಿಯಲ್ಲಿ ವಧಿಸುತ್ತಿದ್ದರು? ಸಾಕ್ಷಾತ್ ಇಂದ್ರನಿಂದಲೂ ಈ ಕಾರ್ಯವು ಸಾಧ್ಯವಾಗುತ್ತಿರಲಿಲ್ಲ. ಎಲ್ಲರೂ ಮಲಗಿರುವ ಸಮಯದಲ್ಲಿ ಇಂತಹ ಒಂದು ದುರ್ಘಟನೆಯು ನಡೆದುಹೋಯಿತು.

ಪಾಂಡವರಿಗೆ ಮಹಾವಿನಾಶಕಾರಿಯಾದ ಜನಸಂಹಾರವನ್ನು ಮಾಡಿ ಆ ಮೂವರು ಮಹಾರಥರೂ ಒಂದೆಡೆಯಲ್ಲಿ ಸೇರಿ–'ಸೌಭಾಗ್ಯದ ಕಾರಣ

ದಿಂದ ಈ ಕಾರ್ಯವು ಸಿದ್ಧಿಸಿತು'–ಎಂದು ಪರಸ್ಪರವಾಗಿ ಮಾತನಾಡಿಕೊಂಡರು. ಕೃಪ-ಕೃತವರ್ಮರ ಅಭಿನಂದನೆಗಳನ್ನು ಆನಂದದಿಂದ ಸ್ವೀಕರಿಸಿದ ಅಶ್ವತ್ಥಾಮನು ಅವರಿಬ್ಬರನ್ನೂ ಆಲಿಂಗಿಸಿಕೊಂಡು ಆನಂದ ತುಂದಿಲನಾಗಿ ಮಹಾಹರ್ಷದಿಂದ ಮಹಾಸತ್ತ್ವಪೂರ್ಣವಾದ ಮತ್ತು ಶ್ರೇಷ್ಠವಾದ ಈ ಮಾತನ್ನು ಹೇಳಿದನು :

**ಪಾಞ್ಚಾಲಾ ನಿಹತಾಃ ಸರ್ವೇ ದ್ರೌಪದೇಯಾಶ್ಚ ಸರ್ವಶಃ ।**
**ಸೋಮಕಾ ಮತ್ಸ್ಯಶೇಷಾಶ್ಚ ಸರ್ವೇ ವಿನಿಹತಾ ಮಯಾ ॥೧೫೮॥**

"ಎಲ್ಲ ಪಾಂಚಾಲರನ್ನೂ, ದ್ರೌಪದಿಯ ಎಲ್ಲ ಮಕ್ಕಳನ್ನೂ, ಸೋಮಕರನ್ನೂ, ಅಳಿದುಳಿದಿದ್ದ ಮತ್ಸ್ಯಸೈನ್ಯವನ್ನೂ ನಾನು ಸಂಹರಿಸಿದೆನು.

**ಇದಾನೀಂ ಕೃತಕೃತ್ಯಾಃ ಸ್ಮ ಯಾಮ ತತ್ರೈವ ಮಾ ಚಿರಮ್ ।**
**ಯದಿ ಜೀವತಿ ನೋ ರಾಜಾ ತಸ್ಮೈ ಶಂಸಾಮಹೇ ವಯಮ್ ॥೧೫೯॥**

ನಾವು ಈಗ ಕೃತಕೃತ್ಯರಾದೆವು. ಸಾವಕಾಶಮಾಡದೇ ದುರ್ಯೋಧನನು ಇರುವಲ್ಲಿಗೇ ಹೋಗೋಣ. ಒಂದು ವೇಳೆ ನಮ್ಮ ರಾಜನು ಇದುವರೆಗೂ ಜೀವಿಸಿದ್ದುದೇ ಆದರೆ ಅವನಿಗೆ ಸಂತಸದ ಈ ವಾರ್ತೆಯನ್ನು ತಿಳಿಸೋಣ."

ಳನೆಯ ಅಧ್ಯಾಯವು ಮುಗಿಯಿತು.

೯ನೆಯ ಅಧ್ಯಾಯ ಸೌಪ್ತಿಕಪರ್ವ (ಮುಂದುವರಿದಿದೆ.)

## ದುರ್ಯೋಧನನ ಸ್ಥಿತಿಯನ್ನು ನೋಡಿ ಕೃಪಾಶ್ವತ್ಥಾಮರು ವಿಲಪಿಸಿದುದು : ಪಾಂಚಾಲರ ವಧೆಯ ವೃತ್ತಾಂತವನ್ನು ಅಶ್ವತ್ಥಾಮನಿಂದಲೇ ಕೇಳಿದನಂತರ ದುರ್ಯೋಧನನು ಪ್ರಸನ್ನಚಿತ್ತನಾಗಿ ಪ್ರಾಣತ್ಯಾಗಮಾಡಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಕೃಪಾಶ್ವತ್ಥಾಮ-ಕೃತವರ್ಮರು ಎಲ್ಲ ಪಾಂಚಾಲರನ್ನೂ ಮತ್ತು ದ್ರೌಪದಿಯ ಮಕ್ಕಳನ್ನೂ ಸಂಹರಿಸಿ ಮೂವರೂ ಒಟ್ಟಾಗಿ ದುರ್ಯೋಧನನು ಹತನಾಗಿ ಬಿದ್ದಿದ್ದ ಸ್ಥಳಕ್ಕೆ ಹೋದರು. ಅಲ್ಲಿಗೆ ಹೋದ

ನಂತರ ದುರ್ಯೋಧನನಿಗೆ ಕುಟುಕುಜೀವವಿದ್ದುದನ್ನು ನೋಡಿ ಆ ಮೂವರೂ ತಮ್ಮ-ತಮ್ಮ ರಥಗಳಿಂದಿಳಿದು ದುರ್ಯೋಧನನನ್ನು ಸುತ್ತುವರಿದು ಕುಳಿತರು. ದುರ್ಯೋಧನನು ಭಗ್ನೋರುವಾಗಿದ್ದನು. ಬಹಳ ಕಷ್ಟದಿಂದ ಪ್ರಾಣಧಾರಣೆಮಾಡಿಕೊಂಡಿದ್ದನು. ಬುದ್ಧಿಗೆಟ್ಟಿದ್ದನು. ಬಾಯಿಂದ ರಕ್ತವನ್ನು ಕಕ್ಕುತ್ತಿದ್ದನು. ಮಹಾಭಯಂಕರವಾಗಿ ಕಾಣುತ್ತಿದ್ದ, ಹತ್ತಿರದಲ್ಲಿಯೇ ನಿಂತು ಭಕ್ಷಿಸಲು ಹಾತೊರೆಯುತ್ತಿದ್ದ ಅನೇಕಾನೇಕ ಮಾಂಸಾಶಿಗಳಾದ ತೋಳಗಳೇ ಮೊದಲಾದ ಪ್ರಾಣಿಗಳಿಂದ ಆವೃತನಾಗಿದ್ದನು. ತಿಂದುಹಾಕಲು ಬಾಯ್ತೆರೆದುಕೊಂಡು ಮುಂದೆ-ಮುಂದೆ ಬರುತ್ತಿದ್ದ ಮಾಂಸಾಶಿಗಳಾದ ಪ್ರಾಣಿಗಳನ್ನು ದುರ್ಯೋಧನನು ಬಹಳ ಕಷ್ಟದಿಂದ ತಡೆಯುತ್ತಿದ್ದನು. ಅತ್ಯಂತಗಾಢವಾದ ವೇದನೆಯನ್ನನುಭವಿಸುತ್ತಿದ್ದ, ನೆಲದ ಮೇಲೆ ಸಂಕಟ ದಿಂದ ಹೊರಳಾಡುತ್ತಿದ್ದ ದುರ್ಯೋಧನನನ್ನು ಆ ಮೂವರು ಮಹಾರಥರೂ ವೀಕ್ಷಿಸಿದರು. ರಕ್ತದಿಂದ ತೋಯ್ದುಹೋಗಿ ಭೂಮಿಯಲ್ಲಿ ಬಿದ್ದು ಚಡಪಡಿಸುತ್ತಿದ್ದ ದುರ್ಯೋಧನನನ್ನು ನೋಡಿ ನಿನ್ನ ಪಕ್ಷದಲ್ಲಿ ಹತಶೇಷರಾಗಿ ಉಳಿದಿದ್ದ ಅಶ್ವತ್ಥಾಮಾ-ಕೃಪರು ಮತ್ತು ಸಾತ್ವತವಂಶೀಯನಾದ ಕೃತವರ್ಮಾ–ಈ ಮೂವರು ವೀರರೂ ಶೋಕಾರ್ತರಾಗಿ ರಾಜನನ್ನು ಸುತ್ತುವರಿದು ಕುಳಿತರು. ರಕ್ತದಿಂದ ತೋಯ್ದು ಕೆಂಪಾಗಿ ಕಾಣುತ್ತಿದ್ದ, ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದ ಆ ಮೂವರು ಮಹಾರಥರಿಂದ ಪರಿವೃತನಾಗಿದ್ದ ದುರ್ಯೋಧನನು ಆ ಸಮಯದಲ್ಲಿ ತ್ರೇತಾಗ್ನಿಗಳಿಂದ ಆವೃತವಾದ ವೇದಿಯಂತೆಯೇ ಪ್ರಕಾಶಿಸುತ್ತಿದ್ದನು. ಅಂತಹ ದುಃಸ್ಥಿತಿ ಯನ್ನು ಅನುಭವಿಸಲು ಅನರ್ಹನಾದ ರಾಜನು ರಣಾಂಗಣದಲ್ಲಿ ಮಾಂಸಾಶಿಗಳಾದ ಪ್ರಾಣಿಗಳಿಂದ ಸಂವೃತನಾಗಿ ಮಲಗಿದ್ದುದನ್ನು ಕಂಡು ತಡೆಯಲಾಗದ ದುಃಖದಿಂದ ಆ ಮೂವರೂ ರೋದನಮಾಡಿದರು. ಬಳಿಕ ರಣಭೂಮಿಯಲ್ಲಿ ಮಲಗಿದ್ದ ದುರ್ಯೋಧನನ ಮುಖದ ಮೇಲಿದ್ದ ರಕ್ತವನ್ನು ತಮ್ಮ ಕೈಗಳಿಂದಲೇ ಒರೆಸುತ್ತಾ ದೀನಸ್ವರದಿಂದ ವಿಲಪಿಸಿದರು. ಅನಂತರ ಕೃಪರು ದುರ್ಯೋಧನನ ದುರವಸ್ಥೆಯನ್ನು ಕಂಡು ಹೀಗೆ ಹೇಳಿದರು :

**ನ ದೈವಸ್ಯಾತಿಭಾರೋಽಸ್ತಿ ಯದಯಂ ರುಧಿರೋಕ್ಷಿತಃ ।**
**ಏಕಾದಶಚಮೂಭರ್ತಾ ಶೇತೇ ದುರ್ಯೋಧನೋ ಹತಃ ॥೧೦॥**

"ದೈವಕ್ಕೆ ಯಾವುದನ್ನು ಮಾಡಲೂ ಕಷ್ಟವಾಗುವುದಿಲ್ಲ. (ಎಂತಹ ಮಹಾಕಾರ್ಯವನ್ನಾದರೂ ಸುಲಭವಾಗಿಯೇ ಮಾಡಿಬಿಡುತ್ತದೆ. ನಮ್ಮ ರಾಜನು ಹೀಗಿರುವುದೇ ಇದಕ್ಕೆ ಉದಾಹರಣೆಯಾಗಿದೆ.) ಹನ್ನೊಂದು ಅಕ್ಷೌಹಿಣೀಸೈನ್ಯಕ್ಕೆ ಅಧಿಪತಿಯಾಗಿದ್ದ ನಮ್ಮ ರಾಜನಾದ ದುರ್ಯೋಧನನು ರಕ್ತದಿಂದ ತೋಯ್ದು ಹತನಾಗಿ ಈ ರಣರಂಗದಲ್ಲಿ ಏಕಾಕಿಯಾಗಿ ಮಲಗಿದ್ದಾನೆ.

ಅಶ್ವತ್ಥಾಮ! ಸುವರ್ಣದ ಕಾಂತಿಗೆ ಸಮಾನವಾದ ಕಾಂತಿಯನ್ನು ಹೊಂದಿರುವ ಗದಾಪ್ರಿಯನಾದ ಸುಯೋಧನನ ಸುವರ್ಣಭೂಷಿತವಾದ ಗದೆಯು ಇವನ ಸಮೀಪದಲ್ಲಿಯೇ ಬಿದ್ದಿರುವುದನ್ನು ನೋಡು. ಪ್ರತಿಯೊಂದು ಯುದ್ಧದಲ್ಲಿಯೂ ಈ ಗದೆಯು ದುರ್ಯೋಧನನನ್ನು ಬಿಡದೇ ಇವನ ಹೆಗಲೇರುತ್ತಲೇ ಇದ್ದಿತು. ಈಗ ಸ್ವರ್ಗಕ್ಕೆ ಹೋಗುತ್ತಿರುವ ಯಶೋವಂತನಾದ ದುರ್ಯೋಧನನನ್ನು ಈ ಗದೆಯು ಬಿಟ್ಟುಕೊಡುವುದಿಲ್ಲ. ಪ್ರೀತಿಯುಕ್ತಳಾದ ಭಾರ್ಯೆಯು ರಾಜಸೌಧದಲ್ಲಿರುವ ಹಾಸಿಗೆಯಲ್ಲಿ ಪತಿಯೊಡನೆ ಮಲಗಿರುವಂತೆ–ಸುವರ್ಣಭೂಷಿತವಾದ ಈ ಗದೆಯು ತನ್ನ ಸ್ವಾಮಿಯಾದ ದುರ್ಯೋಧನನೊಡನೆ ಇರುವುದನ್ನು ನೋಡು. ಶತ್ರುತಾಪನನಾದ ಯಾವ ದುರ್ಯೋಧನನು ಈ ಹಿಂದೆ ಮೂರ್ಧಾಭಿಷಿಕ್ತರಾದ ರಾಜರ ಮುಂಭಾಗದಲ್ಲಿ ಹೋಗುತ್ತಿದ್ದನೋ–ಅವನೇ ಈಗ ಹತನಾಗಿ ಕೆಳಕ್ಕೆ ಬಿದ್ದು ಮಣ್ಣುಮುಕ್ಕುತ್ತಿದ್ದಾನೆ. ಕಾಲದ ವೈಪರೀತ್ಯವನ್ನಾದರೂ ನೋಡು, ಕೃತವರ್ಮ! ಹಿಂದೆ ದುರ್ಯೋಧನನಿಂದ ಹತರಾದ ಶತ್ರುಗಳು ಭೂಮಿಯಲ್ಲಿ ಗತಪ್ರಾಣರಾಗಿ ಮಲಗುತ್ತಿದ್ದರು. ಈಗ ದುರ್ಯೋಧನನೇ ಶತ್ರುಗಳಿಂದ ಹತನಾಗಿ ಭೂಮಿಯ ಮೇಲೆ ಮಲಗಿದ್ದಾನೆ. ಹಿಂದೆ ನೂರಾರು ರಾಜರು ಗುಂಪು-ಗುಂಪಾಗಿ ದುರ್ಯೋಧನನ ಬಳಿಗೆ ಬಂದು ತಲೆತಗ್ಗಿಸಿ ನಮಸ್ಕರಿಸುತ್ತಿದ್ದರು. ಅಂತಹವನಿಂದು ಮಾಂಸಾಶಿಗಳಾದ ಪ್ರಾಣಿಗಳಿಂದ ಪರಿವೃತನಾಗಿ ವೀರಶಯ್ಯೆಯಲ್ಲಿ ಮಲಗಿದ್ದಾನೆ. ಸರ್ವೇಶ್ವರನಾಗಿದ್ದ ಇವನನ್ನು ಹಿಂದೆ ಬ್ರಾಹ್ಮಣರು ಹಣದ ಸಲುವಾಗಿ ಆಶ್ರಯಿಸುತ್ತಿದ್ದರು. ಈಗ ಮಾಂಸಾಶಿಗಳಾದ ಕ್ರೂರಪ್ರಾಣಿಗಳು ಶರೀರದಲ್ಲಿರುವ ಮಾಂಸವನ್ನು ತಿನ್ನುವ ಸಲುವಾಗಿ ನಮ್ಮ ರಾಜನನ್ನು ಆಶ್ರಯಿಸು

ತ್ತಿವೆ. (ಕಾಲವನ್ನು ಅತಿಕ್ರಮಿಸಿ ನಡೆಯಲು ಯಾರಿಂದಲೂ ಸಾಧ್ಯ ವಾಗುವುದಿಲ್ಲ.)"

ಸಂಜಯನು ಹೇಳುತ್ತಾನೆ :

"ಭರತಶ್ರೇಷ್ಠನೇ! ಕೃಪರು ದುರ್ಯೋಧನನ ಸಂಬಂಧವಾಗಿ ಹೀಗೆ ಹೇಳಿದನಂತರ ನೆಲದ ಮೇಲೆ ಮಲಗಿದ್ದ ಕುರುಶ್ರೇಷ್ಠನಾದ ದುರ್ಯೋಧನ ನನ್ನು ನೋಡಿ ಅಶ್ವತ್ಥಾಮನು ಶೋಕದಿಂದ ವಿಲಪಿಸಿದನು :

**ಆಹುಸ್ತ್ವಾಂ ರಾಜಶಾರ್ದೂಲ ಮುಖ್ಯಂ ಸರ್ವಧನುಷ್ಮತಾಮ್ ।**
**ಧನಾಧ್ಯಕ್ಷೋಪಮಂ ಯುದ್ಧೇ ಶಿಷ್ಯಂ ಸಂಕರ್ಷಣಸ್ಯ ಚ ॥೧೯॥**

**ಕಥಂ ವಿವರಮದ್ರಾಕ್ಷೀದ್ಭೀಮಸೇನಸ್ತವಾನಘ ।**
**ಬಲಿನಃ ಕೃತಿನೋ ನಿತ್ಯಂ ಸ ಚ ಪಾಪಾತ್ಮವಾನ್ನೃಪ ॥೨೦॥**

"ನಿಷ್ಪಾಪನೇ! ರಾಜಸಿಂಹನೇ! ಎಲ್ಲರೂ ನಿನ್ನನ್ನು ಸರ್ವಧನು ಷ್ಮಂತರಿಗೂ ಶ್ರೇಷ್ಠನಾದವನೆಂದು ಹೇಳುತ್ತಾರೆ. ಬಲರಾಮನ ಶಿಷ್ಯನಾದ ನಿನ್ನನ್ನು ಗದಾಯುದ್ಧದಲ್ಲಿ ಧನಾಧ್ಯಕ್ಷನಾದ ಕುಬೇರನಿಗೆ ಸಮಾನ ನಾದವನೆಂದು ಹೇಳುತ್ತಾರೆ. ಮೇಲಾಗಿ ನೀನು ಮಹಾಬಲಿಷ್ಠನೂ ಗದಾ ಯುದ್ಧದಲ್ಲಿ ಮಹಾನಿಪುಣನೂ ಆಗಿರುವೆ. ಹೀಗಿರುವಾಗ ಪಾಪಾತ್ಮನಾದ ಭೀಮಸೇನನು ನಿನ್ನೊಡನೆ ಯುದ್ಧಮಾಡುತ್ತಿದ್ದಾಗ ಛಿದ್ರಾನ್ವೇಷಣವನ್ನು ಹೇಗೆ ಮಾಡಿದನು?

**ಕಾಲೋ ನೂನಂ ಮಹಾರಾಜ ಲೋಕೇಽಸ್ಮಿನ್ಬಲವತ್ತರಃ ।**
**ಪಶ್ಯಾಮೋ ನಿಹತಂ ತ್ವಾಂ ಚ ಭೀಮಸೇನೇನ ಸಂಯುಗೇ ॥೨೧॥**

ಮಹಾರಾಜ! ಈ ಪ್ರಪಂಚದಲ್ಲಿ ಕಾಲವು ನಿಜವಾಗಿಯೂ ಬಲವತ್ತರ ವಾದುದು. ಏಕೆಂದರೆ : ಗದಾಯುದ್ಧದಲ್ಲಿ ನಿನಗೆ ಸಾಟಿಯಿಲ್ಲದ ಭೀಮ ಸೇನನು ನಿನ್ನನ್ನು ಯುದ್ಧದಲ್ಲಿ ಸಂಹರಿಸಿದುದನ್ನು ನಾವು ಪ್ರತ್ಯಕ್ಷವಾಗಿಯೇ ಕಾಣುತ್ತಿರುವೆವಲ್ಲವೇ?

ಕ್ಷುದ್ರನಾದ, ಪಾಪಿಷ್ಠನಾದ, ಮೂಢನಾದ ವೃಕೋದರನು ಸರ್ವ ಧರ್ಮಜ್ಞನಾದ ನಿನ್ನನ್ನು ವಂಚನೆಯಿಂದ ಹೇಗೆ ಸಂಹರಿಸಿದನು? ನಿಶ್ಚಯ

ವಾಗಿಯೂ ಕಾಲವು ಅನುಲ್ಲಂಘನೀಯವಾದುದು. ಭೀಮಸೇನನು ನಿನ್ನನ್ನು ಧರ್ಮಯುದ್ಧಮಾಡಲು ಆಹ್ವಾನಿಸಿ, ರಣರಂಗದಲ್ಲಿ ಅಧರ್ಮವನ್ನೇ ಅವಲಂಬಿಸಿ ನಿನ್ನ ತೊಡೆಗಳನ್ನು ಗದೆಯಿಂದ ಮುರಿದುಹಾಕಿದನು.

**ಅಧರ್ಮೇಣ ಹತಸ್ಯಾಜೌ ಮೃದ್ಯಮಾನಂ ಪದಾ ಶಿರಃ ।**
**ಯ ಉಪೇಕ್ಷಿತವಾನ್ಕ್ಷುದ್ರಂ ಧಿಕ್ಕೃಷ್ಣಂ ಧಿಗ್ಯುಧಿಷ್ಠಿರಮ್ ॥೨೪॥**

ಅಧರ್ಮದಿಂದ ಯುದ್ಧದಲ್ಲಿ ಹತನಾದ ನಿನ್ನ ಶಿರಸ್ಸನ್ನು ಕಾಲಿನಿಂದ ಮೆಟ್ಟುತ್ತಿದ್ದ ಕ್ಷುದ್ರನಾದ ಭೀಮಸೇನನನ್ನು ತಡೆಯದೇ ಉಪೇಕ್ಷಿಸಿದ ಕೃಷ್ಣನಿಗೂ ಮತ್ತು ಯುಧಿಷ್ಠಿರನಿಗೂ ಧಿಕ್ಕಾರವಿರಲಿ.

ಮಹಾರಾಜ! ನಿಶ್ಚಯವಾಗಿಯೂ ನೀನು ಮೋಸದಿಂದಲೇ ಕೆಳಕ್ಕೆ ಬೀಳಿಸಲ್ಪಟ್ಟಿರುವೆ. ಈ ಕಾರಣದಿಂದ ಪ್ರಾಣಿಗಳು ಎಂದಿನವರೆಗೆ ಈ ಜಗತ್ತಿನಲ್ಲಿ ಉಳಿದಿರುವುವೋ, ಅಂದಿನವರೆಗೂ ಯೋಧರು ವೃಕೋದರನನ್ನು ಯುದ್ಧಸಮಯಗಳಲ್ಲಿ ನಿಶ್ಚಯವಾಗಿಯೂ ನಿಂದಿಸುತ್ತಾರೆ. ಯದುನಂದನನಾದ ವೀರ್ಯವಂತನಾದ ಬಲರಾಮನೇ – '**ದುರ್ಯೋಧನಸಮೋ ನಾಸ್ತಿ ಗದಯಾ**' – 'ಗದಾಯುದ್ಧದಲ್ಲಿ ದುರ್ಯೋಧನನಿಗೆ ಸಮನಾದವನು ಯಾರೂ ಇರುವುದಿಲ್ಲ' – ಎಂದೇ ಹೇಳಿರುವನಲ್ಲವೇ? ವಾರ್ಷ್ಣೇಯನು (ಬಲರಾಮನು) ರಾಜಸಭೆಗಳಲ್ಲಿ – '**ಸ ಶಿಷ್ಯೋ ಮಮ ಕೌರವ್ಯೋ ಗದಾಯುದ್ಧೇ**' – ಎಂದು ನಿನ್ನನ್ನು ಶ್ಲಾಘನೆಮಾಡುತ್ತಿದ್ದನು. ಯುದ್ಧದಲ್ಲಿ ಶತ್ರುವಿಗೆ ಅಭಿಮುಖವಾಗಿ ನಿಂತು ಯುದ್ಧಮಾಡುತ್ತಾ ಪ್ರಾಣತೊರೆದವನಿಗೆ ಯಾವ ಪ್ರಶಸ್ತವಾದ ಉತ್ತಮಗತಿಯು ಸಿಕ್ಕುವುದೆಂದು ಶ್ರೇಷ್ಠರಾದ ಋಷಿಗಳು ಹೇಳುತ್ತಾರೆಯೋ, ಅಂತಹ ಪ್ರಶಸ್ತವಾದ ಉತ್ತಮಗತಿಯನ್ನೇ ನೀನು ಪಡೆದುಕೊಂಡಿರುವೆ. ಈ ಕಾರಣದಿಂದಾಗಿ ನೀನು ಅವಸಾನ ಹೊಂದಿದುದಕ್ಕೆ ನಾನು ಅಷ್ಟಾಗಿ ಶೋಕಿಸುವುದಿಲ್ಲ. ಆದರೆ ಎಲ್ಲ ಮಕ್ಕಳನ್ನೂ ಕಳೆದುಕೊಂಡಿರುವ ನಿನ್ನ ತಾಯಿ-ತಂದೆಗಳಾದ ಗಾಂಧಾರೀ-ಧೃತರಾಷ್ಟ್ರರನ್ನು ಕುರಿತು ನಾನು ಶೋಕಪಡುತ್ತೇನೆ. ಅವರಿಬ್ಬರೂ ಶೋಕಿಸುತ್ತಾ ಭಿಕ್ಷುಕರಂತೆ ಈ ಭೂಮಿಯನ್ನು ಸುತ್ತುವ ಸ್ಥಿತಿಯು ಬಂದೊದ

ಗಿದೆ. ವೃಷ್ಣಿಕುಲನಂದನನಾದ ಶ್ರೀಕೃಷ್ಣನಿಗೂ ಮತ್ತು ದುರ್ಮತಿಯಾದ ಅರ್ಜುನನಿಗೂ ಧಿಕ್ಕಾರವಿರಲಿ! ಏಕೆಂದರೆ : ಧರ್ಮಜ್ಞರೆಂದು ತಿಳಿದು ಕೊಂಡಿರುವ ಅವರಿಬ್ಬರೂ–ಭೀಮಸೇನನು ನಿನ್ನನ್ನು ಅಧರ್ಮದ ಮೂಲಕ



ವಾಗಿ ವಧಿಸುತ್ತಿದ್ದರೂ ಅವನನ್ನು ತಡೆಯಲು ಹೋಗದೇ ಉಪೇಕ್ಷಿಸಿಬಿಟ್ಟರು. ಪಾಂಡವರಾದರೂ ನಾಚಿಕೆಯಿಲ್ಲದೇ – 'ನಮ್ಮಿಂದ ದುರ್ಯೋಧನನು ಅಧರ್ಮದ ಮೂಲಕವಾಗಿ ವಧಿಸಲ್ಪಟ್ಟನು'–ಎಂದು ಹೇಗೆ ತಾನೇ ಹೇಳಿಕೊಳ್ಳುತ್ತಾರೆ?

**ಧನ್ಯಸ್ತ್ವಮಸಿ ಗಾನ್ಧಾರೇ ಯಸ್ತ್ವಮಾಯೋಧನೇ ಹತಃ ।**
**ಪ್ರಾಯಶೋಽಭಿಮುಖಃ ಶತ್ರೂನ್ಧರ್ಮೇಣ ಪುರುಷರ್ಷಭ ॥೩೨॥**

ಗಾಂಧಾರೀಪುತ್ರನೇ! ಪುರುಷಪ್ರವರನೇ! ನಿಶ್ಚಯವಾಗಿ ಹೇಳುವುದಾದರೆ ನೀನೇ ಧನ್ಯನು. ಏಕೆಂದರೆ : ಪ್ರಾಯಶಃ ಎಲ್ಲ ಸಮಯಗಳಲ್ಲಿಯೂ ಶತ್ರುಗಳನ್ನು ಧರ್ಮದಿಂದಲೇ ಎದುರಿಸುತ್ತಾ ಯುದ್ಧಮಾಡುತ್ತಲೇ ನೀನು ಹತನಾಗಿರುವೆ.

ಹತಪುತ್ರಳಾದ ಮತ್ತು ಬಂಧು-ಬಾಂಧವರೆಲ್ಲರನ್ನೂ ಕಳೆದು ಕೊಂಡಿರುವ ಗಾಂಧಾರಿಯೂ ಮತ್ತು ಪ್ರಜ್ಞಾಚಕ್ಷುವಾದ, ದುರ್ಧರ್ಷನಾದ ಧೃತರಾಷ್ಟ್ರನೂ ಇನ್ನು ಮುಂದೆ ಯಾವ ದುರ್ಗತಿಯನ್ನು ಹೊಂದುತ್ತಾ ರೆಂಬುದೇ ತಿಳಿಯದಾಗಿದೆ.

**ಧಿಗಸ್ತು ಕೃತವರ್ಮಾಣಂ ಮಾಂ ಕೃಪಂ ಚ ಮಹಾರಥಮ್ ।**
**ಯೇ ವಯಂ ನ ಗತಾಃ ಸ್ವರ್ಗಂ ತ್ವಾಂ ಪುರಸ್ಕೃತ್ಯ ಪಾರ್ಥಿವಮ್ ॥**

ನಮ್ಮ ರಾಜನಾದ ನಿನ್ನನ್ನು ಮುಂದೆಮಾಡಿಕೊಂಡು ಸ್ವರ್ಗಕ್ಕೆ ಬರಲಾಗದ ಕೃತವರ್ಮನಿಗೂ, ಮಹಾರಥರಾದ ಕೃಪರಿಗೂ ಮತ್ತು ನನಗೂ ಧಿಕ್ಕಾರವಿರಲಿ.

**ದಾತಾರಂ ಸರ್ವಕಾಮಾನಾಂ ರಕ್ಷಿತಾರಂ ಪ್ರಜಾಹಿತಮ್ ।**
**ಯದ್ವಯಂ ನಾನುಗಚ್ಛಾಮ ತ್ವಾಂ ಧಿಗಸ್ಮಾನ್ನರಾಧಮಾನ್ ॥೩೫॥**

ಮನೋವಾಂಛಿತಗಳಾದ ಎಲ್ಲ ಪದಾರ್ಥಗಳನ್ನೂ ಒದಗಿಸಿ ಕೊಡುತ್ತಿದ್ದ, ಪ್ರಜೆಗಳ ಹಿತದ ರಕ್ಷಣೆಯಲ್ಲಿಯೇ ಸರ್ವದಾ ಆಸಕ್ತನಾಗಿದ್ದ, ಮಹಾರಾಜನಾದ ನಿನ್ನನ್ನು ಅನುಸರಿಸದೇ ಇರುವ ನಮ್ಮಂತಹ ನರಾಧಮರಿಗೆ ಧಿಕ್ಕಾರವಿರಲಿ.

**ಕೃಪಸ್ಯ ತವ ವೀರ್ಯೇಣ ಮಮ ಚೈವ ಪಿತುಶ್ಚ ಮೇ ।**
**ಸಭೃತ್ಯಾನಾಂ ನರವ್ಯಾಘ್ರ ರತ್ನವನ್ತಿ ಗೃಹಾಣಿ ಚ ॥೩೬॥**

ಪರಿವಾರಸಮೇತರಾದ ಕೃಪರಿಗೂ, ನನಗೂ ಮತ್ತು ನನ್ನ ತಂದೆ

ಯವರಿಗೂ ಸಂಪದ್ಭರಿತವಾದ ಭವ್ಯಭವನಗಳೂ ನಿನ್ನ ವೀರ್ಯ–ಪರಾಕ್ರಮಗಳಿಂದಲೇ ವಾಸಕ್ಕೆ ಲಭಿಸಿದ್ದುವು.

**ತವ ಪ್ರಸಾದಾದಸ್ಮಾಭಿಃ ಸಮಿತ್ರೈಃ ಸಹಬಾನ್ಧವೈಃ ।**
**ಅವಾಪ್ತಾಃ ಕ್ರತವೋ ಮುಖ್ಯಾ ಬಹವೋ ಭೂರಿದಕ್ಷಿಣಾಃ ॥೩೭॥**

ನಿನ್ನ ಪ್ರಸಾದದಿಂದಲೇ ನಾವು ಮಿತ್ರರಿಂದಲೂ ನಮ್ಮ ಬಂಧುವರ್ಗದವರಿಂದಲೂ ಕೂಡಿ ಭೂರಿದಕ್ಷಿಣಾಕವಾದ ಮುಖ್ಯ-ಮುಖ್ಯವಾದ ಅನೇಕ ಯಜ್ಞಗಳನ್ನು ಮಾಡಿದೆವು.

ನಿನ್ನಿಂದ ಇಷ್ಟೊಂದು ಸಹಾಯ-ಸಂಪತ್ತುಗಳನ್ನು ಪಡೆದುಕೊಂಡಿದ್ದರೂ ಪಾಪಿಷ್ಠರಾದ ನಾವು, ಸಮಸ್ತರಾಜರನ್ನೂ ಮುಂದೆಮಾಡಿಕೊಂಡು ನೀನು ಸ್ವರ್ಗಕ್ಕೆ ಹೋದಂತೆ–ನಿನ್ನನ್ನು ಮುಂದೆಮಾಡಿಕೊಂಡು ಸ್ವರ್ಗಕ್ಕೆ ನಿನ್ನ ಜೊತೆಯಲ್ಲಿ ಬರದೇ ಇಲ್ಲಿಯೇ ಇರುವಂತಾಗಿದೆ. ಮಹಾರಾಜ! ನೀನು ಪರಮಪದಕ್ಕೆ ಹೋಗುತ್ತಿರುವಾಗ ನಾವು ಮೂವರು ಮಾತ್ರವೇ ನಿನ್ನನ್ನು ಅನುಸರಿಸಿ ಬರುತ್ತಿಲ್ಲ. ನಿನ್ನನ್ನು ಅನುಸರಿಸಿ ಬರಲಾಗದ ಕಾರಣದಿಂದ ನಾವು ಸ್ವರ್ಗಹೀನರಾದುದನ್ನೂ, ನಿನ್ನನ್ನು ಅಗಲಿದ ಕಾರಣದಿಂದ ನಾವು ಅರ್ಥಹೀನರಾದುದನ್ನೂ, ಮತ್ತು ನಿನ್ನ ಸುಕೃತವನ್ನೂ ಸ್ಮರಿಸುತ್ತಾ ನಾವು ದುಃಖದಿಂದ ಬೆಂದುಹೋಗುತ್ತಿದ್ದೇವೆ. ಮಹಾರಾಜ! ನಿನ್ನನ್ನು ಅನುಸರಿಸಿ ಬರಲಾಗದುದಕ್ಕೆ ನಿಶ್ಚಯವಾಗಿಯೂ ನಾವು ಎಂತಹ ದುಷ್ಕರ್ಮಗಳನ್ನು ಮಾಡಿರಬಹುದು! ನಿಜವಾಗಿಯೂ ಇನ್ನು ಮುಂದೆ ನಾವು ಜೀವನ ಪರ್ಯಂತವಾಗಿ ದುಃಖಪಡುತ್ತಾ ಈ ಭೂಮಿಯಲ್ಲಿ ಸಂಚರಿಸಬೇಕಾಗಿದೆ. ನಿನ್ನಿಂದ ವಿಹೀನರಾದ ನಮಗೆ ಸುಖವೆಲ್ಲಿದೆ? ಶಾಂತಿಯೆಲ್ಲಿದೆ? ಮಹಾರಾಜ! ಪುಣ್ಯಾತ್ಮನಾದ ನೀನಾದರೂ ಸ್ವರ್ಗಕ್ಕೆ ಹೋಗಿ ನಿನಗಿಂತಲೂ ಮೊದಲೇ ಹೋಗಿರುವ ರಾಜರೊಡನೆ ಸೇರಿಕೊಂಡು ನನ್ನ ಮಾತಿನಂತೆ ಅವರೆಲ್ಲರನ್ನೂ ಜ್ಯೇಷ್ಠ-ಶ್ರೇಷ್ಠಾನುಕ್ರಮದಲ್ಲಿ ಸಮ್ಮಾನಿಸು. ಸರ್ವಧನುಷ್ಮಂತರಿಗೂ ಕೇತುಪ್ರಾಯರಾಗಿದ್ದ ಆಚಾರ್ಯ ದ್ರೋಣರನ್ನು ಸಂಪೂಜಿಸಿ ಧೃಷ್ಟದ್ಯುಮ್ನನು ನನ್ನಿಂದ (ಅಶ್ವತ್ಥಾಮನಿಂದ) ಹತನಾದನೆಂಬ ವಿಷಯವನ್ನು ಅವರೊಡನೆ ಹೇಳಬೇಕು.

ಅನಂತರ ನೀನು ಮಹಾರಥನಾದ ಬಾಹ್ಲಿಕರಾಜನನ್ನೂ, ಜಯದ್ರಥನನ್ನೂ, ಸೋಮದತ್ತನನ್ನೂ ಮತ್ತು ಭೂರಿಶ್ರವಸನನ್ನೂ ಆಲಿಂಗಿಸು. ಅದೇ ರೀತಿಯಲ್ಲಿ ಹಿಂದೆಯೇ ಹೋಗಿ ಸ್ವರ್ಗದಲ್ಲಿರುವ ಇನ್ನೂ ಇತರ ಪಾರ್ಥಿವಶ್ರೇಷ್ಠರೆಲ್ಲರನ್ನೂ ನಮ್ಮ ಮಾತಿನಂತೆ ಆಲಿಂಗಿಸಿಕೊಂಡು ಅವರ ಕುಶಲವನ್ನು ಪ್ರಶ್ನಿಸು."

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಭಗ್ನೋರುವಾಗಿದ್ದ ಮತ್ತು ಚೇತನಾರಹಿತನಾಗಿದ್ದ ರಾಜನೊಡನೆ ಅಶ್ವತ್ಥಾಮನು ಹೀಗೆ ಹೇಳಿ ಅವನನ್ನೇ ದಿಟ್ಟಿಸಿನೋಡುತ್ತಾ ಪುನಃ ಹೇಳತೊಡಗಿದನು :

**ದುರ್ಯೋಧನ ಜೀವಸಿ ತ್ವಂ ವಾಕ್ಯಂ ಶ್ರೋತ್ರಸುಖಂ ಶೃಣು ।**
**ಸಪ್ತಪಾಣ್ಡವತಃ ಶೇಷಾ ಧಾರ್ತರಾಷ್ಟ್ರಾಸ್ತ್ರಯೋ ವಯಮ್ ॥೪೮॥**

"ದುರ್ಯೋಧನ! ನೀನಿನ್ನೂ ಜೀವಿಸಿರುವೆ. ಆದುದರಿಂದ ಕಿವಿಗಳಿಗೆ ಇಂಪನ್ನುಂಟುಮಾಡುವ ಈ ನನ್ನ ಮಾತನ್ನು ಕೇಳು. ಈಗ ಪಾಂಡವರ ಕಡೆಯಲ್ಲಿ ಏಳು ಮಂದಿ ಮಾತ್ರವೇ ಉಳಿದಿರುತ್ತಾರೆ. ಕೌರವರ ಕಡೆಯಲ್ಲಿ ನಾವು ಮೂವರು ಮಾತ್ರ ಉಳಿದುಕೊಂಡಿರುತ್ತೇವೆ.

**ತೇ ಚೈವ ಭ್ರಾತರಃ ಪಞ್ಚ ವಾಸುದೇವೋಽಥ ಸಾತ್ಯಕಿಃ ।**
**ಅಹಂ ಚ ಕೃತವರ್ಮಾ ಚ ಕೃಪಃ ಶಾರದ್ವತಸ್ತಥಾ ॥೪೯॥**

ಅವರು ಐವರು ಅಣ್ಣ-ತಮ್ಮಂದಿರು, ವಾಸುದೇವ ಮತ್ತು ಸಾತ್ಯಕಿ– ಈ ಏಳು ಮಂದಿ ಮಾತ್ರವೇ ಪಾಂಡವರ ಕಡೆಯಲ್ಲಿ ಉಳಿದುಕೊಂಡಿರುತ್ತಾರೆ. ನಾನು, ಕೃತವರ್ಮಾ ಮತ್ತು ಶರದ್ವಂತರ ಮಕ್ಕಳಾದ ಕೃಪರು–ಈ ಮೂವರು ಮಾತ್ರವೇ ನಿನ್ನ ಪಕ್ಷದಲ್ಲಿ ಉಳಿದುಕೊಂಡಿರುತ್ತೇವೆ. ದ್ರೌಪದಿಯ ಐವರು ಮಕ್ಕಳೂ ಹತರಾದರು. ಧೃಷ್ಟದ್ಯುಮ್ನನ ಎಲ್ಲ ಮಕ್ಕಳೂ ಹತರಾದರು. ಎಲ್ಲ ಪಾಂಚಾಲರೂ ಅಸುನೀಗಿದರು. ಮತ್ಸ್ಯಸೈನಿಕರಲ್ಲಿ ಉಳಿದಿದ್ದವರೆಲ್ಲರೂ ಯಮನ ಪಟ್ಟಣವನ್ನು ಸೇರಿದರು. ಅವರು ಮಾಡಿದುದಕ್ಕೆ ನಾವು ಮಾಡಿರುವ ಪ್ರತೀಕಾರವನ್ನು ಗಮನಿಸು. ಈಗ ಪಾಂಡವರೈವರೂ ತಮ್ಮೆಲ್ಲ ಮಕ್ಕಳನ್ನೂ ಕಳೆದುಕೊಂಡಿರುತ್ತಾರೆ.

ಎಲ್ಲರೂ ಮಲಗಿರುವ ಸಮಯದಲ್ಲಿ ನರಾಶ್ವ-ಗಜಗಳಿಂದ ಕೂಡಿದ್ದ ಅವರ ಶಿಬಿರವು ಸಂಪೂರ್ಣವಾಗಿ ನಾಶಮಾಡಲ್ಪಟ್ಟಿತು. ನಾನು ರಾತ್ರಿಯಲ್ಲಿ ಶಿಬಿರವನ್ನು ಪ್ರವೇಶಿಸಿ ಪಾಪಕರ್ಮನಾದ ಧೃಷ್ಟದ್ಯುಮ್ನನನ್ನು ಪಶುವನ್ನು ಕೊಲ್ಲುವ ರೀತಿಯಲ್ಲಿ ಗುದ್ದಿ-ಗುದ್ದಿ ಸಾಯಿಸಿದೆನು."

ಧೃತರಾಷ್ಟ್ರಮಹಾರಾಜ! ತನ್ನ (ದುರ್ಯೋಧನನ) ಮನಸ್ಸಿಗೆ ಪ್ರಿಯವಾಗಿದ್ದ ಅಶ್ವತ್ಥಾಮನಾಡಿದ ಮಾತನ್ನು ಕೇಳಿ ಮೂರ್ಛೆಯಿಂದ ಎಚ್ಚೆತ್ತ ದುರ್ಯೋಧನನು ಹೇಳಿದನು :

**ನ ಮೇಽಕರೋತ್ತದ್ಗಾಙ್ಗೇಯೋ ನ ಕರ್ಣೋ ನ ಚ ತೇ ಪಿತಾ ।**
**ಯತ್ತ್ವಯಾ ಕೃಪಭೋಜಾಭ್ಯಾಂ ಸಹಿತೇನಾದ್ಯ ಮೇ ಕೃತಮ್ ॥**

"ಕೃಪ-ಕೃತವರ್ಮರೊಡನೆ ಕೂಡಿಕೊಂಡು ನೀನೀಗ ನನ್ನ ಸಲುವಾಗಿ ಮಾಡಿರುವ ಅತ್ಯಂತಪ್ರಿಯವಾದ ಕಾರ್ಯವನ್ನು ಭೀಷ್ಮನಾಗಲೀ, ಕರ್ಣನಾಗಲೀ, ನಿನ್ನ ತಂದೆಯೇ ಆಗಲೀ ಮಾಡಲಿಲ್ಲ.

**ಸ ಚ ಸೇನಾಪತಿಃ ಕ್ಷುದ್ರೋ ಹತಃ ಸಾರ್ಧಂ ಶಿಖಣ್ಡಿನಾ ।**
**ತೇನ ಮನ್ಯೇ ಮಘವತಾ ಸಮಮಾತ್ಮಾನಮದ್ಯ ವೈ ॥೫೫॥**

ಪಾಂಡವರ ಸೇನಾಪತಿಯಾಗಿದ್ದ ಕ್ಷುದ್ರನಾದ ಧೃಷ್ಟದ್ಯುಮ್ನನು ಶಿಖಂಡಿಸಹಿತನಾಗಿಯೇ ನಿನ್ನಿಂದ ಹತನಾದನು. ಈ ಕಾರಣದಿಂದ ನಾನು ನನ್ನನ್ನು ಇಂದ್ರನಿಗೆ ಸಮಾನನಾದವನೆಂದೇ ಭಾವಿಸಿಕೊಳ್ಳುತ್ತೇನೆ.

**ಸ್ವಸ್ತಿ ಪ್ರಾಪ್ನುತ ಭದ್ರಂ ವಃ ಸ್ವರ್ಗೇ ನಃ ಸಂಗಮಃ ಪುನಃ ॥೫೬॥**

ನಿಮ್ಮೆಲ್ಲರಿಗೂ ಒಳ್ಳೆಯದಾಗಲಿ. ನಿಮ್ಮೆಲ್ಲರಿಗೂ ಮಂಗಳವಾಗಲಿ. ನಾವೆಲ್ಲರೂ ಸ್ವರ್ಗದಲ್ಲಿ ಪುನಃ ಸಂಧಿಸೋಣ."

ಮಹಾತ್ಮನಾದ ದುರ್ಯೋಧನನು ಹೀಗೆ ಹೇಳಿ ಸುಮ್ಮನಾದನು. ಮರುಕ್ಷಣದಲ್ಲಿಯೇ ತನ್ನ ಸುಹೃದರೆಲ್ಲರಿಗೂ ದುಃಖವನ್ನು ವಹಿಸಿಕೊಟ್ಟು (ಸುಹೃದರನ್ನು ದುಃಖಿಗಳನ್ನಾಗಿ ಮಾಡುತ್ತಾ) ವೀರನಾದ ದುರ್ಯೋಧನನು ಪ್ರಾಣಗಳನ್ನು ತೊರೆದನು. ಕೂಡಲೇ ಅವನು ಪುಣ್ಯಧಾಮವಾದ ಸ್ವರ್ಗಕ್ಕೆ ಹೊರಟುಹೋದನು. ಅವನ ಪಾರ್ಥಿವಶರೀರವು ಮಾತ್ರ ಭೂಮಿಯಲ್ಲಿ ಉಳಿಯಿತು.

ಮಹಾರಾಜ! ಎಲ್ಲರಿಗಿಂತಲೂ ಮುಂದಾಗಿ ಯುದ್ಧಕ್ಕೆ ಹೋಗಿದ್ದ ನಿನ್ನ ಮಗನು ಎಲ್ಲರಿಗಿಂತಲೂ ಕಡೆಯಲ್ಲಿ ಶತ್ರುಗಳಿಂದ ಕೊಲ್ಲಲ್ಪಟ್ಟು ಹೀಗೆ ನಿಧನಹೊಂದಿದನು. ಅದೇ ರೀತಿಯಲ್ಲಿ ಸಾಯುವ ಸಮಯದಲ್ಲಿ ದುರ್ಯೋಧನನಿಂದ ಆಲಿಂಗಿಸಲ್ಪಟ್ಟ ಆ ಮೂವರು ಮಹಾರಥರೂ ಪ್ರಾಣಪರಿತ್ಯಾಗಮಾಡಿದ ದುರ್ಯೋಧನನ ಕಳೇಬರವನ್ನೇ ಆಲಿಂಗಿಸಿ ಪುನಃ ಪುನಃ ಅವನ ಶರೀರವನ್ನೇ ವೀಕ್ಷಿಸುತ್ತಾ ರಥಗಳನ್ನು ಹತ್ತಿದರು."

ಹೀಗೆ ದ್ರೋಣಪುತ್ರನಾದ ಅಶ್ವತ್ಥಾಮನ ಕರುಣಾಜನಕವಾದ ಮಾತನ್ನು ಕೇಳಿ ನಾನು ಅತ್ಯಂತಶೋಕಾರ್ತನಾಗಿ ಬೆಳಗಾಗುತ್ತಲೇ ಹಸ್ತಿನಾಪಟ್ಟಣಕ್ಕೆ ಓಡುತ್ತಾ ಬಂದೆನು. ಮಹಾರಾಜ! ನಿನ್ನ ಕುಮಂತ್ರಿತ್ವದ ಕಾರಣದಿಂದಾಗಿ ಕುರು-ಪಾಂಡವರಲ್ಲಿ ಘೋರವಾದ, ಭಯಂಕರವಾದ ಮತ್ತು ಸರ್ವಜನಕ್ಷಯಕರವೂ ಆದ ಸಂಹಾರಕಾರ್ಯವು ನಡೆದು ಹೋಯಿತು.

**ತವ ಪುತ್ರೇ ಗತೇ ಸ್ವರ್ಗಂ ಶೋಕಾರ್ತಸ್ಯ ಮಮಾನಘ ।**
**ಋಷಿದತ್ತಂ ಪ್ರಣಷ್ಟಂ ತದ್ದಿವ್ಯದರ್ಶಿತ್ವಮದ್ಯ ವೈ ॥೬೨॥**

ನಿನ್ನ ಮಗನು ಸ್ವರ್ಗಕ್ಕೆ ಹೋದ ಬಳಿಕ ಶೋಕಾರ್ತನಾದ ನನಗೆ ವ್ಯಾಸಮಹರ್ಷಿಗಳಿಂದ ಅನುಗೃಹೀತವಾಗಿದ್ದ ದಿವ್ಯದರ್ಶಿತ್ವವೂ ನಷ್ಟವಾಗಿ ಹೋಯಿತು."

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಮಹಾರಾಜ! ಧೃತರಾಷ್ಟ್ರರಾಜನು ಮಗನ ಮರಣವಾರ್ತೆಯನ್ನು ಕೇಳಿ ಪುನಃ ಪುನಃ ಬಿಸಿ-ಬಿಸಿಯಾದ ನಿಟ್ಟುಸಿರನ್ನು ಬಿಡುತ್ತಾ ಚಿಂತಾಮಗ್ನನಾದನು."

೯ನೆಯ ಅಧ್ಯಾಯವು ಮುಗಿಯಿತು.

## ಮಕ್ಕಳೂ ಮತ್ತು ಎಲ್ಲ ಪಾಂಚಾಲರೂ ಹತರಾದುದನ್ನು ಧೃಷ್ಟದ್ಯುಮ್ನನ ಸಾರಥಿಯಿಂದ ಕೇಳಿದ ಯುಧಿಷ್ಠಿರನು ವಿಲಪಿಸಿದುದು : ದ್ರೌಪದಿಯನ್ನು ಕರೆತರಲು ನಕುಲನನ್ನು ಕಳುಹಿಸಿದುದು : ಧರ್ಮರಾಜನು ಸುಹೃದರೊಡನೆ ಶಿಬಿರಕ್ಕೆ ಹೋಗಿ ಹತರಾಗಿದ್ದ ಪುತ್ರರನ್ನು ಕಂಡು ಶೋಕಾಕುಲನಾದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಆ ಘೋರರಾತ್ರಿಯು ಕಳೆದನಂತರ ಧೃಷ್ಟದ್ಯುಮ್ನನ ಸಾರಥಿಯು ಧರ್ಮರಾಜನ ಬಳಿಗೆ ಹೋಗಿ ಎಲ್ಲರೂ ಮಲಗಿದ್ದ ಸಮಯದಲ್ಲಾದ ಮಹಾಸಂಹಾರಕಾರ್ಯವನ್ನು ರಾಜನಿಗೆ ತಿಳಿಸಿದನು :

"ಮಹಾರಾಜ! ನಿಶ್ಚಿಂತೆಯಿಂದ ಪ್ರಮತ್ತರಾಗಿ ಶಿಬಿರಗಳಲ್ಲಿ ಮಲಗಿದ್ದ ದ್ರುಪದನ ಎಲ್ಲ ಮಕ್ಕಳೂ, ದ್ರೌಪದಿಯ ಎಲ್ಲ ಮಕ್ಕಳೂ ಹತರಾದರು. ಕ್ರೂರನಾದ ಕೃತವರ್ಮನಿಂದಲೂ, ಗೌತಮವಂಶೀಯರಾದ ಕೃಪರಿಂದಲೂ, ಪಾಪಿಷ್ಠನಾದ ಅಶ್ವತ್ಥಾಮನಿಂದಲೂ ಕಳೆದ ರಾತ್ರಿಯಲ್ಲಿ ನಮ್ಮ ಶಿಬಿರವು ವಿಧ್ವಸ್ತವಾಯಿತು. ಆ ಮೂವರೂ ಪ್ರಾಸ, ಶಕ್ತಿ ಮತ್ತು ಗಂಡುಗೊಡಲಿಗಳಿಂದ ಸಾವಿರಾರು ಗಜಾಶ್ವ-ಪದಾತಿಸೈನಿಕರನ್ನು ಸಂಹರಿಸಿ ನಿನ್ನ ಸೈನ್ಯವನ್ನು ನಿಃಶೇಷಗೊಳಿಸಿಬಿಟ್ಟರು. ಗಂಡುಗೊಡಲಿಗಳಿಂದ ಕತ್ತರಿಸಲ್ಪಡುತ್ತಿರುವ ದೊಡ್ಡ ಕಾಡಿನಂತೆ–ಕತ್ತರಿಸಲ್ಪಡುತ್ತಿದ್ದ ನಿನ್ನ ಸೈನ್ಯಸಮೂಹದಿಂದ ದೊಡ್ಡದಾದ ಆರ್ತನಾದವು ಕೇಳಿಬಂದಿತು. ಮಹಾಮತಿಯೇ! ಧರ್ಮಾತ್ಮನೇ! ಕೃತವರ್ಮನು ಬೇರೆಯ ಕಡೆ ವ್ಯಗ್ರನಾಗಿದ್ದಾಗ ಆ ಸೈನ್ಯಸಮೂಹದಿಂದ ನಾನೊಬ್ಬನು ಮಾತ್ರ ಹೇಗೋ ಮುಕ್ತನಾಗಿ ಉಳಿದುಕೊಂಡೆನು."

ಜನಮೇಜಯ! ಧೃಷ್ಟದ್ಯುಮ್ನನ ಸಾರಥಿಯು ಹೇಳಿದ ಅಮಂಗಳ ಕರವಾದ ಮಾತನ್ನು ಕೇಳಿ ಕುಂತಿಯ ಮಗನಾದ, ದುರ್ಧರ್ಷನಾದ ಯುಧಿಷ್ಠಿರನು ಪುತ್ರಶೋಕದಿಂದ ಸಂತಪ್ತನಾಗಿ ನೆಲದ ಮೇಲೆ ಉರುಳಿ

ದನು. ಮೂರ್ಛಿತನಾಗಿ ಕೆಳಗೆ ಬೀಳುವುದರಲ್ಲಿದ್ದ ಯುಧಿಷ್ಠಿರನನ್ನು ಸಾತ್ಯಕಿಯೂ, ಭೀಮಾರ್ಜುನ-ನಕುಲ-ಸಹದೇವರೂ ಮುನ್ನುಗ್ಗಿ ಹಿಡಿದುಕೊಂಡರು. ಶೈತ್ಯೋಪಚಾರದಿಂದ ಯುಧಿಷ್ಠಿರನು ಸಂಜ್ಞೆಯನ್ನು ಪಡೆದುಕೊಂಡು ಶೋಕದಿಂದ ಗದ್ಗದವಾಗಿ ಹೊರಡುತ್ತಿದ್ದ ಮಾತಿನಿಂದ – 'ಜಿತ್ವಾ ಶತ್ರೂಞ್ಜಿತಃ ಪಶ್ಚಾತ್' – 'ಮೊದಲು ಶತ್ರುವನ್ನು ಜಯಿಸಿ ಕಡೆಯಲ್ಲಿ ನಾನೇ ಶತ್ರುಗಳಿಂದ ಪರಾಜಿತನಾದೆನಲ್ಲವೇ!'–ಎಂದು ಹೇಳಿಕೊಂಡು ಆರ್ತನೋಪಾದಿಯಲ್ಲಿ ಅಳತೊಡಗಿದನು.

**ದುರ್ವಿದಾ ಗತಿರರ್ಥಾನಾಮಪಿ ಯೇ ದಿವ್ಯಚಕ್ಷುಷಃ ।**
**ಜೀಯಮಾನಾ ಜಯನ್ತ್ಯನ್ಯೇ ಜಯಮಾನಾ ವಯಂ ಜಿತಾಃ ॥೧೦॥**

"ದಿವ್ಯದೃಷ್ಟಿಯಿರುವವರಿಗೂ ಅರ್ಥದ (ಪ್ರಯೋಜನದ) ಮಾರ್ಗವನ್ನು ತಿಳಿಯುವುದು ದುಷ್ಕರವೇ ಆಗಿರುತ್ತದೆ. ಏಕೆಂದರೆ : ಬೇರೆಯವರು (ಶತ್ರುಗಳು) ಪರಾಜಿತರಾದರೂ ವಿಜಯಗಳಿಸಿದರು. ನಾವು ವಿಜಯಗಳಿಸಿದರೂ ಪರಾಜಿತರಾದೆವು. ಸಹೋದರರರನ್ನೂ, ಸ್ನೇಹಿತರನ್ನೂ, ಪಿತೃಗಳನ್ನೂ, ಮಕ್ಕಳನ್ನೂ, ಸುಹೃದರನ್ನೂ, ಬಂಧುಗಳನ್ನೂ, ಅಮಾತ್ಯರನ್ನೂ, ಮೊಮ್ಮಕ್ಕಳನ್ನೂ ಸಂಹರಿಸಿ ಜಯಗಳಿಸಿದ್ದ ನಾವು ಕಟ್ಟಕಡೆಗೆ ಪರಾಜಿತರಾದೆವು.

**ಅನರ್ಥೋ ಹ್ಯರ್ಥಸಂಕಾಶಸ್ತಥಾನರ್ಥೋಽರ್ಥದರ್ಶನಃ ।**
**ಜಯೋಽಯಮಜಯಾಕಾರೋ ಜಯಸ್ತಸ್ಮಾತ್ಪರಾಜಯಃ ॥೧೨॥**

ಅನೇಕಸಮಯಗಳಲ್ಲಿ ಅನರ್ಥವು ಅರ್ಥಸದೃಶವಾಗಿರುತ್ತದೆ. ಅರ್ಥದ ರೂಪದಲ್ಲಿ ಕಾಣುತ್ತಿರುವುದೂ ಕೆಲವು ಸಮಯಗಳಲ್ಲಿ ಅನರ್ಥದ ಪರಿಣಾಮವನ್ನೇ ಉಂಟುಮಾಡುತ್ತದೆ. ಇದೇ ರೀತಿಯಲ್ಲಿ ನಮಗೆ ಪ್ರಾಪ್ತವಾಗಿರುವ ವಿಜಯವು ಪರಾಜಯದ ರೂಪವನ್ನೇ ಹೊಂದಿದೆ. ಆದುದರಿಂದ ನಮಗಾದ ವಿಜಯವು ನಿಜವಾದ ವಿಜಯವಲ್ಲ. ಪರಾಜಯವೇ ಸರಿ.

**ಯಜ್ಜಿತ್ವಾ ತಪ್ಯತೇ ಪಶ್ಚಾದಾಪನ್ನ ಇವ ದುರ್ಮತಿಃ ।**
**ಕಥಂ ಮನ್ಯೇತ ವಿಜಯಂ ತತೋ ಜಿತತರಃ ಪರೈಃ ॥೧೩॥**

ದುರ್ಬುದ್ಧಿಯ ಮನುಷ್ಯನು ವಿಜಯಗಳಿಸಿದನಂತರವೂ ಆಪತ್ತಿನಲ್ಲಿ ಮುಳುಗಿದವನಂತೆ ಪಶ್ಚಾತ್ತಾಪಪಡುವ ಪರಿಸ್ಥಿತಿಯು ಒದಗಿದರೆ ಅವನು

ತನಗೆ ವಿಜಯವು ಲಭಿಸಿತೆಂದು ಭಾವಿಸಲು ಹೇಗೆ ತಾನೇ ಸಾಧ್ಯವಾಗುತ್ತದೆ? (ಶತ್ರುಗಳನ್ನು ಜಯಿಸಿ ಸಂತೋಷಪಡಬೇಕಾದುದೇನೋ ಸರಿ. ಶತ್ರುಗಳನ್ನು ಜಯಿಸಿದನಂತರವೂ ದುಃಖಪಡುವ ಪ್ರಸಂಗವು ಒದಗಿ ಬಂದರೆ ವಿಜಯದ ಸಂತೋಷವು ಎಲ್ಲಿ ಉಳಿಯುತ್ತದೆ? ) ಆದುದರಿಂದ ನಾನೀಗ ಶತ್ರುಗಳಿಂದ ಸಂಪೂರ್ಣವಾಗಿ ಪರಾಜಯಗೊಳಿಸಲ್ಪಟ್ಟಿದ್ದೇನೆ.

**ಯೇಷಾಮರ್ಥಾಯ ಪಾಪಂ ಸ್ಯಾದ್ವಿಜಯಸ್ಯ ಸುಹೃದ್ವಧೈಃ ।**
**ನಿರ್ಜಿತೈರಪ್ರಮತ್ತೈರ್ಹಿ ವಿಜಿತಾ ಜಿತಕಾಶಿನಃ ॥೧೪॥**

ವಿಜಯಕ್ಕೋಸ್ಕರ ಮಾಡಿದ ಸ್ನೇಹಿತರ ವಧೆಯಿಂದ ಯಾರಿಗೆ ಪಾಪವು ಸಂಭವಿಸಿತೋ ಆ ನಮ್ಮ ವಿಜಯಶಾಲಿಗಳಾದ ಯೋಧರನ್ನು, ಸೋತುಹೋದರೂ ಎಚ್ಚರಿಕೆಯಿಂದಿದ್ದ ನಮ್ಮ ಶತ್ರುಗಳು ಜಯಿಸಿದರು.

ಕ್ರೋಧಾಭಿಭೂತನಾದ ಕರ್ಣನು ಮನುಷ್ಯರಲ್ಲಿ ಸಿಂಹಪ್ರಾಯನಾಗಿದ್ದನು. ಕರ್ಣೀ ಮತ್ತು ನಾಲೀಕಗಳೆಂಬ ಬಾಣಗಳೇ ಕರ್ಣರೂಪಿಯಾದ ಸಿಂಹಕ್ಕೆ ಕೋರೆದಾಡೆಗಳಾಗಿದ್ದುವು. ಖಡ್ಗವೆಂಬುದೇ ನಾಲಿಗೆಯಾಗಿದ್ದಿತು. ಮಂಡಲಾಕಾರವಾಗಿ ಆಕೃಷ್ಟವಾದ ಧನುಸ್ಸೇ ಭಯಂಕರವಾದ ಸಿಂಹದ ತೆರೆದಬಾಯಿನಂತಿದ್ದಿತು. ಶಿಂಜಿನಿಯ ಟೇಂಕಾರಶಬ್ದವೇ ಕರ್ಣರೂಪಿಯಾದ ಸಿಂಹದ ಗರ್ಜನೆಯಾಗಿದ್ದಿತು. ಸಿಂಹಪ್ರಾಯನಾದ, ಯುದ್ಧದಲ್ಲಿ ಹಿಂದಿರುಗದ ಕರ್ಣನಿಂದ ತಪ್ಪಿಸಿಕೊಂಡ ನಮ್ಮ ಕಡೆಯ ಯೋಧರು ಕೇವಲ ಅಜಾಗರೂಕತೆಯಿಂದಾಗಿ ಹತರಾದರು.

ದ್ರೋಣಾಚಾರ್ಯರು ಮಹಾಸಾಗರಕ್ಕೆ ಸಮಾನರಾಗಿದ್ದರು. ಅವರ ರಥವೇ ಸಮುದ್ರದಲ್ಲಿನ ಮಡುವಿನ ರೂಪದಲ್ಲಿದ್ದಿತು. ಬಾಣಗಳ ವರ್ಷವೇ ಸಮುದ್ರದ ತೆರೆಗಳಂತಿದ್ದುವು. ರತ್ನಮಯವಾದ ಭೂಷಣಗಳೇ ಆ ಮಹಾ ಸಮುದ್ರಕ್ಕೆ ರತ್ನಗಳಾಗಿದ್ದುವು. ರಥದ ಕುದುರೆಗಳು ಸಮುದ್ರದ ಕುದುರೆಗಳಂತೆಯೇ ಕಾಣುತ್ತಿದ್ದುವು. ಶಕ್ತಿ ಮತ್ತು ಋಷ್ಟಿಗಳು ಸಮುದ್ರದಲ್ಲಿನ ಮೀನುಗಳಂತಿದ್ದುವು. ಧ್ವಜಗಳೇ ನಾಗ ಮತ್ತು ಮೊಸಳೆಗಳಿಗೆ ಸಮಾನವಾಗಿದ್ದುವು. ಧನುಸ್ಸೇ ಸುಳಿಯಂತಿದ್ದಿತು. ದೊಡ್ಡ-ದೊಡ್ಡ ಬಾಣಗಳೇ ಸಮುದ್ರದ ನೊರೆಗಳ ರೂಪದಲ್ಲಿದ್ದುವು. ಯುದ್ಧವೆಂಬ ಚಂದ್ರೋದಯದ ಸಮಯದಲ್ಲಿ ವೇಗದಿಂದ ಶತ್ರುಗಳ ಮೇಲೆ ನುಗ್ಗುವುದೇ

ವೇಗವಾಗಿ ಉಕ್ಕಿಬರುವ ಸಮುದ್ರದ ಎಲ್ಲೆಯ ರೂಪದಲ್ಲಿದ್ದಿತು. ಶಿಂಜಿನಿಗಳ ಟಂಕಾರಧ್ವನಿಯ ಮತ್ತು ರಥಚಕ್ರಗಳ ಗಡ-ಗಡಾಶಬ್ದಗಳೂ ಸಮುದ್ರದ ಗರ್ಜನೆಯ ರೂಪದಲ್ಲಿದ್ದುವು. ನಮ್ಮ ಕಡೆಯ ಯೋಧರು, ದ್ರೋಣರೂಪವಾದ ಆ ಮಹಾಸಾಗರವನ್ನು ಬಗೆ-ಬಗೆಯ ಶಸ್ತ್ರಗಳನ್ನೇ ನೌಕೆಗಳನ್ನಾಗಿ ಮಾಡಿಕೊಂಡು ದಾಟಿದರು. ಅಂತಹವರೇ ಈಗ ನಮ್ಮೆಲ್ಲರ ಅಜಾಗರೂಕತೆಯಿಂದಾಗಿ ಹತರಾದರು.

ನ ಹಿ ಪ್ರಮಾದಾತ್ಪರಮಸ್ತಿ ಕಶ್ಚಿದ್ವಧೋ
ನರಾಣಾಮಿಹ ಜೀವಲೋಕೇ ।
ಪ್ರಮತ್ತಮರ್ಥಾ ಹಿ ನರಂ ಸಮನ್ತಾ-
ತ್ತ್ಯಜನ್ತ್ಯನರ್ಥಾಶ್ಚ ಸಮಾವಿಶನ್ತಿ ॥೧೯॥

ಅಜಾಗರೂಕತೆಗಿಂತಲೂ ದೊಡ್ಡದಾದ ಮೃತ್ಯುವು ಮನುಷ್ಯರಿಗೆ ಈ ಜೀವಲೋಕದಲ್ಲಿ ಮತ್ತೊಂದಿರುವುದಿಲ್ಲ. ಅಜಾಗರೂಕತೆಯಿಂದಿರುವವ ನನ್ನು ಅರ್ಥಗಳು (ಪುರುಷಾರ್ಥಗಳು) ಎಲ್ಲ ಕಡೆಗಳಿಂದಲೂ ಪರಿತ್ಯಾಗ ಮಾಡುತ್ತವೆ. ಪುರುಷಾರ್ಥಗಳು ದೂರವಾಗುವುದರೊಡನೆಯೇ ಅನರ್ಥ ಗಳು ಕಾಲಿಡುತ್ತವೆ.

ಮಹಾಸಮರದಲ್ಲಿ ಭೀಷ್ಮರೂಪಿಯಾದ ಅಗ್ನಿಯು ನಮ್ಮ (ಪಾಂಡವರ) ಸೈನ್ಯವನ್ನು ದಹಿಸುತ್ತಿದ್ದಿತು. ಎತ್ತರವಾದ ಧ್ವಜಗಳ ತುದಿಯಲ್ಲಿ ಹಾರಾಡುತ್ತಿದ್ದ ಧ್ವಜಪಟಗಳು ಅಗ್ನಿಯ ಧೂಮದಂತೆ ಕಾಣು ತ್ತಿದ್ದುವು. ಬಾಣಗಳ ವೃಷ್ಟಿಯು ಅಗ್ನಿಯ ಜ್ವಾಲೆಗಳಿಗೆ ಸಮಾನವಾಗಿ ಕಾಣುತ್ತಿದ್ದುವು. ಕೋಪವೆಂಬ ಚಂಡಮಾರುತವು ಅಗ್ನಿಯ ಜ್ವಾಲೆಗಳನ್ನು ವೃದ್ಧಿಗೊಳಿಸುತ್ತಿದ್ದಿತು. ಮಹಾಧನುಸ್ಸಿನ ಟಂಕಾರಶಬ್ದಗಳೂ, ಚಪ್ಪಾಳೆಯ ಶಬ್ದಗಳೂ, ರಥಚಕ್ರಗಳ ಶಬ್ದಗಳೂ ಭೀಷ್ಮಾಗ್ನಿಯ ಚಟ-ಚಟಾಶಬ್ದ ಗಳೋ ಎಂಬಂತೆ ಕೇಳಿಬರುತ್ತಿದ್ದುವು. ಕವಚಗಳೂ ಮತ್ತು ನಾನಾವಿಧ ವಾದ ಅಸ್ತ್ರ-ಶಸ್ತ್ರಗಳೂ ಭೀಷ್ಮಾಗ್ನಿಗೆ ಆಹುತಿಗಳ ರೂಪದಲ್ಲಿದ್ದುವು. ಮಹಾಸೇನಾರೂಪವಾದ ಒಣಮರಗಳ ಕಾಡಿಗೆ ಭೀಷ್ಮನು ದಾವಾಗ್ನಿಯ ರೂಪದಲ್ಲಿದ್ದನು. ಕೈಯಲ್ಲಿ ಹಿಡಿದಿದ್ದ ಅಸ್ತ್ರ-ಶಸ್ತ್ರಗಳೇ ಆ ಅಗ್ನಿಯ ವೇಗ

ರೂಪದಲ್ಲಿದ್ದುವು. ಇಂತಹ ಭೀಷ್ಮಮಯವಾದ ಅಗ್ನಿಯ ದಹನಕ್ರಿಯೆಯನ್ನೇ ಸಹಿಸಿಕೊಂಡಿದ್ದ ರಾಜಪುತ್ರರು ಈಗ ಕೇವಲ ನಮ್ಮೆಲ್ಲರ ಅಜಾಗರೂಕತೆಯ ಕಾರಣದಿಂದಾಗಿ ವಿನಾಶಹೊಂದಿದರು.

ನ ಹಿ ಪ್ರಮತ್ತೇನ ನರೇನ ಶಕ್ಯಂ
ವಿದ್ಯಾ ತಪಃ ಶ್ರೀರ್ವಿಪುಲಂ ಯಶೋ ವಾ ।
ಪಶ್ಯಾಪ್ರಮಾದೇನ ನಿಹತ್ಯ ಶತ್ರೂ-
ನ್ಸರ್ವಾನ್ಮಹೇನ್ದ್ರಂ ಸುಖಮೇಧಮಾನಮ್ ॥೨೨॥

ಅಜಾಗರೂಕತೆಯಿಂದಿರುವ ಮನುಷ್ಯನಿಂದ ವಿದ್ಯೆ, ತಪಸ್ಸು, ಐಶ್ವರ್ಯ ಮತ್ತು ವಿಪುಲವಾದ ಯಶಸ್ಸುಗಳನ್ನು ಸಂಪಾದಿಸಲು ಸಾಧ್ಯವೇ ಆಗುವುದಿಲ್ಲ. ಸರ್ವದಾ ಜಾಗರೂಕನಾಗಿಯೇ ಇದ್ದುಕೊಂಡು ಶತ್ರುಗಳೆಲ್ಲರನ್ನೂ ಸಂಹರಿಸಿ ಸುಖಪಡುತ್ತಿರುವ ಮಹೇಂದ್ರನನ್ನಾದರೂ ನೋಡು.

ಸಂಪತ್ತಿನಿಂದ ಸಮೃದ್ಧರಾದ ವರ್ತಕರು ಮಹಾಸಮುದ್ರವನ್ನು ದಾಟಿದನಂತರ ಹಳ್ಳವನ್ನು ಕಂಡು ತಾತ್ಸಾರಭಾವದಿಂದ ಅಜಾಗರೂಕರಾಗಿದ್ದು ಆ ಪುಟ್ಟ ಹಳ್ಳದಲ್ಲಿಯೇ ಮುಳುಗಿಹೋಗುವಂತೆ–ಯಾವ ವಿಶೇಷವಾದ ಕಾರಣವೂ ಇಲ್ಲದೇ ಕೇವಲ ಅಜಾಗರೂಕತೆಯ ಕಾರಣದಿಂದಲೇ ಇಂದ್ರೋಪಮರಾದ ರಾಜರ ಮಕ್ಕಳು ಮತ್ತು ಮೊಮ್ಮಕ್ಕಳೂ ಹತರಾದುದನ್ನು ನೋಡು.

ನಮ್ಮ ಕಡೆಯ ಸೈನಿಕರೆಲ್ಲರೂ ಮಲಗಿದ್ದಾಗ ಕೋಪಾವಿಷ್ಟರಾದ ಶತ್ರುಗಳಿಂದ ಕೊಲ್ಲಲ್ಪಟ್ಟು ನಿಃಸಂದೇಹವಾಗಿ ಸ್ವರ್ಗಕ್ಕೆ ಹೋಗಿದ್ದಾರೆ. (ಅವರೆಲ್ಲರಿಗೂ ಪುಣ್ಯಲೋಕಗಳೇ ಲಭಿಸಿವೆ.) ಈ ಸಮಯದಲ್ಲಿ ನಾನು ಎಲ್ಲ ಮಕ್ಕಳನ್ನೂ ಮತ್ತು ಸಹೋದರರನ್ನೂ ಕಳೆದುಕೊಂಡಿರುವ ದ್ರೌಪದಿಯ ವಿಷಯವಾಗಿ ಚಿಂತಿಸುತ್ತಿದ್ದೇನೆ. ಸಾಧ್ವಿಯಾದ ದ್ರೌಪದಿಯು ಶೋಕಸಮುದ್ರದಲ್ಲಿ ಮುಳುಗಿ ವಿನಾಶಹೊಂದುತ್ತಾಳೆ. ಇದನ್ನು ತಪ್ಪಿಸುವುದು ಹೇಗೆಂದು ನಾನು ಯೋಚಿಸುತ್ತಿದ್ದೇನೆ. ಹಿಂದಿನಿಂದಲೂ ನಾನಾ ವಿಧವಾದ ದುಃಖಗಳನ್ನು ಅನುಭವಿಸುತ್ತಿರುವ ಅವಳು ಶೋಷಿಸಿಹೋಗಿ

ದ್ದಾಳೆ. ಶೋಕದ ಕಾರಣದಿಂದ ಒಣಗಿಹೋದ ಕಡ್ಡಿಯಂತಾಗಿಬಿಟ್ಟಿದ್ದಾಳೆ. ಈ ಸಮಯದಲ್ಲಿ ಅಣ್ಣ-ತಮ್ಮಂದಿರೂ, ಮಕ್ಕಳೂ ಮತ್ತು ವೃದ್ಧನಾದ, ಪಾಂಚಾಲರಾಜನಾದ ಮತ್ತು ತಂದೆಯಾದ ದ್ರುಪದನೂ ಯುದ್ಧದಲ್ಲಿ ಹತರಾದರೆಂಬ ವಾರ್ತೆಯನ್ನು ಕೇಳಿದೊಡನೆಯೇ ನಿಶ್ಚಯವಾಗಿಯೂ ಅವಳು ಎಚ್ಚರದಪ್ಪಿ ಭೂಮಿಯ ಮೇಲೆ ಬೀಳುತ್ತಾಳೆ. ಸುಖೋಚಿತಳಾದ ದ್ರೌಪದಿಯು ಶೋಕದಿಂದುಂಟಾದ ದುಃಖವನ್ನು ತಡೆದುಕೊಳ್ಳಲಾರದೇ ಮುಂದೇನಾಗುವಳೆಂಬುದನ್ನು ನಾನು ಊಹಿಸಲೂ ಅಸಮರ್ಥನಾಗಿದ್ದೇನೆ. ಮಕ್ಕಳು ಮತ್ತು ಸಹೋದರರ ವಧೆಯಿಂದ ಉದ್ವೇಜಿತಳಾದ ದ್ರೌಪದಿಯು ಧಗ-ಧಗಿಸುವ ಶೋಕರೂಪವಾದ ಅಗ್ನಿಯಿಂದ ಬೆಂದುಹೋಗುತ್ತಾಳೆ.”

ಜನಮೇಜಯ! ದುಃಖಪೀಡಿತನಾಗಿದ್ದ ಕುರುರಾಜನಾದ ಯುಧಿಷ್ಠಿರನು ಹೀಗೆ ಹೇಳಿಕೊಂಡು ವಿಲಪಿಸುತ್ತಾ ನಕುಲನೊಡನೆ ಹೇಳಿದನು :

“ನಕುಲ! ಹೋಗು. ಮಂದಭಾಗ್ಯಳಾದ, ರಾಜಪುತ್ರಿಯಾದ ದ್ರೌಪದಿಯನ್ನು ಅವಳ ತಾಯಿಯ ಕಡೆಯ ಸ್ತ್ರೀಯರ ಸಮೇತವಾಗಿ ಇಲ್ಲಿಗೆ ಕರೆದುಕೊಂಡು ಬಾ.”

ಮಾದ್ರಿಯ ಮಗನಾದ ನಕುಲನು, ಧರ್ಮಾಚರಣೆಯಿಂದ ಯಮಧರ್ಮನಿಗೆ ಸಮಾನನಾದ ಯುಧಿಷ್ಠಿರನ ಆ ಮಾತನ್ನು ಶಿರಸಾ ವಹಿಸಿ, ರಥದಲ್ಲಿ ಕುಳಿತು ದ್ರೌಪದೀದೇವಿಯ ಮತ್ತು ಪಾಂಚಾಲರಾಜನಾದ ಧೃಷ್ಟದ್ಯುಮ್ನನ ಪತ್ನಿಯರಿದ್ದ ಅರಮನೆಗೆ ತೆರಳಿದನು. ಇತ್ತಲಾಗಿ ದ್ರೌಪದಿಯನ್ನು ಕರೆತರಲು ನಕುಲನನ್ನು ಕಳುಹಿಸಿದನಂತರ ಅಜಮೀಢಕುಲ ನಂದನನಾದ ಯುಧಿಷ್ಠಿರನು ಶೋಕಾಕುಲರಾದ ಸುಹೃದರಿಂದ ಕೂಡಿಕೊಂಡು ಭೂತಗಣಗಳಿಂದ ವ್ಯಾಪ್ತವಾಗಿದ್ದ, ತನ್ನ ಮಕ್ಕಳು ಅಸುನೀಗಿ ಬಿದ್ದಿದ್ದ ಯುದ್ಧಸ್ಥಳಕ್ಕೆ, ಗಟ್ಟಿಯಾಗಿ ಅಳುತ್ತಲೇ ಹೋದನು. ಯುಧಿಷ್ಠಿರನು ಭಯಂಕರವಾಗಿ ಕಾಣುತ್ತಿದ್ದ ಮತ್ತು ಅಮಂಗಳಮಯವಾದ ಆ ಸ್ಥಳಕ್ಕೆ ತನ್ನ ಸುಹೃದರೊಡನೆ ಹೋಗಿ, ರಕ್ತದಿಂದ ತೋಯ್ದುಹೋದ ಶರೀರಗಳಿಂದ ಕೂಡಿದ್ದ, ಛಿನ್ನ-ಭಿನ್ನವಾದ ದೇಹಗಳಿಂದಲೂ, ಕತ್ತರಿಸಲ್ಪಟ್ಟ ತಲೆಗಳಿಂದಲೂ ಕೂಡಿದ್ದ, ಭೂಮಿಯ ಸುತ್ತಲೂ ಹರಡಿಕೊಂಡು ಬಿದ್ದಿದ್ದ

ಮಕ್ಕಳನ್ನೂ, ಸುಹೃದರನ್ನೂ, ಸ್ನೇಹಿತರನ್ನೂ ನೋಡಿದನು. ಧರ್ಮಾತ್ಮರಲ್ಲಿ ಶ್ರೇಷ್ಠನಾದ ಯುಧಿಷ್ಠಿರನು ಭಯಂಕರವಾಗಿ ಕಾಣುತ್ತಿದ್ದ, ತನ್ನ ಮಕ್ಕಳ, ಸುಹೃದರ ಮತ್ತು ಸ್ನೇಹಿತರ ಶರೀರಗಳನ್ನು ನೋಡಿ ಬಹಳವಾಗಿ ಸಂಕಟಪಡುತ್ತಾ ಗಟ್ಟಿಯಾಗಿ ಕೂಗಿಕೊಂಡನು. ಮರುಕ್ಷಣದಲ್ಲಿಯೇ ಕೌರವಶ್ರೇಷ್ಠನಾದ ಧರ್ಮರಾಜನು ಮೂರ್ಛಿತನಾಗಿ ಅನುಯಾಯಿ ಗಳೊಡನೆ ನೆಲದ ಮೇಲೆ ಬಿದ್ದುಬಿಟ್ಟನು."

೧೦ನೆಯ ಅಧ್ಯಾಯವು ಮುಗಿಯಿತು.

೧೧ನೆಯ ಅಧ್ಯಾಯ ಐಷೀಕಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಶೋಕದಿಂದ ವ್ಯಾಕುಲನಾದುದು: ದ್ರೌಪದಿಯು ವಿಲಪಿಸುತ್ತಾ ಅಶ್ವತ್ಥಾಮನನ್ನು ಸಂಹರಿಸಬೇಕೆಂದು ಆಗ್ರಹಪಡಿಸಿದುದು: ಭೀಮಸೇನನು ಅಶ್ವತ್ಥಾಮನನ್ನು ಸಂಹರಿಸಲು ಹೊರಟುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಮಕ್ಕಳೂ, ಮೊಮ್ಮಕ್ಕಳೂ, ಸುಹೃದರೂ, ಎಲ್ಲರೂ ರಾತ್ರಿಯ ಯುದ್ಧದಲ್ಲಿ ಮರಣಹೊಂದಿರುವುದನ್ನು ನೋಡಿ ಯುಧಿಷ್ಠಿರನು ಮಹಾದುಃಖದಿಂದ ಸಂತಪ್ತನಾಗಿಹೋದನು. ಪುತ್ರ-ಪೌತ್ರರನ್ನೂ, ಸಹೋದರರರನ್ನೂ ಮತ್ತು ಸ್ವಜನರನ್ನೂ ಬಾರಿ-ಬಾರಿಗೂ ಸ್ಮರಿಸುತ್ತಿದ್ದ ಮಹಾತ್ಮನಾದ ಯುಧಿಷ್ಠಿರನ ಮಹಾಶೋಕವು ಪ್ರಬಲವಾಯಿತು. ಕಂಬನಿದುಂಬಿದ ಕಣ್ಣುಗಳಿಂದ ಕೂಡಿದ್ದ, ಕ್ಷಣ-ಕ್ಷಣಕ್ಕೂ ಪುತ್ರರ ಮರಣವನ್ನೇ ನೆನೆ-ನೆನೆದು ತರ-ತರನೆ ನಡುಗುತ್ತಿದ್ದ, ಕ್ಷಣ- ಕ್ಷಣಕ್ಕೂ ಎಚ್ಚರದಪ್ಪುತ್ತಿದ್ದ ಯುಧಿಷ್ಠಿರನ ಸ್ಥಿತಿಯನ್ನು ನೋಡಿ ಅತ್ಯಂತ ವ್ಯಾಕುಲಗೊಂಡ ಅವರ ಸುಹೃದರು ಸಂತಯಿಸುತ್ತಿದ್ದರು.

ಆ ಸಮಯಕ್ಕೆ ಸರಿಯಾಗಿ ಬೆಳಗಿನ ಆ ಸಮಯದಲ್ಲಿ ನಕುಲನು ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ರಥದ

ಮೂಲಕ ಪರಮದುಃಖಿತೆಯಾಗಿದ್ದ ದ್ರೌಪದಿಯೊಡನೆ ಅಲ್ಲಿಗೆ ಆಗಮಿಸಿದನು. ಉಪಪ್ಲವ್ಯಕ್ಕೆ ಹೋಗಿದ್ದ ಅವಳು ತನ್ನ ಎಲ್ಲ ಮಕ್ಕಳೂ ವಿನಾಶಹೊಂದಿದರೆಂಬ ಪರಮಾಪ್ರಿಯವಾದ ಮಾತನ್ನು ಕೇಳಿ ಅತ್ಯಂತವ್ಯಥಿತಳಾದಳು. ಗಾಳಿ



ಯಿಂದ ಅಳ್ಳಾಡಿಸಲ್ಪಟ್ಟ ಬಾಳೆಯ ಗಿಡದಂತೆ ತೂರಾಡುತ್ತಾ ರಾಜನ ಸಮೀಪಕ್ಕೆ ಬಂದ ದ್ರೌಪದಿಯು ಶೋಕಪೀಡಿತಳಾಗಿ ಭೂಮಿಯ ಮೇಲೆ ಬಿದ್ದುಬಿಟ್ಟಳು. ಅರಳಿದ ಕಮಲದ ದಳಗಳಂತೆ ವಿಶಾಲವಾದ ಕಣ್ಣುಗಳಿಂದ ಕೂಡಿದ್ದ ದ್ರೌಪದಿಯ ಮುಖವು ಒಡನೆಯೇ ಶೋಕಾಭಿಭೂತವಾಗಿ–ರಾಹುಗ್ರಸ್ತನಾದ ಚಂದ್ರನಂತೆ–ಕಾಂತಿಹೀನವಾಯಿತು. ದ್ರೌಪದಿಯು ನೆಲದ

ಮೇಲೆ ಬೀಳುತ್ತಿರುವುದನ್ನು ಕಂಡೊಡನೆಯೇ ಕುಪಿತನಾಗಿದ್ದ, ಸತ್ಯವಿಕ್ರಮನಾದ ಭೀಮಸೇನನು ಅವಳಿದ್ದ ಸ್ಥಳಕ್ಕೆ ತ್ವರೆಯಿಂದ ಹಾರಿ ಎರಡು ತೋಳುಗಳಿಂದಲೂ ಅವಳನ್ನು ಹಿಡಿದುಕೊಂಡನು. ಅನಂತರ ಭೀಮಸೇನನು ಸಾಂತ್ವನದ ಮಾತುಗಳಿಂದ ಅವಳನ್ನು ಸಮಾಧಾನಗೊಳಿಸಿದನು. ದ್ರೌಪದಿಯು ಪುತ್ರಶೋಕದಿಂದ ಬಿಕ್ಕಿ-ಬಿಕ್ಕಿ ಅಳುತ್ತಾ ಯುಧಿಷ್ಠಿರನೊಡನೆ ಹೇಳಿದಳು :

**ದಿಷ್ಟ್ಯಾ ರಾಜನ್ನವಾಪ್ಯೇಮಾಮಖಿಲಾಂ ಭೋಕ್ಷ್ಯಸೇ ಮಹೀಮ್ ।**
**ಆತ್ಮಜಾನ್ ಕ್ಷತ್ರಧರ್ಮೇಣ ಸಮ್ಪ್ರದಾಯ ಯಮಾಯ ವೈ ॥೧೦॥**

"ಮಹಾರಾಜ! ಸೌಭಾಗ್ಯದ ಕಾರಣದಿಂದ ನೀನು ಕ್ಷತ್ರಧರ್ಮಾನುಸಾರವಾಗಿ ನಿನ್ನ ಮಕ್ಕಳನ್ನು ಯಮನಿಗೊಪ್ಪಿಸಿ ಈ ಅಖಂಡಭೂಮಂಡಲವನ್ನೂ ಪಡೆದುಕೊಂಡು ಉಪಭೋಗಿಸಲಿರುವೆ.

**ದಿಷ್ಟ್ಯಾ ತ್ವಂ ಕುಶಲೀ ಪಾರ್ಥ ಮತ್ತಮಾತಙ್ಗಗಾಮಿನಮ್ ।**
**ಅವಾಪ್ಯ ಪೃಥಿವೀಂ ಕೃತ್ಸ್ನಾಂ ಸೌಭದ್ರಂ ನ ಸ್ಮರಿಷ್ಯಸಿ ॥೧೧॥**

ಸೌಭಾಗ್ಯವಶದಿಂದಲೇ ನೀನು ಕುಶಲಿಯಾಗಿದ್ದುಕೊಂಡು ಸಂಪೂರ್ಣ ಪೃಥ್ವಿಯನ್ನೇ ಪಡೆದುಕೊಂಡಿರುವೆ. ಆದರೆ ಈ ಸಮಯದಲ್ಲಿ ಇದಕ್ಕಾಗಿಯೇ ಬಲಿದಾನಮಾಡಿದ, ಮದಿಸಿದ ಆನೆಯಂತೆ ಠೀವಿಯಿಂದ ಹೆಜ್ಜೆಗಳನ್ನಿಡುತ್ತಿದ್ದ ಅಭಿಮನ್ಯುವನ್ನು ನೀನು ಸ್ಮರಿಸುವುದೇ ಇಲ್ಲ.

**ಆತ್ಮಜಾನ್ ಕ್ಷತ್ರಧರ್ಮೇಣ ಶ್ರುತ್ವಾ ಶೂರಾನ್ನಿಪಾತಿತಾನ್ ।**
**ಉಪಪ್ಲವೇ ಮಯಾ ಸಾರ್ಧಂ ದಿಷ್ಟ್ಯಾ ತ್ವಂ ನ ಸ್ಮರಿಷ್ಯಸಿ ॥೧೨॥**

ಶೂರರಾದ ನಿನ್ನ ಮಕ್ಕಳು ಕ್ಷತ್ರಧರ್ಮಾನುಸಾರವಾಗಿ ಕೊಲ್ಲಲ್ಪಟ್ಟರೆಂಬುದನ್ನು ಕೇಳಿದ ಮೇಲೂ ಉಪಪ್ಲವ್ಯದಲ್ಲಿ ನನ್ನೊಡನಿರುವಾಗ ನೀನು ಅವರನ್ನೂ ಸ್ಮರಿಸುವುದಿಲ್ಲ. (ಅಭಿಮನ್ಯುವನ್ನು ಮರೆತಂತೆಯೇ ನನ್ನ ಮಕ್ಕಳನ್ನೂ ಸಂಪೂರ್ಣವಾಗಿ ಮರೆಯುವೆ.) ಇದೂ ಸಹ ನಿನಗೆ ಸೌಭಾಗ್ಯದ ವಿಷಯವೇ ಆಗಿದೆ.

ಪಾಪಕರ್ಮಿಯಾದ ಅಶ್ವತ್ಥಾಮನು ಮಲಗಿದ್ದವರನ್ನು ವಧೆಮಾಡಿದ

ನೆಂಬ ವಾರ್ತೆಯನ್ನು ಕೇಳಿ–ಬೆಂಕಿಯು ತನಗೆ ಆಶ್ರಯಭೂತವಾದ ಕಟ್ಟಿಗೆಯನ್ನೇ ದಹಿಸುವಂತೆ–ಶೋಕವು ನನ್ನನ್ನು ದಹಿಸುತ್ತಿದೆ.

ತಸ್ಯ ಪಾಪಕೃತೋ ದ್ರೌಣೇರ್ನ ಚೇದದ್ಯ ತ್ವಯಾ ರಣೇ ।
ಹ್ರಿಯತೇ ಸಾನುಬನ್ಧಸ್ಯ ಯುಧಿ ವಿಕ್ರಮ್ಯ ಜೀವಿತಮ್ ॥೧೪॥

ಇಹೈವ ಪ್ರಾಯಮಾಸಿಷ್ಯೇ ತನ್ನಿಬೋಧತ ಪಾಣ್ಡವಾಃ ।
ನ ಚೇತ್ಫಲಮವಾಪ್ನೋತಿ ದ್ರೌಣಿಃ ಪಾಪಸ್ಯ ಕರ್ಮಣಃ ॥೧೫॥

ಮಹಾರಾಜ! ನೀನು ಯುದ್ಧದಲ್ಲಿ ನಿನ್ನ ಪರಾಕ್ರಮವನ್ನು ಪ್ರದರ್ಶಿಸಿ ಮಹಾಪಾಪಕಾರ್ಯವನ್ನು ಮಾಡಿರುವ ಅಶ್ವತ್ಥಾಮನ ಜೀವವನ್ನು ಅವನ ಅನುಯಾಯಿಗಳ ಪ್ರಾಣಗಳೊಡನೆ ಹರಣಮಾಡದಿದ್ದರೆ ಇಲ್ಲಿಯೇ ನಾನು ಪ್ರಾಯೋಪವೇಶವನ್ನು ಮಾಡುತ್ತೇನೆ.

ಪಾಂಡವರೇ! ನಾನು ಹೇಳುವುದನ್ನು ಚೆನ್ನಾಗಿ ಕೇಳಿಸಿಕೊಳ್ಳಿರಿ. ಅಶ್ವತ್ಥಾಮನು ತಾನು ಮಾಡಿದ ಮಹಾಪಾಪದ ಫಲವನ್ನು ಅನುಭವಿಸದಿದ್ದರೆ ನಾನು ಸರ್ವಥಾ ಬದುಕಿರಲಾರೆನು.”

ಜನಮೇಜಯ! ಯಶಸ್ವಿನಿಯಾದ ಯಾಜ್ಞಸೇನಿಯು ಹೀಗೆ ಹೇಳಿ ಯುಧಿಷ್ಠಿರನ ಸಮೀಪದಲ್ಲಿ ಪ್ರಾಯೋಪವೇಶಕ್ಕಾಗಿ ಕುಳಿತಳು. ಪರಮ ಸುಂದರಿಯಾದ, ಪ್ರಿಯಪತ್ನಿಯಾದ ದ್ರೌಪದೀದೇವಿಯು ತನ್ನ ಸಮೀಪದಲ್ಲಿ ಕುಳಿತುದನ್ನು ನೋಡಿ ಧರ್ಮಾತ್ಮನಾದ ಯುಧಿಷ್ಠಿರನು ಹೇಳಿದನು :

ಧರ್ಮ್ಯಂ ಧರ್ಮೇಣ ಧರ್ಮಜ್ಞೇ ಪ್ರಾಪ್ತಾಸ್ತೇ ನಿಧನಂ ಶುಭೇ ।
ಪುತ್ರಾಸ್ತೇ ಭ್ರಾತರಶ್ಚೈವ ತಾನ್ನ ಶೋಚಿತುಮರ್ಹಸಿ ॥೧೬॥

“ಧರ್ಮಜ್ಞಳೇ! ಮಂಗಳಸ್ವರೂಪಳೇ! ನಿನ್ನ ಮಕ್ಕಳೂ ಮತ್ತು ಸಹೋದರರೂ ಧರ್ಮಮಾರ್ಗಾನುಸಾರವಾಗಿ ಯುದ್ಧಮಾಡಿ ಧರ್ಮಾನು ಗುಣವಾದ ರೀತಿಯಲ್ಲಿಯೇ ನಿಧನಹೊಂದಿದ್ದಾರೆ. ಆದುದರಿಂದ ನೀನು ಅವರನ್ನು ಕುರಿತು ದುಃಖಿಸಬಾರದು.

ಸ ಕಲ್ಯಾಣಿ ವನಂ ದುರ್ಗಂ ದೂರಂ ದ್ರೌಣಿರಿತೋ ಗತಃ ।
ತಸ್ಯ ತ್ವಂ ಪಾತನಂ ಸಂಖ್ಯೇ ಕಥಂ ಜ್ಞಾಸ್ಯಸಿ ಶೋಭನೇ ॥೧೭॥

ಅಶ್ವತ್ಥಾಮನು ಇಲ್ಲಿಂದ ಹೊರಟು ದುರ್ಗಮವಾದ ಅರಣ್ಯದ ಕಡೆಗೆ

ಬಹಳದೂರ ಹೊರಟುಹೋಗಿದ್ದಾನೆ. ಶೋಭನಳೇ! ಅಲ್ಲವನು ಯುದ್ಧದಲ್ಲಿ ಹತನಾದರೂ ನೀನಿಲ್ಲಿ ಹೇಗೆ ತಿಳಿದುಕೊಳ್ಳುವೆ? (ಅವನು ಹತನಾದನೆಂದು ನಿನಗೆ ಖಚಿತಪಡಿಸುವುದು ಹೇಗೆ?)"

**ದ್ರೋಣಪುತ್ರಸ್ಯ ಸಹಜೋ ಮಣಿಃ ಶಿರಸಿ ಮೇ ಶ್ರುತಃ ।**
**ನಿಹತ್ಯ ಸಂಖ್ಯೇ ತಂ ಪಾಪಂ ಪಶ್ಯೇಯಂ ಮಣಿಮಾಹೃತಮ್ ।**
**ರಾಜಞ್ಶಿರಸಿ ತೇ ಕೃತ್ವಾ ಜೀವೇಯಮಿತಿ ಮೇ ಮತಿಃ ॥೨೦॥**

"ಮಹಾರಾಜ! ಅಶ್ವತ್ಥಾಮನ ಶಿರಸ್ಸಿನಲ್ಲಿ ಅವನ ಹುಟ್ಟಿನಿಂದಲೇ ಬಂದ ಮಣಿಯೊಂದಿದೆಯೆಂಬುದನ್ನು ಕೇಳಿದ್ದೇನೆ. ಯುದ್ಧದಲ್ಲಿ ಆ ಪಾಪಿಷ್ಠನನ್ನು ಸಂಹರಿಸಿ ಅವನ ಶಿರಸ್ಸಿನಿಂದ ಕಿತ್ತುತರುವ ಮಣಿಯನ್ನಾದರೂ ನಾನು ನೋಡುತ್ತೇನೆ. (ಅದರಿಂದ ಅವನು ಹತನಾದನೆಂಬ ವಿಶ್ವಾಸವುಂಟಾಗುತ್ತದೆ.) ಹಾಗೆ ತಂದ ಆ ಮಣಿಯಿಂದ ನಿನ್ನ ತಲೆಯನ್ನು ಅಲಂಕರಿಸಿ ಅದನ್ನು ನೋಡುತ್ತಾ ನಾನು ಜೀವಿಸಿರಬಹುದು. ಇದು ನನ್ನ ದೃಢನಿಶ್ಚಯವಾಗಿದೆ."

ಜನಮೇಜಯ! ಕಡುಚೆಲುವೆಯಾಗಿದ್ದ ದ್ರೌಪದಿಯು ಯುಧಿಷ್ಠಿರ ರಾಜನೊಡನೆ ಹೀಗೆಂದು ಹೇಳಿ ಅನಂತರ ಭೀಮಸೇನನ ಬಳಿಗೆ ಬಂದು ಅವನೊಡನೆ ಉತ್ತಮೋತ್ತಮವಾದ ಈ ಮಾತನ್ನು ಹೇಳಿದಳು :

**ತ್ರಾತುಮರ್ಹಸಿ ಮಾಂ ಭೀಮ ಕ್ಷತ್ರಧರ್ಮಮನುಸ್ಮರನ್ ।**
**ಜಹಿ ತಂ ಪಾಪಕರ್ಮಾಣಂ ಶಮ್ಬರಂ ಮಘವಾನಿವ ।**
**ನ ಹಿ ತೇ ವಿಕ್ರಮೇ ತುಲ್ಯಃ ಪುಮಾನಸ್ತೀಹ ಕಶ್ಚನ ॥೨೩॥**

"ಪ್ರಿಯನೇ! ಭೀಮಸೇನ! ಕ್ಷತ್ರಧರ್ಮವನ್ನು ಸ್ಮರಿಸಿಕೊಂಡು ನನ್ನ ಜೀವನದ ರಕ್ಷಣೆಯನ್ನು ಮಾಡುವುದು ನಿನ್ನ ಕರ್ತವ್ಯವಾಗಿದೆ. ಇಂದ್ರನು ಶಂಬರಾಸುರನನ್ನು ಸಂಹರಿಸಿದಂತೆ–ಪಾಪಕರ್ಮಿಯಾದ ಆ ಅಶ್ವತ್ಥಾಮನನ್ನು ನೀನೀಗಲೇ ಸಂಹರಿಸು. ನಿನ್ನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವಿರತಕ್ಕವನು ಈ ಪ್ರಪಂಚದಲ್ಲೇ ಮತ್ತೊಬ್ಬನಿಲ್ಲ.

ವಾರಣಾವತನಗರದಲ್ಲಿ ಕುಂತಿಯ ಮಕ್ಕಳು ಅತ್ಯಂತಸಂಕಟದಲ್ಲಿದ್ದ ಸಮಯದಲ್ಲಿ ನೀನು ಅವರೆಲ್ಲರಿಗೂ ದ್ವೀಪಪ್ರಾಯನಾಗಿ ಕುಂತೀ

ಸಮೇತರಾದ ಪಾರ್ಥರನ್ನು ಸಂರಕ್ಷಿಸಿದೆಯೆಂಬುದು ಎಲ್ಲ ಲೋಕಗಳಲ್ಲಿಯೂ ವಿಖ್ಯಾತವಾಗಿದೆ. ಹಿಡಿಂಬರಾಕ್ಷಸನು ಬಂದ ಸಮಯದಲ್ಲಿಯೂ ನೀನೇ ಎಲ್ಲ ಪಾರ್ಥರಿಗೂ ಆಶ್ರಯವನ್ನಿತ್ತು ರಕ್ಷಿಸಿದೆ. ವಿರಾಟನಗರದಲ್ಲಿ ವಾಸಮಾಡುತ್ತಿದ್ದಾಗ ಕೀಚಕನಿಂದ ಬಹಳವಾಗಿ ಪೀಡಿಸಲ್ಪಡುತ್ತಿದ್ದ ನನ್ನನ್ನು– ಇಂದ್ರನು ಪೌಲೋಮಿಯನ್ನು (ಶಚೀದೇವಿಯನ್ನು) ಸಂರಕ್ಷಿಸಿದಂತೆ–ಸಂಕಷ್ಟದಿಂದ ಉದ್ಧರಿಸಿರುವೆ. ಶತ್ರುಹಂತಕನೇ! ಈ ಹಿಂದೆ ನೀನು ಅನೇಕ ಮಹಾಕಾರ್ಯಗಳನ್ನು ಮಾಡಿರುವಂತೆ ಈಗಲೂ ಪಾಪಿಷ್ಠ ನಾದ ಅಶ್ವತ್ಥಾಮನನ್ನು ಸಂಹರಿಸಿ ಸುಖಿಯಾಗು.”

ಜನಮೇಜಯ! ದ್ರೌಪದಿಯು ದುಃಖದಿಂದ ಬಹುವಿಧವಾಗಿ ವಿಲಪಿಸುತ್ತಿರುವುದನ್ನು ಕೇಳಿ ಮಹಾಬಲಿಷ್ಠನಾದ, ಕುಂತಿಯ ಮಗನಾದ ಭೀಮಸೇನನಿಗೆ ಸಹಿಸಲಾಗಲಿಲ್ಲ. ದ್ರೋಣಪುತ್ರನನ್ನು ವಧಿಸಿಯೇ ತೀರಬೇಕೆಂದು ನಿಶ್ಚಯಿಸಿದವನಾಗಿ ಸುವರ್ಣಭೂಷಿತವಾದ, ಚಕ್ರ, ಯುಗಾನುಕರ್ಷಗಳೇ ಮೊದಲಾದ ಅಂಗಗಳಿಂದ ಕೂಡಿದ್ದ ರಥವನ್ನು ಹತ್ತಿದನು. ಬಾಣದಿಂದಲೂ ಮತ್ತು ಶಿಂಜಿನಿಯಿಂದಲೂ ಯುಕ್ತವಾಗಿದ್ದ, ಸುಂದರವಾಗಿಯೂ ಮತ್ತು ವಿಚಿತ್ರವಾಗಿಯೂ ಇದ್ದ ಧನುಸ್ಸನ್ನು ಕೈಗೆತ್ತಿಕೊಂಡನು. ನಕುಲನನ್ನೇ ಸಾರಥಿಯನ್ನಾಗಿ ಮಾಡಿಕೊಂಡು ಬಾಣಯುಕ್ತವಾಗಿದ್ದ ಧನುಸ್ಸನ್ನು ಟೇಂಕರಿಸುತ್ತಾ ಶೀಘ್ರವಾಗಿ ಮುನ್ನಡೆಯುವಂತೆ ಕುದುರೆಗಳನ್ನು ಪ್ರಚೋದಿಸಿದನು. ವಾಯುವೇಗದಿಂದ ಕೂಡಿದ್ದ ಶೀಘ್ರಗಾಮಿಗಳಾಗಿದ್ದ ಆ ಕುದುರೆಗಳು ನಕುಲನಿಂದ ಪ್ರಚೋದಿತವಾಗಿ, ಬಹಳ ತ್ವರೆಯಿಂದ ಮುನ್ನಡೆದುವು. ಪ್ರತಿಜ್ಞೆಯಿಂದ ಚ್ಯುತನಾಗದ ಭೀಮಸೇನನು ಶಿಬಿರದಿಂದ ಹೊರಟು ಅಶ್ವತ್ಥಾಮನ ರಥವು ಹೋದ ಜಾಡನ್ನೇ ಹಿಡಿದು ಪ್ರಯಾಣಮಾಡಿದನು.”

ಳ೧ನೆಯ ಅಧ್ಯಾಯವು ಮುಗಿಯಿತು.

೧೨ನೆಯ ಅಧ್ಯಾಯ ಐಷೀಕಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಅಶ್ವತ್ಥಾಮನ ಚಪಲತೆಯನ್ನೂ ಕ್ರೌರ್ಯವನ್ನೂ ಹೇಳುವ ಸಂದರ್ಭದಲ್ಲಿ ಸುದರ್ಶನಚಕ್ರವನ್ನು ಕೇಳಿದ ಪ್ರಸಂಗವನ್ನು ವಿವರಿಸಿ ಹೇಳಿದುದು : ಭೀಮಸೇನನನ್ನು ರಕ್ಷಿಸುವಂತೆ ಪಾಂಡವರಿಗೆ ಸಲಹೆನೀಡಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

“ಜನಮೇಜಯ! ದುರ್ಧರ್ಷನಾದ ಭೀಮಸೇನನು ಅಶ್ವತ್ಥಾಮ ನೊಡನೆ ಯುದ್ಧಮಾಡಲು ಹೊರಟುಹೋದನಂತರ ಯದುಶ್ರೇಷ್ಠನಾದ, ಪುಂಡರೀಕಾಕ್ಷನಾದ ಶ್ರೀಕೃಷ್ಣನು ಕುಂತಿಯ ಮಗನಾದ ಯುಧಿಷ್ಠಿರನನ್ನು ಕುರಿತು ಹೇಳಿದನು :

“ಯುಧಿಷ್ಠಿರ! ಪುತ್ರಶೋಕಪರಾಯಣನಾದ ನಿನ್ನ ತಮ್ಮ ಭೀಮ ಸೇನನು ಅಶ್ವತ್ಥಾಮನನ್ನು ಯುದ್ಧದಲ್ಲಿ ಸಂಹರಿಸುವ ಇಚ್ಛೆಯಿಂದ ಒಬ್ಬನೇ ಹೋಗುತ್ತಿದ್ದಾನೆ. ಭರತರ್ಷಭನೇ! ಎಲ್ಲರಿಗಿಂತಲೂ ಭೀಮ ಸೇನನೇ ನಿನಗೆ ಬಹಳವಾಗಿ ಪ್ರಿಯನಾದವನು. ಅವನೀಗ ಅಶ್ವತ್ಥಾಮನೊಡನೆ ಯುದ್ಧದಲ್ಲಿ ತೊಡಗಿ ಅತ್ಯಂತಕಷ್ಟದಲ್ಲಿ ಸಿಲುಕಿಕೊಳ್ಳುವುದರಲ್ಲಿದ್ದಾನೆ. ಈ ಸಮಯದಲ್ಲಿ ನೀನು ಅವನ ಸಹಾಯಕ್ಕೇಕೆ ಹೋಗುತ್ತಿಲ್ಲ? ಒಬ್ಬನನ್ನೇ ಏಕೆ ಕಳುಹಿಸಿದೆ? ಶತ್ರುಗಳ ಪಟ್ಟಣವನ್ನು ಜಯಿಸುವ ಸಾಮರ್ಥ್ಯವನ್ನು ಹೊಂದಿದ್ದ ದ್ರೋಣರು ತಮ್ಮ ಮಗನಿಗೆ ಉಪದೇಶಪೂರ್ವಕವಾಗಿ ದಯಪಾಲಿಸಿರುವ ಬ್ರಹ್ಮಶಿರವೆಂಬ ಮಹಾಸ್ತ್ರವು ಈ ಭೂಮಂಡಲವನ್ನೇ ದಹಿಸುವ ಸಾಮರ್ಥ್ಯವನ್ನು ಹೊಂದಿದೆ. ಸರ್ವಧನುಷ್ಮಂತರಿಗೂ ಕೇತುಪ್ರಾಯರಾಗಿದ್ದ, ಮಹಾಭಾಗ್ಯಶಾಲಿಗಳಾದ, ಮಹಾತ್ಮರಾದ ಆಚಾರ್ಯದ್ರೋಣರು ಅರ್ಜುನನ ವಿಷಯದಲ್ಲಿ ಪ್ರಸನ್ನರಾಗಿ ಆ ಮಹಾಸ್ತ್ರವನ್ನು ಮೊದಲು ಅರ್ಜುನನಿಗೇ ಉಪದೇಶಿಸಿದ್ದರು. ತನ್ನನ್ನು ಬಿಟ್ಟು ಅರ್ಜುನನಿಗೆ ಆ ಮಹಾಸ್ತ್ರವನ್ನು ಉಪದೇಶಿಸಿದುದು ಅಶ್ವತ್ಥಾಮನಿಗೆ ಸಹ್ಯವಾಗಲಿಲ್ಲ. ಅವನು ದ್ರೋಣರಿಗೆ ಏಕಮಾತ್ರ ಪುತ್ರನಾಗಿದ್ದನು. ಆದುದರಿಂದ ಅಶ್ವತ್ಥಾಮನು ತನಗೂ ಆ ಮಹಾಸ್ತ್ರವನ್ನು

ಉಪದೇಶಿಸಲೇಬೇಕೆಂದು ಪ್ರಾರ್ಥಿಸಿದನು. ದ್ರೋಣರು ಪುತ್ರವಾತ್ಸಲ್ಯದಿಂದಾಗಿ ಅಶ್ವತ್ಥಾಮನಿಗೂ ಆ ಮಹಾಸ್ತ್ರವನ್ನು ಉಪದೇಶಿಸಿದರು. ಆದರೆ ಅವರ ಮನಸ್ಸು ಅಷ್ಟು ಪ್ರಸನ್ನವಾಗಿರಲಿಲ್ಲ. ದ್ರೋಣರಿಗೆ ಮಹಾತ್ಮನಾದ ತಮ್ಮ ಮಗನು ಚಪಲಚಿತ್ತನೆಂಬ ವಿಷಯವು ತಿಳಿದಿದ್ದಿತು. ಈ ಕಾರಣದಿಂದ ಸರ್ವಧರ್ಮಗಳನ್ನೂ ತಿಳಿದಿದ್ದ ಆಚಾರ್ಯದ್ರೋಣರು ಅಸ್ತ್ರಪ್ರದಾನ ಮಾಡಿದನಂತರ ಮಗನನ್ನು ಕುರಿತು ಈ ರೀತಿಯಲ್ಲಿ ಅನುಶಾಸನ ಮಾಡಿದರು :

**ಪರಮಾಪದ್ಗತೇನಾಪಿ ನ ಸ್ಮ ತಾತ ತ್ವಯಾ ರಣೇ ।**
**ಇದಮಸ್ತ್ರಂ ಪ್ರಯೋಕ್ತವ್ಯಂ ಮಾನುಷೇಷು ವಿಶೇಷತಃ ॥೮॥**

"ಮಗು! ನೀನು ಅತಿದಾರುಣವಾದ ಆಪತ್ತಿನಲ್ಲಿ ಸಿಕ್ಕಿಕೊಂಡ ಸಮಯದಲ್ಲಿಯೂ ಯುದ್ಧದಲ್ಲಿ ಈ ಮಹಾಸ್ತ್ರವನ್ನು ಪ್ರಯೋಗಿಸಲೇ ಬಾರದು. ಅದರಲ್ಲಿಯೂ ವಿಶೇಷವಾಗಿ ಮನುಷ್ಯರ ಮೇಲೆ ಈ ಮಹಾಸ್ತ್ರವು ಪ್ರಯೋಗಿಸಲ್ಪಡತಕ್ಕುದೇ ಅಲ್ಲ."

ಪುರುಷಶ್ರೇಷ್ಠನೇ! ಯುಧಿಷ್ಠಿರ! ಇಷ್ಟು ಹೇಳಿದನಂತರವೂ ಗುರುಗಳಾದ ದ್ರೋಣರು ಮಗನನ್ನು ಕುರಿತು ಈ ಮಾತನ್ನೂ ಹೇಳಿದರು : '**ನ ತ್ವಂ ಜಾತು ಸತಾಂ ಮಾರ್ಗೇ ಸ್ಥಾತಾ**'–'ನೀನು ಯಾವಾಗಲೂ ಸತ್ಪುರುಷರ ಮಾರ್ಗದಲ್ಲಿ ಇರತಕ್ಕವನಲ್ಲ.'

ಮಹಾರಾಜ! ತಂದೆಯು ಹೇಳಿದ ಪರಮಾಪ್ರಿಯವಾದ ಆ ಮಾತನ್ನು ಕೇಳಿದ ದುಷ್ಟಾತ್ಮನಾದ ಅಶ್ವತ್ಥಾಮನು ತನಗೆ ಮಂಗಳವಾಗುವುದರಲ್ಲಿ ನಿರಾಶೆಯನ್ನು ಹೊಂದಿ, ಶೋಕಾವಿಷ್ಟನಾಗಿ ಭೂಮಿಯಲ್ಲಿ ಅಲೆಯ ತೊಡಗಿದನು. ನೀನು ಅರಣ್ಯವಾಸಮಾಡುತ್ತಿರುವಾಗ ಒಮ್ಮೆ ಅಶ್ವತ್ಥಾಮನು ದ್ವಾರಕೆಗೂ ಬಂದು ಅಲ್ಲಿಯೇ ವಾಸಮಾಡುತ್ತಿದ್ದನು. ವೃಷ್ಣಿಗಳೂ ಅವನನ್ನು ವಿಶೇಷವಾದ ಸತ್ಕಾರಾದಿಗಳಿಂದ ಗೌರವಿಸಿದರು.

ದ್ವಾರಕೆಯ ಸಮೀಪದ ಸಮುದ್ರತೀರದಲ್ಲಿ ವಾಸಮಾಡುತ್ತಿದ್ದಾಗ ಅಶ್ವತ್ಥಾಮನೊಮ್ಮೆ ಏಕಾಕಿಯಾಗಿದ್ದ ನನ್ನನ್ನು ಏಕಾಕಿಯಾಗಿಯೇ ಸಂಧಿಸಿ ನಗುವ ಮುಖಭಾವದಿಂದ ಕೂಡಿದವನಾಗಿ ನನ್ನೊಡನೆ ಹೇಳಿದನು :

"ದಶಾರ್ಹನಂದನನೇ! ಕೃಷ್ಣ! ಸತ್ಯಪರಾಕ್ರಮರಾದ, ಭರತ

ವಂಶಕ್ಕೇ ಆಚಾರ್ಯರಾದ, ನನ್ನ ತಂದೆ ದ್ರೋಣರು ಅತ್ಯುಗ್ರವಾದ ತಪಸ್ಸನ್ನು ಮಾಡಿ ಅಗಸ್ತ್ಯರಿಂದ ಪಡೆದುಕೊಂಡ, ದೇವತೆಗಳಿಂದಲೂ ಮತ್ತು ಗಂಧರ್ವರಿಂದಲೂ ಗೌರವಿಸಲ್ಪಡುವ 'ಬ್ರಹ್ಮಶಿರ' ಎಂಬ ಹೆಸರಿನ ಮಹಾಸ್ತ್ರವೀಗ ನನ್ನ ತಂದೆಯಲ್ಲಿರುವಂತೆಯೇ ನನ್ನಲ್ಲಿಯೂ ಇದೆ. ಯದುಶ್ರೇಷ್ಠನೇ! ನನ್ನಿಂದ ನೀನು ಈ ದಿವ್ಯಾಸ್ತ್ರವನ್ನು ಪಡೆದುಕೊಂಡು ನಿನ್ನಲ್ಲಿರುವ, ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸಲು ಸಮರ್ಥವಾದ ಚಕ್ರಾಸ್ತ್ರವನ್ನು ನನಗೆ ದಯಪಾಲಿಸು."

ಯುಧಿಷ್ಠಿರ! ಹೀಗೆ ಬದ್ಧಾಂಜಲಿಯಾಗಿ ಚಕ್ರಾಸ್ತ್ರವನ್ನು ನನ್ನಿಂದ ತೆಗೆದುಕೊಳ್ಳಲು ಪ್ರಯತ್ನಪೂರ್ವಕವಾಗಿ ಯಾಚನೆಮಾಡುತ್ತಿದ್ದ ಅಶ್ವತ್ಥಾಮನೊಡನೆ ಪ್ರಸನ್ನತೆಯಿಂದಲೇ ಈ ಮಾತನ್ನು ಹೇಳಿದೆನು :

**ದೇವದಾನವಗನ್ಧರ್ವಮನುಷ್ಯಪತಗೋರಗಾಃ ।**
**ನ ಸಮಾ ಮಮ ವೀರ್ಯಸ್ಯ ಶತಾಂಶೇನಾಪಿ ಪಿಣ್ಡಿತಾಃ ॥೧೭॥**

"ದ್ರೋಣಪುತ್ರ! ದೇವ-ದಾನವ-ಗಂಧರ್ವ-ಮನುಷ್ಯ-ಪಕ್ಷಿ-ನಾಗರೆಲ್ಲರೂ ಒಟ್ಟಾಗಿ ಸೇರಿದರೂ ನನ್ನಲ್ಲಿರುವ ಪರಾಕ್ರಮದ ನೂರನೆಯ ಒಂದು ಭಾಗದಷ್ಟು ಪರಾಕ್ರಮಕ್ಕೂ ಅವರೆಲ್ಲರ ಪರಾಕ್ರಮವೂ ಸಾಟಿಯಾಗಲಾರದು.

**ಇದಂ ಧನುರಿಯಂ ಶಕ್ತಿರಿದಂ ಚಕ್ರಮಿಯಂ ಗದಾ ।**
**ಯದ್ಯದಿಚ್ಛಸಿ ಚೇದಸ್ತ್ರಂ ಮತ್ತಸ್ತತ್ತದ್ದದಾಮಿ ತೇ ॥೧೮॥**

**ಯಚ್ಛಕ್ನೋಷಿ ಸಮುದ್ಯನ್ತುಂ ಪ್ರಯೋಕ್ತುಮಪಿ ವಾ ರಣೇ ।**
**ತದ್ಗೃಹಾಣ ವಿನಾಸ್ತ್ರೇಣ ಯನ್ಮೇ ದಾತುಮಭೀಪ್ಸಸಿ ॥೧೯॥**

ಅಶ್ವತ್ಥಾಮ! ಇದು ನನ್ನ ಧನುಸು ; ಇದು ನನ್ನ ಶಕ್ತ್ಯಾಯುಧ ; ಇದು ನನ್ನ ಸುದರ್ಶನಚಕ್ರ ; ಇದು ನನ್ನ ಗದೆ. ನೀನು ನನ್ನಿಂದ ಯಾವ-ಯಾವ ಅಸ್ತ್ರವನ್ನು ಪಡೆಯಲಿಚ್ಛಿಸುವೆಯೋ–ಆಯಾ ಅಸ್ತ್ರಗಳನ್ನು ನಾನು ನಿನಗೆ ಕೊಡುತ್ತೇನೆ. ಈ ನನ್ನ ಧನುಸ್ಸು-ಶಕ್ತಿ-ಚಕ್ರ-ಗದೆಗಳಲ್ಲಿ ಯುದ್ಧ ಸಮಯಗಳಲ್ಲಿ ಯಾವುದನ್ನು ಮೇಲಕ್ಕೆತ್ತಲು ಮತ್ತು ಪ್ರಯೋಗಿಸಲು ನಿನಗೆ ಸಾಧ್ಯವಾಗುವುದೋ–ಆ ಅಸ್ತ್ರವನ್ನು ನೀನು ತೆಗೆದುಕೊಳ್ಳಬಹುದು. ಇದಕ್ಕೆ

ವಿನಿಮಯರೂಪವಾಗಿ ನೀನು ಕೊಡಲಿಚ್ಛಿಸಿರುವ ಬ್ರಹ್ಮಶಿರವೆಂಬ ಮಹಾಸ್ತ್ರವನ್ನು ನನಗೆ ಕೊಡದೆಯೇ ನನ್ನ ಅಸ್ತ್ರವನ್ನು ಪಡೆದುಕೊಳ್ಳಬಹುದಾಗಿದೆ.”

ಯುಧಿಷ್ಠಿರ! ನಾನು ಹೀಗೆ ಹೇಳಿದನಂತರ ಅಶ್ವತ್ಥಾಮನು ನನ್ನೊಡನೆ ಸ್ಪರ್ಧಿಸುತ್ತಾ ಸುಂದರವಾದ ನಾಭಿಯಿಂದ ಕೂಡಿದ್ದ, ಸಾವಿರ ಅರೆಕಾಲುಗಳಿದ್ದ, ವಜ್ರಮಯವಾದ ನಾಭಿಯಿಂದ ಕೂಡಿದ್ದ, ಲೋಹ ಮಯವಾಗಿದ್ದ ಚಕ್ರವನ್ನೇ ನನ್ನಿಂದ ಅಪೇಕ್ಷಿಸಿದನು. ನಾನವನಿಗೆ ಚಕ್ರವನ್ನು



ತೆಗೆದುಕೊಳ್ಳುವಂತೆ ಹೇಳಿದೊಡನೆಯೇ ಬೇಗನೇ ಹಾರಿಬಂದು ತನ್ನ ಎಡಗೈಯಿಂದ ಚಕ್ರವನ್ನು ಹಿಡಿದುಕೊಂಡನು. ಆದರೆ ಚಕ್ರವನ್ನು ಮೇಲಕ್ಕೆ

ಎತ್ತುವುದಿರಲಿ, ಅದು ಇರುವ ಸ್ಥಳದಿಂದ ಅಲುಗಿಸಲು ಕೂಡ ಅಶ್ವತ್ಥಾಮನಿಂದ ಸಾಧ್ಯವಾಗಲಿಲ್ಲ. ಅನಂತರ ಬಲಗೈಯನ್ನೂ ಮುಂದೆ ಚಾಚಿ ಎರಡು ಕೈಗಳಿಂದಲೂ ಆ ಚಕ್ರವನ್ನು ಮೇಲಕ್ಕೆತ್ತಲು ಪ್ರಯತ್ನಿಸಿದನು. ಸರ್ವಪ್ರಯತ್ನದಿಂದಲೂ ಮತ್ತು ಬಲದಿಂದಲೂ ಚಕ್ರವನ್ನು ಹಿಡಿದು ಕೊಂಡರೂ–ಸಂಪೂರ್ಣಬಲವನ್ನೂ ಕೇಂದ್ರೀಕರಿಸಿದರೂ - ಅವನಿಗೆ ಆ ಚಕ್ರವನ್ನು ಎತ್ತುವುದಕ್ಕಾಗಲೀ, ಅಳ್ಳಾಡಿಸುವುದಕ್ಕಾಗಲೀ ಸಾಧ್ಯವಾಗಲೇ ಇಲ್ಲ. ಹೀಗೆ ಅಶ್ವತ್ಥಾಮನು ಹಲವು ಬಾರಿ ಚಕ್ರವನ್ನೆತ್ತಲು ಪ್ರಯತ್ನಮಾಡಿ ಸಾಧ್ಯವಾಗದೇ ಆಯಾಸಗೊಂಡು ಅತ್ಯಂತದುಃಖಿತನಾಗಿ ಪ್ರಯತ್ನದಿಂದ ವಿಮುಖನಾದನು. ಅವನು ಚಕ್ರವನ್ನು ನನ್ನಿಂದ ಪಡೆದುಕೊಳ್ಳಬೇಕೆಂಬ ಸಂಕಲ್ಪದಿಂದ ವಿಮುಖನಾದನಂತರ ಮನಸ್ಸನ್ನು ಕೆಡಿಸಿಕೊಂಡಿದ್ದ ಮತ್ತು ಉದ್ವಿಗ್ನನಾಗಿದ್ದ ಅಶ್ವತ್ಥಾಮನನ್ನು ಕುರಿತು ಹೇಳಿದೆನು :

"ಬ್ರಾಹ್ಮಣೋತ್ತಮ! ಅರ್ಜುನನು ಮಾನವರಲ್ಲಿ ಅತ್ಯಂತ ಪ್ರಾಮಾಣಿಕನಾದವನೆಂದು ವಿಖ್ಯಾತನಾಗಿರುತ್ತಾನೆ. ಗಾಂಡೀವಧನ್ವನಾದ, ಶ್ವೇತಾಶ್ವನಾದ, ಕಪಿಧ್ವಜನಾದ ಅರ್ಜುನನು–ದೇವದೇವನಾದ, ಶಿತಿಕಂಠ ನಾದ ಸಾಕ್ಷಾತ್ ಉಮಾಪತಿಯನ್ನೇ ದ್ವಂದ್ವಯುದ್ಧದಲ್ಲಿ ಪರಾಜಯ ಗೊಳಿಸಲು ಇಚ್ಛಿಸಿ ತನ್ನ ಪರಾಕ್ರಮದಿಂದ ಶಂಕರನನ್ನು ತೃಪ್ತಿಗೊಳಿಸಿದನು. ಈ ಪ್ರಪಂಚದಲ್ಲಿ ಅವನಿಗಿಂತಲೂ ನನಗೆ ಪ್ರಿಯರಾದವರು ಬೇರೆ ಯಾರೂ ಇರುವುದಿಲ್ಲ. ಪತ್ನೀ-ಪುತ್ರರಾದಿಯಾಗಿ ಅವನಿಗೆ ಕೊಡಬಾರದೆಂಬ ವಸ್ತುವೇ ನನ್ನಲ್ಲಿ ಯಾವುದೂ ಇರುವುದಿಲ್ಲ. ಕಷ್ಟವಾದ ಕೆಲಸಗಳನ್ನು ಸುಲಭವಾಗಿ ಮಾಡುವ, ನನ್ನ ಅತ್ಯಂತಪ್ರಿಯಮಿತ್ರನಾದ ಅರ್ಜುನನೂ ನೀನಿಂದು ನನ್ನೊಡನೆ ಮಾತನಾಡಿದಂತೆ (ನನ್ನಿಂದ ಚಕ್ರವನ್ನು ಯಾಚಿಸಿದಂತೆ) ಇದುವರೆಗೂ ಮಾತನಾಡಿಲ್ಲ.

ಮೂಢನೇ! ನಾನು ಹನ್ನೆರಡು ವರ್ಷಗಳ ಪರ್ಯಂತವಾಗಿ ಹಿಮವತ್ಪರ್ವತದ ತಪ್ಪಲಿನಲ್ಲಿದ್ದುಕೊಂಡು ಬ್ರಹ್ಮಚರ್ಯವ್ರತಾನುಷ್ಠಾನ ಮಾಡುತ್ತಾ ಘೋರವಾದ ತಪಸ್ಸನ್ನು ಮಾಡಿದ ಫಲವಾಗಿ ನನ್ನಂತೆಯೇ ವ್ರತಾನುಷ್ಠಾನಗಳಲ್ಲಿ ನಿರತಳಾಗಿದ್ದ ರುಕ್ಮಿಣೀದೇವಿಯಲ್ಲಿ ಒಬ್ಬ ಪುತ್ರನನ್ನು ಪಡೆದುಕೊಂಡೆನು. ಮಹಾತಪಸ್ವಿಯಾದ ಮತ್ತು ಮಹಾತೇಜಸ್ವಿಯಾದ

ಸನತ್ಕುಮಾರನೇ ಪ್ರದ್ಯುಮ್ನನೆಂಬ ಹೆಸರಿನಿಂದ ನನಗೆ ಪುತ್ರನಾಗಿ ಜನಿಸಿದನು. ಯುದ್ಧದಲ್ಲಿ ಅಪ್ರತಿಮವಾದ ಮತ್ತು ದಿವ್ಯವಾದ ಈ ಮಹಾಚಕ್ರವನ್ನು ಆ ನನ್ನ ಪ್ರಿಯಪುತ್ರನಾದ ಪ್ರದ್ಯುಮ್ನನೂ ನೀನು ಪ್ರಾರ್ಥಿಸಿದಂತೆ ತನಗೆ ಕೊಡುವಂತೆ ಕೇಳಲಿಲ್ಲ.

ಮಹಾಬಲಿಷ್ಠನಾದ, ನನ್ನ ಅಣ್ಣನಾದ ಬಲರಾಮನಾದರೂ ನೀನಾಡಿದಂತಹ ಮಾತನ್ನು ಯಾವುದೇ ಸಂದರ್ಭದಲ್ಲಿಯೂ ಆಡಲಿಲ್ಲ. ಗದನಾಗಲೀ, ಸಾಂಬನಾಗಲೀ ನೀನು ಅಪೇಕ್ಷಿಸಿದಂತೆ ನನ್ನ ಚಕ್ರವನ್ನು ಎಂದೂ ಅಪೇಕ್ಷಿಸಲಿಲ್ಲ. ದ್ವಾರಕೆಯಲ್ಲಿ ವಾಸಮಾಡುತ್ತಿರುವ ಇತರ ವೃಷ್ಣ್ಯಂಧಕಮಹಾರಥರಾರೂ ನೀನು ಪ್ರಸ್ತಾಪಿಸಿದಂತೆ ನನ್ನ ಚಕ್ರದ ವಿಷಯವನ್ನು ಎಂದೂ ಪ್ರಸ್ತಾಪಿಸಿದವರೇ ಅಲ್ಲ. ನನ್ನ ಮುಂದೆ ಅವರು ಇಂತಹ ಮಾತನ್ನು ಎಂದೂ ಆಡಲಿಲ್ಲ. ರಥಿಶ್ರೇಷ್ಠನೇ! ನೀನು ಭಾರತಾಚಾರ್ಯರಾದ ದ್ರೋಣರ ಪುತ್ರನಾಗಿರುವೆ. ಈ ಕಾರಣದಿಂದಲೇ ನಿನ್ನನ್ನು ಇಲ್ಲಿ ಯಾದವರೆಲ್ಲರೂ ಗೌರವಿಸಿ ಸತ್ಕರಿಸುತ್ತಿದ್ದಾರೆ. ಮಗು! ನೀನು ಈ ಚಕ್ರದಿಂದ ಯಾರೊಡನೆ ಯುದ್ಧಮಾಡಲು ಇಚ್ಛಿಸಿರುವೆ? ಅದನ್ನಾದರೂ ಹೇಳು."

ಯುಧಿಷ್ಠಿರ! ನಾನು ಹೀಗೆಂದು ಪ್ರಶ್ನಿಸಿದನಂತರ ತನ್ನ ಮನಸ್ಸಿನಲ್ಲಿದ್ದುದನ್ನು ಅಶ್ವತ್ಥಾಮನು ಸ್ಪಷ್ಟವಾಗಿಯೇ ಹೇಳಿದನು :

**ಪ್ರಯುಜ್ಯ ಭವತೇ ಪೂಜಾಂ ಯೋತ್ಸ್ಯೇ ಕೃಷ್ಣ ತ್ವಯಾ ಸಹ ।**
**ಪ್ರಾರ್ಥಿತಂ ತೇ ಮಯಾ ಚಕ್ರಂ ದೇವದಾನವಪೂಜಿತಮ್ ।**
**ಅಜೇಯಃ ಸ್ಯಾಮಿತಿ ವಿಭೋ ಸತ್ಯಮೇತದ್ಬ್ರವೀಮಿ ತೇ ॥೩೭॥**

"ನಿನ್ನನ್ನು ಪ್ರಾರ್ಥಿಸಿ, ನಿನ್ನ ಪೂಜೆಯನ್ನು ಮಾಡಿ, ನಿನ್ನಿಂದ ಚಕ್ರವನ್ನು ಪಡೆದುಕೊಂಡು ನಿನ್ನೊಡನೆಯೇ ಯುದ್ಧಮಾಡುವುದು ನನ್ನ ಆಶಯವಾಗಿದ್ದಿತು. ಈ ವಿಷಯವನ್ನು ನಾನು ಸತ್ಯವಾಗಿ ಹೇಳುತ್ತಿದ್ದೇನೆ. 'ಅಜೇಯಃ ಸ್ಯಾಂ' – 'ನಾನು ಯಾರಿಂದಲೂ ಪರಾಜಿತನಾಗಬಾರದು'– ಎಂಬ ಆಶಯದಿಂದಲೇ ದೇವತೆಗಳಿಂದಲೂ ದಾನವರಿಂದಲೂ ಪೂಜಿಸಲ್ಪಡುತ್ತಿರುವ ಈ ಮಹಾಚಕ್ರವನ್ನು ನಾನು ನಿನ್ನಿಂದ ಯಾಚಿಸಿದೆನು.

ಕೇಶವ! ನಿನ್ನಿಂದ ನಾನು ಅತ್ಯಂತದುರ್ಲಭವಾದ ನನ್ನ ಕಾಮನೆಯನ್ನು (ಕಾಮನಾವಸ್ತುವಾದ ಚಕ್ರವನ್ನು) ಪಡೆದುಕೊಳ್ಳದೆಯೇ ಹಿಂದಿರುಗುತ್ತಿದ್ದೇನೆ. ಗೋವಿಂದ! ನಾನು ಹೊರಡಲಿರುವ ಈ ಸಮಯದಲ್ಲಿ ನೀನು ನನಗೆ ಮಂಗಳವನ್ನಾದರೂ ಕೋರು. 'ಮಂಗಳವಾಗಲಿ!' ಎಂದು ಹೇಳು, ಕೃಷ್ಣ! ಈ ಚಕ್ರವೂ ಅತ್ಯಂತಭಯಂಕರವಾದುದು. ಭಯವನ್ನುಂಟು ಮಾಡುವವರಲ್ಲಿ ಶ್ರೇಷ್ಠನಾದ ನೀನೇ ಈ ಚಕ್ರವನ್ನು ಧರಿಸಿರುವೆ. ನಿನ್ನ ಶತ್ರುಗಳ ಬಳಿ ಇಂತಹ ಚಕ್ರವಿರುವುದಿಲ್ಲ. ಈ ಚಕ್ರವನ್ನು ಎತ್ತಲೂ ಕೂಡ ಭೂಮಿಯಲ್ಲಿ ಯಾರಿಂದಲೂ ಸಾಧ್ಯವಾಗುವುದಿಲ್ಲ."

ಯುಧಿಷ್ಠಿರ! ಅಶ್ವತ್ಥಾಮನು ನನ್ನೊಡನೆ ಹೀಗೆ ಹೇಳಿ ದ್ವಾರಕೆಯಿಂದ ಹೊರಡುವ ಕಾಲದಲ್ಲಿ ರಥಕ್ಕೆ ಹೂಡಲು ಯೋಗ್ಯವಾದ ಉತ್ತಮಾಶ್ವ ಗಳನ್ನೂ, ಧನವನ್ನೂ, ನಾನಾವಿಧವಾದ ರತ್ನಗಳನ್ನೂ ತೆಗೆದುಕೊಂಡು ಹೊರಟುಹೋದನು.

**ಸ ಸಂರಮ್ಭೀ ದುರಾತ್ಮಾ ಚ ಚಪಲಃ ಕ್ರೂರ ಏವ ಚ ।**
**ವೇದ ಚಾಸ್ತ್ರಂ ಬ್ರಹ್ಮಶಿರಸ್ತಸ್ಮಾದ್ರಕ್ಷ್ಯೋ ವೃಕೋದರಃ ॥೪೧॥**

ಅಶ್ವತ್ಥಾಮನು ಮಹಾಕೋಪಿಷ್ಠನು. ದುರಾತ್ಮನು. ಚಪಲಚಿತ್ತನು. ಮಹಾಕ್ರೂರಿಯು. ಅವನು ಬ್ರಹ್ಮಶಿರವೆಂಬ ಮಹಾಸ್ತ್ರವನ್ನು ತಿಳಿದವ ನಾಗಿದ್ದಾನೆ. ಈ ಕಾರಣಗಳಿಂದ ಈ ಸಮಯದಲ್ಲಿ ನಾವು ಭೀಮಸೇನನನ್ನು ಅವನಿಂದ ರಕ್ಷಿಸಬೇಕಾಗಿದೆ.''

೧೨ನೆಯ ಅಧ್ಯಾಯವು ಮುಗಿಯಿತು.

೧೩ನೆಯ ಅಧ್ಯಾಯ ಐಷೀಕಪರ್ವ (ಮುಂದುವರಿದಿದೆ.)

## ಕೃಷ್ಣಾರ್ಜುನ-ಯುಧಿಷ್ಠಿರರು ಭೀಮಸೇನನ ಹಿಂದೆ ಹೊರಟುದು : ಗಂಗಾತೀರಕ್ಕೆ ಹೋದೊಡನೆಯೇ ಭೀಮಸೇನನು ಅಶ್ವತ್ಥಾಮನನ್ನು ಯುದ್ಧಕ್ಕೆ ಆಹ್ವಾನಿಸಿದುದು : ಅಶ್ವತ್ಥಾಮನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಮಹಾರಾಜ! ಯೋಧಶ್ರೇಷ್ಠನಾದ, ಎಲ್ಲ ಯಾದವರಿಗೂ ಸಂತೋಷದಾಯಕನಾದ ಶ್ರೀಕೃಷ್ಣನು ಯುಧಿಷ್ಠಿರನೊಡನೆ ಅಶ್ವತ್ಥಾಮನ ಸ್ವಭಾವವೇನೆಂಬುದನ್ನು ಹೇಳಿ, ಶ್ರೇಷ್ಠವಾದ ಎಲ್ಲ ಆಯುಧಗಳಿಂದಲೂ ಸಂಪನ್ನವಾಗಿದ್ದ ಶ್ರೇಷ್ಠವಾದ ರಥವನ್ನು ಹತ್ತಿದನು. ಶ್ರೇಷ್ಠವಾದ ರಥಕ್ಕೆ ಸುವರ್ಣಮಾಲೆಗಳಿಂದ ಸಮಲಂಕೃತವಾಗಿದ್ದ, ಒಳ್ಳೆಯ ಜಾತಿಯ ಕಾಂಬೋಜದೇಶದ ಕುದುರೆಗಳನ್ನು ಕಟ್ಟಿದ್ದರು. ಉದಯಕಾಲದ ಸೂರ್ಯನ ಬಣ್ಣಕ್ಕೆ ಸಮಾನವಾದ ಎಣೆಗೆಂಪಿನಿಂದ ಆ ರಥವು ಪ್ರಕಾಶಿಸುತ್ತಿದ್ದಿತು. ಆ ರಥದ ನೊಗದ ಬಲಭಾಗವನ್ನು ಶೈಬ್ಯವೆಂಬ ಕುದುರೆಯೂ ನೊಗದ ಎಡಭಾಗವನ್ನು ಸುಗ್ರೀವವೆಂಬ ಕುದುರೆಯೂ ಹೊತ್ತಿದ್ದುವು. ಶೈಬ್ಯ-ಸುಗ್ರೀವಗಳ ಹಿಂದೆಯೇ ಮೇಘಪುಷ್ಪ ಮತ್ತು ಬಲಾಹಕಗಳೆಂಬ ಕುದುರೆಗಳೂ ಇದ್ದುವು. (ಮೇಘಪುಷ್ಪ-ಶೈಬ್ಯ-ಸುಗ್ರೀವ ಮತ್ತು ಬಲಾಹಕ ಗಳೆಂಬ ಕುದುರೆಗಳನ್ನು ಶ್ರೀಕೃಷ್ಣನ ರಥಕ್ಕೆ ಅನುಕ್ರಮವಾಗಿ ಹೂಡಿದ್ದರು.) ಆ ರಥದ ಮೇಲೆ ವಿಶ್ವಕರ್ಮನಿಂದಲೇ ನಿರ್ಮಿತವಾದ, ದಿವ್ಯವಾದ, ರತ್ನಗಳಿಂದಲೂ ಚಿನ್ನ-ಬೆಳ್ಳಿಗಳಿಂದಲೂ ವಿಭೂಷಿತವಾಗಿದ್ದ ಧ್ವಜವು– ಮೇಲೆದ್ದುನಿಂತ ಮಾಯಾದೇವಿಯೋಪಾದಿಯಲ್ಲಿ–ಪ್ರಕಾಶಿಸುತ್ತಿದ್ದಿತು. ಆ ಧ್ವಜದಲ್ಲಿ ಪ್ರಭಾಮಂಡಲದಿಂದಲೂ ಮತ್ತು ಕಿರಣಗಳಿಂದಲೂ ಯುಕ್ತ ನಾಗಿದ್ದ ಗರುಡನು ಉಪಸ್ಥಿತನಾಗಿದ್ದನು. ಸರ್ಪಗಳ ಶತ್ರುವಾದ ಗರುಡನು ಸತ್ಯನಿಷ್ಠನಾದ ಶ್ರೀಕೃಷ್ಣನ ಧ್ವಜದಲ್ಲಿ ಕಾಣಿಸಿಕೊಂಡನು. ಸರ್ವಧನುಷ್ಮಂತ ರಿಗೂ ಧ್ವಜಪ್ರಾಯನಾದ ಶ್ರೀಕೃಷ್ಣನು ರಥಾರೋಹಣಮಾಡಿದನು. ಅವನನ್ನೇ ಅನುಸರಿಸಿ ಸತ್ಯಕರ್ಮನಾದ ಅರ್ಜುನನೂ ಮತ್ತು ಕುರುರಾಜನಾದ

ಯುಧಿಷ್ಠಿರನೂ ರಥವನ್ನು ಹತ್ತಿ ಕುಳಿತರು. ರಥಸ್ಥನಾಗಿದ್ದ ಶಾರ್ಙ್ಗಧರನಾದ ಶ್ರೀಕೃಷ್ಣನ ಎರಡು ಪಾರ್ಶ್ವಗಳಲ್ಲಿಯೂ ಕುಳಿತಿದ್ದ ಯುಧಿಷ್ಠಿರ-ಧನಂಜ ಯರು–ಇಂದ್ರನ ಎರಡು ಪಾರ್ಶ್ವಗಳಲ್ಲಿಯೂ ಇರುವ ಅಶ್ವಿನೀದೇವತೆ ಗಳಂತೆಯೇ ಪ್ರಕಾಶಿಸುತ್ತಿದ್ದರು. ದಶಾರ್ಹಕುಲತಿಲಕನಾದ ಶ್ರೀಕೃಷ್ಣನು ಅರ್ಜುನ-ಯುಧಿಷ್ಠಿರರನ್ನು ಲೋಕಪೂಜಿತವಾದ ರಥದಲ್ಲಿ ಕುಳ್ಳಿರಿಸಿಕೊಂಡು ವೇಗಶಾಲಿಗಳಾಗಿದ್ದ ಶ್ರೇಷ್ಠವಾದ ಕುದುರೆಗಳನ್ನು ಚಾವಟಿಯಿಂದ ತಿವಿದು ಶೀಘ್ರವಾಗಿ ಹೋಗುವಂತೆ ಪ್ರಚೋದಿಸಿದನು. ಯಾದವಶ್ರೇಷ್ಠನಾದ ಶ್ರೀಕೃಷ್ಣ, ಧನಂಜಯ ಮತ್ತು ಯುಧಿಷ್ಠಿರರಿಂದ ಅಧಿಷ್ಠಿತವಾಗಿದ್ದ ಶ್ರೇಷ್ಠವಾದ ಆ ರಥವನ್ನು ಸೆಳೆದುಕೊಂಡು ಆ ನಾಲ್ಕು ಕುದುರೆಗಳೂ ಹಾರುತ್ತಾ-ನೆಗೆಯುತ್ತಾ ಹೋಗುತ್ತಿದ್ದುವು. ಗುಂಪು-ಗುಂಪಾಗಿ ಹಾರಿ ಹೋಗುತ್ತಿರುವ ಪಕ್ಷಿಗಳ ಗುಂಪಿನಿಂದ ಹೊರಬರುವ ಮಹಾಶಬ್ದದಂತೆ– ಶಾರ್ಙ್ಗಧನ್ವನಾದ ಶ್ರೀಕೃಷ್ಣನನ್ನು ಒಯ್ಯುತ್ತಿದ್ದ ಶೀಘ್ರಗಾಮಿಗಳಾದ ಆ ಕುದುರೆಗಳ ಮಹಾಶಬ್ದವು ಪ್ರಾದುರ್ಭವಿಸಿತು.

ಆ ಮೂವರು ನರಶ್ರೇಷ್ಠರೂ ಅತಿಯಾದ ವೇಗದಿಂದ ಭೀಮಸೇನನು ಹೋದ ಮಾರ್ಗದಲ್ಲಿಯೇ ಪ್ರಯಾಣಮಾಡುತ್ತಾ ಸ್ವಲ್ಪಹೊತ್ತಿನಲ್ಲಿಯೇ ಭೀಮಸೇನನ ಸಮೀಪಕ್ಕೆ ಹೋದರು. ಕೋಪದಿಂದ ಉರಿದು ಹೋಗುತ್ತಿದ್ದ, ಶತ್ರುವಿನ ಸಂಹಾರಕಾರ್ಯದಲ್ಲಿ ಉದ್ಯುಕ್ತನಾಗಿದ್ದ ಭೀಮಸೇನನನ್ನು ತಡೆ ಯಲು ಯುಧಿಷ್ಠಿರಾದಿಗಳಿಗೆ ಸಾಧ್ಯವಾಗಲಿಲ್ಲ. ಶ್ರೀಮಂತರಾದ, ದೃಢಧನ್ವ ರಾದ ಆ ಮೂವರು ಮಹಾರಥರೂ ನೋಡುತ್ತಿದ್ದಂತೆಯೇ ಭೀಮಸೇನನು ಶೀಘ್ರಗಾಮಿಗಳಾದ ಕುದುರೆಗಳ ಮೂಲಕವಾಗಿ ಭಾಗೀರಥಿನದಿಯ ತೀರಕ್ಕೆ ತೆರಳಿದನು. ಮಹಾತ್ಮರಾದ ಪಾಂಡವರ ಮಕ್ಕಳನ್ನು ಸಂಹರಿಸಿದ ಅಶ್ವತ್ಥಾಮನು ಗಂಗಾತೀರದಲ್ಲಿರುವನೆಂಬ ವಾರ್ತೆಯನ್ನು ಭೀಮಸೇನನು ಕೇಳಿದ್ದನು. ಗಂಗಾತೀರಕ್ಕೆ ಹೋಗುತ್ತಲೇ ಭೀಮಸೇನನು ಗಂಗಾಜಲದ ಸಮೀಪದಲ್ಲಿ ಋಷಿಗಳೊಡನೆ ಕುಳಿತಿದ್ದ, ಯಶೋವಂತರಾದ, ಮಹಾತ್ಮ ರಾದ ಕೃಷ್ಣದ್ವೈಪಾಯನರನ್ನು ನೋಡಿದನು. ಅವರ ಸಮೀಪದಲ್ಲಿಯೇ ಕ್ರೂರಕರ್ಮನಾದ, ಶರೀರಕ್ಕೆ ತುಪ್ಪವನ್ನು ಹಚ್ಚಿಕೊಂಡಿದ್ದ, ದರ್ಭೆಯನ್ನು ಬಟ್ಟೆಯ ರೂಪದಲ್ಲಿ ಹೊದೆದಿದ್ದ, ಧೂಳಿನಿಂದ ಧೂಸರಿತನಾಗಿದ್ದ ಅಶ್ವತ್ಥಾಮ

ನನ್ನು ಕಂಡನು. ಮಹಾಬಾಹುವಾದ ಭೀಮಸೇನನು ಬಾಣಯುಕ್ತವಾದ ಧನುಸ್ಸನ್ನು ಹಿಡಿದು ಅಶ್ವತ್ಥಾಮನನ್ನೇ ಎದುರಿಸಿದನು ಮತ್ತು ನಿಲ್ಲು- ನಿಲ್ಲೆಂದೂ ಕೂಗಿ ಹೇಳಿದನು. ಭಯಂಕರಧನುಷ್ಮಂತನಾದ ಭೀಮಸೇನನು ಧನುರ್ಬಾಣಗಳನ್ನು ಹಿಡಿದು ತನ್ನ ಕಡೆಗೆ ವೇಗದಿಂದ ಬರುತ್ತಿರುವುದನ್ನೂ, ಅವನ ರಥದ ಹಿಂದೆಯೇ ಯುಧಿಷ್ಠಿರಾರ್ಜುನರು ಜನಾರ್ದನನ ರಥದಲ್ಲಿ ಕುಳಿತು ಬರುತ್ತಿರುವುದನ್ನೂ ನೋಡಿದೊಡನೆಯೇ ಅಶ್ವತ್ಥಾಮನ ಮನಸ್ಸಿನಲ್ಲಿ ಭಯವು ಆವರಿಸಿತು. ಬ್ರಹ್ಮಶಿರವನ್ನು ಪ್ರಯೋಗಿಸುವ ಕಾಲವು ಸನ್ನಿಹಿತವಾಗಿದೆಯೆಂದೂ ಅವನು ಭಾವಿಸಿದನು. ಪರಾಕ್ರಮಿಯಾದ ಅಶ್ವತ್ಥಾಮನು ದಿವ್ಯವಾದ ಆ ಪರಮಾಸ್ತ್ರವನ್ನು ಧ್ಯಾನಿಸಿದನು. ಜೊಂಡು ಹುಲ್ಲಿನಿಂದ ಸಿದ್ಧಪಡಿಸಿದ್ದ ಅಸ್ತ್ರವನ್ನು ಅಶ್ವತ್ಥಾಮನು ಎಡಗೈಯಿಂದ ಹಿಡಿದುಕೊಂಡನು. ದಿವ್ಯಾಯುಧಧಾರಿಗಳಾಗಿ ಆ ಶೂರರು ಬಂದು ನಿಂತಿರುವುದನ್ನು ಅಶ್ವತ್ಥಾಮನು ಸಹಿಸಿಕೊಳ್ಳಲಿಲ್ಲ. ನಾಲ್ವರು ಮಹಾರಥರನ್ನು ಎದುರಿಸಬೇಕಾದಂತಹ ಆಪತ್ತಿನಲ್ಲಿ ಸಿಕ್ಕಿಕೊಂಡಿದ್ದ ದ್ರೌಣಿಯು ದಿವ್ಯವಾದ ಐಷೀಕಾಸ್ತ್ರವನ್ನು ಬಿಟ್ಟುಬಿಟ್ಟನು. ಹಾಗೆ ಬಿಡುವಾಗ ರೋಷದಿಂದ 'ಅಪಾಂಡವಾಯ'-'ಪಾಂಡವರು ಇಲ್ಲದೇ ಇರುವಂತೆ ಮಾಡುವುದಕ್ಕಾಗಿ ಈ ಅಸ್ತ್ರವನ್ನು ಪ್ರಯೋಗಿಸುತ್ತಿದ್ದೇನೆ'–ಎಂಬ ದಾರುಣವಾದ ಮಾತಿನೊಡನೆ ದ್ರೌಣಿಯು ಆ ಮಹಾಸ್ತ್ರವನ್ನು ಪ್ರಯೋಗಿಸಿದನು.

ಜನಮೇಜಯಮಹಾರಾಜ! ಪ್ರತಾಪವಂತನಾದ ದ್ರೋಣಪುತ್ರನು ಹೀಗೆ ಹೇಳಿ ಎಲ್ಲ ಲೋಕಗಳನ್ನೂ ಮೋಹಗೊಳಿಸುವ ಸಲುವಾಗಿ ಆ ಮಹಾಸ್ತ್ರವನ್ನು ಪ್ರಯೋಗಿಸಿದನು. ಜಂಬುಹುಲ್ಲಿನಿಂದ ಸಿದ್ಧವಾಗಿದ್ದ ಆ ಮಹಾಸ್ತ್ರದಲ್ಲಿ ಅಗ್ನಿಯು ಹುಟ್ಟಿಕೊಂಡಿತು. ಕಾಲ, ಅಂತಕ ಮತ್ತು ಯಮರಿಗೆ ಸಮಾನವಾಗಿದ್ದ ಆ ಅಗ್ನಿಯು ಮೂರು ಲೋಕಗಳನ್ನೂ ದಹಿಸಿಬಿಡುವುದೋ ಎಂಬಂತೆ ಕಾಣುತ್ತಿದ್ದಿತು."

ಹದಿಮೂರನೆಯ ಅಧ್ಯಾಯವು ಮುಗಿಯಿತು.

## ಅಶ್ವತ್ಥಾಮನು ಬಿಟ್ಟ ಮಹಾಸ್ತ್ರದ ಪ್ರಭಾವವನ್ನು ನಿವಾರಿಸಲು ಅರ್ಜುನನೂ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದುದು : ಆ ಸಮಯದಲ್ಲಿ ವ್ಯಾಸರೂ ಮತ್ತು ನಾರದರೂ ಅಲ್ಲಿ ಕಾಣಿಸಿಕೊಂಡುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ದಶಾರ್ಹನಂದನನಾದ ಮಹಾಬಾಹುವಾದ ಶ್ರೀಕೃಷ್ಣನು ಅಶ್ವತ್ಥಾಮನ ಅಂಗಚೇಷ್ಟೆ ಮುಖವಿಕಾರಗಳಿಂದಲೇ ಅವನ ಮನೋಗತವಾದ ಅಭಿಪ್ರಾಯವನ್ನು ಗ್ರಹಿಸಿದವನಾಗಿ ಅರ್ಜುನನೊಡನೆ ಹೇಳಿದನು :

**ಅರ್ಜುನಾರ್ಜುನ ಯದ್ದಿವ್ಯಮಸ್ತ್ರಂ ತೇ ಹೃದಿ ವರ್ತತೇ ।**
**ದ್ರೋಣೋಪದಿಷ್ಟಂ ತಸ್ಯಾಯಂ ಕಾಲಃ ಸಮ್ಪ್ರತಿ ಪಾಣ್ಡವ ॥೨॥**

"ಅರ್ಜುನ! ಅರ್ಜುನ! ಆಚಾರ್ಯದ್ರೋಣರಿಂದ ಉಪದೇಶಿಸಲ್ಪಟ್ಟಿರುವ, ನಿನ್ನ ಹೃದಯದಲ್ಲಿ ಮೂರ್ತಿಮತ್ತಾಗಿ ನೆಲೆಸಿರುವ ದಿವ್ಯಾಸ್ತ್ರವನ್ನು ಪ್ರಯೋಗಿಸುವ ಕಾಲವು ಇದೀಗ ಸನ್ನಿಹಿತವಾಗಿದೆ.

**ಭ್ರಾತೄಣಾಮಾತ್ಮನಶ್ಚೈವ ಪರಿತ್ರಾಣಾಯ ಭಾರತ ।**
**ವಿಸೃಜೈತತ್ತ್ವಮಪ್ಯಾಜಾವಸ್ತ್ರಮಸ್ತ್ರನಿವಾರಣಮ್ ॥೩॥**

ಸಹೋದರರ ಮತ್ತು ನಿನ್ನ ರಕ್ಷಣೆಯ ಸಲುವಾಗಿ ನೀನೂ ಈ ಯುದ್ಧದಲ್ಲಿ ಮಹಾಸ್ತ್ರದ ಉಪಶಮನಕರವಾದ ಮಹಾಸ್ತ್ರವಾದ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸು."

ಮಹಾರಾಜ! ಶ್ರೀಕೇಶವನು ಹೀಗೆ ಹೇಳಿದೊಡನೆಯೇ ಶತ್ರುವೀರ ಹಂತಕನಾದ ಅರ್ಜುನನು ಧನುರ್ಬಾಣಗಳನ್ನು ಹಿಡಿದುಕೊಂಡು ಬಹಳ ಬೇಗ ರಥದಿಂದಿಳಿದನು.

**ಪೂರ್ವಮಾಚಾರ್ಯಪುತ್ರಾಯ ತತೋಽನನ್ತರಮಾತ್ಮನೇ ।**
**ಭ್ರಾತೃಭ್ಯಶ್ಚೈವ ಸರ್ವೇಭ್ಯಃ ಸ್ವಸ್ತೀತ್ಯುಕ್ತ್ವಾ ಪರಂತಪಃ ॥೪॥**

**ದೇವತಾಭ್ಯೋ ನಮಸ್ಕೃತ್ಯ ಗುರುಭ್ಯಶ್ಚೈವ ಸರ್ವಶಃ ।**
**ಉತ್ಸಸರ್ಜ ಶಿವಂ ಧ್ಯಾಯನ್ನಸ್ತ್ರಮಸ್ತ್ರೇಣ ಶಾಮ್ಯತಾಮ್ ॥೬॥**

ಶತ್ರುಸಂತಾಪಕನಾದ ಅರ್ಜುನನು ಮಹಾಸ್ತ್ರವನ್ನು ಪ್ರಯೋಗಿಸುವ ಮೊದಲು 'ಆಚಾರ್ಯಪುತ್ರನಿಗೆ ಮಂಗಳವಾಗಲಿ'-ಎಂದನು. ಅನಂತರ 'ತನಗೂ, ತನ್ನ ಸಹೋದರರೆಲ್ಲರಿಗೂ ಶುಭವುಂಟಾಗಲಿ'-ಎಂದು ಹಾರೈಸಿದನು. ದೇವತೆಗಳಿಗೂ ಮತ್ತು ಎಲ್ಲ ಗುರುಜನರಿಗೂ ನಮಸ್ಕಾರಮಾಡಿ ಶುಭಕಾಮನಾಗಿ-'ಈ ಮಹಾಸ್ತ್ರದಿಂದ ಶತ್ರುವು ಪ್ರಯೋಗಿಸಿರುವ ಮಹಾಸ್ತ್ರವು ಉಪಶಮನಹೊಂದಲಿ'-ಎಂದು ಹೇಳುತ್ತಾ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು.

ಗಾಂಡೀವಧನ್ವನಾದ ಅರ್ಜುನನಿಂದ ಬಿಡಲ್ಪಟ್ಟ ಆ ಮಹಾಸ್ತ್ರವು ಒಡನೆಯೇ ಪ್ರಳಯಕಾಲದ ಅಗ್ನಿಯೋಪಾದಿಯಲ್ಲಿ ಮಹಾಜ್ವಾಲೆಗಳಿಂದ ಕೂಡಿ ಪ್ರಜ್ವಲಿಸಿತು. ಅದೇ ರೀತಿಯಲ್ಲಿ ಪ್ರಚಂಡತೇಜಸ್ವಿಯಾದ ಅಶ್ವತ್ಥಾಮನಿಂದ ಬಿಡಲ್ಪಟ್ಟ ಅಸ್ತ್ರವೂ ತೇಜೋಮಂಡಲದಿಂದ ಕೂಡಿಕೊಂಡು ಮಹಾಜ್ವಾಲಾಯುಕ್ತವಾಗಿ ವಿಜೃಂಭಿಸಿತು. ಆ ಸಮಯದಲ್ಲಿ ಸಿಡಿಲಿನ ಶಬ್ದದಂತೆ ಭಯಂಕರವಾದ ಅನೇಕಶಬ್ದಗಳಾದುವು. ಸಾವಿರಾರು ಉಲ್ಕೆಗಳು ಆಕಾಶದಿಂದ ಬೀಳುತ್ತಿದ್ದವು. ಎಲ್ಲ ಪ್ರಾಣಿಗಳನ್ನೂ ಮಹಾಭಯವು ಆವರಿಸಿತು. ಭಯಂಕರವಾದ ಶಬ್ದಗಳಿಂದ ತುಂಬಿಹೋಗಿದ್ದ ಆಕಾಶವು ಜ್ವಾಲೆಗಳ ಪಙ್ಕ್ತಿಗಳಿಂದಲೂ ವ್ಯಾಪ್ತವಾಯಿತು. ಪರ್ವತ-ವನ-ವೃಕ್ಷಗಳಿಂದ ಕೂಡಿರುವ ಭೂಮಿಯು ನಡುಗಿತು. ಆ ಎರಡು ಮಹಾಸ್ತ್ರಗಳೂ ಎಲ್ಲ ಲೋಕಗಳನ್ನೂ ಪರಿತಾಪಗೊಳಿಸುತ್ತಿರಲಾಗಿ, ಸರ್ವಭೂತಗಳಿಗೂ ಆತ್ಮಪ್ರಾಯರಾದ ನಾರದರೂ ಮತ್ತು ಭಾರತರ ಪಿತಾಮಹರಾದ ವ್ಯಾಸರೂ ಜೊತೆಯಲ್ಲಿಯೇ ಕಾಣಿಸಿಕೊಂಡರು. ಸರ್ವಧರ್ಮಗಳನ್ನೂ ತಿಳಿದವರಾಗಿದ್ದ, ಸದಾಕಾಲದಲ್ಲಿಯೂ ಸಮಸ್ತ ಪ್ರಾಣಿಗಳಿಗೂ ಹಿತವನ್ನೇ ಬಯಸುವವರಾಗಿದ್ದ, ಮಹಾತೇಜಸ್ವಿಗಳಾಗಿದ್ದ, ಮುನಿಪುಂಗವರಾದ ವ್ಯಾಸ-ನಾರದರು ವೀರರಾದ ಅಶ್ವತ್ಥಾಮ-ಧನಂಜಯರನ್ನು ಸಮಾಧಾನಗೊಳಿಸುವ ಸಲುವಾಗಿ ಇಬ್ಬರೂ ಪ್ರಯೋಗಿಸಿದ್ದ, ಪ್ರದೀಪ್ತವಾಗಿದ್ದ ಮಹಾಸ್ತ್ರಗಳ ನಡುವೆ ನಿಂತುಕೊಂಡರು. ಯಶೋವಂತರಾದ, ಎದುರಿಸಲು ಅಸಾಧ್ಯರಾದ ಆ

ಋಷಿಶ್ರೇಷ್ಠರು ಆ ಮಹಾಸ್ತ್ರಗಳೆರಡರ ಮಧ್ಯದಲ್ಲಿ ಪ್ರಜ್ವಲಿಸುತ್ತಿರುವ ಎರಡು ಅಗ್ನಿಗಳಂತೆಯೇ ನಿಂತಿದ್ದರು. ಯಾವ ಪ್ರಾಣಿಗಳಿಗೂ ಅವರನ್ನು ಎದುರಿಸಲು (ಕೆಣಕಲು) ಸಾಧ್ಯವಾಗುತ್ತಿರಲಿಲ್ಲ. ಇಬ್ಬರೂ ದೇವ-ದಾನವರಿಗೂ ಸನ್ಮಾನ್ಯರಾಗಿದ್ದರು. ಎಲ್ಲ ಲೋಕಗಳಿಗೂ ಹಿತವನ್ನುಂಟುಮಾಡುವ



ಇಚ್ಛೆಯನ್ನು ಹೊಂದಿದ್ದ ಅವರು, ಎರಡು ಮಹಾಸ್ತ್ರಗಳ ಮಹಾತೇಜಸ್ಸುಗಳನ್ನೂ ಉಪಶಮನಗೊಳಿಸಲು ಆ ಎರಡು ಮಹಾಸ್ತ್ರಗಳ ಮಧ್ಯದಲ್ಲಿ ನಿಂತಿದ್ದರು.

ವ್ಯಾಸ-ನಾರದರಿಬ್ಬರೂ ಆ ಮಹಾವೀರರಿಬ್ಬರನ್ನೂ ಸಂಬೋಧಿಸಿ ಹೇಳಿದರು :

"ಮಹಾವೀರರೇ! ಹಿಂದೆಯೂ ಅನೇಕಮಹಾರಥರಿದ್ದರು. ಅವರೆಲ್ಲರೂ ನಾನಾವಿಧವಾದ ಅಸ್ತ್ರಗಳನ್ನೂ ತಿಳಿದವರಾಗಿದ್ದರು. ಆದರೆ ಅವರು ಯಾವಾಗಲೂ ಯಾವುದೇ ಕಾರಣಕ್ಕಾಗಿಯೂ ಮನುಷ್ಯರ ಮೇಲೆ ಆ ಮಹಾಸ್ತ್ರಗಳನ್ನು ಪ್ರಯೋಗಿಸಿರಲಿಲ್ಲ. ಆದರೆ ಈಗ ಮಹಾವಿನಾಶಕರ ವಾದ ಈ ದುಃಸಾಹಸದಲ್ಲಿ ನೀವೇಕೆ ತೊಡಗಿರುವಿರಿ?"

೧೪ನೆಯ ಅಧ್ಯಾಯವು ಮುಗಿಯಿತು.

೧೫ನೆಯ ಅಧ್ಯಾಯ ಐಷೀಕಪರ್ವ (ಮುಂದುವರಿದಿದೆ.)

## ವ್ಯಾಸರ ಆಜ್ಞಾನುಸಾರವಾಗಿ ಅರ್ಜುನನು ತನ್ನ ಅಸ್ತ್ರವನ್ನು ಉಪಸಂಹಾರಗೊಳಿಸಿದುದು : ಅಶ್ವತ್ಥಾಮನು ತನ್ನ ತಲೆಯಲ್ಲಿದ್ದ ಮಣಿಯನ್ನು ಪಾಂಡವರಿಗೆ ಕೊಟ್ಟು ಪಾಂಡವರ (ಉತ್ತರೆಯ) ಗರ್ಭದ ಮೇಲೆ ದಿವ್ಯಾಸ್ತ್ರವನ್ನು ಪ್ರಯೋಗಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಮಹಾರಾಜ! ಅಗ್ನಿಯ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ವ್ಯಾಸ-ನಾರದರು ಎರಡು ಮಹಾಸ್ತ್ರಗಳ ಮಧ್ಯದಲ್ಲಿ ನಿಂತಿರುವುದನ್ನು ನೋಡಿ ಮಹಾರಥನಾದ, ಗಾಂಡೀವಧನ್ವನಾದ ಧನಂಜಯನು ಮಹಾಸ್ತ್ರದ ಉಪಸಂಹಾರಕ್ಕೆ ಸರಿಯಾದ ಕಾಲವಾಗಿದೆಯೆಂದು ಭಾವಿಸಿ ತಾನು ಬಿಟ್ಟಿದ್ದ ದಿವ್ಯಾಸ್ತ್ರವನ್ನು ಶೀಘ್ರವಾಗಿ ಉಪಸಂಹಾರಗೊಳಿಸಿದನು. ಉಪಸಂಹಾರಮಾಡುವ ಮೊದಲು ಭರತಶ್ರೇಷ್ಠನಾದ ಅರ್ಜುನನು ಬದ್ಧಾಂಜಲಿಯಾಗಿ ಆ ಇಬ್ಬರು ಋಷಿಗಳನ್ನೂ ಉದ್ದೇಶಿಸಿ ಹೇಳಿದನು :

"ಮಹರ್ಷಿಗಳೇ! 'ದ್ರೌಣಿಯು ಬಿಟ್ಟ ಮಹಾಸ್ತ್ರವು ನಾನು ಬಿಟ್ಟ ಮಹಾಸ್ತ್ರದಿಂದ ಉಪಶಮನಗೊಳ್ಳಲಿ' ಎಂದು ಸಂಕಲ್ಪಿಸಿಯೇ ನಾನು ಮಹಾಸ್ತ್ರವನ್ನು ಪ್ರಯೋಗಿಸಿದೆನು. ನಾನೇನಾದರೂ ಬಿಟ್ಟಿರುವ ಈ ಮಹಾಸ್ತ್ರವನ್ನು ಉಪಸಂಹಾರಮಾಡಿದ್ದೇ ಆದರೆ ಪಾಪಕರ್ಮನಾದ ಅಶ್ವತ್ಥಾಮನು ನಮ್ಮೆಲ್ಲರನ್ನೂ ನಿಶ್ಚಯವಾಗಿಯೂ ಮಹಾಸ್ತ್ರದ ತೇಜಸ್ಸಿನಿಂದ

ನಿಃಶೇಷವಾಗಿ ಸುಟ್ಟುಬಿಡುತ್ತಾನೆ. ಇಂತಹ ಸಂದರ್ಭದಲ್ಲಿ ದೇವಸದೃಶರಾದ ನೀವಿಬ್ಬರೇ ನಮಗೂ ಮತ್ತು ಸರ್ವಲೋಕಗಳಿಗೂ ಯಾವ ರೀತಿಯಲ್ಲಿ ಹಿತವಾಗುವುದೋ–ಆ ರೀತಿಯಲ್ಲಿ ಸಲಹೆನೀಡಲು ಸಮರ್ಥರಾಗಿರುವಿರಿ."

ಜನಮೇಜಯ! ಅರ್ಜುನನು ವ್ಯಾಸ-ನಾರದರಿಗೆ ಹೀಗೆ ಹೇಳಿ ಆ ಮಹಾಸ್ತ್ರವನ್ನು ಉಪಸಂಹರಿಸಿದನು.

**ಸಂಹಾರೋ ದುಷ್ಕರಸ್ತಸ್ಯ ದೇವೈರಪಿ ಹಿ ಸಂಯುಗೇ ।**
**ವಿಸೃಷ್ಟಸ್ಯ ರಣೇ ತಸ್ಯ ಪರಮಾಸ್ತ್ರಸ್ಯ ಸಂಗ್ರಹೇ ।**
**ಅಶಕ್ತಃ ಪಾಣ್ಡವಾದನ್ಯಃ ಸಾಕ್ಷಾದಪಿ ಶತಕ್ರತುಃ ॥೬॥**

ಜನಮೇಜಯ! ಯುದ್ಧದಲ್ಲಿ ದೇವತೆಗಳಿಂದಲೂ ಆ ಮಹಾಸ್ತ್ರವನ್ನು ಉಪಸಂಹರಿಸುವ ಸಾಧ್ಯತೆಯಿರಲಿಲ್ಲ. ಯುದ್ಧದಲ್ಲಿ ಪ್ರಯೋಗಿಸಿದ ಆ ಶ್ರೇಷ್ಠವಾದ ಅಸ್ತ್ರವನ್ನು ಪುನಃ ಸಂಗ್ರಹಿಸಲು (ಅಸ್ತ್ರದ ಪ್ರಭಾವವನ್ನು ಉಪಶಮನಗೊಳಿಸಲು) ಅರ್ಜುನನೊಬ್ಬನ ಹೊರತಾಗಿ ಸಾಕ್ಷಾತ್ ಇಂದ್ರನಿಂದಲೂ ಸಾಧ್ಯವಾಗುತ್ತಿರಲಿಲ್ಲ.

**ಬ್ರಹ್ಮತೇಜೋದ್ಭವಂ ತದ್ಧಿ ವಿಸೃಷ್ಟಮಕೃತಾತ್ಮನಾ ।**
**ನ ಶಕ್ಯಮಾವರ್ತಯಿತುಂ ಬ್ರಹ್ಮಚಾರಿವ್ರತಾದೃತೇ ॥೭॥**

ಆ ಅಸ್ತ್ರವು ಬ್ರಹ್ಮತೇಜಸ್ಸಿನಿಂದಲೇ ಹುಟ್ಟಿದುದು. ಜಿತೇಂದ್ರಿಯನಲ್ಲದವನು ಆ ಮಹಾಸ್ತ್ರವನ್ನು ಬಿಟ್ಟುದೇ ಆದರೆ ಅದನ್ನು ಉಪಸಂಹಾರಗೊಳಿಸಲು ಅವನಿಂದ ಸಾಧ್ಯವಾಗುವುದೇ ಇಲ್ಲ. ಬ್ರಹ್ಮಚರ್ಯವ್ರತಾನುಷ್ಠಾನ ಮಾಡುವವನೊಬ್ಬನನ್ನು ಬಿಟ್ಟು ಆ ಮಹಾಸ್ತ್ರವನ್ನು ಉಪಸಂಹರಿಸಲು ಬೇರೆ ಯಾರಿಂದಲೂ ಸಾಧ್ಯವಾಗುವುದಿಲ್ಲ.

**ಅಚೀರ್ಣಬ್ರಹ್ಮಚರ್ಯೋ ಯಃ ಸೃಷ್ಟ್ವಾ ವರ್ತಯತೇ ಪುನಃ ।**
**ತದಸ್ತ್ರಂ ಸಾನುಬನ್ಧಸ್ಯ ಮೂರ್ಧಾನಂ ತಸ್ಯ ಕೃನ್ತತಿ ॥೮॥**

ಯಾವನು ಬ್ರಹ್ಮಚರ್ಯವ್ರತನಿಷ್ಠನಾಗಿರುವುದಿಲ್ಲವೋ–ಅಂತಹವನು ಆ ಮಹಾಸ್ತ್ರವನ್ನೊಮ್ಮೆ ಬಿಟ್ಟು ಪುನಃ ಅದನ್ನು ಉಪಸಂಹರಿಸಲು ಪ್ರಯ

ತ್ನಿಸಿದ್ದೇ ಆದರೆ ಆ ಮಹಾಸ್ತ್ರವು ಸಂಬಂಧಿಸಹಿತನಾದ ಪ್ರಯೋಕ್ತೃವಿನ ತಲೆಯನ್ನೇ ಕತ್ತರಿಸುತ್ತದೆ.

**ಬ್ರಹ್ಮಚಾರೀ ವ್ರತೀ ಚಾಪಿ ದುರವಾಪಮವಾಪ್ಯ ತತ್ ।**
**ಪರಮವ್ಯಸನಾರ್ತೋಽಪಿ ನಾರ್ಜುನೋಽಸ್ತ್ರಂ ವ್ಯಮುಞ್ಚತ ॥೯॥**

ಅರ್ಜುನನು ಬ್ರಹ್ಮಚರ್ಯವ್ರತನಿಷ್ಠನು. ಅನೇಕವ್ರತ-ನಿಯಮಾದಿಗಳನ್ನು ಪರಿಪಾಲಿಸುವವನು. ಮಹಾಧನುರ್ಧಾರಿಗಳಿಂದಲೂ ಪಡೆದುಕೊಳ್ಳಲು ದುಃಸಾಧ್ಯವಾಗಿದ್ದ ಮಹಾಸ್ತ್ರವನ್ನು ಪಡೆದುಕೊಂಡಿದ್ದಾನೆ. ಅಂತಹವನು ಎಂತಹುದೇ ಮಹಾಕಷ್ಟದ ಸಂದರ್ಭದಲ್ಲಿಯೂ ಆ ಮಹಾಸ್ತ್ರವನ್ನು ಪ್ರಯೋಗಿಸಲಿಲ್ಲ. ಸತ್ಯವ್ರತಧರನಾದ, ಶೂರನಾದ, ಬ್ರಹ್ಮಚರ್ಯವ್ರತನಿಷ್ಠನಾದ, ಗುರುವಿನ ಆಜ್ಞಾಪಾಲಕನಾದ ಅರ್ಜುನನಲ್ಲಿ ಈ ಎಲ್ಲ ಕಲ್ಯಾಣಗುಣಗಳೂ ಇದ್ದುದರಿಂದಲೇ ತಾನು ಬಿಟ್ಟ ಮಹಾಸ್ತ್ರವನ್ನು ಪುನಃ ಉಪಸಂಹಾರಮಾಡಿದನು.

ಅಶ್ವತ್ಥಾಮನಾದರೋ ತನ್ನ ಮುಂಭಾಗದಲ್ಲಿ ವ್ಯಾಸ ಮತ್ತು ನಾರದಮಹರ್ಷಿಗಳು ನಿಂತಿರುವುದನ್ನು ನೋಡಿದನು. (ಅವರು ಹೇಳಿದುದನ್ನೂ ಕೇಳಿದನು.) ಆದರೆ ಎಷ್ಟೇ ಪ್ರಯತ್ನಿಸಿದರೂ ಘೋರವಾದ ಆ ಮಹಾಸ್ತ್ರವನ್ನು ಉಪಸಂಹರಿಸಲು ಅವನಿಂದ ಸಾಧ್ಯವಾಗಲಿಲ್ಲ. ಯುದ್ಧದಲ್ಲಿ ತಾನು ಪ್ರಯೋಗಿಸಿದ ಪರಮಾಸ್ತ್ರದ ಉಪಸಂಹಾರದಲ್ಲಿ ಅಸಮರ್ಥನಾದ ಅಶ್ವತ್ಥಾಮನು ದುಃಖಿತವಾದ ಮನಸ್ಸಿನಿಂದ ಕೂಡಿದವನಾಗಿ ವ್ಯಾಸರೊಡನೆ ಹೇಳಿದನು :

**ಉತ್ತಮವ್ಯಸನಾರ್ತೇನ ಪ್ರಾಣತ್ರಾಣಮಭೀಪ್ಸುನಾ ।**
**ಮಯೈತದಸ್ತ್ರಮುತ್ಸೃಷ್ಟಂ ಭೀಮಸೇನಭಯಾನ್ಮುನೇ ॥೧೩॥**

“ಮಹಾಮುನಿಗಳೇ! ಭೀಮಸೇನನ ಭಯದಿಂದಾಗಿ ಬಹಳವಾದ ವ್ಯಸನದಿಂದ ಪೀಡಿತನಾದ ನಾನು–ನನ್ನ ಪ್ರಾಣಗಳನ್ನು ಉಳಿಸಿಕೊಳ್ಳಲೋಸುಗ–ಈ ಮಹಾಸ್ತ್ರವನ್ನು ಪ್ರಯೋಗಿಸಿದೆನು.

ದುರ್ಯೋಧನನನ್ನು ಸಂಹರಿಸುವ ಇಚ್ಛೆಯಿಂದ ಸಂಗ್ರಾಮಭೂಮಿ

ಯಲ್ಲಿ ಮಿಥ್ಯಾಚಾರನಾದ (ಕಪಟಿಯಾದ) ಈ ಭೀಮಸೇನನು ಅಧರ್ಮದ ಮಾರ್ಗವನ್ನು ಅನುಸರಿಸಿ ಯುದ್ಧಮಾಡಿದನು. ಈ ಕಾರಣದಿಂದಾಗಿ ಇವನ ಮೇಲೆ ಸೇಡುತೀರಿಸಿಕೊಳ್ಳಲು–ನಾನು ಜಿತೇಂದ್ರಿಯನಲ್ಲದಿದ್ದರೂ–ಈ ಮಹಾಸ್ತ್ರವನ್ನು ಪ್ರಯೋಗಿಸಿಬಿಟ್ಟೆನು. ಆದರೆ ಈಗ ಈ ಮಹಾಸ್ತ್ರವನ್ನು ಉಪಸಂಹರಿಸಲು ಅಸಮರ್ಥನಾಗಿದ್ದೇನೆ. ನಾನು ಅಗ್ನಿಯ ತೇಜಸ್ಸನ್ನು ಇದರಲ್ಲಿ ಅಭಿಮಂತ್ರಿಸಿ ದುರಾಸದವಾದ ಈ ಮಹಾಸ್ತ್ರವನ್ನು– 'ಅಪಾಂಡವಾಯ'–'ಪಾಂಡವರ ನಿರ್ಮೂಲಕ್ಕಾಗಿ'–ಎಂದು ಸಂಕಲ್ಪಿಸಿ ಪ್ರಯೋಗಿಸಿದ್ದೇನೆ. ಪಾಂಡವರನ್ನು ವಿನಾಶಗೊಳಿಸಬೇಕೆನ್ನುವ ಸಂಕಲ್ಪ ಮಾಡಿ ಪ್ರಯೋಗಿಸಿರುವ ಈ ಮಹಾಸ್ತ್ರವೀಗ ಪಾಂಡುವಿನ ಎಲ್ಲ ಮಕ್ಕಳನ್ನೂ ಜೀವಿತದಿಂದ ಹೀನರನ್ನಾಗಿ ಮಾಡುತ್ತದೆ. ಬ್ರಾಹ್ಮಣೋತ್ತಮರೇ! ನಾನು ರೋಷಾವಿಷ್ಟನಾಗಿ ರಣಭೂಮಿಯಲ್ಲಿ ಕುಂತಿಯ ಮಕ್ಕಳನ್ನು ಸಂಹರಿಸುವ ಇಚ್ಛೆಯಿಂದ ಈ ಮಹಾಸ್ತ್ರವನ್ನು ಪ್ರಯೋಗಿಸಿ ಮಹಾಪಾಪಕಾರ್ಯವನ್ನೇ ಮಾಡಿದ್ದೇನೆ."

ವ್ಯಾಸರು ಅಶ್ವತ್ಥಾಮನೊಡನೆ ಹೇಳಿದರು :

"ಮಗು! ಕುಂತಿಯ ಮಗನಾದ ಅರ್ಜುನನೂ ಬ್ರಹ್ಮಶಿರವೆಂಬ ಈ ಮಹಾಸ್ತ್ರವನ್ನು ತಿಳಿದವನಾಗಿದ್ದಾನೆ. ಆದರೆ ಯುದ್ಧದಲ್ಲಿ ಅವನು ರೋಷಾವಿಷ್ಟನಾಗಿ ನಿನ್ನ ನಾಶಕ್ಕೆಂದು ಆ ಮಹಾಸ್ತ್ರವನ್ನು ಪ್ರಯೋಗಿಸಲಿಲ್ಲ. ರಣಭೂಮಿಯಲ್ಲಿ ನೀನು ಪ್ರಯೋಗಿಸಿದ ಮಹಾಸ್ತ್ರದ ಪ್ರಭಾವವನ್ನು ತನ್ನ ಮಹಾಸ್ತ್ರದಿಂದ ಉಪಶಮನಗೊಳಿಸಲು ಬ್ರಹ್ಮಶಿರವೆಂಬ ಮಹಾಸ್ತ್ರವನ್ನು ಪ್ರಯೋಗಿಸಿದನು. ಪುನಃ ಅವನು ಆ ಮಹಾಸ್ತ್ರವನ್ನು ಉಪಸಂಹರಿಸಿದನು. ಮಹಾಬಾಹುವಾದ ಅರ್ಜುನನು ನಿನ್ನ ತಂದೆಯವರ ಉಪದೇಶದಿಂದ ಈ ಬ್ರಹ್ಮಾಸ್ತ್ರವನ್ನು ಬಹಳ ಹಿಂದೆಯೇ ತಿಳಿದುಕೊಂಡಿದ್ದರೂ ಕ್ಷತ್ರಧರ್ಮದಿಂದ ಅವನೆಂದೂ ವಿಚಲಿತನಾಗಲಿಲ್ಲ. (ಮಹಾಸ್ತ್ರವು ತನ್ನಲ್ಲಿರುವುದೆಂಬ ಭಾವನೆಯಿಂದ ಗುರುಗಳು ಹಾಕಿರುವ ನಿಯಮವನ್ನು ಮೀರಿ ಮಹಾಸ್ತ್ರವನ್ನು ಪ್ರಯೋಗಿಸಲು ಮನಸ್ಸು ಮಾಡಲಿಲ್ಲ.)

ಇಂತಹ ಧೈರ್ಯವಂತನಾದ, ಸತ್ಪುರುಷನಾದ, ಸಾಧುವಾದ,

ಸರ್ವಾಸ್ತ್ರಗಳನ್ನೂ ತಿಳಿದಿರುವ ಅರ್ಜುನನನ್ನು ಭ್ರಾತೃ-ಬಾಂಧವರೊಡನೆ ಸಂಹರಿಸಲು ಏಕೆ ಇಚ್ಛಿಸಿರುವೆ?

**ಅಸ್ತ್ರಂ ಬ್ರಹ್ಮಶಿರೋ ಯತ್ರ ಪರಮಾಸ್ತ್ರೇಣ ವಧ್ಯತೇ ।**
**ಸಮಾ ದ್ವಾದಶ ಪರ್ಜನ್ಯಸ್ತದ್ರಾಷ್ಟ್ರಂ ನಾಭಿವರ್ಷತಿ ॥೨೩॥**

ಯಾವ ದೇಶದಲ್ಲಿ ಬ್ರಹ್ಮಶಿರವೆಂಬ ಅಸ್ತ್ರವು ಮತ್ತೊಂದು ಶ್ರೇಷ್ಠವಾದ ಅಸ್ತ್ರದಿಂದ ವಿನಾಶಹೊಂದುತ್ತದೆಯೋ, ಆ ದೇಶದಲ್ಲಿ ಪರ್ಜನ್ಯನು ಹನ್ನೆರಡು ವರ್ಷಗಳ ಪರ್ಯಂತವಾಗಿ ಮಳೆಗರೆಯುವುದಿಲ್ಲ.

ಈ ಕಾರಣದಿಂದಲೇ ಮಹಾಬಾಹುವಾದ ಅರ್ಜುನನು, ನೀನು ಪ್ರಯೋಗಿಸಿರುವ ಬ್ರಹ್ಮಶಿರವನ್ನು ವಿನಾಶಗೊಳಿಸಲು ಸಮರ್ಥನಾಗಿದ್ದರೂ ಪ್ರಜೆಗಳಿಗೆ ಹಿತವನ್ನುಂಟುಮಾಡಬೇಕೆನ್ನುವ ಇಚ್ಛೆಯಿಂದ ನೀನು ಬಿಟ್ಟಿರುವ ಮಹಾಸ್ತ್ರವನ್ನು ವಿನಾಶಗೊಳಿಸಲಿಲ್ಲ. ಮಹಾಭುಜನೇ! ನೀನೀಗಲೇ ಪಾಂಡವರನ್ನೂ–ರಾಷ್ಟ್ರವನ್ನೂ ರಕ್ಷಿಸುವ ಸಲುವಾಗಿ ಮತ್ತು ನಿನ್ನನ್ನೂ ರಕ್ಷಿಸಿಕೊಳ್ಳುವ ಸಲುವಾಗಿ ನೀನು ಪ್ರಯೋಗಿಸಿರುವ ಈ ದಿವ್ಯಾಸ್ತ್ರವನ್ನು ಉಪಸಂಹರಿಸು.

**ಅರೋಷಸ್ತವ ಚೈವಾಸ್ತು ಪಾರ್ಥಾಃ ಸನ್ತು ನಿರಾಮಯಾಃ ।**
**ನ ಹ್ಯಧರ್ಮೇಣ ರಾಜರ್ಷಿಃ ಪಾಣ್ಡವೋ ಜೇತುಮಿಚ್ಛತಿ ॥೨೬॥**

ಅಶ್ವತ್ಥಾಮ! ನಿನ್ನ ಕೋಪವು ಶಾಂತವಾಗಲಿ. ಪಾಂಡವರು ಆಧಿ-ವ್ಯಾಧಿಗಳಿಂದ ರಹಿತರಾಗಿರಲಿ. ರಾಜರ್ಷಿಯಾದ ಯುಧಿಷ್ಠಿರನು ಯಾವುದೇ ಕಾರಣದಿಂದಲೂ ಅಧರ್ಮದ ಮೂಲಕವಾಗಿ ಶತ್ರುಗಳನ್ನು ಜಯಿಸಲು ಇಚ್ಛಿಸತಕ್ಕವನಲ್ಲ.

**ಮಣಿಂ ಚೈವ ಪ್ರಯಚ್ಛಾದ್ಯ ಯಸ್ತೇ ಶಿರಸಿ ತಿಷ್ಠತಿ ।**
**ಏತದಾದಾಯ ತೇ ಪ್ರಾಣಾನ್ಪ್ರತಿದಾಸ್ಯನ್ತಿ ಪಾಣ್ಡವಾಃ ॥೨೭॥**

ನಿನ್ನ ಶಿರಸ್ಸಿನಲ್ಲಿರುವ ಮಣಿಯನ್ನು ಈಗಲೇ ಇವರಿಗೆ ಕೊಟ್ಟುಬಿಡು. ಪಾಂಡವರು ಈ ಮಣಿಯನ್ನು ತೆಗೆದುಕೊಂಡು ಇದಕ್ಕೆ ಪ್ರತಿಯಾಗಿ ನಿನಗೆ ಪ್ರಾಣದಾನವನ್ನು ಮಾಡುತ್ತಾರೆ.”

ವ್ಯಾಸರ ಸಲಹೆಗೆ ಉತ್ತರವಾಗಿ ಅಶ್ವತ್ಥಾಮನು ಹೇಳುತ್ತಾನೆ :

**ಪಾಣ್ಡವೈರ್ಯಾನಿ ರತ್ನಾನಿ ಯಚ್ಚಾನ್ಯತ್ಕೌರವೈರ್ಧನಮ್ ।**
**ಅವಾಪ್ತಮಿಹ ತೇಭ್ಯೋಽಯಂ ಮಣಿರ್ಮಮ ವಿಶಿಷ್ಯತೇ ॥೨೮॥**

"ಮಹಾಮುನಿಗಳೇ! ಪಾಂಡವರು ಇದುವರೆಗೆ ಯಾವ ಯಾವ ಮಹಾರತ್ನಗಳನ್ನು ಸಂಗ್ರಹಿಸಿ ಇಟ್ಟುಕೊಂಡಿರುವರೋ ಮತ್ತು ಕೌರವರಿಂದ ಎಷ್ಟು ಐಶ್ವರ್ಯವನ್ನು ಈಗ ಪಡೆದುಕೊಳ್ಳುವರೋ ಒಟ್ಟಾಗಿ ಸೇರಿದ ಈ ಎಲ್ಲ ಮಹೈಶ್ವರ್ಯಕ್ಕೂ ಅಧಿಕವಾದ ಮೌಲ್ಯವನ್ನು ನನ್ನ ಈ ಒಂದು ಮಣಿಯೇ ಹೊಂದಿದೆ.

**ಯಮಾಬಧ್ಯ ಭಯಂ ನಾಸ್ತಿ ಶಸ್ತ್ರವ್ಯಾಧಿಕ್ಷುಧಾಶ್ರಯಮ್ ।**
**ದೇವೇಭ್ಯೋ ದಾನವೇಭ್ಯೋ ವಾ ನಾಗೇಭ್ಯೋ ವಾ ಕಥಂಚನ ॥೨೯॥**

ಈ ಮಣಿಯನ್ನು ಧರಿಸಿದರೆ ಶಸ್ತ್ರಾಸ್ತ್ರಗಳ ಭಯವಿರುವುದಿಲ್ಲ. ಆಧಿ-ವ್ಯಾಧಿಗಳ ಭಯವಿರುವುದಿಲ್ಲ. ಹಸಿವು-ಬಾಯಾರಿಕೆಗಳಿರುವುದಿಲ್ಲ. ಈ ಮಹಾಮಣಿಯನ್ನು ಧರಿಸಿರುವವನು ದೇವ-ದಾನವ-ನಾಗರಿಗೂ ಭಯಪಡಬೇಕಾಗಿಲ್ಲ.

**ನ ಚ ರಕ್ಷೋಗಣಭಯಂ ನ ತಸ್ಕರಭಯಂ ತಥಾ ।**
**ಏವಂ ವೀರ್ಯೋ ಮಣಿರಯಂ ಸ ಮೇ ತ್ಯಾಜ್ಯಃ ಕಥಂಚನ ॥೩೦॥**

ಈ ಮಣಿಯನ್ನು ಧರಿಸಿದವನಿಗೆ ರಾಕ್ಷಸರ ಸಮೂಹದಿಂದಲೂ ಭಯವಿರುವುದಿಲ್ಲ. ಕಳ್ಳ-ಕಾಕರ ಭಯವಿರುವುದಿಲ್ಲ. ಈ ನನ್ನ ಮಣಿಯು ಅಂತಹ ವೀರ್ಯವತ್ತಾದುದು. ಆದುದರಿಂದ ಈ ಮಣಿಯು ಯಾವುದೇ ಕಾರಣದಿಂದಲೂ ನನ್ನಿಂದ ಪರಿತ್ಯಾಗಕ್ಕೆ ಯೋಗ್ಯವಾದುದಲ್ಲ.

ಹೀಗಿದ್ದರೂ ಪೂಜ್ಯರಾದ ನೀವು ಹೇಳಿದಂತೆ ಮಾಡುವುದೇ ನನ್ನ ಕರ್ತವ್ಯವಾಗಿದೆ. ಇದೋ ಈ ಮಣಿಯು ಇಲ್ಲಿದೆ. ನಾನೂ ಸಹ ಇಲ್ಲಿಯೇ ಇದ್ದೇನೆ. ಆದರೆ ನಾನು ಬಿಟ್ಟಿರುವ ಮಹಾಸ್ತ್ರವು ಅಮೋಘವಾದುದು. ಅತ್ಯಂತಶ್ರೇಷ್ಠವಾದುದು. ಯಾವುದೇ ಕಾರಣದಿಂದಲೂ ವ್ಯರ್ಥ ವಾಗತಕ್ಕುದಲ್ಲ. ಬಿಟ್ಟಿರುವ ಅಸ್ತ್ರವನ್ನು ಪುನಃ ಉಪಸಂಹರಿಸಲು ನನಗೆ

ಸಾಮರ್ಥ್ಯವಿಲ್ಲ. ಆದುದರಿಂದ ಬ್ರಹ್ಮಶಿರೋಮಹಾಮಂತ್ರದಿಂದ ಅಭಿಮಂತ್ರಿತವಾಗಿರುವ ಈ ಜಂಬುಹುಲ್ಲು ಪಾಂಡವರ ಗರ್ಭಗಳಲ್ಲಿ ಬೀಳುತ್ತದೆ. (ಪಾಂಡವರ ಸಂತತಿಯ ಮೇಲೆ ಬೀಳುತ್ತದೆ.) ಆದುದರಿಂದ ಈ ಮಹಾಸ್ತ್ರವನ್ನು ನಾನು ಪಾಂಡವರ ಗರ್ಭಗಳಲ್ಲಿ ಬೀಳುವಂತೆ ಮಾಡುತ್ತೇನೆ. ಮಹಾಮುನಿಗಳೇ! ತಮ್ಮ ಮಾತನ್ನು ನಾನು ಯಾವಾಗಲೂ ಉಲ್ಲಂಘಿಸುವವನಲ್ಲ."

**ಏವಂ ಕುರು ನ ಚಾನ್ಯಾ ತು ಬುದ್ಧಿಃ ಕಾರ್ಯಾ ತ್ವಯಾನಘ ।**
**ಗರ್ಭೇಷು ಪಾಣ್ಡವೇಯಾನಾಂ ವಿಸೃಜ್ಯೈತದುಪಾರಮ ॥೨೪॥**

"ನಿಷ್ಪಾಪನೇ! ಹಾಗೆಯೇ ಮಾಡು. ಪುನಃ ನಿನ್ನ ಬುದ್ಧಿಯಲ್ಲಿ ಬೇರೆ ಯಾವುದನ್ನೂ ಯೋಚಿಸಬೇಡ. ನಿನ್ನ ಈಗಿನ ಬುದ್ಧಿಯನ್ನು ವ್ಯತ್ಯಾಸಗೊಳಿಸಬೇಡ. ನಿನ್ನ ಇಚ್ಛೆಯಂತೆ ಈ ಮಹಾಸ್ತ್ರವನ್ನು ಪಾಂಡವರ ಗರ್ಭಗಳಲ್ಲಿ ವಿಸರ್ಜಿಸು. ಅನಂತರವಾದರೂ ಶಾಂತನಾಗು."

ಜನಮೇಜಯ! ಅಶ್ವತ್ಥಾಮನು ವ್ಯಾಸರು ಹೇಳಿದ ಮಾತನ್ನು ಕೇಳಿ ಆ ಯುದ್ಧಸಮಯದಲ್ಲಿ ಮೇಲೆತ್ತಿದ್ದ ಮಹಾಸ್ತ್ರವನ್ನು ಪಾಂಡವರ ಗರ್ಭಗಳಲ್ಲಿ ವಿಸರ್ಜಿಸಿದನು. (ಪಾಂಡವರ ಸಂತಾನವು ವಿನಾಶವಾಗಲೆಂದು ಸಂಕಲ್ಪಿಸಿ ಆ ಮಹಾಸ್ತ್ರವನ್ನು ವಿಸರ್ಜಿಸಿದನು.)"

೧೫ನೆಯ ಅಧ್ಯಾಯವು ಮುಗಿಯಿತು.

೧೬ನೆಯ ಅಧ್ಯಾಯ ಐಷೀಕಪರ್ವ (ಮುಂದುವರಿದಿದೆ.)

## ಅಶ್ವತ್ಥಾಮನು ಶ್ರೀಕೃಷ್ಣನಿಂದ ಶಾಪಗ್ರಸ್ತನಾಗಿ ಅರಣ್ಯಕ್ಕೆ ಹೊರಟುಹೋದುದು : ಪಾಂಡವರು ಮಣಿಯನ್ನು ಕೊಂಡೊಯ್ದು ದ್ರೌಪದಿಯನ್ನು ಸಮಾಧಾನಗೊಳಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಮಹಾರಾಜ! ಪಾಪಕರ್ಮನಾದ ಅಶ್ವತ್ಥಾಮನು ಪಾಂಡವರ ಗರ್ಭ

ಗಳಲ್ಲಿ ಮಹಾಸ್ತ್ರವನ್ನು ವಿಸರ್ಜಿಸಿದನೆಂಬುದನ್ನು ತಿಳಿದು ಹೃಷೀಕೇಶನು ಪರಮಹೃಷ್ಟನಾಗಿ ಅಶ್ವತ್ಥಾಮನೊಡನೆ ಈ ಮಾತನ್ನು ಹೇಳಿದನು :

"ದ್ರೋಣಪುತ್ರ! ಹಿಂದೆ ವಿರಾಟರಾಜನ ಮಗಳಾದ, ಅರ್ಜುನನ ಸೊಸೆಯಾದ ಉತ್ತರೆಯು ಉಪಪ್ಲವ್ಯದಲ್ಲಿರುತ್ತಿರುವಾಗ ವ್ರತನಿಷ್ಠನಾದ ಬ್ರಾಹ್ಮಣನೊಬ್ಬನು ಅವಳೊಡನೆ ಹೇಳಿದನು :

**ಪರಿಕ್ಷೀಣೇಷು ಕುರುಷು ಪುತ್ರಸ್ತವ ಭವಿಷ್ಯತಿ ।**
**ಏತದಸ್ಯ ಪರಿಕ್ಷಿತ್ತ್ವಂ ಗರ್ಭಸ್ಥಸ್ಯ ಭವಿಷ್ಯತಿ ॥೩॥**

'ಕುರುಗಳೆಲ್ಲರೂ ಕ್ಷೀಣಿಸಿಹೋದ ಸಮಯದಲ್ಲಿ ನಿನಗೆ ವಂಶೋದ್ಧಾರಕನಾದ ಮಗನು ಹುಟ್ಟುತ್ತಾನೆ. ಈ ಕಾರಣದಿಂದ ಗರ್ಭಸ್ಥನಾಗಿರುವ ಶಿಶುವಿಗೆ ಪರಿಕ್ಷಿತ್ ಎಂದೇ ಹೆಸರಾಗುತ್ತದೆ.'

ದ್ರೋಣಪುತ್ರ! ಸಾಧುವು ಅಂದು ಹೇಳಿದ ಆ ಮಾತು ಸತ್ಯವಾಗಿ ಪರಿಣಮಿಸುವುದು. ಉತ್ತರೆಯ ಪುತ್ರನಾದ ಪರಿಕ್ಷಿತನು ಪುನಃ ಈ ಪಾಂಡವರ ವಂಶಕ್ಕೆ ಪ್ರವರ್ತಕನಾಗುವನು."

ಮಹಾರಾಜ! ಹೀಗೆ ಹೇಳಿದ ಸಾತ್ವತಶ್ರೇಷ್ಠನಾದ ಗೋವಿಂದನಿಗೆ ಅತ್ಯಂತಕುಪಿತನಾಗಿದ್ದ ಅಶ್ವತ್ಥಾಮನು ಪ್ರತ್ಯುತ್ತರಿಸಿದನು :

"ಕೇಶವ! ಪುಂಡರೀಕಾಕ್ಷ! ಪಾಂಡವಪಕ್ಷಪಾತದಿಂದ ನೀನು ಈಗ ಯಾವ ಮಾತನ್ನಾಡಿದೆಯೋ ಅದು ಖಂಡಿತವಾಗಿಯೂ ಸುಳ್ಳಾಗುವುದಿಲ್ಲ. (ಪಾಂಡವರ ಗರ್ಭವು ವಿನಾಶಹೊಂದಿಯೇ ತೀರುತ್ತದೆ.) ನೀನು ಯಾವ ಗರ್ಭವನ್ನು ರಕ್ಷಿಸಲು ಇಚ್ಛಿಪಡುತ್ತಿರುವೆಯೋ, ವಿರಾಟನ ಮಗಳಾದ ಆ ಉತ್ತರೆಯ ಗರ್ಭದ ಮೇಲೆ ನನ್ನಿಂದ ಪ್ರಯೋಗಿಸಲ್ಪಟ್ಟಿರುವ ಮಹಾಸ್ತ್ರವು ಬಿದ್ದೇ ಬೀಳುವುದು."

**ಅಮೋಘಃ ಪರಮಾಸ್ತ್ರಸ್ಯ ಪಾತಸ್ತಸ್ಯ ಭವಿಷ್ಯತಿ ।**
**ಸ ತು ಗರ್ಭೋ ಮೃತೋ ಜಾತೋ ದೀರ್ಘಮಾಯುರವಾಪ್ಸ್ಯತಿ ॥**

"ದ್ರೋಣಪುತ್ರ! ನೀನು ಹೇಳಿದುದು ನಿಜ. ನಿನ್ನೀ ದಿವ್ಯಾಸ್ತ್ರವು

ಉತ್ತರೆಯ ಗರ್ಭದ ಮೇಲೆ ಬಿದ್ದೇ ಬೀಳುತ್ತದೆ. ಆ ದಿವ್ಯಾಸ್ತ್ರದ ಪ್ರಹಾರವು ವ್ಯರ್ಥವಾಗುವುದೂ ಇಲ್ಲ. ಆದರೆ ಅಸ್ತ್ರಪ್ರಹಾರದಿಂದ ಮೃತವಾದ ಆ ಗರ್ಭವು ಪುನಃ ಜೀವವನ್ನು ಪಡೆದುಕೊಂಡು ದೀರ್ಘಾಯುಷ್ಯವನ್ನೂ ಪಡೆದುಕೊಳ್ಳುತ್ತದೆ.

ತ್ವಾಂ ತು ಕಾಪುರುಷಂ ಪಾಪಂ ವಿದುಃ ಸರ್ವೇ ಮನೀಷಿಣಃ ।
ಅಸಕೃತ್ಪಾಪಕರ್ಮಾಣಂ ಬಾಲಜೀವಿತಘಾತಕಮ್ ॥೯॥

ತಸ್ಮಾತ್ತ್ವಮಸ್ಯ ಪಾಪಸ್ಯ ಕರ್ಮಣಃ ಫಲಮಾಪ್ನುಹಿ ।
ತ್ರೀಣಿ ವರ್ಷಸಹಸ್ರಾಣಿ ಚರಿಷ್ಯಸಿ ಮಹೀಮಿಮಾಮ್ ॥೧೦॥

ಅಪ್ರಾಪ್ನುವನ್ಕ್ವಚಿತ್ಕಾಂಶ್ಚಿತ್ಸಂವಿದಂ ಜಾತು ಕೇನಚಿತ್ ।
ನಿರ್ಜನಾಸಹಾಯಸ್ತ್ವಂ ದೇಶಾನ್ಪ್ರವಿಚರಿಷ್ಯಸಿ ॥೧೧॥

ಆದರೆ ಎಲ್ಲ ವಿದ್ವಾಂಸರೂ ನಿನ್ನನ್ನು ಹೇಡಿಯೆಂದೂ, ಮಹಾಪಾಪಿಷ್ಠನೆಂದೂ, ಪದೇ-ಪದೇ ಪಾಪಕರ್ಮಗಳನ್ನು ಮಾಡುವವನೆಂದೂ, ಬಾಲಹಂತಕನೆಂದೂ ಪರಿಗಣಿಸುತ್ತಾರೆ. ಆದುದರಿಂದ ನೀನು ಈ ಪಾಪಕರ್ಮದ ಫಲವನ್ನು ಹೊಂದು (ಅನುಭವಿಸು.) ಮೂರು ಸಾವಿರ ವರ್ಷಗಳ ಪರ್ಯಂತವಾಗಿ ನೀನು ಈ ಭೂಮಿಯಲ್ಲಿ ಅಲೆದಾಡುವೆ. ಹಾಗೆ ಅಲೆದಾಡುವಾಗ ನಿನ್ನೊಡನೆ ಎಲ್ಲಿಯೂ, ಯಾರೂ, ಯಾವಾಗಲೂ ಮಾತನಾಡುವುದಿಲ್ಲ. ಏಕಾಕಿಯಾಗಿಯೇ ನೀನು ನಿಃಸಹಾಯನಾಗಿ ನಿರ್ಜನವಾದ ಪ್ರದೇಶಗಳಲ್ಲಿ ಅಲೆದಾಡುವೆ.

ಭವಿತ್ರೀ ನ ಹಿ ತೇ ಕ್ಷುದ್ರ ಜನಮಧ್ಯೇಷು ಸಂಸ್ಥಿತಿಃ ।
ಪೂಯಶೋಣಿತಗನ್ಧೀ ಚ ದುರ್ಗಕಾನ್ತಾರಸಂಶ್ರಯಃ ।
ವಿಚರಿಷ್ಯಸಿ ಪಾಪಾತ್ಮನ್ಸರ್ವವ್ಯಾಧಿಸಮನ್ವಿತಃ ॥೧೨॥

ಕ್ಷುದ್ರನೇ! ನೀನು ಜನರ ಮಧ್ಯದಲ್ಲಿ ಇನ್ನು ಮುಂದೆ ವಾಸಮಾಡಲಾರೆ. ನಿನ್ನ ಶರೀರವು ಯಾವಾಗಲೂ ಕೀವು ಮತ್ತು ರಕ್ತಗಳ ದುರ್ಗಂಧದಿಂದ ಕೂಡಿರುತ್ತದೆ. ದುರ್ಗಮವಾದ ಅರಣ್ಯವೇ ನಿನಗೆ ಆಶ್ರಯಸ್ಥಾನವಾಗಿರುತ್ತದೆ. ಪಾಪಾತ್ಮನೇ! ನೀನು ನಾನಾವಿಧವಾದ ವ್ಯಾಧಿಗಳಿಂದಲೂ ಪೀಡಿಸಲ್ಪಟ್ಟವನಾಗಿ ಪ್ರಪಂಚದಲ್ಲಿ ಅಲೆದಾಡುವೆ.

ಪರಿಕ್ಷಿತನು ದೀರ್ಘಾಯುಷ್ಯವನ್ನು ಪಡೆದುಕೊಂಡು, ಬ್ರಹ್ಮಚರ್ಯ ವ್ರತವನ್ನು ಪರಿಪಾಲನೆಮಾಡುತ್ತಾ ವೇದವ್ರತಗಳನ್ನು ಮುಗಿಸುತ್ತಾನೆ. ಶೂರನಾದ ಆ ಬಾಲಕನು ಶರದ್ವಂತರ ಪುತ್ರರಾದ ಕೃಪರಿಂದಲೇ ಸಕಲವಿಧ ವಾದ ಶಸ್ತ್ರಾಸ್ತ್ರಗಳ ಜ್ಞಾನವನ್ನೂ ಪಡೆದುಕೊಳ್ಳುತ್ತಾನೆ. ಧರ್ಮಾತ್ಮನಾದ ಪರಿಕ್ಷಿತನು ಶ್ರೇಷ್ಠವಾದ ಅಸ್ತ್ರಗಳೆಲ್ಲವನ್ನೂ ಪಡೆದುಕೊಂಡು ಕ್ಷತ್ರಧರ್ಮವ್ರತನಿಷ್ಠನಾಗಿ ಅರುವತ್ತು ವರ್ಷಗಳ ಕಾಲ ಭೂಮಂಡಲವನ್ನು ಪಾಲನೆಮಾಡುತ್ತಾನೆ. ದುರ್ಮತಿಯೇ! ನೀನು ನೋಡುತ್ತಿರುವಂತೆಯೇ ಇನ್ನು ಮುಂದೆ ಮಹಾಬಾಹುವಾದ ಪರಿಕ್ಷಿತನೇ ಕುರುವಂಶಕ್ಕೆ ರಾಜನಾಗುತ್ತಾನೆ.

**ಅಹಂ ತಂ ಜೀವಯಿಷ್ಯಾಮಿ ದಗ್ಧಂ ಶಸ್ತ್ರಾಗ್ನಿತೇಜಸಾ ।**
**ಪಶ್ಯ ಮೇ ತಪಸೋ ವೀರ್ಯಂ ಸತ್ಯಸ್ಯ ಚ ನರಾಧಮ ॥೧೬॥**

ನಿನ್ನ ಶಸ್ತ್ರಾಗ್ನಿಯ ತೇಜಸ್ಸಿನಿಂದ ದಗ್ಧನಾಗುವ ಆ ಗರ್ಭಸ್ಥಬಾಲಕನನ್ನು ನಾನು ಬದುಕಿಸುತ್ತೇನೆ. ನರಾಧಮನೇ! ನನ್ನ ತಪಸ್ಸಿನ ಶಕ್ತಿ ಮತ್ತು ಸತ್ಯನಿಷ್ಠೆಯನ್ನಾದರೂ ನೋಡು."

ಜನಮೇಜಯ! ಶ್ರೀಕೃಷ್ಣನು ಅಶ್ವತ್ಥಾಮನೊಡನೆ ಹೀಗೆ ಹೇಳಿದ ನಂತರ ವ್ಯಾಸರು ದ್ರೌಣಿಯನ್ನು ಕುರಿತು ಹೇಳುತ್ತಾರೆ :

**ಯಸ್ಮಾದನಾದೃತ್ಯ ಕೃತಂ ತ್ವಯಾಸ್ಮಾನ್ಕರ್ಮ ದಾರುಣಮ್ ।**
**ಬ್ರಾಹ್ಮಣಸ್ಯ ಸತಶ್ಚೈವ ಯಸ್ಮಾತ್ತೇ ವೃತ್ತಮೀದೃಶಮ್ ॥೧೭॥**

**ತಸ್ಮಾದ್ಯದ್ದೇವಕೀಪುತ್ರ ಉಕ್ತವಾನುತ್ತಮಂ ವಚಃ ।**
**ಅಸಂಶಯಂ ತೇ ತದ್ಭಾವಿ ಕ್ಷತ್ರಧರ್ಮಸ್ತ್ವಯಾಽಶ್ರಿತಃ ॥೧೮॥**

"ಅಶ್ವತ್ಥಾಮ! ನೀನು ನಮ್ಮೆಲ್ಲರನ್ನೂ ಅನಾದರಣೆಮಾಡಿ ಇಂತಹ ಘೋರಕರ್ಮವನ್ನು ಮಾಡಿರುವೆ. ಸದ್ಬ್ರಾಹ್ಮಣನಾಗಿ ಹುಟ್ಟಿರುವ ನಿನ್ನ ವೃತ್ತಿಯು ಇಷ್ಟು ನಿಂದ್ಯವಾಗಿದೆ. ಬ್ರಾಹ್ಮಣನಾಗಿ ಹುಟ್ಟಿ ಕ್ಷತ್ರಿಯಧರ್ಮವನ್ನು ಆಶ್ರಯಿಸಿರುವೆ. ಈ ಕಾರಣಗಳಿಂದ ದೇವಕೀಪುತ್ರನಾದ ಶ್ರೀಕೃಷ್ಣನು ನಿನ್ನ ವಿಷಯದಲ್ಲಿ ಯಾವ ಉತ್ತಮವಾದ ಮಾತುಗಳನ್ನು ಹೇಳಿದನೋ ಅದು ಹಾಗೆಯೇ ನಡೆಯುತ್ತದೆ. ಇದರಲ್ಲಿ ಸಂಶಯವೇ ಇಲ್ಲ."

ಅಶ್ವತ್ಥಾಮನು ವ್ಯಾಸರಿಗೆ ಹೇಳುತ್ತಾನೆ :

**ಸಹೈವ ಭವತಾ ಬ್ರಹ್ಮನ್ಸ್ಥಾಸ್ಯಾಮಿ ಪುರುಷೇಷ್ವಿಹ ।**
**ಸತ್ಯವಾಗಸ್ತು ಭಗವಾನಯಂ ಚ ಪುರುಷೋತ್ತಮಃ ॥೧೯॥**

"ಬ್ರಾಹ್ಮಣೋತ್ತಮರೇ! ನಾನು ಇನ್ನು ಮುಂದೆ ಮನುಷ್ಯರಲ್ಲಿ ನಿಮ್ಮೊಡನೆ ಮಾತ್ರವೇ ಇದ್ದುಬಿಡುತ್ತೇನೆ. ಪುರುಷೋತ್ತಮನಾದ ಶ್ರೀಕೃಷ್ಣನು ಹೇಳಿದ ಮಾತು ಸತ್ಯವಾಗಿ ಪರಿಣಮಿಸಲಿ."

ಜನಮೇಜಯ! ಹೀಗೆ ಹೇಳಿದನಂತರ ದ್ರೌಣಿಯು ಮಹಾತ್ಮರಾದ ಪಾಂಡವರಿಗೆ ತನ್ನ ತಲೆಯಲ್ಲಿದ್ದ ಮಣಿಯನ್ನು ತೆಗೆದುಕೊಟ್ಟು, ಭಾರವಾದ ಮನಸ್ಸಿನಿಂದ ಎಲ್ಲರೂ ನೋಡುತ್ತಿದ್ದಂತೆಯೇ ಮಹಾರಣ್ಯವನ್ನು ಪ್ರವೇಶಿಸಿದನು. ಪಾಂಡವರೂ ಸಹ ಹತಶತ್ರುಗಳಾಗಿ ಶ್ರೀಕೃಷ್ಣನನ್ನೂ, ಮಹಾಮುನಿಗಳಾದ ವ್ಯಾಸ-ನಾರದರನ್ನೂ ಮುಂದೆಮಾಡಿಕೊಂಡು, ದ್ರೋಣಪುತ್ರನ ಜೊತೆಯಲ್ಲಿಯೇ ಉತ್ಪನ್ನವಾಗಿದ್ದ ಮಣಿಯನ್ನೂ ತೆಗೆದುಕೊಂಡು ಪ್ರಾಯೋಪವೇಶವ್ರತಸ್ಥಳಾಗಿದ್ದ ಮನಸ್ವಿನಿಯಾದ ದ್ರೌಪದಿಯ ಬಳಿಗೆ ಧಾವಿಸಿದರು. ಪುರುಷಸಿಂಹರಾದ ಆ ಎಲ್ಲ ಪಾಂಡವರೂ ವಾಯು ಸದೃಶವಾಗಿದ್ದ ಕುದುರೆಗಳ ಮೂಲಕವಾಗಿ ಶ್ರೀಕೃಷ್ಣಸಮೇತರಾಗಿ ಪುನಃ ಶಿಬಿರಕ್ಕೆ ಆಗಮಿಸಿದರು. ದ್ರೌಪದಿಯ ವಿಷಯದಲ್ಲಿ ಬಹಳವಾಗಿ ವ್ಯಾಕುಲರಾಗಿದ್ದ ಆ ಮಹಾರಥರು ತ್ವರೆಯಿಂದ ರಥಗಳಿಂದ ಕೆಳಗಿಳಿದು ಸಂಕಟಪಡುತ್ತಿದ್ದ ದ್ರೌಪದಿಯನ್ನು ನೋಡಿದರು. ಶ್ರೀಕೃಷ್ಣಸಹಿತರಾದ ಪಾಂಡವರು ಆನಂದರಹಿತಳಾಗಿದ್ದ, ದುಃಖ-ಶೋಕಸಮನ್ವಿತಳಾಗಿದ್ದ ದ್ರೌಪದಿಯನ್ನು ಸುತ್ತುವರಿದು ಕುಳಿತರು. ಬಳಿಕ ಯುಧಿಷ್ಠಿರರಾಜನ ಅನುಮತಿಯನ್ನು ಪಡೆದು ಮಹಾಬಲನಾದ ಭೀಮಸೇನನು ದ್ರೌಪದೀದೇವಿಗೆ ಆ ದಿವ್ಯಮಣಿಯನ್ನು ಕೊಡುತ್ತಾ ಹೇಳಿದನು :

"ಭದ್ರೇ! ನಿನ್ನ ಪುತ್ರರನ್ನು ಸಂಹರಿಸಿದ ಅಶ್ವತ್ಥಾಮನ ಶಿರೋಮಣಿಯಿದು. ನಿನ್ನ ಆ ಪರಮಶತ್ರುವನ್ನು ಜಯಿಸಿ ಈ ಮಣಿಯನ್ನು ನಿನಗಾಗಿ ತಂದಿರುತ್ತೇವೆ. ಈಗಲಾದರೂ ನೀನು ದುಃಖಿಸುವುದನ್ನು ನಿಲ್ಲಿಸು. ಅಸಿತೇಕ್ಷಣೇ! ಎದ್ದೇಳು. ಕ್ಷತ್ರಧರ್ಮವನ್ನು ಸ್ಮರಿಸು. ಭೀರುವೇ! ಕೌರವರೊಡನೆ ಸಂಧಿಯ ಪ್ರಸ್ತಾಪಕ್ಕಾಗಿ ಶ್ರೀಕೃಷ್ಣನು ಹಸ್ತಿನಾಪಟ್ಟಣಕ್ಕೆ

ಪ್ರಯಾಣಹೊರಟ ಸಮಯದಲ್ಲಿ ಮಧುಸೂದನನನ್ನು ಕುರಿತು ನೀನು ಯಾವ ಮಾತನ್ನು ಹೇಳಿದೆಯೆಂಬುದನ್ನು ನೆನಪುಮಾಡಿಕೊ.



ನೈವ ಮೇ ಪತಯಃ ಸನ್ತಿ ನ ಪುತ್ರಾ ಭ್ರಾತರೋ ನ ಚ ।
ನ ವೈ ತ್ವಮಿತಿ ಗೋವಿನ್ದ ಶಮಮಿಚ್ಛತಿ ರಾಜನಿ ॥೨೯॥

ಉಕ್ತವತ್ಯಸಿ ತೀವ್ರಾಣಿ ವಾಕ್ಯಾನಿ ಪುರುಷೋತ್ತಮಮ್ ।
ಕ್ಷತ್ರಧರ್ಮಾನುರೂಪಾಣಿ ತಾನಿ ಸಂಸ್ಮರ್ತುಮರ್ಹಸಿ ॥೩೦॥

ಯುಧಿಷ್ಠಿರನು ಕೌರವರೊಡನೆ ಸಂಧಿಮಾಡಿಕೊಳ್ಳಲು ನಿರ್ಧರಿಸಿ ಅದಕ್ಕಾಗಿಯೇ ಶ್ರೀಕೃಷ್ಣನನ್ನು ಹಸ್ತಿನಾಪಟ್ಟಣಕ್ಕೆ ಕಳುಹಿಸಲು ನಿಶ್ಚಯಿಸಿದನು. ಆ ಸಮಯದಲ್ಲಿ ನೀನು ಸಂಧಿಯಾಗಿಬಿಡುವುದೆಂಬ ಭಯದಿಂದ

ಶ್ರೀಕೃಷ್ಣನನ್ನು ಕುರಿತು ಕರ್ಣಕಠೋರವಾದ ಮಾತುಗಳನ್ನೇ ಆಡಿದೆ. 'ನನಗೆ ಗಂಡಂದಿರೂ ಇಲ್ಲ! ಮಕ್ಕಳೂ ಇಲ್ಲ! ಅಣ್ಣ-ತಮ್ಮಂದಿರೂ ಇಲ್ಲ. ಕಡೆಯದಾಗಿ, ಗೋವಿಂದ! ನೀನೂ ಸಹ ನನ್ನ ಭಾಗಕ್ಕೆ ಇಲ್ಲವೆಂದೇ ಭಾವಿಸುತ್ತೇನೆ.' ಇಷ್ಟು ಕಠೋರವಾದ ಮಾತುಗಳನ್ನು ನೀನು ಕ್ಷತ್ರಧರ್ಮಾನುಸಾರವಾಗಿಯೇ ಆಡಿದೆ. ಅದನ್ನೇ ಈಗ ನೀನು ಸ್ಮರಣೆಗೆ ತಂದುಕೊಳ್ಳುವುದು ಯೋಗ್ಯವಾಗಿದೆ.

**ಹತೋ ದುರ್ಯೋಧನಃ ಪಾಪೋ ರಾಜ್ಯಸ್ಯ ಪರಿಪನ್ಥಕಃ ।**
**ದುಃಶಾಸನಸ್ಯ ರುಧಿರಂ ಪೀತಂ ವಿಸ್ಫುರತೋ ಮಯಾ ॥೩೧॥**

**ವೈರಸ್ಯ ಗತಮಾನೃಣ್ಯಂ ನ ಸ್ಮ ವಾಚ್ಯಾ ವಿವಕ್ಷತಾಮ್ ।**
**ಜಿತ್ವಾ ಮುಕ್ತೋ ದ್ರೋಣಪುತ್ರೋ ಬ್ರಾಹ್ಮಣ್ಯಾದ್ಗೌರವೇಣ ಚ ॥೩೨॥**

ನಮ್ಮ ರಾಜ್ಯಾಪಹಾರಕನಾಗಿದ್ದ, ಪರಮಶತ್ರುವಾದ, ಪಾಪಿಷ್ಠನಾದ ದುರ್ಯೋಧನನು ಹತನಾದನು. ಚಡಪಡಿಸುತ್ತಿದ್ದ ದುಃಶಾಸನನ ರಕ್ತವನ್ನು ನಾನು ಪಾನಮಾಡಿದೆನು. ವೈರದ ಋಣವನ್ನು ಸಂಪೂರ್ಣವಾಗಿ ತೀರಿಸಿಯಾಯಿತು. ವಿಷಯಗಳನ್ನು ವಿಮರ್ಶಿಸಿ ಮಾತನಾಡುವವರು ನಮ್ಮನ್ನೀಗ ಖಂಡಿತವಾಗಿಯೂ ನಿಂದಿಸುವಂತಿಲ್ಲ. ದ್ರೋಣಪುತ್ರನನ್ನು ಜಯಿಸಿ ಅವನು ಬ್ರಾಹ್ಮಣನೆಂಬ ಕಾರಣದಿಂದಲೂ, ಗುರುಪುತ್ರನೆಂಬ ಗೌರವದಿಂದಲೂ ಜೀವಸಹಿತವಾಗಿ ಬಿಟ್ಟುಬಿಟ್ಟೆವು.

**ಯಶೋಽಸ್ಯ ಪತಿತಂ ದೇವಿ ಶರೀರಂ ತ್ವವಶೇಷಿತಮ್ ।**
**ವಿಯೋಜಿತಶ್ಚ ಮಣಿನಾ ಭ್ರಂಶಿತಶ್ಚಾಯುಧಂ ಭುವಿ ॥೩೩॥**

ದೇವಿ! ಅಶ್ವತ್ಥಾಮನ ಯಶಸ್ಸು ಬಿದ್ದುಹೋಯಿತು! ಶರೀರವು ಮಾತ್ರವೇ ಉಳಿದುಕೊಂಡಿದೆ. ನಾವು ಅಶ್ವತ್ಥಾಮನು ಮಣಿಯನ್ನು ತ್ಯಜಿಸುವಂತೆ ಮಾಡಿದೆವು. ಆಯುಧವನ್ನೂ ಕೆಳಗಿಡುವಂತೆ ಮಾಡಿದೆವು."

ಭೀಮಸೇನನ ಮಾತುಗಳಿಗೆ ಉತ್ತರವಾಗಿ ದ್ರೌಪದಿಯು ಹೇಳುತ್ತಾಳೆ :

**ಕೇವಲಾನೃಣ್ಯಮಾಪ್ತಾಸ್ಮಿ ಗುರುಪುತ್ರೋ ಗುರುರ್ಮಮ ।**
**ಶಿರಸ್ಯೇತಂ ಮಣಿಂ ರಾಜಾ ಪ್ರತಿಬಧ್ನಾತು ಭಾರತ ॥೩೪॥**

“ಭಾರತ! ನನ್ನ ಪುತ್ರರನ್ನು ವಧಿಸಿದುದಕ್ಕೆ ತಕ್ಕ ಪ್ರತೀಕಾರವನ್ನೇ ಮಾಡಿಸಿ ಪುತ್ರಋಣದಿಂದ ವಿಮುಕ್ತಳಾಗಿದ್ದೇನೆ. (ಇಷ್ಟು ಮಾತ್ರವೇ ನನ್ನ ಉದ್ದೇಶವೂ ಆಗಿದ್ದಿತು.) ಗುರುಪುತ್ರನು ನನಗೂ ಗುರುಸಮಾನನೇ ಆಗಿರುತ್ತಾನೆ. (ಆದುದರಿಂದ ಅವನನ್ನು ಜೀವಸಹಿತವಾಗಿ ಬಿಟ್ಟುದಕ್ಕೆ ನನಗೆ ಅಸಮಾಧಾನವಿಲ್ಲ.) ಈ ದಿವ್ಯಮಣಿಯನ್ನು ನಮ್ಮ ಯುಧಿಷ್ಠಿರರಾಜನು ಶಿರಸ್ಸಿನಲ್ಲಿ ಧರಿಸಲಿ.”

ಜನಮೇಜಯಮಹಾರಾಜ! ಬಳಿಕ ಯುಧಿಷ್ಠಿರನು ಆ ದಿವ್ಯ ಮಣಿಯನ್ನು ಸ್ವೀಕರಿಸಿ ಆ ಮಣಿಯು ಗುರುವಿನ ಪ್ರಸಾದವೆಂಬ ಭಾವನೆ ಯಿಂದಲೂ, ದ್ರೌಪದಿಯ ಮಾತನ್ನು ನಡೆಸಿಕೊಡಬೇಕೆಂಬ ಕಾರಣ ದಿಂದಲೂ ಅದನ್ನು ತನ್ನ ಶಿರಸ್ಸಿನಲ್ಲಿ ಧರಿಸಿಕೊಂಡನು. ಪ್ರಭುವಾದ ಯುಧಿಷ್ಠಿರನು ದಿವ್ಯವಾದ ಮತ್ತು ಶ್ರೇಷ್ಠವಾದ ಆ ಮಣಿಯನ್ನು ಶಿರಸ್ಸಿನಲ್ಲಿ ಧರಿಸಿಕೊಂಡು–ಚಂದ್ರನಿಂದ ಯುಕ್ತವಾದ ಉದಯಾಚಲದಂತೆ–ಪ್ರಕಾಶಿಸಿ ದನು. ಬಳಿಕ ಪುತ್ರಶೋಕದಿಂದ ಪೀಡಿತಳಾಗಿದ್ದ ಮನಸ್ವಿನಿಯಾದ ಕೃಷ್ಣೆಯು ಮೇಲೆದ್ದಳು. ಮಹಾಬಾಹುವಾದ ಧರ್ಮರಾಜನು ಶ್ರೀಕೃಷ್ಣನನ್ನು ಪ್ರಶ್ನಿಸಿದನು.”

೧೬ನೆಯ ಅಧ್ಯಾಯವು ಮುಗಿಯಿತು.

೧೭ನೆಯ ಅಧ್ಯಾಯ ಐಷೀಕಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಎಲ್ಲ ಮಕ್ಕಳೂ ಮತ್ತು ಸೈನಿಕರೂ ಒಂದೇ ರಾತ್ರಿಯಲ್ಲಿ ಮರಣಹೊಂದಿದುದಕ್ಕೆ ಕಾರಣವನ್ನು ಪ್ರಶ್ನಿಸಿದುದು: ಶ್ರೀಕೃಷ್ಣನು ಮಹಾದೇವನ ಮಹಿಮೆಯನ್ನು ಪ್ರತಿಪಾದಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

“ಜನಮೇಜಯ! ಮಲಗಿರುವ ಸಮಯದಲ್ಲಿ ಮೂವರು ಮಹಾರಥರಿಂದ ತನ್ನ ಎಲ್ಲ ಸೈನಿಕರೂ ಹತರಾಗಲಾಗಿ ಯುಧಿಷ್ಠಿರನು ಬಹಳವಾಗಿ ಶೋಕಪಡುತ್ತಾ ಶ್ರೀಕೃಷ್ಣನೊಡನೆ ಹೇಳಿದನು :

“ಕೃಷ್ಣ! ಪಾಪಿಷ್ಠನಾದ, ಕ್ಷುದ್ರಕರ್ಮನಾದ, ತಪಸ್ಸನ್ನಾಗಲೀ–ಪುಣ್ಯಕಾರ್ಯಗಳನ್ನಾಗಲೀ ಮಾಡದಿದ್ದ ಅಶ್ವತ್ಥಾಮನು ಮಹಾರಥರಾದ

ನನ್ನ ಎಲ್ಲ ಮಕ್ಕಳನ್ನೂ ಹೇಗೆ ಸಂಹರಿಸಿದನು? (ಅವನಿಗೆ ಅಂತಹ ಪರಮಾದ್ಭುತವಾದ ಶಕ್ತಿಯು ಹೇಗೆ ಲಭಿಸಿತು?) ದ್ರುಪದನ ಮಕ್ಕಳು ಅಸ್ತ್ರವಿದ್ಯಾವಿಶಾರದರಾಗಿದ್ದರು. ಎಲ್ಲರೂ ಮಹಾಪರಾಕ್ರಮಿಗಳಾಗಿದ್ದರು. ಲಕ್ಷೋಪಲಕ್ಷ ಯೋಧರೊಡನೆ ಯುದ್ಧಮಾಡಲು ಸಮರ್ಥರಾಗಿದ್ದರು. ಅವರೆಲ್ಲರನ್ನೂ ಅಶ್ವತ್ಥಾಮನು ಸಂಹರಿಸಿದನು. (ನಿಶ್ಚಯವಾಗಿಯೂ ಇದು ಆಶ್ಚರ್ಯದ ವಿಷಯವೇ ಆಗಿದೆ.) ಮಹಾಧನುಷ್ಮಂತರಾದ ದ್ರೋಣರು ಯುದ್ಧದಲ್ಲಿ ಯಾವನ ಕಡೆಗೆ ಮುಖವನ್ನು ಕೂಡ ತಿರುಗಿಸಿಕೊಂಡು ನಿಲ್ಲುತ್ತಿರಲಿಲ್ಲವೋ ಅಂತಹ ರಥಿಗಳಲ್ಲಿ ಶ್ರೇಷ್ಠನಾದ ಪಾಂಚಾಲ ರಾಜಪುತ್ರನಾದ ಆ ಧೃಷ್ಟದ್ಯುಮ್ನನನ್ನು ಅಶ್ವತ್ಥಾಮನು ಹೇಗೆ ಸಂಹರಿಸಿದನು? ಗುರುಪುತ್ರನು ಏಕಾಕಿಯಾಗಿ ಸಮರಾಂಗಣದಲ್ಲಿ ನಮ್ಮ ಕಡೆಯ ಎಲ್ಲ ಸೈನಿಕರನ್ನೂ ಸಂಹರಿಸಿದನು. ಅಂತಹ ಅತುಲಪ್ರಭಾವವನ್ನು ಸಂಪಾದಿಸಲು ಅವನು ಯಾವ ಪುಣ್ಯಕರ್ಮವನ್ನು ಮಾಡಿದ್ದನು?"

ಯುಧಿಷ್ಠಿರನ ಪ್ರಶ್ನೆಗೆ ಉತ್ತರವಾಗಿ ಶ್ರೀಕೃಷ್ಣನು ಹೇಳುತ್ತಾನೆ :

"ಯುಧಿಷ್ಠಿರ! ಅಶ್ವತ್ಥಾಮನು-ದೇವಾಧಿದೇವತೆಗಳ ಈಶ್ವರರಿಗೂ ಈಶ್ವರನಾದ, ಅವ್ಯಯನಾದ ಶಿವನನ್ನು ಶರಣುಹೊಂದಿದನು. ಆದುದ ರಿಂದಲೇ ಅವನು ಏಕಾಕಿಯಾಗಿ ಅಪಾರಸಂಖ್ಯಾತರಾದ ಯೋಧರನ್ನು ಸಂಹರಿಸಿದನು. (ಶಿವನ ಅನುಗ್ರಹದಿಂದಾಗಿ ಅಪಾರಸಂಖ್ಯಾತರಾದ ಯೋಧರನ್ನು ಸಂಹರಿಸಲು ಅಶ್ವತ್ಥಾಮನಿಗೆ ಸಾಧ್ಯವಾಯಿತು.) ಮಹಾ ದೇವನು ಪ್ರಸನ್ನನಾದನೆಂದರೆ ಅಮರತ್ವವನ್ನಾದರೂ ದಯಪಾಲಿಸಬಲ್ಲನು. ಇಂದ್ರನನ್ನೇ ಪರಾಭವಗೊಳಿಸುವಂತಹ ಪರಾಕ್ರಮವನ್ನೂ ಅನುಗ್ರಹಿಸ ಬಲ್ಲನು. ನಾನು ಮಹಾದೇವನನ್ನು ಯಥಾರ್ಥವಾದ ರೂಪದಲ್ಲಿ ತಿಳಿದುಕೊಂಡಿರುತ್ತೇನೆ. ಅವನು ಹಿಂದೆ ಮಾಡಿದ ಅನೇಕವಿಧವಾದ ಕರ್ಮಗಳನ್ನೂ ತಿಳಿದುಕೊಂಡಿರುತ್ತೇನೆ.

**ಆದಿರೇಷ ಹಿ ಭೂತಾನಾಂ ಮಧ್ಯಮನ್ತಶ್ಚ ಭಾರತ ।**
**ವಿಚೇಷ್ಟತೇ ಜಗಚ್ಚೇದಂ ಸರ್ವಮಸ್ಯೈವ ಕರ್ಮಣಾ ॥೯॥**

ಆ ಮಹಾದೇವನೇ ಎಲ್ಲ ಪ್ರಾಣಿಗಳಿಗೂ ಆದಿಯೂ, ಮಧ್ಯನೂ

ಮತ್ತು ಅಂತನೂ ಆಗಿರುತ್ತಾನೆ. ಅವನ ಪ್ರಭಾವದಿಂದಲೇ ಈ ಜಗತ್ತು ನಾನಾವಿಧವಾದ ಕರ್ಮಗಳಲ್ಲಿ ತೊಡಗಿದೆ.

ಪ್ರಭುವಾದ ಪಿತಾಮಹನು ಪ್ರಾಣಿಗಳನ್ನು ಸೃಷ್ಟಿಸಲು ಇಚ್ಛಿಸಿದಾಗ ಮೊದಲು ಮಹಾದೇವನನ್ನು ನೋಡಿದನು. ಒಡನೆಯೇ ಬ್ರಹ್ಮನು ಮಹಾದೇವನನ್ನು ಕುರಿತು 'ಸಾವಕಾಶಮಾಡದೇ ಪ್ರಾಣಿಗಳನ್ನು ಸೃಷ್ಟಿಸು'– ಎಂದು ಹೇಳಿದನು. ಹರಿಕೇಶನು (ಶಿವನು) ಹಾಗೆಯೇ ಆಗಲೆಂದು ಹೇಳಿ ಪ್ರಾಣಿಗಳನ್ನು ಸೃಷ್ಟಿಸಿದನು. ಆದರೆ ತಾನು ಸೃಷ್ಟಿಸಿದ ಪ್ರಾಣಿಗಳಲ್ಲಿ ಅನೇಕ ನ್ಯೂನತೆಗಳಿದ್ದುದನ್ನು ಕಂಡನು. ಬಳಿಕ ಮಹಾತಪಸ್ವಿಯಾದ ಶಿವನು ನೀರಿನಲ್ಲಿಯೇ ಮುಳುಗಿಕೊಂಡು ಬಹಳ ಕಾಲದವರೆಗೆ ತಪಸ್ಸುಮಾಡುತ್ತಿದ್ದನು. ಪಿತಾಮಹನು ಮಹಾದೇವನನ್ನು ಬಹಳ ಕಾಲದವರೆಗೆ ನಿರೀಕ್ಷಿಸುತ್ತಿದ್ದು ಶಿವನು ಬರಲಿಲ್ಲವಾದ ಕಾರಣ ತನ್ನ ಮನಃಸಂಕಲ್ಪದಿಂದಲೇ ಮತ್ತೊಬ್ಬ ಸರ್ವಪ್ರಾಣಿಗಳ ಸೃಷ್ಟಿಕರ್ತನನ್ನು ಸೃಷ್ಟಿಸಿದನು. ಶಿವನು ನೀರಿನಲ್ಲಿ ಮುಳುಗಿಕೊಂಡು ತಪಸ್ಸುಮಾಡುತ್ತಿದ್ದುದನ್ನು ಕಂಡು ವಿರಾಟ್ಪುರುಷನು ತನ್ನನ್ನು ಸೃಷ್ಟಿಸಿದ ತಂದೆಯಾದ ಬ್ರಹ್ಮನನ್ನು ಕುರಿತು ಹೇಳಿದನು :

**ಯದಿ ಮೇ ನಾಗ್ರಜೋಽಸ್ತ್ಯನ್ಯಸ್ತತಃ ಸ್ರಕ್ಷ್ಯಾಮ್ಯಹಂ ಪ್ರಜಾಃ ॥**

"ತಂದೆಯೇ! ನನಗಿಂತಲೂ ಮೊದಲು ಹುಟ್ಟಿದವನು ಮತ್ತಾರೂ ಇಲ್ಲದಿದ್ದರೆ ನಾನು ಪ್ರಜೆಗಳನ್ನು ಸೃಷ್ಟಿಸುತ್ತೇನೆ."

ಹೀಗೆ ಹೇಳಿದ ಆ ವಿರಾಟ್ಪುರುಷನನ್ನು ಕುರಿತು ಬ್ರಹ್ಮನು ಹೇಳಿದನು :

"ನಿನಗಿಂತಲೂ ಮೊದಲು ಹುಟ್ಟಿರುವ ಪುರುಷನಿರುವುದಿಲ್ಲ. ಸ್ಥಾಣುವು (ಶಿವನು) ನಿನಗಿಂತಲೂ ಮೊದಲಿಗನಾಗಿದ್ದರೂ ಅವನೀಗ ನೀರಿನಲ್ಲಿ ಮುಳುಗಿಬಿಟ್ಟಿದ್ದಾನೆ. ಆದುದರಿಂದ ನೀನು ನಿಶ್ಚಿಂತನಾಗಿ ಸೃಷ್ಟಿಯ ಕಾರ್ಯವನ್ನು ಮಾಡು."

ತಂದೆಯು ಹೀಗೆ ಹೇಳಿದನಂತರ ವಿರಾಟ್ಪುರುಷನು ಏಳು ವಿಧವಾದ ಪ್ರಾಣಿಗಳನ್ನೂ – ದಕ್ಷನೇ ಮೊದಲಾದ ಪ್ರಜಾಪತಿಗಳನ್ನೂ ಸೃಷ್ಟಿಸಿದನು.

ಮುಂದೆ ಪ್ರಜಾಪತಿಗಳ ಮೂಲಕವಾಗಿ ಪ್ರಾಣಿಗಳ ಸಮುದಾಯವನ್ನು ನಾಲ್ಕು ಪ್ರಕಾರವಾಗಿ ವಿಂಗಡಿಸಿದನು. ಸೃಷ್ಟಿಯಾದೊಡನೆಯೇ ಹಸಿವಿನಿಂದ ಕೂಡಿದ್ದ ಪ್ರಜೆಗಳು ಪ್ರಜಾಪತಿಯನ್ನೇ ತಿನ್ನುವ ಇಚ್ಛೆಯಿಂದ ಅವನ ಬಳಿಗೆ ಧಾವಿಸಿದರು. ತಾನು ಸೃಷ್ಟಿಸಿದ ಪ್ರಜೆಗಳೇ ತನ್ನನ್ನು ಭಕ್ಷಿಸಲು ಬರಲಾಗಿ ಭಯಗೊಂಡ ಪ್ರಜಾಪತಿಯು ಆತ್ಮರಕ್ಷಣಾರ್ಥವಾಗಿ ಪಿತಾಮಹನ ಬಳಿಗೆ ಓಡಿಹೋಗಿ ಅವನೊಡನೆ ಹೇಳಿದನು :

**ಆಭ್ಯೋ ಮಾಂ ಭಗವಾಂಸ್ತ್ರಾತು ವೃತ್ತಿರಾಸಾಂ ವಿಧೀಯತಾಮ್ ॥**

"ಭಗವನ್! ಇವರಿಂದ ನನ್ನನ್ನು ರಕ್ಷಿಸು ಮತ್ತು ಇವರಿಗೆ ಯಥೋಚಿತವಾದ ವೃತ್ತಿಗಳನ್ನು (ಆಹಾರವನ್ನು ) ವಿಧಾಯಕಮಾಡು."

ಆಗ ಬ್ರಹ್ಮನು ಪ್ರಜೆಗಳಿಗೆ ಆಹಾರಾರ್ಥವಾಗಿ ಅನ್ನ, ಓಷಧಿ–ಇವೇ ಮೊದಲಾದ ಸ್ಥಾವರಪದಾರ್ಥಗಳನ್ನು ಜೀವನನಿರ್ವಹಣೆಗಾಗಿ ದಯ ಪಾಲಿಸಿದನು. ಬಲಿಷ್ಠವಾದ ಪ್ರಾಣಿಗಳಿಗೆ ದುರ್ಬಲವಾದ ಜಂಗಮ ಪ್ರಾಣಿ ಗಳನ್ನು ಆಹಾರವನ್ನಾಗಿ ಕೊಟ್ಟನು. ಪ್ರಜಾಪತಿಯಿಂದ ಸೃಷ್ಟರಾದ ಪ್ರಜೆಗಳು, ಅನ್ನವು ವಿಹಿತವಾದನಂತರ ತಮ್ಮ-ತಮ್ಮ ಸ್ಥಳಗಳಿಗೆ ಹೊರಟುಹೋದರು. ಅನಂತರ ಎಲ್ಲ ಪ್ರಜೆಗಳೂ ಮತ್ತು ಪ್ರಾಣಿಗಳೂ ಪ್ರಸನ್ನತೆಯಿಂದಿರುತ್ತಾ ತಮ್ಮ-ತಮ್ಮ ಯೋನಿಗಳಲ್ಲಿ ಪ್ರಜೆಗಳನ್ನು ವೃದ್ಧಿಗೊಳಿಸತೊಡಗಿದರು.

ಪ್ರಜಾಸಮುದಾಯವು ವರ್ಧಿಸುತ್ತಿರಲಾಗಿ, ಲೋಕಗುರುವಾದ ಬ್ರಹ್ಮನು ತನ್ನ ಪ್ರಜಾಕೋಟಿಯನ್ನು ನೋಡಿ ತುಷ್ಟನಾಗಿರಲಾಗಿ, ಜ್ಯೇಷ್ಠನಾದ ಮಹಾದೇವನು ನೀರಿನಿಂದ ಮೇಲೆದ್ದು ಸಮಸ್ತಪ್ರಜೆಗಳನ್ನೂ ವೀಕ್ಷಿಸಿದನು. ನಾನಾವಿಧವಾದ ಪ್ರಜೆಗಳ ಸೃಷ್ಟಿಯಾಗಿದ್ದಿತು ಮತ್ತು ಆ ಪ್ರಜೆಗಳು ತಮ್ಮ ತೇಜಸ್ಸಿನಿಂದಲೇ ವೃದ್ಧಿಯನ್ನು ಹೊಂದುತ್ತಿದ್ದರು. ಅದನ್ನು ನೋಡಿ ಕುಪಿತನಾದ ರುದ್ರನು ತನ್ನ ಲಿಂಗವನ್ನು ಭೂಮಿಯ ಮೇಲೆ ಹಾಕಿದನು. ಹಾಗೆ ಭೂಮಿಯ ಮೇಲೆ ಬಿದ್ದ ಶಿವನ ಲಿಂಗವು ಹಾಗೆಯೇ ಪ್ರತಿಷ್ಠಿತವಾಯಿತು. ಕುಪಿತನಾಗಿದ್ದ ರುದ್ರನ ಕೋಪವನ್ನು ಸಾಂತ್ವನದ ಮಾತುಗಳಿಂದ ಉಪಶಮನಗೊಳಿಸುವ ಇಚ್ಛೆಯಿಂದ ಬ್ರಹ್ಮನು ಅವನೊಡನೆ ಈ ಮಾತುಗಳನ್ನು ಹೇಳಿದನು :

**ಕಿಂ ಕೃತಂ ಸಲಿಲೇ ಶರ್ವ ಚಿರಕಾಲಸ್ಥಿತೇನ ತೇ ।**
**ಕಿಮರ್ಥಂ ಚೇದಮುತ್ಪಾದ್ಯ ಲಿಙ್ಗಂ ಭೂಮೌ ಪ್ರವೇಶಿತಮ್ ॥**

"ಶರ್ವನೇ! ಬಹಳ ಕಾಲದವರೆಗೆ ನೀನು ನೀರಿನಲ್ಲಿದ್ದುಕೊಂಡು ಏನು ಮಾಡಿದೆ? ಈ ಲಿಂಗವನ್ನು ಉತ್ಪಾದಿಸಿ ಈಗ ಇದನ್ನು ಭೂಮಿಯಲ್ಲೇಕೆ ಪ್ರತಿಷ್ಠಿಸಿದೆ."

ಯುಧಿಷ್ಠಿರ! ಲೋಕಗುರುವಾದ ಮಹಾದೇವನು ಗುರುವಾದ ಬ್ರಹ್ಮನೊಡನೆ ಹೇಳಿದನು :

**ಪ್ರಜಾಃ ಸೃಷ್ಟಾಃ ಪರೇಣೇಮಾಃ ಕಿಂ ಕರಿಷ್ಯಾಮ್ಯನೇನ ವೈ ॥೨೪॥**

"ಬೇರೊಬ್ಬನು ಈ ಪ್ರಜೆಗಳೆಲ್ಲರನ್ನೂ ಈಗಾಗಲೇ ಸೃಷ್ಟಿಸಿಬಿಟ್ಟಿದ್ದಾನೆ. ಈ ಲಿಂಗವನ್ನಿಟ್ಟುಕೊಂಡು ಈಗ ನಾನೇನು ಮಾಡಲಿ?

ಪಿತಾಮಹನೇ! ನಾನು ತಪಸ್ಸನ್ನು ಮಾಡಿ ಪ್ರಜೆಗಳ ಸಲುವಾಗಿ ಅನ್ನವನ್ನು ಪಡೆದುಕೊಂಡೆನು. ಪ್ರಜೆಗಳು ಸತತವಾಗಿ ಪರಿವರ್ತನ ಹೊಂದುವಂತೆ ಆ ಪ್ರಜೆಗಳ ಅನುಕೂಲಕ್ಕಾಗಿ ಈ ಓಷಧೀರೂಪವಾದ ಅನ್ನಗಳೂ ಸಹ ಪರಿವರ್ತನಹೊಂದುತ್ತಲೇ ಇರುತ್ತವೆ. ಅಂತಹ ಅನ್ನವು ನನಗೆ ತಪಸ್ಸಿನ ಮೂಲಕವಾಗಿ ಲಭಿಸಿದೆ."

ಧರ್ಮರಾಜ! ಮಹಾತಪಸ್ವಿಯಾದ ಭವನು ಹೀಗೆ ಹೇಳಿ ಕ್ರೋಧಯುಕ್ತನಾಗಿ ಉದಾಸೀನಮನಸ್ಕನಾಗಿ ಪುನಃ ತಪಸ್ಸನ್ನು ಮಾಡುವ ಸಲುವಾಗಿ ಮುಂಜವಂತಪರ್ವತದ ತಪ್ಪಲಿಗೆ ಹೊರಟುಹೋದನು."

೧೭ನೆಯ ಅಧ್ಯಾಯವು ಮುಗಿಯಿತು.

೧೮ನೆಯ ಅಧ್ಯಾಯ ಐಷೀಕಪರ್ವ (ಮುಂದುವರಿದಿದೆ.)

## ಮಹಾದೇವನ ರೋಷದಿಂದ ದೇವತೆಗಳು, ಯಜ್ಞ ಮತ್ತು ಜಗತ್ತುಗಳು ಅಸ್ತವ್ಯಸ್ತಗೊಂಡುದು : ಅವನ ಪ್ರಸಾದದಿಂದಾಗಿ ಎಲ್ಲವೂ ಸುವ್ಯವಸ್ಥಿತವಾದುದು

ಶ್ರೀಕೃಷ್ಣನು ಯುಧಿಷ್ಠಿರನಿಗೆ ಹೇಳುತ್ತಾನೆ :

"ಯುಧಿಷ್ಠಿರ! ಸತ್ಯಯುಗವು ಕಳೆದುಹೋಗಲಾಗಿ, ದೇವತೆಗಳು

ವಿಧಿಪೂರ್ವಕವಾಗಿ ಯಜ್ಞವನ್ನು ಮಾಡಬೇಕೆಂಬ ಇಚ್ಛೆಯಿಂದ ಕೂಡಿದವರಾಗಿ ವೇದಪ್ರಮಾಣಾನುಸಾರವಾಗಿ ಯಜ್ಞವನ್ನು ಮಾಡಲು ಸಂಕಲ್ಪಿಸಿದರು. ಅನಂತರ ಅವರು ಯಜ್ಞದ ಸಾಧನಗಳನ್ನೂ, ಹವಿಸ್ಸುಗಳನ್ನೂ, ಯಜ್ಞಭಾಗಕ್ಕೆ ಅರ್ಹರಾದ ದೇವತೆಗಳನ್ನೂ, ಯಜ್ಞಕ್ಕೆ ಬೇಕಾದ ಇತರ ಸಂಭಾರಗಳನ್ನೂ ಕಲ್ಪಿಸಿಕೊಂಡರು. ಆದರೆ ದೇವತೆಗಳಿಗೆ ರುದ್ರನಿರುವ ಸ್ಥಳವು ಯಥಾವತ್ತಾಗಿ ತಿಳಿಯದೇ ಇದ್ದುದರಿಂದ ದೇವದೇವನಾದ ಸ್ಥಾಣುವಿಗೆ ಯಜ್ಞದ ಹವಿರ್ಭಾಗವನ್ನು ಕಲ್ಪಿಸಲಾಗಲಿಲ್ಲ. ದೇವತೆಗಳು ಯಜ್ಞದಲ್ಲಿ ತನಗೆ ಹವಿರ್ಭಾಗವನ್ನು ಕಲ್ಪಿಸದಿದ್ದುದಕ್ಕೆ ಕೃತ್ತಿವಾಸನು (ಶಿವನು) ದೇವತೆಗಳನ್ನು ದಂಡಿಸಲು ಸಾಧನವೊಂದನ್ನು ಇಚ್ಛಿಸಿದವನಾಗಿ ಎಲ್ಲಕ್ಕಿಂತಲೂ ಮೊದಲು ಧನುಸ್ಸನ್ನು ಸೃಷ್ಟಿಸಿದನು.

***ಲೋಕಯಜ್ಞಃ ಕ್ರಿಯಾಯಜ್ಞೋ ಗೃಹಯಜ್ಞಃ ಸನಾತನಃ ।**
**ಪಞ್ಚಭೂತನೃಯಜ್ಞಶ್ಚ ಜಜ್ಞೇ ಸರ್ವಮಿದಂ ಜಗತ್ ॥೫॥**

ಧರ್ಮಜ! ಲೋಕಯಜ್ಞ, ಕ್ರಿಯಾಯಜ್ಞ, ಸನಾತನವಾದ ಗೃಹಯಜ್ಞ, ಪಂಚಭೂತಮನುಷ್ಯಯಜ್ಞ–ಹೀಗೆ ನಾಲ್ಕು ಪ್ರಕಾರವಾದ ಯಜ್ಞಗಳಿವೆ. ಆ ನಾಲ್ಕು ಯಜ್ಞಗಳಿಂದಲೇ ಈ ಜಗತ್ತು ಉತ್ಪನ್ನವಾಗಿದೆ.

---

*ಲೋಕಯಜ್ಞವೇ ಮೊದಲಾದ ನಾಲ್ಕು ಮಹಾಯಜ್ಞಗಳಿಗೆ ವ್ಯಾಖ್ಯಾನಕಾರರು ಹೀಗೆ ವಿವರಣೆ ಕೊಟ್ಟಿರುತ್ತಾರೆ :

ಲೋಕಯಜ್ಞಃ = ಲೋಕೇಷಣಾ, ಸರ್ವೋ ಮಾಂ ಸಾಧುಮೇವ ಜಾನಾತು ಇತಿ ವಾಸನಾರೂಪಃ =ಲೋಕದಲ್ಲಿ ಉಂಟಾಗುವ ಆಸೆ ; ಲೋಕದಲ್ಲಿ ನನ್ನನ್ನು ಎಲ್ಲರೂ ಸಾಧು ಎಂದು ತಿಳಿದುಕೊಳ್ಳಲಿ–ಎಂಬ ವಾಸನಾರೂಪವಾದ ಆಸೆ. ಕ್ರಿಯಾಯಜ್ಞಃ = ಗರ್ಭಾಧಾನಾದಿ ಸಂಸ್ಕಾರರೂಪಃ = ಗರ್ಭಾಧಾನಾದಿ ಸಂಸ್ಕಾರರೂಪವಾದುದು. ಗೃಹಯಜ್ಞಃ = ಪತ್ನೀಸಾಧ್ಯಾಗ್ನಿಹೋತ್ರಾದಿಃ = ಪತ್ನಿಯಿದ್ದೇ ಮಾಡಬೇಕಾದ ಅಗ್ನಿಹೋತ್ರಾದಿಗಳು. ಪಞ್ಚಭೂತನೃಯಜ್ಞಃ = ಪಞ್ಚಭೂತಾನಾಂ ಗುಣೈಃ ಶಬ್ದಾದಿಭಿರ್ಯಾ ನೃಣಾಂ ಪ್ರೀತಿಃ ತದ್ರೂಪಃ ವಿಷಯಜಂ ಸುಖಮಿತ್ಯರ್ಥಃ = ಪಂಚಭೂತಗಳ ಗುಣಗಳಿಂದ (ಶಬ್ದ-ಸ್ಪರ್ಶಾದಿಗಳಿಂದ) ಮನುಷ್ಯರಿಗೆ ಯಾವ ಪ್ರೀತಿಯುಂಟಾಗುತ್ತದೆಯೋ ಅದು. ಅರ್ಥಾತ್ ವಿಷಯಸುಖಗಳು. ಈ ನಾಲ್ಕು ಯಜ್ಞಗಳಿಂದಲೇ ಜಗತ್ತಿನ ಉತ್ಪತ್ತಿಯಾಯಿತು.

ಜಟಾಜೂಟಧಾರಿಯಾದ ಈಶ್ವರನು ಲೋಕಯಜ್ಞ ಮತ್ತು ಮನುಷ್ಯಯಜ್ಞಗಳಿಂದ ಧನುಸ್ಸನ್ನು ನಿರ್ಮಿಸಿದನು. ಹಾಗೆ ನಿರ್ಮಿಸಿದ ಆ ಶಿವಧನುಸ್ಸು ಐದು ಮಾರುಗಳಷ್ಟು ಉದ್ದವಾಗಿದ್ದಿತು. ವಷಟ್ಕಾರವೇ ಆ ಮಹಾಧನುಸ್ಸಿಗೆ ಮೌರ್ವಿಯಾಯಿತು. ಯಜ್ಞಾಂಗಗಳಾದ ಸ್ನಾನ, ದಾನ, ಹೋಮ ಮತ್ತು ಜಪಗಳು ಪರಶಿವನ ಕವಚದಲ್ಲಿ ಸೇರಿದ್ದುವು. ಅನಂತರ ಕ್ರುದ್ಧನಾದ ಮಹಾದೇವನು ಆ ಮಹಾಧನುಸ್ಸನ್ನು ಹಿಡಿದುಕೊಂಡು ದೇವತೆಗಳು ಯಜ್ಞಮಾಡುತ್ತಿದ್ದ ಸ್ಥಳಕ್ಕೆ ಆಗಮಿಸಿದನು. ಬ್ರಹ್ಮಚಾರಿಯಾದ ಮತ್ತು ಅವಿನಾಶಿಯಾದ ರುದ್ರನು ಕೈಯಲ್ಲಿ ಧನುಸ್ಸನ್ನು ಹಿಡಿದುಕೊಂಡು ಕ್ರುದ್ಧನಾಗಿ ಬರುತ್ತಿರುವುದನ್ನು ಕಂಡು ಪೃಥಿವೀದೇವಿಯು ವ್ಯಾಕುಲ ಗೊಂಡಳು. ಪರ್ವತಗಳೂ ಕಂಪಿಸತೊಡಗಿದುವು. ವಾಯುವು ಬೀಸುವುದನ್ನು ನಿಲ್ಲಿಸಿಬಿಟ್ಟನು. ಸಮಿಚ್ಚರ್ವಾಜ್ಯಗಳಿಂದ ಹುತನಾಗುತ್ತಿದ್ದರೂ ಅಗ್ನಿಯು ಜಾಜ್ವಲ್ಯಮಾನನಾಗಿ ಉರಿಯುತ್ತಿರಲಿಲ್ಲ. ಆಕಾಶದಲ್ಲಿ ನಕ್ಷತ್ರಮಂಡಲವು ಉದ್ವಿಗ್ನಗೊಂಡು ಸುತ್ತತೊಡಗಿತು. ಸೂರ್ಯನೂ ಪ್ರಕಾಶಿಸುತ್ತಿರಲಿಲ್ಲ. ಚಂದ್ರಮಂಡಲವೂ ಕಾಂತಿಯಿಂದ ವಿಹೀನವಾಗಿದ್ದಿತು. ಆಕಾಶವು ಸಂಪೂರ್ಣ ವಾಗಿ ಅಂಧಕಾರಮಯವಾಯಿತು. ಯಜ್ಞವನ್ನು ಮುಂದುವರಿಸಲಾಗದೇ ಅವಮಾನಹೊಂದಿದ ದೇವತೆಗಳಿಗೆ ಯಾವ ಕಾರಣದಿಂದ ಹೀಗಾಯಿ ತೆಂಬುದನ್ನು ತಿಳಿಯಲಾಗಲಿಲ್ಲ. ಯಜ್ಞವೂ ವ್ಯವಸ್ಥಿತ ರೀತಿಯಲ್ಲಿ ಮುಂದು ವರಿಯಲಿಲ್ಲ. ಆ ಕಾರಣದಿಂದಾಗಿ ದೇವತೆಗಳೆಲ್ಲರೂ ಭಯಗೊಂಡರು. ಅನಂತರ ಶಿವನು ಭಯಂಕರವಾದ ಬಾಣದಿಂದ ಯಜ್ಞಪುರುಷನ ಹೃದಯ ವನ್ನು ಭೇದಿಸಿದನು. ಒಡನೆಯೇ ಯಜ್ಞಪುರುಷನು ಮೃಗರೂಪನಾಗಿ ಅಗ್ನಿಯ ಸಮೇತನಾಗಿಯೇ ಓಡಿಹೋದನು. ಮೃಗದ ರೂಪದಿಂದಲೇ ಆಕಾಶಕ್ಕೆ ಹೋಗಿ ಅಲ್ಲಿ 'ಮೃಗಶಿರಾಃ' ಎಂಬ ನಕ್ಷತ್ರರೂಪದಿಂದ ಪ್ರಕಾಶಿಸಿದನು. ರುದ್ರನೂ ಆಕಾಶದಲ್ಲಿ (ಆರ್ದ್ರಾನಕ್ಷತ್ರರೂಪವನ್ನು ತಾಳಿ) ಮೃಗಶಿರೋರೂಪದಲ್ಲಿದ್ದ ಯಜ್ಞಪುರುಷನನ್ನೇ ಅನುಸರಿಸಿ ಹೋದನು. ಯಜ್ಞಪುರುಷನು ಜಿಂಕೆಯ ರೂಪವನ್ನು ಧರಿಸಿ ಅಗ್ನಿಯೊಡನೆ ಹೊರಟುಹೋದನಂತರ ದೇವತೆಗಳೆಲ್ಲರೂ ಸಂಜ್ಞಾಹೀನ

ರಾದರು. ಎಲ್ಲರೂ ಮೂರ್ಛಿತರಾಗಲಾಗಿ ಎಲ್ಲಿ ಏನಾಗುತ್ತಿದೆ?– ಎಂಬುದೊಂದೂ ತಿಳಿಯುತ್ತಿರಲಿಲ್ಲ.

**ತ್ರ್ಯಮ್ಬಕಃ ಸವಿತುರ್ಬಾಹೂ ಭಗಸ್ಯ ನಯನೇ ತಥಾ ।**
**ಪೂಷ್ಣಶ್ಚ ದಶನಾನ್ಕ್ರುದ್ಧೋ ಧನುಷ್ಕೋಟ್ಯಾ ವ್ಯಶಾತಯತ್ ॥**

ಆ ಸಮಯದಲ್ಲಿ ಅತ್ಯಂತಕುಪಿತನಾಗಿದ್ದ ಮುಕ್ಕಣ್ಣನು ಧನುಸ್ಸಿನ ತುದಿಯಿಂದ ಸವಿತೃವಿನ ಎರಡು ತೋಳುಗಳನ್ನು ಕತ್ತರಿಸಿದನು. ಭಗನ ಎರಡು ಕಣ್ಣುಗಳನ್ನು ಕಿತ್ತುಹಾಕಿದನು. ಪೂಷನ ಎಲ್ಲ ಹಲ್ಲುಗಳನ್ನೂ ಉದುರಿಸಿದನು. ಅದರಿಂದ ಭಯಗೊಂಡ ಇತರ ದೇವತೆಗಳು ಓಡಿಹೋದರು. ಯಜ್ಞಾಂಗಗಳೂ ಓಡಿಹೋದುವು. ಕೆಲವರು ಅಲ್ಲಿಯೇ ತಲೆತಿರುಗಿ ಬಿದ್ದು ಪ್ರಾಣಹೋದವರಂತೆಯೇ ಆದರು. ನೀಲಕಂಠನು ಅವರೆಲ್ಲರನ್ನೂ ಸ್ವಲ್ಪದೂರ ಓಡಿಸಿಕೊಂಡು ಹೋಗಿ ಬಳಿಕ ಅಪಹಾಸ್ಯ ಮಾಡುತ್ತಾ ಧನುಸ್ಸಿನ ತುದಿಯನ್ನು ಮುಂದೆಮಾಡಿ ಓಡಿಹೋಗುತ್ತಿದ್ದ ದೇವತೆಗಳನ್ನು ತಡೆದು ನಿಲ್ಲಿಸಿದನು. ಬಳಿಕ ದೇವತೆಗಳಿಂದ ಪ್ರೇರಿತಳಾದ ವಾಣಿಯು ರುದ್ರಧನುಸ್ಸಿನ ಮೌರ್ವಿಯನ್ನು ಕತ್ತರಿಸಿದಳು. ಛಿನ್ನವಾದ ಮೌರ್ವಿಯಿಂದ ಕೂಡಿದ್ದ ಆ ಧನುಸ್ಸು ಒಡನೆಯೇ ಮೇಲಕ್ಕೆ ಚಿಮ್ಮಿ ನೆಟ್ಟನೆ ನಿಂತಿತು. ಬಳಿಕ ದೇವತೆಗಳು ಧನುಸ್ಸಿನಿಂದ ವಿಹೀನನಾಗಿದ್ದ ಮಹಾದೇವನಿಗೆ ಯಜ್ಞಪುರುಷನೊಡನೆ ಶರಣಾಗತರಾದರು. ಪ್ರಭುವಾದ ಶಿವನೂ ಕ್ರೋಧವನ್ನು ತ್ಯಜಿಸಿ ದೇವತೆಗಳ ವಿಷಯದಲ್ಲಿ ಪ್ರಸನ್ನಭಾವವನ್ನು ತಾಳಿದನು. ಪ್ರಸನ್ನನಾದ ಭಗವಾನ್ ಶಿವನು ಕೋಪವನ್ನು ಸಮುದ್ರದಲ್ಲಿ ಸಂಸ್ಥಾಪಿಸಿದನು. ಶಿವನ ಆ ಕೋಪವೇ ಬಡಬಾನಲವಾಗಿ ಸರ್ವದಾ ಸಮುದ್ರದ ನೀರನ್ನು ಶೋಷಿಸುತ್ತಲೇ ಇರುತ್ತದೆ.

**ಭಗಸ್ಯ ನಯನೇ ಚೈವ ಬಾಹೂ ಚ ಸವಿತುಸ್ತಥಾ ।**
**ಪ್ರಾದಾತ್ಪೂಷ್ಣಶ್ಚ ದಶನಾನ್ಪುನರ್ಯಜ್ಞಾಂಶ್ಚ ಪಾಣ್ಡವ ॥೨೨॥**

ಪ್ರಸನ್ನನಾದ ಪರಶಿವನು ಭಗನಿಗೆ ಕಣ್ಣುಗಳನ್ನೂ, ಸವಿತೃವಿಗೆ ತೋಳುಗಳನ್ನೂ, ಪೂಷನಿಗೆ ಹಲ್ಲುಗಳನ್ನೂ, ದೇವತೆಗಳಿಗೆ ಯಜ್ಞಗಳನ್ನೂ ಕರುಣಿಸಿದನು.

ಅನಂತರ ಎಲ್ಲ ಜಗತ್ತೂ ಸುಸ್ಥಿರವಾಗಿ ನಿಂತಿತು. ದೇವತೆಗಳು ಎಲ್ಲ ಯಜ್ಞಗಳಲ್ಲಿಯೂ ಮಹಾದೇವನಿಗೆ ಹವಿರ್ಭಾಗಗಳನ್ನು ಕಲ್ಪಿಸಿದರು.

**ತಸ್ಮಿನ್ಕ್ರುದ್ಧೇಽಭವತ್ಸರ್ವಮಸುಸ್ಥಂ ಭುವನಂ ಪ್ರಭೋ ।**
**ಪ್ರಸನ್ನೇ ಚ ಪುನಃ ಸುಸ್ಥಂ ಪ್ರಸನ್ನೋಽಸ್ಯ ಚ ವೀರ್ಯವಾನ್ ॥**

ಮಹಾದೇವನು ಕ್ರುದ್ಧನಾಗಲಾಗಿ ಎಲ್ಲ ಜಗತ್ತುಗಳೂ ಅಸ್ಥಿರವಾಗಿರುತ್ತವೆ. (ಒಳ್ಳೆಯ ಸ್ಥಿತಿಯಲ್ಲಿ ಇರಲಾರವು.) ಅವನು ಪ್ರಸನ್ನನಾಗಲಾಗಿ ಎಲ್ಲ ಜಗತ್ತುಗಳೂ ಸ್ಥಿರವಾಗುತ್ತವೆ. ಶಕ್ತಿಶಾಲಿಯಾದ ರುದ್ರನು ಅಶ್ವತ್ಥಾಮನ ವಿಷಯದಲ್ಲಿ ಪ್ರಸನ್ನನಾಗಿದ್ದನು. ಈ ಕಾರಣದಿಂದಲೇ ಮಹಾರಥರಾದ ನಿನ್ನ ಎಲ್ಲ ಮಕ್ಕಳೂ ಹತರಾದರು. ಧೃಷ್ಟದ್ಯುಮ್ನನ ಅನುಯಾಯಿಗಳಾದ ಇತರ ಅನೇಕಶೂರರೂ ಹತರಾದರು.

**ನ ತನ್ಮನಸಿ ಕರ್ತವ್ಯಂ ನ ಚ ತದ್ದ್ರೌಣಿನಾ ಕೃತಮ್ ।**
**ಮಹಾದೇವಪ್ರಸಾದೇನ ಕುರು ಕಾರ್ಯಮನನ್ತರಮ್ ॥೨೬॥**

ಯುಧಿಷ್ಠಿರ! ಆದುದರಿಂದ ನಿನ್ನ ಮಕ್ಕಳು ನಿಧನಹೊಂದಿದರೆಂಬುದನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡ. ಅಶ್ವತ್ಥಾಮನು ನಿಶ್ಚಯವಾಗಿಯೂ ತನ್ನ ಪರಾಕ್ರಮದಿಂದ ಈ ಕಾರ್ಯವನ್ನು ಮಾಡಿರುವುದಿಲ್ಲ. ಮಹಾದೇವನ ವರಪ್ರಸಾದದಿಂದಲೇ ಈ ಕಾರ್ಯವು ನಡೆದಿದೆ. ಮುಂದೆ ಮಾಡಬೇಕಾಗಿರುವ ಕಾರ್ಯದಲ್ಲಿ ಆಸಕ್ತನಾಗು."

೧೮ನೆಯ ಅಧ್ಯಾಯವು ಮುಗಿಯಿತು.

**ಸೌಪ್ತಿಕಪರ್ವವು ಮುಗಿಯಿತು.**

ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು
ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು
ಓಂ ತತ್ಸತ್

ಶ್ರೀಮಹಾಗಣಪತಯೇ ನಮಃ ಶ್ರೀಮಹಾಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ



ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

# ಸ್ತ್ರೀಪರ್ವ

೧ನೆಯ ಅಧ್ಯಾಯ ಜಲಪ್ರದಾನಿಕಪರ್ವ

## ಧೃತರಾಷ್ಟ್ರನ ವಿಲಾಪ : ಸಂಜಯನು ಧೃತರಾಷ್ಟ್ರನನ್ನು ಸಮಾಧಾನಪಡಿಸಿದುದು

ಜನಮೇಜಯನು ಪ್ರಶ್ನಿಸುತ್ತಾನೆ :

ಹತೇ ದುರ್ಯೋಧನೇ ಚೈವ ಹತೇ ಸೈನ್ಯೇ ಚ ಸರ್ವಶಃ ।
ಧೃತರಾಷ್ಟ್ರೋ ಮಹಾರಾಜ ಶ್ರುತ್ವಾ ಕಿಮಕರೋನ್ಮುನೇ ॥೧॥

"ವೈಶಂಪಾಯನರೇ! ದುರ್ಯೋಧನನು ಹತನಾಗಲಾಗಿ, ಎಲ್ಲ ಕಡೆಗಳಲ್ಲಿಯೂ ಇದ್ದ ಸಮಸ್ತಸೈನ್ಯವೂ ಸಂಪೂರ್ಣವಾಗಿ ನಾಶಹೊಂದಲಾಗಿ, ಆ ಎಲ್ಲ ವಿಷಯಗಳನ್ನೂ ಸಂಜಯನ ಮೂಲಕವಾಗಿ ಕೇಳಿದ ಧೃತರಾಷ್ಟ್ರ ಮಹಾರಾಜನು ಮುಂದೇನು ಮಾಡಿದನು? ಅದೇ ರೀತಿಯಲ್ಲಿ ಮಹಾತ್ಮನಾದ ಕೌರವೇಶ್ವರನಾದ ಧರ್ಮಪುತ್ರನು ಏನು ಮಾಡಿದನು? ದುರ್ಯೋಧನನ ಕಡೆಯಲ್ಲಿ ಉಳಿದುಕೊಂಡಿದ್ದ ಕೃಪ-ಕೃತವರ್ಮಾಶ್ವತ್ಥಾಮರಾದರೂ ಏನು ಮಾಡಿದರು? ಅಶ್ವತ್ಥಾಮನು ಮಾಡಿದ ಕಾರ್ಯವನ್ನು ನಾನು ಕೇಳಿದೆನು. ಬ್ರಹ್ಮಾಸ್ತ್ರವು ಉತ್ತರೆಯ ಗರ್ಭದ ಮೇಲೆ ಬಿದ್ದು ಅದನ್ನು ನಾಶಮಾಡುವುದೆಂದು ಅಶ್ವತ್ಥಾಮನು ಘೋಷಿಸಿದನು. ಅದಕ್ಕೆ ಪ್ರತಿಯಾಗಿ ಶ್ರೀಕೃಷ್ಣನು ಮೂರು ಸಾವಿರ ವರ್ಷಗಳ ಕಾಲ ಕುಷ್ಠರೋಗದಿಂದ ಪೀಡಿತನಾಗಿ ಪ್ರಪಂಚದಲ್ಲಿ ಅಲೆದಾಡುವಂತೆ ಅಶ್ವತ್ಥಾಮನಿಗೆ ಶಾಪವನ್ನಿತ್ತನು. ಆ ಪ್ರಕರಣದ ನಂತರ ಸಂಜಯನು ಧೃತರಾಷ್ಟ್ರನೊಡನೆ ಹೇಳಿದ ವಿಷಯವನ್ನು ಸವಿಸ್ತರವಾಗಿ ಹೇಳಿರಿ."

"ಜನಮೇಜಯಮಹಾರಾಜ! ತನ್ನ ನೂರು ಮಕ್ಕಳೂ ಹತರಾಗ ಲಾಗಿ–ಕೊಂಬೆಗಳೆಲ್ಲವನ್ನೂ ಕತ್ತರಿಸಿದ ವೃಕ್ಷದಂತಿದ್ದ, ಅತ್ಯಂತದೀನನಾಗಿದ್ದ, ಪುತ್ರವ್ಯಸನದಿಂದ ಬಹಳವಾಗಿ ಪರಿತಪಿಸುತ್ತಿದ್ದ, ಅನವರತವಾಗಿ ಚಿಂತಿಸುತ್ತಿದ್ದುದರಿಂದ ವಾಕ್ಶಕ್ತಿಯನ್ನೇ ಕಳೆದುಕೊಂಡವನಂತೆ ಮೂಕನಾಗಿದ್ದ, ಚಿಂತೆಯಲ್ಲಿ ಮುಳುಗಿಹೋಗಿದ್ದ, ಮಹೀಪತಿಯಾದ ಧೃತರಾಷ್ಟ್ರನನ್ನು ಕುರಿತು ಸಂಜಯನು ಹೇಳಿದನು :

**ಕಿಂ ಶೋಚಸಿ ಮಹಾರಾಜ ನಾಸ್ತಿ ಶೋಕೇ ಸಹಾಯತಾ ।**
**ಅಕ್ಷೌಹಿಣ್ಯೋ ಹತಾಶ್ಚಾಷ್ಟೌ ದಶ ಚೈವ ವಿಶಾಮ್ಪತೇ ॥೬॥**

"ಮಹಾರಾಜ! ಏಕೆ ಶೋಕಪಡುವೆ? ಶೋಕಪಡುವುದರಿಂದ ನಿನಗೆ ಯಾವ ವಿಧವಾದ ಸಹಾಯವೂ ಲಭಿಸುವುದಿಲ್ಲ. ಶೋಕವು ನಿನಗೆ ಸಹಾಯವಾಗಲಾರದು. (ನಿನ್ನ ಶೋಕದಲ್ಲಿ ಸಹಾಯಕರಾರೂ ಇರುವುದಿಲ್ಲ.) ಹದಿನೆಂಟು ಅಕ್ಷೌಹಿಣೀಸೈನ್ಯಗಳೂ ಹತವಾಗಿಹೋದುವು.

ಈ ಭೂಮಿಯೀಗ ಜನರಹಿತವಾಗಿ ಶೂನ್ಯವಾಗಿ ಕಾಣುತ್ತಿದೆ. ನಾನಾದಿಕ್ಕುಗಳಿಂದ ಆಗಮಿಸಿದ್ದ ನಾನಾದೇಶಗಳ ರಾಜರೆಲ್ಲರೂ ನಿನ್ನ ಮಗನೊಡನೆ ನಿಧನಹೊಂದಿದರು. ನಿನ್ನ ಪಿತೃಗಳಿಗೂ, ಮಕ್ಕಳಿಗೂ, ಮೊಮ್ಮಕ್ಕಳಿಗೂ, ಜ್ಞಾತಿಗಳಿಗೂ, ಸುಹೃದರಿಗೂ, ಗುರುಗಳಿಗೂ ಯಥಾನುಕ್ರಮವಾಗಿ ಪ್ರೇತಕಾರ್ಯಗಳನ್ನು (ಔರ್ಧ್ವದೈಹಿಕಸಂಸ್ಕಾರಗಳನ್ನು ) ಮಾಡಿಸು."

ಜನಮೇಜಯ! ಸಂಜಯನು ಹೇಳಿದ ಕರುಣಾಜನಕವಾದ ಮಾತನ್ನು ಕೇಳಿ ಮಕ್ಕಳು ಮತ್ತು ಮೊಮ್ಮಕ್ಕಳ ವಧೆಯಿಂದ ಅತ್ಯಂತ ವ್ಯಾಕುಲನಾಗಿದ್ದ, ದುರ್ಧರ್ಷನಾದ ಧೃತರಾಷ್ಟ್ರನು–ಬಿರುಗಾಳಿಯಿಂದ ಬುಡಮೇಲಾದ ವೃಕ್ಷದೋಪಾದಿಯಲ್ಲಿ ಧೊಪ್ಪನೆ ಕೆಳಕ್ಕೆ ಬಿದ್ದನು.

ಶೈತ್ಯೋಪಚಾರವಾದನಂತರ ಸ್ವಲ್ಪ ಚೇತರಿಸಿಕೊಂಡು ಮೇಲೆದ್ದು ಕುಳಿತು ಸಂಜಯನೊಡನೆ ಹೇಳಿದನು :

"ಸಂಜಯ! ಪುತ್ರರನ್ನೂ, ಅಮಾತ್ಯರನ್ನೂ ಮತ್ತು ಸರ್ವಸುಹೃದ ರನ್ನೂ ಕಳೆದುಕೊಂಡಿರುವ ನಾನು ಈ ಭೂಮಂಡಲದಲ್ಲಿ ದಿಕ್ಕುಗಾಣದೇ

ಸಂಚರಿಸುತ್ತಾ ನಿಶ್ಚಯವಾಗಿಯೂ ದುಃಖದ ಸ್ವರೂಪವೇ ಆಗಿಬಿಡುತ್ತೇನೆ. ರೆಕ್ಕೆಗಳಿಂದ ವಿಹೀನವಾದ, ಮುಪ್ಪಿನಿಂದಲೂ ಜೀರ್ಣವಾಗಿ ಹೋಗಿರುವ ಪಕ್ಷಿಯಂತೆ ಸಕಲಬಂಧುಗಳಿಂದಲೂ ವಿಹೀನನಾಗಿರುವ ನನಗೆ ಈ ಜೀವಿತದಿಂದ ಆಗಬೇಕಾದುದೇನಿದೆ? ಮಹಾಪ್ರಾಜ್ಞನೇ! ಕ್ಷೀಣಿಸಿದ ಕಿರಣಗಳುಳ್ಳ ಸೂರ್ಯನಂತೆ–ಹೃತರಾಜ್ಯನಾದ, ಹತಬಂಧುವಾದ, ಕಣ್ಣು ಗಳನ್ನು ಈ ಮೊದಲೇ ಕಳೆದುಕೊಂಡಿರುವ ನಾನು ಈ ಜಗತ್ತಿನಲ್ಲಿ ಪ್ರಕಾಶಮಾನನಾಗುವುದಿಲ್ಲ. (ಇನ್ನು ಮುಂದೆ ನನ್ನ ವಿಷಯವಾಗಿ ಹೇಳುವವರೂ–ಕೇಳುವವರೂ ಯಾರೂ ಇರುವುದಿಲ್ಲ.) ಆದರೆ ನನ್ನ ಈ ದುಃಖಕ್ಕೆ ನಾನೇ ಕಾರಣನಾಗಿರುತ್ತೇನೆ. ಏಕೆಂದರೆ : ನಾನು ಸುಹೃದರು ಹೇಳಿದ ಮಾತನ್ನು ಕೇಳಲಿಲ್ಲ. ಮಹಾಮಹಿಮನಾದ ಪರಶುರಾಮನ ಸಲಹೆಗೂ ಕಿವಿಗೊಡಲಿಲ್ಲ. ದೇವರ್ಷಿಗಳಾದ ನಾರದರ ಹಿತವಚನವನ್ನೂ ಕೇಳಲಿಲ್ಲ. ವ್ಯಾಸರ ಹಿತೋಪದೇಶಕ್ಕೂ ಬೆಲೆಕೊಡಲಿಲ್ಲ. ತುಂಬಿದ ಸಭೆಯ ಮಧ್ಯದಲ್ಲಿ ಶ್ರೀಕೃಷ್ಣನು **'ಅಲಂ ವೈರೇಣ ತೇ ರಾಜನ್ ಪುತ್ರಃ ಸಂಗೃಹ್ಯತಾಂ'**-'ರಾಜನೇ! ಈ ವೈರವನ್ನು ಸಾಕುಮಾಡು. ನಿನ್ನ ಮಗನನ್ನು ಹತೋಟಿಯಲ್ಲಿಟ್ಟುಕೋ'–ಎಂಬ ಶ್ರೇಯಸ್ಕರವಾದ ಮಾತನ್ನೇ ಹೇಳಿದನು. ದುರ್ಮತಿಯಾದ ನಾನು ಆ ಸಮಯದಲ್ಲಿ ಶ್ರೀಕೃಷ್ಣನು ಹೇಳಿದಂತೆ ನಡೆದುಕೊಳ್ಳದೇ ಇದ್ದುದಕ್ಕಾಗಿ ಈಗ ಪರಿತಪಿಸುತ್ತಿದ್ದೇನೆ. ಧರ್ಮಯುಕ್ತವಾಗಿ ಹೇಳುತ್ತಿದ್ದ ಭೀಷ್ಮನ ಮಾತೂ ಈಗ ಕೇಳಿಬರುತ್ತಿಲ್ಲ. ಗೂಳಿಯಂತೆ ಗರ್ಜನೆಮಾಡುತ್ತಿದ್ದ ದುರ್ಯೋಧನನ ವೀರೋಚಿತವಾದ ಮಾತೂ ಕೇಳಿಬರುತ್ತಿಲ್ಲ. ದುಃಶಾಸನನ ವಧೆ, ಕರ್ಣನ ವಿನಾಶ ಮತ್ತು ಸೂರ್ಯಸ್ವರೂಪರಾದ ದ್ರೋಣರಿಗೂ ಗ್ರಹಣವುಂಟಾದುದು – ಈ ಎಲ್ಲ ವಿಷಯಗಳನ್ನೂ ನೆನೆಸಿಕೊಂಡರೆ ನನ್ನ ಹೃದಯವೇ ಸೀಳಿಹೋಗುತ್ತದೆ. ಮೂಢನಾದ ನಾನು ಯಾವ ಕಾರಣದಿಂದ ಇಂತಹ ದುಷ್ಫಲವನ್ನು ಅನುಭವಿಸಬೇಕಾಯಿತೆಂಬುದರ ಬಗೆಗೆ ನಾನು ಹಿಂದೆ ಮಾಡಿರಬಹುದಾದ ದುಷ್ಕರ್ಮಗಳೊಂದೂ ನನ್ನ ಸ್ಮರಣೆಗೆ ಬರುತ್ತಿಲ್ಲ.

**ನೂನಂ ವ್ಯಪಕೃತಂ ಕಿಂಚಿನ್ಮಯಾ ಪೂರ್ವೇಷು ಜನ್ಮಸು ।**
**ಯೇನ ಮಾಂ ದುಃಖಭಾಗೇಷು ಧಾತಾ ಕರ್ಮಸು ಯುಕ್ತವಾನ್ ॥**

ಆದರೆ ನಾನು ಹಿಂದಿನ ಜನ್ಮಗಳಲ್ಲಿ ಸ್ವಲ್ಪವಾದರೂ ಪಾಪವನ್ನು

ಮಾಡಿರಲೇಬೇಕು. ಆ ಕಾರಣದಿಂದಲೇ ವಿಧಾತನು ನನ್ನನ್ನು ಈ ದುಃಖಮಯವಾದ ಕರ್ಮಗಳಲ್ಲಿ ತೊಡಗಿಸಿರುವನು.

ವಯಸ್ಸಿನಿಂದ ನಾನು ವೃದ್ಧನಾಗಿದ್ದೇನೆ. ನನ್ನ ಎಲ್ಲ ಬಂಧುಗಳೂ, ಸುಹೃದರೂ, ಮಿತ್ರರೂ ವಿನಾಶಹೊಂದಿದ್ದಾರೆ. ದೈವಯೋಗದಿಂದಲೇ ಇದೆಲ್ಲವೂ ನನ್ನ ಪಾಲಿಗೆ ಬಂದೊದಗಿದೆ. ನಿಜವಾಗಿ ಹೇಳು, ಸಂಜಯ! ನನಗಿಂತಲೂ ದುಃಖಿತನಾದ ಮನುಷ್ಯನು ಈ ಭೂಮಂಡಲದಲ್ಲಿ ಮತ್ತೊಬ್ಬನಿರುವನೇ? ಆದುದರಿಂದ ಕಠೋರವ್ರತನಿಷ್ಠರಾದ ಪಾಂಡವರು, ತೆರೆದಿರುವ ಮತ್ತು ವಿಶಾಲವಾದ ಬ್ರಹ್ಮಲೋಕದ ಮಾರ್ಗದಲ್ಲಿ ಆಶ್ರಯಹೊಂದುವ ನನ್ನನ್ನು ಇಂದೇ ನೋಡಲಿ. (ಉಳಿದಿರುವ ನಾನೂ ಪ್ರಾಣಪರಿತ್ಯಾಗಮಾಡಿ ಬ್ರಹ್ಮಲೋಕಕ್ಕೆ ಹೋಗುವುದನ್ನು ಪಾಂಡವರು ನೋಡಲಿ.")

ಮಹಾರಾಜ! ಇವೇ ಮುಂತಾಗಿ ಹೇಳಿಕೊಂಡು ಬಹುವಾಗಿ ಶೋಕಪಡುತ್ತಿದ್ದ, ಬಾರಿ-ಬಾರಿಗೂ ವಿಲಪಿಸುತ್ತಿದ್ದ ಧೃತರಾಷ್ಟ್ರನ ಶೋಕವನ್ನು ಹೋಗಲಾಡಿಸುವಂತಹ ಮಾತುಗಳನ್ನು ಸಂಜಯನು ಹೇಳಿದನು :

"ಮಹಾರಾಜ! ನೀನು ವೃದ್ಧರಾದವರ ಮುಖಗಳಿಂದ ವೇದಗಳ ಸಿದ್ಧಾಂತವೇನೆಂಬುದನ್ನೂ, ವಿಧ-ವಿಧವಾದ ಶಾಸ್ತ್ರ ಮತ್ತು ಆಗಮಗಳ ರಹಸ್ಯಗಳನ್ನೂ ತಿಳಿದುಕೊಂಡಿರುವೆ. ಸೃಂಜಯನು ಪುತ್ರಶೋಕಪೀಡಿತ ನಾಗಿದ್ದಾಗ ಮುನಿಗಳು ಅವನನ್ನು ಹೇಗೆ ಸಮಾಧಾನಪಡಿಸಿದರೆಂಬ ವಿಷಯವೂ ನಿನಗೆ ತಿಳಿದಿದೆ. ಅವೆಲ್ಲವನ್ನೂ ಸ್ಮರಿಸಿಕೊಂಡು ನಿನ್ನ ಶೋಕವನ್ನು ದೂರಮಾಡು. ಯೌವನದಿಂದುಂಟಾದ ದರ್ಪವನ್ನು ಆಶ್ರಯಿಸಿ ನಿನ್ನ ಮಗನು ಸ್ವೇಚ್ಛೆಯಿಂದ ಪ್ರವೃತ್ತನಾದಾಗ ಸುಹೃದರು ಹೇಳುತ್ತಿದ್ದ ಮಾತುಗಳಾವುದನ್ನೂ ನೀನು ಗಮನಿಸಲಿಲ್ಲ.

ರಾಜ್ಯವನ್ನು ಪೂರ್ಣವಾಗಿ ತಾನೇ ಉಪಭೋಗಿಸಬೇಕೆಂದು ಇಚ್ಛಿಸಿದ್ದ, ಲುಬ್ಧನಾದ ನಿನ್ನ ಮಗನು ಅವಿವೇಕದಿಂದ ಯಾವ ವಿಧವಾದ ಪುರುಷಾರ್ಥದ ಸಾಧನೆಯನ್ನೂ ಮಾಡಿಕೊಳ್ಳಲಿಲ್ಲ. ಒಂದೇ ಕಡೆ ಅಲಗುಳ್ಳ ಕತ್ತಿಯಂತೆ ಸ್ವಬುದ್ಧಿಯಿಂದಲೇ ಅವನು ಕಾರ್ಯಗಳನ್ನು ಮಾಡುತ್ತಿದ್ದನು. ಇಷ್ಟುಮಾತ್ರವಲ್ಲದೇ ಪ್ರಾಯಶಃ ಆಚಾರಹೀನನಾದ ಮನುಷ್ಯ

ರನ್ನೇ ಅವನು ಯಾವಾಗಲೂ ತನ್ನ ಸಂಗಾತಿಗಳನ್ನಾಗಿ ಮಾಡಿಕೊಂಡಿದ್ದನು. ದುಃಶಾಸನ, ದುರಾತ್ಮನಾದ ಕರ್ಣ, ದುಷ್ಟಾತ್ಮನಾದ ಶಕುನಿ, ದುರ್ಮತಿಯಾದ ಚಿತ್ರಸೇನ, ಪ್ರಪಂಚಕ್ಕೇ ಕಂಟಕರೂಪನಾಗಿದ್ದ ಶಲ್ಯ–ಇವರೇ ಈ ದುರ್ಯೋಧನನ ಮಂತ್ರಿಗಳಾಗಿದ್ದರು. ಆ ದುಷ್ಟರ ಸಲಹೆಗಳಂತೆಯೇ ನಿನ್ನ ಮಗನು ನಡೆದುಕೊಳ್ಳುತ್ತಿದ್ದನು. ಕುರುವೃದ್ಧನಾದ ಭೀಷ್ಮ, ಗಾಂಧಾರೀ, ವಿದುರ, ದ್ರೋಣರು, ಕೃಪರು, ಶ್ರೀಕೃಷ್ಣ, ಧೀಮಂತರಾದ ನಾರದರು, ಮಹಾತೇಜಸ್ವಿಗಳಾದ ವ್ಯಾಸರು, ಇನ್ನೂ ಅನೇಕ ಋಷಿ-ಮುನಿಗಳು ಹೇಳುತ್ತಿದ್ದ ಹಿತೋಕ್ತಿಗಳಂತೆ ನಿನ್ನ ಮಗನು ನಡೆದುಕೊಳ್ಳಲಿಲ್ಲ. ನಿರಂತರವಾಗಿ ಅವನು ಪಾಂಡವರೊಡನೆ ಯುದ್ಧವನ್ನೇ ಅಪೇಕ್ಷಿಸುತ್ತಿದ್ದನೇ ಹೊರತು ಯಾವ ಧರ್ಮಕಾರ್ಯವನ್ನೂ ಒಳ್ಳೆಯ ಉದ್ದೇಶದಿಂದ ಆದರಪೂರ್ವಕವಾಗಿ ಮಾಡಿದವನೇ ಅಲ್ಲ. ನಿನ್ನ ಮಗನಾದ ದುರ್ಯೋಧನನು ಅಲ್ಪಬುದ್ಧಿಯವನು. ಆದರೂ ಮಹಾ ಅಹಂಕಾರಿ. ನಿತ್ಯವೂ–'ಪಾಂಡವರೊಡನೆ ಯುದ್ಧಮಾಡಲೇಬೇಕು. ಸಂಧಾನಕ್ಕೆ ಅವಕಾಶವೇ ಇಲ್ಲ'–ಎಂದೇ ಹೇಳುತ್ತಿದ್ದನು. ಅವನು ಮಹಾಕ್ರೂರಿ. ಅಸಹನಶೀಲನು. ಪರಾಕ್ರಮಿಯೆಂಬುದೇನೋ ನಿಜ. ಆದರೆ ಅವನಿಗೆ ಸಂತುಷ್ಟಿಯೆಂಬುದೇ ಇರಲಿಲ್ಲ. ಇತರರ ರಾಜ್ಯವನ್ನು ಅಪಹರಿಸಬೇಕೆಂಬ ದುರಭಿಪ್ರಾಯವುಳ್ಳವನಾಗಿದ್ದನು. (ಈ ಎಲ್ಲ ಕಾರಣಗಳಿಂದ ಅವನು ವಿನಾಶಹೊಂದಿದನು.)

ಮಹಾರಾಜ! ನೀನು ವೇದಶಾಸ್ತ್ರಗಳನ್ನು ತಿಳಿದವನಾಗಿರುವೆ. ಮೇಧಾವಿಯಾಗಿರುವೆ. ಸದಾಕಾಲದಲ್ಲಿಯೂ ಸತ್ಯದಲ್ಲಿಯೇ ತತ್ಪರನಾಗಿರುವೆ. ನಿನ್ನಂತಹ ಸತ್ಪುರುಷರು, ಬುದ್ಧಿವಂತರು ಹೀಗೆ–ದುಷ್ಟಪುತ್ರರು ಸ್ವಬುದ್ಧಿಯಿಂದಲೇ ವಿನಾಶಹೊಂದಿದುದಕ್ಕಾಗಿ–ಪರಿತಾಪಗೊಳ್ಳುವುದಿಲ್ಲ. ನಿನ್ನ ಮಗನು ಯಾವ ಧರ್ಮಕಾರ್ಯವನ್ನೂ ಮಾಡಲಿಲ್ಲ. ಯಾವ ಸಾಧು-ಸತ್ಪುರುಷರನ್ನೂ ಸತ್ಕರಿಸಲಿಲ್ಲ. ನಿನ್ನ ಮಗನ ಕಾರಣದಿಂದಲೇ ಎಲ್ಲ ಕ್ಷತ್ರಿಯರೂ ವಿನಾಶಹೊಂದಿದರು. ಶತ್ರುಗಳ ಯಶಸ್ಸೂ ಹೆಚ್ಚಿತು. ನೀನು ಕೌರವ-ಪಾಂಡವರಿಬ್ಬರ ಯೋಗ-ಕ್ಷೇಮಗಳನ್ನೂ ನೋಡಿಕೊಳ್ಳಬೇಕಾದ ಮಧ್ಯಸ್ಥನಾಗಿದ್ದರೂ ಪಕ್ಷಪಾತವಾಗದ ರೀತಿಯಲ್ಲಿ ತಕ್ಕ ಯಾವ

ಮಾತನ್ನೂ ಹೇಳಲಿಲ್ಲ. ಸಮಯಗಳಲ್ಲಿ ನಿನ್ನ ಮಗನಿಗೂ ಉಚಿತವಾದ ಯಾವ ಸಲಹೆಗಳನ್ನೂ ನೀನು ನೀಡಲಿಲ್ಲ. (ಶ್ರೀಕೃಷ್ಣನು ಹೇಳಿದಂತೆ ನಿನ್ನ ಮಗನನ್ನು ನೀನು ಹಿಡಿತದಲ್ಲಿಟ್ಟುಕೊಳ್ಳಲಿಲ್ಲ.) ನಿನಗೆ ನಿನ್ನ ಮಗನನ್ನು ತಡೆಯುವ ಉದ್ದೇಶವಿದ್ದಿದ್ದರೆ ನಿನ್ನನ್ನು ತಡೆಯಲು ಯಾರೂ ಬರುತ್ತಿರಲಿಲ್ಲ. ನೀನು ದುರ್ಧರನಾಗಿದ್ದೆ. ಆದರೂ ನೀನು ತಕ್ಕಡಿಯು ಸಮನಾಗಿರುವಂತೆ ನೋಡಿಕೊಳ್ಳಲಿಲ್ಲ. ಒಂದು ಕಡೆಗೇ ಭಾರವನ್ನು ಹೆಚ್ಚಿಸಿದೆ. ಪಕ್ಷಪಾತವನ್ನು ತೋರಿಸಿದೆ.

**ಆದಾವೇವ ಮನುಷ್ಯೇಣ ವರ್ತಿತವ್ಯಂ ಯಥಾಕ್ಷಮಮ್ ।**
**ಯಥಾ ನಾತೀತಮರ್ಥಂ ವೈ ಪಶ್ಚಾತ್ತಾಪೇನ ಯುಜ್ಯತೇ ॥೩೫॥**

ಮನುಷ್ಯನು ಮೊದಲೇ ಯಥಾಯೋಗ್ಯವಾದ ರೀತಿಯಲ್ಲಿ ವ್ಯವಹರಿಸಬೇಕು. ಹೇಗೆ ನಡೆದುಕೊಂಡರೆ ಮುಂದೆ, ಕಳೆದುಹೋದ ಕಾರ್ಯವನ್ನು ಕುರಿತು ಪಶ್ಚಾತ್ತಾಪಪಡಬೇಕಾಗುವುದಿಲ್ಲವೋ–ಹಾಗೆ ಮೊದಲಿನಲ್ಲಿಯೇ ಯುಕ್ತವಾದ ರೀತಿಯಲ್ಲಿ ಮಾನವನು ನಡೆದುಕೊಳ್ಳಬೇಕು. ಪುತ್ರನಲ್ಲಿದ್ದ ಅತಿಶಯವಾದ ವ್ಯಾಮೋಹದಿಂದ ನೀನು ಅವನಿಗೆ ಪ್ರಿಯವಾಗುವುದನ್ನೇ ಮಾಡುತ್ತಿದ್ದೆ. ಅದರಿಂದ ಈಗ ಪಶ್ಚಾತ್ತಾಪಪಡುವ ಕಾಲ ಬಂದಿದೆ. ಆದುದರಿಂದ ಈಗ ನೀನು ಶೋಕಿಸುವುದು ಖಂಡಿತವಾಗಿಯೂ ಉಚಿತವಲ್ಲ.

**ಮಧು ಯಃ ಕೇವಲಂ ದೃಷ್ಟ್ವಾ ಪ್ರಪಾತಂ ನಾನುಪಶ್ಯತಿ ।**
**ಸ ಭ್ರಷ್ಟೋ ಮಧುಲೋಭೇನ ಶೋಚತ್ಯೇವಂ ಯಥಾ ಭವಾನ್ ॥**

ಪರ್ವತದ ಶಿಖರದಲ್ಲಿ ಕಟ್ಟಿರುವ ಜೇನುಗೂಡನ್ನು ನೋಡಿದ ಮನುಷ್ಯನು ಅದರ ಕೆಳಭಾಗದಲ್ಲಿರುವ ದೊಗರನ್ನು ಗಮನಿಸುವುದೇ ಇಲ್ಲ. ಜೇನುತುಪ್ಪದ ಆಸೆಯಿಂದ ಗೂಡನ್ನು ಬಿಡಿಸಲು ಹೋದ ಆ ಮನುಷ್ಯನು ಕಾಲುಜಾರಿ ಪ್ರಪಾತದಲ್ಲಿ ಬಿದ್ದು ಈಗ ನೀನು ದುಃಖಿಸುವಂತೆಯೇ ದುಃಖಪಡುತ್ತಾನೆ.

**ಅರ್ಥಾನ್ನಶೋಚನ್ಪ್ರಾಪ್ನೋತಿ ನ ಶೋಚನ್ವಿಂದತೇ ಫಲಮ್ ।**
**ನ ಶೋಚಞ್ಶ್ರಿಯಮಾಪ್ನೋತಿ ನ ಶೋಚನ್ವಿಂದತೇ ಪರಮ್ ॥**

ಧೃತರಾಷ್ಟ್ರಮಹಾರಾಜ! ನಿನ್ನ ಈ ಶೋಕವು ನಿನಗೆ ಯಾವ

ವಿಧವಾದ ಫಲವನ್ನೂ ಕೊಡುವುದಿಲ್ಲ. ಶೋಕಪಡುವವನು ತನ್ನ ಅಭೀಷ್ಟವನ್ನು ಪಡೆದುಕೊಳ್ಳಲಾರನು. ಸದಾ ಶೋಕಪಡುತ್ತಿರುವವನು ಯಾವ ವಿಧವಾದ ಫಲವನ್ನೂ ಹೊಂದಲಾರನು. ಸದಾ ಶೋಕಪಡುತ್ತಿರುವವನು ಯಾವ ಸಂಪತ್ತನ್ನೂ ಪಡೆದುಕೊಳ್ಳಲಾರನು. ಶೋಕಪಡುತ್ತಲೇ ಇರುವವನಿಗೆ ಸದ್ಗತಿಯೂ ಸಿಕ್ಕುವುದಿಲ್ಲ.

**ಸ್ವಯಮುತ್ಪಾದಯಿತ್ವಾಗ್ನಿಂ ವಸ್ತ್ರೇಣ ಪರಿವೇಷ್ಟಯನ್ ।**
**ದಹ್ಯಮಾನೋ ಮನಸ್ತಾಪಂ ಭಜತೇ ನ ಸ ಪಣ್ಡಿತಃ ॥೩೯॥**

ಬೆಂಕಿಯನ್ನು ತಾನೇ ಹೊತ್ತಿಸಿ, ಅದನ್ನು ಬಟ್ಟೆಯಲ್ಲಿ ಕಟ್ಟಿಕೊಂಡು, ಆ ಬೆಂಕಿಯು ಪ್ರಜ್ವಲಿಸಿ ತನ್ನನ್ನೇ ಸುಡಲು ಪ್ರಾರಂಭಿಸಿದಾಗ ಪರಿತಾಪ ಪಡುವವನು ಖಂಡಿತವಾಗಿಯೂ ಬುದ್ಧಿವಂತನೆನಿಸಿಕೊಳ್ಳುವುದಿಲ್ಲ.

**ತ್ವಯೈವ ಸಸುತೇನಾಯಂ ವಾಕ್ಯವಾಯುಸಮೀರಿತಃ ।**
**ಲೋಭಾಜ್ಯೇನ ಚ ಸಂಸಿಕ್ತೋ ಜ್ವಲಿತಃ ಪಾರ್ಥಪಾವಕಃ ॥೪೦॥**

ಕಠಿನವಚನರೂಪವಾದ ಗಾಳಿಯಿಂದ ಉದ್ಬೋಧಿತವಾಗಿ ಮತ್ತು ಲೋಭವೆಂಬ ತುಪ್ಪದಿಂದ ನೆನೆಸಲ್ಪಟ್ಟುದಾಗಿ ಪಾರ್ಥರೂಪಿಯಾದ ಅಗ್ನಿಯು ಪುತ್ರಸಹಿತನಾದ ನಿನ್ನಿಂದಲೇ ಪ್ರಜ್ವಲಿತವಾಯಿತು.

**ತಸ್ಮಿನ್ಸಮಿದ್ಧೇ ಪತಿತಾಃ ಶಲಭಾ ಇವ ತೇ ಸುತಾಃ ।**
**ತಾನ್ವೈ ಶರಾಗ್ನಿನಿರ್ದಗ್ಧಾನ್ನ ತ್ವಂ ಶೋಚಿತುಮರ್ಹಸಿ ॥೪೧॥**

ನೀನೇ ಹೊತ್ತಿಸಿ ಚೆನ್ನಾಗಿ ಉರಿಯುವಂತೆ ಮಾಡಿದ ಅಗ್ನಿಯಲ್ಲಿ ನಿನ್ನ ಮಕ್ಕಳು ಪತಂಗದ ಹುಳುಗಳಂತೆ ಬಿದ್ದು ದಗ್ಧರಾಗಿ ಹೋದರು. ಬಾಣವೆಂಬ ಅಗ್ನಿಯಲ್ಲಿ ದಗ್ಧರಾಗಿಹೋದ ಆ ನಿನ್ನ ಮಕ್ಕಳನ್ನು ಕುರಿತು ದುಃಖಪಡುವುದು ನಿನಗೆ ಯೋಗ್ಯವಾಗಿ ಕಾಣುವುದಿಲ್ಲ. (ನೀನೇ ಹೊತ್ತಿಸಿದ ಬೆಂಕಿಯಲ್ಲಿ ನಿನ್ನ ಮಕ್ಕಳು ಬಿದ್ದು ಪ್ರಾಣಬಿಟ್ಟುದಕ್ಕಾಗಿ ಶೋಕಿಸುವುದು ಸರಿಯಲ್ಲ.)

ಕಣ್ಣೀರನ್ನು ಸತತವಾಗಿ ಸುರಿಸಿ ಕಲುಷವಾದ ಮುಖವನ್ನು ಹೊಂದುವುದು ಅಶಾಸ್ತ್ರೀಯವಾದುದು ; ಶಾಸ್ತ್ರಸಮ್ಮತವಲ್ಲ. (ಶಸ್ತ್ರಾಗ್ನಿಯಿಂದ ದಗ್ಧರಾಗಿ ಪುಣ್ಯಲೋಕಗಳನ್ನು ಹೊಂದಿರುವವರ ವಿಷಯದಲ್ಲಿ

ಕಣ್ಣೀರಿಡುವುದು ಶಾಸ್ತ್ರದೃಷ್ಟಿಯಿಂದ ನಿಂದ್ಯವಾದುದು.) ಪಂಡಿತರಾದವರು ಇದನ್ನು ಪ್ರಶಂಸೆಮಾಡುವುದಿಲ್ಲ.

ಈ ಕಣ್ಣೀರಿನ ಬಿಂದುಗಳು ದುಃಖಿಸುವ ಮನುಷ್ಯರನ್ನೂ ಬೆಂಕಿಯ ಕಿಡಿಗಳಂತೆ ದಹಿಸುತ್ತವೆ. ಆದುದರಿಂದ ನೀನು ಈ ಶೋಕವನ್ನು ಬುದ್ಧಿಪೂರ್ವಕವಾಗಿ ಪರಿತ್ಯಜಿಸು. ಕಣ್ಣೀರು ಸುರಿಸುವುದನ್ನು ನಿಲ್ಲಿಸು. ಬುದ್ಧಿಯಿಂದ ನಿನ್ನ ಮನಸ್ಸನ್ನು ಸ್ಥಿರಗೊಳಿಸು. (ಮನಸ್ಸನ್ನು ಶೋಕ ಪರವಶವನ್ನಾಗಿ ಮಾಡಬೇಡ.)"

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಶತ್ರುಸಂತಾಪಕನೇ! ಮಹಾತ್ಮನಾದ ಸಂಜಯನು ಹೀಗೆ ಧೃತರಾಷ್ಟ್ರನನ್ನು ಸಮಾಧಾನಪಡಿಸಿದನಂತರ ವಿದುರನು ವಿಚಾರಪೂರ್ವಕ ವಾಗಿ ಕುರುರಾಜನೊಡನೆ ಹೇಳತೊಡಗಿದನು."

ರನೆಯ ಅಧ್ಯಾಯವು ಮುಗಿಯಿತು.

೨ನೆಯ ಅಧ್ಯಾಯ ಜಲಪ್ರದಾನಿಕಪರ್ವ (ಮುಂದುವರಿದಿದೆ.)

## ವಿದುರನು ಧೃತರಾಷ್ಟ್ರನಿಗೆ ಸಮಾಧಾನಹೇಳುತ್ತಾ ಶೋಕವನ್ನು ಪರಿತ್ಯಜಿಸಲು ಸಲಹೆಮಾಡಿದುದು

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಬಳಿಕ ವಿದುರನು ಅಮೃತಕ್ಕೆ ಸಮಾನವಾದ ಮಾತುಗಳಿಂದ ಪುರುಷರ್ಷಭನಾದ, ವಿಚಿತ್ರವೀರ್ಯನ ಮಗನಾದ ಧೃತ ರಾಷ್ಟ್ರನನ್ನು ಆಹ್ಲಾದಗೊಳಿಸುತ್ತಾ ಅವನೊಡನೆ ಏನು ಹೇಳಿದನೆಂಬುದನ್ನು ಹೇಳುವೆನು ; ಕೇಳು :

ಶೋಕಮಗ್ನನಾಗಿದ್ದ ಧೃತರಾಷ್ಟ್ರನನ್ನು ಕುರಿತು ವಿದುರನು ಹೇಳಿದನು :

"ಮಹಾರಾಜ! ಎದ್ದೇಳು. ಸುಮ್ಮನೇಕೆ ಮಲಗಿರುವೆ? ಬುದ್ಧಿಯಿಂದ ಮನಸ್ಸನ್ನು ಸ್ಥಿರಗೊಳಿಸು.

**ಏಷಾ ವೈ ಸರ್ವಸತ್ತ್ವಾನಾಂ ಲೋಕೇಶ್ವರ ಪರಾ ಗತಿಃ ॥೨॥**

ಲೋಕೇಶ್ವರನೇ! ಎಲ್ಲ ಪ್ರಾಣಿಗಳಿಗೂ ಇದೇ ಅಂತಿಮವಾದ ಆಶ್ರಯವಾಗಿರುತ್ತದೆ.

**ಸರ್ವೇ ಕ್ಷಯಾನ್ತಾ ನಿಚಯಾಃ ಪತನಾನ್ತಾಃ ಸಮುಚ್ಛ್ರಯಾಃ ।**
**ಸಂಯೋಗಾ ವಿಪ್ರಯೋಗಾನ್ತಾ ಮರಣಾನ್ತಂ ಚ ಜೀವಿತಮ್ ॥೩॥**

ಪದಾರ್ಥಗಳ ಸಂಗ್ರಹಗಳೆಲ್ಲವೂ ಅವುಗಳ ಕ್ಷಯದಲ್ಲಿಯೇ ಪರ್ಯವಸಾನಹೊಂದುತ್ತದೆ. ಭೌತಿಕವಾದ ಉನ್ನತಿಗಳು ಪತನದಲ್ಲಿಯೇ ಪರ್ಯವಸಾನಹೊಂದುತ್ತವೆ. ಪರಸ್ಪರವಾಗಿ ಸೇರುವಿಕೆಯು ವಿಯೋಗ ದಲ್ಲಿಯೇ ಪರ್ಯವಸಾನಹೊಂದುತ್ತದೆ. ಜೀವಿತವು ಮರಣಾಂತವೇ ಆಗಿರುತ್ತದೆ.

**ಯದಾ ಶೂರಂ ಚ ಭೀರುಂ ಚ ಯಮಃ ಕರ್ಷತಿ ಭಾರತ ।**
**ತತ್ಕಿಂ ನ ಯೋತ್ಸ್ಯನ್ತಿ ಹಿ ತೇ ಕ್ಷತ್ರಿಯಾಃ ಕ್ಷತ್ರಿಯರ್ಷಭ ॥೪॥**

ಭರತಕುಲಾವತಂಸನೇ! ಕ್ಷತ್ರಿಯಶಿರೋಮಣಿಯೇ! ಯಮನು ಶೂರನನ್ನೂ ಮತ್ತು ಹೇಡಿಯನ್ನೂ ಯಾವ ವಿಧವಾದ ತಾರತಮ್ಯವೂ ಇಲ್ಲದೇ ಸೆಳೆದುಕೊಂಡು ಹೋಗುತ್ತಾನೆಂದಮೇಲೆ-ಶೂರರಾದ ಕ್ಷತ್ರಿಯರು ಏಕೆ ಶತ್ರುಗಳೊಡನೆ ಯುದ್ಧಮಾಡದಿರುತ್ತಾರೆ?

**ಅಯುಧ್ಯಮಾನೋ ಮ್ರಿಯತೇ ಯುಧ್ಯಮಾನಶ್ಚ ಜೀವತಿ ।**
**ಕಾಲಂ ಪ್ರಾಪ್ಯ ಮಹಾರಾಜ ನ ಕಶ್ಚಿದತಿವರ್ತತೇ ॥೫॥**

ಯುದ್ಧಮಾಡದವನು ಸಾಯುತ್ತಾನೆ. ಯುದ್ಧಮಾಡುತ್ತಿದ್ದವನು ಜೀವದಿಂದ ಪಾರಾಗುತ್ತಾನೆ. (ಯುದ್ಧದಲ್ಲಿ ಮಾತ್ರವೇ ಸಾವೆಂದಾಗಲೀ-ಯುದ್ಧಮಾಡದವನು ಶಾಶ್ವತವಾಗಿ ಬದುಕಿರುವನೆಂದಾಗಲೀ ಹೇಳಲಾಗು ವುದಿಲ್ಲ. ಯುದ್ಧಮಾಡುತ್ತಿದ್ದವನೂ ಸಾಯುತ್ತಾನೆ. ಯುದ್ಧಮಾಡದೇ ಯುದ್ಧದಿಂದ ತಪ್ಪಿಸಿಕೊಂಡು ಹೋದ ಹೇಡಿಯೂ ಸಾಯುತ್ತಾನೆ. ಸಾವಿನ ಭಯದಿಂದ ಓಡಿಹೋದ ಮಾತ್ರಕ್ಕೆ ಅವನಿಗೆ ಎಂದಿಗೂ ಸಾವಿಲ್ಲವೆಂದಲ್ಲ.) ಕಾಲವು ಸನ್ನಿಹಿತವಾಯಿತೆಂದರೆ ಶೂರನಾಗಲೀ, ಹೇಡಿಯಾಗಲೀ, ಬಡವನಾಗಲೀ, ಬಲ್ಲಿದನಾಗಲೀ-ಯಮಾಲಯವನ್ನು ಸೇರಿಯೇ ತೀರುತ್ತಾನೆ. ಈ ನಿಯಮವನ್ನು ಅತಿಕ್ರಮಿಸಿ ನಡೆಯಲು ಯಾರಿಂದಲೂ ಸಾಧ್ಯವಾಗುವುದಿಲ್ಲ.

**ಅಭಾವಾದೀನಿ ಭೂತಾನಿ ಭಾವಮಧ್ಯಾನಿ ಭಾರತ ।**
**ಅಭಾವನಿಧನಾನ್ಯೇವ ತತ್ರ ಕಾ ಪರಿದೇವನಾ ॥೬॥**

ಪ್ರಾಣಿಗಳು ಹುಟ್ಟುವ ಮೊದಲು ಅವ್ಯಕ್ತವಾದ ಸ್ಥಿತಿಯಲ್ಲಿರುತ್ತವೆ. ಹುಟ್ಟಿದ ನಂತರ ಸ್ವಲ್ಪಕಾಲದವರೆಗೆ ಮಾತ್ರ ವ್ಯಕ್ತವಾಗಿರುತ್ತವೆ. ಪುನಃ ಅದೇ ಪ್ರಾಣಿಗಳು ನಿಧನಹೊಂದಿ ಅವ್ಯಕ್ತವಾದ ಸ್ಥಿತಿಯನ್ನೇ ಹೊಂದುತ್ತವೆ. ಇದಕ್ಕಾಗಿ ಸಂಕಟಪಡುವುದೇಕೆ? (ಮೊದಲು ಇರಲಿಲ್ಲ ; ಕಡೆಯಲ್ಲಿಯೂ ಇಲ್ಲದಾಗುತ್ತದೆ. ಇಂತಹ ತೋರಿ-ಉಡುಗುವ ದೇಹದ ನಾಶಕ್ಕಾಗಿ ಏಕೆ ದುಃಖಿಸಬೇಕು?)

**ನ ಶೋಚನ್ಮೃತಮನ್ವೇತಿ ನ ಶೋಚನ್ಮ್ರಿಯತೇ ನರಃ ।**
**ಏವಂ ಸಾಂಸಿದ್ಧಿಕೇ ಲೋಕೇ ಕಿಮರ್ಥಮನುಶೋಚಸಿ ॥೭॥**

ಶೋಕಪಡುವುದರಿಂದ ಬದುಕಿರುವವನು ಸತ್ತವನ ಹಿಂದೆ ಹೋಗಲು ಸಾಧ್ಯವಾಗುವುದಿಲ್ಲ. ಇನ್ನೊಬ್ಬನಿಗಾಗಿ ಶೋಕಿಸುವವನು ಶೋಕಿಸುತ್ತಲೇ ಮರಣಹೊಂದಲು ಸಾಧ್ಯವಾಗುವುದಿಲ್ಲ. ಸಾಯಬೇಕಾದವರು ವಿಧಿ ನಿಯಮದಂತೆ ಸಾಯುತ್ತಾರೆ. ಲೋಕದಲ್ಲಿದು ಸ್ವಾಭಾವಿಕ ಸ್ಥಿತಿಯಾಗಿರುವಾಗ ನೀನು ಏತಕ್ಕಾಗಿ ವಿಲಪಿಸುವೆ?

**ಕಾಲಃ ಕರ್ಷತಿ ಭೂತಾನಿ ಸರ್ವಾಣಿ ವಿವಿಧಾನ್ಯುತ ।**
**ನ ಕಾಲಸ್ಯ ಪ್ರಿಯಃ ಕಶ್ಚಿನ್ನ ದ್ವೇಷ್ಯಃ ಕುರುಸತ್ತಮ ॥೮॥**

ಕುರುಸತ್ತಮನೇ! ಕಾಲವು ಅನೇಕವಿಧವಾದ ಎಲ್ಲ ಪ್ರಾಣಿಗಳನ್ನೂ ಆಕರ್ಷಿಸಿ ತನ್ನ ದವಡೆಯೊಳಕ್ಕೆ ಹಾಕಿಕೊಳ್ಳುತ್ತಲೇ ಇರುತ್ತದೆ. ಕಾಲನಿಗೆ ಪ್ರಿಯನಾದವನಾಗಲೀ–ವೈರಿಯಾದವನಾಗಲೀ ಯಾರೂ ಇರುವುದಿಲ್ಲ. ಎಲ್ಲರನ್ನೂ ಸಮದೃಷ್ಟಿಯಿಂದಲೇ ಅವನು ಕಾಣುತ್ತಾನೆ.

**ಯಥಾ ವಾಯುಸ್ತೃಣಾಗ್ರಾಣಿ ಸಂವರ್ತಯತಿ ಸರ್ವಶಃ ।**
**ತಥಾ ಕಾಲವಶಂ ಯಾನ್ತಿ ಭೂತಾನಿ ಭರತರ್ಷಭ ॥೯॥**

ಯಾವ ರೀತಿಯಲ್ಲಿ ಗಾಳಿಯು ಹುಲ್ಲಿನ ಅಗ್ರಭಾಗಗಳನ್ನು ಇತ್ತಕಡೆಯಿಂದ ಅತ್ತಕಡೆಗೂ–ಅತ್ತಕಡೆಯಿಂದ ಇತ್ತಕಡೆಗೂ ಹಾರಾಡಿಸು

ವುದೋ–ಅದೇ ರೀತಿಯಲ್ಲಿ ಎಲ್ಲ ಪ್ರಾಣಿಗಳೂ ಕಾಲದ ಅಧೀನಕ್ಕೆ ಸಿಕ್ಕಿ ಅಲ್ಲಿಂದಿಲ್ಲಿಗೂ-ಇಲ್ಲಿಂದಲ್ಲಿಗೂ ಹೊಯ್ದಾಡುತ್ತಿರುತ್ತವೆ.

**ಏಕಸಾರ್ಥಪ್ರಯಾತಾನಾಂ ಸರ್ವೇಷಾಂ ತತ್ರ ಗಾಮಿನಾಮ್ ।**
**ಯಸ್ಯ ಕಾಲಃ ಪ್ರಯಾತ್ಯಗ್ರೇ ತತ್ರ ಕಾ ಪರಿದೇವನಾ ॥೧೦॥**

ಜೊತೆಯಲ್ಲಿಯೇ ಸಂಸಾರಯಾತ್ರೆಯನ್ನು ಮಾಡುವ ಎಲ್ಲರೂ ಒಂದು ದಿನ ಪರಲೋಕಕ್ಕೆ ಹೋಗಲೇಬೇಕಾಗುತ್ತದೆ. ಹಾಗೆ ಒಟ್ಟಾಗಿ ಸೇರಿ ಸಂಸಾರನಡೆಸುತ್ತಿರುವವರಲ್ಲಿ ಯಾವನಿಗೆ ಕಾಲವು ಮೊದಲು ಸನ್ನಿಹಿತವಾಗುವುದೋ ಅವನು ಮೊದಲು ಪರಲೋಕಕ್ಕೆ ಹೋಗುತ್ತಾನೆ. ಉಳಿದವರೂ ಅನುಕ್ರಮವಾಗಿ ಪರಲೋಕಕ್ಕೆ ಹೋಗುತ್ತಲೇ ಇರುತ್ತಾರೆ. ಇದರಲ್ಲಿ ಶೋಕಿಸಬೇಕಾದ ವಿಷಯವೇನಿದೆ?

**ನ ಚಾಪ್ಯೇತಾನ್ಹತಾನ್ಯುದ್ಧೇ ರಾಜಞ್ಶೋಚಿತುಮರ್ಹಸಿ ।**
**ಪ್ರಮಾಣಂ ಯದಿ ಶಾಸ್ತ್ರಾಣಿ ಗತಾಸ್ತೇ ಪರಮಾಂ ಗತಿಮ್ ॥೧೧॥**

ಯುದ್ಧದಲ್ಲಿ ಹತರಾಗಿರುವ ಈ ವೀರರ ಸಲುವಾಗಿ ನೀನು ದುಃಖಪಡಲೇಬಾರದು. ನಿನಗೆ ಶಾಸ್ತ್ರಗಳೇನಾದರೂ ಪ್ರಮಾಣಭೂತ ಗಳಾಗಿದ್ದರೆ ಈ ಯುದ್ಧದಲ್ಲಿ ಮಡಿದಿರುವ ವೀರರೆಲ್ಲರೂ ಶ್ರೇಷ್ಠವಾದ ಶಾಸ್ತ್ರದೃಷ್ಟಿಯಿಂದ ಸದ್ಗತಿಯನ್ನೇ ಪಡೆದಿರುತ್ತಾರೆ.

**ಸರ್ವೇ ಸ್ವಾಧ್ಯಾಯವನ್ತೋ ಹಿ ಸರ್ವೇ ಚ ಚರಿತವ್ರತಾಃ ।**
**ಸರ್ವೇ ಚಾಭಿಮುಖಾಃ ಕ್ಷೀಣಾಸ್ತತ್ರ ಕಾ ಪರಿದೇವನಾ ॥೧೨॥**

ಎಲ್ಲರೂ ವೇದಾಧ್ಯಯನವನ್ನು ಮಾಡಿದ್ದರು. ಎಲ್ಲರೂ ವ್ರತಾನುಷ್ಠಾನಗಳೆಲ್ಲವನ್ನೂ ಮುಗಿಸಿದ್ದರು. ಎಲ್ಲರೂ ಯುದ್ಧದಲ್ಲಿ ಶತ್ರುಗಳಿಗೆ ಅಭಿಮುಖರಾಗಿಯೇ ಮರಣಹೊಂದಿರತಕ್ಕವರು. ಇಂತಹವರ ವಿಷಯದಲ್ಲಿ ವಿಲಪಿಸಬೇಕಾದ ಕಾರಣವೇನಿದೆ?

**ಅದರ್ಶನಾದಾಪತಿತಾಃ ಪುನಶ್ಚಾದರ್ಶನಂ ಗತಾಃ ।**
**ನೈತೇ ತವ ನ ತೇಷಾಂ ತ್ವಂ ತತ್ರ ಕಾ ಪರಿದೇವನಾ ॥೧೩॥**

ಕಣ್ಣಿಗೆ ಕಾಣಿಸದೇ ಇರುವ ಕಡೆಯಿಂದ ಬಂದಿದ್ದ ಅವರು ಪುನಃ ಕಣ್ಣಿಗೆ ಕಾಣಿಸದೇ ಇರುವ ಕಡೆಗೇ ಹೊರಟುಹೋದರು. ಈಗ ಅವರು ನಿನ್ನವರೂ ಅಲ್ಲ. ನೀನು ಅವರಿಗೆ ಸಂಬಂಧಿಸಿದವನೂ ಅಲ್ಲ. ಹೀಗಿರುವಾಗ ಶೋಕಿಸುವ ವಿಷಯವೆಲ್ಲಿದೆ?

**ಹತೋಽಪಿ ಲಭತೇ ಸ್ವರ್ಗಂ ಜಿತ್ವಾ ಚ ಲಭತೇ ಯಶಃ ।**
**ಉಭಯಂ ನೋ ಬಹುಗುಣಂ ನಾಸ್ತಿ ನಿಷ್ಫಲತಾ ರಣೇ ॥೧೪॥**

ಯುದ್ಧದಲ್ಲಿ ಹತನಾದರೆ ಸ್ವರ್ಗವನ್ನು ಹೊಂದುತ್ತಾನೆ. ಯುದ್ಧದಲ್ಲಿ ಶತ್ರುಗಳನ್ನು ಕೊಂದು ವಿಜಯಿಯಾದರೆ ಯಶಸ್ಸನ್ನು ಗಳಿಸುತ್ತಾನೆ. ಈ ಎರಡೂ ನಮಗೆ ಲಾಭದಾಯಕವೇ ಆಗಿದೆ. ಆದುದರಿಂದ ಯುದ್ಧವೆಂದಿಗೂ ನಿಷ್ಫಲವಾಗುವುದಿಲ್ಲ.

**ತೇಷಾಂ ಕಾಮದುಘಾಲ್ಲೋಕಾನಿನ್ದ್ರಃ ಸಂಕಲ್ಪಯಿಷ್ಯತಿ ।**
**ಇನ್ದ್ರಸ್ಯಾತಿಥಯೋ ಹ್ಯೇತೇ ಭವನ್ತಿ ಭರತರ್ಷಭ ॥೧೫॥**

ಯುದ್ಧದಲ್ಲಿ ಮರಣಹೊಂದಿದ ವೀರರಿಗೆ ಸಕಲವಿಧವಾದ ಕಾಮನೆಗಳನ್ನೂ ಪೂರೈಸಿಕೊಡುವ ಲೋಕಗಳನ್ನು ದೇವಾಧಿಪತಿಯಾದ ಇಂದ್ರನೇ ಸಿದ್ಧಮಾಡಿಕೊಡುತ್ತಾನೆ. ಅವರೆಲ್ಲರೂ ಇಂದ್ರನ ಅತಿಥಿಗಳೇ ಆಗುತ್ತಾರೆ.

**ನ ಯಜ್ಞೈರ್ದಕ್ಷಿಣಾವದ್ಭಿರ್ನ ತಪೋಭಿರ್ನ ವಿದ್ಯಯಾ ।**
**ಸ್ವರ್ಗಂ ಯಾನ್ತಿ ತಥಾ ಮರ್ತ್ಯಾ ಯಥಾ ಶೂರಾ ರಣೇ ಹತಾಃ ॥೧೬॥**

ಯುದ್ಧದಲ್ಲಿ ಹತರಾದ ಶೂರರು ಸ್ವರ್ಗವನ್ನು ಪಡೆಯುವ ರೀತಿಯಲ್ಲಿ (ಪಡೆಯುವಷ್ಟು ಸುಲಭವಾಗಿ) ಬಹುದಕ್ಷಿಣಾಕವಾದ ಯಜ್ಞಗಳಿಂದಾಗಲೀ, ತಪಸ್ಸುಗಳಿಂದಾಗಲೀ, ಅಧ್ಯಯನಗಳಿಂದಾಗಲೀ–ಮನುಷ್ಯರು ಸ್ವರ್ಗವನ್ನು ಪಡೆದುಕೊಳ್ಳಲಾರರು.

**ಶರೀರಾಗ್ನಿಷು ಶೂರಾಣಾಂ ಜುಹುವುಸ್ತೇ ಶರಾಹುತೀಃ ।**
**ಹೂಯಮಾನಾಞ್ಶರಾಂಶ್ಚೈವ ಸೇಹುಸ್ತೇಜಸ್ವಿನೋ ಮಿಥಃ ॥೧೭॥**

ಶೂರರಾದವರ ಶರೀರಗಳೆಂಬ ಅಗ್ನಿಗಳಲ್ಲಿ ಅವರ ಶತ್ರುಗಳು ಬಾಣ

ಗಳೆಂಬ ಆಹುತಿಗಳನ್ನು ಹಾಕುತ್ತಿರುತ್ತಾರೆ. ತೇಜಸ್ವಿಗಳಾದ ವೀರರು ಒಬ್ಬರು ಮತ್ತೊಬ್ಬರ ಶರೀರಾಗ್ನಿಗಳಲ್ಲಿ ಹೋಮಮಾಡುವ ಬಾಣಗಳ ಪ್ರಹಾರಗಳನ್ನು ಸಹಿಸಿಕೊಳ್ಳುತ್ತಾರೆ.

ಮಹಾರಾಜ! ಈ ಕಾರಣಗಳಿಂದ ನಿನಗೆ ನಾನು ಸ್ಪಷ್ಟವಾಗಿ ಹೇಳುತ್ತೇನೆ. ಕ್ಷತ್ರಿಯನಾದವನಿಗೆ ಶ್ರೇಷ್ಠವಾದ ಸ್ವರ್ಗದ ಹಾದಿಯನ್ನು ಹಿಡಿದು ಹೋಗಲು ಯುದ್ಧಮಾಡುವುದಕ್ಕಿಂತಲೂ ಉತ್ತಮವಾದ ಮತ್ತೊಂದು ಸಾಧನವೇ ಇರುವುದಿಲ್ಲ. ನಿನ್ನ ಮಕ್ಕಳೂ, ಮೊಮ್ಮಕ್ಕಳೂ, ಸುಹೃದರೂ ಮತ್ತು ಬಂಧುಗಳೂ ಮಹಾತ್ಮರಾದ ಕ್ಷತ್ರಿಯವೀರರಾಗಿದ್ದರು. ಮಹಾಶೂರ ರಾಗಿದ್ದರು. ಯುದ್ಧಕ್ಕೆ ಅಲಂಕಾರಪ್ರಾಯರಾಗಿದ್ದರು. ಅವರೆಲ್ಲರೂ ತಮ್ಮ ಮಹತ್ತರವಾದ ಆಸೆ-ಆಕಾಂಕ್ಷೆಗಳಿಗೆ ಅನುಗುಣವಾದ ಉತ್ತಮಲೋಕಗಳಿಗೆ ಹೋಗಿರುತ್ತಾರೆ. ಅಂತಹವರ ವಿಷಯದಲ್ಲಿ ದುಃಖಪಡುವುದು ಸರ್ವಥಾ ಯೋಗ್ಯವಲ್ಲ. ಮಹಾರಾಜ! ಈ ಸಮಯದಲ್ಲಿ ಬೇರೆಯವರಾರೂ ನಿನ್ನನ್ನು ಸಮಾಧಾನಪಡಿಸಲಾರರು. ನೀನೇ ನಿನ್ನನ್ನು ಸಮಾಧಾನಪಡಿಸಿಕೊಳ್ಳ ಬೇಕಾಗಿದೆ. ದುಃಖಪಡಬೇಡ. ಈ ಸಮಯದಲ್ಲಿ ಶೋಕಾಭಿಭೂತನಾಗಿ ಶರೀರತ್ಯಾಗಮಾಡುವುದು ಸರ್ವಾತ್ಮನಾ ಯೋಗ್ಯವಾಗಿ ಕಾಣುವುದಿಲ್ಲ.

**ಮಾತಾಪಿತೃಸಹಸ್ರಾಣಿ ಪುತ್ರದಾರಶತಾನಿ ಚ ।**
**ಸಂಸಾರೇಷ್ವನುಭೂತಾನಿ ಕಸ್ಯ ತೇ ಕಸ್ಯ ವಾ ವಯಮ್ ॥೨೦॥**

ನಾವೆಲ್ಲರೂ ಈ ಸಂಸಾರಗಳಲ್ಲಿ ಅನೇಕಾನೇಕಜನ್ಮಗಳನ್ನು ಪಡೆದು ಸಾವಿರಾರು ತಾಯಿ-ತಂದೆಗಳನ್ನೂ, ನೂರಾರು ಮಕ್ಕಳನ್ನೂ, ನೂರಾರು ಪತ್ನಿಯರನ್ನೂ ಪಡೆದುಕೊಂಡಿದ್ದೆವು. ಆದರೆ ಇಂದು ಅವರು ಯಾರಿಗೆ ಸಂಬಂಧಪಟ್ಟವರು? ನಾವು ಯಾರಿಗೆ ಸಂಬಂಧಿಸಿದವರು? (ಇದುವರೆಗೆ ನಾವು ಎಷ್ಟೋ ಜನ್ಮಗಳನ್ನು ತಾಳಿದ್ದೇವೆ. ಎಷ್ಟೋ ಮಂದಿ ತಾಯಿ-ತಂದೆ ಗಳಿಗೆ ಮಕ್ಕಳಾಗಿದ್ದೇವೆ. ಎಷ್ಟೋ ಮಂದಿ ಮಕ್ಕಳಿಗೆ ತಂದೆ-ತಾಯಿಯ ರಾಗಿದ್ದೇವೆ. ಎಷ್ಟೋ ಮಂದಿ ಪತ್ನಿಯರಿಗೆ ಪತಿಗಳಾಗಿದ್ದೇವೆ. ಯಾವ ಜನ್ಮದಲ್ಲಿ ಯಾರಿಗೆ ತಂದೆ-ತಾಯಿಗಳಾಗಿದ್ದೆವು? ಯಾರಿಗೆ ಮಕ್ಕಳಾಗಿ

ದ್ದೆವು? ಯಾರಿಗೆ ಪತಿಗಳಾಗಿದ್ದೆವು?–ಎಂಬ ಅರಿವು ನಮಗಿಲ್ಲ. ಅವರು ನಮ್ಮವರೂ ಆಗಿಲ್ಲ. ಈ ಜನ್ಮದಲ್ಲಿಯೂ ಪುತ್ರ-ಪೌತ್ರ-ಬಂಧು-ಮಿತ್ರರನೇಕರಿದ್ದರು. ಅವರೆಲ್ಲರೂ ಇರುವವರೆಗೆ ನಮಗೆ ಸಂಬಂಧಿಸಿದವರೇ ಹೊರತು ಗತಿಸಿದನಂತರ ಅವರಿಗೂ ನಮಗೂ ಯಾವ ಸಂಬಂಧವೂ ಇಲ್ಲ. ಇದು ಹೀಗೆಯೇ ನಡೆದುಕೊಂಡು ಹೋಗುತ್ತಿರುತ್ತದೆ.)

**ಶೋಕಸ್ಥಾನಸಹಸ್ರಾಣಿ ಭಯಸ್ಥಾನಶತಾನಿ ಚ ।**
**ದಿವಸೇ ದಿವಸೇ ಮೂಢಮಾವಿಶನ್ತಿ ನ ಪಣ್ಡಿತಮ್ ॥೨೨॥**

ಶೋಕಪಡಲು ಸಾವಿರಾರು ಕಾರಣಗಳಿರುತ್ತವೆ. ಭಯಪಡಲೂ ನೂರಾರು ಕಾರಣಗಳಿರುತ್ತವೆ. ಈ ಶೋಕ-ಭಯಗಳು ಮೂಢನಾದವನನ್ನು ಮಾತ್ರವೇ ಪ್ರತಿನಿತ್ಯವೂ ಬಾಧೆಪಡಿಸುತ್ತಲೇ ಇರುತ್ತವೆ. ಆದರೆ ಇವು ವಿದ್ವಾಂಸನ ಹತ್ತಿರಕ್ಕೂ ಸುಳಿಯುವುದಿಲ್ಲ.

**ನ ಕಾಲಸ್ಯ ಪ್ರಿಯಃ ಕಶ್ಚಿನ್ನ ದ್ವೇಷ್ಯಃ ಕುರುಸತ್ತಮ ।**
**ನ ಮಧ್ಯಸ್ಥಃ ಕ್ವಚಿತ್ಕಾಲಃ ಸರ್ವಂ ಕಾಲಃ ಪ್ರಕರ್ಷತಿ ॥೨೩॥**

ಕುರುಶ್ರೇಷ್ಠನೇ! ಕಾಲನಿಗೆ ಪ್ರಿಯನಾದವನೂ ಇಲ್ಲ. ವೈರಿಯೂ ಇಲ್ಲ. ಉದಾಸೀನನೂ ಇಲ್ಲ. ಕಾಲನು ಪಕ್ಷಪಾತವಿಲ್ಲದೇ ಎಲ್ಲರನ್ನೂ ತನ್ನ ಕಡೆಗೆ ಬಲಾತ್ಕಾರದಿಂದ ಸೆಳೆದುಕೊಳ್ಳುತ್ತಾನೆ.

**ಕಾಲಃ ಪಚತಿ ಭೂತಾನಿ ಕಾಲಃ ಸಂಹರತೇ ಪ್ರಜಾಃ ।**
**ಕಾಲಃ ಸುಪ್ತೇಷು ಜಾಗರ್ತಿ ಕಾಲೋ ಹಿ ದುರತಿಕ್ರಮಃ ॥೨೪॥**

ಕಾಲವು ಪ್ರಾಣಿಗಳನ್ನು ಪಕ್ವಗೊಳಿಸುತ್ತದೆ. ಕಾಲವು ಪ್ರಜೆಗಳನ್ನು ಸಂಹಾರಮಾಡುತ್ತದೆ. ಎಲ್ಲರೂ ಮಲಗಿರುವಾಗಲೂ ಕಾಲವು ಎಚ್ಚರಗೊಂಡೇ ಇರುತ್ತದೆ. ಆದುದರಿಂದ ಕಾಲವು ಅನತಿಕ್ರಮಣೀಯವಾದುದು.

**ಅನಿತ್ಯಂ ಯೌವನಂ ರೂಪಂ ಜೀವಿತಂ ದ್ರವ್ಯಸಂಚಯಃ ।**
**ಆರೋಗ್ಯಂ ಪ್ರಿಯಸಂವಾಸೋ ಗೃಧ್ಯೇದೇಷು ನ ಪಣ್ಡಿತಃ ॥೨೫॥**

ರೂಪ, ಯೌವನ, ಜೀವನ, ಧನಸಂಗ್ರಹ, ಆರೋಗ್ಯ, ಪ್ರಿಯಜನ

ರೊಡನೆ ಸಹವಾಸ–ಇವುಗಳೆಲ್ಲವೂ ಅನಿತ್ಯವಾದುವುಗಳು. ಶಾಶ್ವತವಲ್ಲ. ಆದುದರಿಂದ ವಿದ್ವಾಂಸನಾದವನು ಇವುಗಳಲ್ಲಿ ಆಸಕ್ತನಾಗಬಾರದು.

ನ ಜಾನಪದಿಕಂ ದುಃಖಮೇಕಃ ಶೋಚಿತುಮರ್ಹಸಿ ।
ಅಪ್ಯಭಾವೇನ ಯುಜ್ಯೇತ ತಚ್ಚಾಸ್ಯ ನ ನಿವರ್ತತೇ ॥೨೬॥

ದೇಶಕ್ಕೇ ಒದಗಿಬಂದಿರುವ ದುಃಖವನ್ನು ನಿನ್ನೊಬ್ಬನ ದುಃಖವೆಂದು ತಿಳಿದು ಶೋಕಿಸುವುದು ಯೋಗ್ಯವಾಗಿ ಕಾಣುವುದಿಲ್ಲ. (ಹಾಗೆ ಶೋಕಪಡುವುದರಿಂದ ಪ್ರಯೋಜನವೂ ಇಲ್ಲ.) ಶೋಕಿಸುತ್ತಲೇ ಮರಣ ಹೊಂದಿದರೂ ಆತನ ಶೋಕವು ದೂರವಾಗುವುದಿಲ್ಲ.

ಅಶೋಚನ್ಪ್ರತಿಕುರ್ವೀತ ಯದಿ ಪಶ್ಯೇತ್ಪರಾಕ್ರಮಮ್ ।
ಭೈಷಜ್ಯಮೇತದ್ದುಃಖಸ್ಯ ಯದೇತನ್ನಾನುಚಿನ್ತಯೇತ್ ।
ಚಿನ್ತ್ಯಮಾನಂ ಹಿ ನ ವ್ಯೇತಿ ಭೂಯಶ್ಚಾಪಿ ಪ್ರವರ್ಧತೇ ॥೨೭॥

ತನ್ನಲ್ಲೇನಾದರೂ ಪರಾಕ್ರಮವಿರುವುದಾದರೆ, ಆದುದಕ್ಕಾಗಿ ಶೋಕಿಸದೇ ಶೋಕದ ಮೂಲಕಾರಣವೇನೆಂಬುದನ್ನು ತಿಳಿದು ಅದರ ನಿವಾರಣೆಗಾಗಿ ಪ್ರಯತ್ನಿಸಬೇಕು. ಆಗಿಹೋದುದಕ್ಕಾಗಿ ಚಿಂತಿಸದಿರುವುದೇ ದುಃಖದ ಉಪಶಮನಕ್ಕೆ ಸಿದ್ಧೌಷಧವಾಗಿರುತ್ತದೆ. ಸದಾಕಾಲದಲ್ಲಿಯೂ ಚಿಂತಿಸುತ್ತಲೇ ಇರುವವನಿಗೆ ಆ ಚಿಂತೆಯು ಮತ್ತಷ್ಟು ಹೆಚ್ಚುತ್ತಿರುತ್ತದೆಯೇ ಹೊರತು ಚಿಂತಿಸುವುದರ ಕಾರಣದಿಂದ ಚಿಂತೆಯಾಗಲೀ ಶೋಕವಾಗಲೀ ಹೊರಟುಹೋಗುವುದಿಲ್ಲ.

ಅನಿಷ್ಟಸಮ್ಪ್ರಯೋಗಾಚ್ಚ ವಿಪ್ರಯೋಗಾತ್ಪ್ರಿಯಸ್ಯ ಚ ।
ಮಾನುಷಾ ಮಾನಸೈರ್ದುಃಖೈರ್ದಹನ್ತೇ ಚಾಲ್ಪಬುದ್ಧಯಃ ॥೨೮॥

ಮಂದಬುದ್ಧಿಗಳಾದ ಮನುಷ್ಯರು–ಅನಿಷ್ಟವಸ್ತುಗಳ ಸಂಬಂಧದಿಂದಲೂ, ಪ್ರಿಯವಸ್ತುಗಳ ವಿಯೋಗದಿಂದಲೂ–ಮಾನಸಿಕವಾದ ದುಃಖಕ್ಕೊಳಗಾಗಿ ಬೆಂದುಹೋಗುತ್ತಿರುತ್ತಾರೆ.

ನಾರ್ಥೋ ನ ಧರ್ಮೋ ನ ಸುಖಂ ಯದೇತದನುಶೋಚಸಿ ।
ನ ಚ ನಾಪೈತಿ ಕಾರ್ಯಾರ್ಥಾತ್ತ್ರಿವರ್ಗಾಚ್ಚೈವ ಹೀಯತೇ ॥೨೯॥

ನೀನೀಗ ದುಃಖಿಸುತ್ತಿರುವುದು ಅರ್ಥಸಾಧಕವೂ ಅಲ್ಲ; ಧರ್ಮಸಾಧಕವೂ ಅಲ್ಲ; ಸುಖಸಾಧಕವೂ ಅಲ್ಲ. ಹೀಗೆ ದುಃಖಿಸುತ್ತಲೇ ಇರುವುದರಿಂದ ಮನುಷ್ಯನು ತಾನು ಮಾಡಬೇಕಾಗಿರುವ ಕರ್ತವ್ಯದಿಂದ ಭ್ರಷ್ಟನಾಗುತ್ತಾನೆ.

***ಅನ್ಯಾಮನ್ಯಾಂ ಧನಾವಸ್ಥಾಂ ಪ್ರಾಪ್ಯ ವೈಶೇಷಿಕೀಂ ನರಾಃ ।**
**ಅಸನ್ತುಷ್ಟಾಃ ಪ್ರಮುಹ್ಯನ್ತಿ ಸನ್ತೋಷಂ ಯಾನ್ತಿ ಪಣ್ಡಿತಾಃ ॥೩೦॥**

ಧನದ ಭಿನ್ನ-ಭಿನ್ನ ಅವಸ್ಥಾವಿಶೇಷಗಳನ್ನು ಹೊಂದಿ ಅಸಂತುಷ್ಟರಾದ ಮನುಷ್ಯರು ವಿಮೋಹಗೊಳ್ಳುತ್ತಾರೆ. ಆದರೆ ಪಂಡಿತರಾದವರು ಸಂತೋಷಪಡುತ್ತಾರೆ.

**ಪ್ರಜ್ಞಯಾ ಮಾನಸಂ ದುಃಖಂ ಹನ್ಯಾಚ್ಛಾರೀರಮೌಷಧೈಃ ।**
**ಏತದ್ವಿಜ್ಞಾನಸಾಮರ್ಥ್ಯಂ ನ ಬಾಲೈಃ ಸಮತಾಮಿಯಾತ್ ॥೩೧॥**

ಮಾನಸಿಕವಾದ ದುಃಖವನ್ನು (ಆಧಿಯನ್ನು) ಪ್ರಜ್ಞೆಯಿಂದ– ವಿಚಾರ ಸಾಮರ್ಥ್ಯದಿಂದ ಪರಿಹರಿಸಿಕೊಳ್ಳಬೇಕು. ಶಾರೀರಕವಾದ ದುಃಖವನ್ನು (ವ್ಯಾಧಿಯನ್ನು) ಔಷಧಗಳಿಂದ ಹೋಗಲಾಡಿಸಿಕೊಳ್ಳಬೇಕು. ಇದು ವಿಜ್ಞಾನದ (ವಿಶೇಷಜ್ಞಾನದ) ಶಕ್ತಿಯಾಗಿದೆ. ಹೀಗೆ ಮಾಡುವುದನ್ನು ಬಿಟ್ಟು ಬಾಲಕರೊಡನೆ ಸಮತ್ವವನ್ನು ಹೊಂದಬಾರದು. (ಅವಿವೇಕಿಗಳಾಗ ಬಾರದು.)

**ಶಯಾನಂ ಚಾನುಶೇತೇ ಹಿ ತಿಷ್ಠನ್ತಂ ಚಾನುತಿಷ್ಠತಿ ।**
**ಅನುಧಾವತಿ ಧಾವನ್ತಂ ಕರ್ಮ ಪೂರ್ವಕೃತಂ ನರಮ್ ॥೩೨॥**

ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮವು ಮಲಗಿರುವ ಮನುಷ್ಯನ

---

*ಧನದ ಭಿನ್ನ-ಭಿನ್ನ ಅವಸ್ಥೆಗಳೆಂದರೆ : ಧನಾಗಮ-ಧನನಾಶಗಳು ; ರಾಜ್ಯಲಾಭ-ರಾಜ್ಯನಷ್ಟಗಳು ; ಇಷ್ಟಸಂಗ-ಪ್ರಿಯವಿಯೋಗಗಳು–ಇತ್ಯಾದಿಗಳಿಂದ ತೃಪ್ತಿಯಿಲ್ಲದ ಮನುಷ್ಯನು ಭ್ರಾಂತನಾಗುತ್ತಾನೆ. ಸಂಪಾದಿಸಿದ ಐಶ್ವರ್ಯವು ಹಾಳಾಗಿಹೋದರೆ ಅವನಿಗೆ ಆಕಾಶವೇ ಕಳಚಿಬಿದ್ದಂತಾಗುತ್ತದೆ. ಆದರೆ ಧನಾಗಮ-ಧನವಿನಾಶಗಳೆರಡೂ

ಜೊತೆಯಲ್ಲಿಯೇ ಮಲಗಿರುತ್ತದೆ. ನಿಂತಿರುವ ಮನುಷ್ಯನ ಜೊತೆಯಲ್ಲಿಯೇ ನಿಂತಿರುತ್ತದೆ. ಓಡಿಹೋಗುತ್ತಿರುವವನ ಜೊತೆಯಲ್ಲಿಯೇ ಓಡಿಹೋಗುತ್ತಲೂ ಇರುತ್ತದೆ. (ಅರ್ಥಾತ್ ಹಿಂದೆ ಮಾಡಿದ ಪಾಪಕರ್ಮದ ಫಲವೋ ಅಥವಾ ಪುಣ್ಯಕರ್ಮದ ಫಲವೋ–ಮನುಷ್ಯನನ್ನು ಯಾವುದೇ ಕಾರಣದಿಂದಲೂ ಯಾವಾಗಲೂ ಬಿಟ್ಟುಹೋಗುವುದಿಲ್ಲ. ಕರ್ಮದ ಫಲವು ಆಗರ್ಭವಾಗಿಯೇ ಸೇರಿಬರುತ್ತದೆ. ಆ ಪುಣ್ಯ-ಪಾಪಕರ್ಮಗಳ ಫಲವನ್ನೇ ಮನುಷ್ಯನು ಈ ಜನ್ಮದಲ್ಲಿ ಅನುಭವಿಸುತ್ತಾನೆ.)

**ಯಸ್ಯಾಂ ಯಸ್ಯಾಮವಸ್ಥಾಯಾಂ ಯತ್ಕರೋತಿ ಶುಭಾಶುಭಮ್ ।**
**ತಸ್ಯಾಂ ತಸ್ಯಾಮವಸ್ಥಾಯಾಂ ತತ್ಫಲಂ ಸಮುಪಾಶ್ನುತೇ ॥೩೩॥**

ಮನುಷ್ಯನು ತನ್ನ ಹಿಂದಿನ ಜನ್ಮದಲ್ಲಿ ಯಾವ-ಯಾವ ಅವಸ್ಥೆಯಲ್ಲಿ ಯಾವ-ಯಾವ ಶುಭಕರ್ಮವನ್ನೋ ಅಶುಭಕರ್ಮವನ್ನೋ ಮಾಡಿರುತ್ತಾನೆಯೋ–ಈ ಜನ್ಮದಲ್ಲಿ ಆಯಾ ಅವಸ್ಥೆಗಳಲ್ಲಿದ್ದಾಗಲೇ ಆಯಾ ಶುಭಾಶುಭಕರ್ಮಗಳ ಫಲಗಳನ್ನು ಅನುಭವಿಸುತ್ತಾನೆ. (ಹಿಂದಿನ ಜನ್ಮದಲ್ಲಿ ಯುವಕನಾಗಿದ್ದಾಗ ಪಾಪಕರ್ಮವನ್ನು ಮಾಡಿದ್ದರೆ ಈ ಜನ್ಮದಲ್ಲಿ ಯೌವನಾವಸ್ಥೆಗೆ ಬಂದಾಗಲೇ ಆ ಪಾಪಕರ್ಮದ ಫಲವನ್ನು ಅನುಭವಿಸುತ್ತಾನೆ.)

**ಯೇನ ಯೇನ ಶರೀರೇಣ ಯದ್ಯತ್ಕರ್ಮ ಕರೋತಿ ಯಃ ।**
**ತೇನ ತೇನ ಶರೀರೇಣ ತತ್ಫಲಂ ಸಮುಪಾಶ್ನುತೇ ॥೩೪॥**

ಮನುಷ್ಯನು ಯಾವ-ಯಾವ ಶರೀರದಿಂದ ಯಾವ-ಯಾವ ಶುಭಾಶುಭಕರ್ಮಗಳನ್ನು ಮಾಡಿರುತ್ತಾನೆಯೋ–ಆಯಾಯಾ ಶರೀರದಿಂದಲೇ ಅವನು ಆಯಾ ಶುಭಾಶುಭಕರ್ಮಗಳ ಫಲವನ್ನು ಅನುಭವಿಸುತ್ತಾನೆ.

**ಆತ್ಮೈವ ಹ್ಯಾತ್ಮನೋ ಬನ್ಧುರಾತ್ಮೈವ ರಿಪುರಾತ್ಮನಃ ।**
**ಆತ್ಮೈವ ಹ್ಯಾತ್ಮನಃ ಸಾಕ್ಷೀ ಕೃತಸ್ಯಾಪಕೃತಸ್ಯ ಚ ॥೩೫॥**

---

ವಿಧಿವಿಹಿತವಾದುದೆಂದು ತಿಳಿದ ವಿದ್ವಾಂಸನು ಧನಾಗಮದಿಂದ ಆನಂದಿಸುವುದೂ ಇಲ್ಲ; ಧನದ ನಷ್ಟದಿಂದ ದುಃಖಿಸುವುದೂ ಇಲ್ಲ. ನಿತ್ಯಸಂತುಷ್ಟನಾಗಿ ಸಂತೋಷದಿಂದಲೇ ಇರುತ್ತಾನೆ.

ಮನುಷ್ಯನು ತನಗೆ ತಾನೇ ಬಂಧು ; ತನಗೆ ತಾನೇ ಶತ್ರು. (ತನಗೆ ಕೆಟ್ಟುದಾಗಲೀ, ಒಳ್ಳೆಯದಾಗಲೀ – ಇತರರನ್ನು ಅದಕ್ಕೆ ಕಾರಣರನ್ನಾಗಿ ಮಾಡಬಾರದು.) ತಾನು ಮಾಡಿದ ಒಳ್ಳೆಯ ಕೆಲಸಕ್ಕೆ ಅಥವಾ ಕೆಟ್ಟ ಕೆಲಸಕ್ಕೆ ತನಗೆ ತಾನೇ ಸಾಕ್ಷಿಭೂತನಾಗಿರುತ್ತಾನೆ. (ಒಬ್ಬನು ತಾನು ತಪ್ಪುಮಾಡಿಲ್ಲ– ಎಂದು ಬಾಯಲ್ಲಿ ಹೇಳಿಬಿಡಬಹುದು. ಆದರೆ ಅವನ ಅಂತರಾತ್ಮಕ್ಕೆ ತಾನು ತಪ್ಪುಮಾಡಿದವನೇ ಅಲ್ಲವೇ?–ಎಂಬುದು ತಿಳಿದೇ ಇರುತ್ತದೆ ಮತ್ತು ಪ್ರತಿಕ್ಷಣದಲ್ಲಿಯೂ ಸತ್ಯಾಂಶವೇ ಸೂಚಿಸುತ್ತಿರುತ್ತದೆ. ಆದರೆ ಮನುಷ್ಯನು ತಾತ್ಕಾಲಿಕವಾದ ಪ್ರಯೋಜನಕ್ಕಾಗಿ ತಾನು ಅಪರಾಧಿಯಾಗಿದ್ದರೂ ಆತ್ಮನಿಗೆ ದ್ರೋಹಬಗೆದು ಅಪರಾಧಿಯಲ್ಲ–ಎಂದು ಘೋಷಿಸುತ್ತಾನೆ.)

**ಶುಭೇನ ಕರ್ಮಣಾ ಸೌಖ್ಯಂ ದುಃಖಂ ಪಾಪೇನ ಕರ್ಮಣಾ ।**
**ಕೃತಂ ಭವತಿ ಸರ್ವತ್ರ ನಾಕೃತಂ ವಿದ್ಯತೇ ಕ್ವಚಿತ್ ॥೩೬॥**

ಒಳ್ಳೆಯ ಕೆಲಸಮಾಡುವುದರಿಂದ ಸೌಖ್ಯವುಂಟಾಗುತ್ತದೆ. ಕೆಟ್ಟ ಕೆಲಸ ಅಥವಾ ಪಾಪಕಾರ್ಯಮಾಡುವುದರಿಂದ ದುಃಖವುಂಟಾಗುತ್ತದೆ. ಮಾಡಿದ ಶುಭಾಶುಭಕರ್ಮಗಳಿಗೆ ಸರ್ವತ್ರ ಫಲವಿದ್ದೇ ಇದೆ. ಆದರೆ ಮಾಡದೇ ಇರುವ ಶುಭಾಶುಭಕರ್ಮಗಳಿಗೆ ಎಂದೂ ಯಾವ ಫಲಗಳೂ ಇರುವುದಿಲ್ಲ.

**ನ ಹಿ ಜ್ಞಾನವಿರುದ್ಧೇಷು ಬಹ್ವಪಾಯೇಷು ಕರ್ಮಸು ।**
**ಮೂಲಘಾತಿಷು ಸಜ್ಜನ್ತೇ ಬುದ್ಧಿಮನ್ತೋ ಭವದ್ವಿಧಾಃ ॥೩೭॥**

ಧೃತರಾಷ್ಟ್ರಮಹಾರಾಜ! ನಿನ್ನಂತಹ ಬುದ್ಧಿವಂತರಾದ ಮನುಷ್ಯರು ಜ್ಞಾನಕ್ಕೆ ವಿರೋಧವಾದ, ವಿನಾಶಕರವಾದ, ಅನೇಕದೋಷಗಳಿಂದ ಯುಕ್ತವಾದ, ಶರೀರನಾಶಕವಾದ ಕರ್ಮಗಳಲ್ಲಿ ತೊಡಗುವುದಿಲ್ಲ."

೨ನೆಯ ಅಧ್ಯಾಯವು ಮುಗಿಯಿತು.

೩ನೆಯ ಅಧ್ಯಾಯ ಜಲಪ್ರದಾನಿಕಪರ್ವ (ಮುಂದುವರಿದಿದೆ.)

## ವಿದುರನು ಶರೀರದ ಅನಿತ್ಯತ್ವವನ್ನು ಪ್ರತಿಪಾದಿಸುತ್ತಾ ಶೋಕದಿಂದ ವಿಮುಕ್ತನಾಗುವಂತೆ ಧೃತರಾಷ್ಟ್ರನಿಗೆ ಸಲಹೆನೀಡಿದುದು

ವಿದುರನ ಉಪದೇಶವನ್ನು ಕೇಳಿದ ಬಳಿಕ ಧೃತರಾಷ್ಟ್ರನು ಹೇಳುತ್ತಾನೆ :

"ಮಹಾಪ್ರಾಜ್ಞನೇ! ನಿನ್ನ ಯುಕ್ತಿಯುಕ್ತವಾದ, ಧರ್ಮಸಮ್ಮತವಾದ ಸುಭಾಷಿತಗಳನ್ನು ಕೇಳಿದನಂತರ ನನ್ನ ಶೋಕವು ಬಹುಮಟ್ಟಿಗೆ ದೂರವಾಯಿತು. ಪುನಃ ನಿನ್ನಿಂದ ತಾತ್ತ್ವಿಕವಾದ ಇನ್ನೂ ಅನೇಕ ಸುಭಾಷಿತಗಳನ್ನು ಕೇಳುವ ಇಚ್ಛೆಯುಳ್ಳವನಾಗಿದ್ದೇನೆ.

**ಅನಿಷ್ಟಾನಾಂ ಚ ಸಂಸರ್ಗಾದಿಷ್ಟಾನಾಂ ಚ ವಿಸರ್ಜನಾತ್ ।**
**ಕಥಂ ಹಿ ಮಾನಸೈರ್ದುಃಖೈಃ ಪ್ರಮುಚ್ಯನ್ತೇ ತು ಪಣ್ಡಿತಾಃ ॥೨॥**

ಅನಿಷ್ಟಗಳ ಪ್ರಾಪ್ತಿಯಿಂದಲೂ–ಇಷ್ಟಗಳ ವಿಯೋಗದಿಂದಲೂ ಉಂಟಾಗಬಹುದಾದ ಮಾನಸಿಕದುಃಖಗಳಿಂದ ವಿದ್ವಾಂಸರಾದವರು ಹೇಗೆ ವಿಮುಕ್ತಿಹೊಂದುತ್ತಾರೆ?"

**ಯತೋ ಯತೋ ಮನೋ ದುಃಖಾತ್ಸುಖಾದ್ವಾ ವಿಪ್ರಮುಚ್ಯತೇ ।**
**ತತಸ್ತತೋ ನಿಯಮ್ಯೈತಚ್ಛಾನ್ತಿಂ ವಿನ್ದೇತ ವೈ ಬುಧಃ ॥೩॥**

"ಮಹಾರಾಜ! ವಿದ್ವಾಂಸನಾದವನು, ಯಾವ-ಯಾವ ಸಾಧನಗಳಿಂದ ಮನಸ್ಸು ದುಃಖ-ಸುಖಗಳಿಂದ ಬಿಡುಗಡೆಹೊಂದುತ್ತದೆಯೋ, ಆಯಾ ಸಾಧನಗಳಿಂದ ಮನಸ್ಸನ್ನು ನಿಯಮಗೊಳಿಸಿ ಶಾಂತಿಯನ್ನು ಪಡೆಯುತ್ತಾನೆ. (ಮಾನವನು ಸುಖ-ದುಃಖಗಳೆರಡನ್ನೂ ಸಮಾನವಾಗಿ ಕಾಣುವುದನ್ನು ಅಭ್ಯಾಸಮಾಡಬೇಕು. ಸುಖಬಂದಾಗ ಹಿಗ್ಗಬಾರದು. ಕಷ್ಟಬಂದಾಗ ಕುಗ್ಗಬಾರದು. ಹೀಗಿರುವುದನ್ನು ಅಭ್ಯಾಸಮಾಡಿದ ಮನುಷ್ಯನು ಚಿರಶಾಂತಿಯನ್ನು ಪಡೆಯುತ್ತಾನೆ.)

**ಅಶಾಶ್ವತಮಿದಂ ಸರ್ವಂ ಚಿನ್ತ್ಯಮಾನಂ ನರರ್ಷಭ ।**
**ಕದಲೀಸಂನಿಭೋ ಲೋಕಃ ಸಾರೋ ಹ್ಯಸ್ಯ ನ ವಿದ್ಯತೇ ॥೪॥**

ನರಶ್ರೇಷ್ಠನೇ! ವಿವೇಕಪೂರ್ಣವಾಗಿ ಚಿಂತಿಸಿದ್ದೇ ಆದರೆ ಈ ಸಮಸ್ತ ಪ್ರಪಂಚವೂ ಅಶಾಶ್ವತವೆಂಬುದು ಸ್ಪಷ್ಟವಾಗಿಯೇ ಕಾಣುತ್ತದೆ. ಈ ಲೋಕವು ಬಾಳೆಯ ಗಿಡದಂತೆ ಸಾರಹೀನವಾದುದು.*

**ಯದಾ ಪ್ರಾಜ್ಞಾಶ್ಚ ಮೂಢಾಶ್ಚ ಧನವನ್ತೋಽಥ ನಿರ್ಧನಾಃ ।**
**ಸರ್ವೇ ಪಿತೃವನಂ ಪ್ರಾಪ್ಯ ಸ್ವಪನ್ತಿ ವಿಗತಜ್ವರಾಃ ॥೫॥**

**ನಿರ್ಮಾಂಸೈರಸ್ಥಿಭೂಯಿಷ್ಠೈರ್ಗಾತ್ರೈಃ ಸ್ನಾಯುನಿಬನ್ಧನೈಃ ।**
**ಕಿಂ ವಿಶೇಷಂ ಪ್ರಪಶ್ಯನ್ತಿ ತತ್ರ ತೇಷಾಂ ಪರೇ ಜನಾಃ ॥೬॥**

**ಯೇನ ಪ್ರತ್ಯವಗಚ್ಛೇಯುಃ ಕುಲರೂಪವಿಶೇಷಣಮ್ ।**
**ಕಸ್ಮಾದನ್ಯೋನ್ಯಮಿಚ್ಛನ್ತಿ ವಿಪ್ರಲಬ್ಧಧಿಯಾ ನರಾಃ ॥೭॥**

ವಿದ್ವಾಂಸರು-ಮೂಢರು, ಐಶ್ವರ್ಯವಂತರು-ಬಡವರು–ಎಲ್ಲರೂ ಸಮಾನತೆಯಿಂದ (ಪ್ರಾಣವಾಯುವು ಹೊರಟುಹೋದನಂತರ) ಶ್ಮಶಾನವನ್ನು ಸೇರಿ ನಿಶ್ಚಿಂತರಾಗಿ ಮಲಗುತ್ತಾರೆ. (ಶ್ಮಶಾನಕ್ಕೆ ಹೋಗುವ ಶವಗಳಲ್ಲಿ ಐಶ್ವರ್ಯವಂತ-ಬಡವ, ವಿದ್ಯಾವಂತ-ಅವಿದ್ಯಾವಂತ, ಕೆಟ್ಟವ-ಒಳ್ಳೆಯವ–ಎಂಬ ಯಾವ ವಿಧವಾದ ವ್ಯತ್ಯಾಸವೂ ಇರುವುದಿಲ್ಲ.) ಶ್ಮಶಾನಕ್ಕೆ ಹೋಗುವ ಶವಗಳೆಲ್ಲವೂ ಮಾಂಸರಹಿತವಾಗಿರುತ್ತವೆ. ಮೂಳೆಗಳಿಂದ ಕೂಡಿದ ಗಾತ್ರವುಳ್ಳವುಗಳಾಗಿರುತ್ತವೆ. ಸ್ನಾಯುಗಳಿಂದ ಬಂಧಿತವಾಗಿರುತ್ತವೆ. ಹೀಗೆ ಶ್ಮಶಾನಕ್ಕೆ ಬರುವ ನೂರಾರು ಹೆಣಗಳಲ್ಲಿ ಇತರರು ಒಂದಕ್ಕೂ ಮತ್ತೊಂದಕ್ಕೂ ಯಾವ ವಿಶೇಷತೆಯನ್ನು ತಾನೇ ಕಾಣಬಲ್ಲರು? ಸತ್ತುಹೋಗಿ ಶ್ಮಶಾನಕ್ಕೆ ಬಂದಿರುವವನ ಕುಲ-ರೂಪಗಳನ್ನು ಯಾವುದರ ಮೂಲವಾಗಿ ಇತರರು ಅರ್ಥಮಾಡಿಕೊಳ್ಳಬಲ್ಲರು? (ಶ್ಮಶಾನಕ್ಕೆ ಹೋದ ಒಂದು ಶವಕ್ಕೂ ಮತ್ತೊಂದು ಶವಕ್ಕೂ ಯಾವ ವ್ಯತ್ಯಾಸವೂ ಇರುವುದಿಲ್ಲ. ಬದು

---

*ಬಾಳೆಯ ಕಂದಿನ ಪಟ್ಟೆಗಳನ್ನು ಸುಲಿಯುತ್ತಾ ಹೋದರೆ ಕಡೆಗೆ ಏನೂ ಉಳಿಯುವುದೇ ಇಲ್ಲ. ಈ ಅರ್ಥದಲ್ಲಿ ಬಾಳೆಯ ಗಿಡವನ್ನು ನಿದರ್ಶನವಾಗಿ ಕೊಟ್ಟಿರುತ್ತಾರೆ.

ಕಿರುವಾಗ ಇದ್ದ ಕುಲ-ರೂಪಗಳ ಕುರುಹೂ ಆ ಶವಗಳಲ್ಲಿ ಕಂಡುಬರುವುದಿಲ್ಲ. ಹೀಗಿರುವಾಗ ಮನುಷ್ಯರು ವಂಚನೆಯ ಬುದ್ಧಿಯಿಂದ ಕೂಡಿದವರಾಗಿ ಒಬ್ಬರು ಮತ್ತೊಬ್ಬರ ಐಶ್ವರ್ಯವನ್ನು ಕಸಿದುಕೊಳ್ಳಲು ಏಕೆ ಇಚ್ಛಿಸುತ್ತಾರೆ? (ಪ್ರಾಣಪಕ್ಷಿಯು ಹಾರಿಹೋದನಂತರ ತಾವು ಅನ್ಯಾಯದಿಂದ ಸಂಪಾದಿಸಿದ ಐಶ್ವರ್ಯವನ್ನು ಕೊಂಡುಹೋಗಲು ಸಾಧ್ಯವಿಲ್ಲದಿರುವಾಗ– ಯಾರಿಂದ ಐಶ್ವರ್ಯವನ್ನು ಕಸಿದುಕೊಂಡನೋ ಅವನಂತೆಯೇ ತಾನೂ ನಗ್ನನಾಗಿ ಈ ಲೋಕವನ್ನು ಬಿಟ್ಟುಹೋಗ ಬೇಕಾಗಿರುವಾಗ–ಒಬ್ಬನು ಮತ್ತೊಬ್ಬನನ್ನು ವಂಚಿಸಲು ಏಕೆ ಪ್ರಯತ್ನ ಮಾಡುತ್ತಾನೆಂಬುದೇ ಅರ್ಥವಾಗುವುದಿಲ್ಲ.)

**ಗೃಹಾಣೀವ ಹಿ ಮರ್ತ್ಯಾನಾಮಾಹುರ್ದೇಹಾನಿ ಪಣ್ಡಿತಾಃ ।**
**ಕಾಲೇನ ವಿನಿಯುಜ್ಯನ್ತೇ ಸತ್ತ್ವಮೇಕಂ ತು ಶಾಶ್ವತಮ್ ॥೮॥**

ಮನೆಗಳಂತೆಯೇ ಮನುಷ್ಯರ ಶರೀರಗಳೂ ಅಶಾಶ್ವತವೆಂದು ವಿದ್ವಾಂಸರು ಹೇಳುತ್ತಾರೆ. ಕಟ್ಟಿದ ಮನೆಗಳು ಹಲವಾರು ವರ್ಷಗಳು ಕಳೆದನಂತರ ಜೀರ್ಣವಾಗಿ ಬಿದ್ದುಹೋಗುವಂತೆ–ಮನುಷ್ಯರ ಶರೀರಗಳೂ ಕಾಲಾನುಕ್ರಮದಲ್ಲಿ ನಷ್ಟವಾಗಿ ಹೋಗುತ್ತವೆ. ಆದರೆ ಆ ಶರೀರಗಳಲ್ಲಿರುವ ಸತ್ತ್ವರೂಪವಾದ ಆತ್ಮವೊಂದೇ ಶಾಶ್ವತವಾದುದು.

**ಯಥಾ ಜೀರ್ಣಮಜೀರ್ಣಂ ವಾ ವಸ್ತ್ರಂ ತ್ಯಕ್ತ್ವಾ ತು ಪೂರುಷಃ ।**
**ಅನ್ಯದ್ರೋಚಯತೇ ವಸ್ತ್ರಮೇವಂ ದೇಹಾಃ ಶರೀರಿಣಾಮ್ ॥೯॥**

ಮನುಷ್ಯರು–ಬಟ್ಟೆಯು ಸಂಪೂರ್ಣವಾಗಿ ಹಳೆಯದಾಗಿರಲಿ, ಹಳೆಯದಾಗಿರದೇ ಇರಲಿ–ಮತ್ತೊಂದು ನೂತನವಸ್ತ್ರವನ್ನು ಉಡಲು ಇಚ್ಛೆಪಡುತ್ತಾರೆ. ದೇಹಧಾರಿಗಳ ಶರೀರಗಳೂ ವಸ್ತ್ರದ ರೂಪದಲ್ಲಿಯೇ ಇರುತ್ತವೆ. (ವೃದ್ಧನಾದ ಮನುಷ್ಯನೂ ಜೀರ್ಣವಾದ ತನ್ನ ಶರೀರವನ್ನು, ಜೀರ್ಣವಾದ ವಸ್ತ್ರವನ್ನು ಬದಲಾಯಿಸಲು ಇಚ್ಛಿಸುವಂತೆ, ಬದಲಾಯಿಸಲು ಇಚ್ಛೆಪಡುವುದಿಲ್ಲ. ಕಾರಣವೇನೆಂದರೆ : ಎಲ್ಲ ಮನುಷ್ಯರಿಗೂ ದೇಹವೇ ತಾನೆಂಬ ಬುದ್ಧಿಯು ರೂಢಮೂಲವಾಗಿರುತ್ತದೆ. ಆದುದರಿಂದ ವೃದ್ಧನಾದವನೂ ಸಾವಿಗಂಜುತ್ತಾನೆ. ಶರೀರತ್ಯಾಗಕ್ಕೆ ಸಿದ್ಧನಾಗಿರುವುದಿಲ್ಲ. ಆದರೆ

ಒಬ್ಬನು ಇಚ್ಛಿಸಲಿ ಅಥವಾ ಇಚ್ಛಿಸದಿರಲಿ – ಅಂಗಿಯ ರೂಪವಾದ ಒಂದು ಶರೀರವು ಕಳೆದುಹೋದನಂತರ ಆ ಜೀವನಿಗೆ ಅಂಗಿಯ ರೂಪವಾದ ಮತ್ತೊಂದು ನೂತನಶರೀರವು ಸಿದ್ಧವಾಗಿಯೇ ಇರುತ್ತದೆ. ಈ ರಹಸ್ಯವನ್ನು ಮನನಮಾಡಿಕೊಂಡವನು ಸಾವಿಗಾಗಿ ಅಂಜುವುದಿಲ್ಲ.)

**ವೈಚಿತ್ರವೀರ್ಯ ಪ್ರಾಪ್ಯಂ ಹಿ ದುಃಖಂ ವಾ ಯದಿ ವಾ ಸುಖಮ್ ।**
**ಪ್ರಾಪ್ನುವನ್ತೀಹ ಭೂತಾನಿ ಸ್ವಕೃತೇನೈವ ಕರ್ಮಣಾ ॥೧೦॥**

ವಿಚಿತ್ರವೀರ್ಯನಂದನನೇ! ದುಃಖ ಅಥವಾ ಸುಖಗಳನ್ನು ಪ್ರಾಣಿಗಳು, ಅವುಗಳೇ ಆಚರಿಸಿದ ಪಾಪ-ಪುಣ್ಯಕರ್ಮಗಳಿಂದ ಪಡೆದುಕೊಳ್ಳುತ್ತವೆ.

**ಕರ್ಮಣಾ ಪ್ರಾಪ್ಯತೇ ಸ್ವರ್ಗಃ ಸುಖಂ ದುಃಖಂ ಚ ಭಾರತ ।**
**ತತೋ ವಹತಿ ತಂ ಭಾರಮವಶಃ ಸ್ವವಶೋಽಪಿ ವಾ ॥೧೧॥**

ಧೃತರಾಷ್ಟ್ರ! ಮನುಷ್ಯನು ತಾನು ಮಾಡಿರುವ ದುಷ್ಕರ್ಮ- ಸತ್ಕರ್ಮಗಳ ಪರಿಣಾಮವಾಗಿ ನರಕ-ನಾಕಗಳನ್ನೂ, ದುಃಖ-ಸುಖಗಳನ್ನೂ ಪಡೆದುಕೊಳ್ಳುತ್ತಾನೆ. ಹಿಂದಿನ ಜನ್ಮದಲ್ಲಿ ಮಾಡಿದ ದುಷ್ಕರ್ಮ ಅಥವಾ ಸತ್ಕರ್ಮಗಳಿಗೆ ಅನುಸಾರವಾಗಿ ಮನುಷ್ಯನು ಸ್ವಾಧೀನನಾಗಿಯೇ ಆಗಲೀ, ಪರಾಧೀನನಾಗಿಯೇ ಆಗಲೀ–ಸುಖ-ದುಃಖಗಳ ಭಾರವನ್ನು ಭರಿಸಲೇಬೇಕಾಗುತ್ತದೆ.

**ಯಥಾ ಚ ಮೃಣ್ಮಯಂ ಭಾಣ್ಡಂ ಚಕ್ರಾರೂಢಂ ವಿಪದ್ಯತೇ ।**
**ಕಿಂಚಿತ್ಪ್ರಕ್ರಿಯಮಾಣಂ ವಾ ಕೃತಮಾತ್ರಮಥಾಪಿ ವಾ ॥೧೨॥**

**ಛಿನ್ನಂ ವಾಪ್ಯವರೋಪ್ಯನ್ತಮವತೀರ್ಣಮಥಾಪಿ ವಾ ।**
**ಆರ್ದ್ರಂ ವಾಪ್ಯಥವಾ ಶುಷ್ಕಂ ಪಚ್ಯಮಾನಮಥಾಪಿ ವಾ ॥೧೩॥**

**ಉತ್ತಾರ್ಯಮಾಣಮಾಪಾಕಾದುದ್ಧೃತಂ ಚಾಪಿ ಭಾರತ ।**
**ಅಥವಾ ಪರಿಭುಜ್ಯನ್ತಮೇವಂ ದೇಹಾಃ ಶರೀರಿಣಾಮ್ ॥೧೪॥**

ನಮ್ಮ ಶರೀರವು ಮಣ್ಣಿನ ಮಡಕೆಯಂತೆ. ಮಡಕೆಯನ್ನು ಮಾಡುವುದರಿಂದ ಮೊದಲ್ಗೊಂಡು ಅದನ್ನು ಉಪಯೋಗಿಸುವ ಪರ್ಯಂತವಾಗಿ ಒಂದೊಂದು ಹಂತದಲ್ಲಿಯೂ ಅದಕ್ಕೆ ವಿನಾಶವುಂಟಾಗಬಹುದಾಗಿದೆ.

ಕುಂಬಾರನು ಮಡಕೆಯನ್ನು ಮಾಡಲು ಚಕ್ರದ ಮೇಲೆ ಹದಮಾಡಿದ ಮಣ್ಣನ್ನಿರಿಸಿ ಚಕ್ರವನ್ನು ಒಂದೆರಡು ಸುತ್ತು ತಿರುಗಿಸುತ್ತಲೇ ಅದು ಬಿರುಕುಬಿಡಬಹುದು. ಅರ್ಧಾಕಾರವು ಬಂದ ಮೇಲೆ ಒಡೆದುಹೋಗ ಬಹುದು. ಸಂಪೂರ್ಣವಾಗಿ ಮಡಕೆಯ ಆಕಾರವು ಬಂದ ಮೇಲೆ ಒಡೆದು ಹೋಗಬಹುದು. ಮಡಕೆಯಾಗಿ ಚಕ್ರದಿಂದ ಮೇಲೆತ್ತುವಾಗ ಒಡೆದು ಹೋಗಬಹುದು. ಕೆಳಕ್ಕಿಡುವಾಗ ಒಡೆದುಹೋಗಬಹುದು. ಒಣಗಿದ ಮೇಲೂ ಸೀಳಿಹೋಗಬಹುದು. ಮಡಕೆಯನ್ನು ಬೇಯಿಸುವಾಗ ಒಡೆದು ಹೋಗಬಹುದು. ಬೇಯಿಸಿ ಮೇಲೆತ್ತುವಾಗಲೇ ಕೈಜಾರಿಬಿದ್ದು ಒಡೆದು ಹೋಗಬಹುದು. ಕಟ್ಟಕಡೆಯದಾಗಿ ಉಪಯೋಗಿಸುವಾಗಲೂ ಒಡೆದು ಹೋಗಬಹುದು. ಹಾಗೆಯೇ ದೇಹಧಾರಿಗಳ ಈ ಶರೀರಗಳೂ ಆಗಿವೆ.

**ಗರ್ಭಸ್ಥೋ ವಾ ಪ್ರಸೂತೋ ವಾಪ್ಯಥವಾ ದಿವಸಾನ್ತರಃ ।**
**ಅರ್ಧಮಾಸಗತೋ ವಾಪಿ ಮಾಸಮಾತ್ರಗತೋಽಪಿ ವಾ ॥೧೫॥**

**ಸಂವತ್ಸರಗತೋ ವಾಪಿ ದ್ವಿಸಂವತ್ಸರ ಏವ ವಾ ।**
**ಯೌವನಸ್ಥೋಥ ಮಧ್ಯಸ್ಥೋ ವೃದ್ಧೋ ವಾಪಿ ವಿಪದ್ಯತೇ ॥೧೬॥**

ಗರ್ಭಸ್ಥವಾಗಿದ್ದಾಗಲೇ ಸ್ರವಿಸಿಬಿಡಬಹುದು. ಹುಟ್ಟಿದೊಡನೆಯೇ ವಿನಾಶಹೊಂದಬಹುದು. ನಾಲ್ಕಾರು ದಿವಸಗಳು ಕಳೆದನಂತರ ವಿನಾಶ ಹೊಂದಬಹುದು. ಅರ್ಧಮಾಸವು ಕಳೆದನಂತರ ವಿನಾಶಹೊಂದಬಹುದು. ಮಾಸವು ತುಂಬಿದೊಡನೆಯೇ ವಿನಾಶವಾಗಬಹುದು. ವರ್ಷತುಂಬಿದ ನಂತರ ಅವಸಾನಹೊಂದಬಹುದು. ಎರಡು ವರ್ಷಗಳಾದನಂತರ ವಿನಾಶ ವಾಗಬಹುದು. ಯೌವನಾವಸ್ಥೆಯನ್ನು ಹೊಂದಿದಾಗ ಶರೀರವು ನಶಿಸಿ ಹೋಗಬಹುದು. ಮಧ್ಯವಯಸ್ಕನಾಗಿರುವಾಗ ಶರೀರವು ಬಿದ್ದುಹೋಗ ಬಹುದು. ವೃದ್ಧನಾದ ಮೇಲಾದರೂ ವಿನಾಶಹೊಂದಬಹುದು. ಒಟ್ಟಿನಲ್ಲಿ ಈ ಶರೀರಕ್ಕೆ ಮಡಕೆಯಂತೆ ಯಾವುದೇ ಸಮಯದಲ್ಲಾಗಲೀ ವಿನಾಶ ಹೊಂದುವ ಗುಣವಿರುವುದೇ ಹೊರತು ಶಾಶ್ವತವಾಗಿ ಉಳಿಯುವ ಗುಣವಿರುವುದಿಲ್ಲ.

**ಪ್ರಾಕ್ಕರ್ಮಭಿಸ್ತು ಭೂತಾನಿ ಭವನ್ತಿ ನ ಭವನ್ತಿ ಚ ।**
**ಏವಂ ಸಾಂಸಿದ್ಧಿಕೇ ಲೋಕೇ ಕಿಮರ್ಥಮನುತಪ್ಯಸೇ ॥೧೭॥**

ಪ್ರಾಣಿಗಳೆಲ್ಲವೂ ಅವುಗಳ ಹಿಂದಿನ ಕರ್ಮಕ್ಕೆ ಅನುಗುಣವಾಗಿ ಈ ಲೋಕದಲ್ಲಿ ಹುಟ್ಟಬಹುದು ಅಥವಾ ಹುಟ್ಟದೆಯೂ ಇರಬಹುದು. ಲೋಕದಲ್ಲಿ ಇಂತಹ ಸ್ಥಿತಿಯು ಸ್ವಾಭಾವಿಕವಾಗಿರುವಾಗ (ಪ್ರಕೃತಿಯ ನಿಯಮವೇ ಹೀಗಿರುವಾಗ ) ನೀನು ಏತಕ್ಕಾಗಿ ಪರಿತಪಿಸುವೆ?

**ಯಥಾ ತು ಸಲಿಲಂ ರಾಜನ್ಕ್ರೀಡಾರ್ಥಮನುಸಂತರತ್ ।**
**ಉನ್ಮಜ್ಜೇಚ್ಚ ನಿಮಜ್ಜೇಚ್ಚ ಕಿಂಚಿತ್ಸತ್ತ್ವಂ ನರಾಧಿಪ ॥೧೮॥**

**ಏವಂ ಸಂಸಾರಗಹನೇ ಉನ್ಮಜ್ಜನನಿಮಜ್ಜನೇ ।**
**ಕರ್ಮಭೋಗೇನ ಬಧ್ಯನ್ತೇ ಕ್ಲಿಶ್ಯನ್ತೇ ಚಾಲ್ಪಬುದ್ಧಯಃ ॥೧೯॥**

ಯಾವುದಾದರೂ ಪ್ರಾಣಿಯು ಅಥವಾ ಮನುಷ್ಯನು ಒಂದು ನದಿಯನ್ನು ವಿಹಾರಕ್ಕಾಗಿಯೇ ದಾಟಲಿಚ್ಛಿಸಿ ಈಜಿಕೊಂಡು ಹೋಗುತ್ತಿರುವಾಗ ಕೆಲವು ಸಮಯಗಳಲ್ಲಿ ಮುಳುಗಿಕೊಂಡೇ ಹೋಗುತ್ತಿರುತ್ತಾನೆ. ಹೊರಕ್ಕೆ ಕಾಣಿಸುವುದಿಲ್ಲ. ಕೆಲವು ಸಮಯಗಳಲ್ಲಿ ನೀರಿನ ಮೇಲ್ಭಾಗದಲ್ಲಿ ಈಜಿಕೊಂಡು ಹೋಗುತ್ತಾನೆ. ಮೇಲೀಜುವುದು (ಹುಟ್ಟುವುದು) ಮುಳುಗೀಜುವುದು (ಸಾಯುವುದು) ಈ ಸ್ವಭಾವವನ್ನೇ ಹೊಂದಿರುವ ಅಗಾಧವಾದ ಸಂಸಾರಸಾಗರದಲ್ಲಿ ಅಲ್ಪಬುದ್ಧಿಯ ಮೂರ್ಖರು ಕರ್ಮಭೋಗದಿಂದ ಬಂಧಿಸಲ್ಪಡುತ್ತಾರೆ ಮತ್ತು ಅದೇ ಕಾರಣದಿಂದಲೇ ಕ್ಲೇಶವನ್ನೂ ಅನುಭವಿಸುತ್ತಾರೆ.

**ಯೇ ತು ಪ್ರಾಜ್ಞಾಃ ಸ್ಥಿತಾಃ ಸತ್ತ್ವೇ ಸಂಸಾರೇಽಸ್ಮಿನ್ ಹಿತೈಷಿಣಃ ।**
**ಸಮಾಗಮಜ್ಞಾ ಭೂತಾನಾಂ ತೇ ಯಾನ್ತಿ ಪರಮಾಂ ಗತಿಮ್ ॥೨೦॥**

ಪ್ರಾಜ್ಞರಾದವರು ಈ ಪ್ರಪಂಚದಲ್ಲಿ ಸತ್ತ್ವಗುಣಯುಕ್ತರಾಗಿ ಸರ್ವ ಪ್ರಾಣಿಗಳಿಗೂ ಹಿತವನ್ನೇ ಬಯಸುತ್ತಾ, ಕರ್ಮಾಧೀನವಾದ ಪ್ರಾಣಿಗಳ ಸಮಾಗಮದ ರಹಸ್ಯವನ್ನು ತಿಳಿದವರಾಗಿರುತ್ತಾರೆ. ಅಂತಹ ಜ್ಞಾನಿಗಳು ಶ್ರೇಷ್ಠವಾದ ಸದ್ಗತಿಯನ್ನೂ ಹೊಂದುತ್ತಾರೆ."

ಒನೆಯ ಅಧ್ಯಾಯವು ಮುಗಿಯಿತು.

೪ನೆಯ ಅಧ್ಯಾಯ ಜಲಪ್ರದಾನಿಕಪರ್ವ (ಮುಂದುವರಿದಿದೆ.)

## ದುಃಖಮಯವಾದ ಸಂಸಾರಗಹನದ ವರ್ಣನೆ ಮತ್ತು ಸಂಸಾರದಿಂದ ಪಾರಾಗುವ ಉಪಾಯಕಥನ

ಧೃತರಾಷ್ಟ್ರನು ವಿದುರನನ್ನು ಪ್ರಶ್ನಿಸುತ್ತಾನೆ :

**ಕಥಂ ಸಂಸಾರಗಹನಂ ವಿಜ್ಞೇಯಂ ವದತಾಂ ವರ ।**
**ಏತದಿಚ್ಛಾಮ್ಯಹಂ ಶ್ರೋತುಂ ತತ್ತ್ವಮಾಖ್ಯಾಹಿ ಪೃಚ್ಛತಃ ॥೧॥**

"ವಾಗ್ಮಿಗಳಲ್ಲಿ ಶ್ರೇಷ್ಠನಾದವನೇ! ವಿದುರ! ಅಗಾಧವಾದ ಈ ಸಂಸಾರದ ಸ್ವರೂಪವನ್ನು ಹೇಗೆ ತಿಳಿದುಕೊಳ್ಳುವುದು? ಈ ವಿಷಯವನ್ನು ನಾನು ನಿನ್ನಿಂದ ಕೇಳಿ ತಿಳಿದುಕೊಳ್ಳಬೇಕೆಂದಿರುವೆನು. ಯಥಾವತ್ತಾಗಿ ಹೇಳು."

**ಜನ್ಮಪ್ರಭೃತಿ ಭೂತಾನಾಂ ಕ್ರಿಯಾ ಸರ್ವೋಪಲಕ್ಷ್ಯತೇ ।**
**ಪೂರ್ವಮೇವೇಹ ಕಲಿಲೇ ವಸತೇ ಕಿಂಚಿದನ್ತರಮ್ ॥೨॥**

**ತತಃ ಸ ಪಞ್ಚಮೇಽತೀತೇ ಮಾಸೇ ವಾಸಮಕಲ್ಪಯತ್ ।**
**ತತಃ ಸರ್ವಾಙ್ಗಸಮ್ಪೂರ್ಣೋ ಗರ್ಭೋ ವೈ ಸ ತು ಜಾಯತೇ॥೩॥**

"ಮಹಾರಾಜ! ಗರ್ಭಾಶಯದಲ್ಲಿ ವೀರ್ಯ ಮತ್ತು ರಜಸ್ಸುಗಳ (ಶುಕ್ರ-ಶೋಣಿತಗಳ) ಸಂಯೋಗವಾದ ಮೊದಲ್ಗೊಂಡು ಗರ್ಭವೃದ್ಧಿರೂಪವಾದ ಕಾರ್ಯವು ನಡೆಯುವುದು ಕಂಡುಬರುತ್ತದೆ. ಒಂದು ರಾತ್ರಿ ಕಳೆದ ನಂತರ ವೀರ್ಯ ಮತ್ತು ರಜಸ್ಸುಗಳ ಮಿಶ್ರಣದಿಂದ ಉಂಟಾದ ಗರ್ಭವು ಕಲಿಲವೆಂಬ ಹೆಸರನ್ನು ಪಡೆಯುತ್ತದೆ. (ಜೀವವು ಆ ಕಲಿಲದಲ್ಲಿ ವಾಸವಾಗಿರುತ್ತದೆ.) ವೀರ್ಯ-ರಜಸ್ಸುಗಳ ಅದೇ ಸಮ್ಮಿಶ್ರಣವು ಐದು ರಾತ್ರಿಗಳು ಕಳೆದನಂತರ ಬುದ್ಬುದಸಂಜ್ಞೆಯನ್ನು ಪಡೆಯುತ್ತದೆ. ಹೀಗೆಯೇ ಆ ಗರ್ಭವು ವೃದ್ಧಿಯನ್ನು ಹೊಂದುತ್ತಾ ಐದನೆಯ ತಿಂಗಳು ಕಳೆಯುವ ವೇಳೆಗೆ ಪಿಂಡದ ರೂಪವನ್ನು ಹೊಂದುತ್ತದೆ. ಚೈತನ್ಯವು ಆ ಪಿಂಡದಲ್ಲಿಯೇ ವಸತಿಯನ್ನು ಕಲ್ಪಿಸಿಕೊಂಡಿರುತ್ತದೆ. ಐದು ತಿಂಗಳು ಕಳೆದ ಬಳಿಕ ಎಲ್ಲ ಅಂಗಗಳೂ ಬೆಳೆಯತೊಡಗಿ ಗರ್ಭವು ಸರ್ವಾಂಗಪರಿಪೂರ್ಣವಾಗುತ್ತದೆ.

**ಅಮೇಧ್ಯಮಧ್ಯೇ ವಸತಿ ಮಾಂಸಶೋಣಿತಲೇಪನೇ ।**
**ತತಸ್ತು ವಾಯುವೇಗೇನ ಊರ್ಧ್ವಪಾದೋ ಹ್ಯಧಃಶಿರಾಃ ॥೪॥**

**ಯೋನಿದ್ವಾರಮುಪಾಗಮ್ಯ ಬಹೂನ್ಕ್ಲೇಶಾನ್ಸಮೃಚ್ಛತಿ ।**
**ಯೋನಿಸಮ್ಪೀಡನಾಚ್ಚೈವ ಪೂರ್ವಕರ್ಮಭಿರನ್ವಿತಃ ॥೫॥**

**ತಸ್ಮಾನ್ಮುಕ್ತಃ ಸ ಸಂಸಾರಾದನ್ಯಾನ್ಪಶ್ಯತ್ಯುಪದ್ರವಾನ್ ।**
**ಗ್ರಹಾಸ್ತಮನುಗಚ್ಛನ್ತಿ ಸಾರಮೇಯಾ ಇವಾಮಿಷಮ್ ॥೬॥**

ಆ ಸಮಯದಲ್ಲಿ ಅದು ಮಾಂಸ ಮತ್ತು ರಕ್ತಗಳಿಂದ ಲೇಪಿತವಾದ ಮತ್ತು ಅಮೇಧ್ಯದ ಮಧ್ಯದಲ್ಲಿರುವ ಗರ್ಭಾಶಯದಲ್ಲಿ ವಾಸಮಾಡುತ್ತಿರುತ್ತದೆ. ಹೊರಬರುವ ಸಮಯವು ಸಮೀಪಿಸುತ್ತಿದ್ದಂತೆ ವಾಯುವೇಗದ ಕಾರಣದಿಂದಾಗಿ ಗರ್ಭಸ್ಥಶಿಶುವು ತಲೆಯನ್ನು ಕೆಳಕ್ಕೂ–ಕಾಲುಗಳನ್ನು ಮೇಲಕ್ಕೂ ಮಾಡಿಕೊಂಡಿರುತ್ತದೆ. ಯೋನಿದ್ವಾರಕ್ಕೆ ಬರುವ ಸಮಯದಲ್ಲಿ ಆ ಶಿಶುವು ಅನೇಕವಿಧವಾದ ಕಷ್ಟಗಳನ್ನು ಅನುಭವಿಸುತ್ತದೆ. ತಾನು ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗಳನ್ನು ಹೊತ್ತುಬರುವ ಆ ಶಿಶುವು ಹೊರಬರುವಾಗ ಯೋನಿಮಾರ್ಗದಲ್ಲಾಗುವ ಪೀಡನೆಯನ್ನು ಅನುಭವಿಸುತ್ತಾ ಕಟ್ಟಕಡೆಗೆ ಅದರಿಂದ ವಿಮುಕ್ತವಾಗಿ ಹೊರಬಂದು ಈ ಸಂಸಾರದಲ್ಲಿ ಬೇರೆಯ ವಿಧವಾದ ಉಪದ್ರವಗಳನ್ನೂ ಎದುರಿಸುತ್ತದೆ. ನಾಯಿಗಳು ಮಾಂಸವನ್ನು ಹುಡುಕಿಕೊಂಡು ಹೋಗುವಂತೆ–ಅನೇಕ ವಿಧವಾದ ಬಾಲಗ್ರಹಗಳು ಹುಟ್ಟಿದ ಮಗುವನ್ನು ಕಾಡುತ್ತವೆ.

**ತತಃ ಪ್ರಾಪ್ತೋತ್ತರೇ ಕಾಲೇ ವ್ಯಾಧಯಶ್ಚಾಪಿ ತಂ ತಥಾ ।**
**ಉಪಸರ್ಪನ್ತಿ ಜೀವನ್ತಂ ಬಧ್ಯಮಾನಂ ಸ್ವಕರ್ಮಭಿಃ ॥೭॥**

ಅನಂತರ ಸಮಯವು ಕಳೆಯುತ್ತಿದ್ದಂತೆ ತನ್ನ ಕರ್ಮಗಳಿಂದಲೇ ಬಂಧಿತನಾದ ಆ ಜೀವನನ್ನು ಅನೇಕವಿಧವಾದ ವ್ಯಾಧಿಗಳೂ ಸಮೀಪಿಸುತ್ತವೆ. (ಪೀಡಿಸುತ್ತವೆ.)

**ತಂ ಬದ್ಧಮಿನ್ದ್ರಿಯೈಃ ಪಾಶೈಃ ಸಂಗಸ್ವಾದುಭಿರಾವೃತಮ್ ।**
**ವ್ಯಸನಾನ್ಯಪಿ ವರ್ತನ್ತೇ ವಿವಿಧಾನಿ ನರಾಧಿಪ ॥೮॥**

ನರೇಶ್ವರ! ಇಂದ್ರಿಯಗಳೆಂಬ ಹಗ್ಗಗಳಿಂದ ಬಂಧಿತನಾದ,

ರುಚಿ-ರುಚಿಯಾಗಿ ಕಾಣಿಸುವ ಅನೇಕವಿಧವಾದ ವಿಷಯಸಂಗಗಳಿಂದ ಆವೃತನಾದ (ನಾನಾವಿಷಯಗಳ ಸಂಬಂಧವನ್ನು ಹೊಂದಿರುವ) ಆ ಜೀವನನ್ನು ಅನೇಕವಿಧವಾದ ವ್ಯಸನಗಳೂ ಪೀಡಿಸಲು ಉಪಕ್ರಮಿಸುತ್ತವೆ.

**ಬಧ್ಯಮಾನಶ್ಚ ತೈರ್ಭೂಯೋ ನೈವ ತೃಪ್ತಿಮುಪೈತಿ ಸಃ ।**
**ತದಾ ನಾವೈತಿ ಚೈವಾಯಂ ಪ್ರಕುರ್ವನ್ಸಾಧ್ವಸಾಧು ವಾ ॥೯॥**

ಇಂದ್ರಿಯಗಳಿಂದಲೂ ಮತ್ತು ನಾನಾವಿಧವಾದ ಸಹವಾಸಗಳಿಂದಲೂ ಪುನಃ-ಪುನಃ ಬಂಧಿಸಲ್ಪಡುವ ಜೀವನು ಇಂದ್ರಿಯಸಂಬಂಧವಾದ ಕಾಮನೆಗಳಿಂದ ತೃಪ್ತಿಹೊಂದುವುದಿಲ್ಲ. ಆ ಸಮಯದಲ್ಲಿ ಅವನಿಗೆ ತಾನು ಮಾಡುತ್ತಿರುವ ಕಾರ್ಯವು ಸಾಧುವೇ-ಅಸಾಧುವೇ?–ಎಂಬುದರ ಪರಿಜ್ಞಾನವೂ ಇರುವುದಿಲ್ಲ.

**ತಥೈವ ಪರಿರಕ್ಷನ್ತಿ ಯೇ ಧ್ಯಾನಪರಿನಿಷ್ಠಿತಾಃ ।**
**ಅಯಂ ನ ಬುಧ್ಯತೇ ತಾವದ್ಯಮಲೋಕಮಥಾಗತಮ್ ॥೧೦॥**

ಭಗವಂತನ ಧ್ಯಾನದಲ್ಲಿ ನಿಷ್ಠರಾಗಿರತಕ್ಕವರು ಶಾಸ್ತ್ರಾನುಸಾರವಾಗಿ ನಡೆಯುತ್ತಾ ಇಂದ್ರಿಯಗಳ ಬಂಧನಕ್ಕೊಳಗಾಗದೇ ತಮ್ಮನ್ನು ರಕ್ಷಿಸಿಕೊಳ್ಳುತ್ತಾರೆ. ಆದರೆ ಸಾಧಾರಣಜೀವರು ತಮ್ಮ ಮುಂದೆ ಯಮಲೋಕವು ಬಂದು ನಿಂತಿರುವುದನ್ನೂ ಅರಿತವರಾಗಿರುವುದಿಲ್ಲ. (ರುಚಿಕರವಾಗಿ ಕಾಣುವ ಸಹವಾಸದಲ್ಲಿರುವವರಿಗೆ, ಇಂದ್ರಿಯಗಳಿಗೆ ದಾಸರಾಗಿರತಕ್ಕವರಿಗೆ – ಆ ಸಮಯದಲ್ಲಿ 'ಮರಣ' ಎಂಬುದೊಂದಿದೆ ಯೆಂಬ ಅರಿವೇ ಇರುವುದಿಲ್ಲ. ತಮ್ಮ ಆ ಭೋಗಜೀವನವೇ ಶಾಶ್ವತವೆಂದು ಭಾವಿಸಿಕೊಂಡುಬಿಟ್ಟಿರುತ್ತಾರೆ.)

**ಯಮದೂತೈರ್ವಿಕೃಷ್ಯಂಶ್ಚ ಮೃತ್ಯುಂ ಕಾಲೇನ ಗಚ್ಛತಿ ।**
**ವಾಗ್ಘೀನಸ್ಯ ಚ ಯನ್ಮಾತ್ರಮಿಷ್ಟಾನಿಷ್ಟಂ ಕೃತಂ ಮುಖೇ ।**
**ಭೂಯ ಏವಾತ್ಮನಾತ್ಮಾನಂ ಬಧ್ಯಮಾನಮುಪೇಕ್ಷತೇ ॥೧೧॥**

ಕಾಲವು ಸನ್ನಿಹಿತವಾದನಂತರ ಯಮದೂತರಿಂದ ಸೆಳೆಯಲ್ಪಡುವ ಆ ಜೀವನು ತಾನಿದ್ದ ಶರೀರದಿಂದ ಹೊರಬಂದು ಮೃತ್ಯುವಶನಾಗುತ್ತಾನೆ. ಆ ಸಮಯದಲ್ಲಿ ಆ ಜೀವನಿಗೆ ಮಾತನಾಡಲೂ ಶಕ್ತಿಯಿರುವುದಿಲ್ಲ. ಅವನೆಷ್ಟು

ಶುಭಾಶುಭಕರ್ಮಗಳನ್ನು ಮಾಡಿರುತ್ತಾನೆಯೋ–ಅವುಗಳೆಲ್ಲವೂ ಪ್ರತ್ಯಕ್ಷವಾಗಿ ಅವನ ಮುಂದೆ ನಿಲ್ಲುತ್ತವೆ. ತಾನು ಮಾಡಿದ ಕರ್ಮಗಳಿಂದಲೇ ಬಂಧಿತನಾಗಿರುವೆನೆಂಬ ಅರಿವು ಆಗ ಅವನಿಗುಂಟಾಗುತ್ತದೆ. ಆದರೆ ತಾನು ಮಾಡಿದ ಕರ್ಮಗಳಿಂದಲೇ ಪುನಃ-ಪುನಃ ಬಂಧಿತನಾಗುತ್ತಿದ್ದರೂ ಉಪೇಕ್ಷೆಯಿಂದಲೇ ಇದ್ದುಬಿಡುತ್ತಾನೆ. ಆ ಬಂಧನವನ್ನು ತಪ್ಪಿಸಿಕೊಂಡು ಆತ್ಮೋದ್ಧಾರಮಾಡಿಕೊಳ್ಳಲು ಅವನು ಸ್ವಲ್ಪವಾದರೂ ಪ್ರಯತ್ನಿಸುವುದಿಲ್ಲ.

**ಅಹೋ ವಿನಿಕೃತೋ ಲೋಕೋ ಲೋಭೇನ ಚ ವಶೀಕೃತಃ ।**
**ಲೋಭಕ್ರೋಧಭಯೋನ್ಮತ್ತೋ ನಾತ್ಮಾನಮವಬುಧ್ಯತೇ ॥೧೨॥**

ಅಯ್ಯೋ! ಲೋಭಕ್ಕೆ ಅಧೀನವಾಗಿರುವ ಈ ಲೋಕವಿಂದು ಮೋಸಹೋಗಿದೆ. ಲೋಭ-ಕ್ರೋಧ-ಭಯಗಳಿಂದ ಹುಚ್ಚು-ಹುಚ್ಚಾಗಿ ವರ್ತಿಸುತ್ತಿರುವ ಈ ಲೋಕವು (ಜನವು) ತಾನಾರು? ತನ್ನ ಸ್ವರೂಪವೇನು? ಎಂಬುದನ್ನು ತಿಳಿದುಕೊಂಡಿರುವುದಿಲ್ಲ.

**ಕುಲೀನತ್ವೇ ಚ ರಮತೇ ದುಷ್ಕುಲೀನಾನ್ವಿಕುತ್ಸಯನ್ ।**
**ಧನದರ್ಪೇಣ ದೃಪ್ತಶ್ಚ ದರಿದ್ರಾನ್ಪರಿಕುತ್ಸಯನ್ ॥೧೩॥**

ಸತ್ಕುಲಪ್ರಸೂತನಾದವನು ದುಷ್ಕುಲದಲ್ಲಿ ಹುಟ್ಟಿದವರನ್ನು ನಿಂದಿಸುತ್ತಾ ತನ್ನ ಕುಲೀನತ್ವದ ವಿಷಯವಾಗಿ ಅಹಂಕಾರಪಡುತ್ತಾನೆ. ಹಾಗೆಯೇ ಧನಿಕನು ದರಿದ್ರರಾದವರನ್ನು ಅಪಹಾಸ್ಯಮಾಡುತ್ತಾ ತನ್ನ ಧನದರ್ಪದ ಅಹಂಕಾರದಿಂದ ಕೊಬ್ಬಿರುತ್ತಾನೆ.

**ಮೂರ್ಖಾನಿತಿ ಪರಾನಾಹ ನಾತ್ಮಾನಂ ಸಮವೇಕ್ಷತೇ ।**
**ದೋಷಾನ್ಕ್ಷಿಪತಿ ಚಾನ್ಯೇಷಾಂ ನಾತ್ಮಾನಂ ಶಾಸ್ತುಮಿಚ್ಛತಿ ॥೧೪॥**

ತಾನೇ ಬುದ್ಧಿವಂತನೆಂದು ಭಾವಿಸಿಕೊಂಡು ಇತರರನ್ನು ಮೂರ್ಖರೆಂದು ಹಳಿಯುತ್ತಾನೆ. ಆದರೆ ತನ್ನಲ್ಲಿಯೇ ಎಷ್ಟು ಮೂರ್ಖತನವಿದೆಯೆಂಬುದನ್ನು ಪರೀಕ್ಷಿಸಹೋಗುವುದಿಲ್ಲ. ಇತರರ ಮೇಲೆಯೇ ದೋಷಾರೋಪಣೆಮಾಡುವ ಸ್ವಭಾವದಿಂದ ಕೂಡಿರುತ್ತಾನೆ. ತನ್ನ ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳಲು ಇಚ್ಛೆಪಡುವುದಿಲ್ಲ.

**ಯದಾ ಪ್ರಾಜ್ಞಾಶ್ಚ ಮೂರ್ಖಾಶ್ಚ ಧನವನ್ತಶ್ಚ ನಿರ್ಧನಾಃ ।**
**ಕುಲೀನಾಶ್ಚಾಕುಲೀನಾಶ್ಚ ಮಾನಿನೋಽಥಾಪ್ಯಮಾನಿನಃ ॥೧೫॥**

**ಸರ್ವೇ ಪಿತೃವನಂ ಪ್ರಾಪ್ತಾಃ ಸ್ವಪನ್ತಿ ವಿಗತತ್ವಚಃ ।**
**ನಿರ್ಮಾಂಸೈರಸ್ಥಿಭೂಯಿಷ್ಠೈರ್ಗಾತ್ರೈಃ ಸ್ನಾಯುನಿಬನ್ಧನೈಃ ॥೧೬॥**

**ವಿಶೇಷಂ ನ ಪ್ರಪಶ್ಯನ್ತಿ ತತ್ರ ತೇಷಾಂ ಪರೇ ಜನಾಃ ।**
**ಯೇನ ಪ್ರತ್ಯವಗಚ್ಛೇಯುಃ ಕುಲರೂಪವಿಶೇಷಣಮ್ ॥೧೭॥**

ಪಂಡಿತರು-ಮೂರ್ಖರು, ಧನವಂತರು-ದರಿದ್ರರು, ಸತ್ಕುಲಪ್ರಸೂತರು-ದುಷ್ಕುಲಪ್ರಸೂತರು, ಮಾನನಿಷ್ಠರು – ಮಾನವಿಲ್ಲದವರು–ಇವರೆಲ್ಲರೂ ಯಾವ ವಿಧವಾದ ತಾರತಮ್ಯವೂ ಇಲ್ಲದೇ ಶ್ಮಶಾನಕ್ಕೆ ಹೋಗುತ್ತಾರೆ. ಚರ್ಮದಿಂದಲೂ ರಹಿತರಾದ ಅವರೆಲ್ಲರೂ ಶ್ಮಶಾನದಲ್ಲಿ ಯಾವ ವ್ಯತ್ಯಾಸವೂ ಇಲ್ಲದೇ ಮಲಗುತ್ತಾರೆ. ಗತಪ್ರಾಣರಾದ ಅವರಲ್ಲಿ ಮಾಂಸಖಂಡಗಳಿರುವುದಿಲ್ಲ. ಅವರ ಶರೀರಗಳು ಕೇವಲ ಅಸ್ಥಿಭೂಯಿಷ್ಠವಾಗಿರುತ್ತವೆ. ಸ್ನಾಯುಗಳು ಅಸ್ಥಿಪಂಜರಗಳನ್ನು ಸುತ್ತಿಕೊಂಡಿರುತ್ತವೆ. ಆ ಸಮಯದಲ್ಲಿ ಶ್ಮಶಾನಶಾಯಿಗಳ ಕುಲ, ರೂಪ, ಆಢ್ಯತೆ, ದರಿದ್ರತೆ, ಪಾಂಡಿತ್ಯ, ಮೌರ್ಖ್ಯ–ಇತ್ಯಾದಿಗಳನ್ನು ಗುರುತಿಸಬಹುದಾದ ಯಾವುದೊಂದು ವಿಶೇಷವನ್ನೂ ಸರ್ವಸಮವಾಗಿರುವ ಆ ಶವಗಳಲ್ಲಿ ಇತರ ಜನರು ಕಾಣುವುದಿಲ್ಲ.

**ಯದಾ ಸರ್ವೇ ಸಮಂ ನ್ಯಸ್ತಾಃ ಸ್ವಪನ್ತಿ ಧರಣೀತಲೇ ।**
**ಕಸ್ಮಾದನ್ಯೋನ್ಯಮಿಚ್ಛನ್ತಿ ಪ್ರಲಬ್ಧುಮಿಹ ದುರ್ಬುಧಾಃ ॥೧೮॥**

ಮರಣಾನಂತರದಲ್ಲಿ ಸರ್ವಸಮಾನರಾಗಿ ಎಲ್ಲರೂ ಶ್ಮಶಾನದಲ್ಲಿಡಲ್ಪಟ್ಟು ಭೂಮಿಯ ಮೇಲೆ ಮಲಗುತ್ತಾರೆ. ಎಲ್ಲರಿಗೂ ಒಂದೇ ಸಮನಾದ ಅವಸ್ಥೆಯು ಪ್ರಾಪ್ತವಾಗುವುದೆಂಬ ನಿಶ್ಚಯವಿರುವಾಗ ಬದುಕಿರುವ ಕಾಲದಲ್ಲಿ ದುರ್ಬುದ್ಧಿಯುಳ್ಳ ಮಾನವರು ಒಬ್ಬರು ಮತ್ತೊಬ್ಬರನ್ನು ವಂಚಿಸಲೇಕೆ ಪ್ರಯತ್ನಿಸುತ್ತಾರೆ?

**ಪ್ರತ್ಯಕ್ಷಂ ಚ ಪರೋಕ್ಷಂ ಚ ಯೋ ನಿಶಮ್ಯ ಶ್ರುತಿಂ ತ್ವಿಮಾಮ್ ।**

**ಅಧ್ರುವೇ ಜೀವಲೋಕೇಽಸ್ಮಿನ್ಯೋ ಧರ್ಮಮನುಪಾಲಯನ್ ।**
**ಜನ್ಮಪ್ರಭೃತಿ ವರ್ತೇತ ಪ್ರಾಪ್ನುಯಾತ್ಪರಮಾಂ ಗತಿಮ್ ॥೧೯॥**

ಅಶಾಶ್ವತವಾದ ಈ ಜಗತ್ತಿನಲ್ಲಿ ಯಾವ ಪುರುಷನು ವೇದೋಕ್ತವಾದ ಈ ಉಪದೇಶವನ್ನು ಪ್ರತ್ಯಕ್ಷವಾಗಿಯೇ ತಿಳಿದುಕೊಳ್ಳುತ್ತಾನೆಯೋ ಅಥವಾ ಆಚಾರ್ಯಮುಖೇನ ಶ್ರವಣಮಾಡುವನೋ, ಯಾವನು ಹುಟ್ಟಿನಿಂದ ಮೊದಲ್ಗೊಂಡು ಧರ್ಮವನ್ನು ಪರಿಪಾಲಿಸುತ್ತಾ ಇರುವನೋ–ಅವನು ಅವಸಾನಾನಂತರದಲ್ಲಿ ಶ್ರೇಷ್ಠವಾದ ಸದ್ಗತಿಯನ್ನು ಹೊಂದುತ್ತಾನೆ.

**ಏವಂ ಸರ್ವಂ ವಿದಿತ್ವಾ ವೈ ಯಸ್ತತ್ತ್ವಮನುವರ್ತತೇ ।**
**ಸ ಪ್ರಮೋಕ್ಷಾಯ ಲಭತೇ ಪನ್ಥಾನಂ ಮನುಜೇಶ್ವರ ॥೨೦॥**

ಮನುಜೇಶ್ವರ! ಹೀಗೆ ಜೀವನದ ವಿಷಯವಾಗಿ ಎಲ್ಲ ರಹಸ್ಯಗಳನ್ನೂ ತಿಳಿದುಕೊಂಡು ಆ ಶ್ರೇಷ್ಠತತ್ತ್ವವನ್ನು ಯಾವನು ತನ್ನ ಆಚರಣೆಯಲ್ಲಿಟ್ಟುಕೊಳ್ಳುವನೋ (ತತ್ತ್ವೋಪದೇಶದಂತೆ ಯಾವನು ನಡೆದುಕೊಳ್ಳುವನೋ)–ಅವನು ಮೋಕ್ಷದ ಮಾರ್ಗವನ್ನು ಹೊಂದುತ್ತಾನೆ.”

ಳನೆಯ ಅಧ್ಯಾಯವು ಮುಗಿಯಿತು.

ಜನೆಯ ಅಧ್ಯಾಯ ಜಲಪ್ರದಾನಿಕಪರ್ವ (ಮುಂದುವರಿದಿದೆ.)

## ವಿದುರನು ಗಹನವಾದ ಅರಣ್ಯದ ದೃಷ್ಟಾಂತದ ಮೂಲಕ ಸಂಸಾರವನ್ನು ವರ್ಣಿಸಿದುದು

ಧೃತರಾಷ್ಟ್ರನು ಪುನಃ ಪ್ರಶ್ನಿಸುತ್ತಾನೆ :

“ವಿದುರ! ಧರ್ಮದ ಈ ರಹಸ್ಯವು ಬುದ್ಧಿಯಿಂದಲೇ ತಿಳಿಯಲು ಸಾಧ್ಯವಾಗುತ್ತದೆ. ಆದುದರಿಂದಲೇ ನೀನು ಬುದ್ಧಿಮಾರ್ಗವನ್ನೇ ಸವಿಸ್ತರವಾಗಿ ಹೇಳು.”

“ಧೃತರಾಷ್ಟ್ರಮಹಾರಾಜ! ಸ್ವಯಂಭೂಬ್ರಹ್ಮನಿಗೆ ನಮಸ್ಕರಿಸಿ, ಸಂಸಾರವೆಂಬ ಮಹಾರಣ್ಯವನ್ನು ಪರಮರ್ಷಿಗಳು ಯಾವ ರೀತಿಯಲ್ಲಿ ವರ್ಣಿಸಿದ್ದಾರೆಯೋ ಅದೇ ರೀತಿಯಲ್ಲಿ ನಾನೂ ಅರಣ್ಯರೂಪವಾದ ಈ

ಸಂಸಾರವನ್ನು ವರ್ಣಿಸುತ್ತೇನೆ, ಕೇಳು. ವಿಶಾಲವೂ ಮತ್ತು ದುರ್ಗಮವೂ ಆದ ಕಾಡಿನಲ್ಲಿ ಬ್ರಾಹ್ಮಣನೊಬ್ಬನು ಪ್ರಯಾಣಮಾಡುತ್ತಿದ್ದನು. ಹೀಗೆಯೇ ಪ್ರಯಾಣಮಾಡುತ್ತಿದ್ದಾಗ ಅತ್ಯಂತದುರ್ಗಮವಾದ ಮತ್ತು ಮಾಂಸಾಶಿಗಳಾದ ದುಷ್ಟಪ್ರಾಣಿಗಳಿಂದ ಸಂಕುಲವಾಗಿದ್ದ ಸ್ಥಳಕ್ಕೆ ಹೋದನು. ಆ ಪ್ರದೇಶವು ಗಟ್ಟಿಯಾಗಿ ಗರ್ಜನೆಮಾಡುತ್ತಿದ್ದ ಸಿಂಹ, ಹುಲಿ, ಆನೆ ಮತ್ತು ಕರಡಿಗಳ ಸಮೂಹಗಳಿಂದ ತುಂಬಿಹೋಗಿದ್ದು ಅತಿಭಯಂಕರವಾಗಿ ಕಾಣುತ್ತಿದ್ದಿತು. ಭಯಂಕರವಾದ ಆಕಾರಗಳನ್ನು ಹೊಂದಿದ್ದ, ಅತ್ಯಂತಭಯದಾಯಕವಾಗಿದ್ದ, ಮಾಂಸಾಶಿಗಳಾದ ಅನೇಕಪ್ರಾಣಿಗಳಿಂದ ತುಂಬಿಹೋಗಿದ್ದ ಆ ಪ್ರದೇಶವು ಯಮರಾಜನೂ ಭಯಪಡುವಷ್ಟು ಭೀಕರವಾಗಿದ್ದಿತು. ಅಂತಹ ಅತಿಭಯಂಕರವಾದ, ಮುಂದೆ ಹೋಗಲು ಅಸಾಧ್ಯವಾಗಿದ್ದ ವನಪ್ರದೇಶವನ್ನು ನೋಡಿ ಬ್ರಾಹ್ಮಣನು ಬಹಳ ಉದ್ವಿಗ್ನನಾದನು. ಅವನ ರೋಮಕೋಟಿಗಳು ನಿಮಿರಿನಿಂತುವು. ದೈಹಿಕವಾದ ಮತ್ತು ಮಾನಸಿಕವಾದ ಹಲವು ವಿಕಾರಗಳು ಅವನಿಗೆ ಉಂಟಾದುವು. ಅರಣ್ಯಮಾರ್ಗವನ್ನೇ ಅನುಸರಿಸಿ ಹೋಗುತ್ತಿದ್ದ ಆ ಬ್ರಾಹ್ಮಣನು ಅಲ್ಲಿಂದಿಲ್ಲಿಗೂ-ಇಲ್ಲಿಂದಲ್ಲಿಗೂ ಧಾವಿಸುತ್ತಾ–'ತನಗೆಲ್ಲಾದರೂ ರಕ್ಷಣೆಯು ಸಿಕ್ಕೀತೇ?'–ಎಂಬ ಕಳವಳದಿಂದ ಎಲ್ಲ ದಿಕ್ಕುಗಳನ್ನೂ ಎವೆಯಿಕ್ಕದೇ ನೋಡುತ್ತಿದ್ದನು. ದುಷ್ಟಮೃಗಗಳಿಲ್ಲದ ಸ್ಥಳವನ್ನು ಹುಡುಕಿ ಆ ಮಾರ್ಗದ ಮೂಲಕವಾಗಿ ಭಯಭೀತನಾಗಿ ಓಡಿಹೋದನು. ಆದರೆ ಹೆಚ್ಚು ದೂರ ಹೋಗಲು ಅವನಿಗೆ ಸಾಧ್ಯವಾಗಲಿಲ್ಲ. ಹಿಂಸ್ರಮೃಗಗಳಿಂದ ವಿಮೋಚನೆಯೂ ಆಗಲಿಲ್ಲ. ಸ್ವಲ್ಪಹೊತ್ತಿನಲ್ಲಿಯೇ ಅವನು ಆ ಘೋರಾರಣ್ಯವು ಸುತ್ತಲೂ ಬಲೆಯಿಂದ ಆವೃತವಾಗಿರುವುದನ್ನು ನೋಡಿದನು. ಅತ್ಯಂತಘೋರರೂಪವನ್ನು ಧರಿಸಿದ್ದ ಸ್ತ್ರೀಯೊಬ್ಬಳು ತನ್ನೆರಡು ಕೈಗಳಿಂದಲೂ ಆ ಬಲೆಯಿಂದ ಅರಣ್ಯವನ್ನೇ ಆವರಿಸುತ್ತಿದ್ದಳು. ಮರುಕ್ಷಣದಲ್ಲಿಯೇ ಆ ಬ್ರಾಹ್ಮಣನು ಮತ್ತೊಂದು ದೃಶ್ಯವನ್ನೂ ಕಂಡನು. ಆ ಘೋರಾರಣ್ಯವು ಎತ್ತರವಾದ ಪರ್ವತಗಳೋಪಾದಿಯಲ್ಲಿದ್ದ ಐದು ಹೆಡೆಗಳನ್ನು ಧರಿಸಿದ್ದ ಸರ್ಪಗಳಿಂದಲೂ, ಗಗನಚುಂಬಿಯಾದ ಮಹಾವೃಕ್ಷಗಳಿಂದಲೂ ವ್ಯಾಪ್ತವಾಗಿದ್ದಿತು. ಆ ಅರಣ್ಯದ ಮಧ್ಯದಲ್ಲಿ ಒಂದು ಬಾವಿಯಿದ್ದಿತು. ಆ ಬಾವಿಯು ಹುಲ್ಲಿನಿಂದ ಮುಚ್ಚಲ್ಪಟ್ಟಿದ್ದ ಸುದೃಢವಾದ ಬಳ್ಳಿ

ಗಳಿಂದ ಆಚ್ಛಾದಿತವಾಗಿದ್ದಿತು. ಬಳ್ಳಿಗಳಿಂದ ಮುಚ್ಚಲ್ಪಟ್ಟು ನಿಗೂಢವಾಗಿದ್ದ ಆ ಬಾವಿಯಲ್ಲಿ ಬ್ರಾಹ್ಮಣನು ತಲೆಕೆಳಗಾಗಿ ಬಿದ್ದುಬಿಟ್ಟನು. ಆದರೆ ಅಲ್ಲಿ ದೃಢವಾದ ನೂರಾರು ಬಳ್ಳಿಗಳಿದ್ದುದರಿಂದ ಆ ಬ್ರಾಹ್ಮಣನು ಬಳ್ಳಿಗಳ ಪೊದರಿನೊಳಗೆ ಸಿಕ್ಕಿಹಾಕಿಕೊಂಡನು. ದೊಡ್ಡ ಹಲಸಿನ ಹಣ್ಣು ಯಾವ ರೀತಿಯಲ್ಲಿ ತೊಟ್ಟಿನಿಂದ ಬಂಧಿಸಲ್ಪಟ್ಟು ಮರದಲ್ಲಿ ನೇತಾಡುತ್ತಿರುವುದೋ–ಅದೇ ರೀತಿಯಲ್ಲಿ ಬ್ರಾಹ್ಮಣನು ಲತೆಗಳ ಪೊದರಿನೊಳಗೆ ಸಿಕ್ಕಿಕೊಂಡು ನೇತಾಡುತ್ತಿದ್ದನು. ಅವನ ಕಾಲುಗಳು ಪೊದರಿನೊಳಗೆ ಸಿಕ್ಕಿಕೊಂಡಿದ್ದು ತಲೆಯು ಕೆಳಮುಖವಾಗಿದ್ದಿತು. ಅಂತಹ ಸ್ಥಿತಿಯಲ್ಲಿದ್ದಾಗಲೂ ಆ ಬ್ರಾಹ್ಮಣನಿಗೆ ಮತ್ತೊಂದು ಉಪದ್ರವವೂ ಒದಗಿಬಂದಿತು.

**ಕೂಪಮಧ್ಯೇ ಮಹಾನಾಗಮಪಶ್ಯತ ಮಹಾಬಲಮ್ ।**
**ಕೂಪವೀನಾಹವೇಲಾಯಾಮಪಶ್ಯತ ಮಹಾಗಜಮ್ ।**
**ಷಡ್ವಕ್ತ್ರಂ ಕೃಷ್ಣಶುಕ್ಲಂ ಚ ದ್ವಿಷಟ್ಕಪದಚಾರಿಣಮ್ ॥೧೪॥**

ಬಾವಿಯ ಮಧ್ಯಭಾಗದಲ್ಲಿ ಮಹಾಬಲಿಷ್ಠವಾಗಿದ್ದ ಮಹಾಸರ್ಪವೊಂದನ್ನು ಆ ಬ್ರಾಹ್ಮಣನು ನೋಡಿದನು. ಬಾವಿಯ ಮೇಲೆ ದಡದ ಪ್ರದೇಶದಲ್ಲಿ ದೊಡ್ಡದಾದೊಂದು ಆನೆಯನ್ನು ನೋಡಿದನು. ಆ ಆನೆಗೆ ಆರು ಮುಖಗಳಿದ್ದುವು. ಅದು ಕಪ್ಪಾಗಿಯೂ ಬಿಳುಪಾಗಿಯೂ ಇದ್ದಿತು. ಆ ಮಹಾಗಜಕ್ಕೆ ಹನ್ನೆರಡು ಕಾಲುಗಳಿದ್ದುವು. ಆ ಮಹಾಗಜವು ಲತಾ ವೃಕ್ಷಗಳಿಂದ ಆಚ್ಛಾದಿತವಾಗಿದ್ದ ಬಾವಿಯ ಬಳಿಗೆ ಕ್ರಮಶಃ ಬರುತ್ತಿದ್ದಿತು. ಲತೆಗಳಿಂದ ಆವೃತವಾಗಿದ್ದ, ಬ್ರಾಹ್ಮಣನು ತೂಗುಬಿದ್ದಿದ್ದ ವೃಕ್ಷದ ಶಾಖೋಪಶಾಖೆಗಳಲ್ಲಿ ಜೇನುಹುಳುಗಳು ಗೂಡುಕಟ್ಟಿಕೊಂಡಿದ್ದುವು. ಆ ಜೇನುಹುಳುಗಳು ನಾನಾವಿಧವಾದ ಆಕಾರಗಳಿಂದ ಕೂಡಿದ್ದುವು. ಘೋರವಾದ ರೂಪವನ್ನು ಹೊಂದಿದ್ದುವು. ಭಯವನ್ನುಂಟುಮಾಡುತ್ತಿದ್ದುವು. ಆ ಹುಳುಗಳು ಮಧುವನ್ನು ಮುಚ್ಚಿಕೊಂಡು ಕುಳಿತಿದ್ದುವು. (ವೃಕ್ಷದ ರೆಂಬೆಗಳಲ್ಲಿದ್ದ ಜೇನುಗೂಡುಗಳಲ್ಲಿ ಅಸಂಖ್ಯಾತವಾದ ಘೋರವಾದ ಮತ್ತು ಭಯಂಕರವಾದ ಜೇನುಹುಳುಗಳಿದ್ದುವು.) ಪ್ರಾಣಿಗಳಿಗೆ ಅತ್ಯಂತರುಚಿಕರವಾದ, ಬಾಲಕರನ್ನೂ ವಿಶೇಷವಾಗಿ ಆಕರ್ಷಿಸುವ ಜೇನುತುಪ್ಪವನ್ನು ಜೇನು

ಹುಳುಗಳು ಪುನಃ ಪುನಃ ಹೀರಲು ಇಚ್ಛಿಸುತ್ತಿದ್ದುವು. ಅಂತಹ ಹಲವಾರು ಜೇನುಗೂಡುಗಳಿಂದ ಜೇನುತುಪ್ಪವು ಧಾರಾಕಾರವಾಗಿ ಸ್ರವಿಸುತ್ತಿದ್ದಿತು. ಬಳ್ಳಿಗಳ ಮಧ್ಯೆ ನೇತಾಡುತ್ತಿದ್ದ ಬ್ರಾಹ್ಮಣನು ಧಾರಾಕಾರವಾಗಿ ಸ್ರವಿಸುತ್ತಿದ್ದ ಜೇನುತುಪ್ಪವನ್ನು ಎಡೆಬಿಡದೇ ಸವಿಯುತ್ತಿದ್ದನು. ಮಹಾಸಂಕಟದ ಮಧ್ಯದಲ್ಲಿದ್ದರೂ ಆ ಬ್ರಾಹ್ಮಣನಿಗೆ ಜೇನುತುಪ್ಪವನ್ನು ಎಷ್ಟು ಕುಡಿದರೂ ತೃಪ್ತಿಯೇ ಉಂಟಾಗಲಿಲ್ಲ. ಅತೃಪ್ತನಾದ ಆ ಬ್ರಾಹ್ಮಣನು ಆ ಸ್ಥಿತಿಯಲ್ಲಿಯೇ ಜೇನುತುಪ್ಪವು ಮತ್ತೂ ಬೇಕೆಂದು ಪುನಃ ಪುನಃ ಹಾತೊರೆಯುತ್ತಿದ್ದನು. ಜೇನುತುಪ್ಪವನ್ನು ಸವಿಯುತ್ತಿದ್ದಾಗ ಅವನಿಗೆ ತಾನು ಮಹಾಸಂಕಟ ದಲ್ಲಿರುವೆನೆಂಬ ಅರಿವೇ ಉಂಟಾಗಲಿಲ್ಲ. ಆ ಬ್ರಾಹ್ಮಣನ ಜೀವನವು ಸಂಕಟಪೂರ್ಣವಾಗಿದ್ದರೂ ಅವನಿಗೆ ತನ್ನ ಜೀವನದಲ್ಲಿ ಯಾವ ವಿಧವಾದ ವೈರಾಗ್ಯವೂ ಉಂಟಾಗಲಿಲ್ಲ. ಅಂತಹ ಸಂಕಟದ ಮಧ್ಯದಲ್ಲಿಯೇ ಆ ಮನುಷ್ಯನು ತನ್ನ ಜೀವಿತದ ಆಸೆಯನ್ನು ಮಧುಪಾನದಲ್ಲಿಯೇ ಊರ್ಜಿತಗೊಳಿಸಿದನು.

**ಕೃಷ್ಣಾಃ ಶ್ವೇತಾಶ್ಚ ತಂ ವೃಕ್ಷಂ ಕುಟ್ಟಯನ್ತಿ ಚ ಮೂಷಿಕಾಃ ।**
**ವ್ಯಾಲೈಶ್ಚ ವನದುರ್ಗಾನ್ತೇ ಸ್ತ್ರಿಯಾ ಚ ಪರಮೋಗ್ರಯಾ ।**
**ಕೂಪಾಧಸ್ತಾಚ್ಚ ನಾಗೇನ ವೀನಾಹೇ ಕುಞ್ಜರೇಣ ಚ ॥೨೨॥**

**ವೃಕ್ಷಪ್ರಪಾತಾಚ್ಚ ಭಯಂ ಮೂಷಿಕೇಭ್ಯಶ್ಚ ಪಞ್ಚಮಮ್ ।**
**ಮಧುಲೋಭಾನ್ಮಧುಕರೈಃ ಷಷ್ಠಮಾಹುರ್ಮಹದ್ಭಯಮ್ ॥೨೩॥**

ಈ ಮಧ್ಯದಲ್ಲಿ ಬ್ರಾಹ್ಮಣನು ಸಿಕ್ಕಿಹಾಕಿಕೊಂಡಿದ್ದ ಬಳ್ಳಿಗಳಿಗೆ ಆಶ್ರಯ ವಾದ ವೃಕ್ಷವನ್ನು ಕರಿಯ ಮತ್ತು ಬಿಳಿಯ ಬಣ್ಣದ ಇಲಿಗಳು ಕಡಿದು ಹಾಕುತ್ತಿದ್ದುವು. ಮಹಾರಣ್ಯದಲ್ಲಿ ಪ್ರಯಾಣಮಾಡುತ್ತಿದ್ದ ಬ್ರಾಹ್ಮಣನಿಗೆ ಪರ್ವತೋಪಮವಾದ ಸರ್ಪಗಳಿಂದ ಆದ ಭಯವು ಮೊದಲನೆಯದು. ಅರಣ್ಯಕ್ಕೆಲ್ಲಾ ಬಲೆಯನ್ನು ಬೀಸಲು ಬಂದಿದ್ದ ಮಹಾಭಯಂಕರಳಾದ ಸ್ತ್ರೀಯಿಂದ ಉಂಟಾದ ಭಯವು ಎರಡನೆಯದು. ಬಾವಿಯ ತಳದಲ್ಲಿದ್ದ ಘಟಸರ್ಪದಿಂದ ಉಂಟಾದ ಭಯವು ಮೂರನೆಯದು. ಬಾವಿಯ ಮೇಲಿದ್ದ ಮಹಾಗಜದಿಂದ ಉಂಟಾದ ಭಯವು ನಾಲ್ಕನೆಯದು.

ಸಿಕ್ಕಿಹಾಕಿಕೊಂಡಿದ್ದ ಬಳ್ಳಿಗಳನ್ನೇ (ವೃಕ್ಷವನ್ನೇ) ಇಲಿಗಳು ಕತ್ತರಿಸುತ್ತಿದ್ದುದರಿಂದ ಅಲ್ಲಿಂದ ಕೆಳಕ್ಕೆ ಬೀಳುತ್ತೇನೆಂಬ ಭಯವು ಐದನೆಯದು. ಮಧುವಿನ ಮೇಲಿನ ಆಸೆಯಿಂದ ಜೇನುಹುಳುಗಳು ಮಧುವನ್ನು ಸವಿಯುತ್ತಿದ್ದ ತನ್ನನ್ನು (ಬ್ರಾಹ್ಮಣನನ್ನು) ಕಚ್ಚುತ್ತವೆಯೆಂಬ ಮಹಾಭಯವು ಆರನೆಯದು.

(ಬ್ರಾಹ್ಮಣನು ಹುಲ್ಲು ಮತ್ತು ಬಳ್ಳಿಗಳಿಂದ ಆಚ್ಛಾದಿತವಾಗಿದ್ದ ಬಾವಿಯೊಳಗೆ ಬೀಳಲಿಲ್ಲ. ಬಾವಿಯನ್ನು ಆವರಿಸಿಕೊಂಡಿದ್ದ ಸುದೃಢವಾದ ಬಳ್ಳಿಗಳಿಗೆ ಅವನ ಕಾಲುಗಳು ಸಿಕ್ಕಿಹಾಕಿಕೊಂಡಿದ್ದರಿಂದ ಅವನು ತಲೆಕೆಳಗಾಗಿ ಅಲ್ಲಿಯೇ ಇರಬೇಕಾಯಿತು. ಬಾವಿಯಲ್ಲಿ ಮಹಾಸರ್ಪವಿದ್ದಿತು. ಅದನ್ನೂ ಅವನು ನೋಡಿದನು. ಆ ವೇಳೆಗೆ ಸರಿಯಾಗಿ ದೊಡ್ಡದಾದ ಆನೆಯೊಂದು ಆ ಬಾವಿಯ ಬಳಿಗೆ ಬಂದಿತು. ಅದನ್ನೂ ಬ್ರಾಹ್ಮಣನು ನೋಡಿದನು. ಆಸರೆಯಾಗಿದ್ದ ವೃಕ್ಷವನ್ನೇ ಇಲಿಗಳು ಕಡಿದುಹಾಕುತ್ತಿದ್ದುವು. ಇಷ್ಟು ಭಯಗಳ ಮಧ್ಯದಲ್ಲಿ ಕಂಗಾಲಾಗಿದ್ದನು. ಆದರೆ ಅಂತಹ ಸ್ಥಿತಿಯಲ್ಲಿಯೂ ಅವನಿಗೆ ಆಶೆಯೆಂಬುದು ಲುಪ್ತವಾಗಿರಲಿಲ್ಲ. ಬಾವಿಯ ಪಕ್ಕದಲ್ಲಿಯೇ ಮಹಾವೃಕ್ಷವಿದ್ದು ಅದರ ರೆಂಬೆಗಳು ಬಾವಿಯ ಮೇಲೂ ಚಾಚಿಕೊಂಡಿದ್ದುವು. ಆ ರೆಂಬೆಗಳಲ್ಲಿ ಜೇನುಹುಳುಗಳು ಅನೇಕಗೂಡುಗಳನ್ನು ಕಟ್ಟಿಕೊಂಡಿದ್ದುವು. ಆ ಗೂಡಿನಿಂದ ಜೇನುತುಪ್ಪವು ತೊಟ್ಟಿಕ್ಕುತ್ತಿದ್ದಿತು. ಧಾರಾಕಾರವಾಗಿ ಸ್ರವಿಸುತ್ತಿದ್ದ ಆ ಜೇನುತುಪ್ಪವು ಬ್ರಾಹ್ಮಣನ ಬಾಯೊಳಗೂ ಬೀಳುತ್ತಿದ್ದಿತು. ಆ ಸಮಯದಲ್ಲಿ ಮಧುವಿನ ಸವಿಯೇ ಆ ಬ್ರಾಹ್ಮಣನಿಗೆ ಮಹಾನಂದವನ್ನುಂಟುಮಾಡಿತು. ಅವನು ತನ್ನ ಸುತ್ತಲೂ ಇದ್ದ ಭಯವನ್ನು ಸಂಪೂರ್ಣವಾಗಿ ಮರೆತೇಬಿಟ್ಟನು. ಮಧುವಿನ ಆಸ್ವಾದನೆಯಲ್ಲಿಯೇ ನಿರತನಾಗಿಬಿಟ್ಟನು. ಮಧುವಿನ ಆಸ್ವಾದನೆಯಲ್ಲಿ ಅವನಿಗೆ ತೃಪ್ತಿಯೇ ಇಲ್ಲವಾಯಿತು. ಪದೇ-ಪದೇ ಅದನ್ನೇ ಬಯಸುತ್ತಿದ್ದನು.)

**ಏವಂ ಸ ವಸತೇ ತತ್ರ ಕ್ಷಿಪ್ತಃ ಸಂಸಾರಸಾಗರೇ ।**
**ನ ಚೈವ ಜೀವಿತಾಶಾಯಾಂ ನಿರ್ವೇದಮುಪಗಚ್ಛತಿ ॥೨೪॥**

ಈ ರೀತಿಯಲ್ಲಿ ಸಂಸಾರವೆಂಬ ಮಹಾಸಾಗರದಲ್ಲಿ ಬಿದ್ದ ಆ

ಮನುಷ್ಯನು ಆರು ವಿಧವಾದ ಭಯಗಳ ಮಧ್ಯದಲ್ಲಿ ವಾಸಮಾಡಿಕೊಂಡಿದ್ದಾನೆ. ಎಂತಹುದೇ ಭಯಗಳಿದ್ದರೂ ಅವನು ಬದುಕಿರಬೇಕೆಂಬ ಆಶಾಪಾಶದಿಂದ ಬದ್ಧನಾಗಿ ವೈರಾಗ್ಯವನ್ನು ಖಂಡಿತವಾಗಿಯೂ ಹೊಂದುವುದಿಲ್ಲ."

ಃನೆಯ ಅಧ್ಯಾಯವು ಮುಗಿಯಿತು.

೬ನೆಯ ಅಧ್ಯಾಯ ಜಲಪ್ರದಾನಿಕಪರ್ವ (ಮುಂದುವರಿದಿದೆ.)

## ಸಂಸಾರರೂಪವಾದ ಅರಣ್ಯರೂಪಕದ ಸ್ಪಷ್ಟೀಕರಣ

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ :

"ವಾಗ್ಮಿಗಳಲ್ಲಿ ಶ್ರೇಷ್ಠನಾದವನೇ! ನೀನು ಹೇಳುವುದೆಲ್ಲವೂ ನನಗೆ ಪರಮಾಶ್ಚರ್ಯಕರವಾಗಿ ಕಾಣುತ್ತಿದೆ. ನೀನು ಹೇಳಿದಂತೆ ಆ ಬ್ರಾಹ್ಮಣನು ಮಹಾದುಃಖಭಾಗಿಯಾಗಿದ್ದನು ; ಉದ್ವಿಗ್ನನಾಗಿದ್ದನು. ಅತ್ಯಂತಕಷ್ಟದಿಂದ ಆ ಬಾವಿಯಲ್ಲಿ ಜೀವಧಾರಣೆಮಾಡಿಕೊಂಡಿದ್ದನು. ಆ ಸ್ಥಿತಿಯಲ್ಲಿದ್ದ ಅವನಿಗೆ ಸಂತೋಷವಾಗಲೀ, ತೃಪ್ತಿಯಾಗಲೀ ಎಲ್ಲಿಯದು? ಅವನಲ್ಲಿದ್ದುಕೊಂಡು ಸಂತೋಷಪಡಲು ಹೇಗೆತಾನೇ ಸಾಧ್ಯ? ವಿದುರ! ಆ ಬ್ರಾಹ್ಮಣನು ಅಂತಹ ಧರ್ಮಸಂಕಟದಲ್ಲಿ ವಾಸಮಾಡುತ್ತಿದ್ದ ದೇಶವು ಯಾವುದು? ಆ ಆರು ಮಹಾಭಯಗಳಿಂದ ಆ ಮನುಷ್ಯನು ತಪ್ಪಿಸಿಕೊಳ್ಳುವ ಬಗೆ ಹೇಗೆ? ಈ ಎಲ್ಲ ವಿಷಯಗಳನ್ನೂ ನನಗೆ ಹೇಳು. ಅವನ ವಿಷಯದಲ್ಲಿ ನನಗೆ ಮರುಕವುಂಟಾಗಿದೆ. ಅವನ ಉದ್ಧಾರಕ್ಕಾಗಿ ನಾವಾದರೂ ಈಗಲೇ ಪ್ರಯತ್ನಿಸೋಣ."

"ಮಹಾರಾಜ! ಅವನ ಉದ್ಧಾರಕ್ಕಾಗಿ ನೀನು ಶ್ರಮಿಸುವ ಅಗತ್ಯವಿಲ್ಲ. ಮೋಕ್ಷತತ್ತ್ವವನ್ನು ತಿಳಿದವರು ಸಂಸಾರಕ್ಕೆ ಕೊಟ್ಟಿರುವ ಉಪಮಾನವಿದು. ಈ ಕಥೆಯನ್ನು ಮನನಮಾಡಿದ್ದೇ ಆದರೆ ಮನುಷ್ಯನು ವಿರಾಗಿಯಾಗಿ ಪರಲೋಕದಲ್ಲಿ ಪುಣ್ಯದ ಫಲವನ್ನು ಅನುಭವಿಸುತ್ತಾನೆ.

**ಉಚ್ಯತೇ ಯತ್ತು ಕಾನ್ತಾರಂ ಮಹಾಸಂಸಾರ ಏವ ಸಃ ।**
**ವನಂ ದುರ್ಗಂ ಹಿ ಯಚ್ಚೈತತ್ಸಂಸಾರಗಹನಂ ಹಿ ತತ್ ॥೫॥**

ಈ ಮಹಾಸಂಸಾರವನ್ನೇ ಒಂದು ಮಹಾರಣ್ಯಕ್ಕೆ ಹೋಲಿಕೆಯ

ನ್ನಾಗಿ ಹೇಳಿದೆ. ಸಂಸಾರಗಹನವನ್ನೇ ದುರ್ಗಮವಾದ ಅರಣ್ಯವೆಂದು ನಿರೂಪಿಸಿದೆ.

**ಯೇ ಚ ತೇ ಕಥಿತಾ ವ್ಯಾಲಾ ವ್ಯಾಧಯಸ್ತೇ ಪ್ರಕೀರ್ತಿತಾಃ ।**
**ಯಾ ಸಾ ನಾರೀ ಬೃಹತ್ಕಾಯಾ ಅಧ್ಯತಿಷ್ಠತ ತತ್ರ ವೈ ।**
**ತಾಮಾಹುಸ್ತು ಜರಾಂ ಪ್ರಾಜ್ಞಾ ರೂಪವರ್ಣವಿನಾಶಿನೀಮ್ ॥೬॥**

ಉಪಮಾನದಲ್ಲಿ ಪರ್ವತಸದೃಶವಾದ ಸರ್ಪಗಳು ಮಹಾಕಾನನ ದಲ್ಲಿದ್ದುವೆಂದು ಹೇಳಲಿಲ್ಲವೇ? ಮಹಾಸರ್ಪಗಳನ್ನೇ ಸಂಸಾರವೆಂಬ ಮಹಾರಣ್ಯದಲ್ಲಿರುವ ನಾನಾವಿಧವಾದ ವ್ಯಾಧಿಗಳೆಂದು ತಿಳಿಯಬೇಕು. ಬಡವನಾಗಲೀ-ಬಲ್ಲಿದನಾಗಲೀ, ಪಂಡಿತನಾಗಲೀ-ಮೂರ್ಖನಾಗಲೀ ನಾನಾವಿಧವಾದ ವ್ಯಾಧಿಗಳಿಂದ ತೊಳಲುತ್ತಿರುತ್ತಾನೆ. ಬ್ರಾಹ್ಮಣನಿಗೆ ಮಹಾ ರಣ್ಯದಲ್ಲಿ ಕಾಣಿಸಿದ, ದೊಡ್ಡದಾದ ಬಲೆಯನ್ನು ಸರ್ವತ್ರ ಹರಡುತ್ತಿದ್ದ, ಮಹಾಕಾಯಳಾದ ಸ್ತ್ರೀಯು ಯಾವಳಿದ್ದಾಳೋ–ಅವಳನ್ನೇ ಪಂಡಿತರಾದ ವರು ರೂಪವರ್ಣವಿನಾಶಿನಿಯಾದ 'ಜರಾ-ಮುಪ್ಪು' ಎಂದು ಹೇಳುತ್ತಾರೆ. ಬಡವನಿಗಾಗಲೀ-ಬಲ್ಲಿದನಿಗಾಗಲೀ, ಪಾಮರನಿಗಾಗಲೀ-ಪಂಡಿತನಿಗಾಗಲೀ ವೃದ್ಧಾವಸ್ಥೆಯು ತಪ್ಪಿದ್ದೇ ಅಲ್ಲ. ವೃದ್ಧಾಪ್ಯವು ಸರ್ವಪ್ರಾಣಿಗಳನ್ನೂ ಯಾವ ವಿಧವಾದ ತಾರತಮ್ಯವೂ ಇಲ್ಲದೇ ಆವರಿಸಿಕೊಳ್ಳುತ್ತದೆ.

**ಯಸ್ತತ್ರ ಕೂಪೋ ನೃಪತೇ ಸ ತು ದೇಹಃ ಶರೀರಿಣಾಮ್ ।**
**ಯಸ್ತತ್ರ ವಸತೇಽಧಸ್ತಾನ್ಮಹಾಹಿಃ ಕಾಲ ಏವ ಸಃ ।**
**ಅನ್ತಕಃ ಸರ್ವಭೂತಾನಾಂ ದೇಹಿನಾಂ ಸರ್ವಹಾರ್ಯಸೌ ॥೮॥**

ಅರಣ್ಯದಲ್ಲಿ ಆ ಬ್ರಾಹ್ಮಣನು ಕಂಡ ಸಮಾಚ್ಛನ್ನವಾದ ಬಾವಿಯೇ ಪ್ರಾಣಿಗಳ ಶರೀರ. ಬಾವಿಯಲ್ಲಿ ಕಾಣಿಸಿದ ಮಹಾಸರ್ಪವೇ ಕಾಲ ಪುರುಷನು. ಸರ್ವಪ್ರಾಣಿಗಳ ಅಂತಕನೂ ಅವನೇ ಆಗಿರುತ್ತಾನೆ. ದೇಹಧಾರಿಗಳಾದ ಪ್ರಾಣಿಗಳ ಸರ್ವಸ್ವವನ್ನೂ ಅಪಹರಿಸಿಬಿಡುತ್ತಾನೆ.

**ಕೂಪಮಧ್ಯೇ ಚ ಯಾ ಜಾತಾ ವಲ್ಲೀ ಯತ್ರ ಸ ಮಾನವಃ ।**
**ಪ್ರತಾನೇ ಲಮ್ಬತೇ ಲಗ್ನೋ ಜೀವಿತಾಶಾ ಶರೀರಿಣಾಮ್ ॥೯॥**

ಬಾವಿಯ ಮಧ್ಯದಲ್ಲಿ ಯಾವ ಬಳ್ಳಿಯು ಹುಟ್ಟಿಕೊಂಡಿದ್ದಿತೋ ಮತ್ತು

ಆ ಬ್ರಾಹ್ಮಣನು ಯಾವ ಬಳ್ಳಿಯ ಆಸರೆಯಿಂದ ತೂಗಾಡುತ್ತಿದ್ದನೋ– ಅದೇ ದೇಹಧಾರಿಗಳ ಜೀವನದ ಆಶಾಸ್ವರೂಪವಾಗಿರುತ್ತದೆ. (ಎಂತಹ ಮಹಾಕಷ್ಟದಲ್ಲಿಯೂ ಬದುಕಿರಬೇಕೆಂಬ ಆಶೆಯು ಮನುಷ್ಯನನ್ನು ಕಾರ್ಯತತ್ಪರನನ್ನಾಗಿ ಮಾಡುತ್ತದೆ.)

**ಸ ಯಸ್ತು ಕೂಪವೀನಾಹೇ ತಂ ವೃಕ್ಷಂ ಪರಿಸರ್ಪತಿ ।**
**ಷಡ್ವಕ್ತ್ರಃ ಕುಞ್ಜರೋ ರಾಜನ್ಸ ತು ಸಂವತ್ಸರಃ ಸ್ಮೃತಃ ॥೧೦॥**

ಬಾವಿಯ ಮುಖಬಂಧದ ಸಮೀಪದಲ್ಲಿ ಆರು ಮುಖಗಳುಳ್ಳ ಆನೆಯು ವೃಕ್ಷವನ್ನು ಕುರಿತು ಹೋಗುತ್ತಿದೆಯೆಂದು ರೂಪಕದಲ್ಲಿ ಹೇಳಲಿಲ್ಲವೇ? ಆ ಮಹಾಗಜವೇ ಸಂವತ್ಸರರೂಪವಾದುದು.

**ಮುಖಾನಿ ಋತವೋ ಮಾಸಾಃ ಪಾದಾ ದ್ವಾದಶ ಕೀರ್ತಿತಾಃ ।**
**ಯೇ ತು ವೃಕ್ಷಂ ನಿಕೃನ್ತನ್ತಿ ಮೂಷಿಕಾಃ ಸತತೋತ್ಥಿತಾಃ ।**
**ರಾತ್ರ್ಯಹಾನಿ ತು ತಾನ್ಯಾಹುರ್ಭೂತಾನಾಂ ಪರಿಚಿನ್ತಕಾಃ ॥೧೧॥**

ಆನೆಯ ಆರು ಮುಖಗಳೇ ಸಂವತ್ಸರದ ಆರು ಋತುಗಳು. ಆನೆಯ ಹನ್ನೆರಡು ಕಾಲುಗಳೇ ಸಂವತ್ಸರದ ಹನ್ನೆರಡು ಮಾಸಗಳು. ಸರ್ವಕಾಲದಲ್ಲಿಯೂ ಜಾಗ್ರತವಾಗಿದ್ದು ವೃಕ್ಷವನ್ನು ಕತ್ತರಿಸುತ್ತಿರುವ ಕಪ್ಪು ಮತ್ತು ಬಿಳೀಬಣ್ಣದ ಆ ಇಲಿಗಳೇ ಪ್ರಾಣಿಗಳ ಹಗಲು ಮತ್ತು ರಾತ್ರಿಗಳೆಂದು ವಿಚಾರಶೀಲರಾದ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

**ಯೇ ತೇ ಮಧುಕರಾಸ್ತತ್ರ ಕಾಮಾಸ್ತೇ ಪರಿಕೀರ್ತಿತಾಃ ।**
**ಯಾಸ್ತು ತಾ ಬಹುಶೋ ಧಾರಾಃ ಸ್ರವನ್ತಿ ಮಧುನಿಸ್ರವಮ್ ।**
**ತಾಂಸ್ತು ಕಾಮರಸಾನ್ವಿದ್ಯಾದ್ಯತ್ರ ಮಜ್ಜನ್ತಿ ಮಾನವಾಃ ॥೧೨॥**

ಆ ವೃಕ್ಷದ ಮೇಲೆ ಗೂಡುಕಟ್ಟಿಕೊಂಡಿದ್ದ ಜೇನುಹುಳುಗಳೇ ನಾನಾವಿಧವಾದ ಕಾಮನೆಗಳು. ಮಧುವನ್ನು ಸ್ರವಿಸುತ್ತಿದ್ದ ಅನೇಕ ಮಧುಧಾರೆಗಳೇ ಕಾಮರಸಗಳು. ಆ ಕಾಮರಸಗಳಲ್ಲಿಯೇ ಮನುಷ್ಯರು ಮುಳುಗಿಹೋಗುತ್ತಾರೆ.

**ಏವಂ ಸಂಸಾರಚಕ್ರಸ್ಯ ಪರಿವೃತ್ತಿಂ ವಿದುರ್ಬುಧಾಃ ।**
**ಯೇನ ಸಂಸಾರಚಕ್ರಸ್ಯ ಪಾಶಾಂಶ್ಛಿನ್ದನ್ತಿ ವೈ ಬುಧಾಃ ॥೧೪॥**

ಹೀಗೆ ಸಂಸಾರಚಕ್ರದ ಸುತ್ತುವಿಕೆಯನ್ನು ವಿದ್ವಾಂಸರಾದವರು ತಿಳಿಯುತ್ತಾರೆ ಮತ್ತು ಜ್ಞಾನ-ವೈರಾಗ್ಯರೂಪವಾದ ಶಸ್ತ್ರದಿಂದ ಸಂಸಾರಚಕ್ರದ ಪಾಶಗಳನ್ನು ಕಡಿದುಹಾಕುತ್ತಾರೆ.”

೬ನೆಯ ಅಧ್ಯಾಯವು ಮುಗಿಯಿತು.

೭ನೆಯ ಅಧ್ಯಾಯ ಜಲಪ್ರದಾನಿಕಪರ್ವ (ಮುಂದುವರಿದಿದೆ.)

## ಸಂಸಾರಚಕ್ರದ ವರ್ಣನೆ: ರಥದ ರೂಪಕದಿಂದ ಸಂಯಮ, ಜ್ಞಾನ ಮೊದಲಾದ ಮುಕ್ತಿಯ ಉಪಾಯಗಳ ಕಥನ

ಧೃತರಾಷ್ಟ್ರನು ವಿದುರನಿಗೆ ಹೇಳುತ್ತಾನೆ :

“ವಿದುರ! ತತ್ತ್ವದರ್ಶಿಯಾದ ನೀನು ಹೇಳಿದ ಅತ್ಯದ್ಭುತವಾದ ಆಖ್ಯಾನವನ್ನು ಕೇಳಿದೆನು. ನಿನ್ನ ಅಮೃತಸದೃಶವಾದ ಮಾತನ್ನು ಕೇಳುತ್ತಿದ್ದಂತೆಲ್ಲಾ ನನ್ನ ಹರ್ಷವು ಅಧಿಕಗೊಳ್ಳುತ್ತಿದೆ.”

“ಮಹಾರಾಜ! ಪುನಃ ನಾನು ನಿನಗೆ ಮುಕ್ತಿಮಾರ್ಗದ ವಿಷಯವನ್ನೇ ಸವಿಸ್ತರವಾಗಿ ಹೇಳುತ್ತೇನೆ. ವಿಚಕ್ಷಣರಾದವರು ಈ ವಿಷಯವನ್ನು ಕೇಳಿ ಸಂಸಾರಬಂಧನದಿಂದ ವಿಮುಕ್ತರಾಗುತ್ತಾರೆ.

**ಯಥಾ ತು ಪುರುಷೋ ರಾಜನ್ದೀರ್ಘಮಧ್ವಾನಮಾಸ್ಥಿತಃ ।**
**ಕ್ವಚಿತ್ಕ್ವಚಿಚ್ಛ್ರಮಾಚ್ಛ್ರಾನ್ತಃ ಕುರುತೇ ವಾಸಮೇವ ವಾ ॥೩॥**
**ಏವಂ ಸಂಸಾರಪರ್ಯಾಯೇ ಗರ್ಭವಾಸೇಷು ಭಾರತ ।**
**ಕುರ್ವನ್ತಿ ದುರ್ಬುಧಾ ವಾಸಂ ಮುಚ್ಯನ್ತೇ ತತ್ರ ಪಣ್ಡಿತಾಃ ॥೪॥**

ಮಹಾರಾಜ! ಬಹಳ ದೂರದ ಯಾತ್ರೆಯನ್ನು ಕೈಗೊಂಡ ಮಾನವನು ಮಾರ್ಗಾಯಾಸದಿಂದ ಕೆಲವೆಡೆಗಳಲ್ಲಿ ತಂಗುತ್ತಾನೆ. ಸಂಸಾರಪರ್ಯಾಯದಲ್ಲಿಯೂ ಹೀಗೆಯೇ. (ಒಂದು ಪ್ರಾಣಿಯ ಕೊನೆಯ ನಿಲ್ದಾಣವು ಬ್ರಹ್ಮವೇ ಸರಿ. ಆ ಗುರಿಯನ್ನು ಮುಟ್ಟಲು ಹೊರಟ

ಅಪ್ರಾಜ್ಞನಾದ ಪಥಿಕಜೀವನು ಮಾರ್ಗಾಯಾಸದಿಂದ ಅನೇಕಾನೇಕ ಗರ್ಭಗಳಲ್ಲಿ ವಾಸಮಾಡುತ್ತಾ ವಿಶ್ರಾಂತಿಯನ್ನು ಪಡೆಯುತ್ತಾನೆ.) ಆದರೆ ವಿದ್ವಾಂಸರಾದವರು ಇಂತಹ ವಿಶ್ರಾಮಸ್ಥಳಗಳಿಗೆ ಹೋಗದೇ (ಗರ್ಭವಾಸ ಮಾಡದೇ) ಈ ಸಂಸಾರದಿಂದ ಮುಕ್ತರಾಗುತ್ತಾರೆ.

**ತಸ್ಮಾದಧ್ವಾನಮೇವೈತಮಾಹುಃ ಶಾಸ್ತ್ರವಿದೋ ಜನಾಃ ।**
**ಯತ್ತು ಸಂಸಾರಗಹನಂ ವನಮಾಹುರ್ಮನೀಷಿಣಃ ॥೫॥**

ಆದುದರಿಂದ ಶಾಸ್ತ್ರಜ್ಞರು ಗಹನವಾದ ಸಂಸಾರವನ್ನು ಮಹಾರಣ್ಯಕ್ಕೆ ಹೋಲಿಸಿ ಹೇಳಿದಂತೆ ಶಾಸ್ತ್ರವಿದರು ಈ ಗರ್ಭವಾಸವನ್ನು ದೂರಯಾತ್ರೆಯ ತಂಗುದಾಣವೆಂದು ನಿರೂಪಿಸಿರುತ್ತಾರೆ.

ಧೃತರಾಷ್ಟ್ರ! ಇದು ಮನುಷ್ಯರ ಮತ್ತು ಚರಾಚರಪ್ರಾಣಿಗಳ ಸಂಸಾರ ಚಕ್ರವಾಗಿದೆ. ಪಂಡಿತರಾದವರು ಈ ಸಂಸಾರಚಕ್ರದಲ್ಲಿ ಆಸಕ್ತರಾಗಬಾರದು.

**ಶಾರೀರಾ ಮಾನಸಾಶ್ಚೈವ ಮರ್ತ್ಯಾನಾಂ ಯೇ ತು ವ್ಯಾಧಯಃ ।**
**ಪ್ರತ್ಯಕ್ಷಾಶ್ಚ ಪರೋಕ್ಷಾಶ್ಚ ತೇ ವ್ಯಾಲಾಃ ಕಥಿತಾ ಬುಧೈಃ ॥೭॥**

ಮನುಷ್ಯರಿಗೆ ಶಾರೀರವಾದ ಮತ್ತು ಮಾನಸವಾದ, ಪ್ರತ್ಯಕ್ಷವಾದ ಮತ್ತು ಪರೋಕ್ಷವಾದ ವ್ಯಾಧಿಗಳು ಯಾವುವು ಇವೆಯೋ-ಅವುಗಳೆಲ್ಲವೂ ವಿಷಸರ್ಪಗಳೆಂದೇ ವಿದ್ವಾಂಸರಿಂದ ಹೇಳಲ್ಪಟ್ಟಿವೆ.

**ಕ್ಲಿಶ್ಯಮಾನಾಶ್ಚ ತೈರ್ನಿತ್ಯಂ ವಾರ್ಯಮಾಣಾಶ್ಚ ಭಾರತ ।**
**ಸ್ವಕರ್ಮಭಿರ್ಮಹಾವ್ಯಾಲೈರ್ನೋದ್ವಿಜನ್ತ್ಯಲ್ಪಬುದ್ಧಯಃ ॥೮॥**

ಭಾರತ! ಸ್ವಕರ್ಮಗಳ ಫಲರೂಪವಾಗಿರುವ ವ್ಯಾಧಿಸ್ವರೂಪವಾದ ಈ ಮಹಾಸರ್ಪಗಳಿಂದ ನಿತ್ಯವೂ ಪೀಡಿಸಲ್ಪಡುತ್ತಿದ್ದರೂ ಮತ್ತು ತಡೆಯಲ್ಪಡುತ್ತಿದ್ದರೂ ಅಲ್ಪಬುದ್ಧಿಯ ಜನರು ಉದ್ವಿಗ್ನರಾಗುವುದಿಲ್ಲ. (ಘೋರರೂಪವಾದ ಸಂಸಾರದಲ್ಲಿ ವಿರಕ್ತಿಯನ್ನು ಹೊಂದುವುದಿಲ್ಲ.)

**ಅಥಾಪಿ ತೈರ್ವಿಮುಚ್ಯೇತ ವ್ಯಾಧಿಭಿಃ ಪುರುಷೋ ನೃಪ ।**
**ಆವೃಣೋತ್ಯೇವ ತಂ ಪಶ್ಚಾಜ್ಜರಾ ರೂಪವಿನಾಶಿನೀ ॥೯॥**

ಒಂದು ವೇಳೆ ವ್ಯಾಧಿಗಳಿಂದಾದರೂ ಮನುಷ್ಯನು ಮುಕ್ತನಾಗ ಬಹುದು. ಆದರೆ ವಯಸ್ಸು ಕಳೆದಂತೆ (ಮನುಷ್ಯನ ಇಳಿವಯಸ್ಸಿನಲ್ಲಿ) ರೂಪವಿನಾಶಿಯಾದ ಮುಪ್ಪು ಮಾತ್ರ ಮನುಷ್ಯನನ್ನು ಆವರಿಸಿಯೇ ತೀರುತ್ತದೆ.

**ಶಬ್ದರೂಪರಸಸ್ಪರ್ಶೈರ್ಗನ್ಧೈಶ್ಚ ವಿವಿಧೈರಪಿ ।**
**ಮಜ್ಜಮಾನಂ ಮಹಾಪಙ್ಕೇ ನಿರಾಲಮ್ಬೇ ಸಮನ್ತತಃ ॥೧೦॥**

**ಸಂವತ್ಸರಾಶ್ಚ ಮಾಸಾಶ್ಚ ಪಕ್ಷಾಹೋರಾತ್ರಸಂಧಯಃ ।**
**ಕ್ರಮೇಣಾಸ್ಯೋಪಯುಞ್ಜನ್ತಿ ರೂಪಮಾಯುಸ್ತಥೈವ ಚ ॥೧೧॥**

ವಿಷಯರೂಪವಾದ ಶಬ್ದ-ರಸ-ಸ್ಪರ್ಶಗಳಿಂದಲೂ ಮತ್ತು ವಿಧ-ವಿಧವಾದ ಗಂಧಗಳಿಂದಲೂ ಕೂಡಿದ ಸರ್ವತ್ರ ಆಶ್ರಯರಹಿತವಾದ ಸಂಸಾರವೆಂಬ ದೊಡ್ಡ ಕೆಸರಿನಲ್ಲಿ ಮುಳುಗಾಡುತ್ತಿರುವ ಮಾನವನ ರೂಪವನ್ನೂ, ಆಯುಷ್ಯವನ್ನೂ–ಸಂವತ್ಸರ, ಮಾಸ, ಪಕ್ಷ, ಅಹೋರಾತ್ರ ಮತ್ತು ಸಂಧ್ಯೆಗಳು ಕ್ರಮವಾಗಿ ಕ್ಷೀಣಗೊಳಿಸುತ್ತವೆ.

**ಏತೇ ಕಾಲಸ್ಯ ನಿಧಯೋ ನೈತಾಞ್ಜಾನನ್ತಿ ದುರ್ಬುಧಾಃ ।**
**ಧಾತ್ರಾಭಿಲಿಖಿತಾನ್ಯಾಹುಃ ಸರ್ವಭೂತಾನಿ ಕರ್ಮಣಾ ॥೧೨॥**

ಸಂವತ್ಸರರ್ತು-ಮಾಸ-ದಿನಗಳು ಕಾಲನ ಪ್ರತಿನಿಧಿಗಳಾಗಿರುತ್ತವೆ. ಈ ರಹಸ್ಯವನ್ನು ಮೂಢನಾದವನು ತಿಳಿದಿರುವುದಿಲ್ಲ. ಬ್ರಹ್ಮನು ಎಲ್ಲ ಪ್ರಾಣಿಗಳ ಹಣೆಗಳಲ್ಲಿಯೂ ಆಯಾ ಪ್ರಾಣಿಯ ಕರ್ಮಾನುಸಾರವಾಗಿ ಸುಖ-ದುಃಖಗಳನ್ನು ರೇಖೆಗಳ ಮೂಲಕವಾಗಿ ಮೊದಲೇ ಬರೆಯುತ್ತಾನೆಂದು ವಿದ್ವಾಂಸರು ಹೇಳುತ್ತಾರೆ.

**ರಥಃ ಶರೀರಂ ಭೂತಾನಾಂ ಸತ್ತ್ವಮಾಹುಸ್ತು ಸಾರಥಿಮ್ ।**
**ಇನ್ದ್ರಿಯಾಣಿ ಹಯಾನಾಹುಃ ಕರ್ಮಬುದ್ಧಿಸ್ತು ರಶ್ಮಯಃ ॥೧೩॥**

**ತೇಷಾಂ ಹಯಾನಾಂ ಯೋ ವೇಗಂ ಧಾವತಾಮನುಧಾವತಿ ।**
**ಸ ತು ಸಂಸಾರಚಕ್ರೇಽಸ್ಮಿಂಶ್ಚಕ್ರವತ್ಪರಿವರ್ತತೇ ॥೧೪॥**

ಪ್ರಾಣಿಗಳಿಗೆ ಶರೀರವೇ ರಥರೂಪವಾಗಿರುತ್ತದೆ. ಶರೀರದಲ್ಲಿರುವ

ಜೀವನೇ (ಸತ್ತ್ವಗುಣಪ್ರಧಾನವಾದ ಬುದ್ಧಿಯೇ) ಸಾರಥಿಯಾಗುತ್ತಾನೆ. ಇಂದ್ರಿಯಗಳು ಕುದುರೆಗಳ ರೂಪದಲ್ಲಿರುತ್ತವೆ. ಕರ್ಮಾನುಸಾರವಾದ ಮನಸ್ಸು ಲಗಾಮುಗಳ ರೂಪದಲ್ಲಿರುತ್ತದೆ. ನಾಗಾಲೋಟದಿಂದ ಇಂದ್ರಿಯಾರ್ಥಗಳ ಕಡೆಗೇ ಓಡುತ್ತಿರುವ ಇಂದ್ರಿಯರೂಪವಾದ ಕುದುರೆಗಳನ್ನು ಅನುಸರಿಸಿ ಯಾವನು ಓಡುತ್ತಿರುತ್ತಾನೆಯೋ–ಅವನು ಈ ಸಂಸಾರಚಕ್ರದಲ್ಲಿ ಚಕ್ರದಂತೆಯೇ ಸುತ್ತುತ್ತಿರುತ್ತಾನೆ.

ಯಸ್ತಾನ್ಸಂಯಮತೇ ಬುದ್ಧ್ಯಾ ಸಂಯತೋ ನ ನಿವರ್ತತೇ ।
ಯೇ ತು ಸಂಸಾರಚಕ್ರೇಽಸ್ಮಿಂಶ್ಚಕ್ರವತ್ಪರಿವರ್ತತೇ ॥೧೫॥

ಭ್ರಮಮಾಣಾ ನ ಮುಹ್ಯನ್ತಿ ಸಂಸಾರೇ ನ ಭ್ರಮನ್ತಿ ಚ ॥೧೬॥

ಯಾವನು ಸಂಯಮಶೀಲನಾಗಿ ಇಂದ್ರಿಯರೂಪವಾದ ಕುದುರೆಗಳನ್ನು ಬುದ್ಧಿಯಿಂದ ನಿಯಂತ್ರಣಗೊಳಿಸುತ್ತಾನೆಯೋ–ಅವನು ಸಂಸಾರಕ್ಕೆ ಪುನಃ ಹಿಂದಿರುಗುವುದಿಲ್ಲ. ಯಾರು ಚಕ್ರದಂತೆ ಪರಿವರ್ತನೆಯಿಂದ ಕೂಡಿರುವ ಈ ಸಂಸಾರಚಕ್ರದಲ್ಲಿ ಸಿಕ್ಕಿಕೊಂಡಿದ್ದರೂ ಮೋಹವಶರಾಗುವುದಿಲ್ಲವೋ–ಅವರು ಪುನಃ ಈ ಸಂಸಾರದಲ್ಲಿ ಅಲೆದಾಡುವುದಿಲ್ಲ.

ಸಂಸಾರೇ ಭ್ರಮತಾಂ ರಾಜನ್ದುಃಖಮೇತದ್ಧಿ ಜಾಯತೇ ।
ತಸ್ಮಾದಸ್ಯ ನಿವೃತ್ತ್ಯರ್ಥಂ ಯತ್ನಮೇವಾಚರೇದ್ಬುಧಃ ।
ಉಪೇಕ್ಷಾ ನಾತ್ರ ಕರ್ತವ್ಯಾ ಶತಶಾಖಃ ಪ್ರವರ್ಧತೇ ॥೧೭॥

ಸಂಸಾರದಲ್ಲಿಯೇ ಅಲೆದಾಡುವ ಜನರಿಗೆ ಜನನ-ಮರಣ-ದುಃಖಗಳಿದ್ದೇ ಇರುತ್ತವೆ. ಆದುದರಿಂದ ವಿದ್ವಾಂಸನಾದವನು ಈ ಸಂಸಾರದಿಂದ ನಿವೃತ್ತಿಯನ್ನು ಹೊಂದಲು ಸರ್ವಪ್ರಯತ್ನವನ್ನೂ ಅವಶ್ಯವಾಗಿ ಮಾಡಲೇಬೇಕು. ಈ ವಿಷಯದಲ್ಲಿ ಸರ್ವಥಾ ಉಪೇಕ್ಷೆಯನ್ನು ಮಾಡಲೇಬಾರದು. ಒಂದು ವೇಳೆ ಉಪೇಕ್ಷೆಮಾಡಿದರೆ ಈ ಸಂಸಾರವೃಕ್ಷವು ನೂರಾರು ಕವಲುಗಳಾಗಿ ಒಡೆದು ವರ್ಧಿಸುತ್ತಲೇ ಇರುತ್ತದೆ. (ಕೋಟಿ-ಕೋಟಿ ಜನ್ಮಗಳನ್ನೆತ್ತಬೇಕಾಗುತ್ತದೆ.)

ಯತೇನ್ದ್ರಿಯೋ ನರೋ ರಾಜನ್ಕ್ರೋಧಲೋಭನಿರಾಕೃತಃ ।
ಸಂತುಷ್ಟಃ ಸತ್ಯವಾದೀ ಯಃ ಸ ಶಾನ್ತಿಮಧಿಗಚ್ಛತಿ ॥೧೮॥

ಯಾವನು ಜಿತೇಂದ್ರಿಯನಾಗಿರುತ್ತಾನೆಯೋ, ಕ್ರೋಧ-ಲೋಭಗಳಿಂದ ವರ್ಜಿತನಾಗಿರುತ್ತಾನೆಯೋ, ಯದೃಚ್ಛಾಲಾಭಸಂತುಷ್ಟನಾಗಿರುತ್ತಾನೆಯೋ ಮತ್ತು ಸತ್ಯನಿಷ್ಠನಾಗಿರುತ್ತಾನೆಯೋ–ಅವನು ಮನಃಶಾಂತಿಯನ್ನು ಪಡೆಯುತ್ತಾನೆ.

**ಯಾಮ್ಯಮಾಹೂ ರಥಂ ಹ್ಯೇನಂ ಮುಹ್ಯನ್ತೇ ಯೇನ ದುರ್ಬುಧಾಃ ।**
**ಸ ಚೈತತ್ಪ್ರಾಪ್ನು ಯಾದ್ರಾಜನ್ಯತ್ತ್ವಂ ಪ್ರಾಪ್ತೋ ನರಾಧಿಪ ॥೧೯॥**

ಮಹಾರಾಜ! ಈ ಸಂಸಾರವನ್ನು ಯಾಮ್ಯರಥವೆಂದು (ಯಮನ ಲೋಕಕ್ಕೊಯ್ಯುವ ರಥವೆಂದು) ವಿದ್ವಾಂಸರು ಹೇಳುತ್ತಾರೆ. ಮೂರ್ಖರಾದವರು ಈ ಸಂಸಾರಸುಖದಿಂದಲೇ ವಿಮೋಹಿತರಾಗಿಬಿಡುತ್ತಾರೆ. ಅಂತಹವರು ನೀನೀಗ ಹೊಂದಿರುವ ದುಃಸ್ಥಿತಿಯನ್ನೇ ಹೊಂದುತ್ತಾರೆ.

**ಅನುತರ್ಷುಲಮೇವೈತದ್ದುಃಖಂ ಭವತಿ ಮಾರಿಷ ।**
**ರಾಜ್ಯನಾಶಂ ಸುಹೃನ್ನಾಶಂ ಸುತನಾಶಂ ಚ ಭಾರತ ॥೨೦॥**

ಈ ತೃಷ್ಣಾಶೀಲತೆಯು (ಅತಿವ್ಯಾಮೋಹವು) ಮಹಾದುಃಖಕ್ಕೆ ಕಾರಣವಾಗುತ್ತದೆ. ಇದೇ ರಾಜ್ಯ-ಸುಹೃತ್ಸುತರ ನಾಶರೂಪವಾದ ದುಃಖಕ್ಕೂ ಕಾರಣವಾಗುತ್ತದೆ.

**ಸಾಧುಃ ಪರಮದುಃಖಾನಾಂ ದುಃಖಭೈಷಜ್ಯಮಾಚರೇತ್ ।**
**ಜ್ಞಾನೌಷಧಮವಾಪ್ಯೇಹ ದೂರಪಾರಂ ಮಹೌಷಧಮ್ ।**
**ಛಿನ್ದ್ಯಾದ್ದುಃಖಮಹಾವ್ಯಾಧಿಂ ನರಃ ಸಂಯತಮಾನಸಃ ॥೨೧॥**

ಸತ್ಪುರುಷನು ತನ್ನ ಮನಸ್ಸನ್ನು ವಶಪಡಿಸಿಕೊಂಡು ಸುದುರ್ಲಭವಾದ ಜ್ಞಾನರೂಪವಾದ ಮಹೌಷಧವನ್ನು ಪಡೆದು ತನಗೊದಗುವ ಮಹಾದುಃಖಗಳಿಗೆ ಚಿಕಿತ್ಸೆಯನ್ನು ಮಾಡಬೇಕು. ಹೀಗೆ ಜ್ಞಾನರೂಪವಾದ ಔಷಧದಿಂದ ದುಃಖರೂಪವಾದ ಮಹಾವ್ಯಾಧಿಯನ್ನು ವಿನಾಶಗೊಳಿಸಬೇಕು.

**ನ ವಿಕ್ರಮೋ ನ ಚಾಪ್ಯರ್ಥೋ ನ ಮಿತ್ರಂ ನ ಸುಹೃಜ್ಜನಃ ।**
**ತಥೋನ್ಮೋಚಯತೇ ದುಃಖಾದ್ಯಥಾತ್ಮಾ ಸ್ಥಿರಸಂಯಮಃ ॥೨೨॥**

ಸ್ಥಿರಚಿತ್ತನಾದ ಮತ್ತು ಜಿತೇಂದ್ರಿಯನಾದ ಮನುಷ್ಯನು

ಜ್ಞಾನೌಷಧದ ಮೂಲಕವಾಗಿ ತನ್ನಲ್ಲಿರುವ ದುಃಖವೆಂಬ ಮಹಾವ್ಯಾಧಿಯನ್ನು ಹೋಗಲಾಡಿಸಿಕೊಳ್ಳುವಂತೆ–ಅವನಲ್ಲಿರುವ ಪರಾಕ್ರಮವಾಗಲೀ ಐಶ್ವರ್ಯವಾಗಲೀ–ಆ ವ್ಯಾಧಿಯನ್ನು ನಿರಸನಗೊಳಿಸಲಾರವು. ಅವನ ಮಿತ್ರರಾಗಲೀ ಸುಹೃದರಾಗಲೀ– ದುಃಖವೆಂಬ ವ್ಯಾಧಿಯನ್ನು ಹೋಗಲಾಡಿಸ ಲಾರರು. (ಮನಸ್ಸನ್ನು ವಶಪಡಿಸಿಕೊಂಡು ವಿಚಾರಮಾಡಿ ದುಃಖವು ಮೋಹದ ಮೂಲವಾಗಿ ಬಂದಿದೆಯೆಂಬುದನ್ನು ಮನಗಂಡು ಜ್ಞಾನದ ಆಶ್ರಯದಿಂದ ಅದನ್ನು ದೂರೀಕರಿಸಬೇಕು.)

**ತಸ್ಮಾನ್ಮೈತ್ರಂ ಸಮಾಸ್ಥಾಯ ಶೀಲಮಾಪದ್ಯ ಭಾರತ ।**
**ದಮಸ್ತ್ಯಾಗೋಽಪ್ರಮಾದಶ್ಚ ತೇ ತ್ರಯೋ ಬ್ರಹ್ಮಣೋ ಹಯಾಃ ॥**

**ಶೀಲರಶ್ಮಿಸಮಾಯುಕ್ತಃ ಸ್ಥಿತೋ ಯೋ ಮಾನಸೇ ರಥೇ ।**
**ತ್ಯಕ್ತ್ವಾ ಮೃತ್ಯುಭಯಂ ರಾಜನ್ಬ್ರಹ್ಮಲೋಕಂ ಸ ಗಚ್ಛತಿ ॥೨೪॥**

ಆದುದರಿಂದ ಕಾಮ-ಕ್ರೋಧ-ಲೋಭಗಳನ್ನು ದೂರೀಕರಿಸಿ ಸರ್ವತ್ರ ಸರ್ವರಲ್ಲಿಯೂ ಮೈತ್ರೀಭಾವವನ್ನು ಹೊಂದಿ ಶೀಲವನ್ನು ಬೆಳೆಸಿಕೊಳ್ಳಬೇಕು. ದಮ (ಜಿತೇಂದ್ರಿಯತೆ), ತ್ಯಾಗ ಮತ್ತು ಅಪ್ರಮಾದ ಈ ಮೂರು ಬ್ರಹ್ಮನ ಸ್ಥಾನಕ್ಕೊಯ್ಯುವ ಮೂರು ಕುದುರೆಗಳಾಗಿವೆ. ಯಾವನು ಮನಸ್ಸೆಂಬ ರಥದಲ್ಲಿ ಕುಳಿತು ದಮ, ತ್ಯಾಗ ಮತ್ತು ಅಪ್ರಮಾದಗಳೆಂಬ ಮೂರು ಕುದುರೆಗಳನ್ನು ಆ ರಥಕ್ಕೆ ಕಟ್ಟಿ, ಶೀಲವೆಂಬ ಲಗಾಮಿನಿಂದ ಕುದುರೆಗಳನ್ನು ನಿಯಂತ್ರಿಸುತ್ತಾನೆಯೋ–ಅವನು ಮೃತ್ಯುವಿನ ಭಯವೇ ಇಲ್ಲದವನಾಗಿ ಬ್ರಹ್ಮಲೋಕವನ್ನು ಸೇರುತ್ತಾನೆ.

**ಅಭಯಂ ಸರ್ವಭೂತೇಭ್ಯೋ ಯೋ ದದಾತಿ ಮಹೀಪತೇ ।**
**ಸ ಗಚ್ಛತಿ ಪರಂ ಸ್ಥಾನಂ ವಿಷ್ಣೋಃ ಪದಮನಾಮಯಮ್ ॥೨೫॥**

ಭೂಪಾಲ! ಯಾವನು ಎಲ್ಲ ಪ್ರಾಣಿಗಳಿಗೂ ಅಭಯಪ್ರದಾನ ಮಾಡುತ್ತಾನೆಯೋ–ಅವನು ಭಗವಾನ್ ವಿಷ್ಣುವಿನ ಅವಿನಾಶಿಯಾದ ಮತ್ತು ಶ್ರೇಷ್ಠವಾದ ಸ್ಥಾನಕ್ಕೆ ಹೋಗುತ್ತಾನೆ.

**ನ ತತ್ಕ್ರತುಸಹಸ್ರೇಣ ನೋಪವಾಸೈಶ್ಚ ನಿತ್ಯಶಃ ।**
**ಅಭಯಸ್ಯ ಚ ದಾನೇನ ಯತ್ಫಲಂ ಪ್ರಾಪ್ನುಯಾನ್ನರಃ ॥೨೬॥**

ಸರ್ವಪ್ರಾಣಿಗಳಿಗೂ ಅಭಯಪ್ರದಾನಮಾಡುವುದರಿಂದ ಮನುಷ್ಯನು ಯಾವ ಮಹಾಫಲವನ್ನು ಹೊಂದುತ್ತಾನೆಯೋ–ಅಂತಹ ಮಹಾಫಲವನ್ನು ಅವನು ಸಾವಿರಾರು ಯಾಗಗಳನ್ನು ಮಾಡುವುದರಿಂದಾಗಲೀ, ನಿತ್ಯೋಪವಾಸಗಳಿಂದಾಗಲೀ ಹೊಂದಲಾರನು.

**ನ ಹ್ಯಾತ್ಮನಃ ಪ್ರಿಯತರಂ ಕಿಂಚಿದ್ಭೂತೇಷು ನಿಶ್ಚಿತಮ್ ।**
**ಅನಿಷ್ಟಂ ಸರ್ವಭೂತಾನಾಂ ಮರಣಂ ನಾಮ ಭಾರತ ।**
**ತಸ್ಮಾತ್ಸರ್ವೇಷು ಭೂತೇಷು ದಯಾ ಕಾರ್ಯಾ ವಿಪಶ್ಚಿತಾ ॥೨೭॥**

ಭಾರತ! ಪ್ರಾಣಿಗಳಿಗೆ ಆತ್ಮಕ್ಕಿಂತಲೂ ಹೆಚ್ಚು ಪ್ರಿಯವಾದುದು ಯಾವುದೂ ಇಲ್ಲವೆಂಬುದು ಸಿದ್ಧಾಂತವಾಗಿಹೋಗಿದೆ. ಈ ಕಾರಣದಿಂದಲೇ ಎಲ್ಲ ಪ್ರಾಣಿಗಳಿಗೂ 'ಮರಣ'–ಎಂಬ ಶಬ್ದವೇ ಅನಿಷ್ಟವಾದುದು. ಆದುದರಿಂದ ವಿದ್ವಾಂಸನಾದವನು ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ದಯೆಯನ್ನು ತೋರಬೇಕು.

**ನಾನಾಮೋಹಸಮಾಯುಕ್ತಾ ಬುದ್ಧಿಜಾಲೇನ ಸಂವೃತಾಃ ।**
**ಅಸೂಕ್ಷ್ಮದೃಷ್ಟಯೋ ಮನ್ದಾ ಭ್ರಾಮ್ಯನ್ತೇ ತತ್ರ ತತ್ರ ಹ ॥೨೮॥**
**ಸುಸೂಕ್ಷ್ಮದೃಷ್ಟಯೋ ರಾಜನ್ವ್ರಜನ್ತಿ ಬ್ರಹ್ಮ ಶಾಶ್ವತಮ್ ॥೨೯॥**

ನಾನಾವಿಧವಾದ ಮೋಹಗಳಿಗೆ ಒಳಗಾಗಿರುವ, ಕುಬುದ್ಧಿಯೆಂಬ ಬಲೆಯಿಂದ ಸಂವೃತವಾಗಿರುವ, ಸೂಕ್ಷ್ಮದೃಷ್ಟಿರಹಿತರಾದ ಮೂರ್ಖರು ನಾನಾ ಯೋನಿಗಳಲ್ಲಿ ಬಿದ್ದು ಈ ಸಂಸಾರದಲ್ಲಿ ತೊಳಲಾಡುತ್ತಿರುತ್ತಾರೆ. ಆದರೆ ಸುಸೂಕ್ಷ್ಮದೃಷ್ಟಿಯುಳ್ಳವರು ಸಂಸಾರಬಂಧನವನ್ನು ಜ್ಞಾನವೆಂಬ ಕತ್ತಿಯಿಂದ ಭೇದಿಸಿಕೊಂಡು ಶಾಶ್ವತವಾದ ಬ್ರಹ್ಮಲೋಕಕ್ಕೆ ಹೋಗುತ್ತಾರೆ."

೭ನೆಯ ಅಧ್ಯಾಯವು ಮುಗಿಯಿತು.

೮ನೆಯ ಅಧ್ಯಾಯ ಜಲಪ್ರದಾನಿಕಪರ್ವ (ಮುಂದುವರಿದಿದೆ.)

## ವ್ಯಾಸರು ಸಂಹಾರಕಾರ್ಯವು ಅನಿವಾರ್ಯವಾಗಿತ್ತೆಂದು ಹೇಳಿ ಧೃತರಾಷ್ಟ್ರನನ್ನು ಸಮಾಧಾನಗೊಳಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

ಜನಮೇಜಯಮಹಾರಾಜ! ಕುರುಶ್ರೇಷ್ಠನಾದ ಧೃತರಾಷ್ಟ್ರನು ವಿದುರನು ಹೇಳಿದ ಮಾತನ್ನು ಕೇಳಿ ಪುತ್ರಶೋಕದಿಂದ ಸಂತಪ್ತನಾಗಿ ಮೂರ್ಛಿತನಾಗಿ ಭೂಮಿಯ ಮೇಲೆ ಬಿದ್ದನು. ಧೃತರಾಷ್ಟ್ರನು ಮೂರ್ಛಿತನಾಗಿ ಕೆಳಕ್ಕೆ ಬಿದ್ದುದನ್ನು ನೋಡಿ ಅವನ ಎಲ್ಲ ಬಂಧುಗಳೂ, ಕೃಷ್ಣದ್ವೈಪಾಯನರೂ, ವಿದುರ-ಸಂಜಯರೂ, ಇನ್ನೂ ಅನೇಕ ಸುಹೃದರೂ, ವಿಶ್ವಸನೀಯರಾದ ದ್ವಾರಪಾಲಕರೂ ಸುಶೀತಲವಾದ ಮತ್ತು ಸುಖಾವಹ ವಾದ ನೀರನ್ನು ಧೃತರಾಷ್ಟ್ರನ ಮೇಲೆ ಚುಮುಕಿಸಿದರು. ತಾಲವ್ಯಜನಗಳಿಂದ ಬೀಸತೊಡಗಿದರು. ಕೈಗಳಿಂದ ಧೃತರಾಷ್ಟ್ರನ ಶರೀರವನ್ನು ನೇವರಿಸಿದರು. ಮೂರ್ಛಿತನಾಗಿ ಬಿದ್ದಿದ್ದ ಧೃತರಾಷ್ಟ್ರನನ್ನು ಪ್ರಯತ್ನಪೂರ್ವಕವಾಗಿ ಎಚ್ಚರಗೊಳ್ಳುವಂತೆ ಮಾಡುತ್ತಾ (ಶೈತ್ಯೋಪಚಾರಗಳನ್ನು ಮಾಡುತ್ತಾ) ಬಹಳ ಹೊತ್ತಿನವರೆಗೆ ಅವರೆಲ್ಲರೂ ಅವನ ಜೊತೆಯಲ್ಲಿಯೇ ಇದ್ದರು. ಬಹಳ ಹೊತ್ತಿನನಂತರ ಎಚ್ಚರಗೊಂಡ (ಪುತ್ರವ್ಯಸನದಲ್ಲಿ ಮುಳುಗಿ ಹೋಗಿದ್ದ) ಮಹೀಪತಿಯಾದ ಧೃತರಾಷ್ಟ್ರನು ದೀರ್ಘಕಾಲ ವಿಲಪಿಸುತ್ತಲೇ ಇದ್ದನು.

**ಧಿಗಸ್ತು ಖಲು ಮಾನುಷ್ಯಂ ಮಾನುಷೇಷು ಪರಿಗ್ರಹೇ ।**
**ಯತೋ ಮೂಲಾನಿ ದುಃಖಾನಿ ಸಮ್ಭವನ್ತಿ ಮುಹುರ್ಮುಹುಃ ॥೬॥**

"ಈ ಮನುಷ್ಯಜನ್ಮಕ್ಕೆ ಧಿಕ್ಕಾರವಿರಲಿ! ಅದರಲ್ಲಿಯೂ ವಿವಾಹಾದಿಗಳನ್ನು ಮಾಡಿಕೊಂಡು, ಸಂಸಾರವನ್ನು ಹೆಚ್ಚಿಸಿಕೊಂಡು, ಯಾವುದಾದರೂ ಕಾರಣದಿಂದ ಅನವರತವಾಗಿ ದುಃಖಪಡುತ್ತಲೇ ಇರಬೇಕಾಗುವಂತಹ ಈ ಮನುಷ್ಯಜನ್ಮಕ್ಕೆ ಧಿಕ್ಕಾರವಿರಲಿ! ಏಕೆಂದರೆ : ಈ ಸಂಸಾರದ ವೃದ್ಧಿಯೇ ಎಲ್ಲ ದುಃಖಗಳಿಗೂ ಮೂಲವಾಗಿರುತ್ತದೆ. ಅದೂ ಅಲ್ಲದೇ ದುಃಖಗಳು ಪದೇ-ಪದೇ ಸಂಭವಿಸುತ್ತಲೇ ಇರುತ್ತದೆ.

**ಪುತ್ರನಾಶೇಽರ್ಥನಾಶೇ ಚ ಜ್ಞಾತಿಸಮ್ಬನ್ಧಿನಾಮಥ ।**
**ಪ್ರಾಪ್ಯತೇ ಸುಮಹದ್ದುಃಖಂ ವಿಷಾಗ್ನಿಪ್ರತಿಮಂ ವಿಭೋ ॥೭॥**

ವಿಭುವೇ! ಪುತ್ರನಾಶ, ಅರ್ಥನಾಶ, ಜ್ಞಾತಿ-ಸಂಬಂಧಿಗಳ ನಾಶ–

ಇವುಗಳಿಂದ ವಿಷ ಮತ್ತು ಅಗ್ನಿಗಳಿಗೆ ಸಮಾನವಾದ ಮಹಾದುಃಖವು ಪ್ರಾಪ್ತವಾಗುತ್ತದೆ. (ಅರ್ಥ-ಪುತ್ರ-ಜ್ಞಾತಿ-ಸಂಬಂಧಿಗಳ ವಿನಾಶವು ವಿಷಾಗ್ನಿಗಳಂತೆಯೇ ಅತ್ಯಂತ ಪರಿತಾಪವನ್ನುಂಟುಮಾಡುತ್ತದೆ.)

**ಯೇನ ದಹ್ಯನ್ತಿ ಗಾತ್ರಾಣಿ ಯೇನ ಪ್ರಜ್ಞಾ ವಿನಶ್ಯತಿ ।**
**ಯೇನಾಭಿಭೂತಃ ಪುರುಷೋ ಮರಣಂ ಬಹು ಮನ್ಯತೇ ॥೮॥**

ಅರ್ಥ-ಪುತ್ರ-ಜ್ಞಾತಿ-ಸಂಬಂಧಿಗಳ ವಿನಾಶದಿಂದ ಉಂಟಾಗುವ ದುಃಖವು ಶರೀರಾವಯವಗಳನ್ನು ದಹಿಸುತ್ತಿರುತ್ತದೆ. ಅದರಿಂದ ಮೂರ್ಛೆಯೇ ಉಂಟಾಗುತ್ತದೆ. ಬುದ್ಧಿಯೂ ಹಾಳಾಗುತ್ತದೆ. ಇಂತಹ ಪರಮದುಃಖದಿಂದ ಪೀಡಿತನಾದ ಮನುಷ್ಯನು ಹೀಗೆ ದುಃಖ ಪಡುವುದಕ್ಕಿಂತಲೂ ಮರಣವೇ ಲೇಸೆಂದು ಭಾವಿಸುತ್ತಾನೆ.

ಭಾಗ್ಯದ ವೈಪರೀತ್ಯದಿಂದಾಗಿ (ದೌರ್ಭಾಗ್ಯದಿಂದಾಗಿ) ನನಗಿಂದು ಅಂತಹ ಅರ್ಥ-ಪುತ್ರ-ಜ್ಞಾತಿ-ಸಂಬಂಧಿಗಳ ವಿನಾಶದ ದುಃಖವು ಪ್ರಾಪ್ತವಾಗಿದೆ. ಪ್ರಾಣತೊರೆಯುವುದರ ಹೊರತಾಗಿ ನಾನು ಈ ಮಹಾದುಃಖದಿಂದ ಪಾರಾಗಲು ಸಾಧ್ಯವೇ ಇಲ್ಲವಾಗಿದೆ. ದ್ವಿಜಸತ್ತಮರೇ! ನಾನು ಈಗ ಹಾಗೆಯೇ ಮಾಡುತ್ತೇನೆ. (ನಾನು ಪ್ರಾಣಗಳನ್ನು ತೊರೆದುಬಿಡುತ್ತೇನೆ.)"

ಅತ್ಯಂತಶೋಕಾವಿಷ್ಟನಾಗಿದ್ದ ಧೃತರಾಷ್ಟ್ರನು ಬ್ರಹ್ಮವಿದರಾದ, ಪಿತೃಗಳಾದ, ಮಹಾತ್ಮರಾದ ವ್ಯಾಸರನ್ನು ಕುರಿತು ಹೀಗೆ ಹೇಳಿ ದಿಙ್ಮೂಢ ನಾದನು. ತನ್ನ ಮಕ್ಕಳನ್ನೇ ಚಿಂತಿಸುತ್ತಾ ರಾಜನು ಯಾವ ಮಾತನ್ನೂ ಆಡದೇ ಕುಳಿತುಬಿಟ್ಟನು.

ಜನಮೇಜಯ! ಧೃತರಾಷ್ಟ್ರನ ಮಾತನ್ನು ಕೇಳಿ ಪ್ರಭುಗಳಾದ ಕೃಷ್ಣದ್ವೈಪಾಯನರು ಪುತ್ರಶೋಕಾಭಿತಪ್ತನಾಗಿದ್ದ ಅವನನ್ನು ಕುರಿತು ಈ ಮಾತುಗಳನ್ನು ಹೇಳಿದರು :

"ಧೃತರಾಷ್ಟ್ರ! ಮಹಾಬಾಹುವೇ! ನೀನು ವೇದ-ಶಾಸ್ತ್ರಗಳ ಜ್ಞಾನವನ್ನು ಪಡೆದಿರುವೆ. ಮೇಧಾವಿಯಾಗಿರುವೆ. ಧರ್ಮಾರ್ಥಗಳ ಸಾಧನೆಯಲ್ಲಿ ಮಹಾಕುಶಲನಾಗಿರುವೆ. ನಾನು ಹೇಳುವುದನ್ನು ಕೇಳು. ನಿನಗೆ ತಿಳಿಯದೇ

ಇರುವುದು ಯಾವುದೂ ಇಲ್ಲ. ತಿಳಿಯಬೇಕಾದುದೂ ಯಾವುದೂ ಇಲ್ಲ. ನೀನು ಮನುಷ್ಯರು ಅಶಾಶ್ವತರೆಂಬ ವಿಷಯವನ್ನೂ ತಿಳಿದವನಾಗಿರುವೆ. ಇದರಲ್ಲಿ ಸಂಶಯವೇ ಇಲ್ಲ.

**ಅಧ್ರುವೇ ಜೀವಲೋಕೇ ಚ ಸ್ಥಾನೇ ವಾ ಶಾಶ್ವತೇ ಸತಿ ।**
**ಜೀವಿತೇ ಮರಣಾನ್ತೇ ಚ ಕಸ್ಮಾಚ್ಛೋಚಸಿ ಭಾರತ ॥೧೫॥**

ಜೀವಗಳಿಂದ ಯುಕ್ತವಾಗಿರುವ ಈ ಜಗತ್ತೇ ಅಶಾಶ್ವತವಾದುದು. ಸನಾತನವಾದ ಪರಮಪದವೊಂದೇ ಶಾಶ್ವತವಾದುದು. ಜೀವನಕ್ಕೆ ಮರಣವೇ ಅಂತ್ಯವಾಗಿರುತ್ತದೆ. ಹೀಗಿರುವಾಗ ನೀನು ದುಃಖಪಡುವುದೇಕೆ?

ನಿನ್ನ ಮಗನನ್ನೇ ಕಾರಣನನ್ನಾಗಿ ಮಾಡಿಕೊಂಡು ಕಾಲಯೋಗದಿಂದ ಈ ವೈರದ ಉತ್ಪತ್ತಿಯು ನಿನ್ನ ಪ್ರತ್ಯಕ್ಷದಲ್ಲಿಯೇ ಆಯಿತು. ಕುರುಗಳ ಸಂಹಾರವು ಅವಶ್ಯವಾಗಿ ನಡೆಯಲೇಬೇಕಾಗಿದ್ದಿತು. ಹಾಗೆಯೇ ನಡೆದೂ ಹೋಯಿತು. ಕುರುವೀರರೆಲ್ಲರೂ ಶ್ರೇಷ್ಠವಾದ ಸದ್ಗತಿಯನ್ನು ಪಡೆದುಕೊಂಡಿರುತ್ತಾರೆ. ಅವರನ್ನು ಕುರಿತು ನೀನೇಕೆ ಈಗ ದುಃಖಿಸುವೆ? ಮಹಾತ್ಮನಾದ ವಿದುರನಿಗೆ ಈ ಸಂಗತಿಯು ಮೊದಲೇ ತಿಳಿದಿದ್ದಿತು. ಅವನು ಇಬ್ಬರ ನಡುವೆ ಸಂಧಿಯನ್ನು ನಡೆಸಬೇಕೆಂದು ತನ್ನ ಸರ್ವಶಕ್ತಿಯನ್ನೂ ಯೋಜಿಸಿ ಪ್ರಯತ್ನಿಸಿದನು. ಆದರೆ ಅದು ಫಲಿಸಲಿಲ್ಲ.

**ನ ಚ ದೈವಕೃತೋ ಮಾರ್ಗಃ ಶಕ್ಯೋ ಭೂತೇನ ಕೇನಚಿತ್ ।**
**ಘಟತಾಪಿ ಚಿರಂ ಕಾಲಂ ನಿಯನ್ತುಮಿತಿ ಮೇ ಮತಿಃ ॥೧೯॥**

ಸುದೀರ್ಘಕಾಲದವರೆಗೆ ಪ್ರಯತ್ನವನ್ನು ನಡೆಸಿದರೂ ಯಾವ ಪ್ರಾಣಿಯಾದರೂ ದೈವಕೃತವಾದ ಮಾರ್ಗವನ್ನು (ದೈವದ ಇಚ್ಛೆಯನ್ನು) ತಡೆಯಲಾರದೆಂಬುದು ನನ್ನ ಖಚಿತವಾದ ಅಭಿಪ್ರಾಯವಾಗಿದೆ. ದೇವತೆಗಳ ಯಾವ ಕಾರ್ಯವನ್ನು (ಮಾತನ್ನು) ನಾನು ಪ್ರತ್ಯಕ್ಷವಾಗಿಯೇ ನೋಡಿದೆನೋ (ಕೇಳಿದೆನೋ) – ಅದನ್ನೇ ನಿನಗೆ ಯಥಾವತ್ತಾಗಿ ಹೇಳುತ್ತೇನೆ. ದೇವತೆಗಳು ಹೇಳಿದ ಆ ಮಾತನ್ನು ಕೇಳುವುದರಿಂದಲಾದರೂ ನಿನಗೆ ಸ್ಥೈರ್ಯವುಂಟಾಗಲಿ.

ಶ್ರಮವನ್ನು ಸಂಪೂರ್ಣವಾಗಿ ಜಯಿಸಿರುವ ನಾನು ಹಿಂದೆ ಅತ್ಯಂತ

ವೇಗದಿಂದ ಇಂದ್ರನ ಸಭೆಗೆ ಹೋದೆನು. ಅಲ್ಲಿ ನಾನು ದೇವತೆಗಳೆಲ್ಲರೂ ಸಮಾವೇಶಗೊಂಡಿರುವುದನ್ನು ಕಂಡೆನು. ನಾರದರೇ ಮೊದಲಾದ ಎಲ್ಲ ದೇವರ್ಷಿಗಳೂ ಅಲ್ಲಿ ಉಪಸ್ಥಿತರಾಗಿದ್ದರು. ಇಂದ್ರನ ಆ ಮಹಾಸಭೆಯಲ್ಲಿ ನಾನು ಭೂದೇವಿಯನ್ನು ನೋಡಿದೆನು. ಯಾವುದೋ ಕಾರ್ಯದ ಸಿದ್ಧಿಗಾಗಿ ಅವಳೂ ದೇವತೆಗಳ ಬಳಿಗೆ ಬಂದಿದ್ದಳು. ಆ ಸಮಯದಲ್ಲಿ ವಿಶ್ವಧಾರಿಣಿಯಾದ ಭೂದೇವಿಯು ಅಲ್ಲಿ ಉಪಸ್ಥಿತರಾಗಿದ್ದ ದೇವತೆಗಳನ್ನು ಕುರಿತು ಹೇಳಿದಳು :

**ಯತ್ಕಾರ್ಯಂ ಮಮ ಯುಷ್ಮಾಭಿರ್ಬ್ರಹ್ಮಣಃ ಸದನೇ ತದಾ ।**
**ಪ್ರತಿಜ್ಞಾತಂ ಮಹಾಭಾಗಾಸ್ತಚ್ಛೀಘ್ರಂ ಸಂವಿಧೀಯತಾಮ್ ॥೨೪॥**

“ಮಹಾಭಾಗರೇ! ನೀವು ಬ್ರಹ್ಮಸಭೆಯಲ್ಲಿ ನನ್ನ ಯಾವ ಕಾರ್ಯವನ್ನು ಮಾಡಿಕೊಡುವುದಾಗಿ ಪ್ರತಿಜ್ಞೆಮಾಡಿದ್ದಿರೋ–ಆ ಕಾರ್ಯವನ್ನು ಶೀಘ್ರವಾಗಿ ಪೂರೈಸಿಕೊಡಿರಿ.”

ಭೂದೇವಿಯ ಆ ಮಾತನ್ನು ಕೇಳಿ ದೇವಸಭೆಯಲ್ಲಿದ್ದ ಸಕಲಲೋಕ ನಮಸ್ಕೃತನಾದ ಮಹಾವಿಷ್ಣುವು ನಸುನಗುತ್ತಾ ಭೂದೇವಿಯನ್ನು ಕುರಿತು ಹೇಳಿದನು :

**ಧೃತರಾಷ್ಟ್ರಸ್ಯ ಪುತ್ರಾಣಾಂ ಯಸ್ತು ಜ್ಯೇಷ್ಠಃ ಶತಸ್ಯ ವೈ ।**
**ದುರ್ಯೋಧನ ಇತಿ ಖ್ಯಾತಃ ಸ ತೇ ಕಾರ್ಯಂ ಕರಿಷ್ಯತಿ ॥೨೫॥**

**ತಂ ಚ ಪ್ರಾಪ್ಯ ಮಹೀಪಾಲಂ ಕೃತಕೃತ್ಯಾ ಭವಿಷ್ಯಸಿ ॥೨೬॥**

“ಶೋಭನಳೇ! ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಯಾವನು ಜ್ಯೇಷ್ಠನಾಗಿರುವನೋ ಮತ್ತು ದುರ್ಯೋಧನನೆಂಬ ಹೆಸರಿನಿಂದ ವಿಖ್ಯಾತನಾಗಿರುವನೋ–ಅವನೇ ನಿನ್ನ ಕಾರ್ಯವನ್ನು ಮಾಡಿಕೊಡುತ್ತಾನೆ. ಆ ಮಹೀಪಾಲನನ್ನು ಹೊಂದಿದ ನೀನು ಕೃತಕೃತ್ಯಳಾಗುವೆ. ಅವನ ಸಲುವಾಗಿಯೇ ಕುರುಕ್ಷೇತ್ರಕ್ಕೆ ಆಗಮಿಸುವ ಪ್ರಹಾರಕುಶಲರಾದ ಭೂಪಾಲರೆಲ್ಲರೂ ದೃಢವಾದ ಶಸ್ತ್ರಾಸ್ತ್ರಗಳಿಂದ ಪರಸ್ಪರವಾಗಿ ಕಾದಾಡುತ್ತಾರೆ. ಆ ಯುದ್ಧದಲ್ಲಿ ನೀನು ಧರಿಸಿರುವ ವಿಶ್ವದ ಭಾರವು ಸಂಪೂರ್ಣವಾಗಿ ಕಡಿಮೆಯಾಗುತ್ತದೆ. ಆದುದರಿಂದ ನೀನು ಶೀಘ್ರವಾಗಿ ಸ್ವಸ್ಥಾನಕ್ಕೆ ತೆರಳು. ಹಿಂದಿನಂತೆ

ಲೋಕಗಳನ್ನು ಧರಿಸು”–ಎಂದು ಹೇಳಿ ಮಹಾವಿಷ್ಣುವು ಭೂದೇವಿಯನ್ನು ಸಂತಯಿಸಿ ಕಳುಹಿಸಿಕೊಟ್ಟನು.

ಲೋಕಸಂಹಾರದ ಕಾರಣದಿಂದ ಕಲಿಯ ಅಂಶಭೂತನಾದ ದುರ್ಯೋಧನನು ನಿನ್ನ ಮಗನಾಗಿ ಗಾಂಧಾರೀದೇವಿಯ ಹೊಟ್ಟೆಯಲ್ಲಿ ಹುಟ್ಟಿದನು. ಅವನು ಅಸಹನಶೀಲನೂ, ಚಪಲನೂ, ಕೋಪಿಷ್ಠನೂ, ಸಂತೋಷಪಡಿಸಲು ಅಸಾಧ್ಯನಾದವನೂ (ಅಸಂತುಷ್ಟನೂ) ಆಗಿದ್ದನು.

ದೈವಯೋಗದಿಂದಲೇ ದುರ್ಯೋಧನನಿಗೆ ಅಂತಹವರೇ ಆದ ವಿಧೇಯರಾದ ಸಹೋದರರೂ ಹುಟ್ಟಿದರು. ಸೋದರಮಾವನಾದ ಶಕುನಿಯೂ ಮತ್ತು ಪರಮಮಿತ್ರನಾದ ಕರ್ಣನೂ ದುರ್ಯೋಧನನ ಭೂಭಾರಹರಣ ಕಾರ್ಯಕ್ಕೆ ನೆರವಾದರು. ಕ್ಷತ್ರಿಯರ ವಿನಾಶಾರ್ಥವಾಗಿಯೇ ಆ ರಾಜರೆಲ್ಲರೂ ಏಕಕಾಲದಲ್ಲಿ ಭೂಮಿಯಲ್ಲಿ ಜನ್ಮತಾಳಿದರು.

**ಯಾದೃಶೋ ಜಾಯತೇ ರಾಜಾ ತಾದೃಶೋಽಸ್ಯ ಜನೋ ಭವೇತ್ ॥**

ರಾಜನು ಯಾವ ಸ್ವಭಾವದವನಾಗಿರುತ್ತಾನೆಯೋ ಅವನ ಪ್ರಜೆಗಳೂ ಅದೇ ಸ್ವಭಾವದವರಾಗುತ್ತಾರೆ.

**ಅಧರ್ಮೋ ಧರ್ಮತಾಂ ಯಾತಿ ಸ್ವಾಮೀ ಚೇದ್ಧಾರ್ಮಿಕೋ ಭವೇತ್ ।**
**ಸ್ವಾಮಿನೋ ಗುಣದೋಷಾಭ್ಯಾಂ ಭೃತ್ಯಾಃ ಸ್ಯುರ್ನಾತ್ರ ಸಂಶಯಃ ॥**

ಒಡೆಯನು ಧಾರ್ಮಿಕನಾಗಿದ್ದರೆ–ಅಧರ್ಮಿಷ್ಠನಾದ ಅವನ ಸೇವಕನೂ ಧಾರ್ಮಿಕನಾಗಿಯೇ ಪರಿವರ್ತನೆಹೊಂದುತ್ತಾನೆ. ಸೇವಕರು ಯಾವಾಗಲೂ ತಮ್ಮ ಮೇಲಿನ ಅಧಿಕಾರಿಗಳ ಗುಣ-ದೋಷಗಳಿಂದ ಯುಕ್ತರಾಗುತ್ತಾರೆ. ಈ ವಿಷಯದಲ್ಲಿ ಸಂಶಯವೇ ಇಲ್ಲ.

ದುಷ್ಟನಾದ ದುರ್ಯೋಧನರಾಜನನ್ನು ಅನುಸರಿಸಿ ನಡೆಯುತ್ತಿದ್ದ ನಿನ್ನ ಇತರ ಮಕ್ಕಳೂ ಅವನ ಸ್ವಭಾವವನ್ನೇ ಹೊಂದಿದ್ದು ಅವನೊಡನೆಯೇ ವಿನಾಶಹೊಂದಿದರು. ಈ ವಿಷಯವನ್ನು ತತ್ತ್ವವಿದರಾದ ನಾರದರೂ ತಿಳಿದಿರುತ್ತಾರೆ. ತಾವು ಮಾಡಿದ ಅಪರಾಧದಿಂದಲೇ ನಿನ್ನ ಮಕ್ಕಳೆಲ್ಲರೂ ವಿನಾಶಹೊಂದಿರುತ್ತಾರೆ. ಆದುದರಿಂದ ಅವರನ್ನು ಕುರಿತು ನೀನು

ಶೋಕಿಸುವ ಕಾರಣವಿಲ್ಲ. ಮೇಲಾಗಿ ದುಃಖಪಡಲು ಇಲ್ಲಿ ಯಾವ ಸಮಂಜಸವಾದ ಕಾರಣವೂ ಇರುವುದಿಲ್ಲ. ಪಾಂಡವರು ನಿನ್ನ ವಿಷಯದಲ್ಲಿ ಸ್ವಲ್ಪವಾದರೂ ಅಪರಾಧವನ್ನು ಮಾಡಿದವರೇ ಅಲ್ಲ. ದುರಾತ್ಮರಾದ ನಿನ್ನ ಮಕ್ಕಳೇ ಈ ಭೂಮಂಡಲವನ್ನು ಸಂಪೂರ್ಣವಾಗಿ ವಿನಾಶಮಾಡಿದರು.



ಮಹಾರಾಜ! ನಿನಗೆ ಮಂಗಳವಾಗಲಿ. ಬಹಳ ಹಿಂದೆಯೇ ನಾರದರು ಯುಧಿಷ್ಠಿರನ ರಾಜಸೂಯಯಾಗದ ಮಹಾಸಭೆಯಲ್ಲಿ ಈ ವಿಷಯವನ್ನು ಸ್ಪಷ್ಟವಾಗಿಯೇ ಹೇಳಿದ್ದರು.

**ಪಾಣ್ಡವಾಃ ಕೌರವಾಃ ಸರ್ವೇ ಸಮಾಸಾದ್ಯ ಪರಸ್ಪರಮ್ ।**
**ನ ಭವಿಷ್ಯನ್ತಿ ಕೌನ್ತೇಯ ಯತ್ತೇ ಕೃತ್ಯಂ ತದಾಚರ ॥೩೮॥**

"ಯುಧಿಷ್ಠಿರ! ಎಲ್ಲ ಪಾಂಡವ-ಕೌರವರೂ ಪರಸ್ಪರವಾಗಿ ಸಂಘರ್ಷಿಸಿ ವಿನಾಶಹೊಂದುತ್ತಾರೆ. ನೀನು ಮಾಡಬೇಕಾಗಿರುವ ಕರ್ತವ್ಯವನ್ನು ಮಾಡು."

ನಾರದರು ಹೇಳಿದ ಮಾತನ್ನು ಕೇಳಿ ಆ ಸಮಯದಲ್ಲಿ ಪಾಂಡವರೆಲ್ಲರೂ ಬಹಳವಾಗಿ ವ್ಯಥೆಪಟ್ಟರು.

ಧೃತರಾಷ್ಟ್ರ! ನಾನು ನಿನಗೆ ಬಹಳ ಹಿಂದೆಯೇ ನಡೆದ ದೇವತೆಗಳ ರಹಸ್ಯಕಾರ್ಯವನ್ನು ವಿಶದವಾಗಿ ತಿಳಿಸಿರುತ್ತೇನೆ. ಇದನ್ನು ಕೇಳಿದ ಮೇಲಾದರೂ ನಿನ್ನ ಶೋಕವು ದೂರವಾಗಬೇಕೆಂಬುದು ನನ್ನ ಆಶಯವಾಗಿದೆ. ನಿನ್ನ ಪ್ರಾಣಗಳ ಮೇಲೂ ನೀನು ದಯೆತೋರಬೇಕಾಗಿದೆ. ಅವುಗಳನ್ನು ನಿರರ್ಥಕವಾಗಿ ಪರಿತ್ಯಜಿಸುವುದು ಸರಿಯಲ್ಲ. ಇವೆಲ್ಲವೂ ದೈವಕೃತವಾದ ಕಾರ್ಯವೆಂದೇ ತಿಳಿದು ಪಾಂಡುವಿನ ಮಕ್ಕಳೊಡನೆ ಪ್ರೀತಿಯಿಂದಿರುವುದೂ ಸಮಯೋಚಿತವಾಗಿದೆ. ಮಹಾವಿಷ್ಣುವು ಭೂದೇವಿಯೊಡನೆ ಹೇಳಿದ ಮಾತುಗಳನ್ನು ನಾನು ಬಹಳ ಹಿಂದೆಯೇ ಕೇಳಿದ್ದೆನು. ಶ್ರೇಷ್ಠಕ್ರತುವಾದ ರಾಜಸೂಯದ ಸಮಯದಲ್ಲಿ ನಾನು ಈ ವಿಷಯವನ್ನು ಧರ್ಮರಾಜನಿಗೂ ಹೇಳಿದ್ದೆನು. ನಾನು ರಹಸ್ಯದಲ್ಲಿ ಈ ವಿಷಯವನ್ನು ಧರ್ಮರಾಜನಿಗೆ ಹೇಳಿದ ನಂತರ ಅವನೂ ಕೌರವರೊಡನೆ ಕಲಹವಾಗಕೂಡದೆಂದು ಬಹಳವಾಗಿ ಪ್ರಯತ್ನಿಸಿದನು. ಆದರೆ ಮನುಷ್ಯನ ಎಲ್ಲ ಪ್ರಯತ್ನಗಳಿಗಿಂತಲೂ ದೈವಚಿಂತನೆಯೇ ಬಲವತ್ತರವಾದುದು, ಮಹಾರಾಜ!

**ಅನತಿಕ್ರಮಣೀಯೋ ಹಿ ವಿಧೀ ರಾಜನ್ಕಥಂಚನ ।**
**ಕೃತಾನ್ತಸ್ಯ ತು ಭೂತೇನ ಸ್ಥಾವರೇಣ ಚರೇಣ ಚ ॥೪೩॥**

ಕೃತಾಂತನ (ದೈವದ) ಕಟ್ಟಳೆಯನ್ನು ಅತಿಕ್ರಮಿಸಿ ನಡೆಯಲು ಚರಾಚರಪ್ರಾಣಿಗಳಲ್ಲಿ ಯಾರಿಂದಲೂ ಯಾವುದೇ ಕಾರಣದಿಂದಲೂ ಸಾಧ್ಯವಾಗುವುದಿಲ್ಲ.

ನೀನು ಧರ್ಮಪರನಾಗಿರುವೆ. ಬುದ್ಧಿವಂತರಲ್ಲಿ ಶ್ರೇಷ್ಠನಾಗಿರುವೆ. ಪ್ರಾಣಿಗಳ ಆಗಮನ-ನಿರ್ಗಮನಗಳ ರಹಸ್ಯವನ್ನೂ ತಿಳಿದಿರುವ ನೀನು ಹೀಗೇಕೆ ಮೋಹವಶನಾಗಿರುವೆ? ನೀನು ಶೋಕಸಂತಪ್ತನಾಗಿರುವೆಯೆಂಬು

ದನ್ನೂ ಬಾರಿ-ಬಾರಿಗೂ ಮೂರ್ಛೆಹೊಂದುತ್ತಿರುವೆಯೆಂಬುದನ್ನೂ ತಿಳಿದು ಧರ್ಮಾತ್ಮನಾದ ಯುಧಿಷ್ಠಿರನು ಪ್ರಾಣಗಳನ್ನೇ ತ್ಯಜಿಸಿಬಿಟ್ಟಾನು. ವೀರನಾದ ಯುಧಿಷ್ಠಿರನು ಪಶು-ಪಕ್ಷಿಗಳ ವಿಷಯದಲ್ಲಿಯೂ ಸದಾ ದಯಾಪರನಾಗಿರ ತಕ್ಕವನು. ಅಂತಹವನು ನಿಮ್ಮ ವಿಷಯದಲ್ಲಿ ನಿರ್ದಯೆಯಿಂದ ಹೇಗೆ ತಾನೇ ಇರಬಲ್ಲನು? ನನ್ನ ನಿರ್ದೇಶಾನುಸಾರವಾಗಿ ವಿಧಿಯು ಅನತಿ ಕ್ರಮಣೀಯವೆಂಬುದನ್ನು ಮನಗಂಡು, ಪಾಂಡವರ ಮೇಲಿನ ಕರುಣೆಯಿಂದ ನೀನು ಪ್ರಾಣಧಾರಣೆಯನ್ನು ಮಾಡಿಕೊಂಡಿರುವುದು ಯುಕ್ತವಾಗಿದೆ. ನಾನು ಹೇಳಿದ ರೀತಿಯಲ್ಲಿದ್ದರೆ ನಿನಗೆ ಈ ಲೋಕದಲ್ಲಿ ಕೀರ್ತಿಯುಂಟಾಗುತ್ತದೆ. ಧರ್ಮಾರ್ಥಗಳೂ ಸಿದ್ಧಿಸುತ್ತವೆ. ದೀರ್ಘಕಾಲದವರೆಗೆ ತಪಸ್ಸನ್ನೂ ಮಾಡಿಕೊಂಡಿರಬಹುದಾಗಿದೆ. ಪ್ರಜ್ವಲಿತವಾದ ಅಗ್ನಿಯಂತೆ ಪುತ್ರರ ವಿನಾಶದಿಂದ ಪ್ರಾಪ್ತವಾಗುವ ಶೋಕಾಗ್ನಿಯನ್ನು ಪ್ರಜ್ಞೆಯೆಂಬ ನೀರಿನಿಂದ ಯಾವಾಗಲೂ ಉಪಶಮನಗೊಳಿಸು.”

ವೈಶಂಪಾಯನರು ಮುಂದುವರಿದು ಹೇಳುತ್ತಾರೆ :

“ಜನಮೇಜಯ! ಮಹಾತೇಜಸ್ವಿಗಳಾದ ವ್ಯಾಸರು ಹೇಳಿದ ಮಾತುಗಳನ್ನು ಕೇಳಿ ಧೃತರಾಷ್ಟ್ರನು ಸ್ವಲ್ಪಕಾಲದವರೆಗೆ ಚಿಂತಿಸುತ್ತಿದ್ದು ಪುನಃ ಅವರೊಡನೆ ಹೇಳಿದನು :

“ಬ್ರಾಹ್ಮಣೋತ್ತಮರೇ! ನಾನು ದೊಡ್ಡದಾದ ಶೋಕವೆಂಬ ಬಲೆಯಿಂದ ಬಂಧಿತನಾಗಿದ್ದೇನೆ. ಕ್ಷಣೇ-ಕ್ಷಣೇ ಮೂರ್ಛಿತನಾಗುತ್ತಿರುವ ನಾನು ನನ್ನ ಸ್ವರೂಪವೇನೆಂಬುದನ್ನೇ ಅರಿತಿರುವುದಿಲ್ಲ. ಎಲ್ಲವೂ ದೈವಪ್ರೇರಣೆಯಿಂದಲೇ ಆಗಿರುವುದೆಂಬ ನಿಮ್ಮ ಮಾತನ್ನು ಕೇಳಿದನಂತರ ನಾನು ಪ್ರಾಣಗಳನ್ನು ಧರಿಸುತ್ತೇನೆ. (ಪ್ರಾಣತ್ಯಾಗಮಾಡುವುದಿಲ್ಲ.) ಶೋಕಪಡದೇ ಇರುವುದಕ್ಕೂ ಸಾಕಷ್ಟು ಪ್ರಯತ್ನಿಸುತ್ತೇನೆ.”

ಜನಮೇಜಯ! ಧೃತರಾಷ್ಟ್ರನ ಮಾತನ್ನು ಕೇಳಿ ಸತ್ಯವತಿಯ ಮಕ್ಕಳಾದ ವ್ಯಾಸರು ಅಲ್ಲಿಯೇ ಅಂತರ್ಹಿತರಾದರು.”

ಲನೆಯ ಅಧ್ಯಾಯವು ಮುಗಿಯಿತು.

೯ನೆಯ ಅಧ್ಯಾಯ ಜಲಪ್ರದಾನಿಕಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನು ಪುನಃ ಶೋಕಾಕುಲನಾದುದು : ಅವನ ಶೋಕನಿವಾರಣೆಗಾಗಿ ವಿದುರನ ಉಪದೇಶ

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ವೈಶಂಪಾಯನರೇ! ಭಗವಾನ್ ವ್ಯಾಸರು ಅಂತರ್ಹಿತರಾದನಂತರ ಮಹೀಪತಿಯಾದ ಧೃತರಾಷ್ಟ್ರರಾಜನು ಮುಂದೇನು ಮಾಡಿದನು? ಈ ವಿಷಯವನ್ನು ನನಗೆ ವಿಶದವಾಗಿ ಹೇಳಿರಿ. ಹಾಗೆಯೇ ಕುರುರಾಜನಾದ, ಮಹಾತ್ಮನಾದ ಯುಧಿಷ್ಠಿರನೂ, ಕೃಪಾಶ್ವತ್ಥಾಮ-ಕೃತವರ್ಮರೂ ಮುಂದೇನು ಮಾಡಿದರೆಂಬುದನ್ನೂ ಹೇಳಿರಿ. ಅಶ್ವತ್ಥಾಮನು ಎಂತಹ ಕ್ರೂರಕರ್ಮವನ್ನು ಮಾಡಿದನೆಂಬುದನ್ನೂ ನಾನು ನಿಮ್ಮಿಂದ ಕೇಳಿದೆನು. ಅನ್ಯೋನ್ಯವಾಗಿ ಒಬ್ಬರು ಮತ್ತೊಬ್ಬರಿಗೆ ಶಾಪಕೊಟ್ಟುದನ್ನೂ ಕೇಳಿದೆನು. ಅನಂತರ ನಡೆದ ವೃತ್ತಾಂತವನ್ನೂ ಹೇಳಿರಿ. ಸಂಜಯನು ಧೃತರಾಷ್ಟ್ರನಿಗೆ ಮುಂದೇನು ಹೇಳಿದನು?"

"ಜನಮೇಜಯ! ದುರ್ಯೋಧನನೂ ಮತ್ತು ಅವನ ಅಪಾರ ಸೈನ್ಯವೂ ವಿನಾಶವಾಗಲಾಗಿ ವ್ಯಾಸರು ದಯಪಾಲಿಸಿದ್ದ ದಿವ್ಯದೃಷ್ಟಿಯನ್ನು ಕಳೆದುಕೊಂಡು ಧೃತರಾಷ್ಟ್ರನ ಬಳಿಯಲ್ಲಿ ಕುಳಿತಿದ್ದ ಸಂಜಯನು ಪುತ್ರಶೋಕದಿಂದ ಪರಿತಪಿಸುತ್ತಿದ್ದ ಧೃತರಾಷ್ಟ್ರನಿಗೆ ಹೇಳಿದನು :

"ನಾನಾದೇಶಗಳಿಂದ ನಾನಾಜನಪದಗಳ ರಾಜರೆಲ್ಲರೂ ಕುರುಕ್ಷೇತ್ರಕ್ಕೆ ಬಂದು ನಿನ್ನ ಮಕ್ಕಳೊಡನೆ ಯುದ್ಧಮಾಡಿ ಎಲ್ಲರೂ ಯಮಲೋಕಕ್ಕೆ ತೆರಳಿದರು. ಹಿತಚಿಂತಕರಾದ ಎಲ್ಲರೂ ಪಾಂಡವರೊಡನೆ ಸಂಧಾನ ಮಾಡಿಕೊಳ್ಳುವಂತೆ ನಿನ್ನ ಮಗನನ್ನು ಪ್ರಾರ್ಥಿಸುತ್ತಿದ್ದರು. ಆದರೆ ವೈರದ ಅಂತ್ಯವನ್ನು ಯುದ್ಧದ ಮೂಲಕವಾಗಿಯೇ ಸಾಧಿಸಬೇಕೆಂದು ಇಚ್ಛಿಸಿದ್ದ ನಿನ್ನ ಮಗನು ಈ ಭೂಮಂಡಲದ (ಎಲ್ಲ ರಾಜರ) ವಿನಾಶಕ್ಕೆ ಕಾರಣನಾದನು. ಆದುದರಿಂದ ನೀನು ವೃಥಾ ಶೋಕಪಡಬೇಡ. ಪುತ್ರರಿಗೂ, ಪೌತ್ರರಿಗೂ, ಪಿತೃಗಳಿಗೂ ಯಥಾನುಕ್ರಮವಾಗಿ ಪ್ರೇತಕಾರ್ಯಗಳನ್ನು ಮಾಡಿಸು."

ಜನಮೇಜಯ! ಸಂಜಯನು ಹೇಳಿದ ಮಾತನ್ನು ಕೇಳಿ ಧೃತರಾಷ್ಟ್ರನು ಪ್ರಾಣಶೂನ್ಯನಂತೆ ನಿಶ್ಚೇಷ್ಟನಾಗಿ ಭೂಮಿಯ ಮೇಲೆ ಬಿದ್ದನು. ಸರ್ವಧರ್ಮಜ್ಞನಾದ ವಿದುರನು ಹಾಗೆ ಬಿದ್ದಿದ್ದ ಪೃಥಿವೀಪತಿಯಾದ ಧೃತರಾಷ್ಟ್ರನ ಸಮೀಪಕ್ಕೆ ಬಂದು ಹೇಳಿದನು :

“ಮಹಾರಾಜ! ಏಕೆ ಮಲಗಿರುವೆ? ಎದ್ದೇಳು ; ದುಃಖಿಸಬೇಡ. ಎಲ್ಲ ಪ್ರಾಣಿಗಳಿಗೂ ಮರಣವೆಂಬುದೇ ಅಂತಿಮಗತಿಯಾಗಿರುತ್ತದೆ. ಪ್ರಾಣಿಗಳು ಹುಟ್ಟುವ ಮೊದಲು ಅವ್ಯಕ್ತವಾದ ಸ್ಥಿತಿಯಲ್ಲಿರುತ್ತವೆ. ಹುಟ್ಟಿದ ನಂತರ ಸ್ವಲ್ಪಕಾಲದವರೆಗೆ ವ್ಯಕ್ತವಾಗಿರುತ್ತವೆ. ಅದೇ ಪ್ರಾಣಿಗಳು ನಿಧನ ಹೊಂದಿ ಪುನಃ ಅವ್ಯಕ್ತವಾದ ಸ್ಥಿತಿಯನ್ನೇ ಹೊಂದುತ್ತವೆ. ಮೊದಲೂ ಇರಲಿಲ್ಲ. ಕಡೆಯಲ್ಲಿಯೂ ಇಲ್ಲದಾಗುತ್ತದೆ. ಮಧ್ಯದಲ್ಲಿ ತೋರಿಯಡಗುವ ದೇಹಕ್ಕೇಕೆ ಚಿಂತಿಸಬೇಕು? ಶೋಕಪಡುವುದರಿಂದ ಬದುಕಿರುವವನು ಸತ್ತವನ ಹಿಂದೆ ಹೋಗಲು ಸಾಧ್ಯವಾಗುವುದಿಲ್ಲ. ಇನ್ನೊಬ್ಬನಿಗಾಗಿ ಶೋಕಿಸುವವನು ಶೋಕಿಸುತ್ತಲೇ ಮರಣಹೊಂದಲೂ ಸಾಧ್ಯವಾಗುವುದಿಲ್ಲ. ಸಾಯಬೇಕಾದವರು ವಿಧಿನಿಯಮದಂತೆ ಸಾಯುತ್ತಾರೆ. ಲೋಕದಲ್ಲಿದು ಸ್ವಭಾವಸಿದ್ಧವಾಗಿ ನಡೆಯುತ್ತಿರುವಾಗ ಯಾವ ಕಾರಣದಿಂದ ನೀನು ಶೋಕಿಸುತ್ತಿರುವೆ? ಯುದ್ಧಮಾಡದವನು ಸಾಯುತ್ತಾನೆ. ಯುದ್ಧ ಮಾಡುತ್ತಿದ್ದವನು ಜೀವದೊಡನೆ ಪಾರಾಗುತ್ತಾನೆ. ಕಾಲವು ಸನ್ನಿಹಿತ ವಾಯಿತೆಂದರೆ ಎಲ್ಲರೂ ಯಮಾಲಯವನ್ನು ಸೇರಿಯೇ ಸೇರುತ್ತಾರೆ. ಈ ವಿಷಯವನ್ನು ಅತಿಕ್ರಮಿಸಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಕುರು ಸತ್ತಮನೇ! ಕಾಲವು ವಿಧ-ವಿಧವಾದ ಎಲ್ಲ ಪ್ರಾಣಿಗಳನ್ನು ಆಕರ್ಷಿಸಿ ತನ್ನ ದವಡೆಯೊಳಕ್ಕೆ ಹಾಕಿಕೊಳ್ಳುತ್ತಲೇ ಇರುತ್ತದೆ. ಕಾಲನಿಗೆ ಪ್ರಿಯನಾದವ ನಾಗಲೀ, ವೈರಿಯಾದವನಾಗಲೀ ಯಾರೂ ಇರುವುದಿಲ್ಲ. ಎಲ್ಲರನ್ನೂ ಸಮದೃಷ್ಟಿಯಿಂದ ಅವನು ಕಾಣುತ್ತಾನೆ. ಯಾವ ರೀತಿಯಲ್ಲಿ ಗಾಳಿಯು ಹುಲ್ಲಿನ ತುದಿಗಳನ್ನು ಇತ್ತಕಡೆಯಿಂದ ಅತ್ತಕಡೆಗೂ–ಅತ್ತಕಡೆಯಿಂದ ಇತ್ತ ಕಡೆಗೂ ಹೊಯ್ದಾಡಿಸುತ್ತಲೇ ಇರುತ್ತದೆಯೋ–ಅದೇ ರೀತಿಯಲ್ಲಿ ಕಾಲನು ಎಲ್ಲ ಪ್ರಾಣಿಗಳನ್ನೂ ತನ್ನ ಅಧೀನದಲ್ಲಿಟ್ಟುಕೊಂಡು ಇಲ್ಲಿಂದಲ್ಲಿಗೂ-

ಅಲ್ಲಿಂದಿಲ್ಲಿಗೂ ಓಡಾಡಿಸುತ್ತಿರುತ್ತಾನೆ. ಜೊತೆಯಲ್ಲಿಯೇ ಸಂಸಾರಯಾತ್ರೆಯನ್ನು ಮಾಡುವ ಎಲ್ಲರೂ ಒಂದು ದಿನ ಪರಲೋಕಕ್ಕೆ ಹೋಗಲೇ ಬೇಕಾಗುತ್ತದೆ. ಹಾಗೆ ಒಟ್ಟಾಗಿ ಸೇರಿ ಸಂಸಾರನಡೆಸುತ್ತಿರುವವರಲ್ಲಿ ಯಾರಿಗೆ ಕಾಲವು ಸನ್ನಿಹಿತವಾಗಿರುವುದೋ ಅವನು ಮೊದಲು ಪರಲೋಕಕ್ಕೆ ಹೋಗುತ್ತಾನೆ. ಉಳಿದವರೂ ಅನುಕ್ರಮವಾಗಿ ಪರಲೋಕಕ್ಕೆ ಹೋಗುತ್ತಲೇ ಇರುತ್ತಾರೆ. ಸಂಸಾರದಲ್ಲಿರುವ ಯಾರೊಬ್ಬರೂ ಶಾಶ್ವತವಾಗಿ ಇಲ್ಲಿಯೇ ಉಳಿದಿರುವುದಿಲ್ಲ. ಹೀಗಿರುವಲ್ಲಿ ಶೋಕಿಸಬೇಕಾದ ಕಾರಣವೇನಿದೆ? ಯುದ್ಧದಲ್ಲಿ ಪ್ರಾಣಪರಿತ್ಯಾಗಮಾಡಿದ ಯಾರನ್ನು ಕುರಿತು ನೀನು ದುಃಖಿಸುತ್ತಿರುವೆಯೋ–ಅವರ ವಿಷಯವಾಗಿ ನೀನು ಖಂಡಿತವಾಗಿಯೂ ದುಃಖಿಸಬಾರದು. ಏಕೆಂದರೆ : ಅವರೆಲ್ಲರೂ ಯುದ್ಧದಲ್ಲಿ ಮೃತರಾದುದರಿಂದಲೇ ಸ್ವರ್ಗಲೋಕಕ್ಕೆ ಹೋಗಿದ್ದಾರೆ. ಯುದ್ಧದಲ್ಲಿ ಹತರಾದ ಶೂರರು ಸ್ವರ್ಗವನ್ನು ಪಡೆಯುವ ರೀತಿಯಲ್ಲಿ (ಪಡೆಯುವಷ್ಟು ಸುಲಭವಾಗಿ) ಬಹುದಕ್ಷಿಣಾಕವಾದ ಯಜ್ಞಗಳಿಂದಾಗಲೀ, ತಪಸ್ಸುಗಳಿಂದಾಗಲೀ, ವಿದ್ಯೆಯಿಂದಾಗಲೀ ಮನುಷ್ಯರು ಸ್ವರ್ಗವನ್ನು ಪಡೆದುಕೊಳ್ಳಲಾರರು. ನಿನ್ನ ಮಕ್ಕಳೆಲ್ಲರೂ ವೇದಾಧ್ಯಯನಸಂಪನ್ನರಾಗಿದ್ದರು. ಮಹಾಶೂರರಾಗಿದ್ದರು. ಮಾಡಬೇಕಾದ ವ್ರತಾನುಷ್ಠಾನಗಳೆಲ್ಲವನ್ನೂ ಮುಗಿಸಿದ್ದರು. ಎಲ್ಲರೂ ಯುದ್ಧಾಭಿಮುಖರಾಗಿದ್ದಾಗಲೇ ಮರಣಹೊಂದಿದರು. ಅಂತಹ ಪುಣ್ಯಾತ್ಮರ ವಿಷಯದಲ್ಲಿ ವಿಲಪಿಸಬೇಕಾದ ಕಾರಣವೇನಿದೆ? ಶೂರರಾದವರ ಶರೀರಗಳೆಂಬ ಅಗ್ನಿಯಲ್ಲಿ ಶತ್ರುಗಳು ಬಾಣಗಳೆಂಬ ಆಹುತಿಗಳನ್ನು ಹಾಕುತ್ತಿರುತ್ತಾರೆ. ಶ್ರೇಷ್ಠಪುರುಷರು ಪರಸ್ಪರವಾಗಿ ಆಹುತಿರೂಪವಾದ ಬಾಣಗಳ ಪ್ರಹಾರಗಳನ್ನು ಸಹಿಸಿಕೊಳ್ಳುತ್ತಾರೆ.

ಮಹಾರಾಜ! ನಾನು ಸ್ವರ್ಗಪ್ರಾಪ್ತಿಗೆ ಅತ್ಯುತ್ತಮವಾದ ಮತ್ತು ಶ್ರೇಷ್ಠವಾದ ಮಾರ್ಗವು ಯಾವುದೆಂಬುದನ್ನು ಹೇಳುತ್ತೇನೆ ; ಕೇಳು.

**ನ ಯುದ್ಧಾದಧಿಕಂ ಕಿಂಚಿತ್ಕ್ಷತ್ರಿಯಸ್ಯೇಹ ವಿದ್ಯತೇ ॥೨೧॥**

ಕ್ಷತ್ರಿಯನಾದವನಿಗೆ ಈ ಪ್ರಪಂಚದಲ್ಲಿ ಸ್ವರ್ಗಪ್ರಾಪ್ತಿಗೆ ಯುದ್ಧಕ್ಕಿಂತಲೂ ಉತ್ತಮವಾದ ಸಾಧನವೇ ಮತ್ತೊಂದಿರುವುದಿಲ್ಲ.

ಹತರಾದವರೆಲ್ಲರೂ ವೀರಕ್ಷತ್ರಿಯರು ; ಮಹಾತ್ಮರು. ರಣರಂಗಕ್ಕೆ ಶೋಭೆಯನ್ನುಂಟುಮಾಡುವವರಾಗಿದ್ದರು. ಅವರೆಲ್ಲರೂ ಆ ಉತ್ತಮ ಭೋಗಗಳಿಂದ ಯುಕ್ತವಾದ ಪುಣ್ಯಲೋಕಗಳಿಗೆ ಹೋಗಿರುತ್ತಾರೆ. ಆದುದರಿಂದ ಈ ವಿಷಯದಲ್ಲಿ ಖಂಡಿತವಾಗಿಯೂ ದುಃಖಪಡಬಾರದು.

ಪುರುಷರ್ಷಭನೇ! ದುಃಖಿಸಬೇಡ. ನಿನಗೆ ನೀನೇ ಸಮಾಧಾನ ಹೊಂದು. ಶೋಕಾಭಿಭೂತನಾಗಿ ನೀನೀಗ ಮಾಡಬೇಕಾಗಿರುವ ಕರ್ತವ್ಯವನ್ನು ಬಿಟ್ಟುಬಿಡುವುದು ಉಚಿತವಾಗಿ ಕಾಣುವುದಿಲ್ಲ."

೯ನೆಯ ಅಧ್ಯಾಯವು ಮುಗಿಯಿತು.

೧೦ನೆಯ ಅಧ್ಯಾಯ ಜಲಪ್ರದಾನಿಕಪರ್ವ (ಮುಂದುವರಿದಿದೆ.)

## ಪ್ರಜೆಗಳು ಮತ್ತು ಸ್ತ್ರೀಯರ ಸಮೇತನಾಗಿ ಧೃತರಾಷ್ಟ್ರನು ಯುದ್ಧಭೂಮಿಗೆ ಹೊರಟುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ವಿದುರನು ಹೇಳಿದ ಮಾತನ್ನು ಕೇಳಿ ಪುರುಷರ್ಷಭನಾದ ಧೃತರಾಷ್ಟ್ರನು ರಥವನ್ನು ಸಿದ್ಧಗೊಳಿಸುವಂತೆ ಸಾರಥಿಗೆ ಆಜ್ಞಾಪಿಸಿ, ವಿದುರನಿಗೆ ಹೇಳಿದನು :

"ವಿದುರ! ಗಾಂಧಾರಿಯನ್ನೂ ಭಾರತವಂಶದ ಇತರ ಸ್ತ್ರೀಯರನ್ನೂ ಶೀಘ್ರವಾಗಿ ಕರೆದುಕೊಂಡು ಬಾ. ನಾದಿನಿಯಾದ ಕುಂತಿಯನ್ನೂ ಮತ್ತು ಅವಳ ಸಮೀಪದಲ್ಲಿರುವ ಇನ್ನೂ ಇತರ ಸ್ತ್ರೀಯರನ್ನೂ ಕರೆದುಕೊಂಡು ಬಾ."

ಜನಮೇಜಯ! ಧರ್ಮವಿದರಲ್ಲಿ ಶ್ರೇಷ್ಠನಾದ ವಿದುರನಿಗೆ ಹೀಗೆ ಹೇಳಿ ಶೋಕದಿಂದ ಜ್ಞಾನಶಕ್ತಿಯನ್ನೇ ಸಂಪೂರ್ಣವಾಗಿ ಕಳೆದುಕೊಂಡಿದ್ದ ಧರ್ಮಾತ್ಮನಾದ ಧೃತರಾಷ್ಟ್ರನು ರಥದಲ್ಲಿ ಕುಳಿತುಕೊಂಡನು. ಪತಿಯ ಮಾತಿನಿಂದ ಪ್ರೇರಿತಳಾದ, ಪುತ್ರಶೋಕಪೀಡಿತಳಾದ ಗಾಂಧಾರಿಯು ಕುಂತಿಯೊಡನೆಯೂ ಇತರ ಭಾರತಸ್ತ್ರೀಯರೊಡನೆಯೂ ಧೃತರಾಷ್ಟ್ರ ನಿದ್ದಲ್ಲಿಗೆ ಹೋದಳು. ರಾಜನ ಬಳಿಗೆ ಬಂದೊಡನೆಯೇ ಮಹಾಶೋಕದಲ್ಲಿ ಮುಳುಗಿ ಹೋಗಿದ್ದ ಆ ಸ್ತ್ರೀಯರೆಲ್ಲರೂ ಒಬ್ಬರು ಮತ್ತೊಬ್ಬರ ಹೆಸರನ್ನು

ಹಿಡಿದು ಕೂಗಿಕೊಳ್ಳುತ್ತಾ ಒಬ್ಬರ ಕುತ್ತಿಗೆಯನ್ನು ಮತ್ತೊಬ್ಬರು ತಬ್ಬಿಕೊಂಡು ಗಟ್ಟಿಯಾಗಿ ಬಿಕ್ಕಿ-ಬಿಕ್ಕಿ ಅಳತೊಡಗಿದರು. ವಿದುರನು ಒಬ್ಬೊಬ್ಬರನ್ನೂ ಬಹಳ ಕಷ್ಟದಿಂದ ಸಮಾಧಾನಗೊಳಿಸುತ್ತಿದ್ದನು. ಆದರೆ ಅವನಿಗೂ ಕೆಲವು ಸಮಯಗಳಲ್ಲಿ ದುಃಖವನ್ನು ತಡೆದುಕೊಳ್ಳಲಾಗುತ್ತಿರಲಿಲ್ಲ. ಅವರ ಜೊತೆಗೆ ತಾನೂ ಅತ್ತು, ಅವರನ್ನು ಕಷ್ಟಪಟ್ಟು ಸಮಾಧಾನಗೊಳಿಸಿ, ತಾನೂ ಸಮಾಧಾನಹೊಂದುತ್ತಿದ್ದನು. ಬಳಿಕ ವಿದುರನು ಕಂಬನಿಗರೆಯುತ್ತಿದ್ದ ಆ ಸ್ತ್ರೀಯರೆಲ್ಲರನ್ನೂ ರಥದಲ್ಲಿ ಹತ್ತಿಸಿಕೊಂಡು ಹಸ್ತಿನಾಪಟ್ಟಣದಿಂದ ಹೊರಟನು. ಕೌರವರಾಜಕುಮಾರರ ಎಲ್ಲ ಅರಮನೆಗಳಲ್ಲಿಯೂ ಹೃದಯವನ್ನೇ ಸೀಳಿಬಿಡುವಂತಹ ದೊಡ್ಡ ಆರ್ತನಾದವಾಗುತ್ತಿದ್ದಿತು. ಹಸ್ತಿನಾಪಟ್ಟಣದಲ್ಲಿ ಮಕ್ಕಳಿಂದ ಹಿಡಿದು ಮುದುಕರ ಪರ್ಯಂತವಾಗಿ ಸರ್ವರೂ ಶೋಕಪೀಡಿತರಾಗಿದ್ದರು.

**ಅದೃಷ್ಟಪೂರ್ವಾ ಯಾ ನಾರ್ಯಃ ಪುರಾ ದೇವಗಣೈರಪಿ ।**
**ಪೃಥಗ್ಜನೇನ ದೃಶ್ಯಂತೇ ತಾಸ್ತದಾ ನಿಹತೇಶ್ವರಾಃ ॥೮॥**

ಹಿಂದೆ ದೇವತೆಗಳಿಂದಲೂ ನೋಡಲು ಸಾಧ್ಯರಾಗದಿದ್ದ ಕುರುರಾಜ ಮಹಿಳೆಯರು ತಮ್ಮ ಪತಿಗಳನ್ನು ಕಳೆದುಕೊಂಡನಂತರ ನಗರದ ಸಾಧಾರಣಮನುಷ್ಯರ ದೃಷ್ಟಿಗೂ ಬೀಳುವಂತಾದರು.

ಕುರುರಾಜಮಹಿಷಿಯರು ಸುಂದರವಾದ ಕೇಶರಾಶಿಗಳನ್ನು ಕೆದರಿ ಕೊಂಡಿದ್ದರು. ಆಭರಣಗಳನ್ನು ಕಳಚಿಬಿಟ್ಟಿದ್ದರು. ಏಕವಸ್ತ್ರಧಾರಿಣಿಯರಾಗಿ ಅನಾಥೆಯರಂತೆ ರಣಭೂಮಿಯ ಕಡೆಗೆ ಹೋಗುತ್ತಿದ್ದರು. ಪರ್ವತಗಳ ಗುಹೆಗಳಿಂದ ನಾಯಕಸಾರಂಗವನ್ನು ಕಳೆದುಕೊಂಡು ಹೊರಬರುವ ಹೆಣ್ಣುಜಿಂಕೆಗಳೋಪಾದಿಯಲ್ಲಿ ಶ್ವೇತಪರ್ವತಕ್ಕೆ ಸಮಾನವಾದ ಸೌಧಗಳಿಂದ ಕುರುರಾಜಮಹಿಷಿಯರು ಹೊರಬರುತ್ತಿದ್ದರು.

ಕುದುರೆಮರಿಗಳ ಗುಂಪಿನಂತೆ ರಾಜಸೌಧದ ಅಂಗಣದಲ್ಲಿ ಸೇರಿದ್ದ ಶೋಕದಿಂದ ಪೀಡಿತರಾಗಿದ್ದ ಸ್ತ್ರೀಯರ ಅನೇಕ ಗುಂಪುಗಳು ಯುದ್ಧ ಭೂಮಿಯ ಕಡೆಗೆ ಹೊರಟುವು. ಹಾದಿಯಲ್ಲಿ ಹೋಗುತ್ತಿದ್ದಾಗ ಪರಸ್ಪರ ವಾಗಿ ಒಬ್ಬರು ಮತ್ತೊಬ್ಬರ ತೋಳುಗಳನ್ನು ಹಿಡಿದುಕೊಂಡು ತಮ್ಮ

ಮಕ್ಕಳನ್ನೂ, ಪತಿಗಳನ್ನೂ ಮತ್ತು ಪಿತೃಗಳನ್ನೂ ಅವರವರ ನಾಮಧೇಯ ಗಳಿಂದ ಕೂಗುತ್ತಾ–ಪ್ರಳಯಕಾಲದಲ್ಲಿ ಲೋಕಕ್ಷಯವು ಹೇಗಾಗುವುದೆಂಬು ದನ್ನು ಪ್ರದರ್ಶಿಸುತ್ತಿರುವರೋ ಎಂಬಂತೆ–ಗಟ್ಟಿಯಾಗಿ ಕಿರುಚಿಕೊಳ್ಳುತ್ತಿ ದ್ದರು. ಅತಿಯಾದ ದುಃಖದಿಂದಾಗಿ ಅವರಲ್ಲಿ ಜ್ಞಾನಶಕ್ತಿಯೇ ಉಡುಗಿಹೋಗಿದ್ದಿತು. ಅವರೊಮ್ಮೆ ಕಣ್ಣೀರುಸುರಿಸುತ್ತಿದ್ದರು. ಮತ್ತೊಮ್ಮೆ ಗಟ್ಟಿಯಾಗಿ ರೋದನಮಾಡುತ್ತಿದ್ದರು. ಮತಿಗೆಟ್ಟವರಂತೆ ಓಡಿಹೋಗುತ್ತಿ ದ್ದರು. ಅವರಿಗೆ ಮುಂದೇನು ಮಾಡಬೇಕೆಂಬ ವಿವೇಚನೆಯೇ ಇರಲಿಲ್ಲ.

**ವ್ರೀಡಾಂ ಜಗ್ಮುಃ ಪುರಾ ಯಾಃ ಸ್ಮ ಸಖೀನಾಮಪಿ ಯೋಷಿತಃ ।**
**ತಾ ಏಕವಸ್ತ್ರಾ ನಿರ್ಲಜ್ಜಾಃ ಶ್ವಶ್ರೂಣಾಂ ಪುರತೋಽಭವನ್ ॥೧೪॥**

ಹಿಂದೆ ಯಾವ ಸ್ತ್ರೀಯರು ತಮ್ಮ ಸಖಿಯರ ಮುಂದೆ ಬಂದು ನಿಲ್ಲಲೂ ಲಜ್ಜೆಪಡುತ್ತಿದ್ದರೋ–ಅದೇ ಸ್ತ್ರೀಯರು ಈಗ ಏಕವಸ್ತ್ರಧಾರಿಣಿಯರಾಗಿ ಲಜ್ಜೆಯನ್ನೇ ತೊರೆದು ಅತ್ತೆಯರ ಮುಂದೆ ನಿಂತಿದ್ದರು.

**ಪರಸ್ಪರಂ ಸುಸೂಕ್ಷ್ಮೇಷು ಶೋಕೇಷ್ವಾಶ್ವಾಸಯಂಸ್ತದಾ ।**
**ತಾಃ ಶೋಕವಿಹ್ವಲಾ ರಾಜನ್ನವೈಕ್ಷನ್ತ ಪರಸ್ಪರಮ್ ॥೧೫॥**

ಹಿಂದೆ ಆ ರಾಜಮಹಿಷಿಯರು ಸಣ್ಣ-ಪುಟ್ಟ ವ್ಯಸನಗಳಲ್ಲಿಯೂ ಒಬ್ಬರು ಮತ್ತೊಬ್ಬರ ಬಳಿಗೆ ಹೋಗಿ ಸಮಾಧಾನಗೊಳಿಸುತ್ತಿದ್ದರು. ಆದರೆ ಎಲ್ಲರೂ ಶೋಕದಿಂದ ವಿಹ್ವಲರಾಗಿದ್ದ ಆ ಸಮಯದಲ್ಲಿ ಒಬ್ಬರು ಮತ್ತೊಬ್ಬರನ್ನು ಸುಮ್ಮನೆ ನೋಡುತ್ತಿದ್ದರು.

ರೋದನಮಾಡುತ್ತಿದ್ದ ಇಂತಹ ಸಾವಿರಾರು ಸ್ತ್ರೀಯರಿಂದ ಪರಿವೃತ ನಾಗಿದ್ದ, ದೀನಮನಸ್ಕನಾಗಿದ್ದ ಧೃತರಾಷ್ಟ್ರರಾಜನು ಹಸ್ತಿನಾಪಟ್ಟಣದಿಂದ ರಣಭೂಮಿಗೆ ಬಹಳ ಬೇಗ ಪ್ರಯಾಣಮಾಡಿದನು. ಶಿಲ್ಪಿಗಳು, ವ್ಯಾಪಾರಿ ಗಳು, ವೈಶ್ಯರು, ನಾನಾವಿಧವಾದ ಕಾರ್ಯಗಳಿಂದ ಜೀವಿಕೆಯನ್ನು ನಡೆಸುತ್ತಿ ದ್ದವರು–ಇವರೆಲ್ಲರೂ ಧೃತರಾಷ್ಟ್ರನನ್ನು ಮುಂದುಮಾಡಿಕೊಂಡು ಪಟ್ಟಣ ದಿಂದ ಹೊರಟರು. ಗಟ್ಟಿಯಾಗಿ ಕೂಗಿಕೊಂಡು ಅಳುತ್ತಿದ್ದ ಆ ರಾಜಮಹಿಷಿ ಯರ ಆರ್ತನಾದದ ಮಹಾಶಬ್ದವು ಸಕಲಭುವನಗಳನ್ನೂ ವ್ಯಥೆಗೊಳಿಸುತ್ತಾ ಪ್ರಾದುರ್ಭವಿಸಿತು. (ಅವರ ಆರ್ತನಾದದ ಮಹಾಶಬ್ದವನ್ನು ಕೇಳಿ ಎಲ್ಲ

ಲೋಕಗಳವರೂ ದುಃಖಿತರಾದರು.) ಪ್ರಳಯಕಾಲದಲ್ಲಿ ಕಾಲಾಗ್ನಿಗೆ ಸಿಕ್ಕಿ ದಹಿಸಲ್ಪಡುತ್ತಿದ್ದಾಗ ಪ್ರಾಣಿಗಳು ಅರಚಿಕೊಂಡು ಆರ್ತನಾದಗಳನ್ನು ಮಾಡುವಂತೆ–ರಾಜಮಹಿಷಿಯರು ಶೋಕಾಗ್ನಿಯಿಂದ ದಗ್ಧರಾಗಿ ಆರ್ತನಾದಗಳನ್ನು ಮಾಡುತ್ತಿದ್ದರು. ಆ ಮಹಾಶಬ್ದವನ್ನು ಕೇಳಿದ ಪ್ರಾಣಿಗಳೆಲ್ಲವೂ ಪ್ರಳಯಕಾಲವು ಸಂಭವಿಸಿತೆಂದೇ ಭಾವಿಸಿದುವು. ಕುರುರಾಜ ಕುಮಾರರು ವಿನಾಶಹೊಂದಲಾಗಿ ಅವರಲ್ಲಿಯೇ ಅನುರಕ್ತರಾಗಿದ್ದ ಪಟ್ಟಣಿಗರು ಅತ್ಯುದ್ವಿಗ್ನಚಿತ್ತರಾಗಿ ಗಟ್ಟಿಯಾಗಿ ಅಳತೊಡಗಿದರು.”

೧೦ನೆಯ ಅಧ್ಯಾಯವು ಮುಗಿಯಿತು.

೧೧ನೆಯ ಅಧ್ಯಾಯ ಜಲಪ್ರದಾನಿಕಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರರಾಜನು ಕೃಪಾಶ್ವತ್ಥಾಮ-ಕೃತವರ್ಮರನ್ನು ಸಂಧಿಸಿದುದು : ಕೃಪರು ಕೌರವ-ಪಾಂಡವರ ಸೈನ್ಯವು ಸಂಪೂರ್ಣವಾಗಿ ವಿನಾಶವಾದುದನ್ನು ತಿಳಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

“ಜನಮೇಜಯ! ಹಸ್ತಿನಾಪುರದಿಂದ ಧೃತರಾಷ್ಟ್ರಾದಿಗಳು ಒಂದು ಕ್ರೋಶದಷ್ಟು ದೂರ ಹೋದನಂತರ (ಸುಮಾರು ನಾಲ್ಕು ಕಿ.ಮೀಟರುಗಳು) ಮಹಾರಥರಾದ ಕೃಪಾಶ್ವತ್ಥಾಮ-ಕೃತವರ್ಮರನ್ನು ನೋಡಿದರು. ಆ ಮೂವರು ಮಹಾರಥರೂ ಪ್ರಜ್ಞಾಚಕ್ಷುವಾದ ಮತ್ತು ರಾಜನಾದ ಧೃತರಾಷ್ಟ್ರನನ್ನು ನೋಡಿದೊಡನೆಯೇ ಅಶ್ರುಪೂರ್ಣವಾದ ಕಂಠಗಳಿಂದ ಕೂಡಿದವರಾಗಿ (ಗದ್ಗದಧ್ವನಿಯಿಂದ ಕೂಡಿದವರಾಗಿ) ದೀರ್ಘವಾಗಿ ನಿಟ್ಟುಸಿರುಬಿಟ್ಟು ಪುತ್ರಶೋಕದಿಂದ ವಿಲಪಿಸುತ್ತಿದ್ದ ರಾಜನಿಗೆ ಹೇಳಿದರು :

“ಮಹಾರಾಜ! ನಿನ್ನ ಮಗನು ಸುದುಷ್ಕರವಾದ ಸಾಹಸಕಾರ್ಯವನ್ನು ಮಾಡಿ ಅನುಯಾಯಿಗಳೊಡನೆ ಇಂದ್ರಲೋಕಕ್ಕೆ ಹೊರಟುಹೋದನು. ದುರ್ಯೋಧನನ ಮಹಾಸೈನ್ಯದಲ್ಲಿ ನಾವು ಮೂವರು ಮಹಾರಥರೇ ಜೀವದಿಂದ ಪಾರಾಗಿ, ಉಳಿದ ನಿನ್ನ ಎಲ್ಲ ಸೈನ್ಯವೂ ವಿನಾಶ ಹೊಂದಿತು.”

ಶರದ್ವಂತರ ಮಕ್ಕಳಾದ ಕೃಪರು ಧೃತರಾಷ್ಟ್ರನೊಡನೆ ಹೀಗೆ ಹೇಳಿ ಪುತ್ರಶೋಕದಿಂದ ಪೀಡಿತಳಾಗಿದ್ದ ಗಾಂಧಾರಿಯನ್ನು ಕುರಿತು ಹೇಳಿದರು :

"ದೇವಿ! ವೀರರಾದ ನಿನ್ನ ಮಕ್ಕಳು ನಿರ್ಭಯದಿಂದ ಯುದ್ಧಮಾಡುತ್ತಾ ಅನೇಕಾನೇಕ ಶತ್ರುಗಳ ಸಮೂಹಗಳನ್ನು ಧ್ವಂಸಮಾಡುತ್ತಾ ವೀರೋಚಿತವಾದ ಕರ್ಮವನ್ನು ಮಾಡಿ ನಿಧನಹೊಂದಿದರು. ನಿಶ್ಚಯ ವಾಗಿಯೂ ಅವರು ಶತ್ರುಗಳ ಮೂಲಕವಾಗಿ ಜಯಿಸಲ್ಪಟ್ಟ ನಿರ್ಮಲವಾದ ಲೋಕಗಳಿಗೆ ಹೋಗಿ ದೇದೀಪ್ಯಮಾನವಾದ ಶರೀರಗಳನ್ನು ಧರಿಸಿ ದೇವತೆ ಗಳಂತೆಯೇ ಆ ಪುಣ್ಯಲೋಕಗಳಲ್ಲಿ ವಿಹರಿಸುತ್ತಿರುತ್ತಾರೆ. ಶೂರರಾದ ನಿನ್ನ ಮಕ್ಕಳಲ್ಲಿ ಒಬ್ಬನಾದರೂ ಶತ್ರುಗಳೊಡನೆ ಯುದ್ಧಮಾಡುತ್ತಿದ್ದಾಗ ಪರಾಙ್ಮುಖನಾಗಲಿಲ್ಲ. ಒಬ್ಬನಾದರೂ ಕೈಜೋಡಿಸಿಕೊಂಡು ಶತ್ರುವಿನ ಮುಂದೆ ನಿಂತುಕೊಳ್ಳಲಿಲ್ಲ. ಎಲ್ಲರೂ ಶಸ್ತ್ರಪ್ರಹಾರಗಳಿಂದಲೇ ನಿಧನ ಹೊಂದಿದರು. ಹೀಗೆ ಯುದ್ಧದಲ್ಲಿ ಶಸ್ತ್ರಪ್ರಹಾರದಿಂದ ಮರಣ ಹೊಂದುವುದು ಕ್ಷತ್ರಿಯನಿಗೆ ಸದ್ಗತಿದಾಯಕವೆಂದು ಪ್ರಾಚೀನರಾದ ಋಷಿಗಳು ಹೇಳಿದ್ದಾರೆ. ಆದುದರಿಂದ ನೀನು ದುಃಖಿಸಬೇಡ. ಅವರ ಶತ್ರುಗಳಾದ ಪಾಂಡವರೂ ವಿಜಯದ ಲಾಭದಿಂದ ವಿಶೇಷವಾದ ಪ್ರಯೋಜನವನ್ನೇನೂ ಪಡೆದುಕೊಂಡಿಲ್ಲ. ಯುದ್ಧವೆಲ್ಲವೂ ಮುಗಿದುಹೋದನಂತರ ಅಶ್ವತ್ಥಾಮ ಪ್ರಮುಖರಾದ ನಾವು ಏನು ಮಾಡಿದೆವೆಂಬುದನ್ನು ಹೇಳುವೆನು! ಕೇಳು.

ಭೀಮಸೇನನು ನಿನ್ನ ಮಗನನ್ನು ಅಧರ್ಮದಿಂದ ಸಂಹರಿಸಿದನೆಂಬ ವಾರ್ತೆಯನ್ನು ಕೇಳಿದ ನಾವು, ಪಾಂಡವರೆಲ್ಲರೂ ಮಲಗಿರುವಾಗ ಅವರ ಶಿಬಿರವನ್ನು ಪ್ರವೇಶಿಸಿ ಅವರ ಕಡೆಯ ವೀರರೆಲ್ಲರನ್ನೂ ಸಂಹರಿಸಿದೆವು. ಧೃಷ್ಟದ್ಯುಮ್ನನೇ ಮೊದಲಾದ ಎಲ್ಲ ಪಾಂಚಾಲರೂ ಹತರಾದರು. ದ್ರುಪದನ ಎಲ್ಲ ಮಕ್ಕಳೂ ಹತರಾದರು. ಅವನ ಮೊಮ್ಮಕ್ಕಳಾದ ದ್ರೌಪದೇಯರನ್ನೂ ನಾವು ಕೊಂದು ಕೆಳಕ್ಕೆ ಬೀಳಿಸಿದೆವು. ಹೀಗೆ ನಾವು ಮೂವರೂ ರಾತ್ರಿಯ ಯುದ್ಧದಲ್ಲಿ ನಿನ್ನ ಪುತ್ರನ ಶತ್ರುಗಳನ್ನು ಸಂಪೂರ್ಣವಾಗಿ ಸಂಹರಿಸಿ ಓಡಿಬರುತ್ತಿದ್ದೇವೆ. ಆದರೆ ಇಲ್ಲಿಯೂ ಸಹ ನಾವು ಹೆಚ್ಚುಹೊತ್ತು ನಿಲ್ಲಲಾರೆವು. ಏಕೆಂದರೆ : ನಾವು ಮೂವರೇ ಪಾಂಡವರನ್ನು ಎದುರಿಸಿ ನಿಲ್ಲಲು ಸಮರ್ಥರಾಗಿಲ್ಲ. ಕ್ರೋಧವಶರಾದ, ಮಹಾಧನುಷ್ಮಂತರಾದ,

ವೈರಕ್ಕೆ ಪ್ರತೀಕಾರವನ್ನು ಮಾಡಲಿಚ್ಛಿಸಿರುವ ಪಾಂಡವರು ಬಹಳ ಬೇಗ ನಮ್ಮನ್ನಟ್ಟಿಸಿಕೊಂಡು ಬಂದುಬಿಡುತ್ತಾರೆ. ತಮ್ಮ ಮಕ್ಕಳೆಲ್ಲರೂ ಹತರಾದ ರೆಂದು ತಿಳಿದೊಡನೆಯೇ ಅಪ್ರಮತ್ತರಾದ, ಪುರುಷರ್ಷಭರಾದ ಪಾಂಡವರು



ನಮ್ಮ ಹೆಜ್ಜೆಗಳನ್ನೇ (ರಥಚಕ್ರಗಳ ಚಿಹ್ನೆಗಳನ್ನೇ) ಅವಲೋಕಿಸುತ್ತಾ ಬಹಳ ಬೇಗ ಬಂದುಬಿಡುತ್ತಾರೆ. ಪಾಂಡವರ ಮಕ್ಕಳನ್ನೂ ಮತ್ತು ಪ್ರಿಯ ಬಂಧುಗಳನ್ನೂ ಸಂಹರಿಸಿರುವ ನಾವು ಇಲ್ಲಿಯೇ ನಿಲ್ಲುವ (ಅವರು ಬಂದರೆ ಅವರನ್ನು ಇಲ್ಲಿಯೇ ಎದುರಿಸಿ ಯುದ್ಧಮಾಡುವ) ಉತ್ಸಾಹದಿಂದಿರುವುದಿಲ್ಲ.

(ಈ ಸಮಯದಲ್ಲಿ ಅವರನ್ನು ಎದುರಿಸಿ ಯುದ್ಧಮಾಡುವುದು ದುಃಸಾಧ್ಯವೇ ಸರಿ. ಆದುದರಿಂದ ನಾವು ಹೊರಟುಹೋಗಲು ಅನುಮತಿಯನ್ನು ದಯಪಾಲಿಸು. ದೇವಿ! ಮನಸ್ಸನ್ನು ಶೋಕದಲ್ಲಿ ಲೀನಗೊಳಿಸಬೇಡ."

ಗಾಂಧಾರಿಯೊಡನೆ ಹೀಗೆ ಹೇಳಿದನಂತರ ಕೃಪರು ಪುನಃ ಧೃತರಾಷ್ಟ್ರನ ಕಡೆಗೆ ತಿರುಗಿ ಹೇಳಿದರು :

"ಮಹಾರಾಜ! ನೀನೂ ಸಹ ನಾವು ಹೊರಡಲು ಸಮ್ಮತಿಸು. ಈ ಸಮಯದಲ್ಲಿ ಮನಸ್ಸಿಗೆ ಧೈರ್ಯವನ್ನು ತಂದುಕೊ. ಅಧೀರನಾಗಬೇಡ. ಕೇವಲ ಕ್ಷಾತ್ರಧರ್ಮವನ್ನೇ ಗಮನದಲ್ಲಿಟ್ಟುಕೊಂಡು ನಿನ್ನ ಮಕ್ಕಳ ಮರಣವು ಹೇಗೆ ಸಂಭವಿಸಿತೆಂಬುದನ್ನು ಮನಗಾಣು. (ಕ್ಷತ್ರಧರ್ಮಾನುಸಾರವಾಗಿ ನಿನ್ನ ಮಕ್ಕಳು ಮರಣಹೊಂದಿರುವಾಗ ಅವರಿಗಾಗಿ ನೀನು ಪರಿತಪಿಸಬೇಕಾಗಿಲ್ಲ.)"

ಜನಮೇಜಯ! ಕೃಪರು ಧೃತರಾಷ್ಟ್ರನೊಡನೆ ಹೀಗೆ ಹೇಳಿದನಂತರ ಕೃಪ-ಕೃತವರ್ಮಾಶ್ವತ್ಥಾಮರು ರಾಜನಿಗೆ ಪ್ರದಕ್ಷಿಣೆಮಾಡಿ ಮನೀಷಿಯಾದ ಧೃತರಾಷ್ಟ್ರರಾಜನನ್ನೇ ಪುನಃ ವೀಕ್ಷಿಸುತ್ತಾ ಗಂಗಾನದಿಯ ಕಡೆಗೆ ಬಹಳ ಶೀಘ್ರವಾಗಿ ಕುದುರೆಗಳನ್ನು ಓಡಿಸಿದರು. ಪಾಂಡವರ ಭಯದಿಂದ ಉದ್ವಿಗ್ನರಾಗಿದ್ದ ಆ ಮೂವರು ಮಹಾರಥರೂ ಸ್ವಲ್ಪದೂರ ಹೋಗಿ ಬೇರೆಯಾಗಲು ನಿಶ್ಚಯಿಸಿ ಪರಸ್ಪರವಾಗಿ ಬೀಳ್ಕೊಂಡು ಪ್ರತ್ಯೇಕವಾದ ಮೂರು ಹಾದಿಗಳನ್ನು ಹಿಡಿದು ಹೊರಟುಹೋದರು. ಶಾರದ್ವತರಾದ ಕೃಪರು ಹಸ್ತಿನಾಪಟ್ಟಣಕ್ಕೆ ಹೋದರು. ಕೃತವರ್ಮನು ತನ್ನ ದೇಶದ ಕಡೆಗೆ ತೆರಳಿದನು. ಅಶ್ವತ್ಥಾಮನು ವ್ಯಾಸಾಶ್ರಮಕ್ಕೆ ಹೋದನು.

ಮಹಾತ್ಮರಾದ ಪಾಂಡುವಿನ ಮಕ್ಕಳಿಗೆ ಮಹಾಪರಾಧವನ್ನೆಸಗಿ ಬಂದಿದ್ದ ಆ ಮೂವರೂ ಭಯಪೀಡಿತರಾಗಿ ಒಬ್ಬರು-ಮತ್ತೊಬ್ಬರನ್ನು ದೀನದೃಷ್ಟಿಯಿಂದ ನೋಡುತ್ತಾ ತಮ್ಮ-ತಮ್ಮ ಮಾರ್ಗಗಳನ್ನು ಹಿಡಿದು ಹೊರಟರು. ಹೀಗೆ ಮಹಾತ್ಮರಾದ ಮತ್ತು ಅರಿಂದಮರಾದ ಆ ಮೂವರೂ ರಣಾಂಗಣಕ್ಕೆ ಪರಿವಾರಸಮೇತನಾಗಿ ಹೋಗುತ್ತಿದ್ದ ಧೃತರಾಷ್ಟ್ರರಾಜನನ್ನು ಸಂಧಿಸಿ, ಅವನಿಗೂ ಮತ್ತು ಗಾಂಧಾರಿಗೂ ತಾವು ಮಾಡಿದ ಪ್ರತೀಕಾರ

ಕಾರ್ಯವನ್ನು ತಿಳಿಯಪಡಿಸಿ, ಸೂರ್ಯೋದಯವಾಗುವುದರೊಳಗಾಗಿ ತಾವು ಹೋಗಲಿಚ್ಛಿಸಿದ್ದ ಸ್ಥಳಗಳಿಗೆ ತೆರಳಿದರು. ಅನಂತರ ಮಹಾರಥರಾದ ಪಾಂಡುಪುತ್ರರು ವ್ಯಾಸಾಶ್ರಮದ ಸಮೀಪದಲ್ಲಿಯೇ ಇದ್ದ ಅಶ್ವತ್ಥಾಮನ ಬಳಿಗೆ ಬಂದು ಪರಾಕ್ರಮದಿಂದ ಯುದ್ಧಮಾಡಿ ಅವನನ್ನು ಪರಾಜಯ ಗೊಳಿಸಿದರು.” (ಈ ಆಖ್ಯಾನವು ಹಿಂದೆಯೇ ಬಂದಿರುತ್ತದೆ.)

೧೧ನೆಯ ಅಧ್ಯಾಯವು ಮುಗಿಯಿತು.

೧೨ನೆಯ ಅಧ್ಯಾಯ ಜಲಪ್ರದಾನಿಕಪರ್ವ (ಮುಂದುವರಿದಿದೆ.)

## ಪಾಂಡವರು ಧೃತರಾಷ್ಟ್ರನನ್ನು ಸಂಧಿಸಿದುದು : ಧೃತರಾಷ್ಟ್ರನು ಭೀಮನ ಲೋಹಪ್ರತಿಮೆಯನ್ನು ಭಗ್ನಗೊಳಿಸಿದುದು : ಶ್ರೀಕೃಷ್ಣನು ಅವನನ್ನು ಸಮಾಧಾನಗೊಳಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

“ಜನಮೇಜಯ! ತನ್ನ ಕಡೆಯ ಎಲ್ಲ ಸೈನಿಕರೂ ಮತ್ತು ಮಕ್ಕಳೂ ರಾತ್ರಿಯಲ್ಲಿ ಹತರಾದನಂತರ ಪುತ್ರಶೋಕಪೀಡಿತನಾಗಿದ್ದ ಧರ್ಮಾತ್ಮನಾದ ಯುಧಿಷ್ಠಿರನು, ವೃದ್ಧನಾದ ತಂದೆಯು (ದೊಡ್ಡಪ್ಪನು) ರಣರಂಗದಲ್ಲಿ ಸತ್ತುಬಿದ್ದಿದ್ದ ಮಕ್ಕಳನ್ನು ನೋಡುವ ಸಲುವಾಗಿ ಪರಿವಾರದೊಡನೆ ಹಸ್ತಿನಾ ಪಟ್ಟಣವನ್ನು ಬಿಟ್ಟು ಹೊರಟಿರುವನೆಂಬ ವಾರ್ತೆಯನ್ನು ಕೇಳಿದನು. ಒಡನೆಯೇ ಯುಧಿಷ್ಠಿರನು ಪುತ್ರಶೋಕದಲ್ಲಿ ಮುಳುಗಿಹೋಗಿದ್ದ, ಬಹಳವಾಗಿ ದುಃಖಿಸುತ್ತಿದ್ದ ಧೃತರಾಷ್ಟ್ರನನ್ನು ನೋಡುವ ಸಲುವಾಗಿ ಸಹೋದರರೊಡನೆ ಹೋದನು. ದಶಾರ್ಹಕುಲತಿಲಕನಾದ, ಮಹಾತ್ಮನಾದ ಮತ್ತು ವೀರನಾದ ಶ್ರೀಕೃಷ್ಣನೂ, ಸಾತ್ಯಕಿಯೂ ಮತ್ತು ಯುಯುತ್ಸುವೂ ಧರ್ಮರಾಜನನ್ನು ಹಿಂಬಾಲಿಸಿದರು. ಶೋಕಪೀಡಿತಳಾಗಿದ್ದ, ಪುತ್ರಮರಣದ ಮಹಾ ದುಃಖದಿಂದ ಆರ್ತಳಾಗಿದ್ದ ದ್ರೌಪದಿಯೂ ಅಲ್ಲಿಗೆ ಆಗಮಿಸಿದ್ದು ಇತರ ಪಾಂಚಾಲಸ್ತ್ರೀಯರಿಂದೊಡಗೂಡಿ ಯುಧಿಷ್ಠಿರನನ್ನು ಅನುಸರಿಸಿ ಹೋದಳು. ಯುಧಿಷ್ಠಿರನು ಗಂಗಾನದಿಯ ತೀರದಲ್ಲಿ ಹೆಣ್ಣುಕುರವ ಹಕ್ಕಿಗಳಂತೆ ಆರ್ತ

ಸ್ವರದಿಂದ ವಿಲಪಿಸುತ್ತಿದ್ದ ಕುರುರಾಜಮಹಿಷಿಯರ ಸಮೂಹಗಳನ್ನು ನೋಡಿದನು. ಪಾಂಡವರ ವಿಷಯದಲ್ಲಿ ಪ್ರಿಯವಾದ ಮತ್ತು ಅಪ್ರಿಯವಾದ ಮಾತುಗಳನ್ನಾಡುತ್ತಿದ್ದ, ಎರಡೂ ಕೈಗಳನ್ನೂ ಮೇಲೆತ್ತಿದ್ದ, ಆರ್ತರಾಗಿದ್ದ ಮತ್ತು ಸಂಕಟದಿಂದ ಕಿರುಚಿಕೊಳ್ಳುತ್ತಿದ್ದ ಸಾವಿರಾರು ಸ್ತ್ರೀಯರು ಯುಧಿಷ್ಠಿರನನ್ನು ಮುತ್ತಿಕೊಂಡರು.

**ಕ್ವ ನು ಧರ್ಮಜ್ಞತಾ ರಾಜ್ಞಃ ಕ್ವ ನು ಸಾದ್ಯಾನೃಶಂಸತಾ ।**
**ಯಚ್ಚಾವಧೀತ್ಪಿತೄನ್ಭ್ರಾತೄನ್ಗುರುಪುತ್ರಾನ್ಸಖೀನಪಿ ॥೭॥**

(ಯುಧಿಷ್ಠಿರನನ್ನು ಸುತ್ತುವರಿದ ಸ್ತ್ರೀಯರಲ್ಲಿ ಒಬ್ಬೊಬ್ಬರೂ ಒಂದೊಂದು ವಿಧವಾಗಿ ಮಾತನಾಡತೊಡಗಿದರು.) "ಯಾವನು ಪಿತೃಗಳನ್ನೂ, ಸೋದರರನ್ನೂ, ಗುರುಪುತ್ರರನ್ನೂ, ಸ್ನೇಹಿತರನ್ನೂ, ಯುದ್ಧವೆಂಬ ವ್ಯಾಜದಿಂದ ಕೊಂದುಹಾಕಿದನೋ ಆ ಯುಧಿಷ್ಠಿರರಾಜನ ಧರ್ಮಪರತೆ-ದಯಾಪರತೆಗಳು ಈಗ ಎಲ್ಲಿ ಹೋದುವು?

**ಘಾತಯಿತ್ವಾ ಕಥಂ ದ್ರೋಣಂ ಭೀಷ್ಮಂ ಚಾಪಿ ಪಿತಾಮಹಮ್ ।**
**ಮನಸ್ತೇಽಭೂನ್ಮಹಾಬಾಹೋ ಹತ್ವಾ ಚಾಪಿ ಜಯದ್ರಥಮ್ ॥೮॥**

ಮಹಾಬಾಹುವೇ! ಯುಧಿಷ್ಠಿರ! ಆಚಾರ್ಯರಾದ ದ್ರೋಣರನ್ನೂ, ಪಿತಾಮಹನಾದ ಭೀಷ್ಮನನ್ನೂ, ಕೌರವರಾಜನಿಗೆ ಅಳಿಯನಾದ ಜಯದ್ರಥನನ್ನೂ ಕೊಂದು ನಿನ್ನ ಮನಸ್ಸನ್ನು ಸಮಾಧಾನಸ್ಥಿತಿಯಲ್ಲಿ ಹೇಗೆ ಇಟ್ಟುಕೊಂಡಿರುವೆ?

**ಕಿಂ ನು ರಾಜ್ಯೇನ ತೇ ಕಾರ್ಯಂ ಪಿತೄನ್ಭ್ರಾತೄನಪಶ್ಯತಃ ।**
**ಅಭಿಮನ್ಯುಂ ಚ ದುರ್ಧರ್ಷಂ ದ್ರೌಪದೇಯಾಂಶ್ಚ ಭಾರತ ॥೯॥**

ಪಿತೃಗಳನ್ನೂ, ಸಹೋದರರನ್ನೂ, ದುರ್ಧರ್ಷನಾದ ಅಭಿಮನ್ಯುವನ್ನೂ, ದ್ರೌಪದಿಯ ಮಕ್ಕಳನ್ನೂ ಕಾಣದಿರುವ ನಿನಗೆ ರಾಜ್ಯದಿಂದ ಆಗುವ ಪ್ರಯೋಜನವೇನು? ನೀನು ಈ ರಾಜ್ಯವನ್ನಿಟ್ಟುಕೊಂಡು ಏನು ಮಾಡುವೆ?"

ಜನಮೇಜಯ! ಧರ್ಮಾತ್ಮನಾದ ಯುಧಿಷ್ಠಿರನು ಹೆಣ್ಣು ಕುರವ

ಪಕ್ಷಿಗಳಂತೆ ಸುತ್ತಲೂ ನಿಂತು ಚೀರಾಡುತ್ತಿದ್ದ ಸಾವಿರಾರು ಯುವತಿಯರನ್ನು ಅತಿಕ್ರಮಿಸಿ ಮುಂದೆ ಹೋಗಿ ದೊಡ್ಡಪ್ಪನಿಗೆ ನಮಸ್ಕಾರಮಾಡಿದನು. ಬಳಿಕ ಶತ್ರುಸೂದನರಾದ ಪಾಂಡವರು ಧರ್ಮಾನುಸಾರವಾಗಿ ದೊಡ್ಡಪ್ಪನಾದ ಧೃತರಾಷ್ಟ್ರನಿಗೆ ಅಭಿವಂದನೆಮಾಡಿ ಅನುಕ್ರಮವಾಗಿ ತಮ್ಮ



ನಾಮಧೇಯಗಳನ್ನು ಹೇಳಿದರು. ಪುತ್ರರ ವಧೆಯಿಂದ ಸಂಕಟಪಡುತ್ತಿದ್ದ ಶೋಕಪೀಡಿತನಾದ ಧೃತರಾಷ್ಟ್ರನು ತನ್ನ ಮಕ್ಕಳ ಸಾವಿಗೆ ಕಾರಣನಾದ ಯುಧಿಷ್ಠಿರನನ್ನು ಅಪ್ರಿಯವಾದ ಮನಸ್ಸಿನಿಂದಲೇ ಆಲಿಂಗಿಸಿಕೊಂಡನು. ಧರ್ಮರಾಜನನ್ನು ಆಲಿಂಗಿಸಿಕೊಂಡನಂತರ ಅವನನ್ನು ಸಂತಯಿಸಿದ ದುಷ್ಟಾತ್ಮನಾದ ಧೃತರಾಷ್ಟ್ರನು–ಸಿಕ್ಕಿದುದನ್ನೆಲ್ಲಾ ಭಸ್ಮಮಾಡಿಬಿಡುವ

ಅಗ್ನಿಯಂತೆ–ಭೀಮಸೇನನನ್ನು ಆಲಿಂಗಿಸಿಕೊಳ್ಳಲು ಇಚ್ಛಿಸಿದನು. ಆ ಸಮಯದಲ್ಲಿ ಅವನ ಮನಸ್ಸಿನಲ್ಲಿ ದುರ್ಭಾವನೆಯು ಮೂಡಿದ್ದಿತು. ಶೋಕ ವೆಂಬ ವಾಯುವಿನಿಂದ ಪ್ರೇರಿತವಾಗಿದ್ದ ಧೃತರಾಷ್ಟ್ರನ ಕೋಪರೂಪವಾದ ಅಗ್ನಿಯು ಭೀಮಸೇನರೂಪವಾದ ಅರಣ್ಯವನ್ನು ದಹಿಸಿಬಿಡಲು ನಿಶ್ಚಯಿಸಿ ದಂತೆ ಕಾಣುತ್ತಿದ್ದಿತು. ಧೃತರಾಷ್ಟ್ರನ ಅನಿಷ್ಟಸಂಕಲ್ಪವನ್ನು ಮನಗಂಡ ಶ್ರೀಕೃಷ್ಣನು ದೊಡ್ಡಪ್ಪನಿಗೆ ಅಭಿವಾದನಮಾಡಲು ಮುಂದೆ ಹೋಗುತ್ತಿದ್ದ ಭೀಮಸೇನನನ್ನು ತನ್ನೆರಡು ಕೈಗಳಿಂದ ಹಿಂದಕ್ಕೆಳೆದುಕೊಂಡು ಲೋಹಮಯವಾದ ಭೀಮಸೇನನ ಮೂರ್ತಿಯನ್ನು ಧೃತರಾಷ್ಟ್ರನ ಮುಂದೆ ನಿಲ್ಲಿಸಿದನು. ಮಹಾಬುದ್ಧಿಯಾದ, ಮಹಾಪ್ರಾಜ್ಞನಾದ ಶ್ರೀಕೃಷ್ಣನು ಧೃತರಾಷ್ಟ್ರನ ಇಂಗಿತವನ್ನು ಬಹಳ ಹಿಂದೆಯೇ ತಿಳಿದುಕೊಂಡಿದ್ದುದರಿಂದ ಲೋಹ ಮಯವಾದ ಭೀಮನ ಪ್ರತಿಮೆಯನ್ನು ಆತನ ಮುಂದೆ ನಿಲ್ಲಿಸಲು ಮೊದಲೇ ವ್ಯವಸ್ಥೆಮಾಡಿದ್ದನು. ಲೋಹಮಯವಾಗಿದ್ದ ಭೀಮಸೇನನ ಮೂರ್ತಿಯನ್ನೇ ನಿಜವಾದ ಭೀಮಸೇನನೆಂದು ಭಾವಿಸಿದ ಬಲಿಷ್ಠನಾದ ಧೃತರಾಷ್ಟ್ರನು ತನ್ನೆರಡು ತೋಳುಗಳಿಂದ ಅದನ್ನು ಬಲವಾಗಿ ತಬ್ಬಿಕೊಂಡು ಕ್ಷಣಮಾತ್ರದಲ್ಲಿ ಪುಡಿ-ಪುಡಿಮಾಡಿಬಿಟ್ಟನು.

ಧೃತರಾಷ್ಟ್ರರಾಜನು ಹತ್ತು ಸಾವಿರ ಆನೆಗಳ ಬಲವನ್ನು ಹೊಂದಿದ್ದರೂ ಲೋಹಮಯವಾದ ಭೀಮನ ಮೂರ್ತಿಯನ್ನು ಬಲವಾಗಿ ಅಪ್ಪಿಕೊಂಡು ಒಡೆದುಹಾಕಿದ ಕಾರಣ ಅವನ ವಕ್ಷಸ್ಥಳವು ಜಜ್ಜಿದಂತಾಗಿ ಬಾಯಿಂದ ರಕ್ತವು ಸ್ರವಿಸತೊಡಗಿತು. ರಕ್ತದಿಂದಲೇ ತೋಯ್ದುಹೋದ ಧೃತರಾಷ್ಟ್ರನು ಮೂರ್ಛಿತನಾಗಿ ಕೆಳಗೆ ಬಿದ್ದುಬಿಟ್ಟನು. ಆ ಸಮಯದಲ್ಲವನು ಹೂಗಳಿಂದ ಕೂಡಿದ ಅಗ್ರಭಾಗವುಳ್ಳ ಪಾರಿಜಾತವೃಕ್ಷದಂತೆಯೇ ಕಾಣು ತ್ತಿದ್ದನು. ಆ ಸಮಯದಲ್ಲಿ ವಿದ್ವಾಂಸನಾದ ಮತ್ತು ಧೃತರಾಷ್ಟ್ರನ ಸಾರಥಿಯಾದ ಸಂಜಯನು ಧೃತರಾಷ್ಟ್ರನನ್ನು ಹಿಡಿದೆತ್ತಿ ಅವನನ್ನು ಸಮಾಧಾನಗೊಳಿಸುತ್ತಾ ಅವನ ಕೋಪವನ್ನು ಉಪಶಮನಗೊಳಿಸುತ್ತಾ– 'ಮೈವಂ'–'ನೀನು ಹೀಗೆ ಮಾಡಬಾರದಾಗಿತ್ತು'–ಎಂಬುದಾಗಿಯೂ ಹೇಳಿದನು. ಒಡನೆಯೇ ಮಹಾತ್ಮನಾದ ಧೃತರಾಷ್ಟ್ರನು ಕೋಪವನ್ನು ಪರಿತ್ಯಜಿಸಿ ಶೋಕಪರೀತನಾಗಿ–'ಹಾ ಭೀಮ! ಅಯ್ಯೋ! ಎಂತಹ

ಕಾರ್ಯಮಾಡಿಬಿಟ್ಟೆನು!'-ಎಂಬುದಾಗಿ ಹೇಳಿಕೊಂಡು ವಿಲಪಿಸತೊಡಗಿದನು. ಧೃತರಾಷ್ಟ್ರನು ಕೋಪರಹಿತನಾದನೆಂಬುದನ್ನೂ-ಭೀಮಸೇನನನ್ನು ಕೊಂದನೆಂಬ ಕಾರಣದಿಂದ ಸಂಕಟಪಡುತ್ತಿರುವನೆಂಬುದನ್ನೂ- ಪುರುಷಶ್ರೇಷ್ಠನಾದ ವಾಸುದೇವನು ಮನಗಂಡು ರಾಜನೊಡನೆ ಹೇಳಿದನು :

"ಧೃತರಾಷ್ಟ್ರ! ಚಿಂತಿಸಬೇಡ. ಭೀಮಸೇನನನ್ನು ನೀನು ಸಂಹರಿಸಿಲ್ಲ. ಲೋಹಮಯವಾದ ಅವನ ಪ್ರತಿಮೆಯನ್ನು ಪುಡಿ-ಪುಡಿ ಮಾಡಿರುವೆ.

ಭರತರ್ಷಭನೇ! ನೀನು ಕ್ರೋಧವಶನಾಗಿರುವೆಯೆಂಬುದನ್ನು ತಿಳಿದೊಡನೆಯೇ ನಾನು ಮೃತ್ಯುವಿನ ದವಡೆಯೊಳಗೆ ಸೇರಿಹೋಗಿದ್ದ ಭೀಮಸೇನನನ್ನು ಹಿಂದಕ್ಕೆಳೆದುಕೊಂಡೆನು. ರಾಜಶಾರ್ದೂಲನೇ! ಬಲದಲ್ಲಿ ನಿನಗೆ ಸಮಾನರಾದವರು ಯಾರೂ ಇರುವುದಿಲ್ಲ. ಮಹಾಬಾಹುವೇ! ನಿನ್ನ ಬಾಹುಗಳ ಬಂಧನವನ್ನು ಯಾರು ತಾನೇ ಸಹಿಸಿಕೊಳ್ಳುವರು?

**ಯಥಾನ್ತಕಮನುಪ್ರಾಪ್ಯ ಜೀವನ್ಕಶ್ಚಿನ್ನ ಮುಚ್ಯತೇ ।**
**ಏವಂ ಬಾಹ್ವನ್ತರಂ ಪ್ರಾಪ್ಯ ತವ ಜೀವೇನ್ನ ಕಶ್ಚನ ॥೨೬॥**

ಯಾವ ರೀತಿಯಲ್ಲಿ ಯಮರಾಜನ ಬಳಿಗೆ ಹೋದವರಲ್ಲಿ ಯಾವನೊಬ್ಬನೂ ಜೀವಸಹಿತವಾಗಿ ಹಿಂದಿರುಗಿ ಬರುವುದಿಲ್ಲವೋ-ಅದೇ ರೀತಿಯಲ್ಲಿ ನಿನ್ನ ತೋಳುಗಳ ಮಧ್ಯದಲ್ಲಿ ಸೇರಿಕೊಂಡ ಯಾವನೂ ಜೀವಸಹಿತವಾಗಿ ಹೊರಬರುವುದಿಲ್ಲ.

**ತಸ್ಮಾತ್ಪುತ್ರೇಣ ಯಾ ತೇಽಸೌ ಪ್ರತಿಮಾ ಕಾರಿತಾಯಸೀ ।**
**ಭೀಮಸ್ಯ ಸೇಯಂ ಕೌರವ್ಯ ತವೈವೋಪಹೃತಾ ಮಯಾ ॥೨೭॥**

ನಿನ್ನ ಮಗನು ಭೀಮನೊಡನೆ ಗದಾಯುದ್ಧವನ್ನು ಅಭ್ಯಾಸಮಾಡುವ ಸಲುವಾಗಿ ಭೀಮಸೇನನ ಲೋಹದ ಪ್ರತಿಮೆಯನ್ನು ಮಾಡಿಸಿ ಇಟ್ಟುಕೊಂಡಿದ್ದನು. ಅದೇ ಭೀಮನ ಪ್ರತಿಮೆಯನ್ನೇ ನಾನು ನಿನ ಗೊಪ್ಪಿಸಿದೆನು. ನಿನ್ನ ಮನಸ್ಸು ಪುತ್ರಶೋಕದಿಂದ ಪರಿತಾಪಗೊಂಡಿದೆ. ಈ ಕಾರಣದಿಂದಲೇ ಧರ್ಮದಿಂದ ವಿಚಲಿತವಾಗಿದೆ. ಆದುದರಿಂದ ನೀನು ಭೀಮಸೇನನನ್ನು ಸಂಹರಿಸಲಿಚ್ಛಿಸಿದೆ.

**ನ ತ್ವೇತತ್ತೇ ಕ್ಷಮಂ ರಾಜನ್ಹನ್ಯಾಸ್ತ್ವಂ ಯದ್ವೃಕೋದರಮ್ ।**
**ನ ಹಿ ಪುತ್ರಾ ಮಹಾರಾಜ ಜೀವೇಯುಸ್ತೇ ಕಥಂಚನ ॥೨೮॥**

ನಿನ್ನಂತಹವನು ಹೀಗೆ ಮಾಡಬಾರದಾಗಿತ್ತು. ಇದು ನಿನಗೆ ಉಚಿತವಾಗಿ ಕಾಣುವುದಿಲ್ಲ. ಒಂದು ವೇಳೆ ನೀನೇನಾದರೂ ಭೀಮಸೇನನನ್ನು ಸಂಹರಿಸಿದ್ದರೂ ನಿನ್ನ ಮಕ್ಕಳು ಯಾವುದೇ ಕಾರಣದಿಂದಲೂ ಜೀವಂತರಾಗಿ ಹಿಂದಕ್ಕೆ ಬರುತ್ತಿರಲಿಲ್ಲ.

ಆದುದರಿಂದ ಶಾಂತಿಯನ್ನು ಸ್ಥಾಪಿಸುವ ಸಲುವಾಗಿ ನಾವು ಯಾವ ಯಾವ ಕಾರ್ಯಗಳನ್ನು ಮಾಡಿರುವೆವೋ–ಆ ಎಲ್ಲ ಕಾರ್ಯಗಳನ್ನೂ ನೀನು ಅನುಮತಿಸುವುದು ಯುಕ್ತವಾಗಿ ಕಾಣುತ್ತದೆ. ವ್ಯರ್ಥವಾಗಿ ಶೋಕದಲ್ಲಿ ಮನಸ್ಸನ್ನು ಮುಳುಗಿಸಬೇಡ."

೧೨ನೆಯ ಅಧ್ಯಾಯವು ಮುಗಿಯಿತು.

೧೩ನೆಯ ಅಧ್ಯಾಯ ಜಲಪ್ರದಾನಿಕಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಧೃತರಾಷ್ಟ್ರನನ್ನು ಶಾಂತಗೊಳಿಸಿದುದು : ಧೃತರಾಷ್ಟ್ರನು ಪಾಂಡವರನ್ನು ಆದರಪೂರ್ವಕವಾಗಿ ಆಲಿಂಗಿಸಿಕೊಂಡುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಅನಂತರ ಧೃತರಾಷ್ಟ್ರನ ಪರಿಚಾರಕರು ಶೌಚ ಸಂಬಂಧವಾದ ಕಾರ್ಯಕ್ಕಾಗಿ ಅವನ ಬಳಿಗೆ ಬಂದರು. ಅವರ ನೆರವಿನಿಂದ ಧೃತರಾಷ್ಟ್ರನು ಶೌಚಕೃತ್ಯವನ್ನು ಪೂರೈಸಿದನಂತರ ಮಧುಸೂದನನು ಪುನಃ ರಾಜನೊಡನೆ ಹೇಳಿದನು :

"ಮಹಾರಾಜ! ನೀನು ನಾಲ್ಕು ವೇದಗಳನ್ನೂ ಅಧ್ಯಯನ ಮಾಡಿರುವೆ. ವಿಧ-ವಿಧವಾದ ಶಾಸ್ತ್ರಗಳನ್ನೂ ಅಧ್ಯಯನಮಾಡಿರುವೆ. ಎಲ್ಲ ಪುರಾಣಗಳನ್ನೂ ಕೇಳಿರುವೆ. ವಿಶೇಷವಾಗಿ ರಾಜಧರ್ಮಗಳನ್ನೂ ತಿಳಿದಿರುವೆ. ಇಂತಹ ಮಹಾವಿದ್ವಾಂಸನಾಗಿರುವ ನೀನು ಬಲಾಬಲಗಳನ್ನೂ ನಿರ್ಣಯಿಸಲು ಸಮರ್ಥನಾಗಿರುವೆ. ನೀನು ಮಾಡಿದ ಅಪರಾಧದಿಂದಲೇ ಈ ಎಲ್ಲ ವಿನಾಶಕಾರ್ಯಗಳೂ ನಡೆದುವು. ಈ ವಿಷಯವೂ ನಿನಗೆ ಚೆನ್ನಾಗಿ ಗೊತ್ತಿದೆ. ಹೀಗಿರುವಾಗ ಯಾವ ಕಾರಣದಿಂದ ನೀನಿಷ್ಟು ಕುಪಿತನಾಗಿ ರುವೆ? ಪಾಂಡವರೊಡನೆ ಸಂಧಿಯನ್ನು ಮಾಡಿಕೊಳ್ಳುವುದು ಉಚಿತವೆಂದು

ಹಿಂದೆಯೇ ಹೇಳಿದ್ದೆನು. ಭೀಷ್ಮ-ದ್ರೋಣರೂ ಅದೇ ಸಲಹೆಯನ್ನೇ ನೀಡಿದರು. ವಿದುರ ಮತ್ತು ಸಂಜಯರೂ ನನ್ನ ಮಾತನ್ನು ಅನುಮೋದಿಸಿದರು. ಆದರೆ ನಾವೆಲ್ಲರೂ ಹೇಳಿದಂತೆ ನೀನು ಮಾಡಲಿಲ್ಲ. ನಾವೆಲ್ಲರೂ ಯುದ್ಧವು ಬೇಡವೆಂದು ನಿನ್ನನ್ನು ಬಹಳವಾಗಿ ತಡೆದೆವು. ಪಾಂಡವರೊಡನೆ ಸಂಧಿಮಾಡಿಕೊಳ್ಳುವಂತೆ ಸಲಹೆನೀಡಿದೆವು. ಬಲದಲ್ಲಿಯೂ ಮತ್ತು ಪರಾಕ್ರಮದಲ್ಲಿಯೂ ಪಾಂಡವರು ನಿನ್ನ ಕಡೆಯವರಿಗಿಂತಲೂ ಅಧಿಕರಾಗಿರುವರೆಂಬುದನ್ನು ತಿಳಿದಿದ್ದೂ ನೀನು ನಮ್ಮ ಮಾತನ್ನು ಪುರಸ್ಕರಿಸಲಿಲ್ಲ.

**ರಾಜಾ ಹಿ ಯಃ ಸ್ಥಿರಪ್ರಜ್ಞಃ ಸ್ವಯಂ ದೋಷಾನವೇಕ್ಷತೇ ।**
**ದೇಶಕಾಲವಿಭಾಗಂ ಚ ಪರಂ ಶ್ರೇಯಃ ಸ ವಿನ್ದತಿ ॥೬॥**

ಯಾವ ರಾಜನು ಸ್ಥಿರಪ್ರಜ್ಞನಾಗಿ ತನ್ನ ದೋಷಗಳನ್ನೂ ದೇಶ- ಕಾಲಗಳ ವಿಭಾಗವನ್ನೂ (ಯಾವ ಕಾಲದಲ್ಲಿ ಯಾವ ಕಾರ್ಯ ಮಾಡಬೇಕೆಂಬುದನ್ನು) ತಾನೇ ತಿಳಿದುಕೊಳ್ಳುತ್ತಾನೆಯೋ–ಅವನು ಪರಮ ಶ್ರೇಯಸ್ಸನ್ನು ಹೊಂದುತ್ತಾನೆ.

**ಉಚ್ಯಮಾನಸ್ತು ಯಃ ಶ್ರೇಯೋ ಗೃಹ್ಣೀತೇ ನೋ ಹಿತಾಹಿತೇ ।**
**ಆಪದಃ ಸಮನುಪ್ರಾಪ್ಯ ಸ ಶೋಚತ್ಯನಯೇ ಸ್ಥಿತಃ ॥೭॥**

ಹಿತವಾದ ಮಾತುಗಳನ್ನು ಮಿತ್ರರು ಹೇಳಿದರೂ ಹಿತಾಹಿತಗಳು ಯಾವುವೆಂಬುದನ್ನು ಯಾವನು ಗ್ರಹಣಮಾಡುವುದಿಲ್ಲವೋ–ಅಂತಹವನು ಅನ್ಯಾಯದ ಮಾರ್ಗವನ್ನೇ ಅವಲಂಬಿಸಿ ಆಪತ್ತಿನಲ್ಲಿ ಸಿಕ್ಕಿಕೊಂಡು ಕಡೆಯಲ್ಲಿ ಬಹಳವಾಗಿ ದುಃಖಿಸುತ್ತಾನೆ. ನಿನಗೆ ಆ ಸಮಯದಲ್ಲಿದ್ದ ಮನಃಸ್ಥಿತಿಯನ್ನೇ ವಿಮರ್ಶಿಸು. ನಿನ್ನ ವ್ಯವಹಾರವು ಆ ಸಮಯದಲ್ಲಿ ನ್ಯಾಯಬಾಹಿರವಾಗಿದ್ದಿತು. ನಿನ್ನ ಮನಸ್ಸು ನಿನ್ನ ಅಧೀನದಲ್ಲಿಯೇ ಇರಲಿಲ್ಲ. ದುರ್ಯೋಧನನ ವಶವಾಗಿದ್ದಿತು. (ನೀನು ದುರ್ಯೋಧನನ ಅಧೀನನಾಗಿದ್ದೆ.)

ಅಂದು ಮಾಡಿದ ಅಪರಾಧದಿಂದಲೇ ಮಹಾವಿಪತ್ತಿಗೊಳಗಾಗಿರುವ ನೀನು ಭೀಮಸೇನನನ್ನೇಕೆ ಸಂಹರಿಸಲು ಇಚ್ಛಿಸಿದೆ? ಪುತ್ರಶೋಕದಿಂದ ಉಂಟಾಗಿರುವ ಕೋಪವನ್ನು ತಡೆಹಿಡಿ. ನೀನು ಹಿಂದೆ ಮಾಡಿದ ದುಷ್ಕಾರ್ಯವನ್ನು ಸ್ಮರಿಸು. ಕ್ಷುದ್ರನಾದ ದುರ್ಯೋಧನನು ಮತ್ಸರದ

ಕಾರಣದಿಂದಾಗಿ ಪಾಂಚಾಲಿಯನ್ನು ತುಂಬಿದ ಸಭೆಗೆ ಸೆಳೆದು ತರಿಸಿ ಅವಮಾನಗೊಳಿಸಿದನು. ಆ ವೈರಕ್ಕೆ ಪ್ರತೀಕಾರಮಾಡಲು ಭೀಮಸೇನನು ದುರ್ಯೋಧನನನ್ನು ಸಂಹರಿಸಿದನು. ನೀನೂ ಮತ್ತು ನಿನ್ನ ಮಗನಾದ ದುರಾತ್ಮನಾದ ದುರ್ಯೋಧನನೂ ಪಾಂಡವರ ವಿಷಯದಲ್ಲಿ ಮಾಡಿದ ಅತ್ಯಾಚಾರಗಳನ್ನು ಗಮನಿಸು. ಆ ಸಮಯದಲ್ಲಿ ನೀನು ನಿರಪರಾಧಿಗಳಾದ ಪಾಂಡವರನ್ನು ಪರಿತ್ಯಾಗಮಾಡಿದೆ."

ಜನಮೇಜಯ! ಹೀಗೆಂಬುದಾಗಿ ಶ್ರೀಕೃಷ್ಣನು ಧೃತರಾಷ್ಟ್ರನ ಮುಂದೆ ಸತ್ಯವನ್ನು ಸ್ಪಷ್ಟವಾಗಿಡಲು ಮಹೀಪತಿಯಾದ ಧೃತರಾಷ್ಟ್ರನು ದೇವಕಿಯ ಮಗನಾದ ಶ್ರೀಕೃಷ್ಣನಿಗೆ ಹೇಳಿದನು :

"ಮಹಾಬಾಹುವೇ! ಕೇಶವ! ಇದು ಹೀಗೆಯೇ ಸರಿ. ನೀನು ಹೇಳಿದಂತೆಯೇ ಎಲ್ಲವೂ ನಡೆದುಹೋಯಿತು.

ಪುತ್ರಸ್ನೇಹಸ್ತು ಬಲವಾನ್ಧೈರ್ಯಾನ್ಮಾಂ ಸಮಚಾಲಯತ್ ॥೧೩॥

ಪುತ್ರಸ್ನೇಹವೆಂಬುದು ಬಲವತ್ತರವಾದುದು. ಆ ಪುತ್ರಪ್ರೇಮವೇ ನನ್ನನ್ನು ಧೈರ್ಯದಿಂದ (ಧರ್ಮನಿಷ್ಠೆಯಿಂದ) ವಿಚಲಿತನನ್ನಾಗಿ ಮಾಡಿಬಿಟ್ಟಿತು. ಅದೃಷ್ಟವಶದಿಂದ ಪುರುಷವ್ಯಾಘ್ರನಾದ, ಬಲಿಷ್ಠನಾದ, ಸತ್ಯವಿಕ್ರಮನಾದ ಭೀಮಸೇನನು ನಿನ್ನಿಂದ ಸಂರಕ್ಷಿತನಾಗಿ ನನ್ನ ತೋಳುಗಳಲ್ಲಿ ಸಿಕ್ಕಿಹಾಕಿಕೊಳ್ಳಲಿಲ್ಲ. ಈಗ ನಾನು ಶಾಂತನಾಗಿದ್ದೇನೆ. ಕೋಪವನ್ನು ತ್ಯಜಿಸಿದ್ದೇನೆ. ಚಿಂತೆಯಿಂದ ರಹಿತನಾಗಿದ್ದೇನೆ. ವೀರನಾದ, ಪಾಂಡವಮಧ್ಯಮನಾದ ಭೀಮಸೇನನನ್ನು ಕಾಣಲಿಚ್ಛಿಸಿದ್ದೇನೆ. ಎಲ್ಲ ರಾಜರೂ ಮತ್ತು ನನ್ನ ಎಲ್ಲ ಮಕ್ಕಳೂ ಹತರಾದನಂತರ ನನ್ನ ಪ್ರೀತಿಯೂ ಮತ್ತು ಸುಖವೂ ಪಾಂಡುವಿನ ಮಕ್ಕಳಲ್ಲಿಯೇ ಪ್ರತಿಷ್ಠಿತವಾಗಿರುತ್ತದೆ. (ಮುಂದೆ ಅವರನ್ನು ಪ್ರೀತಿಸದೇ ನಾನು ಮತ್ತಾರನ್ನು ತಾನೇ ಪ್ರೀತಿಸಲಿ?)"

ಜನಮೇಜಯ! ಅನಂತರ ಮಕ್ಕಳನ್ನು ನೆನೆದು ಶೋಕಿಸುತ್ತಿದ್ದ ಧೃತರಾಷ್ಟ್ರನು ಸುಂದರವಾದ ಶರೀರಗಳಿಂದ ಕೂಡಿದ್ದ ಭೀಮಾರ್ಜುನರನ್ನೂ, ಪುರುಷಶ್ರೇಷ್ಠರಾದ ಮಾದ್ರಿಯ ಮಕ್ಕಳಾದ ನಕುಲ-ಸಹದೇವರನ್ನೂ ಅವರ

ಅಂಗಾಂಗಗಳನ್ನು ಮುಟ್ಟಿ ನೇವರಿಸಿದನು. ಅವರನ್ನು ಯಥಾಯೋಗ್ಯವಾಗಿ ಸಂತಯಿಸಿ, ಮಂಗಳವಾಗಲೆಂದು ಆಶೀರ್ವದಿಸಿದನು."

೧೩ನೆಯ ಅಧ್ಯಾಯವು ಮುಗಿಯಿತು.

೧೪ನೆಯ ಅಧ್ಯಾಯ ಜಲಪ್ರದಾನಿಕಪರ್ವ (ಮುಂದುವರಿದಿದೆ.)

## ಪಾಂಡವರಿಗೆ ಶಾಪಕೊಡಲು ಉದ್ಯುಕ್ತಳಾಗಿದ್ದ ಗಾಂಧಾರಿಯನ್ನು ವ್ಯಾಸರು ಸಮಾಧಾನಗೊಳಿಸಿದುದು

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಧೃತರಾಷ್ಟ್ರನ ಅನುಮತಿಯನ್ನು ಪಡೆದ ಕುರುವಂಶಸಂಭೂತರಾದ ಪಾಂಡವಸಹೋದರರು ಕೇಶವನೊಡನೆ ಗಾಂಧಾರೀದೇವಿಯ ಬಳಿಗೆ ಹೋದರು.

ಹತಶತ್ರುವಾದ ಯುಧಿಷ್ಠಿರನು ಸಹೋದರರೊಡನೆ ತನ್ನ ಸಮೀಪಕ್ಕೆ ಬರುತ್ತಿರುವನೆಂಬುದನ್ನು ತಿಳಿದು ಪುತ್ರಶೋಕದಿಂದ ಪೀಡಿತಳಾಗಿದ್ದ ನಿಷ್ಕಳಂಕೆಯಾದ ಗಾಂಧಾರಿಯು ಯುಧಿಷ್ಠಿರನಿಗೆ ಶಾಪಕೊಡಲು ಇಚ್ಛಿಸಿದಳು. ಪಾಂಡವರ ವಿಷಯದಲ್ಲಿ ಗಾಂಧಾರಿಯ ಮನಸ್ಸಿನಲ್ಲಿ ಉಂಟಾದ ಪಾಪಪೂರ್ಣಸಂಕಲ್ಪವನ್ನು ಸತ್ಯವತೀಪುತ್ರರಾದ ವ್ಯಾಸರು ಮೊದಲೇ ತಿಳಿದುಕೊಂಡರು. ಅವಳ ಮನಸ್ಸಿನ ಅಭಿಪ್ರಾಯವನ್ನು ತಿಳಿದುಕೊಂಡೊಡನೆಯೇ, ಮನಸ್ಸಿನ ವೇಗಕ್ಕೆ ಸಮಾನವಾದ ವೇಗದಿಂದ ಸಂಚರಿಸುವ ಸಾಮರ್ಥ್ಯವನ್ನು ಹೊಂದಿದ್ದ ಪರಮರ್ಷಿಗಳಾದ ವ್ಯಾಸರು, ಪವಿತ್ರವಾದ ಮತ್ತು ಸುಗಂಧಿತವಾದ ಗಂಗೆಯ ಸ್ವಚ್ಛವಾದ ನೀರಿನಲ್ಲಿ ಆಚಮನಮಾಡಿ ಗಾಂಧಾರಿಯಿದ್ದ ಸ್ಥಳಕ್ಕೆ ಆಗಮಿಸಿದರು. ದಿವ್ಯದೃಷ್ಟಿಯಿಂದ ನೋಡುತ್ತಾ, ಮನಸ್ಸನ್ನು ಪ್ರಾಣಿಗಳ ಭಾವವನ್ನು ತಿಳಿದುಕೊಳ್ಳುವುದರಲ್ಲಿಯೇ ಕೇಂದ್ರೀಕರಿಸಿ, ಯಾರು-ಯಾರು ಹೇಗೆ-ಹೇಗೆ ತಮ್ಮ ಮನಸ್ಸಿನಲ್ಲಿ ಯೋಚಿಸುತ್ತಿದ್ದಾರೆಂಬುದನ್ನು ವ್ಯಾಸರು ತಿಳಿಯುತ್ತಿದ್ದರು. ಹಿತವಾದಿಗಳಾದ, ಮಹಾತಪಸ್ವಿಗಳಾದ ವ್ಯಾಸರು ಶಾಪದ ಕಾಲವನ್ನು ಹೋಗಲಾಡಿಸಿ ಶಾಂತಿಯ ಕಾಲವನ್ನು ಉದ್ಬೋಧಗೊಳಿಸುವ ಸಲುವಾಗಿ ಸೊಸೆಯಾದ ಗಾಂಧಾರೀದೇವಿಯೊಡನೆ ಹೀಗೆ ಹೇಳಿದರು :

“ಗಾಂಧಾರಿ! ಶಾಂತಳಾಗು. ಯುಧಿಷ್ಠಿರನ ವಿಷಯದಲ್ಲಿ ಕೋಪಗೊಳ್ಳುವುದು ಯುಕ್ತವಾಗಿ ಕಾಣುವುದಿಲ್ಲ. ನಿನ್ನ ಬಾಯಿಂದ ಹೊರಡಲಿರುವ ಮಾತನ್ನು (ಶಾಪವನ್ನು) ತಡೆದು ನಿಲ್ಲಿಸು. ನಾನು ಹೇಳಲಿರುವ ಮಾತನ್ನು ಕೇಳು. ಹದಿನೆಂಟು ದಿವಸಗಳ ಹಿಂದೆ ಶತ್ರುಗಳೊಡನೆ ವಿಜಯವನ್ನಿಚ್ಛಿಸಿ ನಿನ್ನ ಮಗನು ನಿನ್ನ ಸಮೀಪಕ್ಕೆ ಬಂದು :



‘ಶಿವಮಾಶಾಸ್ವ ಮೇ ಮಾತರ್ಯುಧ್ಯಮಾನಸ್ಯ ಶತ್ರುಭಿಃ’– ‘ತಾಯೇ! ಶತ್ರುಗಳೊಡನೆ ಯುದ್ಧಮಾಡಲು ಹೊರಟಿರುವ ನನಗೆ ಮಂಗಳಾಶಾಸನ ಮಾಡಮ್ಮಾ! (ಮಂಗಳವಾಗಲೆಂದು ಹೇಳು–ವಿಜಯಿಯಾಗೆಂದು ಆಶೀರ್ವದಿಸು)’ – ಎಂದು ಪ್ರಾರ್ಥಿಸಿದನು. ವಿಜಯವನ್ನು

ಪಡೆಯಲಿಚ್ಛಿಸಿದ್ದ ನಿನ್ನ ಮಗನು ಪದೇ-ಪದೇ ಆ ಪ್ರಾರ್ಥನೆಯನ್ನೇ ನಿನ್ನ ಮುಂದಿಡುತ್ತಿದ್ದನು. ಹಾಗೆ ಅವನಿಂದ ಪ್ರಾರ್ಥಿತಳಾದ ನೀನು – '**ಯತೋ ಧರ್ಮಸ್ತತೋ ಜಯಃ**' – 'ಮಗು! ಧರ್ಮವಿರುವ ಪಕ್ಷಕ್ಕೇ ವಿಜಯವು ಸಿದ್ಧಿಸುತ್ತದೆ'–ಎಂಬ ಒಂದು ಮಾತನ್ನು ಮಗನೊಡನೆ ಹೇಳಿದೆ.

**ನ ಚಾಪ್ಯತೀತಾಂ ಗಾನ್ಧಾರಿ ವಾಚಂ ತೇ ವಿತಥಾಮಹಮ್ ।**
**ಸ್ಮರಾಮಿ ಭಾಷಮಾಣಾಯಾಸ್ತಥಾ ಪ್ರಾಣಿಹಿತಾ ಹ್ಯಸಿ ॥೧೦॥**

ನೀನು ಸಾಮಾನ್ಯವಾಗಿ ಮಾತನಾಡುವಾಗಲೂ ನಿನ್ನ ಬಾಯಿಂದ ಹೊರಟ ಒಂದೇ ಒಂದು ಮಾತಾದರೂ ಸುಳ್ಳಾದುದು ನನ್ನ ಸ್ಮರಣೆಯಲ್ಲಿಲ್ಲ. ನೀನು ಯಾವಾಗಲೂ ಪ್ರಾಣಿಗಳ ಹಿತದಲ್ಲಿಯೇ ತತ್ಪರಳಾಗಿರತಕ್ಕವಳು.

ರಾಜರ ಈ ಘೋರಸಂಗ್ರಾಮದಿಂದ ಪಾರಾಗಿ ಬಂದುದು ಮತ್ತು ಪಾಂಡುವಿನ ಮಕ್ಕಳು ತಮಗಿಂತಲೂ ಬಲಿಷ್ಠರಾಗಿದ್ದ ಶತ್ರುಗಳನ್ನು ಯುದ್ಧದಲ್ಲಿ ಜಯಿಸಿದುದು–ಈ ನಿದರ್ಶನಗಳಿಂದ ಧರ್ಮದ ಬಲವು ಎಲ್ಲ ಬಲಗಳಿಗಿಂತಲೂ ಅಧಿಕವೆಂಬುದು ನಿಃಸಂದೇಹವಾಗಿ ಸ್ಪಷ್ಟವಾಗಿದೆ.

**ಕ್ಷಮಾಶೀಲಾ ಪುರಾ ಭೂತ್ವಾ ಸಾದ್ಯ ನ ಕ್ಷಮಸೇ ಕಥಮ್ ।**
**ಅಧರ್ಮಂ ಜಹಿ ಧರ್ಮಜ್ಞೇ ಯತೋ ಧರ್ಮಸ್ತತೋ ಜಯಃ ॥೧೨॥**

ಮೊದಲು ಅತ್ಯಂತಕ್ಷಮಾಶೀಲಳಾಗಿದ್ದ ನೀನು ಈಗೇಕೆ ಪಾಂಡವರನ್ನು ಕ್ಷಮಿಸುತ್ತಿಲ್ಲ? ಧರ್ಮಜ್ಞಳೇ! ಅಧರ್ಮಮಾರ್ಗವನ್ನು ಪರಿತ್ಯಜಿಸು. ನೀನಂದು ನಿನ್ನ ಮಗನೊಡನೆ ಹೇಳಿದ್ದಂತೆಯೇ ಯಾವ ಪಕ್ಷದಲ್ಲಿ ಧರ್ಮವಿದ್ದಿತೋ ಆ ಪಕ್ಷಕ್ಕೇ ವಿಜಯವು ಲಭಿಸಿದೆ.

**ಸ್ವಂ ಚ ಧರ್ಮಂ ಪರಿಸ್ಮೃತ್ಯ ವಾಚಂ ಚೋಕ್ತಾಂ ಮನಸ್ವಿನಿ ।**
**ಕೋಪಂ ಸಂಯಚ್ಛ ಗಾನ್ಧಾರಿ ಮೈವಂ ಭೂಃ ಸತ್ಯವಾದಿನಿ ॥೧೩॥**

ಮನನಶೀಲಳೇ! ಗಾಂಧಾರಿ! ನಿನ್ನ ಧರ್ಮವನ್ನೂ, ನೀನು ಹೇಳಿದ್ದ ಮಾತನ್ನೂ ಸ್ಮರಣೆಗೆ ತಂದುಕೊಂಡು ನಿನಗೆ ತಾತ್ಕಾಲಿಕವಾಗಿ ಉಂಟಾಗಿರುವ ಕೋಪವನ್ನು ಉಪಶಮನಗೊಳಿಸು. ಸತ್ಯವಾದಿನಿಯೇ! ಪುನಃ ಹೀಗೆ ವ್ಯವಹರಿಸಬೇಡ. (ಪಾಂಡವರ ವಿಷಯದಲ್ಲಿ ಕುಪಿತಳಾಗಬೇಡ.)"

**ಭಗವಾನ್ನಾಭ್ಯಸೂಯಾಮಿ ನೈತಾನಿಚ್ಛಾಮಿ ನಶ್ಯತಃ ।**
**ಪುತ್ರಶೋಕೇನ ತು ಬಲಾನ್ಮನೋ ವಿಹ್ವಲತೀವ ಮೇ ॥೧೪॥**

"ಭಗವನ್! ನಾನು ಪಾಂಡವರ ವಿಷಯದಲ್ಲಿ ಅಸೂಯೆಪಡುವುದಿಲ್ಲ. ಅವರು ನಾಶಹೊಂದಬೇಕೆಂದೂ ನಾನು ಇಚ್ಛಿಸುವುದಿಲ್ಲ. ಆದರೆ ಪುತ್ರಶೋಕದಿಂದಾಗಿ ನನ್ನ ಮನಸ್ಸು ಬಹಳವಾಗಿ ವ್ಯಾಕುಲಗೊಂಡಿದೆ.

**ಯಥೈವ ಕುನ್ತ್ಯಾ ಕೌನ್ತೇಯಾ ರಕ್ಷಿತವ್ಯಾಸ್ತಥಾ ಮಯಾ ।**
**ತಥೈವ ಧೃತರಾಷ್ಟ್ರೇಣ ರಕ್ಷಿತವ್ಯಾ ಯಥಾ ತ್ವಯಾ ॥೧೫॥**

ಕುಂತಿಯ ಈ ಮಕ್ಕಳನ್ನು ಕುಂತಿಯು ಹೇಗೆ ರಕ್ಷಿಸಬೇಕಾಗಿದೆಯೋ ಹಾಗೆಯೇ ನಾನೂ ಕುಂತಿಯ ಮಕ್ಕಳನ್ನು ರಕ್ಷಿಸಬೇಕು. ನೀನು ಹೇಗೆ ಆ ಕುಂತಿಯ ಮಕ್ಕಳನ್ನು ರಕ್ಷಿಸುತ್ತಿರುವೆಯೋ ಹಾಗೆಯೇ ಧೃತರಾಷ್ಟ್ರನೂ ಇವರನ್ನು ರಕ್ಷಿಸಬೇಕು. (ಕುಂತಿಯ ಮಕ್ಕಳನ್ನು ರಕ್ಷಿಸುವುದು ನಮ್ಮಿಬ್ಬರ ಕರ್ತವ್ಯವೂ ಆಗಿರುತ್ತದೆ.)

ಈ ಕುರುಕುಲಕ್ಷಯವು ದುರ್ಯೋಧನ, ನನ್ನ ತಮ್ಮನಾದ, ಸುಬಲನ ಮಗನಾದ ಶಕುನಿ, ಕರ್ಣ ಮತ್ತು ದುಃಶಾಸನ–ಇವರು ಮಾಡಿದ ಅಪರಾಧದಿಂದಲೇ ಆಗಿರುತ್ತದೆ. ಇದರಲ್ಲಿ ಅರ್ಜುನನಾಗಲೀ, ಭೀಮ-ನಕುಲ-ಸಹದೇವರಾಗಲೀ ಯಾವ ವಿಧವಾದ ಅಪರಾಧವನ್ನೂ ಮಾಡಿರುವುದಿಲ್ಲ. ಯುಧಿಷ್ಠಿರನಂತೂ ಎಂದೆಂದಿಗೂ ಇಂತಹ ಅಪರಾಧವನ್ನು ಮಾಡುವವನೇ ಅಲ್ಲ. ಕೌರವರು ಪರಸ್ಪರವಾಗಿ ಯುದ್ಧಮಾಡುತ್ತಾ ಒಬ್ಬರು-ಮತ್ತೊಬ್ಬರನ್ನು ಕೊಚ್ಚಿಹಾಕುತ್ತಾ ಸೋದರ-ಸುಹೃದರೊಡನೆ ಅಸುಗಳನ್ನು ನೀಗಿದರು. ಇದರಿಂದಲೂ ನನಗೆ ಅಸಮಾಧಾನವೇನೂ ಉಂಟಾಗಲಿಲ್ಲ.

**ಕಿಂ ತು ಕರ್ಮಾಕರೋದ್ಭೀಮೋ ವಾಸುದೇವಸ್ಯ ಪಶ್ಯತಃ ।**
**ದುರ್ಯೋಧನಂ ಸಮಾಹೂಯ ಗದಾಯುದ್ಧೇ ಮಹಾಮನಾಃ ॥**

**ಶಿಕ್ಷಯಾಭ್ಯಧಿಕಂ ಜ್ಞಾತ್ವಾ ಚರನ್ತಂ ಬಹುಧಾ ರಣೇ ।**
**ಅಧೋ ನಾಭ್ಯಾಃ ಪ್ರಹೃತವಾಂಸ್ತನ್ಮೇ ಕೋಪಮವರ್ಧಯತ್ ॥**

ಆದರೆ ಭೀಮಸೇನನು ವಾಸುದೇವನ ಎದುರಿನಲ್ಲಿಯೇ ಧರ್ಮಬಾಹಿರ

ವಾದ ರೀತಿಯಲ್ಲಿ ವರ್ತಿಸಿದನು. ಮಹಾತ್ಮನಾದ ಭೀಮಸೇನನು ದುರ್ಯೋಧನನನ್ನು ಗದಾಯುದ್ಧಕ್ಕೆ ಆಹ್ವಾನಿಸಿದನು. ಶಿಕ್ಷಣದಲ್ಲಿ ಅವನು ತನಗಿಂತಲೂ ಅಧಿಕನಾದವನೆಂಬುದನ್ನು ನಿಶ್ಚಯಿಸಿದ ಭೀಮಸೇನನು ಅನೇಕ ಪ್ರಕಾರವಾಗಿ ರಣಾಂಗಣದ ಸುತ್ತಲೂ ಸಂಚರಿಸುತ್ತಿದ್ದ ದುರ್ಯೋಧನನನ್ನು ನಾಭಿಯಿಂದ ಕೆಳಭಾಗದಲ್ಲಿ ಯುದ್ಧಧರ್ಮವನ್ನೇ ಅತಿಕ್ರಮಿಸಿ ಪ್ರಹರಿಸಿದನು. ಭೀಮಸೇನನ ಆ ಕ್ರಿಯೆಯು ನನ್ನ ಕೋಪವನ್ನು ಹೆಚ್ಚಿಸಿತು.

**ಕಥಂ ನು ಧರ್ಮಂ ಧರ್ಮಜ್ಞೈಃ ಸಮುದ್ದಿಷ್ಟಂ ಮಹಾತ್ಮಭಿಃ ।**
**ತ್ಯಜೇಯುರಾಹವೇ ಶೂರಾಃ ಪ್ರಾಣಹೇತೋಃ ಕಥಂಚನ ॥೨೧॥**

ಧರ್ಮಜ್ಞರಾದ ಮಹಾತ್ಮರು ಯುದ್ಧದ ಸಂಬಂಧದಲ್ಲಿ ಯಾವ ಧರ್ಮವನ್ನು ನಿಯಮಮಾಡಿರುತ್ತಾರೆಯೋ, ಆ ಧರ್ಮವನ್ನು ಶೂರ ಯೋಧರು ಯುದ್ಧಸಮಯದಲ್ಲಿ, ಪ್ರಾಣವನ್ನೇ ಉಳಿಸಿಕೊಳ್ಳುವುದ ಕ್ಕಾದರೂ ಹೇಗೆ ತ್ಯಾಗಮಾಡುತ್ತಾರೆ? (ಪ್ರಾಣವು ಹೋಗುವ ಸಮಯವು ಒದಗಿಬಂದರೂ ಯುದ್ಧಧರ್ಮವನ್ನು ಮೀರಿ ನಡೆಯುವುದು ಯುಕ್ತವಲ್ಲ.".)

೧೪ನೆಯ ಅಧ್ಯಾಯವು ಮುಗಿಯಿತು.

೧೫ನೆಯ ಅಧ್ಯಾಯ ಜಲಪ್ರದಾನಿಕಪರ್ವ (ಮುಂದುವರಿದಿದೆ.)

## ಭೀಮಸೇನನು ಗಾಂಧಾರಿಯಿಂದ ಕ್ಷಮೆಯನ್ನು ಯಾಚಿಸಿದುದು : ಯುಧಿಷ್ಠಿರನು ತಾನು ಅಪರಾಧಿಯೆಂಬುದನ್ನು ಒಪ್ಪಿಕೊಂಡುದು : ಗಾಂಧಾರಿಯ ದೃಷ್ಟಿಪಾತದಿಂದ ಯುಧಿಷ್ಠಿರನ ಉಗುರುಗಳು ಕಪ್ಪಾದುದು : ಅರ್ಜುನನು ಹೆದರಿ ಶ್ರೀಕೃಷ್ಣನ ಹಿಂಬದಿಯಲ್ಲಿ ಅಡಗಿಕೊಂಡುದು : ಪಾಂಡವರು ಕುಂತಿಯನ್ನು ಸಂಧಿಸಿದುದು : ದ್ರೌಪದಿಯ ವಿಲಾಪ : ಕುಂತಿಯ ಆಶ್ವಾಸನೆ : ಗಾಂಧಾರಿಯು ಕುಂತೀ-ದ್ರೌಪದಿಯರಿಗೆ ಧೈರ್ಯಹೇಳಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಗಾಂಧಾರಿಯು ಹೇಳಿದ ಮಾತನ್ನು ಕೇಳಿ

ಭೀಮಸೇನನು ಭಯಗೊಂಡವನಂತೆ ಗಾಂಧಾರಿಯನ್ನು ಕುರಿತು ವಿನಯ ಯುಕ್ತವಾದ ಮತ್ತು ಯುಕ್ತಿಯುಕ್ತವಾದ ಈ ಮಾತನ್ನು ಹೇಳಿದನು :

**ಅಧರ್ಮೋ ಯದಿ ವಾ ಧರ್ಮಸ್ತ್ರಾಸಾತ್ತತ್ರ ಮಯಾ ಕೃತಂ ।**
**ಆತ್ಮಾನಂ ತ್ರಾತುಕಾಮೇನ ತನ್ಮೇ ತ್ವಂ ಕ್ಷನ್ತುಮರ್ಹಸಿ ॥೨॥**

"ಅಮ್ಮ! ಧರ್ಮವೋ ; ಅಧರ್ಮವೋ–ದುರ್ಯೋಧನನ ಭಯದಿಂದ ಆತ್ಮರಕ್ಷಣೆಯನ್ನು ಮಾಡಿಕೊಳ್ಳಲಿಚ್ಛಿಸಿದ ನಾನು ಹಾಗೆ ಮಾಡಿಬಿಟ್ಟೆನು. (ನಾಭಿಯ ಕೆಳಗೆ ಪ್ರಹರಿಸಿ ಅವನನ್ನು ಕೊಂದೆನು.) ನನ್ನ ಈ ಅಪರಾಧವನ್ನು ಕ್ಷಮಿಸುವುದು ನಿನಗೆ ಯೋಗ್ಯವಾಗಿದೆ.

**ನ ಹಿ ಯುದ್ಧೇನ ಪುತ್ರಸ್ತೇ ಧರ್ಮೇಣ ಸ ಮಹಾಬಲಃ ।**
**ಶಕ್ಯಃ ಕೇನಚಿದುದ್ಯನ್ತುಮತೋ ವಿಷಮಮಾಚರಮ್ ॥೩॥**

ಮಹಾಬಲಿಷ್ಠನಾದ ನಿನ್ನ ಮಗನನ್ನು ಧರ್ಮದ ಯುದ್ಧದಲ್ಲಿ ಎದುರಿಸಲು ಅಥವಾ ಸಂಹರಿಸಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ. ಆದುದರಿಂದಲೇ ನಾನು ಕುತ್ಸಿತವಾದ ಈ ಕಾರ್ಯವನ್ನು ಮಾಡಿದೆನು.

**ಅಧರ್ಮೇಣ ಜಿತಃ ಪೂರ್ವಂ ತೇನ ಚಾಪಿ ಯುಧಿಷ್ಠಿರಃ ।**
**ನಿಕೃತಾಶ್ಚ ಸದೈವ ಸ್ಮ ತತೋ ವಿಷಮಮಾಚರಮ್ ॥೪॥**

ಅಮ್ಮ! ನಿನಗೆ ತಿಳಿದಿರುವಂತೆಯೇ ನಿನ್ನ ಮಗನು ಯುಧಿಷ್ಠಿರನನ್ನು ಅಧರ್ಮಮಾರ್ಗದಿಂದಲೇ ಜಯಿಸಿದ್ದನು ಮತ್ತು ನಮ್ಮನ್ನು ಅವನು ಯಾವಾಗಲೂ ವಂಚಿಸುತ್ತಲೇ ಇದ್ದನು. ಈ ಕಾರಣದಿಂದಲೂ ನಾನು ಅವನನ್ನು ಸಂಹರಿಸಲು ಅಸ್ವಾಭಾವಿಕವಾಗಿಯೇ ವರ್ತಿಸಿದೆನು.

**ಸೈನ್ಯಸ್ಯೈಕೋಽವಶಿಷ್ಟೋಽಯಂ ಗದಾಯುದ್ಧೇನ ವೀರ್ಯವಾನ್ ।**
**ಮಾಂ ಹತ್ವಾ ನ ಹರೇದ್ರಾಜ್ಯಮಿತಿ ವೈ ತತ್ಕೃತಂ ಮಯಾ ॥೫॥**

ಹನ್ನೊಂದು ಅಕ್ಷೌಹಿಣೀ ಸೈನ್ಯದಲ್ಲಿ ದುರ್ಯೋಧನನೊಬ್ಬನೇ ಉಳಿದುಕೊಂಡಿದ್ದನು. ವೀರ್ಯವಂತನಾದ ಅವನು ಆ ಗದಾಯುದ್ಧದಲ್ಲಿ ನನ್ನನ್ನು ಸಂಹರಿಸಿ ನಾವು ಬಹಳ ಕಷ್ಟಪಟ್ಟು ಗೆದ್ದುಕೊಂಡಿದ್ದ ರಾಜ್ಯವನ್ನು ಅಪಹರಿಸುವಂತಾಗಕೂಡದೆಂದು ನಾನು ಹೀಗೆ ಮಾಡಿದೆನು."

ರಾಜಪುತ್ರೀಂ ಚ ಪಾಞ್ಚಾಲೀಮೇಕವಸ್ತ್ರಾಂ ರಜಸ್ವಲಾಮ್ ।
ಭವತ್ಯಾ ವಿದಿತಂ ಸರ್ವಮುಕ್ತವಾನ್ಯತ್ಸುತಸ್ತವ ॥೬॥

ರಾಜಪುತ್ರಿಯಾದ ದ್ರೌಪದಿಯು ರಜಸ್ವಲೆಯಾಗಿದ್ದ ಕಾಲದಲ್ಲಿ ಒಂದೇ ವಸ್ತ್ರವನ್ನುಟ್ಟಿದ್ದ ಅವಳನ್ನು ಉದ್ದೇಶಿಸಿ–ನಿನ್ನ ಮಗನು ಎಂತೆಂತಹ ಕಠಿನವಾದ ಮಾತುಗಳನ್ನಾಡಿದನೆಂಬುದು–ನಿನಗೂ ತಿಳಿದೇ ಇದೆ. ಅದರ ಪ್ರತೀಕಾರ ರೂಪವಾಗಿ ನಾನು ಈ ಕಾರ್ಯವನ್ನು ಮಾಡಿದೆನು.

ಸುಯೋಧನಮಸಂಗೃಹ್ಯ ನ ಶಕ್ಯಾ ಭೂಃ ಸಸಾಗರಾ ।
ಕೇವಲಾ ಭೋಕ್ತುಮಸ್ಮಾಭಿರತಶ್ಚೈತತ್ಕೃತಂ ಮಯಾ ॥೭॥

ದುರ್ಯೋಧನನನ್ನು ಅಡಗಿಸದೇ (ಸಂಹಾರಮಾಡದೇ) ಸಾಗರಗಳಿಂದ ಕೂಡಿರುವ ಈ ಅಖಂಡಭೂಮಂಡಲವನ್ನು ಉಪಭೋಗಿಸಲು ನಮಗೆ ಸಾಧ್ಯವಾಗುತ್ತಿರಲಿಲ್ಲ. ಆದುದರಿಂದ ನಾನು ಹೀಗೆ ಮಾಡಿದೆನು.

ತಚ್ಚಾಪ್ಯಪ್ರಿಯಮಸ್ಮಾಕಂ ಪುತ್ರಸ್ತೇ ಸಮುಪಾಚರತ್ ।
ದ್ರೌಪದ್ಯಾ ಯತ್ಸಭಾಮಧ್ಯೇ ಸವ್ಯಮೂರುಮದರ್ಶಯತ್ ॥೮॥

ದುರ್ಯೋಧನನು ತುಂಬಿದ ಸಭೆಯ ಮಧ್ಯದಲ್ಲಿ ದ್ರೌಪದಿಗೆ ತನ್ನ ಎಡತೊಡೆಯನ್ನು ತೋರಿಸಿದನು. ಹೀಗೆ ನಿನ್ನ ಮಗನು ನಮಗೆ ಪರಮಾಪ್ರಿಯವಾದ ಕಾರ್ಯವನ್ನೇ ಮಾಡಿದನು.

ತದೈವ ವಧ್ಯಃ ಸೋಽಸ್ಮಾಕಂ ದುರಾಚಾರಶ್ಚ ತೇ ಸುತಃ ।
ಧರ್ಮರಾಜಾಜ್ಞಯಾ ಚೈವ ಸ್ಥಿತಾಃ ಸ್ಮ ಸಮಯೇ ತದಾ ॥೯॥

ದುರಾಚಾರನಾದ ನಿನ್ನ ಮಗನನ್ನು ನಾವು ಆಗಲೇ ಆ ಕ್ಷಣದಲ್ಲಿಯೇ ಸಂಹರಿಸಬೇಕಾಗಿದ್ದಿತು. ಆದರೆ ಧರ್ಮರಾಜನ ಆಜ್ಞೆಯಿಂದ ನಿಯಮಕ್ಕೆ ಕಟ್ಟುಬಿದ್ದು ಸುಮ್ಮನೇ ಕುಳಿತಿದ್ದೆವು.

ಮಹಾರಾಣಿ! ನಿನ್ನ ಮಗನೇ ಮಹಾವೈರವನ್ನು ಉದ್ದೀಪನಗೊಳಿಸಿದನು. ನಾವು ಅರಣ್ಯದಲ್ಲಿದ್ದಾಗಲೂ ಅನೇಕವಿಧವಾದ ಕ್ಲೇಶಗಳನ್ನು ಅನುಭವಿಸುವಂತೆ ಮಾಡಿದನು. ಈ ಎಲ್ಲ ಕಾರಣಗಳಿಂದ ನಾನು ನಿನ್ನ

ಮಗನನ್ನು ಸಂಹರಿಸಿದೆನು. ದುರ್ಯೋಧನನನ್ನು ಯುದ್ಧದಲ್ಲಿ ಸಂಹರಿಸಿದ ನಾವು ವೈರದಿಂದಲೂ ಮತ್ತು ಕ್ರೋಧದಿಂದಲೂ ಪಾರಾದೆವು. ಯುಧಿಷ್ಠಿರನು ರಾಜ್ಯವನ್ನೂ ಪಡೆದುಕೊಂಡನು."

ಅದಕ್ಕುತ್ತರವಾಗಿ ಗಾಂಧಾರಿಯು ಹೇಳುತ್ತಾಳೆ :

"ವತ್ಸ! ನೀನು ನನ್ನ ಮಗನನ್ನು – 'ಮಹಾಬಲಿಷ್ಠ ; ಧರ್ಮ ಯುದ್ಧದಿಂದ ಸಂಹರಿಸಲ್ಪಡತಕ್ಕವನಾಗಿರಲಿಲ್ಲ'–ಎಂಬುದಾಗಿ ಪ್ರಶಂಸೆ ಮಾಡಿದೆಯಲ್ಲವೇ? ಈ ಕಾರಣದಿಂದಾಗಿ ಅವನ ವಧೆಯೇ ಆಗಿಲ್ಲವೆಂದು ನಾನು ಭಾವಿಸುತ್ತೇನೆ. (ಅವನು ಯಶೋಮಯವಾದ ಶರೀರವನ್ನು ಹೊಂದಿ ಅಮರನೇ ಆಗಿರುತ್ತಾನೆ.) ನೀನು ಹೇಳಿದಂತೆ ದುರ್ಯೋಧನನು ನಿಮ್ಮ ವಿಷಯದಲ್ಲಿ ಅನೇಕವಾದ ಅಪರಾಧಗಳನ್ನೇ ಎಸಗಿದ್ದಾನೆ.

**ಹತಾಶ್ವೇ ನಕುಲೇ ಯತ್ತು ವೃಷಸೇನೇನ ಭಾರತ ।**
**ಅಪಿಬಃ ಶೋಣಿತಂ ಸಂಖ್ಯೇ ದುಃಶಾಸನಶರೀರಜಮ್ ॥೧೩॥**

**ಸದ್ಭಿರ್ವಿಗರ್ಹಿತಂ ಘೋರಮನಾರ್ಯಜನಸೇವಿತಮ್ ।**
**ಕ್ರೂರಂ ಕರ್ಮಾಕೃಥಾಸ್ತಸ್ಮಾತ್ತದಯುಕ್ತಂ ವೃಕೋದರ ॥೧೪॥**

ವೃಕೋದರ! ವೃಷಸೇನನು ನಕುಲನ ಕುದುರೆಗಳನ್ನು ಸಂಹರಿಸಿ ಅವನನ್ನು ರಥಹೀನನನ್ನಾಗಿ ಮಾಡಿದ ಸಮಯದಲ್ಲಿ ನೀನು ಯುದ್ಧದಲ್ಲಿ ದುಃಶಾಸನನನ್ನು ಸಂಹರಿಸಿ ಅವನ ಶರೀರದಲ್ಲಿದ್ದ ರಕ್ತವನ್ನು ಕುಡಿದೆಯಲ್ಲವೇ? ಆ ಕಾರ್ಯವು ಸತ್ಪುರುಷರಿಂದ ನಿಂದಿಸಲ್ಪಡತಕ್ಕುದು ; ಮಹಾಘೋರವಾದುದು. ಅನಾರ್ಯರಾದವರಿಂದ ಮಾತ್ರವೇ ಆಚರಿಸಲ್ಪಡ ತಕ್ಕುದು. ಅತ್ಯಂತಕ್ರೂರವಾದುದು. ಅಂತಹ ಕ್ರೂರಕರ್ಮವನ್ನು ನೀನು ಮಾಡಿರುವೆ. ದುಃಶಾಸನನ ರಕ್ತಪಾನಮಾಡಿದುದು ಖಂಡಿತವಾಗಿಯೂ ನಿನಗೆ ಯೋಗ್ಯವಾದ ಕರ್ಮವಲ್ಲ."

**ಅನ್ಯಸ್ಯಾಪಿ ನ ಪಾತವ್ಯಂ ರುಧಿರಂ ಕಿಂ ಪುನಃ ಸ್ವಕಮ್ ।**
**ಯಥೈವಾತ್ಮಾ ತಥಾ ಭ್ರಾತಾ ವಿಶೇಷೋ ನಾಸ್ತಿ ಕಶ್ಚನ ॥೧೫॥**

"ಅಮ್ಮ! ಬೇರೆಯವರ ರಕ್ತವನ್ನೇ ಕುಡಿಯಬಾರದೆಂದಿರುವಾಗ

ನನ್ನ ರಕ್ತವನ್ನು ನಾನೇ ಕುಡಿಯಲು ಹೇಗೆತಾನೇ ಸಾಧ್ಯವಾಗುವುದು? ನನಗೂ ನನ್ನ ತಮ್ಮನಿಗೂ ಯಾವ ಭೇದವೂ ಇಲ್ಲ. (ನನ್ನ ರಕ್ತವೂ ನನ್ನ ತಮ್ಮನ ರಕ್ತವೂ ಒಂದೇ ಆಗಿರುತ್ತದೆ.) ಇಬ್ಬರ ರಕ್ತದಲ್ಲಿಯೂ ತಾರತಮ್ಯವಿರಲು ಕಾರಣವೇ ಇಲ್ಲ. (ಹೀಗಿರುವಾಗ ನನ್ನ ರಕ್ತವೇ ಆಗಿರುವ ನನ್ನ ತಮ್ಮನ ರಕ್ತವನ್ನು ನಾನು ಹೇಗೆತಾನೇ ಕುಡಿಯುವೆನು? )

**ರುಧಿರಂ ನ ವ್ಯತಿಕ್ರಾಮದ್ದನ್ತೋಷ್ಠಂ ಮೇಽಮ್ಬ ಮಾ ಶುಚಃ ।**
**ವೈವಸ್ವತಸ್ತು ತದ್ವೇದ ಹಸ್ತೌ ಮೇ ರುಧಿರೋಕ್ಷಿತೌ ॥೧೬॥**

ಅಮ್ಮ! ನಿನ್ನ ಮಗನ ರಕ್ತವನ್ನು ನಾನು ಕುಡಿದೆನೆಂದು ಭಾವಿಸಿ ನೀನು ದುಃಖಿಸಬೇಡ. ದುಃಶಾಸನನ ರಕ್ತವು ನನ್ನ ತುಟಿ ಮತ್ತು ಹಲ್ಲುಗಳನ್ನು ಅತಿಕ್ರಮಿಸಿ ಒಳಗೆ ಹೋಗಲೇ ಇಲ್ಲ. ಇದಕ್ಕೆ ಸೂರ್ಯಪುತ್ರನಾದ ಯಮನೇ ಸಾಕ್ಷಿ. ಅವನೊಬ್ಬನಿಗೆ ಮಾತ್ರವೇ ಈ ವಿಷಯವು ತಿಳಿದಿದೆ. ಆದರೆ ನನ್ನೆರಡು ಕೈಗಳೂ ದುಃಶಾಸನನ ರಕ್ತದಿಂದ ತೋಯ್ದುಹೋಗಿದ್ದುವು.

ವೃಷಸೇನನಿಂದ ನಕುಲನು ಕುದುರೆಗಳನ್ನು ಕಳೆದುಕೊಂಡುದನ್ನು ನೋಡಿ ದುಃಶಾಸನನೇ ಆದಿಯಾಗಿ ದುರ್ಯೋಧನನ ಎಲ್ಲ ಅನುಜರೂ ಪರಮಹೃಷ್ಟರಾದರು. ಅನಂತರ ನಾನು ಹೀಗೆ ಮಾಡಿ (ದುಃಶಾಸನನ ರಕ್ತವನ್ನು ಕುಡಿದಂತೆ ಮಾಡಿ) ಅವರ ಮನಸ್ಸಿನಲ್ಲಿ ಭಯವನ್ನು ಹುಟ್ಟಿಸಿದೆನು. ದ್ಯೂತದ ಸಮಯದಲ್ಲಿ ದ್ರೌಪದಿಯ ತಲೆಗೂದಲುಗಳನ್ನು ಹಿಡಿದು ತುಂಬಿದ ಸಭೆಗೆ ಸೆಳೆದು ತಂದಾಗ, ಕ್ರೋಧಾಭಿಭೂತನಾಗಿದ್ದ ನಾನು ಯಾವ ಪ್ರತಿಜ್ಞೆಯನ್ನು ಮಾಡಿದ್ದೆನೋ–ಆ ಪ್ರತಿಜ್ಞೆಯು ಈಗಲೂ ನನ್ನ ಹೃದಯದಲ್ಲಿ ಅಚ್ಚಳಿಯದೇ ನಿಂತಿದೆ. ಮಹಾರಾಣಿ! ನಾನೇನಾದರೂ ಆ ನನ್ನ ಪ್ರತಿಜ್ಞೆಯಂತೆ ನಡೆದುಕೊಳ್ಳದಿದ್ದರೆ ಶಾಶ್ವತವಾಗಿ ಕ್ಷತ್ರಧರ್ಮದಿಂದ ಚ್ಯುತನಾಗಿಯೇ ಇರುತ್ತಿದ್ದೆನು. (ಭ್ರಷ್ಟಕ್ಷತ್ರಿಯನಾಗುತ್ತಿದ್ದೆನು.) ಈ ಕಾರಣದಿಂದ ನಾನು ಹಾಗೆ ಮಾಡಬೇಕಾಯಿತು. ಗಾಂಧಾರೀದೇವಿ! ನನ್ನನ್ನು ದೋಷದಿಂದ ಯುಕ್ತನಾದವನೆಂದು ಸಂದೇಹಿಸುವುದು ಯೋಗ್ಯವಾಗಿ ಕಾಣುವುದಿಲ್ಲ. ನಮ್ಮನ್ನು ಬಹಳವಾಗಿ ವಂಚಿಸಿದ

ನಿನ್ನ ಮಕ್ಕಳನ್ನು ನೀನು ಮೊದಲೇ ಹತೋಟಿಯಲ್ಲಿಟ್ಟುಕೊಳ್ಳದೇ ಎಳ್ಳಷ್ಟಾದರೂ ಅಪರಾಧವನ್ನೆಸಗದಿದ್ದ ನಮ್ಮ ವಿಷಯದಲ್ಲಿ ಈಗ ದೋಷವೆಣಿಸುವುದು ಅಥವಾ ದೋಷಿಗಳೆಂದು ಸಂದೇಹಿಸುವುದು ನಿನಗೆ ಉಚಿತವಲ್ಲ."

**ವೃದ್ಧಸ್ಯಾಸ್ಯ ಶತಂ ಪುತ್ರಾನ್ನಿಘ್ನಂಸ್ತ್ವಮಪರಾಜಿತಃ ।**
**ಕಸ್ಮಾನ್ನಾಶೇಷಯಃ ಕಂಚಿದ್ಯೇನಾಲ್ಪಮಪರಾಧಿತಮ್ ॥೨೧॥**

"ಭೀಮಸೇನ! ಅಪರಾಜಿತನಾದ ನೀನು ಈ ವೃದ್ಧರಾಜನ ನೂರು ಮಕ್ಕಳನ್ನೂ ಸಂಹರಿಸುವಾಗ ನಿಮ್ಮ ವಿಷಯದಲ್ಲಿ ಅತ್ಯಲ್ಪಾಪರಾಧವನ್ನು ಮಾಡಿರುವ ಒಬ್ಬನೇ ಒಬ್ಬ ಮಗನನ್ನಾಗಲೀ ಏಕೆ ಉಳಿಸಲಿಲ್ಲ?

**ಸಂತಾನಮಾವಯೋಸ್ತಾತ ವೃದ್ಧಯೋರ್ಹೃತರಾಜ್ಯಯೋಃ ।**
**ಕಥಮನ್ಧದ್ವಯಸ್ಯಾಸ್ಯ ಯಷ್ಟಿರೇಕಾ ನ ವರ್ಜಿತಾ ॥೨೨॥**

ನಾವಿಬ್ಬರೂ ವೃದ್ಧರಾಗಿದ್ದೇವೆ. ರಾಜ್ಯವನ್ನೂ ಕಳೆದುಕೊಂಡಿರುತ್ತೇವೆ. ಇಂತಹ ಸ್ಥಿತಿಯಲ್ಲಿ ನಮ್ಮ ಒಂದು ಸಂತಾನವನ್ನಾದರೂ ನೀನು ಏಕೆ ಉಳಿಸಲಿಲ್ಲ? ಇಬ್ಬರು ಅಂಧರಿಗೂ ಊರುಗೋಲಿನಂತಿರಲು ಒಬ್ಬನನ್ನಾದರೂ ನೀನು ಜೀವಸಹಿತವಾಗಿ ಏಕೆ ಬಿಡಲಿಲ್ಲ?

**ಶೇಷೇ ಹ್ಯವಸ್ಥಿತೇ ತಾತ ಪುತ್ರಾಣಾಮನ್ತಕೇ ತ್ವಯಿ ।**
**ನ ಮೇ ದುಃಖಂ ಭವೇದೇತದ್ಯದಿ ತ್ವಂ ಧರ್ಮಮಾಚರೇಃ ॥೨೩॥**

ನನ್ನ ಮಕ್ಕಳೆಲ್ಲರಿಗೂ ಅಂತಕಪ್ರಾಯನಾದ ನೀನು ನನ್ನ ಮಕ್ಕಳೊಡನೆ ಧರ್ಮಮಾರ್ಗದಲ್ಲಿಯೇ ಯುದ್ಧಮಾಡಿದ್ದರೆ ಅಥವಾ ನೂರು ಮಕ್ಕಳಲ್ಲಿ ಒಬ್ಬನನ್ನಾದರೂ ಉಳಿಸಿದ್ದರೆ–ನನಗೆ ಇಂತಹ ದುಃಖವುಂಟಾಗುತ್ತಿರಲಿಲ್ಲ."

ಜನಮೇಜಯ! ಭೀಮಸೇನನೊಡನೆ ಹೀಗೆ ಹೇಳಿ, ಮಕ್ಕಳು ಮತ್ತು ಮೊಮ್ಮಕ್ಕಳ ವಿನಾಶದ ದುಃಖದಿಂದ ಬಹಳವಾಗಿ ಪೀಡಿತಳಾಗಿದ್ದ ಗಾಂಧಾರೀದೇವಿಯು ಪರಮಕ್ರುದ್ಧಳಾಗಿ–'ಕ್ವ ಸ ರಾಜಾ'–'ರಾಜನಾದ ಆ ಯುಧಿಷ್ಠಿರರಾಜನೆಲ್ಲಿ?'–ಎಂದು ಪ್ರಶ್ನಿಸಿದಳು. ರಾಜೇಂದ್ರನಾದ ಯುಧಿಷ್ಠಿರನು ಗಡ-ಗಡನೆ ನಡುಗುತ್ತಾ ಕೈಮುಗಿದುಕೊಂಡು ಗಾಂಧಾರೀ

ದೇವಿಯ ಬಳಿಗೆ ಹೋದನು. ಬಳಿಕ ಯುಧಿಷ್ಠಿರನು ಗಾಂಧಾರಿಯೊಡನೆ ಸುಮಧುರವಾದ ಈ ಮಾತುಗಳನ್ನು ಹೇಳಿದನು :



**ಪುತ್ರಹನ್ತಾ ನೃಶಂಸೋಽಹಂ ತವ ದೇವಿ ಯುಧಿಷ್ಠಿರಃ ।**
**ಶಾಪಾರ್ಹಃ ಪೃಥಿವೀನಾಶೇ ಹೇತುಭೂತಃ ಶಪಸ್ವ ಮಾಮ್ ॥೨೬॥**

“ದೇವಿ! ನಿನ್ನ ಮಕ್ಕಳನ್ನು ಸಂಹರಿಸಿದ, ಮಹಾಕ್ರೂರಿಯಾದ, ಪೃಥಿವಿಯ (ಎಲ್ಲ ರಾಜರ) ನಾಶಕ್ಕೆ ಕಾರಣನಾದ, ನೀನು ಕೊಡಲಿರುವ ಶಾಪವನ್ನು ಸ್ವೀಕರಿಸಲು ಯೋಗ್ಯನಾದ ನಾನೇ ಆ ಯುಧಿಷ್ಠಿರನಾಗಿದ್ದೇನೆ. ನನ್ನನ್ನು ನೀನು ಶಪಿಸಬಹುದು.

**ನ ಹಿ ಮೇ ಜೀವಿತೇನಾರ್ಥೋ ನ ರಾಜ್ಯೇನ ಧನೇನ ವಾ ।**
**ತಾದೃಶಾನ್ಸುಹೃದೋ ಹತ್ವಾ ಮೂಢಸ್ಯಾಸ್ಯ ಸುಹೃದ್ದ್ರುಹಃ ॥೨೭॥**

ನಾನು ನನ್ನ ಸುಹೃದರಿಗೆ ದ್ರೋಹವನ್ನೆಸಗಿದ್ದೇನೆ. ಅವಿವೇಕಿಯಾಗಿದ್ದೇನೆ. ಅಂತಂತಹ ಶ್ರೇಷ್ಠರಾದ ಸುಹೃದರನ್ನು ಸಂಹರಿಸಿದ ನಂತರ ನನಗೆ ಈ ಜೀವಿತದಿಂದಾಗಲೀ, ರಾಜ್ಯದಿಂದಾಗಲೀ, ಐಶ್ವರ್ಯದಿಂದಾಗಲೀ ಯಾವ ಪ್ರಯೋಜನವೂ ಇಲ್ಲ."

ಜನಮೇಜಯ! ಹೀಗೆ ಮಾತನಾಡಿದ, ಭಯಗ್ರಸ್ತನಾಗಿದ್ದ, ತನ್ನ ಹತ್ತಿರದಲ್ಲಿಯೇ ನಿಂತಿದ್ದ ಯುಧಿಷ್ಠಿರನನ್ನು ಕುರಿತು ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದ ಗಾಂಧಾರೀದೇವಿಯು ಯಾವ ಮಾತನ್ನೂ ಆಡಲಿಲ್ಲ.

**ತಸ್ಯಾವನತದೇಹಸ್ಯ ಪಾದಯೋರ್ನಿಪತಿಷ್ಯತಃ ।**
**ಯುಧಿಷ್ಠಿರಸ್ಯ ನೃಪತೇರ್ಧರ್ಮಜ್ಞಾ ದೀರ್ಘದರ್ಶಿನೀ ॥೨೯॥**

**ಅಙ್ಗುಲ್ಯಗ್ರಾಣಿ ದದೃಶೇ ದೇವೀ ಪಟ್ಟಾನ್ತರೇಣ ಸಾ ।**
**ತತಃ ಸ ಕುನಖೀಭೂತೋ ದರ್ಶನೀಯನಖೋ ನೃಪಃ ॥೩೦॥**

ಆ ಸಮಯದಲ್ಲಿ ಯುಧಿಷ್ಠಿರನು ತನ್ನ ಶರೀರವನ್ನು ಬಗ್ಗಿಸಿ ಗಾಂಧಾರೀದೇವಿಯ ಪಾದಗಳಲ್ಲಿ ಬೀಳುವುದರಲ್ಲಿದ್ದಾಗ–ಧರ್ಮಜ್ಞಳಾದ, ದೀರ್ಘದರ್ಶಿನಿಯಾದ ಗಾಂಧಾರೀದೇವಿಯು ಕಣ್ಣುಗಳಿಗೆ ಕಟ್ಟಿಕೊಂಡಿದ್ದ ಪಟ್ಟಿಯ ಸಂದಿಯಿಂದ ನಮಸ್ಕಾರಮಾಡಲು ಮುಂದೆ ಚಾಚಿದ್ದ ಯುಧಿಷ್ಠಿರನ ಬೆರಳುಗಳ ಅಗ್ರಭಾಗಗಳನ್ನು ನೋಡಿದಳು. ಮರುಕ್ಷಣದಲ್ಲಿಯೇ ಬಹಳ ಸುಂದರವಾದ ಉಗುರುಗಳನ್ನು ಹೊಂದಿದ್ದ ಯುಧಿಷ್ಠಿರನು ವಿಕಾರವಾದ ಉಗುರುಗಳುಳ್ಳವನಾದನು. (ಅವನ ಉಗುರುಗಳು ನಖರೋಗಗ್ರಸ್ತವಾದಂತೆ ಕಪ್ಪಾದುವು.)

ಕುನಖನಾದ ಯುಧಿಷ್ಠಿರನನ್ನು ನೋಡಿದೊಡನೆಯೇ ಅರ್ಜುನನು ಹೆದರಿ ಶ್ರೀಕೃಷ್ಣನ ಹಿಂದೆ ಅಡಗಿಕೊಂಡನು. ಅರ್ಜುನನು ಮಾತ್ರವಲ್ಲದೇ ಪಾಂಡವರೆಲ್ಲರೂ ಗಾಂಧಾರಿಯ ದೃಷ್ಟಿಪಾತವೆಲ್ಲಾಗುವುದೋ ಎಂದು ಹೆದರಿ ಅಡಗಿಕೊಳ್ಳಲು ಅಲ್ಲಿಂದಿಲ್ಲಿಗೂ-ಇಲ್ಲಿಂದಲ್ಲಿಗೂ ಓಡಾಡತೊಡಗಿದರು. ಹೀಗೆ

ಓಡಾಡುತ್ತಿದ್ದ ಪಾಂಡವರನ್ನು ನೋಡಿ ಗಾಂಧಾರಿಯು ಕನಿಕರಗೊಂಡು ಕೋಪವನ್ನು ಪರಿತ್ಯಜಿಸಿ, ಅವರೆಲ್ಲರನ್ನೂ ಹತ್ತಿರಕ್ಕೆ ಕರೆದು ತಾಯಿಯಂತೆಯೇ ಸಂತಯಿಸಿದಳು. ಬಳಿಕ ವಿಶಾಲವಕ್ಷರಾದ ಪಾಂಡವರು ಗಾಂಧಾರಿಯ ಅನುಜ್ಞೆಯನ್ನು ಪಡೆದು ವೀರಮಾತೆಯಾದ, ತಾಯಿಯಾದ ಕುಂತೀದೇವಿಯ ಬಳಿಗೆ ಒಟ್ಟಾಗಿ ತೆರಳಿದರು. ತನ್ನ ಮಕ್ಕಳು ಅನುಭವಿಸಿದ ಕಷ್ಟಗಳೆಲ್ಲವನ್ನೂ ಸ್ಮರಿಸಿಕೊಂಡು ಶೋಕಮಗ್ನಳಾಗಿದ್ದ ಕುಂತೀದೇವಿಯು ಬಹಳ ದಿವಸಗಳನಂತರ ಮಕ್ಕಳನ್ನು ನೋಡಿ ಸೆರಗನ್ನು ಮುಖಕ್ಕೆ ಮುಚ್ಚಿಕೊಂಡು ಬಹಳವಾಗಿ ಕಣ್ಣೀರು ಸುರಿಸಿದಳು. ತಾಯಿಯೊಡನೆ ಮಕ್ಕಳೂ ಕಣ್ಣೀರು ಸುರಿಸಿದರು. ಬಳಿಕ ಕುಂತಿಯು ತನ್ನ ಮಕ್ಕಳು ಶಸ್ತ್ರಾಸ್ತ್ರಗಳ ಪ್ರಹಾರಗಳಿಂದ ಬಹಳವಾಗಿ ಕ್ಷತ-ವಿಕ್ಷತರಾಗಿದ್ದುದನ್ನು ನೋಡಿದಳು. ಕುಂತೀದೇವಿಯು ಪ್ರತ್ಯೇಕ-ಪ್ರತ್ಯೇಕವಾಗಿ ಮಕ್ಕಳ ಮೈದಡವಿದಳು. ಅನಂತರ ಮಕ್ಕಳೆಲ್ಲರನ್ನೂ ಕಳೆದುಕೊಂಡಿದ್ದ ದ್ರೌಪದಿಯ ಸಲುವಾಗಿ ಕುಂತೀದೇವಿಯು ಬಹಳವಾಗಿ ಶೋಕಿಸಿದಳು. ಬಹಳವಾಗಿ ರೋದನಮಾಡುತ್ತಾ ನೆಲದ ಮೇಲೆ ಬಿದ್ದಿದ್ದ ದ್ರೌಪದಿಯನ್ನು ಕುಂತಿಯು ನೋಡಿದಳು.

ಅತ್ತೆಯನ್ನು ಕಂಡೊಡನೆಯೇ ಪರಮದುಃಖಿತಳಾದ ದ್ರೌಪದಿಯು ಹೇಳಿದಳು :

**ಆರ್ಯೇ ಪೌತ್ರಾಃ ಕ್ವ ತೇ ಸರ್ವೇ ಸೌಭದ್ರಸಹಿತಾ ಗತಾಃ ।**
**ನ ತ್ವಾಂ ತೇಽದ್ಯಾಭಿಗಚ್ಛನ್ತಿ ಚಿರಂ ದೃಷ್ಟ್ವಾ ತಪಸ್ವಿನೀಮ್ ।**
**ಕಿಂ ನು ರಾಜ್ಯೇನ ವೈ ಕಾರ್ಯಂ ವಿಹೀನಾಯಾಃ ಸುತೈರ್ಮಮ ॥**

"ಆರ್ಯೇ! ಅಭಿಮನ್ಯುಸಹಿತರಾದ ನಿನ್ನ ಮೊಮ್ಮಕ್ಕಳೆಲ್ಲರೂ ಎಲ್ಲಿಗೆ ಹೋದರು? ತಪಸ್ವಿನಿಯಾದ ನಿನ್ನನ್ನು ಬಹಳ ಹಿಂದೆ ನೋಡಿದ್ದ ಅವರು ಈಗ ನಿನ್ನ ಬಳಿಗೆ ಏಕೆ ಬರುತ್ತಿಲ್ಲ? ಅಮ್ಮ! ಮಕ್ಕಳೆಲ್ಲರನ್ನೂ ಕಳೆದುಕೊಂಡಿರುವ ನನಗೆ ಈ ರಾಜ್ಯದಿಂದೇನಾಗಬೇಕಾಗಿದೆ?"

ಜನಮೇಜಯ! ವಿಶಾಲನೇತ್ರಳಾದ ಕುಂತೀದೇವಿಯು ಶೋಕಪೀಡಿತ ಳಾಗಿದ್ದ, ರೋದನಮಾಡುತ್ತಿದ್ದ ದ್ರೌಪದಿಯನ್ನು ಮೇಲಕ್ಕೆತ್ತಿ ಕುಳ್ಳಿರಿಸಿ

ಸಮಾಧಾನಗೊಳಿಸಿದಳು. ಬಳಿಕ ಪರಮದುಃಖಿತೆಯಾಗಿದ್ದ ಕುಂತೀ ದೇವಿಯು ದ್ರೌಪದಿಯನ್ನು ಜೊತೆಯಲ್ಲಿ ಕರೆದುಕೊಂಡು ದುಃಖಿತಳಾಗಿದ್ದ ಗಾಂಧಾರೀದೇವಿಯ ಬಳಿಗೆ ಹೋದಳು. ಕುಂತಿಯನ್ನೇ ಅನುಸರಿಸಿ ಪಾಂಡವರೂ ಹೋದರು. ಗಾಂಧಾರಿಯು ಯಶಸ್ವಿನಿಯಾದ ಕುಂತಿಯೊಡನಿದ್ದ ದ್ರೌಪದಿಯನ್ನು ಕುರಿತು ಹೇಳಿದಳು :



ಮೈವಂ ಪುತ್ರೀತಿ ಶೋಕಾರ್ತಾ ಪಶ್ಯ ಮಾಮಪಿ ದುಃಖಿತಾಮ್ ।
ಮನ್ಯೇ ಲೋಕವಿನಾಶೋಽಯಂ ಕಾಲಪರ್ಯಾಯನೋದಿತಃ ।
ಅವಶ್ಯಭಾವೀ ಸಮ್ಪ್ರಾಪ್ತಃ ಸ್ವಭಾವಾಲ್ಲೋಮಹರ್ಷಣಃ ॥೪೧॥

**ಇದಂ ತತ್ಸಮನುಪ್ರಾಪ್ತಂ ವಿದುರಸ್ಯ ವಚೋ ಮಹತ್ ।**
**ಅಸಿದ್ಧಾನುನಯೇ ಕೃಷ್ಣೇ ಯದುವಾಚ ಮಹಾಮತಿಃ ॥೪೨॥**

"ಮಗಳೇ! ಹೀಗೆ ಶೋಕದಿಂದ ವ್ಯಾಕುಲಳಾಗಬೇಡ. ಪರಮ ದುಃಖಿತಳಾಗಿರುವ ನನ್ನನ್ನಾದರೂ ನೋಡು. ಕಾಲವಿಪರ್ಯಾಸದಿಂದ ಪ್ರೇರಿತವಾಗಿ ಈ ಲೋಕದ ವಿನಾಶವು ನಡೆದಿದೆಯೆಂದು ನಾನು ಭಾವಿಸುತ್ತೇನೆ. ಏನು ಆಗಬೇಕಾಗಿದ್ದಿತೋ ಅದೇ ಆಗಿದೆ. ಸ್ವಾಭಾವಿಕವಾಗಿಯೇ ಇದು ರೋಮಾಂಚಕಾರಿಯೂ ಆಗಿದೆ. ಸಂಧಿಗಾಗಿ ಬಂದ ಶ್ರೀಕೃಷ್ಣನ ಅನುನಯ-ವಿನಯಗಳು ಸಫಲವಾಗಲಿಲ್ಲ. ಆ ಸಮಯದಲ್ಲಿ ಮಹಾಬುದ್ಧಿವಂತನಾದ ವಿದುರನು ಯಾವ ಮಾತನ್ನು ಹೇಳಿದ್ದನೋ ಆ ಮಾತಿನಂತೆಯೇ ಇದೆಲ್ಲವೂ ನಡೆದಿದೆ.

**ತಸ್ಮಿನ್ನಪರಿಹಾರ್ಯೇಽರ್ಥೇ ವ್ಯತೀತೇ ಚ ವಿಶೇಷತಃ ।**
**ಮಾ ಶುಚೋ ನ ಹಿ ಶೋಚ್ಯಾಸ್ತೇ ಸಂಗ್ರಾಮೇ ನಿಧನಂ ಗತಾಃ ॥೪೩॥**

**ಯಥೈವಾಹಂ ತಥೈವ ತ್ವಂ ಕೋ ನಾವಾಶ್ವಾಸಯಿಷ್ಯತಿ ।**
**ಮಮೈವ ಹ್ಯಪರಾಧೇನ ಕುಲಮಗ್ರ್ಯಂ ವಿನಾಶಿತಮ್ ॥೪೪॥**

ತಪ್ಪಿಸುವುದಕ್ಕೆ ಸಾಧ್ಯವಾಗದೇ ಇರುವ ವಿಷಯದಲ್ಲಿ – ಅದರಲ್ಲಿಯೂ ವಿಶೇಷವಾಗಿ ಎಲ್ಲವೂ ಸಂಪೂರ್ಣವಾಗಿ ಮುಗಿದುಹೋಗಿರುವಾಗ–ದುಃಖಿಸಿ ಪ್ರಯೋಜನವೇನೂ ಇಲ್ಲ. ಆದುದರಿಂದ, ಮಗಳೇ! ನೀನು ದುಃಖಿಸಬೇಡ. ಮೇಲಾಗಿ ಯುದ್ಧದಲ್ಲಿ ನಿನ್ನ ಮಕ್ಕಳು ನಿಧನ ಹೊಂದಿರುವುದರಿಂದ ಅವರಿಗಾಗಿ ದುಃಖಪಡಬೇಕಾಗಿಯೂ ಇಲ್ಲ. (ಅವರೆಲ್ಲರೂ ಪುಣ್ಯಲೋಕಗಳಿಗೇ ಹೋಗಿದ್ದಾರೆ.) ನಾನು ಹೇಗೆ ಎಲ್ಲ ಮಕ್ಕಳನ್ನೂ ಕಳೆದುಕೊಂಡಿರುವೆನೋ ಹಾಗೆಯೇ ನೀನೂ ನಿನ್ನ ಎಲ್ಲ ಮಕ್ಕಳನ್ನೂ ಕಳೆದುಕೊಂಡಿರುವೆ. ನಮ್ಮಿಬ್ಬರನ್ನೂ ಸಮಾಧಾನಗೊಳಿಸಲು ಯಾರಿಂದ ತಾನೇ ಸಾಧ್ಯವಾಗುತ್ತದೆ? (ಯಾರಿಂದಲೂ ಸಾಧ್ಯವಾಗುವುದಿಲ್ಲ. ನಮಗೆ ನಾವೇ ಸಮಾಧಾನ ತಂದುಕೊಳ್ಳಬೇಕು.) ನನ್ನ ಅಪರಾಧದ ಕಾರಣದಿಂದಲೇ ಅಗ್ರಮಾನ್ಯವಾಗಿದ್ದ ಈ ವಂಶವೇ ನಾಶವಾಗಿಹೋಯಿತು."

ಹ೫ನೆಯ ಅಧ್ಯಾಯವು ಮುಗಿಯಿತು.

# ವ್ಯಾಸರು ಅನುಗ್ರಹಿಸಿದ ದಿವ್ಯದೃಷ್ಟಿಯಿಂದ ರಣರಂಗದಲ್ಲಿ ಸತ್ತುಬಿದ್ದಿದ್ದ ಯೋಧರನ್ನೂ-ರೋದನಮಾಡುತ್ತಿದ್ದ ತನ್ನ ಸೊಸೆಯರನ್ನೂ ನೋಡಿ ಗಾಂಧಾರೀದೇವಿಯು ಶ್ರೀಕೃಷ್ಣನ ಮುಂದೆ ವಿಲಪಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಗಾಂಧಾರೀದೇವಿಯು ದ್ರೌಪದಿಯೊಡನೆ ಹೀಗೆ ಹೇಳಿ ಅಲ್ಲಿ ನಿಂತಿದ್ದಂತೆಯೇ ದಿವ್ಯದೃಷ್ಟಿಯಿಂದ ಕುರುಗಳ ವಿನಾಶಸ್ಥಳವನ್ನು (ಯುದ್ಧಭೂಮಿಯನ್ನು) ನೋಡಿದಳು. ಗಾಂಧಾರಿಯು ಮಹಾಪತಿವ್ರತೆ. ಮಹಾಭಾಗ್ಯಶಾಲಿನಿ. ಪತಿಗೆ ಸಮಾನವಾಗಿ ವ್ರತಾನುಷ್ಠಾನಮಾಡತಕ್ಕವಳು. ಉಗ್ರವಾದ ತಪಸ್ಸಿನಿಂದ ಯುಕ್ತಳಾದವಳು. ಸದಾಕಾಲದಲ್ಲಿಯೂ ಸತ್ಯವನ್ನೇ ಹೇಳತಕ್ಕವಳು. ಪುಣ್ಯಕರ್ಮರಾದ, ಮಹರ್ಷಿಗಳಾದ ಕೃಷ್ಣದ್ವೈಪಾಯನರ ವರದಾನದಿಂದ ದಿವ್ಯವಾದ ಜ್ಞಾನ-ಬಲಗಳಿಂದ ಯುಕ್ತಳಾಗಿದ್ದ ಗಾಂಧಾರಿಯು, ದಿವ್ಯದೃಷ್ಟಿಯಿಂದ ರಣಭೂಮಿಯಲ್ಲಿ ನಾನಾವಿಧವಾದ ದಾರುಣದೃಶ್ಯಗಳನ್ನು ನೋಡಿ ವಿಲಪಿಸತೊಡಗಿದಳು. ಬುದ್ಧಿಮತಿಯಾದ ಗಾಂಧಾರಿಯು ಯುದ್ಧಭೂಮಿಯಿಂದ ದೂರದಲ್ಲಿಯೇ ಇದ್ದರೂ ದಿವ್ಯದೃಷ್ಟಿಯ ಪ್ರಭಾವದಿಂದಾಗಿ ಅದ್ಭುತವಾದ ಮತ್ತು ರೋಮಾಂಚಕರವಾದ ನರಶ್ರೇಷ್ಠರ ರಣಾಂಗಣವನ್ನು ಅತ್ಯಂತಸಮೀಪದಲ್ಲಿರುವಂತೆಯೇ ಸ್ಪಷ್ಟವಾಗಿ ನೋಡುತ್ತಿದ್ದಳು. ರಣಭೂಮಿಯು ಮೂಳೆಗಳಿಂದಲೂ, ಯೋಧರ ತಲೆಗೂದಲುಗಳಿಂದಲೂ, ವಸೆಯಿಂದಲೂ ವ್ಯಾಪ್ತವಾಗಿದ್ದಿತು. ಯೋಧರ ರಕ್ತದ ಪ್ರವಾಹದಿಂದ ರಣಭೂಮಿಯೇ ಮುಚ್ಚಿಹೋಗಿದ್ದಿತು. ಇಂತಹ ಭಯಂಕರವಾದ ರಣರಂಗವನ್ನು ಗಾಂಧಾರಿಯು ನೋಡಿದಳು. ಗಜಾಶ್ವ-ರಥಯೋಧರ ರಕ್ತದಿಂದ ಮಲಿನವಾದ, ಶಿರಸ್ಸುಗಳಿಲ್ಲದ ಶರೀರಗಳಿಂದಲೂ ಮತ್ತು ರಕ್ತದಿಂದ ಮಲಿನವಾದ ದೇಹಗಳಿಂದ ರಹಿತವಾದ ಶಿರಸ್ಸುಗಳಿಂದಲೂ ರಣಾಂಗಣವು ಆವೃತವಾಗಿದ್ದಿತು. ಗಜಾಶ್ವ-ನರ-ನಾರಿ

ಯರ ಆರ್ತಸ್ವರಗಳಿಂದ ಆ ರಣಾಂಗಣವು ಪ್ರತಿಧ್ವನಿಸುತ್ತಿತ್ತು. ಗುಳ್ಳೇನರಿ, ಬಕಪಕ್ಷಿ, ಕಾಗೆ, ಗೂಬೆ, ರಣಹದ್ದು–ಇವೇ ಮೊದಲಾದ ಮಾಂಸಾಶಿಗಳಾದ ಪಶು-ಪಕ್ಷಿಗಳಿಂದ ಆ ರಣರಂಗವು ಸೇವಿಸಲ್ಪಡುತ್ತಿದ್ದಿತು. ಮಾಂಸಭಕ್ಷಕರಾದ ರಾಕ್ಷಸರಿಗೆ ರಣರಂಗವು ಆನಂದದಾಯಕವಾಗಿದ್ದಿತು. ಕಡಲಹದ್ದುಗಳಿಂದ ಅದು ತುಂಬಿಹೋಗಿದ್ದಿತು. ಅಶುಭರೂಪದ ಗುಳ್ಳೇನರಿಗಳು ಕೂಗಿಕೊಳ್ಳುತ್ತಿದ್ದುವು. ರಣಹದ್ದುಗಳಿಂದ ರಣರಂಗವು ಸೇವಿಸಲ್ಪಡುತ್ತಿದ್ದಿತು. ಅಂತಹ ರಣಾಂಗಣವನ್ನು ಗಾಂಧಾರಿಯು ನೋಡಿದಳು. ಆ ಸಮಯದಲ್ಲಿ ವ್ಯಾಸರಿಂದ ಆಜ್ಞಪ್ತನಾದ ಮಹೀಪತಿಯಾದ ಧೃತರಾಷ್ಟ್ರನೂ–ಯುಧಿಷ್ಠಿರಪುರಃಸರರಾದ ಪಾಂಡವರೂ ರಣರಂಗದ ಕಡೆಗೆ ಹೊರಟರು. ಬಂಧುಗಳನ್ನು ಕಳೆದುಕೊಂಡಿದ್ದ ಧೃತರಾಷ್ಟ್ರನನ್ನೂ ಮತ್ತು ಶ್ರೀಕೃಷ್ಣನನ್ನೂ ಮುಂದೆಮಾಡಿಕೊಂಡು ಕೌರವಕುಲಸ್ತ್ರೀಯರು ರಣಾಂಗಣದ ಕಡೆಗೆ ಹೊರಟರು. ಕುರುಕ್ಷೇತ್ರವನ್ನು ಸೇರಿ ಪತಿಗಳನ್ನು ಕಳೆದುಕೊಂಡಿದ್ದ ಆ ಸ್ತ್ರೀಯರು– ಮಕ್ಕಳೂ, ಸಹೋದರರೂ, ಪಿತೃಗಳೂ ಮತ್ತು ಪತಿಗಳೂ ಆ ರಣರಂಗದಲ್ಲಿ ಸತ್ತುಬಿದ್ದಿರುವುದನ್ನು ನೋಡಿದರು. ತಮ್ಮ ಪ್ರಿಯಬಂಧುಗಳ ಶರೀರಗಳನ್ನು ಮಾಂಸಾಶಿಗಳಾದ ಗುಳ್ಳೇನರಿ, ಕಾಗೆ, ಭೂತ-ಪಿಶಾಚ-ರಾಕ್ಷಸರೂ ಮತ್ತು ನಾನಾರೂಪದ ನಿಶಾಚರರೂ ಕಿತ್ತುತಿನ್ನುತ್ತಿರುವುದನ್ನು ಆ ವರಸ್ತ್ರೀಯರು ನೋಡಿದರು. ರುದ್ರನ ಕ್ರೀಡಾಸ್ಥಳವಾದ ಶ್ಮಶಾನಕ್ಕೆ ಸಮಾನವಾಗಿದ್ದ ಆ ರಣಾಂಗಣವನ್ನು ನೋಡಿದೊಡನೆಯೇ ಬಹುಮೂಲ್ಯ ವಾಹನಗಳಲ್ಲಿದ್ದ ಕೌರವರಾಜಕುಮಾರಿಯರು ಕಿರುಚಿಕೊಳ್ಳುತ್ತಾ ಕೆಳಕ್ಕೆ ಬಿದ್ದುಬಿಟ್ಟರು.

ದುಃಖಪೀಡಿತರಾಗಿದ್ದ, ಹಿಂದೆಂದೂ ಅಂತಹ ದೃಶ್ಯವನ್ನೇ ಕಾಣದಿದ್ದ ಭರತಕುಲಸ್ತ್ರೀಯರು ಮಹಾಭಯಂಕರವಾಗಿ ಕಾಣುತ್ತಿದ್ದ ರಣರಂಗವನ್ನು ನೋಡಿ ಅಲ್ಲಿದ್ದ ಶರೀರಗಳ ಮೇಲೆ ತತ್ತರಿಸಿ ಬಿದ್ದುಬಿಟ್ಟರು. ಕೆಲವರು ಕೂಗಿಕೊಳ್ಳುತ್ತಾ ನೆಲದ ಮೇಲೆ ಬಿದ್ದರು. ಬಹಳವಾಗಿ ಬಳಲಿದ್ದ ಮತ್ತು ಅನಾಥೆಯರಾಗಿದ್ದ ಪಾಂಚಾಲ-ಕುರುಸ್ತ್ರೀಯರಿಗೆ ಆ ಸಮಯದಲ್ಲಿ ಸ್ವಲ್ಪವಾದರೂ ಚೈತನ್ಯವೆಂಬುದೇ ಇರಲಿಲ್ಲ. ಅವರೆಲ್ಲರೂ ಅತ್ಯಂತದಯನೀಯವಾದ ಸ್ಥಿತಿಯಲ್ಲಿದ್ದರು. ದುಃಖದಿಂದ ನೊಂದುಹೋದ ಮನಸ್ಸುಳ್ಳವ

ರಾಗಿದ್ದ ಸ್ತ್ರೀಯರ ಆಕ್ರಂದನದಿಂದ ಸರ್ವತ್ರ ಪ್ರತಿಧ್ವನಿತವಾಗುತ್ತಿದ್ದ ಮಹಾಭಯಂಕರವಾಗಿದ್ದ ಯುದ್ಧರಂಗವನ್ನು ಧರ್ಮಜ್ಞಳಾದ, ಸುಬಲನ ಮಗಳಾದ ಗಾಂಧಾರಿಯು ನೋಡಿ ಪುರುಷೋತ್ತಮನಾದ, ಪುಂಡರೀಕಾಕ್ಷನಾದ ಶ್ರೀಕೃಷ್ಣನನ್ನು ಹತ್ತಿರಕ್ಕೆ ಕರೆದಳು. ಕುರುಗಳ ಆ ಮಹಾಸಂಹಾರವನ್ನು ನೋಡಿ ಶ್ರೀಕೃಷ್ಣನೊಡನೆ ಹೇಳಿದಳು :

"ಪುಂಡರೀಕಾಕ್ಷನೇ! ಮಾಧವ! ಗಂಡಂದಿರನ್ನು ಕಳೆದುಕೊಂಡು ಹೆಣ್ಣುಕುರವಪಕ್ಷಿಗಳಂತೆ ದುಃಖದಿಂದ ರೋದನಮಾಡುತ್ತಿರುವ, ತಲೆಗಳನ್ನು ಕೆದರಿಕೊಂಡಿರುವ ನನ್ನ ಸೊಸೆಯರನ್ನು ನೋಡು. ಇವರು ತಮ್ಮ ಗಂಡಂದಿರ ಗುಣಗಳನ್ನು ಸ್ಮರಿಸಿಕೊಳ್ಳುತ್ತಾ, ಸಹೋದರರನ್ನೂ, ಪಿತೃಗಳನ್ನೂ ಮತ್ತು ಪತಿಗಳನ್ನೂ ಹುಡುಕಿಕೊಂಡು ಒಬ್ಬೊಬ್ಬರು ಒಂದೊಂದು ಕಡೆಗೆ ಓಡಿಹೋಗುತ್ತಿದ್ದಾರೆ. ಈ ರಣಕ್ಷೇತ್ರವು ಕೆಲವೆಡೆಗಳಲ್ಲಿ ವೀರಪುತ್ರರನ್ನು ಕಳೆದುಕೊಂಡ ವೀರಮಾತೆಯರಿಂದಲೂ, ಮತ್ತೆ ಕೆಲವಡೆಗಳಲ್ಲಿ ವೀರಪತಿಗಳನ್ನು ಕಳೆದುಕೊಂಡ ವೀರಪತ್ನಿಯರಿಂದಲೂ ತುಂಬಿಹೋಗಿದೆ. ಪುರುಷಶ್ರೇಷ್ಠರಾದ, ಪ್ರಜ್ವಲಿಸುವ ಯಜ್ಞೇಶ್ವರನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿರುವ ಕರ್ಣ-ಭೀಷ್ಮ-ಅಭಿಮನ್ಯು-ದ್ರೋಣ-ದ್ರುಪದ-ಶಲ್ಯರಿಂದ ಈ ರಣಭೂಮಿಯು ಸುಶೋಭಿತವಾಗಿದೆ. ಮಹಾತ್ಮರಾದ ಯೋಧರ ಸುವರ್ಣಮಯವಾದ ಕವಚಗಳಿಂದಲೂ ನಿಷ್ಕ(ಹಾರ) ಮಣಿಗಳಿಂದಲೂ, ಅಂಗದ-ಕೇಯೂರಗಳಿಂದಲೂ, ಸುವರ್ಣಮಯವಾದ ಹಾರಗಳಿಂದಲೂ ಸಮಲಂಕೃತವಾಗಿರುವ ಈ ರಣರಂಗವು ಬಹಳವಾಗಿ ಶೋಭಿಸುತ್ತಿದೆ. ಈ ರಣಾಂಗಣವು ವೀರರ ಬಾಹುಗಳಿಂದ ವಿಸೃಷ್ಟವಾದ ಶಕ್ತ್ಯಾಯುಧಗಳಿಂದಲೂ, ಪರಿಘಗಳಿಂದಲೂ, ನಾನಾವಿಧವಾದ ಮತ್ತು ತೀಕ್ಷ್ಣವಾದ ಕತ್ತಿಗಳಿಂದಲೂ, ಬಾಣಗಳಿಂದ ಕೂಡಿದ ಧನುಸ್ಸುಗಳಿಂದಲೂ ತುಂಬಿಹೋಗಿದೆ. ಹಲವೆಡೆಗಳಲ್ಲಿ ಗುಂಪು-ಗುಂಪಾಗಿ ನಿಂತಿರುವ, ಹಲವೆಡೆಗಳಲ್ಲಿ ಆಟವಾಡುತ್ತಿರುವ, ಹಲವೆಡೆಗಳಲ್ಲಿ ಮಲಗಿರುವ ಸಂತೋಷಭರಿತವಾದ ಮಾಂಸಾಶಿಗಳಾದ ಪ್ರಾಣಿಗಳಿಂದ ಈ ರಣಾಂಗಣವು ತುಂಬಿಹೋಗಿದೆ. ವೀರನೇ! ಜನಾರ್ದನ! ವಿಭುವೇ! ಇಂತಹ ಭಯಂಕರವಾದ ರಣಾಂಗಣವನ್ನು ನೋಡುತ್ತಿರುವ

ನಾನು ಶೋಕದಿಂದ ಪರಿತಪಿಸುತ್ತಿದ್ದೇನೆ. ಮಧುಸೂದನನೇ! ಕುರು ಪಾಂಚಾಲರ ಈ ವಿನಾಶದಿಂದ ಪಂಚಭೂತಗಳ (ಪಂಚಭೂತಾತ್ಮಕವಾದ ಜಗತ್ತಿನ) ವಿನಾಶವೇ ಆಗಿರುವುದೆಂದು ನಾನು ಭಾವಿಸುತ್ತೇನೆ.

ರಕ್ತದಿಂದ ತೋಯ್ದುಹೋಗಿರುವ ಗರುಡಪಕ್ಷಿಗಳೂ ಮತ್ತು ರಣಹದ್ದುಗಳೂ ಕುರು-ಪಾಂಚಾಲವೀರರನ್ನು ಕೊಕ್ಕುಗಳಿಂದ ಎಳೆದಾಡುತ್ತಿವೆ. ಸಾವಿರಾರು ರಣಹದ್ದುಗಳು ಕಾಲುಗಳಿಂದ ಹಿಡಿದುಕೊಂಡು ಆ ಮಹಾವೀರರನ್ನು ಕಿತ್ತುತಿನ್ನುತ್ತಿವೆ.

ಈ ಯುದ್ಧದಲ್ಲಿ ಮಹಾ-ಮಹಾವೀರರಾದ ಜಯದ್ರಥ-ಕರ್ಣ-ಭೀಷ್ಮ-ದ್ರೋಣರ ಮತ್ತು ಅಭಿಮನ್ಯುವಿನ ವಿನಾಶವಾಗುವುದೆಂದು ಭಾವಿಸಲು ಯಾರಿಗೆ ತಾನೇ ಸಾಧ್ಯವಿದ್ದಿತು? ಹೀಗಾಗುವುದೆಂದು ಯಾರು ತಾನೇ ಯೋಚಿಸಿದ್ದರು? ಅವಧ್ಯರೆನಿಸಿದ್ದ ಆ ಮಹಾಶೂರರೆಲ್ಲರೂ ಹತರಾಗಿ, ಪ್ರಾಣಶೂನ್ಯರಾಗಿ ಈ ರಣಾಂಗಣದಲ್ಲಿ ಬಿದ್ದಿರುವುದನ್ನೂ, ರಣಹದ್ದು-ಹದ್ದು-ಲಾವಕ್ಕಿ-ಗಿಡಗ-ನಾಯಿ-ಗುಳ್ಳೇನರಿ–ಇವೇ ಮೊದಲಾದ ಪಶು-ಪಕ್ಷಿಗಳಿಗೆ ಆಹಾರವಾಗುತ್ತಿರುವುದನ್ನೂ ನಾನು ನೋಡುತ್ತಿದ್ದೇನೆ. ದುರ್ಯೋಧನನಿಗೆ ಅಧೀನರಾಗಿದ್ದ, ಕ್ರೋಧವಶರಾಗಿದ್ದ, ಪುರುಷ ಶ್ರೇಷ್ಠರಾದ ಈ ವೀರಯೋಧರು–ಆರಿಹೋದ ಬೆಂಕಿಯಂತೆ ಶಾಂತರಾಗಿ ಈ ಸಮರಾಂಗಣದಲ್ಲಿರುವುದನ್ನು ನೋಡು, ಕೃಷ್ಣ! ಹಿಂದೆ ಯಾರು ಮೃದುವಾದ ಮತ್ತು ಕೋಮಲವಾದ ಹಾಸಿಗೆಗಳ ಮೇಲೆ ಮಲಗುತ್ತಿದ್ದರೋ, ಅವರೇ ಈಗ ಗತಪ್ರಾಣರಾಗಿ ಬರಿಯ ನೆಲದ ಮೇಲೆ ಮಲಗಿದ್ದಾರೆ. ಪ್ರಾತಃಕಾಲದಲ್ಲಿ ವಂದಿ-ಮಾಗಧರಿಂದ ಸ್ತೋತ್ರಗಳ ಮೂಲಕವಾಗಿ ಅಭಿನಂದಿಸಲ್ಪಡುತ್ತಿದ್ದ ಈ ರಾಜರೀಗ ಗುಳ್ಳೇನರಿಗಳ ಅಮಂಗಳಸೂಚಕವಾದ, ನಾನಾವಿಧವಾದ ವಿಕಾರಸ್ವರಗಳನ್ನು ಕೇಳುತ್ತಿದ್ದಾರೆ. ಹಿಂದೆ ಯಶೋವಂತರಾದ ಯಾವ ವೀರರು ಚಂದನ ಮತ್ತು ಅಗುರುಗಳನ್ನು ಮೈತುಂಬ ಪೂಸಿಕೊಂಡು ಸುಖದಾಯಕವಾದ ಸುಪ್ಪತ್ತಿಗೆಗಳಲ್ಲಿ ಮಲಗುತ್ತಿದ್ದರೋ–ಆ ವೀರರಿಂದು ಧೂಳಿನಲ್ಲಿ ಮಲಗಿದ್ದಾರೆ. ಈ ವೀರಯೋಧರು ತೊಟ್ಟಿರುವ ಆಭರಣಗಳನ್ನು ರಣಹದ್ದು, ಗುಳ್ಳೇನರಿ ಕಾಗೆ – ಇವೇ ಮುಂತಾದ ಪ್ರಾಣಿಗಳು ವಿಕಾರ

ವಾಗಿ ಕೂಗುತ್ತಾ ಪುನಃ ಪುನಃ ಎಳೆದಾಡುತ್ತಿವೆ. ಯುದ್ಧಾಭಿಮಾನಿಗಳಾದ ಈ ವೀರರೆಲ್ಲರೂ ಇನ್ನೂ ಜೀವಿಸಿರುವವರೋ ಎಂಬಂತೆ ನಿಶಿತವಾದ ಬಾಣಗಳನ್ನೂ, ಹೊಂಬಣ್ಣದ ಕತ್ತಿಗಳನ್ನೂ, ಶುದ್ಧವಾದ ಗದೆಗಳನ್ನೂ ಧರಿಸಿರುತ್ತಾರೆ. ಶುದ್ಧವಾದ ರೂಪವನ್ನೂ ಮತ್ತು ಕಾಂತಿಯನ್ನೂ ಹೊಂದಿರುವ, ಗೂಳಿಗಳಂತೆ ಹೃಷ್ಟ-ಪುಷ್ಟರಾಗಿರುವ, ಮರಕತದ ಮಾಲೆಗಳನ್ನು ಧರಿಸಿರುವ, ಗತಪ್ರಾಣರಾಗಿ ಈ ರಣಾಂಗಣದಲ್ಲಿ ಮಲಗಿರುವ ಅನೇಕ ಯೋಧರನ್ನು, ಮಾಂಸಾಶಿಗಳಾದ ಪ್ರಾಣಿಗಳು ಛಿದ್ರ-ವಿಚ್ಛಿದ್ರಮಾಡುತ್ತಿವೆ. ಪರಿಘಾಯುಧಕ್ಕೆ ಸಮಾನವಾದ ತೋಳು ಗಳಿಂದ ಕೂಡಿರುವ ಕೆಲವು ಯೋಧರು ಪ್ರೇಯಸಿಯನ್ನು ತಬ್ಬಿಕೊಂಡು ಮಲಗುವಂತೆ ತಮ್ಮ ಗದೆಗಳನ್ನೇ ತಬ್ಬಿಕೊಂಡು ಅಂಗತ್ತನಾಗಿ ಮಲಗಿದ್ದಾರೆ. ಜನಾರ್ದನ! ಕೆಲವು ಯೋಧರು ಥಳ-ಥಳಿಸುವ ಕವಚಗಳನ್ನು ಧರಿಸಿ ಆಯುಧಪಾಣಿಗಳಾಗಿಯೇ ಮಲಗಿದ್ದಾರೆ. ಇವರಿನ್ನೂ ಜೀವಂತ ರಾಗಿರುವರೆಂದೇ ಭಾವಿಸಿ ಮಾಂಸಾಶಿಗಳಾದ ಪ್ರಾಣಿಗಳು ಇವರ ಮೇಲೆ ಆಕ್ರಮಣ ನಡೆಸಿಲ್ಲ, ಮಾಂಸಾಶಿಗಳಾದ ಪ್ರಾಣಿಗಳಿಂದ ಇಲ್ಲಿಂದಲ್ಲಿಗೂ-ಅಲ್ಲಿಂದಿಲ್ಲಿಗೂ ಎಳೆದಾಡಲ್ಪಡುತ್ತಿರುವ ಮಹಾಮನಸ್ವಿಗಳಾದ ಕೆಲವು ಯೋಧರ ಸುವರ್ಣಮಯವಾದ ಚಿತ್ರ-ವಿಚಿತ್ರವಾದ ಹಾರಗಳು ಹರಿದುಹೋಗಿ ಚೆಲ್ಲಾಪಿಲ್ಲಿಯಾಗಿ ಅವರ ಸುತ್ತಲೂ ಬಿದ್ದಿವೆ.

ಹತರಾಗಿ ಬಿದ್ದಿರುವ ಯಶೋವಂತರಾದ ಯೋಧರ ಕತ್ತಿನಲ್ಲಿರುವ ಹಾರಗಳನ್ನು ಭಯಂಕರವಾದ ಸಾವಿರಾರು ಗುಳ್ಳೇನರಿಗಳು ಎಳೆದಾಡುತ್ತಿವೆ. ವೃಷ್ಣಿಸಿಂಹನೇ! ಕೃಷ್ಣ! ಪ್ರಾಯಶಃ ಎಲ್ಲ ಅಪರರಾತ್ರಿಗಳಲ್ಲಿಯೂ ಸುಶಿಕ್ಷಿತ ರಾದ ವಂದಿ-ಮಾಗಧರು ಸ್ತುತಿಗಳಿಂದಲೂ ಮತ್ತು ಉತ್ತಮವಾದ ಉಪ ಚಾರಗಳಿಂದಲೂ ಈ ರಾಜಕುಮಾರರನ್ನು ಸಂಸೇವಿಸುತ್ತಿದ್ದರು. ಅಂತಹ ಈ ರಾಜಕುಮಾರರನ್ನಿಂದು ದುಃಖಪೀಡಿತರಾದ, ದುಃಖ-ಶೋಕಗಳಿಂದ ಸಂಕಟಪಡುತ್ತಿರುವ ಸುಂದರಯುವತಿಯರು ಕರುಣಾಜನಕವಾದ ವಿಲಾಪ ಗಳಿಂದ ಸಂಸೇವಿಸುತ್ತಿದ್ದಾರೆ. ಕೇಶವ! ಬಾಡಿಹೋಗಿರುವ ಈ ಸುಂದರ ಸ್ತ್ರೀಯರ ಮುಖಗಳು ಕೆಂಪುಕಮಲದ ವನಗಳಂತೆ ಬಹಳ ಸುಂದರ ವಾಗಿ ಕಾಣುತ್ತಿವೆ. ಕೆಲವು ಕುರುಸ್ತ್ರೀಯರು ಅಳುವುದನ್ನು ನಿಲ್ಲಿಸಿ ತಮ್ಮ

ಸಂಬಂಧಿಗಳು ಎಲ್ಲಿರುವರೆಂಬುದನ್ನು ಚಿಂತಿಸುತ್ತಾ ಪರಿವಾರಸಮೇತರಾಗಿ ಅವರನ್ನು ಹುಡುಕಲು ಹೋಗುತ್ತಿದ್ದಾರೆ. ತಾವು ಹುಡುಕುತ್ತಿದ್ದ ಸಂಬಂಧಿ ಯೊಡನೆ ಮಿಳಿತರಾಗಿ ಪುನಃ ದುಃಖಿತರಾಗುತ್ತಾರೆ. ಸೂರ್ಯನ ಕಾಂತಿಗೆ ಮತ್ತು ಸುವರ್ಣದ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಕುರು ವಂಶದ ಯುವತಿಯರ ಮುಖಗಳು ಕೋಪದಿಂದಲೂ ಮತ್ತು ರೋದನ ದಿಂದಲೂ ಕೆಂಪಾಗಿಬಿಟ್ಟಿವೆ. ಕೇಶವ! ಸುಂದರವಾದ ಕಾಂತಿಯಿಂದ ಕೂಡಿರುವ, ಒಂದೇ ವಸ್ತ್ರವನ್ನುಟ್ಟಿರುವ, ಗೌರವರ್ಣದಿಂದ ಕೂಡಿರುವ ಯುವತಿಯರಾದ ದುರ್ಯೋಧನನ ಶ್ರೇಷ್ಠಸ್ತ್ರೀಯರ ಸಮೂಹಗಳನ್ನು ನೋಡು. ಒಬ್ಬರು ಮಾಡುತ್ತಿರುವ ವಿಲಾಪದ ಧ್ವನಿಯಲ್ಲಿ ಮತ್ತೊಬ್ಬರು ಮಾಡುತ್ತಿರುವ ವಿಲಾಪದ ಧ್ವನಿಯು ಮಿಳಿತವಾದ ಕಾರಣ ಒಬ್ಬೊಬ್ಬರೂ ಹೇಗೆ ರೋದನಮಾಡುತ್ತಿದ್ದಾರೆಂಬುದೇ ಸರಿಯಾಗಿ ಕೇಳಿಬರುತ್ತಿಲ್ಲ. ಆದುದರಿಂದ ಇತರ ಸ್ತ್ರೀಯರಿಗೂ ಸಹ ಒಬ್ಬೊಬ್ಬರೂ ಹೇಗೆ ವಿಲಪಿ ಸುತ್ತಿರುವರೆಂಬುದನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತಿಲ್ಲ. ಈ ವೀರವನಿತೆ ಯರು ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ, ಗಟ್ಟಿಯಾಗಿ ಕಿರುಚಿ ಕೊಳ್ಳುತ್ತಾ, ಬಿಕ್ಕಿ-ಬಿಕ್ಕಿ ಅಳುತ್ತಾ, ದುಃಖದಿಂದ ಚಡಪಡಿಸುತ್ತಾ ಕಟ್ಟಕಡೆಗೆ ತಮ್ಮ ಪ್ರಾಣಗಳನ್ನೇ ಪರಿತ್ಯಾಗಮಾಡುತ್ತಾರೆ. ಅನೇಕ ಸ್ತ್ರೀಯರು ತಮ್ಮ ಗಂಡಂದಿರ ಶರೀರಗಳನ್ನು ಕಂಡೊಡನೆಯೇ ಕಿರುಚಿಕೊಳ್ಳುತ್ತಾರೆ. ಗಳ-ಗಳನೆ ಅಳುತ್ತಾರೆ. ಕೋಮಲಹಸ್ತರಾದ ಕೆಲವು ವನಿತೆಯರು ತಮ್ಮ ತಲೆಗಳನ್ನು ಕೈಗಳಿಂದ ಚಚ್ಚಿಕೊಳ್ಳುತ್ತಿದ್ದಾರೆ. ನೆಲದ ಮೇಲೆ ಬಿದ್ದಿರುವ ಶಿರಸ್ಸು ಗಳಿಂದಲೂ ಹಸ್ತಗಳಿಂದಲೂ ಒಂದರ ಮೇಲೊಂದು ಬಿದ್ದು ಗುಡ್ಡೆ-ಗುಡ್ಡೆ ಯಾಗಿರುವ ಅವಯವಗಳಿಂದಲೂ ಸಮರಾಂಗಣವು ತುಂಬಿಹೋಗಿರು ವಂತೆ ಕಾಣುತ್ತಿದೆ. ತಲೆಗಳೇ ಇಲ್ಲದ ಸುಂದರವಾದ ಶರೀರಗಳನ್ನೂ, ಕೆಲವೆಡೆಗಳಲ್ಲಿ ಶರೀರಗಳೇ ಇಲ್ಲದ ತಲೆಗಳನ್ನೂ ನೋಡಿ ರಾಜಕುಮಾರ ರನ್ನು ಅನುಸರಿಸಿ ಹೋಗುತ್ತಿರುವ ಸ್ತ್ರೀಯರು ಮೂರ್ಛಿತರಾಗುತ್ತಿದ್ದಾರೆ. ಬುದ್ಧಿಗೆಟ್ಟ ಕೆಲವು ಸ್ತ್ರೀಯರು ತಲೆಯೊಂದನ್ನು ತಲೆಯಿಲ್ಲದ ಶರೀರದೊಡನೆ ಜೋಡಿಸಿ ನೋಡುತ್ತಾರೆ. ಇದು ಇವನ ತಲೆಯಲ್ಲವೆಂದು ನಿಶ್ಚಯಿಸುತ್ತಾರೆ. ಆ ಶರೀರಕ್ಕೆ ಸರಿಯಾದ ಮತ್ತೊಂದು ತಲೆಯನ್ನು ಸಮೀಪದಲ್ಲಿ ಕಾಣದೇ

ಪುನಃ ವಿಲಪಿಸುತ್ತಾರೆ. ಕೆಲವು ಸ್ತ್ರೀಯರು ಬಾಣಗಳಿಂದ ಕತ್ತರಿಸಲ್ಪಟ್ಟಿರುವ ಕೈಗಳನ್ನೂ, ತೊಡೆಗಳನ್ನೂ, ಕಾಲುಗಳನ್ನೂ ಮತ್ತು ಇತರ ಅವಯವಗಳನ್ನೂ ಜೋಡಿಸುತ್ತಾ ತಮ್ಮ ಪ್ರಿಯಪತಿಗಳನ್ನು ಗುರುತಿಸಲಾಗದೇ ವ್ಯರ್ಥಪ್ರಯತ್ನಕ್ಕಾಗಿ ಮೂರ್ಛಿತರಾಗುತ್ತಿದ್ದಾರೆ.

ಅನೇಕಯೋಧರ ಶಿರಸ್ಸುಗಳು ಕತ್ತರಿಸಲ್ಪಟ್ಟಿವೆ. ಹಲವು ಯೋಧರ ಶರೀರಗಳನ್ನು ಮೃಗ-ಪಕ್ಷಿಗಳು ಕಿತ್ತುತಿಂದಿವೆ. ಇಂತಹ ಸ್ಥಿತಿಯಲ್ಲಿದ್ದ ರಾಜಕುಮಾರರನ್ನು ನೋಡಿ ಕೆಲವು ಭರತಸ್ತ್ರೀಯರು ತಮ್ಮ ಪತಿಗಳು ಯಾರೆಂಬುದನ್ನೂ ಗುರುತಿಸಲಾಗುತ್ತಿಲ್ಲ. ಮಧುಸೂದನ! ಅಲ್ಲಿ ನೋಡು. ಶತ್ರುಗಳಿಂದ ಹತರಾದ ತಮ್ಮ ಸಹೋದರರನ್ನೂ, ಪಿತೃಗಳನ್ನೂ, ಪುತ್ರರನ್ನೂ, ಪತಿಗಳನ್ನೂ ಗುರುತಿಸಿದ ಸ್ತ್ರೀಯರು ಕೈಗಳಿಂದ ಹಣೆಗಳನ್ನು, ಚಚ್ಚಿಕೊಳ್ಳುತ್ತಿದ್ದಾರೆ. ಖಡ್ಗಸಹಿತವಾದ ತೋಳುಗಳಿಂದಲೂ, ಕುಂಡಲ ಗಳಿಂದ ಸಮಲಂಕೃತವಾದ ಶಿರಸ್ಸುಗಳಿಂದಲೂ ವ್ಯಾಪ್ತವಾಗಿರುವ, ಮಾಂಸ ಮತ್ತು ರಕ್ತಗಳ ಕೆಸರಿನಿಂದ ಕೂಡಿರುವ ಈ ರಣಭೂಮಿಯು ಸಂಚಾರಕ್ಕೆ ಅಯೋಗ್ಯವಾಗಿದೆ. ಕಳಂಕರಹಿತರಾದ ಈ ರಾಜಮಹಿಳೆಯರು ಹಿಂದೆಂದೂ ಈ ವಿಧವಾದ ದುಃಖವನ್ನು ಅನುಭವಿಸಿರಲಿಲ್ಲ. ಇಂದು ದುಃಖ ಸಾಗರದಲ್ಲಿಯೇ ಮುಳುಗಿಹೋಗಿದ್ದಾರೆ. ಈ ಸ್ತ್ರೀಯರ ಸಹೋದರ ರಿಂದಲೂ, ಪತಿಗಳಿಂದಲೂ, ಮಕ್ಕಳಿಂದಲೂ ಈ ರಣಭೂಮಿಯು ಮುಚ್ಚಿ ಹೋಗಿದೆ. ಜನಾರ್ದನ! ಸುಂದರವಾದ ಕೇಶರಾಶಿಯಿಂದ ಕೂಡಿರುವ ಹೆಣ್ಣುಕುದುರೆಮರಿಗಳ ಸಮೂಹದಂತೆ ಕಾಣುತ್ತಿರುವ ಧೃತರಾಷ್ಟ್ರನ ಸೊಸೆಯರ ಈ ಸಮೂಹವನ್ನಾದರೂ ನೋಡು. ಈ ನನ್ನ ಸೊಸೆಯರೆಲ್ಲರೂ ಇಲ್ಲಿಗೆ ಬಂದು ಅನೇಕಪ್ರಕಾರವಾಗಿ ವಿಲಪಿಸುತ್ತಿದ್ದಾರೆ. ಕೇಶವ! ಇದನ್ನು ನೋಡುವುದಕ್ಕಿಂತಲೂ ಹೆಚ್ಚಿನ ದುಃಖವು ಬೇರೆ ಯಾವುದಿದೆ? ಬೇರೆ ಯಾವುದೂ ಇಲ್ಲವೆಂದೇ ನಾನು ಭಾವಿಸುತ್ತೇನೆ. ಮಾಧವ! ನಿಶ್ಚಯವಾಗಿಯೂ ನನ್ನ ಹಿಂದಿನ ಜನ್ಮಗಳಲ್ಲಿ ನಾನು ಬಹಳವಾಗಿ ಪಾಪಮಾಡಿದ್ದೇನೆ. ಪುತ್ರ-ಪೌತ್ರ-ಸಹೋದರರೆಲ್ಲರೂ ಏಕಕಾಲದಲ್ಲಿ ನಿಧನಹೊಂದಿರುವುದನ್ನು ನಾನು ನೋಡುತ್ತಿರುವೆನಲ್ಲವೇ!”

ಜನಮೇಜಯ! ಪುತ್ರಶೋಕಪೀಡಿತಳಾದ ಗಾಂಧಾರಿಯು ಬಿಕ್ಕಿ-ಬಿಕ್ಕಿ ಅಳುತ್ತಾ ಶ್ರೀಕೃಷ್ಣನೊಡನೆ ಹೀಗೆ ಹೇಳುತ್ತಿದ್ದಂತೆಯೇ ಹತನಾಗಿ ಬಿದ್ದಿದ್ದ ತನ್ನ ಮಗನನ್ನು ನೋಡಿದಳು.”

೧೬ನೆಯ ಅಧ್ಯಾಯವು ಮುಗಿಯಿತು.

೧೭ನೆಯ ಅಧ್ಯಾಯ ಸ್ತ್ರೀವಿಲಾಪಪರ್ವ (ಮುಂದುವರಿದಿದೆ.)

## ದುರ್ಯೋಧನನನ್ನೂ-ಅವನ ಸುತ್ತಲೂ ಕುಳಿತು ಅಳುತ್ತಿದ್ದ ಅವನ ಪತ್ನಿಯರನ್ನೂ ನೋಡಿ ಗಾಂಧಾರಿಯು ಶ್ರೀಕೃಷ್ಣನ ಸಮ್ಮುಖದಲ್ಲಿ ವಿಲಪಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

“ಮಹಾರಾಜ! ಶೋಕಪೀಡಿತಳಾದ ಗಾಂಧಾರೀದೇವಿಯು ರಣರಂಗ ದಲ್ಲಿ ದುರ್ಯೋಧನನು ಹತನಾಗಿ ಬಿದ್ದಿರುವುದನ್ನು ನೋಡಿ–ತೋಟದಲ್ಲಿ ಕತ್ತರಿಸಿಹಾಕಲ್ಪಟ್ಟ ಬಾಳೆಯ ಕಂದಿನಂತೆ–ಭೂಮಿಯ ಮೇಲೆ ದೊಪ್ಪನೆ ಬಿದ್ದು ಮೂರ್ಛೆಹೋದಳು. ಸ್ವಲ್ಪಹೊತ್ತು ಕಳೆದನಂತರ ಎಚ್ಚರಗೊಂಡು ಗಟ್ಟಿಯಾಗಿ ಕೂಗಿಕೊಂಡು ಪುನಃ ಅಳತೊಡಗಿದಳು. ರಕ್ತದಿಂದ ತೋಯ್ದು ಹೋಗಿದ್ದ, ರಣರಂಗದಲ್ಲಿ ಮಲಗಿದ್ದ ದುರ್ಯೋಧನನನ್ನು ನೋಡಿ ದುಃಖತುಂಬಿದ ಹೃದಯದಿಂದ ಅವನನ್ನು ಆಲಿಂಗಿಸಿಕೊಂಡು ದೈನ್ಯದಿಂದ ವಿಲಪಿಸತೊಡಗಿದಳು. ವ್ಯಾಕುಲವಾದ ಇಂದ್ರಿಯಗಳಿಂದ ಕೂಡಿದ್ದ ಗಾಂಧಾರಿಯು ಶೋಕಪೀಡಿತಳಾಗಿ–‘ಹಾ ಪುತ್ರ! ಹಾ ದುರ್ಯೋಧನ!’– ಎಂದು ಕೂಗಿಕೊಳ್ಳುತ್ತಾ ಬಿಕ್ಕಿ-ಬಿಕ್ಕಿ ಅಳುತ್ತಿದ್ದಳು. ಪುತ್ರಶೋಕದಿಂದ ಪರಿತಪಿಸುತ್ತಿದ್ದ ಗಾಂಧಾರೀದೇವಿಯು ಕಣ್ಣುಗಳಿಂದ ಹೊರಬರುತ್ತಿದ್ದ ನೀರಿನಿಂದ, ಆಳವಾಗಿಯೂ ಮಾಂಸಲವಾಗಿಯೂ ಇದ್ದ ಜತ್ರುಪ್ರದೇಶ ದಿಂದ (ಕೊರಳಿನ ಎಲುಬಿರುವ ಸ್ಥಳದಿಂದ) ಕೂಡಿದ್ದ, ಮರಕತರತ್ನದ ಹಾರದಿಂದ ವಿಭೂಷಿತವಾಗಿದ್ದ ದುರ್ಯೋಧನನ ವಕ್ಷಃಸ್ಥಳವನ್ನು ನೆನೆಸುತ್ತಾ ತನ್ನ ಸಮೀಪದಲ್ಲಿಯೇ ನಿಂತಿದ್ದ ಶ್ರೀಕೃಷ್ಣನನ್ನು ಕುರಿತು ಹೇಳಿದಳು:

"ಪ್ರಭುವೇ! ವಾರ್ಷ್ಣೇಯ! ಜ್ಞಾತಿಗಳ ಕ್ಷಯಕರವಾದ ಈ ಮಹಾಯುದ್ಧವು ಸನ್ನಿಹಿತವಾಗಿರಲಾಗಿ, ನೃಪಶ್ರೇಷ್ಠನಾದ ದುರ್ಯೋಧನನು ಬದ್ಧಾಂಜಲಿಯಾಗಿ ನನ್ನನ್ನು ಕುರಿತು–ಅಸ್ಮಿನ್ ಜ್ಞಾತಿ ಸಮುದ್ಧರ್ಷೇ ಜಯಮಮ್ಬಾ ಬ್ರವೀತು ಮೇ'-'ಜ್ಞಾತಿಗಳ ನಡುವೆ ನಡೆಯಲಿರುವ ಈ ಮಹಾಸಂಗ್ರಾಮದಲ್ಲಿ ತಾಯಿಯು ನನಗೆ ಜಯವಾಗಲೆಂದು ಹೇಳಲಿ. (ತಾಯಿಯಾದ ನೀನು ನನಗೇ ವಿಜಯವಾಗಲೆಂದು ಆಶೀರ್ವದಿಸು)'– ಎಂದು ಹೇಳಿದನು.

ಪುರುಷವ್ಯಾಘ್ರನೇ! ನನ್ನ ಮಗನು ಹೀಗೆ ಪ್ರಾರ್ಥಿಸಲಾಗಿ ಮುಂದೆ ಬರಲಿರುವ ವ್ಯಸನವನ್ನು ಸಂಪೂರ್ಣವಾಗಿ ಅಂದೇ ಮನಗಂಡಿದ್ದ ನಾನು ನನ್ನ ಮಗನನ್ನು ಕುರಿತು-'ಯತೋ ಧರ್ಮಸ್ತತೋ ಜಯಃ'-'ಮಗು! ಯಾವ ಪಕ್ಷದಲ್ಲಿ ಧರ್ಮವಿರುವುದೋ ಆ ಪಕ್ಷಕ್ಕೇ ವಿಜಯವು ಸಿದ್ಧಿಸುತ್ತದೆ'–ಎಂದು ಹೇಳಿದೆನು.

**ಯಥಾ ಚ ಯುಧ್ಯಮಾನಸ್ತ್ವಂ ನ ವೈ ಮುಹ್ಯಸಿ ಪುತ್ರಕ ।**
**ಧ್ರುವಂ ಶಸ್ತ್ರಜಿತಾನ್ಲೋಕಾನ್ಪ್ರಾಪ್ಸ್ಯಸ್ಯಮರವತ್ಪ್ರಭೋ ॥೮॥**

'ಪುತ್ರ! ಯುದ್ಧಮಾಡುತ್ತಿರುವಾಗ ನೀನು ಯಾವಾಗಲೂ ವಿಮೋಹಗೊಳ್ಳುವುದಿಲ್ಲ. (ಅಪ್ರಮತ್ತನಾಗುವುದಿಲ್ಲ.) ಆದುದರಿಂದ ದೇವತೆಗಳಂತೆ–ಶಸ್ತ್ರಗಳಿಂದ ಜಯಿಸಲ್ಪಟ್ಟ ಪುಣ್ಯಲೋಕಗಳನ್ನೇ ಪಡೆದು ಕೊಳ್ಳುವೆ. ಇದು ನಿಶ್ಚಯ'–ಹೀಗೆ ನಾನಂದು ದುರ್ಯೋಧನನೊಡನೆ ಹೇಳಿದೆನು. ಆದುದರಿಂದ ದುರ್ಯೋಧನನು ಯುದ್ಧದಲ್ಲಿ ಪ್ರಾಣ ತೊರೆದುದಕ್ಕಾಗಿ ನಾನು ಶೋಕಿಸುವುದಿಲ್ಲ. ಆದರೆ ಪುತ್ರರನ್ನೂ–ಬಂಧು ಗಳನ್ನೂ ಸಂಪೂರ್ಣವಾಗಿ ಕಳೆದುಕೊಂಡಿರುವ ಕೃಪಣನಾದ ಧೃತರಾಷ್ಟ್ರನ ವಿಷಯವಾಗಿ ನಾನು ಹೆಚ್ಚು ದುಃಖಪಡುತ್ತೇನೆ.

ಯೋಧಶ್ರೇಷ್ಠನಾದ, ಅಸ್ತ್ರವಿದ್ಯಾವಿಶಾರದನಾದ, ಯುದ್ಧದುರ್ಮದ ನಾದ, ಮಹಾಕೋಪಿಷ್ಠನಾದ ನನ್ನ ಮಗನು ವೀರರು ಮಲಗಲು ಯೋಗ್ಯ ವಾದ ಭೂಶಯ್ಯೆಯಲ್ಲಿ ಮಲಗಿರುವುದನ್ನು ನೋಡು, ಕೃಷ್ಣ! ಶತ್ರುತಾಪಕ ನಾದ ಯಾವ ದುರ್ಯೋಧನನು ಈ ಮೊದಲು ಮೂರ್ಧಾಭಿಷಿಕ್ತರಾದ ರಾಜರ

ಅಗ್ರಭಾಗದಲ್ಲಿ ಹೋಗುತ್ತಿದ್ದನೋ–ಅವನೇ ಈಗ ಈ ಧೂಳಿನಲ್ಲಿ ಮಲಗಿದ್ದಾನೆ. ಮಾಧವ! ಕಾಲದ ವಿಪರ್ಯಾಸವನ್ನಾದರೂ ನೋಡು. ದುರ್ಯೋಧನನು ಸರ್ವಸಾಧಾರಣವಾದ, ಸುಲಭಸಾಧ್ಯವಾದ ಗತಿಯನ್ನೇನೂ ಪಡೆದಿರುವುದಿಲ್ಲವೆಂಬುದು ನಿಶ್ಚಯ. (ಋಷಿ-ಮುನಿಗಳಿಂದಲೂ ಪಡೆದುಕೊಳ್ಳುವುದಕ್ಕೆ ಸಾಧ್ಯವಾಗದಿರುವ, ಶ್ರೇಷ್ಠವಾದ ಉತ್ತಮಗತಿಯನ್ನೇ ಪಡೆದಿರುತ್ತಾನೆ.) ಅದೇ ರೀತಿಯಲ್ಲಿ ಅವನೀಗ ವೀರಸೇವಿತವಾದ ಭೂಶಯ್ಯೆಯಲ್ಲಿ ಅಂಗಾತನಾಗಿಯೇ (ಮುಖವನ್ನು ಮೇಲಕ್ಕೆ ಮಾಡಿಕೊಂಡೇ) ಮಲಗಿರುತ್ತಾನೆ. ಹಿಂದೆ ಇವನು ಹಂಸತೂಲಿಕಾತಲ್ಪದಲ್ಲಿ ಮಲಗಿರುತ್ತಿದ್ದಾಗ ಸುಂದರಿಯರಾದ ಸ್ತ್ರೀಯರು ಸಮೀಪದಲ್ಲಿ ಕುಳಿತು ಇವನ ಮನಸ್ಸನ್ನು ತಣಿಸುತ್ತಿದ್ದರು. ಆದರೆ ಈಗ ವೀರಶಯ್ಯೆಯಲ್ಲಿ ಮಲಗಿರುವ ಇವನನ್ನು ಅಮಂಗಳರೂಪದ ಗುಳ್ಳೇನರಿಗಳು ಸಂತೋಷಗೊಳಿಸುತ್ತಿವೆ. ಹಿಂದೆ ಅನೇಕಾನೇಕ ರಾಜರು ದುರ್ಯೋಧನನ ಸಮೀಪದಲ್ಲಿ ಕುಳಿತು ಸವಿಮಾತುಗಳಿಂದಲೂ, ಕಪ್ಪ-ಕಾಣಿಕೆಗಳಿಂದಲೂ ಇವನಿಗೆ ಆನಂದವನ್ನುಂಟುಮಾಡುತ್ತಿದ್ದರು. ಹತನಾಗಿ ಭೂಮಿಯಲ್ಲಿ ಮಲಗಿರುವ ಅವನ ಸಮೀಪದಲ್ಲಿ ಈಗ ರಣಹದ್ದುಗಳು ಕುಳಿತಿವೆ. ಹಿಂದೆ ದುರ್ಯೋಧನನಿಗೆ ಶ್ರೇಷ್ಠರಾದ ಸ್ತ್ರೀಯರು ರಮ್ಯವಾದ ವ್ಯಜನಗಳಿಂದ ಗಾಳಿಬೀಸುತ್ತಿದ್ದರು. ಈಗ ರಣರಂಗದಲ್ಲಿ ಮಲಗಿರುವ ಇವನಿಗೆ ಪಕ್ಷಿಗಳು ವ್ಯಜನಸದೃಶವಾದ ರೆಕ್ಕೆಗಳಿಂದಲೇ ಗಾಳಿಯನ್ನು ಬೀಸುತ್ತಿವೆ. ಕಾಡಿನಲ್ಲಿರುವ ಆನೆಯು ಸಿಂಹದಿಂದ ಹತವಾಗುವಂತೆ–ಭೀಮಸೇನನಿಂದ ಹತನಾಗಿ ಕೆಳಕ್ಕೆ ಬೀಳಿಸಲ್ಪಟ್ಟಿರುವ ಸತ್ಯವಿಕ್ರಮನಾದ, ಮಹಾಬಾಹುವಾದ, ಮಹಾಬಲಿಷ್ಠನಾದ ದುರ್ಯೋಧನನು ಇಲ್ಲಿ ಮಲಗಿದ್ದಾನೆ. ಭೀಮಸೇನನಿಂದ ಹತನಾಗಿ, ರಕ್ತದಿಂದ ತೋಯ್ದು, ಗದೆಯನ್ನು ಹಿಡಿದುಕೊಂಡೇ ರಣಾಂಗಣದಲ್ಲಿ ಮಲಗಿರುವ ಭರತವಂಶೀಯನಾದ ದುರ್ಯೋಧನನನ್ನು ನೋಡು, ಕೃಷ್ಣ! ಹಿಂದೆ ಯುದ್ಧದ ಸಮಯದಲ್ಲಿ ಯಾವನು ಹನ್ನೊಂದು ಅಕ್ಷೌಹಿಣೀ ಸೈನ್ಯವನ್ನೂ ಕುರುಕ್ಷೇತ್ರಕ್ಕೆ ತಂದಿದ್ದನೋ–ಅಂತಹ ದುರ್ಯೋಧನನು ಯುದ್ಧಸಮಯದಲ್ಲಿ ಭೀಮಸೇನನು ಅನುಸರಿಸಿದ ಅನೀತಿಯ ಕಾರಣದಿಂದಾಗಿ ನಿಧನಹೊಂದಿದನು. ಶಾರ್ದೂಲವು ಸಿಂಹದಿಂದ ಕೊಲ್ಲಲ್ಪಡುವಂತೆ – ಭೀಮಸೇನನಿಂದ ಹತನಾಗಿ ಕೆಳಕ್ಕೆ ಬೀಳಿಸ

ಲ್ಪಟ್ಟ, ಮಹಾಧನುಷ್ಮಂತನಾದ, ಮಹಾಬಲನಾದ ದುರ್ಯೋಧನನು ಇಲ್ಲಿ ಮಲಗಿದ್ದಾನೆ. ಮಂದಭಾಗ್ಯನಾದ, ಬಾಲಬುದ್ಧಿಯವನಾದ (ಚಪಲನಾದ), ಮೂರ್ಖನಾದ ಈ ನನ್ನ ಮಗನು ವಿದುರನನ್ನೂ, ತಂದೆಯಾದ ಧೃತರಾಷ್ಟ್ರನನ್ನೂ ಅವಮಾನಗೊಳಿಸುತ್ತಾ, ಅವರು ಹೇಳಿದ ಮಾತುಗಳನ್ನು ಕೇಳದೇ ವೃದ್ಧರ ಅವಹೇಳನಜನಿತವಾದ ಪಾಪದಿಂದ ಮೃತ್ಯುವಶನಾದನು. ನಿಷ್ಕಂಟಕವಾಗಿದ್ದ ಈ ಅಖಂಡಭೂಮಂಡಲವೂ ಹದಿಮೂರು ವರ್ಷಗಳ ಪರ್ಯಂತವಾಗಿ ಯಾರ ಅಧೀನದಲ್ಲಿದ್ದಿತೋ–ಅಂತಹ ರಾಜಾಧಿರಾಜನಾದ ನನ್ನ ಮಗನು ಭೀಮನಿಂದ ಹತನಾಗಿ ಈ ರಣಭೂಮಿಯಲ್ಲಿ ಮಲಗಿದ್ದಾನೆ. ಕೃಷ್ಣ! ನನ್ನ ಮಗನಿಂದ ಪರಿಪಾಲಿಸಲ್ಪಡುತ್ತಿದ್ದ, ಆನೆಗಳಿಂದಲೂ, ಕುದುರೆಗಳಿಂದಲೂ ಮತ್ತು ಗೋವುಗಳಿಂದಲೂ ಸಮೃದ್ಧವಾಗಿದ್ದ ಈ ಭೂಮಿಯನ್ನು ನಾನು ಪ್ರತ್ಯಕ್ಷವಾಗಿ ನೋಡಿದೆನು. ಆದರೆ ಅವನ ಆಡಳಿತವು ಚಿರಕಾಲ ಉಳಿಯಲಿಲ್ಲ. ಮಹಾಬಾಹುವೇ! ನನ್ನ ಮಗನು ಪರಿಪಾಲಿಸುತ್ತಿದ್ದ ರಾಜ್ಯವನ್ನೇ ಈಗ ಬೇರೆಯವರು ಆಳುತ್ತಿರುವುದನ್ನು ನಾನು ನೋಡುತ್ತಿದ್ದೇನೆ. ಸರ್ವಸಮೃದ್ಧವಾಗಿದ್ದ ಈ ರಾಜ್ಯವಿಂದು ಆನೆಗಳಿಂದಲೂ, ಕುದುರೆಗಳಿಂದಲೂ ಮತ್ತು ಗೋವುಗಳಿಂದಲೂ ವಿಹೀನವಾಗಿದೆ. ಮಾಧವ! ಇಂತಹ ಪರಿಸ್ಥಿತಿಯಲ್ಲಿ ನಾನೇಕೆ ಜೀವಿಸಿರಬೇಕು? ನನ್ನ ಮಗನ ವಧೆಯಿಂದಾದ ದುಃಖಕ್ಕಿಂತಲೂ ಇನ್ನೂ ಹೆಚ್ಚಿನ ದುಃಖವನ್ನುಂಟುಮಾಡುವ ಈ ದೃಶ್ಯವನ್ನಾದರೂ ನೋಡು, ಕೃಷ್ಣ! ಈ ಸ್ತ್ರೀಯರು ಯುದ್ಧದಲ್ಲಿ ಹತರಾದ ತಮ್ಮ ಪತಿಗಳ ಸಮೀಪದಲ್ಲಿ ರೋದನಮಾಡುತ್ತಾ ಕುಳಿತಿದ್ದಾರೆ. ಸುವರ್ಣಮಯವಾದ ವೇದಿಯಂತೆ ತೇಜಸ್ವಿನಿಯಾಗಿರುವ, ಸುಂದರವಾದ ಕಟಿಪ್ರದೇಶದಿಂದ ಕೂಡಿರುವ ಲಕ್ಷ್ಮಣನ ತಾಯಿಯು ತಲೆಗೂದಲನ್ನು ಕೆದರಿಕೊಂಡು ದುರ್ಯೋಧನನ ತೊಡೆಯ ಸಮೀಪದಲ್ಲಿ ಕುಳಿತಿರುವುದನ್ನು ನೋಡು, ಕೃಷ್ಣ! ಮಹೀಭುಜನಾದ ದುರ್ಯೋಧನನು ಜೀವಿಸಿರುವಾಗ ನಿಶ್ಚಯವಾಗಿಯೂ ಈ ಬಾಲೆಯು ಸುಂದರವಾದ ತೋಳುಗಳನ್ನು ಹೊಂದಿದ್ದ ದುರ್ಯೋಧನನ ಎರಡು ಭುಜಗಳನ್ನೂ ಆಶ್ರಯಿಸಿ (ಅವನಿಂದ ಆಲಿಂಗಿಸಲ್ಪಟ್ಟವಳಾಗಿ) ಅವನೊಡನೆ ರಮಿಸುತ್ತಿದ್ದಳು. ಮಾಧವ! ಮಗನಾದ ಲಕ್ಷ್ಮಣನ ಜೊತೆಯಲ್ಲಿಯೇ ತಾನೂ ಮರಣಹೊಂದಿ ಮಲಗಿರುವ ನನ್ನ ಮಗನಾದ ದುರ್ಯೋಧನನನ್ನು

ನೋಡುತ್ತಿರುವ ನನ್ನ ಹೃದಯವು ನೂರು ಚೂರುಗಳಾಗಿ ಏಕೆ ಸೀಳಿಹೋಗಲಿಲ್ಲ? ಸುಂದರವಾದ ತೊಡೆಗಳನ್ನು ಹೊಂದಿರುವ ನಿಷ್ಕಳಂಕಳಾದ ನನ್ನ ಸೊಸೆಯು, ರಕ್ತದಿಂದ ತೋಯ್ದುಹೋಗಿರುವ ತನ್ನ ಮಗ ಲಕ್ಷ್ಮಣನ ಮುಖವನ್ನು ಆಘ್ರಾಣಿಸುತ್ತಿದ್ದಾಳೆ.

ಮತ್ತೊಮ್ಮೆ ನನ್ನ ಸೊಸೆಯು ತನ್ನ ಪತಿಯ ಕಡೆಗೆ ತಿರುಗಿ ದುರ್ಯೋಧನನನ್ನು ಕೈಗಳಿಂದ ಸವರುತ್ತಾಳೆ. ಮನಸ್ವಿನಿಯಾದ ಈ ನನ್ನ ಸೊಸೆಯು ಪುತ್ರನಿಗಾಗಿ ಅಳುತ್ತಾಳೆಯೇ? ಪತಿಗಾಗಿ ಅಳುತ್ತಾಳೆಯೇ? ಇಂತಹ ಸಂದಿಗ್ಧವಾದ ಸ್ಥಿತಿಯಲ್ಲಿರುವಂತೆ ಅವಳೀಗ ಕಾಣುತ್ತಿದ್ದಾಳೆ. ಮಾಧವ! ಆ ವಿಶಾಲಾಕ್ಷಿಯು ಸತ್ತುಬಿದ್ದಿರುವ ತನ್ನ ಮಗನನ್ನು ದಿಟ್ಟಿಸಿ ನೋಡಿ ದುಃಖವನ್ನು ತಡೆಯಲಾಗದೇ ಎರಡು ಕೈಗಳಿಂದಲೂ ತಲೆಯನ್ನು ಚಚ್ಚಿಕೊಳ್ಳುತ್ತಾಳೆ. ಅದರಿಂದ ವಿಮೋಹಿತಳಾದ ಇವಳು ವೀರನಾದ, ಕುರುರಾಜನಾದ ತನ್ನ ಪತಿಯ ವಕ್ಷಃಸ್ಥಳದ ಮೇಲೆ ಬೀಳುತ್ತಾಳೆ.

ಕಮಲಪುಷ್ಪದ ಕಾಂತಿಯಂತೆ–ಮನೋಹರವಾದ ಕಾಂತಿಯಿಂದ ಕೂಡಿರುವ ತಪಸ್ವಿನಿಯಾದ ನನ್ನ ಸೊಸೆಯು–ಒಮ್ಮೆ ಮಗನ ಮುಖವನ್ನೂ, ಮತ್ತೊಮ್ಮೆ ಪತಿಯ ಮುಖವನ್ನೂ ಒರೆಸಿ ಆ ಎರಡು ಮುಖ ಕಮಲಗಳ ಮಧ್ಯದಲ್ಲಿ ಪ್ರಭೆಯಿಂದ ವಿಹೀನಳಾದವಳಂತೆ ಕಾಣುತ್ತಿದ್ದಾಳೆ. ವೇದ-ಶಾಸ್ತ್ರಗಳು ಸತ್ಯವನ್ನೇ ಪ್ರತಿಪಾದಿಸುವುದಾದರೆ ದುರ್ಯೋಧನ ರಾಜನು ತನ್ನ ಬಾಹುಬಲದಿಂದ ಆರ್ಜಿಸಿದ ಅನೇಕ ಪುಣ್ಯಲೋಕಗಳನ್ನು ಹೊಂದಿದ್ದಾನೆಂಬುದು ನಿಶ್ಚಯ.”

೧೭ನೆಯ ಅಧ್ಯಾಯವು ಮುಗಿಯಿತು.

೧೮ನೆಯ ಅಧ್ಯಾಯ ಸ್ತ್ರೀವಿಲಾಪಪರ್ವ (ಮುಂದುವರಿದಿದೆ.)

## ತನ್ನ ಬೇರೆಯ ಮಕ್ಕಳನ್ನೂ ಮತ್ತು ದುಃಶಾಸನನನ್ನೂ ನೋಡಿ ಗಾಂಧಾರಿಯು ಶ್ರೀಕೃಷ್ಣನ ಮುಂದೆ ವಿಲಪಿಸಿದುದು

ಗಾಂಧಾರಿಯು ಶ್ರೀಕೃಷ್ಣನೊಡನೆ ಹೇಳುತ್ತಾಳೆ :

"ಮಾಧವ! ಪರಿಶ್ರಮವನ್ನು ಜಯಿಸಿದ್ದ (ಸ್ವಲ್ಪವಾದರೂ ಶ್ರಮವೇ ಇಲ್ಲದೇ ಯುದ್ಧಮಾಡುತ್ತಿದ್ದ) ನನ್ನ ಈ ನೂರು ಮಕ್ಕಳನ್ನು ನೋಡು. ಇವರೆಲ್ಲರೂ ಭೀಮಸೇನನ ಗದಾಪ್ರಹಾರಗಳಿಂದಲೇ ಹತರಾಗಿದ್ದಾರೆ. ಇಲ್ಲಿ ನೋಡು, ಕೃಷ್ಣ! ಇನ್ನೂ ಎಳೆಯರಾಗಿಯೇ ಇರುವ, ಯುದ್ಧದಲ್ಲಿ ಪುತ್ರರನ್ನೂ ಕಳೆದುಕೊಂಡಿರುವ ಈ ನನ್ನ ಸೊಸೆಯರು ಬಿಚ್ಚಿಹೋದ ಕೇಶರಾಶಿಯಿಂದ ಕೂಡಿದವರಾಗಿ ಪತಿಯನ್ನೂ ಪುತ್ರರನ್ನೂ ಹುಡುಕುತ್ತಾ ಎಲ್ಲ ಕಡೆಗಳಲ್ಲಿಯೂ ಓಡಾಡುತ್ತಿದ್ದಾರೆ. ಇದು ನನಗೆ ಅತ್ಯಂತದುಃಖದಾಯಕವಾಗಿದೆ. ರಾಜವೇಶ್ಮಗಳ ಒಳಭಾಗದಲ್ಲಿ, ಕಾಲಂದುಗೆ ಮೊದಲಾದ ಆಭರಣಗಳಿಂದ ಸಮಲಂಕೃತವಾದ ಕಾಲುಗಳಿಂದ ನಡೆಯುತ್ತಿದ್ದ ನನ್ನ ಈ ಸೊಸೆಯರು ಇಂದು ಆಪತ್ತಿಗೊಳಗಾಗಿ ರಕ್ತದಿಂದ ನೆನೆದಿರುವ ಭೂಮಿಯನ್ನು ಅದೇ ತಮ್ಮ ಕಾಲುಗಳಿಂದ ಸ್ಪರ್ಶಿಸುತ್ತಿದ್ದಾರೆ. ದುಃಖಾತುರರಾದ ಇವರು ಅಮಲೇರಿದ ಸ್ತ್ರೀಯರಂತೆ ತೂರಾಡಿಕೊಂಡು ರಣರಂಗದಲ್ಲಿ ಸಂಚರಿಸುತ್ತಾ, ತಮ್ಮ ಪತಿ-ಪುತ್ರರ ಶರೀರಗಳ ಬಳಿಯಲ್ಲಿರುವ ರಣಹದ್ದು, ಗುಳ್ಳೇನರಿ ಮತ್ತು ಕಾಗೆಗಳನ್ನು ಬಹಳ ಕಷ್ಟದಿಂದ ಓಡಿಸುತ್ತಿದ್ದಾರೆ. ಮುಷ್ಟಿಯ ಪರಿಮಾಣದಷ್ಟೇ ಮಧ್ಯಪ್ರದೇಶವನ್ನು ಹೊಂದಿರುವ (ತೆಳುವಾದ ಸೊಂಟಗಳಿಂದ ಕೂಡಿರುವ) ಸರ್ವಾಂಗಸುಂದರಿಯಾದ ಈ ನನ್ನ ಒಬ್ಬ ಸೊಸೆಯು ರಣರಂಗದ ಭಯಾನಕವಾದ ದೃಶ್ಯವನ್ನು ನೋಡಿ ಅತ್ಯಂತ ದುಃಖಿತಳಾಗಿ ನೆಲದ ಮೇಲೆ ಬೀಳುತ್ತಿದ್ದಾಳೆ. ಮಹಾಬಾಹುವೇ! ಶ್ರೀಕೃಷ್ಣ! ರಾಜಕುಮಾರಿಯಾದ, ಲಕ್ಷ್ಮಣನ ತಾಯಿಯಾದ, ದುರ್ಯೋಧನನ ಪತ್ನಿಯ ದುರವಸ್ಥೆಯನ್ನು ನೋಡಿ ನನ್ನ ಮನಸ್ಸು ಉದ್ವಿಗ್ನಗೊಂಡು ಎಷ್ಟೇ ಪ್ರಯತ್ನಿಸಿದರೂ ಶಾಂತವಾಗುತ್ತಲೇ ಇಲ್ಲ.

ಕೆಲವರು–ಸಹೋದರರು ಹತರಾಗಿರುವುದನ್ನೂ, ಕೆಲವರು–ಪಿತೃಗಳು ಹತರಾಗಿರುವುದನ್ನೂ, ಕೆಲವರು–ಮಕ್ಕಳು ಹತರಾಗಿರುವುದನ್ನೂ, ಕೆಲವರು–ಪತಿಗಳು ಹತರಾಗಿರುವುದನ್ನೂ ನೋಡಿ ಅವರ ನೀಳವಾದ ತೋಳುಗಳನ್ನು ಮೇಲೆತ್ತಿಕೊಂಡು ಹಾಗೆಯೇ ಕೆಳಕ್ಕೆ ಬೀಳುತ್ತಿದ್ದಾರೆ. ಅಪರಾಜಿತನೇ! ಭಯಂಕರವಾದ ಯುದ್ಧದಲ್ಲಿ ತಮ್ಮ ಬಂಧುಗಳೆಲ್ಲರನ್ನೂ ಕಳೆದುಕೊಂಡಿರುವ ಮಧ್ಯವಯಸ್ಸಿನ ಹಾಗೂ ವೃದ್ಧೆಯರಾದ ಸ್ತ್ರೀಯರ ಗೋಳನ್ನು ಕೇಳು. ಮಹಾಭುಜನೇ! ತಿರುಗಾಡಿದ ಶ್ರಮದಿಂದಲೂ ಮತ್ತು ಮೋಹದಿಂದಲೂ ಪೀಡಿತರಾಗಿರುವ ಈ ಸ್ತ್ರೀಯರು ರಥಗಳ ಆಸನಗಳನ್ನೂ, ಸತ್ತುಬಿದ್ದಿರುವ ಆನೆ-ಕುದುರೆಗಳನ್ನೂ ಆಶ್ರಯಿಸಿಕೊಂಡು ನಿಂತಿರುವುದನ್ನಾದರೂ ನೋಡು, ಕೃಷ್ಣ! ಮತ್ತೊಬ್ಬಳು ಶರೀರದಿಂದ ಪ್ರತ್ಯೇಕಗೊಳಿಸಲ್ಪಟ್ಟಿರುವ, ಸುಂದರವಾದ ಕರ್ಣಕುಂಡಲಗಳಿಂದಲೂ ಮತ್ತು ಉನ್ನತವಾದ ಮೂಗಿನಿಂದಲೂ ಸುಶೋಭಿತವಾಗಿರುವ ತನ್ನ ಬಂಧುವಿನ ಶಿರಸ್ಸನ್ನು ಹಿಡಿದುಕೊಂಡು ನಿಂತಿರುವುದನ್ನು ನೋಡು, ಮಾಧವ! ಕಳಂಕರಹಿತರಾದ ನನ್ನ ಸೊಸೆಯರೂ ಮತ್ತು ಅಲ್ಪಬುದ್ಧಿಯವಳಾದ ನಾನೂ ಹಿಂದಿನ ಜನ್ಮದಲ್ಲಿ ಅಗಾಧವಾದ ಮಹಾಪಾಪವನ್ನೇ ಮಾಡಿರುವೆವೆಂದು ಭಾವಿಸುತ್ತೇನೆ. ಆ ಮಹಾಪಾಪದ ಫಲವಾಗಿಯೇ ಧರ್ಮರಾಜನು ನಮ್ಮನ್ನು ಮಹಾವಿಪತ್ತಿನಲ್ಲಿ ಕೆಡಹಿದ್ದಾನೆ.

**ನ ಹಿ ನಾಶೋಽಸ್ತಿ ವಾರ್ಷ್ಣೇಯ ಕರ್ಮಣೋಃ ಶುಭಪಾಪಯೋಃ ॥**

ವಾರ್ಷ್ಣೇಯ! ಪಾಪ-ಪುಣ್ಯಕರ್ಮಗಳು ಅವುಗಳ ಫಲವನ್ನು ಉಪಭೋಗಿಸದಿದ್ದರೆ ಖಂಡಿತವಾಗಿಯೂ ನಾಶವಾಗತಕ್ಕುವುಗಳಲ್ಲ. (ಯಾವುದೇ ಜನ್ಮದಲ್ಲಿ ಯಾವುದೇ ಪಾಪ ಅಥವಾ ಪುಣ್ಯಕರ್ಮಗಳನ್ನು ಮಾಡಿದ್ದರೂ ಅವುಗಳ ಫಲಗಳನ್ನು ಯಥಾನುರೂಪವಾಗಿ ಅನುಭವಿಸಿಯೇ ತೀರಬೇಕಾಗುವುದು.) ಮಾಧವ! ಈ ನನ್ನ ಸೊಸೆಯರಿನ್ನೂ ಹರೆಯದವರಾಗಿದ್ದಾರೆ. ಇವರು ನೋಡಲು ಬಹಳ ಅಂದವಾದ ಮುಖಗಳನ್ನೂ, ಕುಚಗಳನ್ನೂ ಹೊಂದಿರುತ್ತಾರೆ. ಇವರೆಲ್ಲರೂ ಸತ್ಕುಲದಲ್ಲಿ ಹುಟ್ಟಿದವರು. ಲಜ್ಜಾಶೀಲರು. ಕಪ್ಪಾದ ರೆಪ್ಪೆಗಳಿಂದ ಕೂಡಿದ ಕಪ್ಪಾದ ಕಣ್ಣುಗಳುಳ್ಳವರು. ಇವರ ತಲೆಗೂದಲುಗಳೂ ಕಪ್ಪಾಗಿಯೇ ಇವೆ. ಹಂಸಪಕ್ಷಿಗಳಂತೆ ಗದ್ಗದಸ್ವರ

ದಿಂದ ಮಾತನಾಡುವ ಇಂತಹ ಸರ್ವಾಂಗಸುಂದರಿಯರಾದ ರಾಜಕುಮಾರಿಯರು ದುಃಖ ಮತ್ತು ಶೋಕಗಳಿಂದ ವಿಮೋಹಿತರಾಗಿ, ಹೆಣ್ಣುಸಾರಸ ಪಕ್ಷಿಗಳಂತೆ ರೋದನಮಾಡುತ್ತಾ ಇಲ್ಲಿ ಬಿದ್ದಿರುವುದನ್ನು ನೋಡು. ಪುಂಡರೀಕಾಕ್ಷ! ವಿಕಸಿತವಾದ ಕಮಲದ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿರುವ, ಸುಂದರವಾದ, ಕಳಂಕರಹಿತವಾದ, ಸುಂದರಿಯರ ಮುಖಗಳನ್ನು ಸೂರ್ಯನು ತನ್ನ ಪ್ರಖರರಶ್ಮಿಗಳಿಂದ ಸಂತಾಪಗೊಳಿಸುತ್ತಿದ್ದಾನೆ. ಮದಿಸಿದ ಆನೆಯಂತೆ ದರ್ಪಿಷ್ಟರಾಗಿದ್ದ, ಅಸೂಯಾಯುಕ್ತರಾದ, ತಮ್ಮ ಪತ್ನಿಯರನ್ನು ಬೇರೆಯವರು ನೋಡಬಾರದೆಂದು ಭಾವಿಸಿದ್ದ ನನ್ನ ಮಕ್ಕಳ ಪತ್ನಿಯರನ್ನಿಂದು ಸಾಮಾನ್ಯಜನರು ನೋಡುತ್ತಿದ್ದಾರೆ. ಗೋವಿಂದ! ನೂರು ಚಂದ್ರರ ಚಿಹ್ನೆಗಳಿಂದ ಕೂಡಿರುವ ನನ್ನ ಮಕ್ಕಳ ಗುರಾಣಿಗಳು, ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ ಧ್ವಜಗಳು, ಸುವರ್ಣಮಯವಾದ ಕವಚಗಳು, ಸುವರ್ಣಮಯವಾದ ನಿಷ್ಕಗಳು (ಪದಕಗಳು), ಶಿರಸ್ತ್ರಾಣಗಳು– ಇವುಗಳೆಲ್ಲವೂ ಭೂಮಿಯ ಮೇಲೆ ಬಿದ್ದಿದ್ದು ಆಜ್ಯಾಹುತಿಗಳಿಂದ ಪ್ರದೀಪ್ತವಾಗಿರುವ ಯಜ್ಞೇಶ್ವರರಂತೆ ದೇದೀಪ್ಯಮಾನವಾಗಿ ಕಾಣುತ್ತಿರುವುದನ್ನು ನೋಡು.

ಶತ್ರುಘಾತಿಯಾದ, ಶೂರನಾದ ಭೀಮಸೇನನು ನನ್ನ ಮಗನಾದ ದುಃಶಾಸನನನ್ನು ಸಂಹರಿಸಿ ಅವನ ಅಂಗಾಂಗಗಳಲ್ಲಿದ್ದ ರಕ್ತವನ್ನು ಕುಡಿದು ಕೆಳಕ್ಕೆ ಕೆಡಹಿದನು. ದುಃಶಾಸನನು ಇಲ್ಲಿ ಮಲಗಿರುವುದನ್ನು ನೋಡು, ಕೃಷ್ಣ! ದ್ಯೂತದ ಸಮಯದಲ್ಲಾದ ಕ್ಲೇಶಗಳನ್ನು ಸ್ಮರಿಸಿಕೊಂಡು ದ್ರೌಪದಿಯಿಂದ ಪ್ರೇರಿತನಾದ ಭೀಮಸೇನನು ನನ್ನ ಈ ಮಗನನ್ನು ಗದೆಯಿಂದ ಪ್ರಹರಿಸಿ ಸಂಹರಿಸಿದನು. ದುಃಶಾಸನನು ಅಣ್ಣನಾದ ದುರ್ಯೋಧನನಿಗೂ ಮತ್ತು ಕರ್ಣನಿಗೂ ಪ್ರಿಯವಾಗಲೆಂಬ ಅಪೇಕ್ಷೆಯಿಂದ ದ್ಯೂತದಲ್ಲಿ ಜಯಿಸಲ್ಪಟ್ಟಿದ್ದ ದ್ರೌಪದಿಯನ್ನು ಕುರಿತು ತುಂಬಿದ ಸಭೆಯಲ್ಲಿ ಹೀಗೆ ಹೇಳಿದನು :

**ಸಹೈವ ಸಹದೇವೇನ ನಕುಲೇನಾರ್ಜುನೇನ ಚ ।**
**ದಾಸೀಭೂತಾಸಿ ಪಾಞ್ಚಾಲಿ ಕ್ಷಿಪ್ರಂ ಪ್ರವಿಶ ನೋ ಗೃಹಾನ್ ॥**

'ಪಾಂಚಾಲಿ! ಅರ್ಜುನ-ನಕುಲ-ಸಹದೇವರೊಡನೆ ನೀನೂ ನಮ್ಮ

ದಾಸಿಯಾಗಿರುವೆ. ಆದುದರಿಂದ ನೀನೀಗಲೇ ನಮ್ಮ ಅರಮನೆಯನ್ನು ಪ್ರವೇಶಿಸು.'

ಕೃಷ್ಣ! ಅಲ್ಲಿಯೇ ಇದ್ದ ನಾನು ಒಡನೆಯೇ ದುರ್ಯೋಧನ ರಾಜನೊಡನೆ ಹೇಳಿದೆನು :

ಮೃತ್ಯುಪಾಶಪರಿಕ್ಷಿಪ್ತಂ ಶಕುನಿಂ ಪುತ್ರ ವರ್ಜಯ ।
ನಿಬೋಧೈನಂ ಸುದುರ್ಬುದ್ಧಿಂ ಮಾತುಲಂ ಕಲಹಪ್ರಿಯಮ್ ।
ಕ್ಷಿಪ್ರಮೇನಂ ಪರಿತ್ಯಜ್ಯ ಪುತ್ರ ಶಾಮ್ಯಸ್ವ ಪಾಣ್ಡವೈಃ ॥೨೪॥

ನ ಬುಧ್ಯಸೇ ತ್ವಂ ದುರ್ಬುದ್ಧೇ ಭೀಮಸೇನಮಮರ್ಷಣಮ್ ।
ವಾಙ್ನಾರಾಚೈಸ್ತುದಂಸ್ತೀಕ್ಷ್ಣೈರುಲ್ಕಾಭಿರಿವಕುಞ್ಜರಮ್ ॥೨೫॥

"ಪುತ್ರ! ಮೃತ್ಯುಪಾಶದಿಂದ ಬಂಧಿಸಲ್ಪಟ್ಟಿರುವ ಶಕುನಿಯನ್ನು ನೀನು ಈಗಲೇ ಪರಿತ್ಯಜಿಸು. ನಿನ್ನ ಸೋದರಮಾವನು ಕಲಹಪ್ರಿಯನೆಂಬುದನ್ನು ಈಗಲಾದರೂ ತಿಳಿ. ಈ ಕ್ಷಣದಲ್ಲಿಯೇ ಶಕುನಿಯನ್ನು ಪರಿತ್ಯಜಿಸಿ ಪಾಂಡವರೊಡನೆ ಸಂಧಿಮಾಡಿಕೊ. ದುರ್ಬುದ್ಧಿಯೇ! ಮಹಾಕೋಪಿಷ್ಠನಾದ ಭೀಮಸೇನನ ಸ್ವಭಾವವನ್ನು ನೀನು ತಿಳಿದವನಾಗಿಲ್ಲ. ಕೊಳ್ಳಿಗಳಿಂದ ಆನೆಯನ್ನು ತಿವಿದು ಕೆರಳಿಸುವಂತೆ–ನೀನು ಭೀಮಸೇನನನ್ನು ಮಾತುಗಳೆಂಬ ತೀಕ್ಷ್ಣವಾದ ಬಾಣಗಳಿಂದ ಚುಚ್ಚುತ್ತಿರುವೆ. (ಇದರಿಂದ ನಿನಗೆ ಬಹಳ ಕೆಟ್ಟದಾಗುತ್ತದೆ.)"

ಕೃಷ್ಣ! ನನ್ನ ಮಗನನ್ನು ಕುರಿತು ನಾನು ಏಕಾಂತದಲ್ಲಿ ಹೀಗೆ ಹೇಳಿದೆನು. (ಆದರೆ ಅವನು ನಾನು ಹೇಳಿದಂತೆ ನಡೆದುಕೊಳ್ಳಲಿಲ್ಲ.) ಇಂತಹ ಚುಚ್ಚುಮಾತುಗಳನ್ನಾಡಿದ ಕುರುರಾಜಪುತ್ರರನ್ನು ಗಮನದಲ್ಲಿಟ್ಟು ಕೊಂಡು–ಕೋಪವನ್ನಡಗಿಸಿಕೊಂಡಿದ್ದ ಭೀಮಸೇನನು–ಸರ್ಪವು ಗೂಳಿಗಳನ್ನು ಕಚ್ಚಿ ಅವುಗಳಲ್ಲಿ ವಿಷವನ್ನು ಪ್ರವಹಿಸುವಂತೆ–ನನ್ನ ಮಕ್ಕಳ ಮೇಲೆ ಕ್ರೋಧವಿಷವನ್ನು ಸುರಿಸಿದನು. ಸಿಂಹದಿಂದ ಹತವಾದ ಮಹಾಗಜದಂತೆ–ಭೀಮಸೇನನಿಂದ ಹತನಾದ ದುಃಶಾಸನನು ಸುದೀರ್ಘವಾದ ತನ್ನೆರಡು ಭುಜಗಳನ್ನು ಚಾಚಿಕೊಂಡು ಇಲ್ಲಿ ಮಲಗಿದ್ದಾನೆ.

**ಅತ್ಯರ್ಥಮಕರೋದ್ರೌದ್ರಂ ಭೀಮಸೇನೋಽತ್ಯಮರ್ಷಣಃ ।**
**ದುಃಶಾಸನಸ್ಯ ಯತ್ಕ್ರುದ್ಧೋಽಪಿಬಚ್ಛೋಣಿತಮಾಹವೇ ॥೨೮॥**

ಅತ್ಯಂತಾಸಹನಶೀಲನಾದ ಭೀಮಸೇನನು ಯುದ್ಧದಲ್ಲಿ ಪರಮಕ್ರುದ್ಧನಾಗಿ ದುಃಶಾಸನನ ರಕ್ತವನ್ನು ಹೀರಿ ಅತಿಭಯಂಕರವಾದ ಕಾರ್ಯವನ್ನೇ ಮಾಡಿಬಿಟ್ಟನು."

೧೮ನೆಯ ಅಧ್ಯಾಯವು ಮುಗಿಯಿತು.

೧೯ನೆಯ ಅಧ್ಯಾಯ ಸ್ತ್ರೀವಿಲಾಪಪರ್ವ (ಮುಂದುವರಿದಿದೆ.)

## ವಿಕರ್ಣ, ದುರ್ಮುಖ, ಚಿತ್ರಸೇನ, ವಿವಿಂಶತಿ ಮತ್ತು ದುಃಸಹರನ್ನು ರಣರಂಗದಲ್ಲಿ ನೋಡಿ ಗಾಂಧಾರಿಯು ಶ್ರೀಕೃಷ್ಣನ ಮುಂದೆ ವಿಲಪಿಸಿದುದು

ಗಾಂಧಾರಿಯು ಶ್ರೀಕೃಷ್ಣನೊಡನೆ ಹೇಳುತ್ತಾಳೆ :

"ಮಾಧವ! ಇಲ್ಲಿ ಕಾಣುತ್ತಿರುವ ನನ್ನ ಮಗನಾದ ವಿಕರ್ಣನು ಪ್ರಾಜ್ಞಸಮ್ಮತನಾಗಿದ್ದನು. (ಪ್ರಾಜ್ಞರಾದವರೂ ಇವನನ್ನು ಗೌರವಿಸುತ್ತಿದ್ದರು.) ಇವನೂ ಭೀಮಸೇನನಿಂದ ನೂರಾರು ತುಂಡುಗಳಾಗಿ ಛಿದ್ರ-ಛಿದ್ರವಾಗಿ ಮಾಡಲ್ಪಟ್ಟು ಅಸುನೀಗಿ ಈ ಭೂಮಿಯಲ್ಲಿ ಮಲಗಿದ್ದಾನೆ. ಶರತ್ಕಾಲದಲ್ಲಿ ಕಪ್ಪುಮೋಡಗಳಿಂದ ಮುಚ್ಚಲ್ಪಟ್ಟ ಚಂದ್ರನಂತೆ–ನನ್ನ ಮತ್ತೊಬ್ಬ ಮಗನಾದ ಈ ವಿಕರ್ಣನು ಭೀಮಸೇನನಿಂದ ಹತನಾಗಿ ಆನೆಗಳ ಮಧ್ಯದಲ್ಲಿ ಮಲಗಿದ್ದಾನೆ. ಇವನು ಪುನಃ-ಪುನಃ ಧನುಸ್ಸನ್ನು ಹಿಡಿಯುತ್ತಿದ್ದುದರಿಂದಲೇ ಇವನ ಹಸ್ತವು ಜಡ್ಡುಗಟ್ಟಿಹೋಗಿದೆ. ಮೇಲಾಗಿ ಇವನು ಕೈಚೀಲವನ್ನೂ ಧರಿಸಿರುತ್ತಾನೆ. ಆದರೂ ಇವನ ಹಸ್ತವನ್ನು ತಿನ್ನುವ ಇಚ್ಛೆಯಿಂದ ಈ ರಣಹದ್ದುಗಳು ಹೇಗೋ ಮಾಡಿ ಕೈಯ್ಯನ್ನು ಕುಕ್ಕುತ್ತಿವೆ. ಇವನ ಶರೀರದ ಮಾಂಸವನ್ನು ಭಕ್ಷಿಸಲಿಚ್ಛಿಸಿ ಸುತ್ತಲೂ ಕುಳಿತಿರುವ ರಣಹದ್ದುಗಳನ್ನೂ ಕಾಗೆಗಳನ್ನೂ ಓಡಿಸಲು ತಪಸ್ವಿನಿಯಾದ, ಬಾಲೆಯಾದ ಇವನ ಪತ್ನಿಯು ಸರ್ವದಾ ಪ್ರಯತ್ನಿಸುತ್ತಲೇ ಇದ್ದಾಳೆ. ಆದರೆ ಅವುಗಳನ್ನು ಓಡಿಸಲು ಅವಳಿಗೆ ಸಾಧ್ಯವಾಗುತ್ತಿಲ್ಲ. ಮಾಧವ! ವಿಕರ್ಣನು

ನವಯುವಕನು. ದೇವತೆಗಳಂತೆ ಕಾಂತಿಯುಕ್ತನಾಗಿರತಕ್ಕವನು. ಮಹಾ ಶೂರನು. ಸುಖದಿಂದಲೇ ಬೆಳೆದವನು. ಸುಖದಿಂದಿರಲು ಯೋಗ್ಯನಾದ ವನು. ಅಂತಹವನೂ ಈ ರಣಭೂಮಿಯ ಧೂಳಿನಲ್ಲಿ ಗತಪ್ರಾಣನಾಗಿ ಮಲಗಿದ್ದಾನೆ. ಯುದ್ಧದಲ್ಲಿ ಶತ್ರುಗಳು ಪ್ರಯೋಗಿಸಿದ ಕರ್ಣಿ-ನಾಲೀಕ-ನಾರಾಚಗಳಿಂದ ಅವನ ಮರ್ಮಸ್ಥಳಗಳೆಲ್ಲವೂ ಗಾಯಗೊಂಡಿವೆ. ಹಾಗಿದ್ದರೂ ಭರತಶ್ರೇಷ್ಠನಾದ ಇವನನ್ನು ಲಕ್ಷ್ಮಿಯು (ಶರೀರಕಾಂತಿಯು) ಪರಿತ್ಯಜಿಸಿಲ್ಲ. ಶತ್ರುಗಳ ಸಮೂಹಗಳನ್ನು ಯುದ್ಧದಲ್ಲಿ ಸಂಹರಿಸುತ್ತಿದ್ದ ಈ ದುರ್ಮುಖನು ಸಂಗ್ರಾಮಶೂರನಾದ, ಪ್ರತಿಜ್ಞಾಪಾಲಕನಾದ ಭೀಮ ಸೇನನಿಂದ ಹತನಾಗಿ ರಣಭೂಮಿಯಲ್ಲಿ ಅಂಗಾತನಾಗಿ ಮಲಗಿದ್ದಾನೆ. ಇವನ ಮುಖವು ಹಿಂಸ್ರಪ್ರಾಣಿಗಳಿಂದ ಅರ್ಧಭಾಗ ತಿನ್ನಲ್ಪಟ್ಟು ಸಪ್ತಮಿಯ ಚಂದ್ರನಂತೆ ಸುಶೋಭಿತವಾಗಿದೆ. ಕೃಷ್ಣ! ಶೂರನಾದ ಈ ನನ್ನ ಮಗನ ಮುಖವು ಎಷ್ಟು ತೇಜೋಮಯವಾಗಿದೆಯೆಂಬುದನ್ನಾದರೂ ನೋಡು. ಇವನು ಶತ್ರುಗಳಿಂದ ಹೇಗೆ ಹತನಾದನೆಂಬುದೇ ತಿಳಿಯದಾಗಿದೆ. ಅಂತಹವನು ಈಗ ಇಲ್ಲಿ ಮಲಗಿ ಮಣ್ಣುಮುಕ್ಕುತ್ತಿದ್ದಾನೆ. (ಮುಖವೆಲ್ಲವೂ ಧೂಳಿನಿಂದ ಆಚ್ಛಾದಿತವಾಗಿದೆ.) ಸೌಮ್ಯನೇ! ಈ ದುರ್ಮುಖನ ಮುಂದೆ ನಿಂತು ಯುದ್ಧಮಾಡುವವರು ಯಾರೂ ಇರಲಿಲ್ಲ. ಇವನು ದೇವಲೋಕವನ್ನೂ ಜಯಿಸುವ ಸಾಮರ್ಥ್ಯವನ್ನು ಹೊಂದಿದ್ದನು. ಇಂತಹ ಮಹಾಪರಾಕ್ರಮಿಯು ಶತ್ರುಗಳಿಂದ ಹೇಗೆ ಹತನಾದನು?

ಧನುಷ್ಮಂತರಿಗೆ ಆದರ್ಶಪ್ರಾಯನಾಗಿದ್ದ, ಧೃತರಾಷ್ಟ್ರನ ಮಗನಾದ ಈ ಚಿತ್ರಸೇನನು ಭೀಮಸೇನನಿಂದ ಹತನಾಗಿ ಈ ರಣಭೂಮಿಯಲ್ಲಿ ಮಲಗಿರುವುದನ್ನು ನೋಡು, ಕೃಷ್ಣ! ಚಿತ್ರತರವಾದ ಮಾಲೆಗಳನ್ನೂ ಮತ್ತು ಆಭರಣಗಳನ್ನೂ ಧರಿಸಿರುವ ಈ ಚಿತ್ರಸೇನನನ್ನು ಶೋಕಪೀಡಿತರಾದ ಯುವತಿಯರು ರೋದನಮಾಡುತ್ತಾ ಮಾಂಸಾಶಿಗಳಾದ ಪ್ರಾಣಿಗಳೊಡನೆ ನೋಡುತ್ತಿದ್ದಾರೆ. ಸ್ತ್ರೀಯರ ರೋದನಶಬ್ದವೂ ಮಾಂಸಾಶಿಗಳಾದ ಪ್ರಾಣಿ ಗಳ ಗರ್ಜನೆಯೂ ಕೇಳಿಬರುತ್ತಿದ್ದು ಅದ್ಭುತವಾದ ಈ ದೃಶ್ಯವು ನನಗೆ ವಿಚಿತ್ರ ವಾಗಿ ಕಾಣುತ್ತಿದೆ. ದೇವಸದೃಶನಾದ, ನವಯುವಕನಾದ, ಶ್ರೇಷ್ಠರಾದ ಸ್ತ್ರೀಯ ರಿಂದ ಸೇವಿಸಲ್ಪಡುತ್ತಿದ್ದ ಈ ವಿವಿಂಶತಿಯು ವಿಧ್ವಸ್ತನಾಗಿ ಧೂಳಿನಲ್ಲಿ ಮಲಗಿ

ದ್ದಾನೆ. ಬಾಣದಿಂದ ಕತ್ತರಿಸಲ್ಪಟ್ಟ ಕವಚದಿಂದ ಕೂಡಿರುವ, ವೀರನಾದ ಮತ್ತು ಯುದ್ಧದಲ್ಲಿ ಹತನಾದ ವಿವಿಂಶತಿಯನ್ನು ಸುತ್ತುವರಿದು ರಣಹದ್ದುಗಳು ಕುಳಿತಿರುವುದನ್ನು ನೋಡು, ಕೃಷ್ಣ! ಶೂರನಾದ ವಿವಿಂಶತಿಯು ರಣೋತ್ಸಾಹದಿಂದ ಪಾಂಡವರ ಸೈನ್ಯದೊಳಗೆ ನುಗ್ಗಿ ಕೆಚ್ಚೆದೆಯಿಂದ ಕಾದಾಡಿ, ಕಡೆಗೆ ಭೀಮಸೇನನಿಂದಲೇ ಹತನಾಗಿ ಸತ್ಪುರುಷೋಚಿತವಾದ ವೀರಶಯ್ಯೆಯಲ್ಲಿಂದು ಮಲಗಿದ್ದಾನೆ. ಕೃಷ್ಣ! ಮಂದಸ್ಮಿತದಿಂದ ಕೂಡಿರುವ, ಸುಂದರವಾದ ಮೂಗಿನಿಂದಲೂ ಮತ್ತು ಸುಂದರವಾದ ಹುಬ್ಬುಗಳಿಂದಲೂ ಕೂಡಿದ್ದು ತಾರಾಧಿಪನಾದ ಚಂದ್ರನಂತೆಯೇ ಇರುವ, ಅತ್ಯಂತ ಶುಭ್ರವಾಗಿರುವ ಈ ವಿವಿಂಶತಿಯ ಮುಖವನ್ನು ನೋಡು. ವಿಹರಿಸುತ್ತಿರುವ ಗಂಧರ್ವನನ್ನು ಸಾವಿರಾರು ದೇವಕನ್ಯೆಯರು ಸಂಸೇವಿಸುವಂತೆ–ಇಲ್ಲಿ ಮಲಗಿರುವ ವಿವಿಂಶತಿಯನ್ನು ಸುತ್ತುವರಿದು ಅನೇಕ ಸುಂದರಸ್ತ್ರೀಯರು ಕುಳಿತಿದ್ದಾರೆ. ಆಹವಶೋಭಿಯಾದ, ಶತ್ರುಸೈನ್ಯಹಂತಕನಾದ, ಶತ್ರುಸೂದನನಾದ ದುಃಸಹನನ್ನು ಹಿಂದೆ ಯಾರು ತಾನೇ ಎದುರಿಸಿ ನಿಲ್ಲುತ್ತಿದ್ದರು? (ಇವನನ್ನು ಎದುರಿಸಿ ಯುದ್ಧಮಾಡಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ.) ತನ್ನ ಮೇಲೆ ಬೆಳೆದಿರುವ ಬೆಟ್ಟಗಣಿಗಲೇ ಗಿಡಗಳ ಹೂಗಳಿಂದ ಪರ್ವತವು ಶೋಭಾಯಮಾನವಾಗಿ ಕಾಣುವಂತೆ–ಬಾಣ ಗಳಿಂದ ವ್ಯಾಪ್ತವಾಗಿರುವ ದುಃಸಹನ ಈ ಶರೀರವು ಬಹಳವಾಗಿ ಪ್ರಕಾಶಿಸುತ್ತಿದೆ. ಶ್ವೇತಪರ್ವತವು ಅಗ್ನಿಸಂಯೋಗದಿಂದ ಶೋಭಾಯಮಾನ ವಾಗಿ ಕಾಣುವಂತೆ–ದುಃಸಹನು ಪ್ರಾಣರಹಿತನೇ ಆಗಿದ್ದರೂ ಇವನು ಹಾಕಿಕೊಂಡಿರುವ ಸುವರ್ಣಮಯವಾದ ಮಾಲೆಯಿಂದಲೂ ಕಾಂತಿಯುಕ್ತವಾದ ಕವಚದಿಂದಲೂ ಬಹಳವಾಗಿ ಪ್ರಕಾಶಿಸುತ್ತಿದ್ದಾನೆ."

೧೯ನೆಯ ಅಧ್ಯಾಯವು ಮುಗಿಯಿತು.

೨೦ನೆಯ ಅಧ್ಯಾಯ ಸ್ತ್ರೀವಿಲಾಪಪರ್ವ (ಮುಂದುವರಿದಿದೆ.)

## ಉತ್ತರೆಯ ಮತ್ತು ವಿರಾಟಕುಲದ ಸ್ತ್ರೀಯರ ಶೋಕವನ್ನು ಗಾಂಧಾರಿಯು ಶ್ರೀಕೃಷ್ಣನಿಗೆ ವಿವರಿಸಿದುದು

ಗಾಂಧಾರಿಯು ಶ್ರೀಕೃಷ್ಣನಿಗೆ ಹೇಳುತ್ತಾಳೆ :

**ಅಧ್ಯರ್ಧಗುಣಮಾಹುರ್ಯಂ ಬಲೇ ಶೌರ್ಯೇ ಚ ಕೇಶವ ।**
**ಪಿತ್ರಾ ತ್ವಯಾ ಚ ದಾಶಾರ್ಹ ದೃಪ್ತಂ ಸಿಂಹಮಿವೋತ್ಕಟಮ್ ॥೧॥**

**ಯೋ ಬಿಭೇದ ಚಮೂಮೇಕೋ ಮಮ ಪುತ್ರಸ್ಯ ದುರ್ಭಿದಾಮ್ ।**
**ಸ ಭೂತ್ವಾ ಮೃತ್ಯುರನ್ಯೇಷಾಂ ಸ್ವಯಂ ಮೃತ್ಯುವಶಂ ಗತಃ ॥೨॥**

"ದಶಾರ್ಹನಂದನ! ಕೇಶವ! ಬಲದಲ್ಲಿಯೂ ಮತ್ತು ಶೌರ್ಯದಲ್ಲಿಯೂ ಅಭಿಮನ್ಯುವನ್ನು ನಿನ್ನ ಮತ್ತು ಪಾರ್ಥನ ಒಂದೂವರೆಯಷ್ಟು ಗುಣವುಳ್ಳವನೆಂದು ಹೇಳುತ್ತಾರೆ. (ನಿನ್ನಲ್ಲಿ ಮತ್ತು ಪಾರ್ಥನಲ್ಲಿರುವ ಪರಾಕ್ರಮದ ಒಂದೂವರೆಯಷ್ಟು ಪರಾಕ್ರಮವು ಅಭಿಮನ್ಯುವಿನಲ್ಲಿತ್ತೆಂದು ಹೇಳುತ್ತಾರೆ.) ಅಭಿಮನ್ಯುವು ಬಲದಿಂದ ದೃಪ್ತನಾಗಿದ್ದನು. ಪ್ರಚಂಡ ಸಿಂಹದಂತೆ ಅಭಿಮಾನಿಯಾಗಿದ್ದನು. ಯಾರಿಂದಲೂ ಭೇದಿಸಲು ಅಸಾಧ್ಯವಾಗಿದ್ದ ನನ್ನ ಮಗನ ವ್ಯೂಹವನ್ನು ಅವನೊಬ್ಬನೇ ಭೇದಿಸಿಬಿಟ್ಟನು. ಆ ಸಮಯದಲ್ಲಿ ಅವನು ಎಲ್ಲರಿಗೂ ಮೃತ್ಯುಪ್ರಾಯನಾಗಿದ್ದನು. ಅಂತಹವನೂ ಈ ಮಹಾಯುದ್ಧದಲ್ಲಿ ಮೃತ್ಯುವಶನಾದನು. ಕೃಷ್ಣ! ಯದ್ಯಪಿ ಹತನಾಗಿದ್ದರೂ ಅರ್ಜುನನ ಮಗನಾದ, ಮಹಾತೇಜಸ್ವಿಯಾದ ಅಭಿಮನ್ಯುವಿನ ಮುಖದ ಕಾಂತಿಯು ಸ್ವಲ್ಪವಾದರೂ ಕುಂದದೇ ಇರುವುದನ್ನು ನಾನು ಕಾಣುತ್ತಿದ್ದೇನೆ. ಅರ್ಜುನನ ಸೊಸೆಯಾದ, ವಿರಾಟರಾಜನ ಪುತ್ರಿಯಾದ, ಸಾಧ್ವಿಯಾದ ಉತ್ತರೆಯು ತನ್ನ ಬಾಲಪತಿಯಾದ, ವೀರನಾದ ಅಭಿಮನ್ಯುವನ್ನು ನೋಡಿ ಆರ್ತಳಾಗಿ ಶೋಕಿಸುತ್ತಿದ್ದಾಳೆ. ವಿರಾಟರಾಜನ ಪುತ್ರಿಯಾದ, ಅಭಿಮನ್ಯುವಿನ ಭಾರ್ಯೆಯಾದ ಈ ಉತ್ತರೆಯು, ಪತಿಯ ಸಮೀಪಕ್ಕೆ ಹೋಗಿ ತನ್ನ ಕೈಯಿಂದ ಅವನ ಶರೀರವನ್ನು ನೇವರಿಸುತ್ತಿದ್ದಾಳೆ. ವಿಕಸಿತವಾದ ಕಮಲದಂತೆ ಕಾಂತಿಯುಕ್ತನಾಗಿದ್ದ, ಶಂಖದಂತೆಯೂ ಮತ್ತು ದುಂಡಾಗಿಯೂ ಇದ್ದ ಕಂಠದಿಂದ ಕೂಡಿದ್ದ ಅಭಿಮನ್ಯುವಿನ ಮುಖವನ್ನು–ಮನಸ್ವಿನಿಯಾದ, ಕಮನೀಯರೂಪ-ಸೌಂದರ್ಯಗಳಿಂದ ಸುಶೋಭಿತಳಾದ ಉತ್ತರೆಯು ಆಘ್ರಾಣಿಸಿ ಆಲಿಂಗಿಸಿಕೊಳ್ಳುತ್ತಿದ್ದಾಳೆ. ಹಿಂದೆ ಈ ಉತ್ತರೆಯು ಮಧುಪಾನದಿಂದ ಉನ್ಮತ್ತಳಾಗಿ ಲಜ್ಜೆಯಿಂದ ಅಭಿಮನ್ಯುವನ್ನು ಆಲಿಂಗನೆಮಾಡಿಕೊಳ್ಳುತ್ತಿದ್ದಳು. ಕೃಷ್ಣ!

ಉತ್ತರೆಯು ರಕ್ತದಿಂದ ಅಂಟಿಕೊಂಡಿದ್ದ ಸುವರ್ಣಮಯವಾದ ಅಭಿಮನ್ಯುವಿನ ಕವಚವನ್ನು ಬಿಚ್ಚಿ ಅವನ ಶರೀರವನ್ನು ವೀಕ್ಷಿಸುತ್ತಿದ್ದಾಳೆ. ಈ ಬಾಲೆಯು ಪತಿಯ ಶರೀರವನ್ನು ನಖ-ಶಿಖಾಂತವಾಗಿ ನೋಡುತ್ತಾ ನಿನ್ನನ್ನು ಸಂಬೋಧಿಸಿ ಹೇಳುತ್ತಿದ್ದಾಳೆ :

**ಅಯಂ ತೇ ಪುಂಡರೀಕಾಕ್ಷ ಸದೃಶಾಕ್ಷೋ ನಿಪಾತಿತಃ ।।೯।।**

'ಕಮಲನಯನನೇ! ನಿನ್ನಂತೆಯೇ ಕಮಲಾಕ್ಷನಾದ ಈ ನಿನ್ನ ಸೋದರಳಿಯನು ಯುದ್ಧದಲ್ಲಿ ಹತನಾಗಿ ಕೆಳಕ್ಕೆ ಬೀಳಿಸಲ್ಪಟ್ಟಿದ್ದಾನೆ.

**ಬಲೇ ವೀರ್ಯೇ ಚ ಸದೃಶಸ್ತೇಜಸಾ ಚೈವ ತೇಽನಘ ।**
**ರೂಪೇಣ ಚ ತಥಾತ್ಯರ್ಥಂ ಶೇತೇ ಭುವಿ ನಿಪಾತಿತಃ ।।೧೦।।**

ಅನಘನೇ! ಬಲ-ವೀರ್ಯ-ತೇಜಸ್ಸುಗಳಿಂದಲೂ ಮತ್ತು ರೂಪದಿಂದಲೂ ಈ ನನ್ನ ಪತಿಯು ಸರ್ವಥಾ ನಿನ್ನಂತೆಯೇ ಇದ್ದಾನೆ. ಇಂತಹವನು ಯುದ್ಧದಲ್ಲಿ ಶತ್ರುಗಳಿಂದ ಹತನಾಗಿ ನೆಲದ ಮೇಲೆ ಬೀಳಿಸಲ್ಪಟ್ಟಿದ್ದಾನೆ."

ಕೃಷ್ಣ! ನಿನ್ನನ್ನು ಉದ್ದೇಶಿಸಿ ಹೀಗೆ ಹೇಳಿದ ಉತ್ತರೆಯು ಈಗ ತನ್ನ ಪತಿಯನ್ನೇ ಸಂಬೋಧಿಸಿ ಮಾತನಾಡುತ್ತಿದ್ದಾಳೆ.

'ಪ್ರಿಯತಮನೇ! ಸರ್ವದಾ ಬಹಳ ಮೃದುವಾದ ರಂಕುಮೃಗದ ಚರ್ಮದ ಮೇಲೆ ಮಲಗುತ್ತಿದ್ದ, ಅತ್ಯಂತಸುಕುಮಾರನಾದ ನಿನ್ನ ಶರೀರವೀಗ ಕಠಿನವಾದ ನೆಲದ ಮೇಲೆ ಬಿದ್ದು ಹೆಚ್ಚು ತೊಂದರೆಪಡುತ್ತಿದೆಯಲ್ಲವೇ?

ಮೌರ್ವಿಯ ಸತತವಾದ ಆಕರ್ಷಣದಿಂದ ಜಡ್ಡುಗಟ್ಟಿದ ಚರ್ಮದಿಂದ ಯುಕ್ತವಾಗಿರುವ, ಸುವರ್ಣಮಯವಾಗಿರುವ ಆಭರಣಗಳನ್ನು ಧರಿಸಿರುವ, ಆನೆಯ ಸೊಂಡಿಲಿಗೆ ಸಮಾನವಾದ ಭುಜಗಳನ್ನು ಪಕ್ಕದಲ್ಲಿಯೇ ಇಟ್ಟು ಕೊಂಡು ಮಲಗಿರುವೆ. ಪತಿದೇವ! ನಿಶ್ಚಯವಾಗಿಯೂ ನೀನು ಬಹಳ ಶ್ರಮವಹಿಸಿ ಯುದ್ಧಮಾಡಿ ದಣಿವಾರಿಸಿಕೊಳ್ಳಲೋ ಎಂಬಂತೆ ಸುಖವಾಗಿ ಮಲಗಿರುವೆ. ಈ ಕಾರಣದಿಂದಲೇ ನೀನು, ಅಳುತ್ತಿರುವ ಮತ್ತು ಬಹಳ ದುಃಖಿತೆಯಾಗಿರುವ ನನ್ನೊಡನೆ ಮಾತನಾಡುತ್ತಿಲ್ಲ. ಈ ಕಾರಣವಲ್ಲದೇ

ಬೇರೆ ಯಾವ ಕಾರಣವೂ ಇರಲಾರದು. ಏಕೆಂದರೆ : ನೀನು ನನ್ನೊಡನೆ ಮಾತನಾಡದಿರಲು ನಾನು ನಿನಗೆ ಯಾವ ವಿಧವಾದ ಅಪರಾಧವನ್ನು ಮಾಡಿದ ಸ್ಮರಣೆಯೂ ನನಗಿರುವುದಿಲ್ಲ. ಆದರೆ ನೀನು ಹಿಂದೆ ನನ್ನನ್ನು ಬಹಳ ದೂರದಲ್ಲಿಯೇ ಕಂಡರೂ ನನ್ನೊಡನೆ ಅತ್ಯಾದರದಿಂದ ಮಾತನಾಡುತ್ತಿದ್ದೆಯಲ್ಲವೇ?

**ಆರ್ಯಾಮಾರ್ಯ ಸುಭದ್ರಾಂ ತ್ವಮಿಮಾಂಶ್ಚ ತ್ರಿದಶೋಪಮಾನ್ ।**
**ಪಿತೃನ್ಮಾಂ ಚೈವ ದುಃಖಾರ್ತಾಂ ವಿಹಾಯ ಕ್ವ ಗಮಿಷ್ಯಸಿ ॥೧೫॥**

ಆರ್ಯ! ಆರ್ಯೆಯಾದ ಸುಭದ್ರೆಯನ್ನೂ, ದೇವೋಪಮರಾದ ಈ ನಿನ್ನ ಪಿತೃಗಳನ್ನೂ, ದುಃಖಪೀಡಿತಳಾದ ನನ್ನನ್ನೂ ಬಿಟ್ಟು ನೀನೆಲ್ಲಿಗೆ ಹೋಗುವೆ?'

ಗಾಂಧಾರಿಯು ಶ್ರೀಕೃಷ್ಣನೊಡನೆ ಹೇಳುತ್ತಾಳೆ :

"ಅಲ್ಲಿ ನೋಡು, ಕೃಷ್ಣ! ಉತ್ತರೆಯು ಅಭಿಮನ್ಯುವಿನ ತಲೆಯನ್ನು ತನ್ನ ತೊಡೆಗಳ ಮೇಲಿಟ್ಟುಕೊಂಡು ಅವನ ಮುಖದ ಮೇಲೆ ಅಂಟಿಕೊಂಡಿರುವ ರಕ್ತಸಿಕ್ತವಾದ ತಲೆಗೂದಲುಗಳನ್ನು ಮೆಲ್ಲಗೆ ಬಿಡಿಸುತ್ತಾ ಅವನಿನ್ನೂ ಜೀವಂತನಾಗಿರುವನೆಂದೇ ಭಾವಿಸಿ ಅಭಿಮನ್ಯುವನ್ನು ಪ್ರಶ್ನಿಸುತ್ತಿದ್ದಾಳೆ.

**ಸ್ವಸ್ರೀಯಂ ವಾಸುದೇವಸ್ಯ ಪುತ್ರಂ ಗಾಣ್ಡೀವಧನ್ವನಃ ।**
**ಕಥಂ ತ್ವಾಂ ರಣಮಧ್ಯಸ್ಥಂ ಜಘ್ನುರೇತೇ ಮಹಾರಥಾಃ ॥೧೭॥**

'ಪತಿದೇವ! ನೀನೇನು ಸಾಮಾನ್ಯನಲ್ಲ. ವಾಸುದೇವನ ಸೋದರಳಿಯನು. ಗಾಂಡೀವಧನ್ವನಾದ ಅರ್ಜುನನ ಪುತ್ರನು. ರಣರಂಗದ ಮಧ್ಯ ಭಾಗದಲ್ಲಿದ್ದ ಅಂತಹ ನಿನ್ನನ್ನು ಈ ಮಹಾರಥರು ಹೇಗೆ ಸಂಹರಿಸಿದರು?

**ಧಿಗಸ್ತು ಕ್ರೂರಕರ್ತ್ಯೄಸ್ತಾನ್ಕೃಪಕರ್ಣಜಯದ್ರಥಾನ್ ।**
**ದ್ರೋಣದ್ರೌಣಾಯನೀ ಚೋಭೌ ಯೈರಹಂ ವಿಧವಾ ಕೃತಾ ॥೧೮॥**

ನಾನು ಯಾರಿಂದ ವಿಧವೆಯಾಗಿ ಮಾಡಲ್ಪಟ್ಟೆನೋ–ಅಂತಹ ಕ್ರೂರಕರ್ಮಿಗಳಾದ ಕೃಪ-ಕರ್ಣ-ಜಯದ್ರಥ-ದ್ರೋಣ-ದ್ರೌಣಿ ಇವರೆಲ್ಲರಿಗೂ ಧಿಕ್ಕಾರವಿರಲಿ.

**ರಥರ್ಷಭಾಣಾಂ ಸರ್ವೇಷಾಂ ಕಥಮಾಸಿತ್ತದಾ ಮನಃ ।**
**ಬಾಲಂ ತ್ವಾಂ ಪರಿವಾರ್ಯೈಕಂ ಮಮ ದುಃಖಾಯ ಜಘ್ನುಷಾಮ್ ॥೧೯॥**

ಸುದುರ್ಗಮವಾಗಿದ್ದ ವ್ಯೂಹದೊಳಗೆ ಪ್ರವೇಶಿಸಿ ಏಕಾಕಿಯಾಗಿ ಯುದ್ಧಮಾಡುತ್ತಿದ್ದ ಬಾಲಕನನ್ನು–ನನಗೆ ದುಃಖವನ್ನುಂಟುಮಾಡುವ ಸಲುವಾಗಿಯೇ–ಸಂಹರಿಸಿದ ಆ ಎಲ್ಲ ರಥಶ್ರೇಷ್ಠರ ಮನಸ್ಸು ಆ ಸಮಯದಲ್ಲಿ ಹೇಗಿದ್ದಿತು? (ಕಲ್ಲಾಗಿ ಬಿಟ್ಟಿದ್ದಿತೇ? ಅವರ ಮನಸ್ಸಿನಲ್ಲಿ ಕರುಣೆಯೆಂಬುದೇ ಇರಲಿಲ್ಲವೇ? )

**ಕಥಂ ನು ಪಾಣ್ಡವಾನಾಂ ಚ ಪಞ್ಚಾಲಾನಾಂ ತು ಪಶ್ಯತಾಮ್ ।**
**ತ್ವಂ ವೀರ ನಿಧನಂ ಪ್ರಾಪ್ತೋ ನಾಥವಾನ್ಸನ್ನನಾಥವತ್ ॥೨೦॥**

ವೀರನೇ! ಮಹಾ-ಮಹಾಶೂರರನ್ನೇ ನೀನು ನಾಥರನ್ನಾಗಿ ಹೊಂದಿದ್ದರೂ ಕೇವಲ ಅನಾಥನಂತೆ–ಹೇಳುವವರು ಕೇಳುವವರೇ ಇಲ್ಲದವನಂತೆ ಪಾಂಡವ-ಪಾಂಚಾಲರ ಸಮಕ್ಷದಲ್ಲಿಯೇ ಹೇಗೆ ನಿಧನಹೊಂದಿದೆ?

ಯುದ್ಧದಲ್ಲಿ ಅನೇಕವೀರರಿಂದ ಸುತ್ತುವರಿಯಲ್ಪಟ್ಟು ಅವರಿಂದ ಹತನಾದ ನಿನ್ನನ್ನು ನೋಡಿ ವೀರನಾದ, ಪುರುಷಸಿಂಹನಾದ, ನಿನ್ನ ತಂದೆಯಾದ ಅರ್ಜುನನು ಹೇಗೆತಾನೇ ಜೀವಿಸಿರುತ್ತಾನೆ?

ಪುಂಡರೀಕಾಕ್ಷನೇ! ವಿಶಾಲವಾದ ಈ ರಾಜ್ಯಲಾಭವಾಗಲೀ ಶತ್ರುಗಳನ್ನು ಪರಾಭವಗೊಳಿಸಿದ್ದಾಗಲೀ–ನಿನ್ನ ವಿಯೋಗವನ್ನು ಹೊಂದಿರುವ ಪಾರ್ಥರಿಗೆ ಸಂತೋಷವನ್ನುಂಟುಮಾಡುವುದಾಗಿಲ್ಲ. ಆರ್ಯಪುತ್ರ! ನೀನು ಶಸ್ತ್ರದ ಮೂಲಕವಾಗಿ ಜಯಿಸಿರುವ ಲೋಕಗಳನ್ನು ನಾನು ಧರ್ಮದಿಂದಲೂ ಮತ್ತು ಇಂದ್ರಿಯಸಂಯಮದಿಂದಲೂ ಪಡೆದುಕೊಂಡು ಶೀಘ್ರವಾಗಿ ನಿನ್ನನ್ನೇ ಅನುಸರಿಸಿ ಬರುತ್ತೇನೆ. ಅಲ್ಲಿ ನನ್ನನ್ನು ಸಂರಕ್ಷಿಸು. (ನಿರೀಕ್ಷಿಸು)

**ದುರ್ಮರಂ ಪುನರಪ್ರಾಪ್ತೇ ಕಾಲೇ ಭವತಿ ಕೇನಚಿತ್ ।**
**ಯದಹಂ ತ್ವಾಂ ರಣೇ ದೃಷ್ಟ್ವಾ ಹತಂ ಜೀವಾಮಿ ದುರ್ಭಗಾ ॥೨೧॥**

ಮೃತ್ಯುಕಾಲವು ಸನ್ನಿಹಿತವಾಗದಿದ್ದರೆ ಯಾರಿಂದಲೇ ಆಗಲಿ ಮರಣ ಹೊಂದುವುದು ದುಃಸಾಧ್ಯವೆಂದೇ ನಾನು ಭಾವಿಸುತ್ತೇನೆ. ಏಕೆಂದರೆ :

ನೀನು ಈ ರಣರಂಗದಲ್ಲಿ ಮರಣಹೊಂದಿರುವುದನ್ನು ನೋಡಿಯೂ ದುರ್ಭಾಗ್ಯಳಾದ ನಾನಿನ್ನೂ ಬದುಕಿಯೇ ಇರುವೆನಲ್ಲಾ?

ನರಶ್ರೇಷ್ಠನೇ! ನೀನು ಪಿತೃಲೋಕಕ್ಕೆ ಹೋಗಿ, ಇಲ್ಲಿ ನನ್ನನ್ನು ಪ್ರೀತಿಪೂರ್ವಕವಾಗಿ ಮಾತನಾಡಿಸುತ್ತಿದ್ದಂತೆಯೇ ಬೇರೆ ಯಾವಳನ್ನು ಸುಮಧುರವಾಗಿ, ಸ್ಮಿತಪೂರ್ವಕವಾಗಿ ಮಾತನಾಡಿಸುವೆ? ನಿಶ್ಚಯ ವಾಗಿಯೂ ನೀನು ಸ್ವರ್ಗಕ್ಕೆ ಹೋದನಂತರ ನಿನ್ನ ಸುಂದರವಾದ ರೂಪಿ ನಿಂದಲೂ, ಮುಗುಳ್ನಗೆಯ ಮಾತುಗಳಿಂದಲೂ ಅಲ್ಲಿರುವ ಅಪ್ಸರಸ್ತ್ರೀಯರ ಮನಸ್ಸನ್ನು ಕಲಕಿಬಿಡುವೆ. ಸುಭದ್ರಾನಂದನ! ನೀನು ಪುಣ್ಯಲೋಕಗಳಿಗೆ ಹೋಗಿ ಅಲ್ಲಿ ಅಪ್ಸರಸ್ತ್ರೀಯರೊಡನೆ ಸೇರಿಕೊಂಡು ವಿಹರಿಸುತ್ತಿರುವ ಸಮಯದಲ್ಲಿಯೂ ನಾನು ಮಾಡಿದ ಒಳ್ಳೆಯ ಕೆಲಸಗಳನ್ನು ಸ್ಮರಿಸಿಯೇ ಸ್ಮರಿಸುವೆ.

**ಏತಾವಾನಿಹ ಸಂವಾಸೋ ವಿಹಿತಸ್ತೇ ಮಯಾ ಸಹ ।**
**ಷಣ್ಮಾಸಾನ್ಸಪ್ತಮೇ ಮಾಸಿ ತ್ವಂ ವೀರ ನಿಧನಂ ಗತಃ ॥೨೮॥**

ಪತಿದೇವ! ಈ ಲೋಕದಲ್ಲಿ ನನ್ನೊಡನೆ ನಿನ್ನ ಸಹವಾಸವು ಕೇವಲ ಆರು ತಿಂಗಳುಗಳು ಮಾತ್ರವೇ ವಿಹಿತವಾಗಿದ್ದಿತು. ನಮ್ಮಿಬ್ಬರ ವಿವಾಹವಾದ ಏಳನೆಯ ತಿಂಗಳಿನಲ್ಲಿಯೇ ನೀನು ನಿಧನಹೊಂದಿದೆ."

ಕೃಷ್ಣ! ಇವೇ ಮುಂತಾಗಿ ಹೇಳಿಕೊಂಡು ಶೋಕಿಸುತ್ತಿದ್ದ, ದುಃಖಿತ ಳಾಗಿದ್ದ, ವ್ಯರ್ಥಮನೋರಥಳಾದ ಉತ್ತರೆಯನ್ನು ಮತ್ಸ್ಯರಾಜಕುಲಸ್ತ್ರೀಯರು ಹಿಂದಕ್ಕೆ ಎಳೆಯುತ್ತಿದ್ದಾರೆ. ಶೋಕಾರ್ತಳಾಗಿದ್ದ ಉತ್ತರೆಯನ್ನು ಹಿಂದಕ್ಕೆಳೆದುಕೊಂಡ ಮತ್ಸ್ಯರಾಜಕುಲಸ್ತ್ರೀಯರೂ ಅತ್ಯಂತ ಶೋಕಾರ್ತ ರಾಗಿದ್ದಾರೆ. ರಣರಂಗದಲ್ಲಿ ಹತನಾಗಿ ಬಿದ್ದಿದ್ದ ವಿರಾಟರಾಜನನ್ನು ನೋಡಿ ಅವರೆಲ್ಲರೂ ಕೂಗಿಕೊಳ್ಳುತ್ತಿದ್ದಾರೆ ; ಬಿಕ್ಕಿ-ಬಿಕ್ಕಿ ಅಳುತ್ತಿದ್ದಾರೆ.

ದ್ರೋಣರ ಅಸ್ತ್ರ-ಶಸ್ತ್ರಗಳಿಂದ ಛಿನ್ನ-ಭಿನ್ನವಾಗಿ ಕೆಳಗೆ ಬಿದ್ದಿರುವ, ರಕ್ತದಿಂದ ತೋಯ್ದುಹೋಗಿರುವ ವಿರಾಟರಾಜನನ್ನು ರಣಹದ್ದು, ಗುಳ್ಳೇ

ನರಿ ಮತ್ತು ಕಾಗೆಗಳು ಕಿತ್ತುತಿನ್ನುತ್ತಿವೆ. ಮಾಂಸಾಶಿಗಳಾದ ಪಶು-ಪಕ್ಷಿಗಳಿಂದ ಕೀಳಲ್ಪಡುತ್ತಿರುವ ವಿರಾಟರಾಜನನ್ನು ನೋಡಿ ಕಪ್ಪಾದ ಕಣ್ಣುಗಳಿಂದ ಕೂಡಿರುವ ಅವನ ಪತ್ನಿಯರು ಅವುಗಳನ್ನು ಓಡಿಸಲು ಬಹಳವಾಗಿ ಪ್ರಯತ್ನಿಸುತ್ತಿದ್ದಾರೆ. ಆದರೆ ಎಷ್ಟೇ ಪ್ರಯತ್ನಿಸಿದರೂ ಕಳವಳಗೊಂಡಿದ್ದ ಆ ರಾಜಮಹಿಷಿಯರು ವಿರಾಟನನ್ನು ಕಿತ್ತುತಿನ್ನುತ್ತಿದ್ದ ಪಶು-ಪಕ್ಷಿಗಳನ್ನು ಓಡಿಸಲು ಸಮರ್ಥರಾಗಲಿಲ್ಲ. ಬಿಸಿಲಿನಿಂದಲೂ ಆಯಾಸದಿಂದಲೂ ಪರಿತಪ್ತರಾಗಿದ್ದ, ರಣಾಂಗಣದಲ್ಲಿ ತಮ್ಮ ಪತಿ-ಪುತ್ರರನ್ನು ಹುಡುಕಲು ತಿರುಗಾಡಿದ ಶ್ರಮದಿಂದಾಗಿ ವಿವರ್ಣವಾದ (ಕುಂದಿದ) ಮುಖವುಳ್ಳವರಾಗಿದ್ದ ರಾಜಮಹಿಷಿಯರ ಶರೀರಗಳು ಶುಷ್ಕವಾಗಿಹೋಗಿವೆ. ಕೃಷ್ಣ! ಬಾಲಕರಾದ ಉತ್ತರ, ಅಭಿಮನ್ಯು, ಕಾಂಬೋಜದೇಶೀಯನಾದ ಸುದಕ್ಷಿಣ–ಇವರೆಲ್ಲರೂ ಹತರಾಗಿ ಬಿದ್ದಿರುವುದನ್ನು ನೋಡು. ರಣಾಂಗಣದ ಮಧ್ಯದಲ್ಲಿ ಹತನಾಗಿ ಮಲಗಿರುವ ಲಕ್ಷ್ಮಣನನ್ನೂ ನೋಡು, ಕೃಷ್ಣ!"

೨೦ನೆಯ ಅಧ್ಯಾಯವು ಮುಗಿಯಿತು.

೨೧ನೆಯ ಅಧ್ಯಾಯ ಸ್ತ್ರೀವಿಲಾಪಪರ್ವ (ಮುಂದುವರಿದಿದೆ.)

## ಗಾಂಧಾರಿಯು ಕರ್ಣನನ್ನು ನೋಡಿ ಅವನ ಶೌರ್ಯವನ್ನೂ ಅವನ ಪತ್ನಿಯರ ವಿಲಾಪವನ್ನೂ ಶ್ರೀಕೃಷ್ಣನಿಗೆ ಹೇಳಿದುದು

ಗಾಂಧಾರಿಯು ಶ್ರೀಕೃಷ್ಣನಿಗೆ ಹೇಳುತ್ತಾಳೆ :

"ಕೃಷ್ಣ! ಮಹಾಧನುಷ್ಮಂತನಾದ, ಮಹಾರಥನಾದ ವೈಕರ್ತನಕರ್ಣನು ಯುದ್ಧದಲ್ಲಿ ಪ್ರಜ್ವಲಿಸುವ ಯಜ್ಞೇಶ್ವರನಂತೆಯೇ ಶತ್ರುಗಳಿಗೆ ಪರಿತಾಪವನ್ನುಂಟುಮಾಡುತ್ತಿದ್ದು, ಕಡೆಯಲ್ಲಿ ಪಾರ್ಥನ ತೇಜಸ್ಸಿನಿಂದ ಶಾಂತನಾಗಿ ಈ ರಣರಂಗದಲ್ಲಿ ಮಲಗಿರುತ್ತಾನೆ. ಅಪಾರಸಂಖ್ಯೆಯಲ್ಲಿ ಅತಿರಥರನ್ನು ಸಂಹರಿಸಿ ರಕ್ತಪ್ರವಾಹದಿಂದ ಆವೃತವಾದ ಶರೀರದಿಂದ ಕೂಡಿ ರಣಭೂಮಿಯಲ್ಲಿ ಮಲಗಿರುವ ವೈಕರ್ತನಕರ್ಣನನ್ನು ನೋಡು, ಕೃಷ್ಣ! ಕರ್ಣನಾದರೋ ಅಸಹನಶೀಲನು; ದೀರ್ಘಕೋಪಿಯು; ಮಹಾಧನುಷ್ಮಂತನು; ಮಹಾಬಲನು. ಅಂತಹ ಮಹಾಶೂರನೂ ಗಾಂಡೀವಧನ್ವನಾದ

ಅರ್ಜುನನಿಂದ ಹತನಾಗಿ ಈ ರಣಾಂಗಣದಲ್ಲಿ ಮಲಗಿದ್ದಾನೆ. ಪಾಂಡವರ ಭಯದಿಂದಾಗಿ ಮಹಾರಥರಾದ ನನ್ನ ಮಕ್ಕಳು–ಆನೆಗಳು ಸಲಗನನ್ನು ಮುಂದೆ ಬಿಟ್ಟುಕೊಂಡು ಹೋಗುವಂತೆ–ಕರ್ಣನನ್ನು ಮುಂದೆ ಬಿಟ್ಟುಕೊಂಡು ಪಾಂಡವರೊಡನೆ ಯುದ್ಧಮಾಡಿದರು. ಸಿಂಹವು ಮತ್ತೊಂದು ಸಿಂಹವನ್ನು ಸಂಹರಿಸುವಂತೆ–ಮದಿಸಿದ ಆನೆಯು ಎದುರಾಳಿಯಾದ ಮತ್ತೊಂದು ಆನೆಯನ್ನು ಸಂಹರಿಸುವಂತೆ–ಅರ್ಜುನನು ಕರ್ಣನನ್ನು ಸಂಹರಿಸಿದನು. ಪುರುಷವ್ಯಾಘ್ರನೇ! ತಲೆಗೆದರಿದ ಅವನ ಪತ್ನಿಯರು ಗೋಳಾಡುತ್ತಾ ಯುದ್ಧದಲ್ಲಿ ಹತನಾದ ಶೂರನಾದ ಕರ್ಣನನ್ನು ಸುತ್ತುವರಿದು ಕುಳಿತಿದ್ದಾರೆ. ಧರ್ಮಾತ್ಮನಾದ ಯುಧಿಷ್ಠಿರನು ಯಾವ ಕರ್ಣನ ಪರಾಕ್ರಮದಿಂದ ಉದ್ವಿಗ್ನನಾಗಿ ಹದಿಮೂರು ವರ್ಷಗಳ ಕಾಲ ಅವನನ್ನೇ ಸದಾಕಾಲದಲ್ಲಿಯೂ ಚಿಂತಿಸುತ್ತಾ ನಿದ್ರೆಯನ್ನೇ ಮಾಡುತ್ತಿರಲಿಲ್ಲವೋ–ಇಂದ್ರನಂತೆಯೇ ಯಾವನು ಶತ್ರುಗಳಿಂದ ಎದುರಿಸಲು ಅಸಾಧ್ಯನಾಗಿದ್ದನೋ–ಯಾವನು ಪ್ರಳಯಕಾಲದ ಅಗ್ನಿಯಂತೆ ತೇಜಸ್ವಿ ಯಾಗಿಯೂ, ಹಿಮವಂತನಂತೆ ದೃಢನಿಶ್ಚಯನಾಗಿಯೂ ಇದ್ದನೋ–ಯಾವನು ದುರ್ಯೋಧನನಿಗೆ ಶರಣ್ಯನಾಗಿದ್ದನೋ, ಅಂತಹ ಕರ್ಣನೀಗ–ಬಿರುಗಾಳಿಯಿಂದ ಭಗ್ನವಾದ ವೃಕ್ಷದಂತೆ–ಅರ್ಜುನನ ಬಾಣಗಳಿಂದ ಪ್ರಹತನಾಗಿ ಭೂಮಿಯಲ್ಲಿ ಬಿದ್ದಿದ್ದಾನೆ. ಕೃಷ್ಣ! ಕರುಣಾಜನಕವಾದ ರೀತಿಯಲ್ಲಿ ವಿಲಪಿಸುತ್ತಿರುವ, ಭೂಮಿಯ ಮೇಲೆ ವಿಮೋಹಿತಳಾಗಿ ಬಿದ್ದಿರುವ ವೃಷಸೇನನ ತಾಯಿಯಾದ ಕರ್ಣನ ಭಾರ್ಯೆಯನ್ನು ನೋಡು.

ಕರ್ಣನ ಪತ್ನಿಯು ಕರ್ಣನನ್ನೇ ಎವೆಯಿಕ್ಕದೇ ನೋಡುತ್ತಾ ಈ ಮಾತನ್ನು ಹೇಳುತ್ತಿದ್ದಾಳೆ :

'ಪತಿದೇವ! ನಿಶ್ಚಯವಾಗಿಯೂ ಆಚಾರ್ಯಶಾಪವು ನಿನ್ನನ್ನು ಅನುಸರಿಸಿಕೊಂಡೇ ಬಂದಿತು. ಆ ಕಾರಣದಿಂದಲೇ ಭೂಮಿಯು ನಿನ್ನ ರಥದ ಚಕ್ರವನ್ನು ನುಂಗಿಹಾಕಿತು. ಅನಂತರ (ನೀನು ಅಂತಹ ಕಷ್ಟದಲ್ಲಿದ್ದ ಸಮಯದಲ್ಲಿ) ಆಹವಶೋಭಿಯಾದ ಅರ್ಜುನನು ಯುದ್ಧದಲ್ಲಿ ಬಾಣದಿಂದ ನಿನ್ನ ತಲೆಯನ್ನು ಕತ್ತರಿಸಿದನು."

ಅಯ್ಯೋ! ಅಲ್ಲಿ ನೋಡು ಕೃಷ್ಣ! ಸುಷೇಣನ ತಾಯಿಯು ಹೀಗೆ ಹೇಳುತ್ತಿದ್ದಂತೆಯೇ ಸುವರ್ಣಮಯವಾದ ಕವಚವನ್ನು ಧರಿಸಿದ್ದ, ಮಹಾಬಾಹುವಾದ, ಮಹಾಸತ್ತ್ವನಾದ ಕರ್ಣನನ್ನು ನೋಡಿ ಗಟ್ಟಿಯಾಗಿ ಅಳುತ್ತಾ ಮೂರ್ಛಿತಳಾಗಿ ಕೆಳಕ್ಕೆ ಬಿದ್ದಳು. ಸರ್ವನಾಶಿಯಾದ ಈ ಯುದ್ಧಕ್ಕೆ ಧಿಕ್ಕಾರವಿರಲಿ! ಮಾನವಶರೀರಗಳನ್ನು ಭಕ್ಷಿಸುವ ಪ್ರಾಣಿಗಳು ಮಹಾತ್ಮನಾದ ಕರ್ಣನ ಶರೀರವನ್ನು ಆತುರವಾಗಿ ಭಕ್ಷಿಸುತ್ತಿದ್ದು ಸ್ವಲ್ಪ ಭಾಗವನ್ನು ಮಾತ್ರವೇ ಉಳಿಸಿವೆ. ಕೃಷ್ಣಪಕ್ಷದ ಚತುರ್ದಶಿಯ ಚಂದ್ರನಂತೆ–ಬಹುಭಾಗ ನಶಿಸಿಹೋದ ಶರೀರದಿಂದ ಕೂಡಿರುವ ಕರ್ಣನನ್ನು ನೋಡಲು ನಮಗೆ ಸಾಧ್ಯವೇ ಆಗುತ್ತಿಲ್ಲ.

ಭೂಮಿಯ ಮೇಲೆ ಮೂರ್ಛಿತಳಾಗಿ ಬಿದ್ದಿದ್ದ ಸುಷೇಣನ ತಾಯಿಯು ಸ್ವಲ್ಪಹೊತ್ತಿನನಂತರ ಪುನಃ ಎಚ್ಚೆತ್ತು, ಕರ್ಣನ ಮುಖವನ್ನು ಮೂಸಿ ನೋಡುತ್ತಾ (ಚುಂಬಿಸುತ್ತಾ) ಪುತ್ರರ ವಧೆಯಿಂದಲೂ ಪರಿತಪ್ತಳಾಗಿ ಬಿಕ್ಕಿ-ಬಿಕ್ಕಿ ಗಟ್ಟಿಯಾಗಿ ಅಳುತ್ತಿದ್ದಾಳೆ.”

೨೧ನೆಯ ಅಧ್ಯಾಯವು ಮುಗಿಯಿತು.

೨೨ನೆಯ ಅಧ್ಯಾಯ ಸ್ತ್ರೀವಿಲಾಪಪರ್ವ (ಮುಂದುವರಿದಿದೆ.)

## ಅವಂತೀದೇಶದ ರಾಜನನ್ನೂ ಮತ್ತು ಜಯದ್ರಥನನ್ನೂ ನೋಡಿ ಗಾಂಧಾರಿಯು ಶ್ರೀಕೃಷ್ಣನ ಮುಂದೆ ವಿಲಪಿಸಿದುದು

ಗಾಂಧಾರಿಯು ಶ್ರೀಕೃಷ್ಣನೊಡನೆ ಹೇಳುತ್ತಾಳೆ :

“ಕೃಷ್ಣ! ಭೀಮಸೇನನಿಂದ ಹತನಾದ, ಶೂರನಾದ, ಅನೇಕಬಂಧು-ಮಿತ್ರರಿಂದ ಸಂಪನ್ನನಾಗಿದ್ದ ಅವಂತೀದೇಶದ ರಾಜನನ್ನು–ಬಂಧುಗಳೇ ಇಲ್ಲದ ಅನಾಥನನ್ನು ಹೇಗೋ–ಹಾಗೆ-ರಣಹದ್ದುಗಳೂ ಮತ್ತು ಗುಳ್ಳೆನರಿಗಳೂ ಕಿತ್ತುತಿನ್ನುತ್ತಿವೆ. ಮಧುಸೂದನ! ಅನೇಕಶೂರರನ್ನು ಸಂಹರಿಸಿ ರಕ್ತದಿಂದ ತೋಯ್ದುಹೋಗಿ ವೀರಶಯ್ಯೆಯಲ್ಲಿ ಮಲಗಿರುವ ಅವಂತೀದೇಶದ ರಾಜನನ್ನು ನೋಡು. ಅಂತಹ ಮಹಾಶೂರನನ್ನು ಗುಳ್ಳೆನರಿಗಳೂ, ರಣಹದ್ದುಗಳೂ, ಮಾಂಸಾಶಿಗಳಾದ ನಾನಾಜಾತಿಯ ಪ್ರಾಣಿಗಳೂ ಅಲ್ಲಲ್ಲಿ

ಕಿತ್ತುಹಾಕುತ್ತಿವೆ. ಕಾಲದ ವೈಪರೀತ್ಯವನ್ನಾದರೂ ನೋಡು, ಕೃಷ್ಣ! ಶೂರನಾದ, ಭಯಂಕರವಾಗಿ ಯುದ್ಧಮಾಡುತ್ತಿದ್ದ, ವೀರಶಯ್ಯೆಯಲ್ಲಿ ಮಲಗಿರುವ ಅವಂತೀದೇಶದ ರಾಜನ ಪತ್ನಿಯರು ಗೋಳಾಡುತ್ತಾ ಅವನ ಸುತ್ತಲೂ ಕುಳಿತಿದ್ದಾರೆ.

ಮಾಧವ! ಪ್ರತೀಪನ ಮಗನಾದ, ಮಹಾಧನುಷ್ಮಂತನಾದ, ಮನನ ಶೀಲನಾದ ಬಾಹ್ಲಿಕನು ಭಲ್ಲಾಯುಧದಿಂದ ಹತನಾಗಿ ಸಿಂಹದಂತೆ ಮಲಗಿರುವುದನ್ನು ನೋಡು. ಇವನು ಗತಪ್ರಾಣನಾಗಿದ್ದರೂ ಇವನ ಮುಖದ ಕಾಂತಿಯು-ಹುಣ್ಣಿಮೆಯಂದು ಉದಯಿಸಿದ ಪೂರ್ಣಚಂದ್ರ ನೋಪಾದಿಯಲ್ಲಿ ಅತ್ಯಂತಶೋಭಾಯಮಾನವಾಗಿ ಕಾಣುತ್ತಿದೆ. ಪುತ್ರ ಶೋಕದಿಂದ ಪರಿತಪಿಸುತ್ತಿದ್ದ, ಪ್ರತಿಜ್ಞೆಯನ್ನು ಪಾಲಿಸಬೇಕೆಂಬ ದೃಢೇಚ್ಛೆ ಯಿಂದ ಕೂಡಿದ್ದ, ಇಂದ್ರನ ಮಗನಾದ ಅರ್ಜುನನು ಯುದ್ಧದಲ್ಲಿ ವೃದ್ಧಕ್ಷತ್ರನ ಮಗನಾದ ಜಯದ್ರಥನನ್ನು ಸಂಹರಿಸಿದನು. ಮಹಾತ್ಮನಾದ ಅರ್ಜುನನು ತನ್ನ ಪ್ರತಿಜ್ಞೆಯನ್ನು ನಿಜವಾಗಿಸಲು ಜಯದ್ರಥನನ್ನು ರಕ್ಷಿಸುತ್ತಿದ್ದ ಹನ್ನೊಂದು ಅಕ್ಷೌಹಿಣೀಸೈನ್ಯವನ್ನೂ ಭೇದಿಸಿಕೊಂಡು ವ್ಯೂಹದ ಒಳಕ್ಕೆ ನುಗ್ಗಿ ಅವನನ್ನು ಸಂಹರಿಸಿದನು. ಹಾಗೆ ಅರ್ಜುನನಿಂದ ಹತನಾದ ಜಯದ್ರಥನು ಇಲ್ಲಿ ಮಲಗಿರುವುದನ್ನು ನೋಡು, ಜನಾರ್ದನ! ಸಿಂಧು-ಸೌವೀರರಾಜ್ಯಗಳಿಗೆ ಪ್ರಭುವಾದ, ದರ್ಪಿಷ್ಠನಾಗಿದ್ದ, ಮನಸ್ವಿಯಾದ ಜಯದ್ರಥನನ್ನು ನರಿಗಳೂ, ರಣಹದ್ದುಗಳೂ ಕಿತ್ತುತಿನ್ನುತ್ತಿವೆ. ಜಯದ್ರಥ ನಲ್ಲಿಯೇ ಅನುರಕ್ತರಾದ ಅವನ ಭಾರ್ಯೆಯರು ನರಿ-ಹದ್ದುಗಳು ಅವನ ಶರೀರವನ್ನು ಕಿತ್ತುತಿನ್ನದಂತೆ ರಕ್ಷಣೆಯನ್ನೇನೋ ಮಾಡುತ್ತಿದ್ದಾರೆ. ಆದರೂ ಮಾಂಸಾಶಿಗಳಾದ ಪ್ರಾಣಿಗಳು ಬಹಳ ಹತ್ತಿರದಲ್ಲಿಯೇ ಕುಳಿತು ಸೈಂಧವನ ಶರೀರವನ್ನು ಬಹಳ ಆಳದವರೆಗೂ ಬಗೆದು ತಿನ್ನುತ್ತಿವೆ. ಹೀಗೆ ಅನುರಕ್ತರಾದ ಪತ್ನಿಯರಿಂದ ರಕ್ಷಿಸಲ್ಪಡುತ್ತಿರುವ ಮಹಾಭುಜನಾದ ಸಿಂಧು-ಸೌವೀರಾಧಿಪತಿಯಾದ ಜಯದ್ರಥನನ್ನು ಕಾಂಬೋಜದೇಶದ ಯವನಸ್ತ್ರೀಯರೂ ಸುತ್ತುವರಿದು ಕುಳಿತಿದ್ದಾರೆ. ಜನಾರ್ದನ! ಎಂದು ಈ ಜಯದ್ರಥನು ಅರಣ್ಯದ ಆಶ್ರಮದಲ್ಲಿದ್ದ ದ್ರೌಪದಿಯನ್ನು ಕರೆದುಕೊಂಡು ಕೇಕಯರೊಡನೆ ಓಡಿಹೋದನೋ–ಅಂದೇ ಅವನು ಪಾಂಡವರಿಂದ

ವಧ್ಯನಾಗಬೇಕಾಗಿದ್ದಿತು. ಆದರೆ ತಂಗಿಯಾದ ದುಃಶಲೆಯನ್ನು ಗೌರವಿಸುವ ಸಲುವಾಗಿ ಆ ಸಮಯದಲ್ಲಿ ಪಾಂಡವರು ಜಯದ್ರಥನನ್ನು ಬಿಟ್ಟುಬಿಟ್ಟರು. ಆದರೆ, ಕೃಷ್ಣ! ಪಾಂಡವರು ಈ ಸಮಯದಲ್ಲೇಕೆ ದುಃಶಲೆಯನ್ನು ಗೌರವಿಸಲಿಲ್ಲ? (ಅವಳ ಸಲುವಾಗಿಯಾದರೂ ಜಯದ್ರಥನನ್ನು ಸಂಹರಿಸದೇ ಇರಬಹುದಾಗಿತ್ತಲ್ಲವೇ?) ನೋಡು, ಕೃಷ್ಣ! ಅವಳೇ ನನ್ನ ಮಗಳು ದುಃಶಲೆ. ಇನ್ನೂ ಯುವತಿ. ಪತಿವಿಯೋಗದಿಂದ ದುಃಖಿತಳಾಗಿ ಗಳ-ಗಳನೆ ಅಳುತ್ತಾ ಪಾಂಡವರನ್ನು ನಿಂದಿಸುತ್ತಾ ಎದೆಯನ್ನು ಬಡಿದು ಕೊಳ್ಳುತ್ತಿದ್ದಾಳೆ.

**ಕಿಂ ನು ದುಃಖತರಂ ಕೃಷ್ಣ ಪರಂ ಮಮ ಭವಿಷ್ಯತಿ ।**
**ಯತ್ಸುತಾ ವಿಧವಾ ಬಾಲಾ ಸ್ನುಷಾಶ್ಚ ನಿಹತೇಶ್ವರಾಃ ॥೧೮॥**

ಕೃಷ್ಣ! ನನ್ನ ಮಗಳು ಇನ್ನೂ ಬಾಲೆ. ಅವಳಾಗಲೇ ವಿಧವೆಯಾಗಿ ಹೋದಳು. ನನ್ನ ಸೊಸೆಯರೆಲ್ಲರೂ ಗಂಡಂದಿರನ್ನು ಕಳೆದುಕೊಂಡಿರುತ್ತಾರೆ. ಇದಕ್ಕಿಂತಲೂ ಮಿಗಿಲಾದ ಬೇರಾವ ದುಃಖವು ತಾನೇ ನನಗೆ ಬರುತ್ತದೆ?

ಇಂತಹ ಘೋರದೃಶ್ಯವನ್ನು ನೋಡುತ್ತಿರುವ ಈ ನನ್ನ ಜನ್ಮಕ್ಕೇ ಧಿಕ್ಕಾರವಿರಲಿ! ಅಲ್ಲಿ ನೋಡು, ಕೃಷ್ಣ! ಶೋಕ-ಭಯಗಳಿಂದ ರಹಿತ ಳಾದವಳೋ ಎಂಬಂತೆ ದುಃಶಲೆಯು ಪತಿಯ ತಲೆಯನ್ನು ಹೊಂದದೆಯೇ ಅಲ್ಲಿಂದಿಲ್ಲಿಗೂ-ಇಲ್ಲಿಂದಲ್ಲಿಗೂ ಓಡಾಡುತ್ತಿದ್ದಾಳೆ. ಮಗನಾದ ಅಭಿಮನ್ಯು ವನ್ನು ರಕ್ಷಿಸಲು ವ್ಯೂಹದೊಳಗೆ ನುಗ್ಗಲು ಬಂದ ಎಲ್ಲ ಪಾಂಡವರನ್ನೂ ಜಯದ್ರಥನು ವ್ಯೂಹದೊಳಗೆ ಹೋಗದಂತೆ ತಡೆದುಬಿಟ್ಟನು. ಅಸಂಖ್ಯಾತ ವಾದ ಶತ್ರುಸೈನ್ಯವನ್ನು ಸಂಹರಿಸಿ ಬಳಿಕ ತಾನೂ ಮೃತ್ಯುವಶನಾದನು. ಮದಿಸಿದ ಆನೆಯಂತಿದ್ದ, ಮಹಾವೀರನಾಗಿದ್ದ, ಶತ್ರುಗಳಿಂದ ಜಯಿಸಲು ದುಃಸಾಧ್ಯನಾಗಿದ್ದ ಜಯದ್ರಥನನ್ನು ಚಂದ್ರವದನೆಯರಾದ ಅವನ ಪತ್ನಿಯರು ಸುತ್ತುವರಿದು ಕುಳಿತು ಅಳುತ್ತಿದ್ದಾರೆ.”

೨೨ನೆಯ ಅಧ್ಯಾಯವು ಮುಗಿಯಿತು.

೨೩ನೆಯ ಅಧ್ಯಾಯ ಸ್ತ್ರೀವಿಲಾಪಪರ್ವ (ಮುಂದುವರಿದಿದೆ.)

# ಶಲ್ಯ, ಭಗದತ್ತ, ಭೀಷ್ಮ ಮತ್ತು ದ್ರೋಣರನ್ನು ನೋಡಿ ಗಾಂಧಾರಿಯು ಶ್ರೀಕೃಷ್ಣನ ಸಮ್ಮುಖದಲ್ಲಿ ವಿಲಪಿಸಿದುದು

ಗಾಂಧಾರಿಯು ಶ್ರೀಕೃಷ್ಣನೊಡನೆ ಹೇಳುತ್ತಾಳೆ :

"ಕೃಷ್ಣ! ನಕುಲ-ಸಹದೇವರ ಸಾಕ್ಷಾತ್ ಸೋದರಮಾವನಾದ ಈ ಶಲ್ಯನು ಧರ್ಮಜ್ಞನಾದ ಯುಧಿಷ್ಠಿರನಿಂದಲೇ ಹತನಾಗಿ ರಣಾಂಗಣದಲ್ಲಿ ಮಲಗಿದ್ದಾನೆ. ಯಾವನು ನಿನ್ನೊಡನೆ ಸದಾಕಾಲದಲ್ಲಿಯೂ ಮತ್ತು ಎಲ್ಲ ವಿಷಯಗಳಲ್ಲಿಯೂ ಸ್ಪರ್ಧಿಸುತ್ತಿದ್ದನೋ–ಅಂತಹ ಮಹಾಬಲನಾದ ಮದ್ರ ರಾಜನು ಹತನಾಗಿ ಇಲ್ಲಿ ಮಲಗಿದ್ದಾನೆ. ಕರ್ಣನ ರಥದ ಕಡಿವಾಣಗಳನ್ನು ಹಿಡಿಯುವ ಸಮಯದಲ್ಲಿ ಈ ಶಲ್ಯನು ಪಾಂಡುವಿನ ಮಕ್ಕಳಿಗೆ ವಿಜಯ ಗಳಿಸಿಕೊಡುವ ಸಲುವಾಗಿಯೇ ಕರ್ಣನ ತೇಜೋವಧೆಯನ್ನು ಮಾಡಿದನು. ಕೃಷ್ಣ! ಪೂರ್ಣಚಂದ್ರನಂತೆ ದರ್ಶನೀಯವಾದ, ಪದ್ಮದಳಸದೃಶವಾದ ಕಣ್ಣು ಗಳನ್ನು ಹೊಂದಿರುವ, ಸ್ವಲ್ಪವಾದರೂ ಗಾಯದ ಚಿಹ್ನೆಯೇ ಇಲ್ಲದಿರುವ ಶಲ್ಯನ ಮುಖವನ್ನು ಕಾಗೆಗಳು ಕುಕ್ಕುತ್ತಿವೆ. ಪುಟಕ್ಕೆ ಹಾಕಿದ ಚಿನ್ನದ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿರುವ ಶಲ್ಯನ ನಾಲಿಗೆಯು ಸುವರ್ಣದ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿರುವ ಶಲ್ಯನ ಮುಖದಿಂದ ಹೊರಬಂದಿರುತ್ತದೆ. ಹಾಗೆ ಹೊರಬಂದಿರುವ ನಾಲಿಗೆಯನ್ನು ಪಕ್ಷಿಗಳು ಕುಕ್ಕಿ-ಕುಕ್ಕಿ ತಿನ್ನುತ್ತಿವೆ. ಯುಧಿಷ್ಠಿರನಿಂದ ಹತನಾದ ಆಹವಶೋಭಿಯಾದ ಮದ್ರರಾಜನನ್ನು ಅವನ ಪತ್ನಿಯರು ಸುತ್ತುವರಿದು ಕುಳಿತು ಅಳುತ್ತಿದ್ದಾರೆ. ಅತ್ಯಂತಸೂಕ್ಷ್ಮವಾದ ವಸ್ತ್ರಗಳನ್ನು ಧರಿಸಿರುವ ಕ್ಷತ್ರಿಯಸ್ತ್ರೀಯರು ಕ್ಷತ್ರಿಯರ್ಷಭನಾದ ಮದ್ರಾಧಿಪತಿಯ ಬಳಿಗೆ ಬಂದು ಸಂಕಟದಿಂದ ಕಿರುಚಿಕೊಳ್ಳುತ್ತಿದ್ದಾರೆ. ಒಂದೇ ಒಂದು ಬಾರಿ (ಮೊದಲನೆಯ ಸಲ) ಮರಿಹಾಕಿದ ಹೆಣ್ಣಾನೆಗಳು ಕೆಸರಿನಲ್ಲಿ ಹೂತುಕೊಂಡಿರುವ ಗಂಡಾನೆಯನ್ನು ಕಾತರದ ದೃಷ್ಟಿಯಿಂದ ನೋಡುವಂತೆ–ರಣಾಂಗಣದಲ್ಲಿ ಬಿದ್ದಿರುವ ಶಲ್ಯ ನನ್ನು ಅವನ ಪತ್ನಿಯರು ಸುತ್ತುವರಿದು ನಿಂತು ನೋಡುತ್ತಿದ್ದಾರೆ. ಶರಣ್ಯ

ನಾದ, ಶೂರನಾದ, ಬಾಣಗಳಿಂದ ವಿಭಿನ್ನನಾಗಿ ವೀರಶಯ್ಯೆಯಲ್ಲಿ ಮಲಗಿರುವ ಈ ಶಲ್ಯನನ್ನು ನೋಡು, ಕೃಷ್ಣ! ಪರ್ವತಪ್ರದೇಶಗಳಿಗೆ ರಾಜನಾದ, ಪ್ರತಾಪವಂತನಾದ, ಆನೆಯ ಅಂಕುಶವನ್ನು ಕೈಯಲ್ಲಿ ಧರಿಸಿರುವ, ಶ್ರೀಮಂತನಾದ ಈ ಭಗದತ್ತನು ಯುದ್ಧದಲ್ಲಿ ಕೆಳಕ್ಕೆ ಬೀಳಿಸಲ್ಪಟ್ಟು ಹತನಾಗಿ ಇಲ್ಲಿ ಮಲಗಿದ್ದಾನೆ. ಮಾಂಸಾಶಿಗಳಾದ ಪ್ರಾಣಿಗಳಿಂದ ಭಕ್ಷಿಸಲ್ಪಡುತ್ತಿರುವ ಭಗದತ್ತನ ಶಿರಸ್ಸಿನಲ್ಲಿರುವ ಸುವರ್ಣಮಯವಾದ ಮಾಲೆಯು ಅವನ ತಲೆಗೂದಲುಗಳನ್ನು ಶೋಭಾಯಮಾನಗೊಳಿಸುತ್ತಿರುವಂತೆ ಕಾಣುತ್ತಿದೆ. ವೃತ್ರಾಸುರನಿಗೂ ಮತ್ತು ಇಂದ್ರನಿಗೂ ಭಯಂಕರವಾದ ಯುದ್ಧವು ನಡೆದಂತೆ–ಪಾರ್ಥನಿಗೂ ಮತ್ತು ಭಗದತ್ತನಿಗೂ ಸುದಾರುಣವಾದ, ರೋಮಾಂಚಕಾರಿಯಾದ ಮತ್ತು ಅತ್ಯುಗ್ರವಾದ ಯುದ್ಧವು ನಡೆಯಿತು. ಮಹಾಬಾಹುವಾದ ಭಗದತ್ತನು ಅರ್ಜುನನೊಡನೆ ಯುದ್ಧಮಾಡುತ್ತಾ ಗೆಲ್ಲುವುದರಲ್ಲಿ ಅವನನ್ನು ಸಂದೇಹಕ್ಕೀಡುಮಾಡಿದ್ದನು. ಆದರೆ ಕಡೆಯಲ್ಲಿ ಇವನು ಅರ್ಜುನನಿಂದಲೇ ಹತನಾಗಿ ಕೆಳಕ್ಕೆ ಬೀಳಿಸಲ್ಪಟ್ಟನು.

ಶೌರ್ಯದಲ್ಲಿಯೂ ಮತ್ತು ವೀರ್ಯದಲ್ಲಿಯೂ ಯಾವನಿಗೆ ಸಮಾನನಾದವನು ಈ ಲೋಕದಲ್ಲಿಯೇ ಇರಲಿಲ್ಲವೋ–ಅಂತಹ ಭಯಂಕರ ಕರ್ಮನಾದ ಭೀಷ್ಮನು ದೇಹಾಂತಕರವಾದ ಗಾಯಗಳಿಂದ ಸಂಕಟಪಡುತ್ತಾ ರಣರಂಗದಲ್ಲಿ ಮಲಗಿರುತ್ತಾನೆ. ಪ್ರಳಯಕಾಲದಲ್ಲಿ ಕಾಲಪ್ರಚೋದಿತನಾಗಿ ಆಕಾಶದಿಂದ ಕೆಳಕ್ಕೆ ಬಿದ್ದಿರುವ ಸೂರ್ಯನೋಪಾದಿಯಲ್ಲಿ–ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಬೆಳಗುತ್ತಾ ಮಲಗಿರುವ ಶಾಂತನವನನ್ನು ನೋಡು, ಕೃಷ್ಣ! ಕೇಶವ! ವೀರ್ಯವಂತನಾದ ಭೀಷ್ಮನೆಂಬ ಸೂರ್ಯನು ಶಸ್ತ್ರಾಸ್ತ್ರಗಳ ತಾಪದಿಂದ ಶತ್ರುಗಳನ್ನು ಪರಿತಾಪಗೊಳಿಸಿ, ಸೂರ್ಯನು ಅಸ್ತಂಗತನಾಗುವಂತೆ ಅಸ್ತನಾಗುತ್ತಿದ್ದಾನೆ. ಊರ್ಧ್ವರೇತಸ್ಕನಾದ (ನೈಷ್ಠಿಕಬ್ರಹ್ಮಚಾರಿಯಾದ), ಮಾಡಿದ ಪ್ರತಿಜ್ಞೆಯಿಂದ ಯಾವಾಗಲೂ ಚ್ಯುತನಾಗದ, ಶರತಲ್ಪದಲ್ಲಿ ಮಲಗಿರುವ ಭೀಷ್ಮನು– ಶೂರನಿಷೇವಿತವಾದ, ವೀರೋಚಿತವಾದ ಶರಶಯ್ಯೆಯಲ್ಲಿ ಮಲಗಿರುವುದನ್ನು ನೋಡು, ಕೃಷ್ಣ! ಭಗವಾನ್ ಸ್ಕಂದನು ಜಂಬುಹುಲ್ಲಿನ ಮೇಲೆ ಮಲಗಿರುವಂತೆ–ಕರ್ಣಿ, ನಾಲೀಕ ಮತ್ತು ನಾರಾಚಗಳನ್ನೇ ಹರಡಿ ಕಲ್ಪಿಸಿರುವ

ಶ್ರೇಷ್ಠವಾದ ಹಾಸಿಗೆಯನ್ನು ಆಶ್ರಯಿಸಿ ಭೀಷ್ಮನು ಮಲಗಿರುತ್ತಾನೆ. ಭೀಷ್ಮನು ಹತ್ತಿಯಿಂದ ತುಂಬಿದ್ದ ತಲೆದಿಂಬನ್ನು ಇಟ್ಟುಕೊಳ್ಳಲು ಇಷ್ಟಪಡಲಿಲ್ಲ. ಆದರೆ ಗಾಂಡೀವಧನ್ವನಾದ ಅರ್ಜುನನಿಂದ ಕೊಡಲ್ಪಟ್ಟ ಮೂರು ಬಾಣಗಳಿಂದ ಯುಕ್ತವಾದ ಶ್ರೇಷ್ಠವಾದ ತಲೆದಿಂಬನ್ನು ಸ್ವೀಕರಿಸಿದನು. ಮಾಧವ! ತಂದೆಯ ಆಜ್ಞೆಯನ್ನು ಪರಿಪಾಲಿಸುವುದರಲ್ಲಿ ಆಸಕ್ತನಾದ, ನೈಷ್ಠಿಕಬ್ರಹ್ಮಚಾರಿಯಾದ, ಮಹಾಯಶೋವಂತನಾದ, ಯುದ್ಧದಲ್ಲಿ ಅಪ್ರತಿಮಸಾಹಸಿಯಾದ ಭೀಷ್ಮನು ಇಲ್ಲಿ ಮಲಗಿದ್ದಾನೆ. ತಾತ! ಭೀಷ್ಮನು ಧರ್ಮಾತ್ಮನು. ಸರ್ವಜ್ಞನು. ಮನುಷ್ಯನಾದರೂ ದೇವತೆಯಂತೆಯೇ ಇರತಕ್ಕವನು. ಪರಲೋಕ ಮತ್ತು ಇಹಲೋಕಗಳಿಗೆ ಸಂಬಂಧಿಸಿದ ತತ್ತ್ವಜ್ಞಾನದ ನಿರ್ಣಯದಲ್ಲಿ ಸಮರ್ಥನೂ ಆದ ಇವನು ತನ್ನ ಜ್ಞಾನಬಲದಿಂದಲೇ ಇದುವರೆಗೂ ಪ್ರಾಣಗಳನ್ನು ಧಾರಣೆಮಾಡಿಕೊಂಡಿರುತ್ತಾನೆ. ಶಂತನುವಿನ ಮಗನಾದ ಭೀಷ್ಮನು ಬಾಣಗಳಿಂದ ಪ್ರಹೃತನಾಗಿ ಕೆಳಕ್ಕೆ ಬಿದ್ದನಂತರ ಈ ಲೋಕದಲ್ಲಿ ಯುದ್ಧಕುಶಲನೇ ಇಲ್ಲದಂತಾಯಿತು. ಎಲ್ಲ ವಿಷಯಗಳಲ್ಲಿಯೂ ಪರಿಪೂರ್ಣ ಜ್ಞಾನವುಳ್ಳ ವಿದ್ವಾಂಸನೇ ಇಲ್ಲದಂತಾಯಿತು. ಅಪ್ರತಿಮನಾದ ಪರಾಕ್ರಮಿಯೂ ಇಲ್ಲದಂತಾಯಿತು. ಪಾಂಡವರು ಭೀಷ್ಮನ ಮೃತ್ಯುರಹಸ್ಯ ವನ್ನು ಪ್ರಶ್ನಿಸಲಾಗಿ ಧರ್ಮಜ್ಞನಾದ, ಸತ್ಯವಾದಿಯಾದ, ಶೂರನಾದ ಭೀಷ್ಮನು ತಾನೇ ತನ್ನ ಮರಣದ ರಹಸ್ಯವನ್ನು ಯುದ್ಧಸಮಯದಲ್ಲಿ ಪಾಂಡವರಿಗೆ ಹೇಳಿದನು. ಕ್ಷೀಣಿಸಿ ಹೋಗುವುದರಲ್ಲಿದ್ದ ಕುರುವಂಶವನ್ನು ಯಾವನು ಉದ್ಧರಿಸಿದನೋ–ಅಂತಹ ಮಹಾಬುದ್ಧಿಯಾದ ಭೀಷ್ಮನೂ ಕುರುರಾಜ ಕುಮಾರರೊಡನೆ ವಿನಾಶವನ್ನು ಹೊಂದಿದನು.

**ಧರ್ಮೇಷು ಕುರವಃ ಕಂ ನು ಪರಿಪ್ರಕ್ಷ್ಯನ್ತಿ ಮಾಧವ ।**
**ಗತೇ ದೇವವ್ರತೇ ಸ್ವರ್ಗಂ ದೇವಕಲ್ಪೇ ನರರ್ಷಭೇ ॥೨೫॥**

ಮಾಧವ! ದೇವತುಲ್ಯನಾದ, ನರಶ್ರೇಷ್ಠನಾದ ದೇವವ್ರತನು ಸ್ವರ್ಗಕ್ಕೆ ಹೋದನಂತರ ಕೌರವರು ಧರ್ಮನಿರ್ಣಯದ ವಿಷಯದಲ್ಲಿ ಮುಂದೆ ಯಾರನ್ನು ಪ್ರಶ್ನಿಸುತ್ತಾರೆ?

ಕೃಷ್ಣ! ಅರ್ಜುನನಿಗೆ ಶಿಕ್ಷಕರೂ, ಸಾತ್ಯಕಿಗೆ ಪರಮಾಚಾರ್ಯರೂ,

ಎಲ್ಲ ಕುರುಗಳಿಗೂ ಶ್ರೇಷ್ಠಗುರುಗಳೂ ಆಗಿದ್ದ ದ್ರೋಣರು ಇಲ್ಲಿ ಬಿದ್ದಿರುವುದನ್ನು ನೋಡು. ದೇವರಾಜನಾದ ಇಂದ್ರನಂತೆ ಅಥವಾ ಮಹಾಪರಾಕ್ರಮಿಯಾದ ಪರಶುರಾಮನಂತೆ–ದ್ರೋಣರೂ ನಾಲ್ಕು ವಿಧವಾದ ಅಸ್ತ್ರವಿದ್ಯೆಗಳನ್ನೂ ತಿಳಿದವರಾಗಿದ್ದರು. ಯಾವ ದ್ರೋಣರ ಅನುಗ್ರಹಮಾತ್ರದಿಂದಲೇ ಅರ್ಜುನನು ದುಷ್ಕರವಾದ, ಇತರರಿಂದ ಸಾಧಿಸಲು ಅಸಾಧ್ಯವಾದ ಕರ್ಮವನ್ನು ಮಾಡಿದನೋ–ಅಂತಹ ದ್ರೋಣರೇ ಇಂದು ಹತರಾಗಿ ರಣರಂಗದಲ್ಲಿ ಮಲಗಿದ್ದಾರೆ. ಆ ಅಸ್ತ್ರಗಳಾವುವೂ ಇವರನ್ನು ರಕ್ಷಿಸಲಿಲ್ಲ.

ಯಾವ ದ್ರೋಣರನ್ನು ಮುಂದೆಮಾಡಿಕೊಂಡು ಕೌರವರು ಪಾಂಡವರನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದರೋ–ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ಅಂತಹ ದ್ರೋಣರು ಶಸ್ತ್ರಗಳಿಂದಲೇ ಕ್ಷತ-ವಿಕ್ಷತರಾಗಿ ಇಲ್ಲಿ ಬಿದ್ದಿದ್ದಾರೆ. ಶತ್ರುಗಳ ಸೈನ್ಯವನ್ನು ಅವ್ಯಾಹತವಾಗಿ ದಹಿಸುತ್ತಿದ್ದ ಯಾವ ದ್ರೋಣರ ಗಮನವು ಅಗ್ನಿಯ ಗಮನದಂತೆಯೇ ಅನಿರ್ಬಾಧಿತವಾಗಿ ಮುಂದುವರಿಯುತ್ತಿದ್ದಿತೋ–ಅಂತಹ ದ್ರೋಣರು ಹತರಾಗಿ ಶಾಂತಜ್ವಾಲನಾದ ಯಜ್ಞೇಶ್ವರನಂತೆ ಈ ರಣಭೂಮಿಯಲ್ಲಿ ಮಲಗಿದ್ದಾರೆ. ಯುದ್ಧದಲ್ಲಿ ಹತರಾಗಿದ್ದರೂ ಧನುಸ್ಸನ್ನು ಹಿಡಿದಿರುವ ದ್ರೋಣರ ಮುಷ್ಟಿಯು ಸಡಿಲವಾಗಲಿಲ್ಲ. ಕೈಚೀಲವೂ ಹಾಗೆಯೇ ಇದೆ. ದೃಢಮುಷ್ಟಿಯೂ ಮತ್ತು ಕೈಚೀಲವೂ ಇವರು ಬದುಕಿದ್ದಾಗ ಹೇಗಿದ್ದುವೋ ಹಾಗೆಯೇ ಇವೆ. ಕೇಶವ! ಪ್ರಜಾಪತಿ ಬ್ರಹ್ಮನಿಂದ ವೇದಗಳು ಪ್ರತ್ಯೇಕವಾಗಿರದಂತೆ–ನಾಲ್ಕು ವೇದಗಳಾಗಲೀ, ಎಲ್ಲ ಮಹಾಸ್ತ್ರಗಳಾಗಲೀ ಎಂದೂ ಇವರನ್ನು ಬಿಟ್ಟಿರಲಿಲ್ಲ. (ನಾಲ್ಕು ವೇದಗಳೂ ಸಕಲಮಹಾಸ್ತ್ರಗಳೂ ಮಹಾತ್ಮರಾದ ದ್ರೋಣರಲ್ಲಿ ಮೂರ್ತಿಮತ್ತಾಗಿ ನೆಲೆಸಿದ್ದುವು.) ನೂರಾರು ಶಿಷ್ಯರಿಂದ ಅನುದಿನವೂ ಅರ್ಚಿಸಲ್ಪಡುತ್ತಿದ್ದ, ವಂದಿಗಳಿಂದ ಅನುದಿನವೂ ಅಭಿನಂದಿಸಲ್ಪಡುತ್ತಿದ್ದ, ವಂದನೆಗೆ ಅರ್ಹವಾದ, ಶುಭಾವಹವಾದ ದ್ರೋಣರ ಈ ಕಾಲುಗಳನ್ನಿಂದು ಗುಳ್ಳೇನರಿಗಳು ಎಳೆದಾಡುತ್ತಿವೆ. ಮಧುಸೂದನ! ಧೃಷ್ಟದ್ಯುಮ್ನನಿಂದ ಹತರಾಗಿ ಬಿದ್ದಿರುವ ದ್ರೋಣರ ಬಳಿಯಲ್ಲಿ ಅವರ ಪತ್ನಿಯಾದ ಕೃಪಿಯು ದೀನಭಾವದಿಂದ ಕುಳಿತಿದ್ದಾಳೆ. ದುಃಖದಿಂದಾಗಿ ಅವಳ ಬುದ್ಧಿಯು ಮಂಕಾಗಿಬಿಟ್ಟಿದೆ. ಹತರಾಗಿ ರಣಭೂಮಿಯಲ್ಲಿ ಮಲಗಿರುವ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ

ದ್ರೋಣರ ಬಳಿಯಲ್ಲಿ ಕುಳಿತು, ತಲೆಗೆದರಿಕೊಂಡು ನತಶಿರಳಾಗಿ ಬಿಕ್ಕಿ-ಬಿಕ್ಕಿ ಅಳುತ್ತಿರುವ ಆರ್ತಳಾಗಿರುವ ಈ ಕೃಪಿಯನ್ನು ನೋಡು, ಕೃಷ್ಣ! ಧೃಷ್ಟದ್ಯುಮ್ನನಿಂದ ಛಿನ್ನ-ಭಿನ್ನವಾಗಿ ಮಾಡಲ್ಪಟ್ಟ ಕವಚವನ್ನು ತೊಟ್ಟಿರುವ ದ್ರೋಣರ ಬಳಿಯಲ್ಲಿ–ಜಟಾಧಾರಿಣಿಯಾದ, ಬ್ರಹ್ಮಚಾರಿಣಿಯಾದ ಕೃಪಿಯು ಕುಳಿತಿದ್ದಾಳೆ. ಶೋಕದಿಂದ ದೀನಳಾಗಿರುವ, ಮನನೊಂದಿರುವ, ಸುಕುಮಾರಿಯಾದ, ಯಶಸ್ವಿನಿಯಾದ ಕೃಪಿಯು ಯುದ್ಧದಲ್ಲಿ ಹತನಾದ ತನ್ನ ಪತಿಗೆ ಪ್ರೇತಕಾರ್ಯಗಳನ್ನು ಮಾಡಲು (ಔರ್ಧ್ವದೈಹಿಕ ಕರ್ಮಗಳನ್ನು ಮಾಡಲು) ಪ್ರಯತ್ನಿಸುತ್ತಿದ್ದಾಳೆ. ವಿಧಿವತ್ತಾಗಿ ಅಗ್ನಿಗಳನ್ನು ಪ್ರತಿಷ್ಠಾಪಿಸಿ, ಚಿತೆಯನ್ನು ಸುತ್ತಲೂ ಹೊತ್ತಿಸಿ, ದ್ರೋಣರ ಕಳೇಬರವನ್ನು ಅದರ ಮೇಲಿಟ್ಟು ಸಾಮಗರು ತ್ರಿಸಾಮಗಳನ್ನು ಗಾನಮಾಡುತ್ತಿದ್ದಾರೆ. ಜಟೆಯನ್ನು ಧರಿಸಿರುವ ದ್ರೋಣರ ಶಿಷ್ಯರಾದ ಬ್ರಹ್ಮಚಾರಿಗಳೇ ಚಿತೆಯನ್ನು ಸಿದ್ಧಗೊಳಿಸುತ್ತಿದ್ದಾರೆ. ಅವರು ಈ ವೀರೋಚಿತವಾದ ಚಿತೆಯನ್ನು ಧನುಸ್ಸುಗಳಿಂದಲೂ, ಶಕ್ತ್ಯಾಯುಧಗಳಿಂದಲೂ, ರಥಾಸನಗಳಿಂದಲೂ, ವಿಧ-ವಿಧವಾದ ಬಾಣಗಳಿಂದಲೂ, ಇತರ ಆವಶ್ಯಕ ವಸ್ತುಗಳಿಂದಲೂ ಸಿದ್ಧಗೊಳಿಸಿ, ಮಹಾತೇಜಸ್ವಿಗಳಾದ ದ್ರೋಣರನ್ನು ಚಿತೆಯಮೇಲಿಟ್ಟು ವೇದಮಂತ್ರಗಳನ್ನು ಹೇಳುತ್ತಿದ್ದಾರೆ; ರೋದನವನ್ನೂ ಮಾಡುತ್ತಿದ್ದಾರೆ. ಕೆಲವರು ಕಡೆಯಲ್ಲಿ ಹೇಳಬೇಕಾದ ಮೂರು ಸಾಮಗಳನ್ನು ಗಾನಮಾಡುತ್ತಿದ್ದಾರೆ. ಚಿತೆಯ ಅಗ್ನಿಯಲ್ಲಿ ದ್ರೋಣರ ಅಗ್ನಿಹೋತ್ರಾಗ್ನಿಯನ್ನೂ ಇಟ್ಟು ಆ ಯಜ್ಞೇಶ್ವರನಲ್ಲಿ ದ್ರೋಣರನ್ನು ಹೋಮಮಾಡಿ, ಕೃಪಿಯನ್ನು ಮುಂದೆ ಬಿಟ್ಟುಕೊಂಡು ಚಿತೆಯನ್ನು ಎಡಭಾಗಕ್ಕೆ ಬಿಟ್ಟುಕೊಂಡು ಅಪ್ರದಕ್ಷಿಣವಾಗಿ ಸುತ್ತಿಬಂದು ಬ್ರಾಹ್ಮಣಶ್ರೇಷ್ಠರಾದ ದ್ರೋಣರ ಶಿಷ್ಯರು ಗಂಗಾನದಿಗೆ ಅಭಿಮುಖವಾಗಿ ಹೋಗುತ್ತಿದ್ದಾರೆ.”

೨೩ನೆಯ ಅಧ್ಯಾಯವು ಮುಗಿಯಿತು.

## ಭೂರಿಶ್ರವಸನ ಸುತ್ತಲೂ ಕುಳಿತು ವಿಲಪಿಸುತ್ತಿರುವ ಅವನ ಪತ್ನಿಯರನ್ನೂ ಮತ್ತು ಶಕುನಿಯನ್ನೂ ನೋಡಿ ಗಾಂಧಾರಿಯು ಶ್ರೀಕೃಷ್ಣನ ಸಮ್ಮುಖದಲ್ಲಿ ವಿಲಪಿಸಿದುದು

ಗಾಂಧಾರಿಯು ಶ್ರೀಕೃಷ್ಣನಿಗೆ ಹೇಳುತ್ತಾಳೆ :

"ಕೃಷ್ಣ! ಸಾತ್ಯಕಿಯಿಂದ ಕೆಳಕ್ಕೆ ಬೀಳಿಸಲ್ಪಟ್ಟ ಸೋಮದತ್ತನ ಮಗನಾದ ಭೂರಿಶ್ರವಸನನ್ನು ನೋಡು. ಅನೇಕಪಕ್ಷಿಗಳು ಅವನ ಸುತ್ತಲೂ ಕುಳಿತು ಶರೀರವನ್ನು ಕೊಕ್ಕುಗಳಿಂದ ಕುಕ್ಕುತ್ತಿವೆ. ಮತ್ತೊಂದು ಕಡೆಯಲ್ಲಿ ಹತನಾಗಿ ಬಿದ್ದಿರುವ ಸೋಮದತ್ತನು ಪುತ್ರಶೋಕದಿಂದ ಪರಿತಪ್ತನಾಗಿ ಮಹಾಧನುಷ್ಮಂತನಾದ ಸಾತ್ಯಕಿಯನ್ನು ನಿಂದಿಸುತ್ತಿರುವನೋ ಎಂಬಂತೆ ಕಾಣುತ್ತಿದ್ದಾನೆ. ನನ್ನಂತೆಯೇ ಶೋಕಸಾಗರದಲ್ಲಿ ಮುಳುಗಿರುವ ನಿಷ್ಕಳಂಕಳಾದ ಭೂರಿಶ್ರವಸನ ತಾಯಿಯು ಪತಿಯಾದ ಸೋಮದತ್ತನನ್ನು ಸಮಾಧಾನಗೊಳಿಸುವಂತಹ ಮಾತುಗಳನ್ನಾಡುತ್ತಿದ್ದಾಳೆ :

'ಮಹಾರಾಜ! ಸೌಭಾಗ್ಯದ ಕಾರಣದಿಂದ ದಾರುಣವಾದ ಭರತ ಕುಲಕ್ಷಯವನ್ನೂ, ಪ್ರಳಯಕಾಲಕ್ಕೆ ಸದೃಶವಾದ ಮಹಾಘೋರವಾದ ಕುರುಗಳ ಸಂಹಾರವನ್ನೂ ನೀನು ಕಣ್ಣುಗಳಿಂದ ನೋಡುತ್ತಿಲ್ಲ. ಸೌಭಾಗ್ಯದ ಕಾರಣದಿಂದಲೇ ಯೂಪಧ್ವಜನಾದ, ಸಾವಿರಾರು ಸುವರ್ಣನಾಣ್ಯಗಳನ್ನು ದಾನವಾಗಿ ಕೊಡುತ್ತಿದ್ದ, ಅನೇಕ ಯಾಗಗಳನ್ನು ಮಾಡಿದ ನಿನ್ನ ಮಗನಾದ ಭೂರಿಶ್ರವಸನು ಸತ್ತುದನ್ನು ನೀನು ನೋಡಲಿಲ್ಲ. ಸಮುದ್ರದ ದಡದಲ್ಲಿ ಸಾರಸಪಕ್ಷಿಗಳು ಚೀತ್ಕಾರಮಾಡುವಂತೆ–ರಣಭೂಮಿಯಲ್ಲಿ ನಿನ್ನ ಸೊಸೆಯರು ಬಗೆ-ಬಗೆಯಾಗಿ ಮಾಡುತ್ತಿರುವ ಘೋರವಾದ ವಿಲಾಪಗಳನ್ನೂ ಭಾಗ್ಯವಿಶೇಷದಿಂದಲೇ ನೀನು ಕೇಳುತ್ತಿಲ್ಲ. ಪುತ್ರರನ್ನೂ, ಪತಿಗಳನ್ನೂ ಕಳೆದುಕೊಂಡಿರುವ ನಿನ್ನ ಸೊಸೆಯರು ಒಂದು ವಸ್ತ್ರವನ್ನೋ ಅಥವಾ ಅರ್ಧವಸ್ತ್ರವನ್ನೋ ಉಟ್ಟುಕೊಂಡು, ಕೆದರಿಹೋದ ಕಪ್ಪಾದ ಕೂದಲುಳ್ಳವರಾಗಿ ರಣಭೂಮಿಯ ಸುತ್ತಲೂ ದಿಕ್ಕುಗೆಟ್ಟವರಂತೆ ಸುತ್ತುತ್ತಿದ್ದಾರೆ. ಇಂತಹ ದಾರುಣದೃಶ್ಯವನ್ನೂ ನೀನು ನೋಡುವಂತಾಗಲಿಲ್ಲ.

ಅರ್ಜುನನು ನರಶ್ರೇಷ್ಠನಾದ ಭೂರಿಶ್ರವಸನ ಒಂದು ತೋಳನ್ನು ಕತ್ತರಿಸಿದ್ದನ್ನಾಗಲೀ, ಬಳಿಕ ಸಾತ್ಯಕಿಯು ಅವನ ತಲೆಯನ್ನು ಕತ್ತರಿಸಿದ್ದನ್ನಾಗಲೀ ನೀನು ನೋಡಲಿಲ್ಲ. ಯುದ್ಧದಲ್ಲಿ ಶಲನು ಹತನಾದುದನ್ನೂ ನೀನು ನೋಡಲಿಲ್ಲ. ಅವರಿಬ್ಬರೂ ಈಗ ಮಾಂಸಾಶಿಗಳಾದ ಪ್ರಾಣಿಗಳಿಂದ ಭಕ್ಷಿಸಲ್ಪಡುತ್ತಿರುವುದನ್ನು ಸೌಭಾಗ್ಯವಶಾತ್ ನೀನು ನೋಡಲಿಲ್ಲ. ನಾನಾವಿಧವಾದ ರೂಪ-ಯೌವನಗಳಿಂದ ಯುಕ್ತರಾಗಿರುವ ನಿನ್ನ ಸೊಸೆಯರು ದುಃಖದಿಂದ ವಿಲಪಿಸುತ್ತಿರುವುದನ್ನೂ ನೀನು ಕೇಳುತ್ತಿಲ್ಲ. ಯೂಪಧ್ವಜನಾದ, ಮಹಾತ್ಮನಾದ ಭೂರಿಶ್ರವಸನ ರಥದ ಮೇಲಿದ್ದ ಸುವರ್ಣಮಯವಾದ ಶ್ವೇತಚ್ಛತ್ರವು ತುಂಡು-ತುಂಡಾಗಿ ಕೆಳಕ್ಕೆ ಬಿದ್ದುದನ್ನೂ ನೀನು ನೋಡಲಿಲ್ಲ. ಇದೂ ನಿನ್ನ ಭಾಗ್ಯವಿಶೇಷವೇ ಸರಿ. ಕಪ್ಪಾದ ಕಣ್ಣುಗಳನ್ನು ಹೊಂದಿರುವ ಇವರೆಲ್ಲರೂ ಭೂರಿಶ್ರವಸನ ಭಾರ್ಯೆಯರು. ಸಾತ್ಯಕಿಯಿಂದ ಹತನಾದ, ಪತಿಯಾದ ಭೂರಿಶ್ರವಸನನ್ನು ಇವರೆಲ್ಲರೂ ಸುತ್ತುವರಿದು ಗೋಳಾಡುತ್ತಿದ್ದಾರೆ'–ಎಂಬುದಾಗಿ ಭೂರಿಶ್ರವಸನ ತಾಯಿಯು ಪತಿಯಾದ ಸೋಮದತ್ತನನ್ನು ಉದ್ದೇಶಿಸಿ ಹೇಳುತ್ತಿದ್ದಾಳೆ.

ಕೇಶವ! ಪತಿಶೋಕದಿಂದ ಪೀಡಿತರಾದ ಈ ಅಬಲೆಯರು ಕರುಣಾಜನಕವಾದ ರೀತಿಯಲ್ಲಿ ವಿಲಪಿಸುತ್ತಾ ಮಲಗಿರುವ ಪತಿಗೆ ಅಭಿಮುಖರಾಗಿಯೇ ಭೂಮಿಯಲ್ಲಿ ಬೀಳುತ್ತಿದ್ದಾರೆ. ಕೃಷ್ಣ! ಬೀಭತ್ಸುವು ಅತಿನಿಂದಿತವಾದ, ಕ್ರೂರವಾದ ಈ ಕರ್ಮವನ್ನು ಹೇಗೆ ಮಾಡಿದನು? ಯಜ್ಞಶೀಲನಾದ ಮತ್ತು ಶೂರನಾದ ಭೂರಿಶ್ರವಸನು ಇತರರೊಡನೆ ಯುದ್ಧಮಾಡುತ್ತಿದ್ದಾಗ–ಅರ್ಜುನನ ಕಡೆ ಅಸಾವಧಾನತೆಯಿಂದಿದ್ದಾಗ– ಇವನ ತೋಳನ್ನು ಅರ್ಜುನನು ಕತ್ತರಿಸಿಬಿಟ್ಟನು. ಸಾತ್ಯಕಿಯು– ಪ್ರಾಯೋಪವೇಶವ್ರತಸ್ಥನಾಗಿ ಕುಳಿತಿದ್ದ, ನಿಯಮವ್ರತಾನುಷ್ಠಾನಪರನಾಗಿದ್ದ ಭೂರಿಶ್ರವಸನನ್ನು ಕತ್ತಿಯಿಂದ ಪ್ರಹರಿಸಿ ಅರ್ಜುನನು ಮಾಡಿದುದಕ್ಕಿಂತಲೂ ಹೆಚ್ಚಿನ ಪಾಪವನ್ನೇ ಮಾಡಿದನು.

ಏಕೋ ದ್ವಾಭ್ಯಾಂ ಹತಃ ಶೇಷೇ ತ್ವಮಧರ್ಮೇಣ ಧಾರ್ಮಿಕ ।
ಕಿಂ ನು ವಕ್ಷ್ಯತಿ ವೈ ಸತ್ಸು ಗೋಷ್ಠೀಷು ಚ ಸಭಾಸು ಚ ।
ಅಪುಣ್ಯಮಯಶಸ್ಯಂ ಚ ಕರ್ಮೇದಂ ಸಾತ್ಯಕೇಃ ಸ್ವಯಮ್ ॥೧೫॥

'ಧಾರ್ಮಿಕನೇ! ಪತಿದೇವ! ಇಬ್ಬರು ಮಹಾರಥರು ಏಕಾಕಿಯಾಗಿದ್ದ ನಿನ್ನನ್ನು ಅಧರ್ಮದ ಮಾರ್ಗದಿಂದ ಸಂಹರಿಸಿದರು. ಅವರಿಂದ ಹತನಾದ ನೀನು ಈ ರಣಭೂಮಿಯಲ್ಲಿ ಮಲಗಿರುವೆ. ಪಾಪಸಂಘಾಟಕವಾದ ಮತ್ತು ಯಶೋಹೀನವಾದ ಈ ಕುತ್ಸಿತಕಾರ್ಯವನ್ನು ಮಾಡಿರುವ ಸಾತ್ಯಕಿಯು ಸತ್ಪುರುಷರ ಗೋಷ್ಠಿಗಳಲ್ಲಿಯೂ ಮತ್ತು ಸಭೆಗಳಲ್ಲಿಯೂ ತಾನು ಮಾಡಿರುವ ಈ ಪಾಪಕರ್ಮದ ವಿಷಯವಾಗಿ ಏನೆಂದು ಹೇಳುತ್ತಾನೆ?'

ಮಾಧವ! ಹೀಗೆಂಬುದಾಗಿ ಯೂಪಧ್ವಜನ ಪತ್ನಿಯರು ಹೇಳಿಕೊಂಡು ವಿಲಪಿಸುತ್ತಿದ್ದಾರೆ.

ಮುಷ್ಟಿಮಾತ್ರಪರಿಮಿತವಾದ ಸೊಂಟದ ಪ್ರದೇಶದಿಂದ ಕೂಡಿರುವ (ತೆಳ್ಳಗಿರುವ ಸೊಂಟದಿಂದ ಕೂಡಿರುವ–ತನುಮಧ್ಯೆಯಾದ) ಭೂರಿಶ್ರವಸನ ಪತ್ನಿಯು ಗಂಡನ ಭುಜವನ್ನು ತೊಡೆಯ ಮೇಲಿಟ್ಟು ಕೊಂಡು ಅತ್ಯಂತದೀನಭಾವದಿಂದ ವಿಲಪಿಸುತ್ತಿದ್ದಾಳೆ.

**ಅಯಂ ಸ ಹನ್ತಾ ಶೂರಾಣಾಂ ಮಿತ್ರಾಣಾಮಭಯಪ್ರದಃ ।**
**ಪ್ರದಾತಾ ಗೋಸಹಸ್ರಾಣಾಂ ಕ್ಷತ್ರಿಯಾನ್ತಕರಃ ಕರಃ ॥೧೮॥**

'ಈ ಅಮೋಘವಾದ ಹಸ್ತವು ಶತ್ರುಪಕ್ಷದ ಶೂರರನ್ನು ಸಂಹಾರ ಮಾಡುತ್ತಿದ್ದಿತು. ಮಿತ್ರರಿಗೆ ಅಭಯಪ್ರದಾನವನ್ನು ಮಾಡುತ್ತಿದ್ದಿತು. ಬ್ರಾಹ್ಮಣರಿಗೆ ಸಾವಿರಾರು ಗೋವುಗಳನ್ನು ದಾನಮಾಡುತ್ತಿದ್ದಿತು. ಕ್ಷತ್ರಿಯರನ್ನು ಸಂಪೂರ್ಣವಾಗಿ ವಿನಾಶಗೊಳಿಸುತ್ತಿದ್ದಿತು.

**ಅಯಂ ಸ ರಸನೋತ್ಕರ್ಷೀ ಪೀನಸ್ತನವಿಮರ್ದನಃ ।**
**ನಾಭ್ಯೂರುಜಘನಸ್ಪರ್ಶೀ ನೀವೀವಿಸ್ರಂಸನಃ ಕರಃ ॥೧೯॥**

ಈ ಹಸ್ತವು ಪತ್ನಿಯರಾದ ನಮ್ಮ ಒಡ್ಯಾಣಗಳನ್ನು ತೆಗೆಯುತ್ತಿದ್ದಿತು. ಪುಷ್ಟವಾಗಿರುವ ಸ್ತನಗಳನ್ನು ಮರ್ದನಮಾಡುತ್ತಿದ್ದಿತು. ಪತ್ನಿಯರ ಹೊಕ್ಕಳು-ತೊಡೆ-ಕಟಿಪ್ರದೇಶಗಳನ್ನು ಸ್ಪರ್ಶಿಸುತ್ತಿದ್ದಿತು. ಸೊಂಟದಲ್ಲಿರುವ ಸೀರೆಯ ಗಂಟನ್ನು ಬಿಚ್ಚುತ್ತಿದ್ದಿತು.

**ವಾಸುದೇವಸ್ಯ ಸಾಂನಿಧ್ಯೇ ಪಾರ್ಥೇನಾಕ್ಲಿಷ್ಟಕರ್ಮಣಾ ।**
**ಯುಧ್ಯತಃ ಸಮರೇಽನ್ಯೇನ ಪ್ರಮತ್ತಸ್ಯ ನಿಪಾತಿತಃ ॥೨೦॥**

ಅಂತಹ ಅಮೋಘವಾದ ಈ ಹಸ್ತವು ವಾಸುದೇವನ ಸನ್ನಿಧಿಯಲ್ಲಿ, ಕಷ್ಟವಾದ ಕಾರ್ಯಗಳನ್ನು ಸುಲಭವಾಗಿ ಮಾಡುವ ಪಾರ್ಥನಿಂದ, ನನ್ನ ಪತಿಯು ಬೇರೊಬ್ಬನೊಡನೆ ಯುದ್ಧಮಾಡುತ್ತಿದ್ದಾಗ, ಅಜಾಗರೂಕತೆ ಯಿಂದಿದ್ದಾಗ ಕತ್ತರಿಸಲ್ಪಟ್ಟಿತು.’

ಕೃಷ್ಣ! ಹೀಗೆ ಪತಿಯ ತೋಳನ್ನು ತೊಡೆಯ ಮೇಲಿಟ್ಟುಕೊಂಡು ವಿಲಪಿಸುತ್ತಿರುವ ಭೂರಿಶ್ರವಸನ ಪತ್ನಿಯು ನಿನ್ನನ್ನೇ ನೇರವಾಗಿ ಪ್ರಶ್ನಿಸುತ್ತಿದ್ದಾಳೆ.

**ಕಿಂ ನು ವಕ್ಷ್ಯಸಿ ಸಂಸತ್ಸು ಕಥಾಸು ಚ ಜನಾರ್ದನ ।**
**ಅರ್ಜುನಸ್ಯ ಮಹತ್ಕರ್ಮ ಸ್ವಯಂ ವಾ ಸ ಕಿರೀಟಭೃತ್ ॥೨೧॥**

‘ಜನಾರ್ದನ! ಸಭೆಗಳಲ್ಲಿ ಮತ್ತು ಮಾತನಾಡುವ ಪ್ರಸಂಗಗಳಲ್ಲಿ ನಿನ್ನ ಪ್ರಿಯಸ್ನೇಹಿತನಾದ ಅರ್ಜುನನು ಮಾಡಿದ ಮಹಾಕಾರ್ಯಗಳನ್ನು ಕುರಿತು ಹೇಳುವಾಗ ಈ ಪಾಪಕರ್ಮದ ವಿಷಯವಾಗಿ ಏನೆಂದು ಹೇಳುವೆ? ಅಥವಾ ಅರ್ಜುನನಾದರೂ ತಾನು ಮಾಡಿದ ಕುತ್ಸಿತಕರ್ಮಕ್ಕೆ ಯಾವ ರೀತಿಯಲ್ಲಿ ಸಮಾಧಾನವನ್ನು ಹೇಳುತ್ತಾನೆ?’

ಕೃಷ್ಣ! ಅರ್ಜುನನನ್ನೂ ಮತ್ತು ನಿನ್ನನ್ನೂ ಹೀಗೆ ನಿಂದಿಸಿ ವರಾಂಗನೆಯಾದ ಭೂರಿಶ್ರವಸನ ಪತ್ನಿಯು ಸುಮ್ಮನಾದಳು. ಅತ್ತೆಯು ಸೊಸೆಗಾಗಿ ಶೋಕಪಡುವಂತೆ–ಅವಳ ಸವತಿಯರೂ ಭೂರಿಶ್ರವಸನ ಪತ್ನಿಯ ವಿಷಯದಲ್ಲಿ ಶೋಕಪಡುತ್ತಿದ್ದಾರೆ.

ಮಾಧವ! ಬಲಿಷ್ಠನಾದ, ಸತ್ಯವಿಕ್ರಮನಾದ, ಗಾಂಧಾರರಾಜನಾದ, ಸೋದರಮಾವನಾದ ಶಕುನಿಯನ್ನು ಸೋದರಳಿಯನಾದ ಸಹದೇವನೇ ಸಂಹರಿಸಿದನು. ಹಿಂದೆ ಸೇವಕಿಯರು ಸುವರ್ಣಮಯವಾದ ಹಿಡಿಗಳಿಂದ ಕೂಡಿದ್ದ ಎರಡೆರಡು ವ್ಯಜನಗಳಿಂದ ಇವನಿಗೆ ಗಾಳಿಬೀಸುತ್ತಿದ್ದರು. ಇಲ್ಲಿ ಮಲಗಿರುವ ಇವನಿಗೆ ಈಗ ಇವನ ಸುತ್ತಲೂ ಇರುವ ಪಕ್ಷಿಗಳೇ ರೆಕ್ಕೆಗಳಿಂದ ಗಾಳಿಯನ್ನು ಬೀಸುತ್ತಿವೆ. ಇವನು ಮಹಾಮಾಯಾವಿಯಾಗಿದ್ದನು. ನೂರಾರು-ಸಾವಿರಾರು ರೂಪಗಳನ್ನು ಧರಿಸುತ್ತಿದ್ದನು. ಪಾಂಡುಪುತ್ರನಾದ ಸಹದೇವನ ತೇಜಸ್ಸಿನಿಂದ ಇವನ ಮಾಯೆಯು ದಗ್ಧವಾಗಿಹೋಯಿತು.

ಇವನು ಕಪಟವಿದ್ಯೆಯಲ್ಲಿ, ವಂಚನೆಮಾಡುವುದರಲ್ಲಿ ಮಹಾನಿಪುಣನು. ದ್ಯೂತಸಭೆಯಲ್ಲಿ ಯುಧಿಷ್ಠಿರನೊಡನೆ ಆಡಿದ ದ್ಯೂತದಲ್ಲಿ ವಂಚನೆಯಿಂದಲೇ ಇವನು ಅವನ ಎಲ್ಲ ರಾಜ್ಯಗಳನ್ನೂ ದುರ್ಯೋಧನನಿಗೆ ಗೆದ್ದುಕೊಟ್ಟನು. ಅಂತಹವನು ಯುದ್ಧವೆಂಬ ದ್ಯೂತದಲ್ಲಿ ತನ್ನ ಪ್ರಾಣವನ್ನೇ ಪಣವನ್ನಾಗಿಟ್ಟು ಸೋತುಹೋದನು. ನನ್ನ ಮಕ್ಕಳನ್ನು ವಿನಾಶಗೊಳಿಸುವ ಸಲುವಾಗಿಯೇ ಜೂಜಾಟದಲ್ಲಿ ಪರಿಣತಿಯನ್ನು ಪಡೆದಿದ್ದ, ಜೂಜುಕೋರನಾದ ಈ ಶಕುನಿಯನ್ನು ಮಾಂಸಾಶಿಗಳಾದ ಪಕ್ಷಿಗಳು ಸುತ್ತುವರಿದು ಕುಳಿತಿವೆ. ನನ್ನ ಮಕ್ಕಳ ವಧೆಗಾಗಿಯೂ ಮತ್ತು ತನ್ನ ಸಂಬಂಧಿಗಳ ವಿನಾಶಕ್ಕಾಗಿಯೂ ಈ ಶಕುನಿಯೇ–ದುರ್ಯೋಧನನು ಪಾಂಡವರೊಡನೆ ದ್ವೇಷಕಟ್ಟಿಕೊಳ್ಳುವಂತೆ ಮಾಡಿದನು.

**ಯಥೈವ ಮಮ ಪುತ್ರಾಣಾಂ ಲೋಕಾಃ ಶಸ್ತ್ರಜಿತಾಃ ಪ್ರಭೋ ।**
**ಏವಮಸ್ಯಾಪಿ ದುರ್ಬುದ್ಧೇರ್ಲೋಕಾಃ ಶಸ್ತ್ರೇಣ ವೈ ಜಿತಾಃ ॥೨೯॥**

ಯಾವ ರೀತಿಯಲ್ಲಿ ನನ್ನ ಮಕ್ಕಳು ಶಸ್ತ್ರಾಘಾತಗಳಿಂದ ಮರಣ ಹೊಂದಿ ಪುಣ್ಯಲೋಕಗಳನ್ನು ಸಂಪಾದಿಸಿದರೋ–ಅದೇ ರೀತಿಯಲ್ಲಿ ದುರ್ಬುದ್ಧಿಯಾದ ವಂಚಕನಾದ ಇವನೂ ಶಸ್ತ್ರಗಳಿಂದಲೇ (ಶಸ್ತ್ರಾಘಾತದ ಮೂಲಕವಾಗಿ ಯುದ್ಧದಲ್ಲಿ ಪ್ರಾಣಬಿಟ್ಟುದುದರಿಂದ) ಅನೇಕಪುಣ್ಯಲೋಕಗಳನ್ನು ಸಂಪಾದಿಸಿದ್ದಾನೆ.

**ಕಥಂ ಚ ನಾಯಂ ತತ್ರಾಪಿ ಪುತ್ರಾನ್ಮೇ ಭ್ರಾತೃಭಿಃ ಸಹ ।**
**ವಿರೋಧಯೇದೃಜುಪ್ರಜ್ಞಾನನೃಜುರ್ಮಧುಸೂದನ ॥೩೦॥**

ಮಧುಸೂದನ! (ನನ್ನ ಮಕ್ಕಳಂತೆಯೇ ಶಕುನಿಯೂ ಪುಣ್ಯಲೋಕಕ್ಕೆ ಹೋಗಿರುವುದರಿಂದ ನನಗೆ ಭಯವೇ ಉಂಟಾಗಿದೆ.) ನನ್ನ ಮಕ್ಕಳು ಸರಳಸ್ವಭಾವದವರು. ಶಕುನಿಯು ಜನ್ಮತಃ ವಕ್ರಬುದ್ಧಿಯವನು. ಪುಣ್ಯಲೋಕಗಳಲ್ಲಿಯೂ ವಕ್ರಬುದ್ಧಿಯವನಾದ ಈ ಶಕುನಿಯು ಸಹೋದರರ ನಡುವೆ ವಿರೋಧವನ್ನುಂಟುಮಾಡದೇ ಹೇಗೆ ಸುಮ್ಮನಿರುವನು?"

೨೪ನೆಯ ಅಧ್ಯಾಯವು ಮುಗಿಯಿತು.

೨೫ನೆಯ ಅಧ್ಯಾಯ ಸ್ತ್ರೀವಿಲಾಪಪರ್ವ (ಮುಂದುವರಿದಿದೆ.)

## ಶೋಕಾತುರಳಾದ ಗಾಂಧಾರಿಯು ಇನ್ನೂ ಅನೇಕವೀರರು ಹತರಾಗಿರುವುದನ್ನು ಕಂಡು ವಿಲಪಿಸುತ್ತಾ ಕುಪಿತಳಾಗಿ ಶ್ರೀಕೃಷ್ಣನನ್ನು ಶಪಿಸಿದುದು

ಗಾಂಧಾರಿಯು ಶ್ರೀಕೃಷ್ಣನೊಡನೆ ಹೇಳುತ್ತಾಳೆ :

"ಮಾಧವ! ಕಾಂಬೋಜದೇಶದಲ್ಲಿ ತಯಾರಾದ ಮೆತ್ತನೆಯ ಹಾಸಿಗೆಯ ಮೇಲೆ ಮಲಗಲು ಯೋಗ್ಯನಾದ, ದುರ್ಧರ್ಷನಾದ, ಎತ್ತಿನ ಹಿಣಿಲಿನಂತೆ ಹೆಗಲುಗಳನ್ನು ಹೊಂದಿರುವ ಕಾಂಬೋಜರಾಜನು ಹತನಾಗಿ ಈ ಧೂಳಿನಲ್ಲಿ ಮಲಗಿರುವುದನ್ನು ನೋಡು. ಚಂದನಚರ್ಚಿತವಾದ ಇವನ ತೋಳುಗಳು ರಕ್ತದಿಂದ ಸಂಪೂರ್ಣವಾಗಿ ತೋಯ್ದುಹೋಗಿವೆ. ಇದನ್ನು ನೋಡಿದ ಇವನ ಭಾರ್ಯೆಯು ಅತಿದುಃಖಿತಳಾಗಿ ದೈನ್ಯದಿಂದ ರೋದನ ಮಾಡುತ್ತಿದ್ದಾಳೆ. 'ನಿನ್ನ ತೋಳುಗಳು ಸುಂದರವಾದ ಅಂಗೈಗಳಿಂದಲೂ ಮತ್ತು ಬೆರಳುಗಳಿಂದಲೂ ಕೂಡಿದ್ದು ಪರಿಘಾಯುಧಕ್ಕೆ ಸಮಾನವಾಗಿದ್ದುವು. ಈ ನಿನ್ನ ಎರಡು ತೋಳುಗಳ ಮಧ್ಯದಲ್ಲಿ ಸೇರಿಕೊಳ್ಳುತ್ತಿದ್ದ ನನ್ನನ್ನು ಅನುರಾಗವೆಂಬುದು ಯಾವಾಗಲೂ ಬಿಟ್ಟುಹೋಗಿರಲಿಲ್ಲ. (ನಿನ್ನ ಆಲಿಂಗನದಿಂದ ಬಂಧಿತಳಾಗುತ್ತಿದ್ದ ನಾನು ಸದಾಕಾಲದಲ್ಲಿಯೂ ನಿನ್ನಲ್ಲಿಯೇ ಅನುರಕ್ತಳಾಗಿರುತ್ತಿದ್ದೆನು.) ಜನೇಶ್ವರನೇ! ಈಗ ನಿನ್ನಿಂದ ವಿಹೀನಳಾಗಿರುವ ನನಗೆ ಎಂತಹ ದುರ್ಗತಿಯು ಲಭಿಸಿತು?' ಇವೇ ಮುಂತಾಗಿ ಹೇಳಿಕೊಂಡು ಕಾಂಬೋಜರಾಜಮಹಿಷಿಯು ದುಃಖಪಡುತ್ತಿದ್ದಾಳೆ. ಕೃಷ್ಣ! ಅವಳ ಬಂಧು-ಜ್ಞಾತಿಗಳೆಲ್ಲರೂ ಹತರಾಗಿದ್ದಾರೆ. ಅವಳಿಂದು ಅನಾಥಳಾಗಿದ್ದಾಳೆ. ನಡುಗುತ್ತಾ ಮಧುರಸ್ವರದಿಂದ ವಿಲಪಿಸುತ್ತಿದ್ದಾಳೆ. ಬಿಸಿಲಿನಲ್ಲಿ ಬಾಡಿಹೋಗಿರುವ ನಾನಾವಿಧವಾದ ಪುಷ್ಪಮಾಲೆಗಳಂತೆ–ರಾಜಮಹಿಳೆಯರು ಬಿಸಿಲಿನಲ್ಲಿ ಬಾಡಿಹೋಗಿದ್ದರೂ ಶರೀರಕಾಂತಿಯು (ಸೌಂದರ್ಯವು) ಅವರ ಶರೀರಗಳನ್ನು ಬಿಟ್ಟುಹೋಗಿಲ್ಲ. ಬಿಸಿಲಿನಲ್ಲಿ ಪರಿತಪಿಸುತ್ತಿದ್ದರೂ ಕಾಂತಿಯುಕ್ತರಾಗಿಯೇ ಇದ್ದಾರೆ. ಮಧುಸೂದನ! ಅಲ್ಲಿಯೇ ಹತ್ತಿರದಲ್ಲಿ,

ಹೊಳೆಯುತ್ತಿರುವ ಅಂಗದಾಭರಣಗಳಿಂದ ಕೂಡಿರುವ, ಮಹಾಭುಜಗಳನ್ನು ಹೊಂದಿರುವ, ಶೂರನಾದ ಕಳಿಂಗನು ಮಲಗಿರುವುದನ್ನು ನೋಡು, ಜನಾರ್ದನ! ಅತ್ತಕಡೆಯಲ್ಲಿ ಮಲಗಿರುವ ಮಗಧರಾಜನಾದ ಜಯತ್ಸೇನನನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದು ಅವನ ಪತ್ನಿಯರು ವ್ಯಾಕುಲಗೊಂಡು ರೋದನಮಾಡುತ್ತಿದ್ದಾರೆ. ವಿಶಾಲನೇತ್ರೆಯರಾದ, ಸುಶ್ರಾವ್ಯವಾದ ಕಂಠದಿಂದ ಕೂಡಿರುವ ಈ ಮಗಧರಾಜಮಹಿಷಿಯರ ಮನಸ್ಸನ್ನೂ ಮತ್ತು ಕಿವಿಗಳನ್ನೂ ಆಕರ್ಷಿಸುವ ರೋದನನಿನಾದವು ನನ್ನ ಮನಸ್ಸನ್ನೇ ವಿಮೋಹಗೊಳಿಸುವಂತಿದೆ. ಈ ಮಗಧರಾಜಸ್ತ್ರೀಯರ ವಸ್ತ್ರಾಭರಣಗಳು ಅಸ್ತವ್ಯಸ್ತವಾಗಿವೆ. ಸುಂದರವಾದ ಹಚ್ಚಡದಿಂದ ಕೂಡಿದ ಹಾಸಿಗೆಯ ಮೇಲೆ ಮಲಗಲು ಯೋಗ್ಯರಾಗಿದ್ದ ಇವರೀಗ ಶೋಕಪೀಡಿತರಾಗಿ ರೋದನಮಾಡುತ್ತಾ ನೆಲದ ಮೇಲೆ ಮಲಗಿದ್ದಾರೆ. ಇತ್ತಕಡೆ ನೋಡು, ಕೃಷ್ಣ! ಕೋಸಲಾಧಿಪತಿಯಾದ, ರಾಜಪುತ್ರನಾದ ಬೃಹದ್ಬಲನನ್ನು ಅವನ ಪತ್ನಿಯರು ಸುತ್ತುವರಿದು ಕುಳಿತು ಪ್ರತ್ಯೇಕ-ಪ್ರತ್ಯೇಕವಾಗಿ ಅವನ ಗುಣಕಥನಗಳನ್ನು ಮಾಡುತ್ತಾ ರೋದನಮಾಡುತ್ತಿದ್ದಾರೆ. ಅಭಿಮನ್ಯುವಿನ ಬಾಹುಬಲದಿಂದ ಪ್ರೇರಿತವಾಗಿ ಇವನ ಶರೀರವನ್ನು ಹೊಕ್ಕಿರುವ ಬಾಣಗಳನ್ನು ಕಷ್ಟಕ್ಕೊಳಗಾಗಿರುವ ಬೃಹದ್ಬಲನ ಪತ್ನಿಯರು ಹೊರತೆಗೆಯುತ್ತಿದ್ದಾರೆ. ಪತಿಯ ಶರೀರದ ಮೇಲಿನ ಗಾಯಗಳನ್ನು ಅವಲೋಕಿಸಿದ ಅವರು ಪುನಃ-ಪುನಃ ಮೂರ್ಛಿತರಾಗುತ್ತಲೇ ಇದ್ದಾರೆ. ಸರ್ವಾಂಗಸುಂದರಿಯರಾದ ಈ ರಾಜಮಹಿಷಿಯರ ಮುಖಗಳು ಬಿಸಿಲಿನ ಕಾರಣದಿಂದಲೂ, ಪರಿಶ್ರಮದ ಕಾರಣದಿಂದಲೂ ಬಾಡಿಹೋದ ಕಮಲಗಳಿಗೆ ಸಮಾನವಾಗಿ ಕಾಣುತ್ತಿವೆ.

ಅತ್ತನೋಡು, ಕೃಷ್ಣ! ದ್ರೋಣರಿಂದ ಹತರಾದ, ಸುಂದರವಾದ ಅಂಗದಾಭರಣಗಳನ್ನು ಧರಿಸಿರುವ, ಸುವರ್ಣಮಯವಾದ ಮಾಲೆಗಳಿಂದ ಸಮಲಂಕೃತರಾಗಿರುವ, ಬಾಲಕರಾಗಿರುವ ಧೃಷ್ಟದ್ಯುಮ್ನನ ಮಕ್ಕಳು ಮಲಗಿದ್ದಾರೆ.

ದ್ರೋಣರು ಪ್ರಜ್ವಲಿಸುವ ಅಗ್ನಿಗೆ ಸಮಾನರಾಗಿದ್ದರು. ಅವರ ರಥವೇ ಅಗ್ನಿಗೃಹವಾಗಿದ್ದಿತು. ಅವರ ಧನುಸ್ಸು ಜ್ವಾಲೆಯ ರೂಪದಲ್ಲಿದ್ದಿತು. ಬಾಣ, ಶಕ್ತ್ಯಾಯುಧ ಮತ್ತು ಗದೆಗಳು ಇಂಧನದ ರೂಪದಲ್ಲಿದ್ದುವು.

ಅಂತಹ ಬೆಂಕಿಯನ್ನು ಮುತ್ತಲು ಬಂದ ಪತಂಗಗಳಂತೆ–ದ್ರೋಣರೂಪವಾದ ಅಗ್ನಿಯ ಬಳಿಗೆ ಬಂದು ಧೃಷ್ಟದ್ಯುಮ್ನನ ಮಕ್ಕಳೆಲ್ಲರೂ ಹತರಾದರು. ಅದೇ ರೀತಿಯಲ್ಲಿ ದ್ರೋಣರಿಗೆ ಅಭಿಮುಖರಾಗಿ ಹೋದ, ವೀರರಾದ, ಸುಂದರವಾದ ಅಂಗದಗಳನ್ನು ಧರಿಸಿದ್ದ ಐವರು ಕೇಕಯ ಸಹೋದರರೂ ಅವರಿಂದಲೇ ಹತರಾಗಿ ಈ ರಣಭೂಮಿಯಲ್ಲಿ ಮಲಗಿದ್ದಾರೆ. ಪುಟಕ್ಕೆ ಹಾಕಿದ ಚಿನ್ನದಿಂದ ಮಾಡಿದ್ದ ಕವಚಗಳನ್ನು ಧರಿಸಿದ್ದ, ತಾಲಧ್ವಜಗಳುಳ್ಳ ರಥಗಳ ಸಮೂಹಗಳನ್ನೇ ಹೊಂದಿದ್ದ ಕೇಕಯಸಹೋದರರು ಪ್ರಜ್ವಲಿಸುವ ಅಗ್ನಿಗಳೋ–ಎಂಬಂತೆ ತಮ್ಮ ಕಾಂತಿಯಿಂದ ಭೂಮಿಯನ್ನೇ ಬೆಳಗುತ್ತಿದ್ದಾರೆ.

ಕೃಷ್ಣ! ಅರಣ್ಯದಲ್ಲಿ ಮಹಾಗಜವು ಮಹಾಸಿಂಹದಿಂದ ಕೊಲ್ಲಲ್ಪಡುವಂತೆ–ದ್ರೋಣರಿಂದ ಯುದ್ಧದಲ್ಲಿ ಹತನಾಗಿ ಕೆಳಕ್ಕೆ ಬೀಳಿಸಲ್ಪಟ್ಟಿರುವ ಈ ದ್ರುಪದನನ್ನು ನೋಡು. ಪುಂಡರೀಕಾಕ್ಷ! ಪಾಂಚಾಲರಾಜನ ನಿರ್ಮಲವಾದ ಶ್ವೇತಚ್ಛತ್ರವು ಶರತ್ಕಾಲದ ಚಂದ್ರನಂತೆ ಬಹಳ ಶೋಭಾಯಮಾನವಾಗಿ ಕಾಣುತ್ತಿದೆ. ದುಃಖಿತರಾದ ಅವನ ಈ ಭಾರ್ಯೆಯರೂ ಮತ್ತು ಸೊಸೆಯರೂ ವೃದ್ಧನಾದ ದ್ರುಪದನನ್ನು ಚಿತೆಯಲ್ಲಿರಿಸಿ ಭಸ್ಮಮಾಡಿ ಪಾಂಚಾಲರಾಜನನ್ನು ಬಲಕ್ಕೆ ಬಿಟ್ಟುಕೊಂಡು (ಪ್ರದಕ್ಷಿಣೆಮಾಡಿಕೊಂಡು) ಹೋಗುತ್ತಿದ್ದಾರೆ. ದ್ರೋಣರಿಂದ ಹತನಾದ, ಶೂರನಾದ, ಚೇದಿಗಳಲ್ಲಿ ಶ್ರೇಷ್ಠನಾದ, ಮಹಾತ್ಮನಾದ ಧೃಷ್ಟಕೇತುವನ್ನು–ದುಃಖದಿಂದಾಗಿ ಬುದ್ಧಿಯನ್ನು ಕಳೆದುಕೊಂಡಿರುವ ಅವನ ಪತ್ನಿಯರು ದಹನಸಂಸ್ಕಾರಕ್ಕಾಗಿ ಕೊಂಡೊಯ್ಯುತ್ತಿದ್ದಾರೆ.

ಮಧುಸೂದನ! ಚೇದಿರಾಜನಾದ, ಮಹಾಧನುಷ್ಮಂತನಾದ ಈ ಧೃಷ್ಟಕೇತುವು ಯುದ್ಧದಲ್ಲಿ ದ್ರೋಣಾಚಾರ್ಯರ ಅಸ್ತ್ರ-ಶಸ್ತ್ರಗಳೆಲ್ಲವನ್ನೂ ನಾಶಗೊಳಿಸಿ–ನದಿಯ ವೇಗದಿಂದ ಸಮೂಲೋತ್ಪಾಟಿತವಾದ ವೃಕ್ಷದಂತೆ–ಕಟ್ಟಕಡೆಗೆ ದ್ರೋಣರಿಂದಲೇ ಹತನಾಗಿ ಮಲಗಿದ್ದಾನೆ. ಮಹಾರಥನಾದ, ಶೂರನಾದ, ಚೇದಿಗಳ ಅರಸನಾದ ಈ ಧೃಷ್ಟಕೇತುವು ಸಾವಿರಾರು ಶತ್ರುಗಳನ್ನು ಯುದ್ಧದಲ್ಲಿ ಸಂಹರಿಸಿ ಕಡೆಯಲ್ಲಿ ದ್ರೋಣರಿಂದ ಹತನಾಗಿ ಇಲ್ಲಿ ಮಲಗಿದ್ದಾನೆ. ಬಂಧುಗಳೊಡನೆಯೂ ಸೈನ್ಯದೊಡನೆಯೂ ಹತನಾದ, ಪಕ್ಷಿ

ಗಳಿಂದ ಕುಕ್ಕಲ್ಪಡುತ್ತಿರುವ, ಚೇದಿರಾಜನಾದ ಧೃಷ್ಟಕೇತುವನ್ನು–ಅವನ ಪತ್ನಿಯರು ಸುತ್ತುವರಿದು ಕುಳಿತಿದ್ದಾರೆ. ದಶಾರ್ಹಕುಲಕನ್ಯೆಯಾದ ಶ್ರುತಶ್ರವಸಳ–ಮೊಮ್ಮಗನಾದ, ಶಿಶುಪಾಲನ ಪುತ್ರನಾದ, ವೀರನಾದ, ಸತ್ಯಪರಾಕ್ರಮನಾದ ಧೃಷ್ಟಕೇತುವನ್ನು ತೊಡೆಯ ಮೇಲಿಟ್ಟುಕೊಂಡು ಚೇದಿರಾಜನ ರಾಣಿಯರು ರೋದನಮಾಡುತ್ತಿದ್ದಾರೆ. ಹೃಷೀಕೇಶ! ಧೃಷ್ಟಕೇತುವಿನ ಮಗನಾದ, ಸುಂದರವಾದ ಕರ್ಣಕುಂಡಲವನ್ನು ಧರಿಸಿರುವ ಸುವಕ್ತ್ರನನ್ನು ದ್ರೋಣರು ನಿಶಿತವಾದ ಬಾಣಗಳಿಂದ ಕ್ಷತ-ವಿಕ್ಷತನನ್ನಾಗಿ ಮಾಡಿರುವುದನ್ನು ನೋಡು. ಈ ಸುವಕ್ತ್ರನು, ರಣರಂಗದ ಮಧ್ಯದಲ್ಲಿ ಶತ್ರುಗಳೊಡನೆ ಯುದ್ಧಮಾಡುತ್ತಿದ್ದ ತನ್ನ ತಂದೆಯಾದ ಧೃಷ್ಟಕೇತುವನ್ನು ಬಿಟ್ಟುಹೋಗುತ್ತಲೇ ಇರಲಿಲ್ಲ. ಹಾಗೆಯೇ ಈಗಲೂ ಹತನಾಗಿ ತನ್ನ ತಂದೆಯ ಜೊತೆಯಲ್ಲಿಯೇ ಮಲಗಿದ್ದಾನೆ. ಇದೇ ರೀತಿಯಲ್ಲಿ ಶತ್ರುಹಂತಕನಾದ, ನನ್ನ ಮೊಮ್ಮಗನಾದ ಲಕ್ಷ್ಮಣನೂ ಯುದ್ಧಮಾಡುವಾಗ ದುರ್ಯೋಧನನನ್ನು ಅನುಸರಿಸಿಯೇ ಇರುತ್ತಿದ್ದನು. ಈಗಲೂ ಸಹ ತನ್ನ ತಂದೆಯ ಜೊತೆಯಲ್ಲಿಯೇ ಮಲಗಿದ್ದಾನೆ. ಹಿಮಂತರ್ತುವಿನ ಕಡೆಯಲ್ಲಿ ಪುಷ್ಪಿತವಾದ ಶಾಲವೃಕ್ಷಗಳು ಗಾಳಿಯ ಬಡಿತದಿಂದ ಕೆಳಕ್ಕೆ ಬೀಳುವಂತೆ– ಅವಂತೀದೇಶದ ವಿಂದಾನುವಿಂದರು ಬಿದ್ದಿರುವುದನ್ನು ನೋಡು, ಕೃಷ್ಣ! ಇವರು ಸುವರ್ಣಮಯವಾದ ಅಂಗದಗಳನ್ನೂ ಕವಚಗಳನ್ನೂ ಧರಿಸುತ್ತಿದ್ದರು. ಧನುರ್ಬಾಣಗಳನ್ನೂ ಕತ್ತಿಯನ್ನೂ ಹಿಡಿದಿರುತ್ತಿದ್ದರು. ಎತ್ತಿನ ಕಣ್ಣುಗಳಂತಹ ವಿಶಾಲವಾದ ಕಣ್ಣುಗಳುಳ್ಳವರಾಗಿದ್ದರು. ವಿಮಲವಾದ ಹಾರಗಳನ್ನು ಧರಿಸುತ್ತಿದ್ದರು. ಅಂತಹ ಮಹಾವೀರರೀಗ ಈ ರಣರಂಗದಲ್ಲಿ ಮಲಗಿದ್ದಾರೆ.

ನಿನ್ನೊಡನಿರುವ (ನಿನ್ನ ರಕ್ಷಣೆಯಲ್ಲಿರುವ) ಈ ಐವರು ಪಾಂಡವರೂ ಅವಧ್ಯರೆಂದೇ ನಾನು ಭಾವಿಸುತ್ತೇನೆ. ದ್ರೋಣ-ಭೀಷ್ಮ-ವೈಕರ್ತನಕರ್ಣ-ಕೃಪ-ದುರ್ಯೋಧನಾಶ್ವತ್ಥಾಮ -ಜಯದ್ರಥ-ಸೋಮದತ್ತ-ವಿಕರ್ಣ-ಕೃತ ವರ್ಮಾ–ಇವರೇ ಮೊದಲಾದ ಮಹಾ-ಮಹಾವೀರರಿಂದಲೂ ಅವರು ಮುಕ್ತರಾದರು. (ಆ ಮಹಾವೀರರಲ್ಲಿ ಯಾರೂ ಪಾಂಡವರೈವರಲ್ಲಿ ಒಬ್ಬರನ್ನೂ ಸಂಹರಿಸಲು ಸಮರ್ಥರಾಗಲಿಲ್ಲ.) ನರಶ್ರೇಷ್ಠರಾದ ದ್ರೋಣ-ಭೀಷ್ಮ-ಕರ್ಣ-ಕೃಪಾಶ್ವತ್ಥಾಮರೇ ಮೊದಲಾದವರು ತಮ್ಮ ಶಸ್ತ್ರಗಳ

ವೇಗದಿಂದ ದೇವತೆಗಳನ್ನೂ ಸಂಹಾರಮಾಡಲು ಸಮರ್ಥರಾಗಿದ್ದರು. ಅಂತಹವರೇ ಈ ಯುದ್ಧದಲ್ಲಿ ಶತ್ರುಗಳಿಂದ ಹತರಾಗಿಹೋದರು. ಕಾಲದ ವೈಪರೀತ್ಯವನ್ನಾದರೂ ನೋಡು, ಕೃಷ್ಣ!

**ನಾತಿಭಾರೋಽಸ್ಮಿ ದೈವಸ್ಯ ಧ್ರುವಂ ಮಾಧವ ಕಶ್ಚನ ।**
**ಯದಿ ಮೇ ನಿಹತಾಃ ಶೂರಾಃ ಕ್ಷತ್ರಿಯೈಃ ಕ್ಷತ್ರಿಯರ್ಷಭಾಃ ॥೩೩॥**

ಮಾಧವ! ನಿಶ್ಚಯವಾಗಿಯೂ ದೈವಕ್ಕೆ ಭಾರವಾದುದು (ಅಸಾಧ್ಯವಾದುದು) ಯಾವುದೂ ಇರುವುದಿಲ್ಲ. ಅವಧ್ಯರೆನಿಸಿದ್ದರೂ ಈ ಕ್ಷತ್ರಿಯ ಶಿರೋಮಣಿಗಳೆಲ್ಲರೂ ಕ್ಷತ್ರಿಯರಿಂದಲೇ ಹತರಾದರಲ್ಲವೇ?

ನೀನು ಯಾವಾಗ ಸಂಧಿಯ ಕಾರ್ಯದಲ್ಲಿ ಕೃತಕೃತ್ಯನಾಗದೇ ಉಪಪ್ಲವ್ಯಕ್ಕೆ ಹಿಂದಿರುಗಿದೆಯೋ–ಆಗಲೇ ವೇಗಶಾಲಿಗಳಾದ ನನ್ನ ಪುತ್ರರು ಹತರಾಗಿಹೋದರು. ಶಾಂತನುವಿನ ಮಗನಾದ ಭೀಷ್ಮನೂ ಮತ್ತು ಪ್ರಾಜ್ಞನಾದ ವಿದುರನೂ ಹಿಂದೆಯೇ ನನ್ನೊಡನೆ–ನಿನ್ನ ಮಕ್ಕಳಾದ ಕೌರವರಲ್ಲಿ ಸ್ನೇಹವನ್ನಿಟ್ಟುಕೊಳ್ಳಬೇಡವೆಂದು–ಹೇಳಿಬಿಟ್ಟಿದ್ದರು. ಅವರ ದೂರದೃಷ್ಟಿಯ ಮಾತುಗಳು ಸುಳ್ಳಾಗಲು ಸಾಧ್ಯವೇ ಇಲ್ಲ. ಅವರ ನಿರ್ಣಯದಂತೆಯೇ ಅತ್ಯಲ್ಪಕಾಲದಲ್ಲಿಯೇ ನನ್ನ ಮಕ್ಕಳು ಭಸ್ಮೀಭೂತರಾದರು.”

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

“ಮಹಾರಾಜ! ಹೀಗೆ ಹೇಳಿದನಂತರ ಶೋಕಮೂರ್ಛಿತಳಾದ ಗಾಂಧಾರಿಯು ಮೂರ್ಛಿತಳಾಗಿ ಭೂಮಿಯಲ್ಲಿ ಬಿದ್ದಳು. ಅತಿಯಾದ ದುಃಖದಿಂದಾಗಿ ಅವಳಿಗೆ ವಿವೇಚನಾಶಕ್ತಿಯೇ ನಾಶವಾಗಿಹೋಗಿದ್ದಿತು. ಪುತ್ರಶೋಕಸಾಗರದಲ್ಲಿ ಮುಳುಗಿಹೋಗಿದ್ದ ಅವಳ ಎಲ್ಲ ಅಂಗಗಳೂ ಕೋಪದಿಂದ ಉದ್ದೀಪ್ತವಾದುವು. ಅವಳ ಎಲ್ಲ ಇಂದ್ರಿಯಗಳೂ ವ್ಯಾಕುಲಗೊಂಡುವು. ತನ್ನ ಎಲ್ಲ ಮಕ್ಕಳ ವಿನಾಶಕ್ಕೂ ಶ್ರೀಕೃಷ್ಣನು ಮಾಡಿದ ಅಪರಾಧವೇ ಕಾರಣವೆಂದು ಗಾಂಧಾರಿಯು ಭಾವಿಸಿದಳು. ಅಂತೆಯೇ ಅವನನ್ನು ಪ್ರಶ್ನಿಸಿದಳು. (ತಾನು ಎಷ್ಟೇ ವಿಲಪಿಸಿದರೂ ಶ್ರೀಕೃಷ್ಣನು ಒಂದೇ ಒಂದು ಮಾತನ್ನೂ ಆಡದೇ ಇದ್ದುದು ಅವಳ ಈ ಭಾವನೆಗೆ ಕಾರಣವಾಗಿರಬಹುದು.)

**ಪಾಣ್ಡವಾ ಧಾರ್ತರಾಷ್ಟ್ರಾಶ್ಚ ದಗ್ಧಾಃ ಕೃಷ್ಣ ಪರಸ್ಪರಮ್ ।**
**ಉಪೇಕ್ಷಿತಾ ವಿನಶ್ಯನ್ತಸ್ತ್ವಯಾ ಕಸ್ಮಾಜ್ಜನಾರ್ದನ ॥೩೯॥**

"ಕೃಷ್ಣ! ಪಾಂಡವರೂ ಮತ್ತು ಧೃತರಾಷ್ಟ್ರನ ಮಕ್ಕಳೂ ಪರಸ್ಪರವಾಗಿ ಕಾದಾಡಿ ಭಸ್ಮೀಭೂತರಾದರು. ಅವರೆಲ್ಲರೂ ವಿನಾಶಹೊಂದುತ್ತಿರುವುದನ್ನು ನೋಡಿಯೂ ನೀನೇಕೆ ಉಪೇಕ್ಷಿಸಿದೆ?

**ಶಕ್ತೇನ ಬಹುಭೃತ್ಯೇನ ವಿಪುಲೇ ತಿಷ್ಠತಾ ಬಲೇ ।**
**ಉಭಯತ್ರ ಸಮರ್ಥೇನ ಶ್ರುತವಾಕ್ಯೇನ ಚೈವ ಹ ॥೪೦॥**

**ಇಚ್ಛತೋಪೇಕ್ಷಿತೋ ನಾಶಃ ಕುರೂಣಾಂ ಮಧುಸೂದನ ।**
**ಯಸ್ಮಾತ್ತ್ವಯಾ ಮಹಾಬಾಹೋ ಫಲಂ ತಸ್ಮಾದವಾಪ್ನುಹಿ ॥೪೧॥**

ಮಹಾಬಾಹುವೇ! ಮಧುಸೂದನ! ನೀನು ಮಹಾಶಕ್ತಿಶಾಲಿಯು. ನಿನ್ನ ಅಧೀನದಲ್ಲಿ ಅಪಾರಸೇವಕರೂ ಅಪಾರಸೈನಿಕರೂ ಇದ್ದರು. ಎರಡೂ ಪಕ್ಷಗಳಿಗೂ ಹೀಗೆಯೇ ನಡೆದುಕೊಳ್ಳಬೇಕೆಂದು ಆಜ್ಞೆಮಾಡಲೂ ನೀನು ಸಮರ್ಥನಾಗಿದ್ದೆ. ನೀನು ವೇದ-ಶಾಸ್ತ್ರಗಳನ್ನೂ ಮತ್ತು ಮಹಾತ್ಮರ ವಾಣಿಗಳನ್ನೂ ತಿಳಿದುಕೊಂಡಿರುವೆ. ಹೀಗಿದ್ದರೂ ನೀನು ಸರ್ವನಾಶವಾಗುತ್ತಿದ್ದ ಸಮಯದಲ್ಲಿ ಉಪೇಕ್ಷೆಯಿಂದಲೇ ಇದ್ದುಬಿಟ್ಟೆ. ನಿಶ್ಚಯವಾಗಿ ಹೇಳುವುದಾದರೆ ನೀನು ಉದ್ದೇಶಪೂರ್ವಕವಾಗಿಯೇ ಕುರುಗಳು ವಿನಾಶವಾಗುತ್ತಿದ್ದುದನ್ನು ಉಪೇಕ್ಷಿಸಿದೆ. (ಕುರುಗಳೆಲ್ಲರೂ ವಿನಾಶವಾಗಬೇಕೆಂಬುದೇ ನಿನ್ನ ಇಚ್ಛೆಯಾಗಿದ್ದಿತು.) ಈ ಸಂದರ್ಭದಲ್ಲಿ ಇದು ನೀನು ಮಾಡಿರುವ ಮಹಾಪರಾಧವಾಗಿದೆ. ಆದುದರಿಂದ ನೀನು ಇದರ ಫಲವನ್ನು ಅನುಭವಿಸಲೇಬೇಕು.

**ಪತಿಶುಶ್ರೂಷಯಾ ಯನ್ಮೇ ತಪಃ ಕಿಂಚಿದುಪಾರ್ಜಿತಮ್ ।**
**ತೇನ ತ್ವಾಂ ದುರವಾಪೇನ ಶಪ್ಸ್ಯೇ ಚಕ್ರಗದಾಧರ ॥೪೨॥**

ಚಕ್ರ-ಗದಾಧಾರಿಯಾದ ಕೇಶವನೇ! ಪತಿಸೇವೆಯ ಮೂಲಕವಾಗಿ ನಾನು ಸ್ವಲ್ಪ ತಪಸ್ಸನ್ನು (ತಪಸ್ಸಿನ ಫಲವನ್ನು) ಸಂಪಾದಿಸಿರುತ್ತೇನೆ. ದುರ್ಲಭವಾದ ಆ ತಪೋಬಲದಿಂದ ನಾನು ನಿನಗೆ ಶಾಪಕೊಡುತ್ತಿದ್ದೇನೆ.

**ಯಸ್ಮಾತ್ಪರಸ್ಪರಂ ಘ್ನನ್ತೋ ಜ್ಞಾತಯಃ ಕುರುಪಾಣ್ಡವಾಃ ।**
**ಉಪೇಕ್ಷಿತಾಸ್ತೇ ಗೋವಿನ್ದ ತಸ್ಮಾಜ್ಜ್ಞಾತೀನ್ವಧಿಷ್ಯಸಿ ॥೪೩॥**

ಗೋವಿಂದ! ಜ್ಞಾತಿಗಳಾದ (ಸಹೋದರರಾದ) ಕುರು-ಪಾಂಡವರು

ಪರಸ್ಪರವಾಗಿ ಸಂಘರ್ಷಿಸಿ ಹತರಾಗುತ್ತಿದ್ದಾಗ ನೀನು ತಡೆಯದೇ ಉಪೇಕ್ಷಿಸಿದೆ. (ಕದನವ್ಯಾಜದಿಂದ ಕೌರವರೆಲ್ಲರನ್ನೂ ಸಾಯಗೊಟ್ಟೆ.) ಆದುದರಿಂದ ನೀನೂ ಸಹ ನಿನ್ನ ಜ್ಞಾತಿ-ಬಾಂಧವರನ್ನು ಸಂಹರಿಸುವೆ. (ನಿನ್ನ ಜ್ಞಾತಿ-ಬಾಂಧವರ ವಿನಾಶಕ್ಕೆ ನೀನೇ ಕಾರಣನಾಗುವೆ.)



**ತ್ವಮಪ್ಯುಪಸ್ಥಿತೇ ವರ್ಷೇ ಷಟ್ತ್ರಿಂಶೇ ಮಧುಸೂದನ ।**
**ಹತಜ್ಞಾತಿರ್ಹತಾಮಾತ್ಯೋ ಹತಪುತ್ರೋ ವನೇಚರಃ ॥೪೪॥**

**ಅನಾಥವದವಿಜ್ಞಾತೋ ಲೋಕೇಷ್ವನಭಿಲಕ್ಷಿತಃ ।**
**ಕುತ್ಸಿತೇನಾಭ್ಯುಪಾಯೇನ ನಿಧನಂ ಸಮವಾಪ್ಸ್ಯಸಿ ॥೪೫॥**

ಮಧುಸೂದನ! ಇಂದಿನಿಂದ ಮೂವತ್ತಾರನೆಯ ವರ್ಷಕ್ಕೆ ಸರಿಯಾಗಿ

ನಿನ್ನ ಜ್ಞಾತಿಗಳೂ, ಅಮಾತ್ಯರೂ, ಪುತ್ರರೂ ಪರಸ್ಪರವಾಗಿ ಸಂಘರ್ಷಿಸಿ ನಿಧನಹೊಂದುತ್ತಾರೆ. ಆ ಸಮಯದಲ್ಲಿ ನೀನು ಎಲ್ಲರಿಗೂ ಅಪರಿಚಿತನಂತಾಗುವೆ. ಲೋಕವು ನಿನ್ನ ವಿಷಯದಲ್ಲಿ ನಿರ್ಲಕ್ಷ್ಯದಿಂದಿರುತ್ತದೆ. ಅನಾಥನಂತೆ ನೀನು ಅರಣ್ಯದಲ್ಲಿ ಸಂಚರಿಸುವೆ. ಆ ಸಮಯದಲ್ಲಿ ಯಾವುದೋ ಕುತ್ಸಿತವಾದ ರೀತಿಯಿಂದ ನೀನು ನಿಧನಹೊಂದುವೆ.

**ತವಾಪ್ಯೇವಂ ಹತಸುತಾ ನಿಹತಜ್ಞಾತಿಬಾನ್ಧವಾಃ ।**
**ಸ್ತ್ರಿಯಃ ಪರಿಪತಿಷ್ಯನ್ತಿ ಯಥೈತಾ ಭರತಸ್ತ್ರಿಯಃ ॥೪೬॥**

ಭರತವಂಶದ ಈ ಸ್ತ್ರೀಯರಂತೆಯೇ ನಿನ್ನ ಕುಲದ ಸ್ತ್ರೀಯರೂ ಪುತ್ರರನ್ನೂ, ಜ್ಞಾತಿ-ಬಾಂಧವರನ್ನೂ ಕಳೆದುಕೊಂಡು ದುಃಖೋನ್ಮತ್ತರಾಗಿ ಅವರ ಶವಗಳ ಮೇಲೆ ಬೀಳುತ್ತಾರೆ.”

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

“ಮಹಾರಾಜ! ಮಹಾತ್ಮನಾದ ವಾಸುದೇವನು ಗಾಂಧಾರಿಯಿತ್ತ ಘೋರಶಾಪವನ್ನು ಕೇಳಿ ಸ್ವಲ್ಪ ನಗುತ್ತಿರುವನೋ ಎಂಬ ಮುಖಭಾವವನ್ನೇ ತೋರ್ಪಡಿಸಿಕೊಳ್ಳುತ್ತಾ ಗಾಂಧಾರೀದೇವಿಯೊಡನೆ ಹೇಳಿದನು :

**ಜಾನೇಽಹಮೇತದಪ್ಯೇವಂ ಚೀರ್ಣಂ ಚರಸಿ ಕ್ಷತ್ರಿಯೇ ।**
**ದೈವಾದೇವ ವಿನಶ್ಯನ್ತಿ ವೃಷ್ಣಯೋ ನಾತ್ರ ಸಂಶಯಃ ॥೪೮॥**

“ಕ್ಷತ್ರಿಯಾಣಿ! ಇದು ಹೀಗೆಯೇ ಆಗುವುದೆಂದು ನಾನೂ ತಿಳಿದಿರುತ್ತೇನೆ. ಏನು ಮಾಡಬೇಕಾಗಿದ್ದಿತೋ ಅದನ್ನೇ ನೀನೂ ಮಾಡಿರುವೆ. ದೈವದ ಇಚ್ಛೆಯಂತೆಯೇ ವೃಷ್ಣಿಗಳೆಲ್ಲರೂ ವಿನಾಶಹೊಂದುತ್ತಾರೆ. ಇದರಲ್ಲಿ ಸಂಶಯವೇ ಇಲ್ಲ.

**ಸಂಹರ್ತಾ ವೃಷ್ಣಿಚಕ್ರಸ್ಯ ನಾನ್ಯೋ ಮದ್ವಿದ್ಯತೇ ಶುಭೇ ।**
**ಅವಧ್ಯಾಸ್ತೇ ನರೈರನ್ಯೈರಪಿ ವಾ ದೇವದಾನವೈಃ ।**
**ಪರಸ್ಪರಕೃತಂ ನಾಶಮತಃ ಪ್ರಾಪ್ಸ್ಯನ್ತಿ ಯಾದವಾಃ ॥೪೯॥**

ವೃಷ್ಣಿಕುಲವನ್ನು ನಾಶಮಾಡತಕ್ಕವನು ನನ್ನೊಬ್ಬನ ಹೊರತಾಗಿ ಬೇರೆ ಯಾರೂ ಇರುವುದಿಲ್ಲ. ವೃಷ್ಣಿಗಳು ಇತರ ಮನುಷ್ಯರಿಂದ ಅವಧ್ಯರು. ದೇವ-ದಾನವರಿಂದಲೂ ಅವರನ್ನು ಸಂಹರಿಸಲು ಸಾಧ್ಯವಾಗುವುದಿಲ್ಲ. ಆದುದರಿಂದ ಯಾದವರೆಲ್ಲರೂ ಪರಸ್ಪರವಾಗಿಯೇ ಕಾದಾಡಿ ನಾಶಹೊಂದುತ್ತಾರೆ.”

ಜನಮೇಜಯ! ಶ್ರೀಕೃಷ್ಣನು ಗಾಂಧಾರಿಯೊಡನೆ ಹೀಗೆ ಹೇಳಲಾಗಿ ಪಾಂಡವರ ಮನಸ್ಸಿನಲ್ಲಿ ಭಯವು ಅಂಕುರಿಸಿತು. ಅವರೆಲ್ಲರೂ ಬಹಳವಾಗಿ ಉದ್ವೇಗಗೊಂಡವರಾಗಿ ತಮ್ಮ ಜೀವಿತದಲ್ಲಿಯೂ ನಿರಾಶೆಯನ್ನು ಹೊಂದಿದರು."

೨೫ನೆಯ ಅಧ್ಯಾಯವು ಮುಗಿಯಿತು.

೨೬ನೆಯ ಅಧ್ಯಾಯ ಶ್ರಾದ್ಧಪರ್ವ

## ಅನುಸ್ಮೃತಿವಿದ್ಯೆಯಿಂದಲೂ ಮತ್ತು ದಿವ್ಯದೃಷ್ಟಿಯಿಂದಲೂ ಯುಧಿಷ್ಠಿರನು ಮಹಾಭಾರತಯುದ್ಧದಲ್ಲಿ ಮಡಿದವರ ಸಂಖ್ಯಾ-ಗತಿಗಳನ್ನು ವರ್ಣಿಸಿದುದು : ಯುಧಿಷ್ಠಿರನ ಆಜ್ಞೆಯಂತೆ ಎಲ್ಲರಿಗೂ ದಹನಸಂಸ್ಕಾರಗಳನ್ನು ಮಾಡಿದುದು

ಶ್ರೀಕೃಷ್ಣನು ಗಾಂಧಾರಿಗೆ ಹೇಳುತ್ತಾನೆ :

"ಗಾಂಧಾರಿ! ಏಳು, ಎದ್ದೇಳು, ಮನಸ್ಸನ್ನು ದುಃಖದಲ್ಲಿ ಮುಳುಗಿಸಬೇಡ. ನಿನ್ನ ಅಪರಾಧದಿಂದಲೇ ಕುರುಗಳೆಲ್ಲರೂ ನಿಧನಹೊಂದಿದರು. ನಿನ್ನ ಮಗನಾದ ದುರ್ಯೋಧನನು ದುರಾತ್ಮನು. ಇತರರ ವಿಷಯದಲ್ಲಿ ಮಾತ್ಸರ್ಯವುಳ್ಳವನು. ಮಹಾದುರಭಿಮಾನೀ. ನಿಷ್ಠುರಸ್ವಭಾವದವನು. ವೈರವೇ ಮೂರ್ತಿಮತ್ತಾಗಿರತಕ್ಕವನು. ವೃದ್ಧರಾದವರ ಶಾಸನವನ್ನು ಉಲ್ಲಂಘಿಸುವವನು. ಇಂತಹ ದುರ್ಯೋಧನನನ್ನು ಮುಂದೆಮಾಡಿಕೊಂಡು ಮಾಡಿರುವ ದುಷ್ಕರ್ಮವನ್ನು ನೀನು ಸತ್ಕರ್ಮವೆಂದು ಭಾವಿಸಿರುವೆ. ನೀನೇ ನಿನ್ನ ಮಗನ ಮೂಲಕವಾಗಿ ಮಾಡಿರುವ ಅಪರಾಧವನ್ನು ನನ್ನ ಮೇಲೇಕೆ ಹೊರಿಸುತ್ತಿರುವೆ?

**ಮೃತಂ ವಾ ಯದಿ ವಾ ನಷ್ಟಂ ಯೋಽತೀತಮನುಶೋಚತಿ ।**
**ದುಃಖೇನ ಲಭತೇ ದುಃಖಂ ದ್ವಾವನರ್ಥೌ ಪ್ರಪದ್ಯತೇ ॥೪॥**

ಮೃತನಾದವನನ್ನು ಕುರಿತು, ನಷ್ಟವಾದ ಪದಾರ್ಥವನ್ನು ಕುರಿತು ಮತ್ತು ಕಳೆದುಹೋದ ವಿಷಯವನ್ನು ಕುರಿತು ಯಾವನು ಶೋಕಪಡುತ್ತಾನೆಯೋ–ಅವನು ದುಃಖದಿಂದ ಮತ್ತೊಂದು ದುಃಖವನ್ನೇ ಹೊಂದು

ತ್ತಾನೆ. ಅದರಿಂದ ಅವನಿಗೆ ಎರಡು ವಿಧವಾದ ಅನರ್ಥಗಳುಂಟಾಗುತ್ತವೆ. (ಕಳೆದುಹೋದುದು ಒಂದನೆಯ ಅನರ್ಥ. ಕಳೆದುಹೋದುದಕ್ಕಾಗಿ ದುಃಖಿಸುತ್ತಾ ಪ್ರಶಸ್ತವಾದ ಕಾಲವನ್ನು ವ್ಯರ್ಥಗೊಳಿಸಿ ದುಃಖದಲ್ಲೇ ಮುಳುಗಿಹೋಗುವುದು ಎರಡನೆಯ ಅನರ್ಥ. ಸತ್ತವರಿಗಾಗಿ ಅಳುತ್ತಿದ್ದರೆ ದುಃಖವು ಮತ್ತಷ್ಟು ಉಲ್ಬಣಿಸುತ್ತದೆಯೇ ಹೊರತು ಸತ್ತವರು ಹಿಂದಿರುಗಿ ಬರುವುದಿಲ್ಲ. ದುಃಖಪಡುವುದರಿಂದ ಯಾವ ಪರಿಹಾರವೂ ಸಿಕ್ಕುವುದಿಲ್ಲ.)

**ತಪೋರ್ಥೀಯಂ ಬ್ರಾಹ್ಮಣೀ ಧತ್ತ ಗರ್ಭಂ**
**ಗೌರ್ವೋಢಾರಂ ಧಾವಿತಾರಂ ತುರಙ್ಗೀ ।**
**ಶೂದ್ರಾ ದಾಸಂ ಪಶುಪಾಲಂ ಚ ವೈಶ್ಯಾ**
**ವಧಾರ್ಥೀಯಂ ತ್ವದ್ವಿಧಾ ರಾಜಪುತ್ರೀ ॥೫॥**

ಬ್ರಾಹ್ಮಣಸ್ತ್ರೀಯು ತಪಸ್ಸುಮಾಡಲಿಚ್ಛಿಸುವವನನ್ನು ಪಡೆಯುವ ಸಲುವಾಗಿ ಗರ್ಭವನ್ನು ಧರಿಸುತ್ತಾಳೆ. ಹಸುವು ಹೊರೆಯನ್ನು ಹೊರುವ ಎತ್ತನ್ನು ಪಡೆಯುವ ಸಲುವಾಗಿ ಗರ್ಭವನ್ನು ಧರಿಸುತ್ತದೆ. ಹೆಣ್ಣು ಕುದುರೆಯು ವೇಗವಾಗಿ ಓಡುವ ಕುದುರೆಯನ್ನು ಪಡೆಯುವ ಸಲುವಾಗಿ ಗರ್ಭವನ್ನು ಧರಿಸುತ್ತದೆ. ಶೂದ್ರಸ್ತ್ರೀಯು ಸೇವಾಧರ್ಮಿಯನ್ನು ಪಡೆಯುವ ಸಲುವಾಗಿ ಗರ್ಭಧರಿಸುತ್ತಾಳೆ. ವೈಶ್ಯಸ್ತ್ರೀಯು ಗೋರಕ್ಷಕನನ್ನು ಪಡೆಯುವ ಸಲುವಾಗಿ ಗರ್ಭವನ್ನು ಧರಿಸುತ್ತಾಳೆ. ಅದೇ ರೀತಿಯಲ್ಲಿ ನಿನ್ನಂತಹ ರಾಜಪುತ್ರಿಯರು ಯುದ್ಧದಲ್ಲಿ ಕಾದಾಡಿ ಮರಣಹೊಂದಲು ಇಚ್ಛಿಸುವ ವೀರಕ್ಷತ್ರಿಯನನ್ನು ಪಡೆಯುವ ಸಲುವಾಗಿಯೇ ಗರ್ಭವನ್ನು ಧರಿಸುತ್ತಾರೆ."

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಶ್ರೀಕೃಷ್ಣನು ಮತ್ತೆ ಹೇಳಿದ, ತನಗೆ ಅಪ್ರಿಯವಾದ ಆ ಮಾತುಗಳನ್ನು ಕೇಳಿ ಗಾಂಧಾರಿಯು ಸುಮ್ಮನಾದಳು. ಅವಳ ಕಣ್ಣುಗಳು ಶೋಕದಿಂದ ವ್ಯಾಕುಲಗೊಂಡಿದ್ದುವು. ರಾಜರ್ಷಿಯಾದ, ಧರ್ಮಜ್ಞನಾದ ಧೃತರಾಷ್ಟ್ರನು ಅಜ್ಞಾನದಿಂದುಂಟಾಗಿದ್ದ ಶೋಕ-ಮೋಹಗಳನ್ನು ದೂರೀಕರಿಸಿ ಧರ್ಮಾತ್ಮನಾದ ಯುಧಿಷ್ಠಿರನನ್ನು ಪ್ರಶ್ನಿಸಿದನು :

"ಪಾಂಡುನಂದನ! ಈಗ ಜೀವಿಸಿರುವ ಸೈನಿಕರ ಸಂಖ್ಯೆಯು

ಎಷ್ಟೆಂಬುದು ನಿನಗೆ ತಿಳಿದೇ ಇದೆ. ಹತರಾದ ಸೈನಿಕರ ಸಂಖ್ಯೆಯು ಎಷ್ಟೆಂಬುದು ನಿನಗೇನಾದರೂ ತಿಳಿದಿದ್ದರೆ ಅದನ್ನು ನನಗೆ ಹೇಳು.”

**ದಶಾಯುತಾನಾಮಯುತಂ ಸಹಸ್ರಾಣಿ ಚ ವಿಂಶತಿಃ ।**
**ಕೋಟ್ಯಃ ಷಷ್ಟಿಶ್ಚ ಷಟ್ಚೈವ ಹ್ಯಸ್ಮಿನ್ರಾಜನ್ಮೃಧೇ ಹತಾಃ ॥೯॥**

“ಮಹಾರಾಜ! ಒಂದು ನೂರು ಅರುವತ್ತಾರು ಕೋಟಿ ಇಪ್ಪತ್ತು ಸಾವಿರ ಯೋಧರು ಈ ಯುದ್ಧದಲ್ಲಿ ಹತರಾದರು.

**ಅಲಕ್ಷಿತಾನಾಂ ವೀರಾಣಾಂ ಸಹಸ್ರಾಣಿ ಚತುರ್ದಶ ।**
**ದಶ ಚಾನ್ಯಾನಿ ರಾಜೇನ್ದ್ರ ಶತಂ ಷಷ್ಟಿಶ್ಚ ಪಞ್ಚ ಚ ॥೧೦॥**

ಏನಾದರೆಂದು ತಿಳಿಯದೇ ಇರುವವರ ಸಂಖ್ಯೆಯು ಇಪ್ಪತ್ತುನಾಲ್ಕು ಸಾವಿರದ ಒಂದು ನೂರ ಅರುವತ್ತೈದು. (ಅವರು ಸತ್ತುಹೋಗಿರಬಹುದು. ಅಥವಾ ತಪ್ಪಿಸಿಕೊಂಡಾದರೂ ಹೋಗಿರಬಹುದು. ನಿರ್ದಿಷ್ಟವಾಗಿ ಅವರೇನಾದರೆಂಬುದು ತಿಳಿಯದು.)”

“ಪುರುಷಶ್ರೇಷ್ಠನೇ! ಮಹಾಬಾಹುವೇ! ನೀನು ಎಲ್ಲವನ್ನೂ ತಿಳಿದಿರತಕ್ಕವನೆಂಬುದು ನನ್ನ ಅಭಿಪ್ರಾಯವಾಗಿದೆ. ಸತ್ತುಹೋದ ಆ ಯೋಧರೆಲ್ಲರೂ ಯಾವ ಗತಿಯನ್ನು ಹೊಂದಿದರೆಂಬುದನ್ನು ಹೇಳು.”

**ಯೈರ್ಹುತಾನಿ ಶರೀರಾಣಿ ಹೃಷ್ಟೈಃ ಪರಮಸಂಯುಗೇ ।**
**ದೇವರಾಜಸಮಾಲ್ಲೋಕಾನ್ಗತಾಸ್ತೇ ಸತ್ಯವಿಕ್ರಮಾಃ ॥೧೨॥**

“ಈ ಶ್ರೇಷ್ಠವಾದ ಯುದ್ಧದಲ್ಲಿ ಯಾರು ಪರಮಹರ್ಷದಿಂದಲೂ ಉತ್ಸಾಹದಿಂದಲೂ ತಮ್ಮ ಶರೀರಗಳನ್ನು ಆಹುತಿಯನ್ನಾಗಿ ಅರ್ಪಿಸಿದರೋ ಅಂತಹ ಸತ್ಯಪರಾಕ್ರಮಿಗಳಾದ ಯೋಧರೆಲ್ಲರೂ ದೇವರಾಜನ ಲೋಕಕ್ಕೆ ಸಮಾನವಾದ ಲೋಕಗಳನ್ನೇ ಪಡೆದುಕೊಂಡಿರುತ್ತಾರೆ.

**ಯೇ ತ್ವಹೃಷ್ಟೇನ ಮನಸಾ ಮರ್ತವ್ಯಮಿತಿ ಭಾರತ ।**
**ಯುಧ್ಯಮಾನಾ ಹತಾಃ ಸಂಖ್ಯೇ ಗನ್ಧರ್ವೈಃ ಸಹ ಸಂಗತಾಃ ॥೧೩॥**

ಯಾರು ಹೃಷ್ಟವಾದ ಮನಸ್ಸಿಲ್ಲದೇ–‘ಯುದ್ಧದಲ್ಲಿ ಸಾಯಬೇಕು’–ಎಂಬ ಇಷ್ಟು ಮಾತ್ರ ನಿಶ್ಚಯದಿಂದ ಯುದ್ಧಮಾಡುತ್ತಾ ಹತರಾದರೋ–ಅವರು ಗಂಧರ್ವಲೋಕಗಳಿಗೆ ಹೋಗಿ ಗಂಧರ್ವರೊಡನೆ ಸೇರುತ್ತಾರೆ.

**ಯೇ ಚ ಸಂಗ್ರಾಮಭೂಮಿಷ್ಠಾ ಯಾಚ್ಯಮಾನಾಃ ಪರಾಙ್ಮುಖಾಃ ।**
**ಶಸ್ತ್ರೇಣ ನಿಧನಂ ಪ್ರಾಪ್ತಾ ಗತಾಸ್ತೇ ಗುಹ್ಯಕಾನ್ಪ್ರತಿ ॥೧೪॥**

ಯಾರು ಯುದ್ಧಭೂಮಿಯಲ್ಲಿದ್ದುಕೊಂಡು ಪ್ರಾಣಭಿಕ್ಷೆಯನ್ನು ಬೇಡುತ್ತಾ ಪರಾಙ್ಮುಖರಾಗುತ್ತಿದ್ದಾಗ ಶಸ್ತ್ರಾಘಾತಗಳಿಂದ ನಿಧನಹೊಂದಿರುತ್ತಾರೆಯೋ–ಅವರು ಗುಹ್ಯಕರ ಲೋಕಗಳಿಗೆ ಹೋಗಿದ್ದಾರೆ.

**ಪಾತ್ಯಮಾನಾಃ ಪರೈರ್ಯೇ ತು ಹೀಯಮಾನಾ ನಿರಾಯುಧಾಃ ।**
**ಹ್ರೀನಿಷೇವಾ ಮಹಾತ್ಮಾನಃ ಪರಾನಭಿಮುಖಾ ರಣೇ ॥೧೫॥**

**ಛಿದ್ಯಮಾನಾಃ ಶಿತೈಃ ಶಸ್ತ್ರೈಃ ಕ್ಷತ್ರಧರ್ಮಪರಾಯಣಾಃ ।**
**ಗತಾಸ್ತೇ ಬ್ರಹ್ಮಸದನಂ ನ ಮೇಽತ್ರಾಸ್ತಿ ವಿಚಾರಣಾ ॥೧೬॥**

ಶತ್ರುಗಳು ಯೋಧರನ್ನು ರಥದಿಂದಲೋ, ಕುದುರೆಯಿಂದಲೋ, ಆನೆಯಿಂದಲೋ ಕೆಳಕ್ಕೆ ಬೀಳಿಸಿರುತ್ತಾರೆ. ಹಾಗೆ ಕೆಳಕ್ಕೆ ಬಿದ್ದ ಯೋಧರು ನಿರಾಯುಧರಾಗಿರುತ್ತಾರೆ. ನಿರಾಯುಧರನ್ನು ಶತ್ರುಪಕ್ಷದವರು ಎಳೆದಾಡುತ್ತಿರುತ್ತಾರೆ. ಅಂತಹ ಸಂದರ್ಭದಲ್ಲಿಯೂ ಲಜ್ಜಾಶೀಲರಾದ, ಮಹಾತ್ಮರಾದ ಆ ಯೋಧರು ಶತ್ರುಗಳಿಗೆ ಅಭಿಮುಖರಾಗಿಯೇ ನಿಂತಿರುತ್ತಾರೆ. (ಓಡಿಹೋಗುವ ಮನಸ್ಸು ಮಾಡುವುದಿಲ್ಲ.) ಮರುಕ್ಷಣದಲ್ಲಿಯೇ ಕ್ಷತ್ರಧರ್ಮಪರಾಯಣರಾದ ಆ ಯೋಧರು ಶತ್ರುಗಳ ನಿಶಿತವಾದ ಶಸ್ತ್ರಗಳಿಂದ ಕ್ಷತ-ವಿಕ್ಷತರಾಗಿ ಅಸುನೀಗುತ್ತಾರೆ. ಅಂತಹ ಪರಮವೀರಯೋಧರು ಬ್ರಹ್ಮಲೋಕಕ್ಕೇ ಹೋಗಿರುತ್ತಾರೆ. ಈ ವಿಷಯದಲ್ಲಿ ವಿಚಾರಮಾಡಬೇಕಾದ ಅಗತ್ಯವೇ ನನಗಿರುವುದಿಲ್ಲ.

**ಯೇ ತ್ವತ್ರ ನಿಹತಾ ರಾಜನ್ನನ್ತರಾಯೋಧನಂ ಪ್ರತಿ ।**
**ಯಥಾಕಥಂಚಿತ್ಪುರುಷಾಸ್ತೇ ಗತಾಸ್ತೂತ್ತರಾನ್ಕುರೂನ್ ॥೧೭॥**

ಯುದ್ಧಭೂಮಿಯ ಪರಿಸರದಲ್ಲಿಯೇ ಇದ್ದು ಯಾವುದೇ ರೀತಿಯಲ್ಲಿ ಪ್ರಾಣಬಿಟ್ಟಿದ್ದರೂ ಅವರೆಲ್ಲರೂ ಉತ್ತರಕುರುದೇಶದಲ್ಲಿ ಜನ್ಮತಾಳುತ್ತಾರೆ."

"ಪುತ್ರ! ಯಾವ ಜ್ಞಾನಬಲದಿಂದ ನೀನು ಈ ವಿಷಯಗಳನ್ನು ಸಿದ್ಧಪುರುಷರಂತೆ ನಿಖರವಾಗಿ ಹೇಳುತ್ತಿರುವೆ? ಅದನ್ನು ನಾನು ತಿಳಿಯಬಹುದಾಗಿದ್ದರೆ ನನ್ನೊಡನೆ ಆ ವಿಷಯವನ್ನು ಹೇಳು."

"ಮಹಾರಾಜ! ಹಿಂದೆ ನಿನ್ನ ಆಜ್ಞಾನುಸಾರವಾಗಿ ತೀರ್ಥಯಾತ್ರಾ ಪ್ರಸಂಗದಲ್ಲಿ ಅರಣ್ಯದಲ್ಲಿ ಸಂಚರಿಸುತ್ತಿದ್ದಾಗ ನನಗೆ ಒಬ್ಬ ಮಹಾತ್ಮರಿಂದ ಈ ವಿದ್ಯೆಯ ಅನುಗ್ರಹವಾಯಿತು. ತೀರ್ಥಯಾತ್ರಾಸಮಯದಲ್ಲಿ ದೇವರ್ಷಿಗಳಾದ ಲೋಮಶರ ದರ್ಶನವಾಯಿತು. ಅವರಿಂದ ನಾನು ಈ ಅನುಸ್ಮೃತಿವಿದ್ಯೆಯನ್ನು ಪಡೆದುಕೊಂಡೆನು. ಅದೂ ಅಲ್ಲದೇ ಹಿಂದೆ ನಾನು ಜ್ಞಾನಯೋಗದಲ್ಲಿದ್ದಾಗ ದಿವ್ಯದೃಷ್ಟಿಯೂ ಪ್ರಾಪ್ತವಾಯಿತು. (ದಿವ್ಯದೃಷ್ಟಿ ಮತ್ತು ಅನುಸ್ಮೃತಿಗಳಿಂದ ನಾನು ಇವುಗಳೆಲ್ಲವನ್ನೂ ಯಥಾವತ್ತಾಗಿ ತಿಳಿದುಕೊಳ್ಳಲು ಸಾಧ್ಯವಾಯಿತು.)"

"ಮಗು! ಇಲ್ಲಿ ಅನಾಥಯೋಧರ ಮತ್ತು ಸನಾಥಯೋಧರ ಶವಗಳೂ ಇವೆ. ನೀನು ಇವರೆಲ್ಲರ ಶರೀರಗಳನ್ನೂ ವಿಧಿಪೂರ್ವಕವಾಗಿ ದಹನ ಮಾಡುವೆಯಾ? ಅನೇಕಯೋಧರಿಗೆ ಸಂಸ್ಕಾರಮಾಡುವ ಅಧಿಕಾರಿಗಳೇ ಇರುವುದಿಲ್ಲ. ಅನೇಕರು ಆಹಿತಾಗ್ನಿಗಳಾಗಿರುವುದಿಲ್ಲ. ಇಲ್ಲಿಯಾದರೋ ಕೋಟ್ಯನುಕೋಟಿ ಜನಕ್ಕೆ ಅಂತ್ಯೇಷ್ಟಿಯನ್ನು ಮಾಡಬೇಕಾಗಿದೆ. ಈ ಸಂದರ್ಭದಲ್ಲಿ ನಾವು ದಹನಕ್ರಿಯೆಯನ್ನು ಯಾರು ಯಾರಿಗೆ ಮಾಡೋಣ?

ಯಾವ ಶರೀರಗಳನ್ನು ಗರುಡಪಕ್ಷಿಗಳೂ ರಣಹದ್ದುಗಳೂ ಅಲ್ಲಿಂದಿಲ್ಲಿಗೂ-ಇಲ್ಲಿಂದಲ್ಲಿಗೂ ಎಳೆದಾಡುತ್ತಿವೆಯೋ ಅಂತಹವರೆಲ್ಲರಿಗೂ ಕೇವಲ ಶ್ರಾದ್ಧಕರ್ಮದಿಂದಲೇ ಪುಣ್ಯಲೋಕಗಳು ಪ್ರಾಪ್ತವಾಗುತ್ತವೆ."

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಧೃತರಾಷ್ಟ್ರನು ಧರ್ಮರಾಜನಿಗೆ ಹೀಗೆ ಹೇಳಿದ ನಂತರ ಯುಧಿಷ್ಠಿರನು ಸುಧರ್ಮನನ್ನೂ, ಧೌಮ್ಯರನ್ನೂ, ಸೂತನಾದ ಸಂಜಯನನ್ನೂ, ಮಹಾಪ್ರಾಜ್ಞನಾದ ವಿದುರನನ್ನೂ, ಧೃತರಾಷ್ಟ್ರನ ಮಗನಾದ ಯುಯುತ್ಸುವನ್ನೂ, ಇಂದ್ರಸೇನನೇ ಮೊದಲಾದ ಸೇವಕರನ್ನೂ, ಎಲ್ಲ ಸೂತರನ್ನೂ ಕರೆಯಿಸಿ ಆದೇಶವಿತ್ತನು :

**ಭವನ್ತಃ ಕಾರಯನ್ತ್ವೇಷಾಂ ಪ್ರೇತಕಾರ್ಯಾಣ್ಯಶೇಷತಃ ।**
**ಯಥಾ ಚಾನಾಥವತ್ಕಿಂಚಿಚ್ಛರೀರಂ ನ ವಿನಶ್ಯತಿ ॥೨೬॥**

"ನೀವೆಲ್ಲರೂ ಸೇರಿ ಯಾವ ಯೋಧನ ಶವವೂ ಅನಾಥಶವದಂತೆ

ಹಾಳಾಗಿ ಹೋಗದ ರೀತಿಯಲ್ಲಿ ಈ ಯುದ್ಧದಲ್ಲಿ ನಿಧನಹೊಂದಿರುವವರೆಲ್ಲರಿಗೂ ಪ್ರೇತಕಾರ್ಯಗಳನ್ನು (ದಹನಸಂಸ್ಕಾರಾದಿಗಳನ್ನು) ಮಾಡಿಸಿರಿ."

ಜನಮೇಜಯ! ಧರ್ಮರಾಜನ ಆದೇಶದಂತೆ ಧೌಮ್ಯಸಹಿತರಾದ ವಿದುರ-ಸಂಜಯ-ಸುಧರ್ಮರೂ, ಇಂದ್ರಸೇನಾದಿ ಸೇವಕರೂ ದಹನ ಸಂಸ್ಕಾರಕ್ಕೆ ಬೇಕಾದ ಚಂದನ, ಅಗುರು, ಕಾಷ್ಠ, ಕಾಲೀಯಕ (ಸುಗಂಧದ್ರವ್ಯ), ತುಪ್ಪ, ಎಣ್ಣೆ, ಗಂಧ, ಬಹುಮೂಲ್ಯವಾದ ನವುರಾದ ವಸ್ತ್ರಗಳು ಎಲ್ಲವನ್ನೂ ಸಂಗ್ರಹಿಸಿದರು. ಕಟ್ಟಿಗೆಗಳನ್ನೂ ರಾಶಿ-ರಾಶಿಯಾಗಿ ತಂದರು. ಮುರಿದು ಹೋಗಿದ್ದ ರಥಗಳಿಂದಲೂ, ನಾನಾವಿಧವಾದ ಆಯುಧಗಳಿಂದಲೂ ಪ್ರಯತ್ನಪೂರ್ವಕವಾಗಿ ಚಿತೆಗಳನ್ನು ಸಿದ್ಧಗೊಳಿಸಿದರು. ಏಕಾಗ್ರಚಿತ್ತರಾಗಿದ್ದ ವಿದುರಾದಿಗಳು ಜ್ಯೇಷ್ಠಾನುಕ್ರಮದಲ್ಲಿ ಶಾಸ್ತ್ರವಿಧಿಗೆ ಅನುಸಾರವಾಗಿ ಎಲ್ಲ ರಾಜರ ದಹನಕ್ರಿಯೆಗಳನ್ನೂ ನಡೆಸಿದರು.

ರಾಜನಾದ ದುರ್ಯೋಧನ, ಮಹಾರಥರಾದ ಅವನ ತಮ್ಮಂದಿರು, ಶಲ್ಯ, ಶಲ, ರಾಜನಾದ ಭೂರಿಶ್ರವಸ, ಜಯದ್ರಥರಾಜ, ಅಭಿಮನ್ಯು, ದೌಃಶಾಸನಿ, ಲಕ್ಷ್ಮಣ, ರಾಜನಾದ ಧೃಷ್ಟಕೇತು, ಬೃಹಂತ, ಸೋಮದತ್ತ, ನೂರಕ್ಕಿಂತಲೂ ಅಧಿಕರಾದ ಸೃಂಜಯರಾಜರು, ರಾಜನಾದ ಕ್ಷೇಮಧನ್ವಾ, ವಿರಾಟ, ದ್ರುಪದ, ಪಾಂಚಾಲರಾಜಪುತ್ರನಾದ ಶಿಖಂಡೀ, ದ್ರುಪದನ ಮಗನಾದ ಧೃಷ್ಟದ್ಯುಮ್ನ, ಯುಧಾಮನ್ಯು, ಮಹಾಪರಾಕ್ರಮಿಯಾದ ಉತ್ತಮೌಜಸ, ಕೋಸಲರಾಜನಾದ ಬೃಹದ್ಬಲ, ದ್ರೌಪದಿಯ ಐವರು ಮಕ್ಕಳು, ಸುಬಲನ ಮಗನಾದ ಶಕುನಿ, ಅಚಲ-ವೃಷಕರು, ರಾಜನಾದ ಭಗದತ್ತ, ಅಸಹನಶೀಲನಾದ, ಪುತ್ರಸಹಿತನಾದ ವೈಕರ್ತನಕರ್ಣ, ಮಹಾಧನುಷ್ಮಂತರಾದ ಕೇಕಯರಾಜರು, ಮಹಾರಥರಾದ ತ್ರಿಗರ್ತಕರು, ರಾಕ್ಷಸರಾಜನಾದ ಘಟೋತ್ಕಚ, ಬಕನ ತಮ್ಮನಾದ ರಾಕ್ಷಸರಾಜನಾದ ಅಲಂಬುಷ, ಜಲಸಂಧ–ಇವರೇ ಅಲ್ಲದೇ ಇನ್ನೂ ಅನೇಕಸಾವಿರ ರಾಜರನ್ನು ಆಜ್ಯಧಾರೆಗಳಿಂದ ಪ್ರದೀಪ್ತವಾದ ಅಗ್ನಿಗಳ ಮೂಲಕವಾಗಿ ದಹಿಸಿದರು. ಹಲವಾರು ಮಹಾತ್ಮರಿಗೆ ಪೈತೃಮೇಧಿಕವಿಧಿಯಿಂದ ಕರ್ಮಗಳು ಪ್ರಾರಂಭವಾದುವು. ಆ ಸಮಯದಲ್ಲಿ ಅನೇಕರು ಸಾಮಗಾನವನ್ನು ಮಾಡುತ್ತಿದ್ದರು. ಅನೇಕರು ಸತ್ತವರಿಗಾಗಿ ಶೋಕವನ್ನು ವ್ಯಕ್ತಪಡಿಸುತ್ತಿದ್ದರು.

ಋಕ್ಸಾಮಗಳ ನಿನಾದಗಳಿಂದಲೂ, ಸ್ತ್ರೀಯರ ರೋದನಶಬ್ದ ಗಳಿಂದಲೂ ಆ ರಾತ್ರಿಯಲ್ಲಿ ಎಲ್ಲ ಪ್ರಾಣಿಗಳ ಮನಸ್ಸೂ ವ್ಯಾಕುಲಗೊಂಡಿತು. ಸ್ವಲ್ಪ ಹೊಗೆಯಿಂದ ಆವೃತವಾಗಿದ್ದ, ಪ್ರದೀಪ್ತವಾಗಿದ್ದ, ದೇದೀಪ್ಯಮಾನವಾಗಿ ಪ್ರಜ್ವಲಿಸುತ್ತಿದ್ದ ಆ ಚಿತಾಗ್ನಿಗಳು ತೆಳುವಾದ ಮೋಡದಿಂದ ಆವೃತವಾದ ಆಕಾಶದಲ್ಲಿನ ಗ್ರಹಗಳಂತೆಯೇ ಕಾಣುತ್ತಿ ದ್ದುವು. ನಾನಾದೇಶಗಳಿಂದ ಆಗಮಿಸಿದ್ದ, ಕರ್ತೃಗಳಿಲ್ಲದೇ ಅನಾಥರಾಗಿದ್ದ ಯೋಧರ ಎಲ್ಲ ಶರೀರಗಳನ್ನೂ ಒಂದೆಡೆಗೆ ತರಿಸಿ ಸಾವಿರಾರು ರಾಶಿಗಳನ್ನಾಗಿ ಮಾಡಿದರು. ಸ್ಥಿರಚಿತ್ತರಾಗಿದ್ದ ಸೇವಕರು ತುಪ್ಪದಿಂದಲೂ ಎಣ್ಣೆಯಿಂದಲೂ ನೆನೆಸಲ್ಪಟ್ಟ ಕಟ್ಟಿಗೆಗಳಿಂದ ಸಾವಿರಾರು ಚಿತೆಗಳನ್ನು ಸಿದ್ಧಗೊಳಿಸಿದರು. ಆ ಚಿತೆಗಳಲ್ಲಿ ರಾಶಿ-ರಾಶಿಯಾಗಿದ್ದ ಶವಗಳನ್ನು ವಿದುರನು ರಾಜಶಾಸನದಂತೆ ಸುಡಿಸಿದನು. ಅವರೆಲ್ಲರಿಗೂ ದಹನಕರ್ಮವನ್ನು ಮಾಡಿಸಿದನಂತರ ಕುರುರಾಜನಾದ ಯುಧಿಷ್ಠಿರನು ಧೃತರಾಷ್ಟ್ರನನ್ನು ಮುಂದೆಮಾಡಿಕೊಂಡು ಗಂಗಾನದಿಯ ಕಡೆಗೆ ಹೊರಟನು."

೨೬ನೆಯ ಅಧ್ಯಾಯವು ಮುಗಿಯಿತು.

೨೭ನೆಯ ಅಧ್ಯಾಯ ಶ್ರಾದ್ಧಪರ್ವ (ಮುಂದುವರಿದಿದೆ.)

## ಎಲ್ಲ ಸ್ತ್ರೀ–ಪುರುಷರೂ ತಮ್ಮ ತಮ್ಮ ಸಂಬಂಧಿಗಳಿಗೆ ಜಲಾಂಜಲಿಗಳನ್ನು ಕೊಟ್ಟುದು : ಕುಂತಿಯು ತನ್ನ ಗರ್ಭದಲ್ಲಿಯೇ ಕರ್ಣನು ಹುಟ್ಟಿದ ರಹಸ್ಯವನ್ನು ಪ್ರಕಟಿಸಿದುದು : ಯುಧಿಷ್ಠಿರನು ಕರ್ಣನಿಗಾಗಿ ಶೋಕಿಸಿ ಪ್ರೇತಕೃತ್ಯಗಳನ್ನು ಮಾಡಿದುದು : ಸ್ತ್ರೀಯರ ಮನಸ್ಸಿನಲ್ಲಿ ರಹಸ್ಯವಿಷಯಗಳು ಉಳಿಯದಂತೆ ಧರ್ಮರಾಜನು ಶಾಪವಿತ್ತುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಧೃತರಾಷ್ಟ್ರನೇ ಮೊದಲಾದ ಆ ಎಲ್ಲ ಜನರೂ ಶುಭವಾದ, ಪುಣ್ಯಜಲೋಪೇತವಾದ, ಅನೇಕ ಮಡುವುಗಳಿಂದ ಕೂಡಿ ರುವ, ಪ್ರಸನ್ನವಾದ, ವಿಶಾಲವಾದ, ಮಹಾರಣ್ಯಗಳಿಂದ ಆವೃತವಾಗಿದ್ದ ಗಂಗಾನದಿಯ ತೀರಕ್ಕೆ ಬಂದರು. ಪರಮದುಃಖಿತೆಯರಾಗಿದ್ದ ಕೌರವಕುಲ

ಸ್ತ್ರೀಯರು ಅಳುತ್ತಳುತ್ತಲೇ ತಮ್ಮ ಭೂಷಣಗಳನ್ನೂ, ಉತ್ತರೀಯಗಳನ್ನೂ ಶಿರೋವೇಷ್ಟನಗಳನ್ನೂ ಬಿಚ್ಚಿಟ್ಟು ಪಿತೃಗಳಿಗೂ, ಸಹೋದರರಿಗೂ, ಮಕ್ಕಳಿಗೂ, ಬಂಧುಗಳಿಗೂ, ಮೊಮ್ಮಕ್ಕಳಿಗೂ, ಮಾವಂದಿರಿಗೂ, ಪತಿಗಳಿಗೂ ಜಲಪ್ರದಾನಮಾಡಿದರು. ಧರ್ಮಜ್ಞರಾದವರು ತಮ್ಮ ಸ್ನೇಹಿತರಿಗೂ



ಜಲತರ್ಪಣವನ್ನಿತ್ತರು. ವೀರಪತ್ನಿಯರು ತಮ್ಮ ಪತಿಗಳಿಗೆ ಜಲಪ್ರದಾನಮಾಡುತ್ತಿದ್ದಾಗ ಗಂಗಾನದಿಯು ವಿಶಾಲವಾದ ಸೋಪಾನದಿಂದ ಯುಕ್ತವಾಯಿತು ಮತ್ತು ಅದರ ಪಾತ್ರವೂ ವಿಸ್ತಾರವಾಯಿತು. ಆ ಸಮಯದಲ್ಲಿ ಮಹಾಸಾಗರದಂತೆ ವಿಶಾಲವಾಗಿದ್ದ ಗಂಗಾನದಿಯು ಆನಂದದಿಂದಲೂ ಸಂತೋಷವನ್ನುಂಟುಮಾಡುವ ಸಮಾರಂಭದಿಂದಲೂ ಶೂನ್ಯವಾಗಿದ್ದರೂ

ವೀರಪತ್ನಿಯರಿಂದ ತುಂಬಿಹೋಗಿದ್ದುದರಿಂದ ಬಹಳ ಶೋಭಿಸುತ್ತಿದ್ದಿತು. ಆಗ ಕುಂತಿಯು ಒಡನೆಯೇ ಶೋಕಪೀಡಿತಳಾಗಿ ಅಳುತ್ತಾ ಮೆಲುದನಿಯಿಂದ ತನ್ನ ಮಕ್ಕಳೊಡನೆ ಹೇಳತೊಡಗಿದಳು :

ಯಃ ಸ ವೀರೋ ಮಹೇಷ್ವಾಸೋ ರಥಯೂಥಪಯೂಥಪಃ ।
ಅರ್ಜುನೇನ ಜಿತಃ ಸಂಖ್ಯೇ ವೀರಲಕ್ಷಣಲಕ್ಷಿತಃ ॥೭॥

ಯಂ ಸೂತಪುತ್ರಂ ಮನ್ಯಧ್ವಂ ರಾಧೇಯಮಿತಿ ಪಾಣ್ಡವಾಃ ।
ಯೋ ವ್ಯರಾಜಚ್ಚ ಭೂಮಧ್ಯೇ ದಿವಾಕರ ಇವ ಪ್ರಭುಃ ॥೮॥

ಪ್ರತ್ಯಯುಧ್ಯತ ವಃ ಸರ್ವಾನ್ಪುರಾ ಯಃ ಸಪದಾನುಗಾನ್ ।
ದುರ್ಯೋಧನಬಲಂ ಸರ್ವಂ ಯಃ ಪ್ರಕರ್ಷನ್ವ್ಯರೋಚತ ॥೯॥

ಯಸ್ಯ ನಾಸ್ತಿ ಸಮೋ ವೀರ್ಯೇ ಪೃಥಿವ್ಯಾಮಪಿ ಪಾರ್ಥಿವಃ ।
ಯೋಽವೃಣೀತ ಯಶಃ ಶೂರಃ ಪ್ರಾಣೈರಪಿ ಸದಾ ಭುವಿ ॥೧೦॥

ಕರ್ಣಸ್ಯ ಸತ್ಯಸಂಧಸ್ಯ ಸಂಗ್ರಾಮೇಷ್ವಪಲಾಯಿನಃ ।
ಕುರುಧ್ವಮುದಕಂ ತಸ್ಯ ಭ್ರಾತುರಕ್ಲಿಷ್ಟಕರ್ಮಣಃ ॥೧೧॥

ಸ ಹಿ ವಃ ಪೂರ್ವಜೋ ಭ್ರಾತಾ ಭಾಸ್ಕರಾನ್ಮಯ್ಯಜಾಯತ ।
ಕುಣ್ಡಲೀ ಕವಚೀ ಶೂರೋ ದಿವಾಕರಸಮಪ್ರಭಃ ॥೧೨॥

"ಮಕ್ಕಳಿರಾ! ಯಾವನು ಮಹಾಧನುಷ್ಮಂತನಾಗಿದ್ದನೋ, ರಥಯೂಥಪತಿಗಳಿಗೂ ಯೂಥಪತಿಯಾಗಿದ್ದನೋ, ಯುದ್ಧದಲ್ಲಿ ಅರ್ಜುನನಿಂದ ಪರಾಜಿತನಾದನೋ, ವೀರೋಚಿತವಾದ ಲಕ್ಷಣಗಳಿಂದ ಸಂಪನ್ನನಾಗಿದ್ದನೋ, ನೀವು ಯಾರನ್ನು ಸೂತಪುತ್ರನೆಂದೂ–ರಾಧೆಯ ಮಗನೆಂದೂ ಭಾವಿಸಿರುವಿರೋ, ಯಾವನು ಈ ಯುದ್ಧಮಂಡಲದ ಮಧ್ಯದಲ್ಲಿ ಸಾಕ್ಷಾತ್ ಸೂರ್ಯದೇವನಂತೆಯೇ ವಿರಾಜಮಾನನಾಗಿದ್ದನೋ, ಅನುಚರರಿಂದೊಡಗೂಡಿದ ನಿಮ್ಮೆಲ್ಲರನ್ನೂ ಎದುರಿಸಿ ಯುದ್ಧಮಾಡಿದನೋ, ದುರ್ಯೋಧನನ ಎಲ್ಲ ಸೈನ್ಯವನ್ನೂ ನಿರ್ದೇಶಿಸುತ್ತಾ ರಣಾಂಗಣದಲ್ಲಿ ಅತ್ಯಂತಶೋಭಾಯಮಾನನಾಗಿ ಕಾಣುತ್ತಿದ್ದನೋ, ವೀರ್ಯದಲ್ಲಿ ಯಾರಿಗೆ ಸಮಾನರಾದವರು

ಭೂಮಂಡಲದಲ್ಲಿಯೇ ಇರಲಿಲ್ಲವೋ, ಯಾವನು ತನ್ನ ಪ್ರಾಣಗಳಿಗಿಂತಲೂ ವಿಶೇಷವಾಗಿ ಯಶಸ್ಸನ್ನೇ ಉಪಾರ್ಜನೆಮಾಡುತ್ತಿದ್ದನೋ, ಯುದ್ಧದಲ್ಲಿ ಪಲಾಯನವೆಂಬುದನ್ನೇ ಅರಿಯನೋ–ಅಂತಹ ಸತ್ಯಸಂಧನಾದ, ಕಷ್ಟವಾದ ಕಾರ್ಯಗಳನ್ನೂ ಸುಲಭವಾಗಿ ಮಾಡುವ ಸಾಮರ್ಥ್ಯವಿದ್ದ ನಿಮ್ಮ ಸಹೋದರನಾದ ಕರ್ಣನಿಗೆ ಜಲಪ್ರದಾನವನ್ನು ಮಾಡಿರಿ. ಅವನು ನಿಮ್ಮೆಲ್ಲರಿಗಿಂತಲೂ ಮೊದಲು ಹುಟ್ಟಿದ ಸಹೋದರನು. ಸೂರ್ಯನ ಅನುಗ್ರಹದಿಂದ ನನ್ನಲ್ಲಿ ಜನ್ಮತಾಳಿದವನು. ಅವನು ಹುಟ್ಟಿದಾಗಲೇ ಕುಂಡಲಗಳಿಂದಲೂ–ಕವಚದಿಂದಲೂ ಯುಕ್ತನಾಗಿದ್ದನು. ಆ ಶೂರನು ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದನು."

ಜನಮೇಜಯ! ತಾಯಿಯು ಹೇಳಿದ ಪರಮಾಪ್ರಿಯವಾದ ಮಾತನ್ನು ಕೇಳಿದ ಎಲ್ಲ ಪಾಂಡವರೂ ಕರ್ಣನನ್ನೇ ಕುರಿತು ದುಃಖಿಸುತ್ತಾ ಪುನಃ ಬಹಳವಾಗಿ ವ್ಯಾಕುಲಗೊಂಡರು. ಅನಂತರ ಪುರುಷಸಿಂಹನಾದ, ಕುಂತಿಯ ಮಗನಾದ, ವೀರನಾದ ಯುಧಿಷ್ಠಿರನು–ಸರ್ಪದಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ–ತಾಯಿಯನ್ನು ಕುರಿತು ಹೇಳಿದನು :

"ಅಮ್ಮ! ಕರ್ಣನು ಸಾಗರದಂತಿದ್ದನು. ಆತನ ಮಹಾರಥವೇ ಮಡುವುಗಳಂತಿದ್ದಿತು. ಅವನ ಬಾಣಗಳೇ ದೊಡ್ಡ ಅಲೆಗಳಂತಿದ್ದುವು. ಧ್ವಜಗಳೇ ಸುಳಿಗಳಂತಿದ್ದುವು. ದೊಡ್ಡ ಭುಜಗಳೇ ಮೊಸಳೆಗಳಂತಿದ್ದುವು. ಜ್ಯಾತಲಶಬ್ದಗಳೇ ಸಮುದ್ರದ ಗರ್ಜನೆಗಳಂತಿದ್ದುವು. ಯಾವನ ಬಾಣಗಳು ಬರುತ್ತಿದ್ದ ಹಾದಿಯಲ್ಲಿ ಧನಂಜಯನೊಬ್ಬನಲ್ಲದೇ ಬೇರೆ ಯಾರೂ ನಿಲ್ಲ ಲಾಗುತ್ತಿರಲಿಲ್ಲವೋ – ಅಂತಹ ದೇವಸದೃಶನಾದ ಕರ್ಣನು ಹಿಂದೆ ಹೇಗೆ ನಿನ್ನ ಮಗನಾಗಿ ಜನಿಸಿದನು? ಯಾವನ ಬಾಹುಗಳ ಪ್ರತಾಪದಿಂದ ನಾವೆಲ್ಲರೂ ಎಲ್ಲ ಕಡೆಗಳಿಂದಲೂ ಪರಿತಾಪಗೊಳ್ಳುತ್ತಿದ್ದೆವೋ–ಅವನನ್ನು ಅಗ್ನಿಯನ್ನು ಬಟ್ಟೆಯಲ್ಲಿ ಮುಚ್ಚಿಟ್ಟುಕೊಳ್ಳುವಂತೆ–ನೀನು ಈವರೆಗೂ ನಿಗೂಢವಾಗಿಟ್ಟಿದ್ದುದು ಹೇಗೆ? ನಾವು ಗಾಂಡೀವಧನ್ವನಾದ ಅರ್ಜುನನ ಬಲವನ್ನು ಆಶ್ರಯಿಸಿದ್ದಂತೆ ಧೃತರಾಷ್ಟ್ರನ ಮಕ್ಕಳು ಕರ್ಣನ ಬಾಹುಬಲವನ್ನೇ ನಿತ್ಯವೂ ಆಶ್ರಯಿಸುತ್ತಿದ್ದರು. ರಥಿಗಳೆಲ್ಲರಿಗೂ ಶ್ರೇಷ್ಠರಥಿಯಾದ, ಬಲಿಷ್ಠರೆಲ್ಲರಿಗೂ ಅತ್ಯಂತಬಲಿಷ್ಠನಾದ, ಕುಂತಿಯ ಮಗನಾದ ಕರ್ಣನಲ್ಲದೆ ಬೇರೆ ಯಾರೂ ಎಲ್ಲ

ಭೂಪಾಲಕರ ಸೈನ್ಯವನ್ನೂ ಎದುರಿಸಿ ನಿಲ್ಲುತ್ತಿರಲಿಲ್ಲ. ಎಲ್ಲ ಶಸ್ತ್ರಧಾರಿಗಳಲ್ಲಿಯೂ ಶ್ರೇಷ್ಠನಾದ ಕರ್ಣನು ನಮ್ಮೆಲ್ಲರಿಗೂ ಮೊದಲು ಹುಟ್ಟಿದವನು. ನಮ್ಮಣ್ಣನು! ಅದ್ಭುತಪರಾಕ್ರಮನಾದ ಅವನನ್ನು ನೀನು ನಮ್ಮೆಲ್ಲರಿಗಿಂತಲೂ ಮೊದಲು ಹೇಗೆ ಎಲ್ಲಿ ಪ್ರಸವಿಸಿದೆ? ಅಯ್ಯೋ! ನೀನು ಈ ಗುಪ್ತ ರಹಸ್ಯವನ್ನು ಮುಚ್ಚಿಟ್ಟುದರಿಂದ ಇಂದು ನಾವೆಲ್ಲರೂ ಸತ್ತಂತೆಯೇ ಸರಿ. ನಮ್ಮಣ್ಣನಾದ ಕರ್ಣನ ನಿಧನದಿಂದಾಗಿ ಬಂಧುಗಳಿಂದ ಕೂಡಿದ ನಾವೆಲ್ಲರೂ ಶೋಕಪೀಡಿತರಾಗಿದ್ದೇವೆ.

**ಅಭಿಮನ್ಯೋರ್ವಿನಾಶೇನ ದ್ರೌಪದೇಯವಧೇನ ಚ ।**
**ಪಞ್ಚಾಲಾನಾಂ ವಿನಾಶೇನ ಕುರೂಣಾಂ ಪತನೇನ ಚ ।**
**ತತಃ ಶತಗುಣಂ ದುಃಖಮಿದಂ ಮಾಮಸ್ಪೃಶದ್ಭೃಶಮ್ ॥೨೩॥**

ಅಭಿಮನ್ಯು, ದ್ರೌಪದೇಯರು, ಪಾಂಚಾಲರು (ಧೃಷ್ಟದ್ಯುಮ್ನಾದಿಗಳು), ಕುರುಗಳು (ದುರ್ಯೋಧನಾದಿಗಳು)–ಇವರ ವಿನಾಶದಿಂದುಂಟಾಗಿದ್ದ ದುಃಖಕ್ಕಿಂತಲೂ ನೂರುಪಟ್ಟು ಹೆಚ್ಚಾದ ದುಃಖವು–'ಕರ್ಣನು ನಿಮ್ಮ ಹಿರಿಯಣ್ಣನು'–ಎಂದು ನೀನು ಹೇಳಿದುದರಿಂದ ಉಂಟಾಗಿದೆ.

**ಕರ್ಣಮೇವಾನುಶೋಚಾಮಿ ದಹ್ಯಾಮ್ಯಗ್ನಾವಿವಾಹಿತಃ ।**
**ನೇಹ ಸ್ಮ ಕಿಂಚಿದಪ್ರಾಪ್ಯಂ ಭವೇದಪಿ ದಿವಿ ಸ್ಥಿತಮ್ ।**
**ನ ಚೇದಂ ವೈಶಸಂ ಘೋರಂ ಕೌರವಾನ್ತಕರಂ ಭವೇತ್ ॥೨೪॥**

ನಾನೀಗ ಕರ್ಣನಿಗೆ ಮಾತ್ರವೇ ದುಃಖಪಡುತ್ತಿದ್ದೇನೆ. ನನ್ನ ಸ್ಥಿತಿಯು ಈಗ ಪ್ರಜ್ವಲಿಸುವ ಅಗ್ನಿಯಲ್ಲಿ ದೂಡಲ್ಪಟ್ಟವನಂತಾಗಿದೆ. ನನ್ನ ಮನಸ್ಸಿಗೆ ಅಷ್ಟೊಂದು ಸಂಕಟವಾಗುತ್ತಿದೆ. ಕರ್ಣನು ನಮ್ಮಣ್ಣನೆಂಬುದು ಈ ಮೊದಲೇ ನನಗೇನಾದರೂ ತಿಳಿದಿದ್ದರೆ ಅವನನ್ನು ಪಡೆದುಕೊಂಡ ನಮಗೆ ಈ ವಿಶ್ವದಲ್ಲಿ ಅಲಭ್ಯವಾದುದು ಯಾವುದೂ ಇರುತ್ತಿರಲಿಲ್ಲ. ಆ ವಸ್ತುವು ಸ್ವರ್ಗದಲ್ಲಿಯೇ ಇದ್ದರೂ ನಾವದನ್ನು ಪಡೆದುಕೊಳ್ಳುತ್ತಿದ್ದೆವು. ಕೌರವಾಂತಕರವಾದ, ಘೋರವಾದ ಈ ಸಂಹಾರಕಾರ್ಯವೂ ಖಂಡಿತವಾಗಿಯೂ ನಡೆಯುತ್ತಿರಲಿಲ್ಲ."

ಜನಮೇಜಯ! ಧರ್ಮಾತ್ಮನಾದ ಯುಧಿಷ್ಠಿರನು ಹೀಗೆ ಕರ್ಣನಿಗಾಗಿ

ವಿಲಪಿಸುತ್ತಾ, ಬಿಕ್ಕಿ-ಬಿಕ್ಕಿ ಅತ್ತನು. ಅನಂತರ ಅವನಿಗೂ ಯಥಾವಿಧಿಯಾಗಿ ಜಲಪ್ರದಾನಮಾಡಿದನು. ಯುಧಿಷ್ಠಿರನು ಕರ್ಣನಿಗೆ ಜಲಪ್ರದಾನ ಮಾಡುತ್ತಿದ್ದಾಗ ಸುತ್ತಲೂ ಇದ್ದ ಎಲ್ಲ ಸ್ತ್ರೀಯರೂ ಗಟ್ಟಿಯಾಗಿ ರೋದನ ಮಾಡಿದರು. ಬಳಿಕ ಕುರುಪತಿಯಾದ, ಧೀಮಂತನಾದ, ಧರ್ಮಾತ್ಮನಾದ ಯುಧಿಷ್ಠಿರನು ಅಣ್ಣನ ಮೇಲಿನ ಪ್ರೀತಿಯಿಂದಾಗಿ ಪರಿವಾರಸಹಿತರಾದ ಅವನ ಪತ್ನಿಯರನ್ನೂ ಕರೆಯಿಸಿದನು. ಧರ್ಮಾತ್ಮನಾದ ಯುಧಿಷ್ಠಿರನು ಅವರೊಡನೆ ಸೇರಿಕೊಂಡು ತನ್ನ ಅಣ್ಣನಾದ ಕರ್ಣನ ಔರ್ಧ್ವದೈಹಿಕಕ್ರಿಯೆಗಳನ್ನು ವಿಧಿವತ್ತಾಗಿ ನೆರವೇರಿಸಿದನು.

ಬಳಿಕ ಖಿನ್ನನಾಗಿದ್ದ ಯುಧಿಷ್ಠಿರನು ಹೀಗೆ ಹೇಳಿದನು :

**ಪಾಪೇನಾಸೌ ಮಯಾ ಶ್ರೇಷ್ಠೋ ಭ್ರಾತಾ ಜ್ಞಾತಿರ್ನಿಪಾತಿತಃ ।**
**ಅತೋ ಮನಸಿ ಯದ್ಗುಹ್ಯಂ ಸ್ತ್ರೀಣಾಂ ತನ್ನ ಭವಿಷ್ಯತಿ ॥೨೯॥**

"ಪಾಪಿಯಾದ ನಾನು ನನ್ನ ಜ್ಯೇಷ್ಠಸೋದರನನ್ನು ಸಂಹಾರ ಮಾಡಿದೆನು. ನಮ್ಮ ತಾಯಿಯು ಕರ್ಣನ ಜನ್ಮರಹಸ್ಯವನ್ನು ಹೇಳದಿದ್ದುದೇ ಇದಕ್ಕೆ ಕಾರಣವಾಗಿದೆ. ಆದುದರಿಂದ ಇನ್ನು ಮುಂದೆ ಸ್ತ್ರೀಯರ ಮನಸ್ಸಿನಲ್ಲಿ ಯಾವ ರಹಸ್ಯವಿಷಯವೂ ಸ್ಥಿರವಾಗಿ ಉಳಿಯುವುದಿಲ್ಲ. (ರಹಸ್ಯವಿಷಯಗಳನ್ನು ಬಚ್ಚಿಡಲು ಅವರಿಂದ ಸಾಧ್ಯವಾಗದಿರಲಿ.)" ಹೀಗೆ ಹೇಳಿದನಂತರ ವ್ಯಾಕುಲವಾದ ಇಂದ್ರಿಯಗಳಿಂದ ಕೂಡಿದ್ದ ಯುಧಿಷ್ಠಿರನು ಗಂಗಾಜಲದಿಂದ ಮೇಲೆದ್ದು ತನ್ನ ಎಲ್ಲ ಸೋದರರೊಡನೆಯೂ–ತಾಯಿಯರೊಡನೆಯೂ ತೀರವನ್ನು ಸೇರಿದನು."

೨೭ನೆಯ ಅಧ್ಯಾಯವು ಮುಗಿಯಿತು.

**ಸ್ತ್ರೀಪರ್ವವು ಮುಗಿಯಿತು.**
**ಇದರೊಂದಿಗೆ ಇಪ್ಪತ್ತನೆಯ ಸಂಪುಟವು ಮುಗಿಯಿತು.**

ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು
ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು
ಓಂ ತತ್ಸತ್

# ೧೭ನೆಯ ದಿನದ ಯುದ್ಧದ ವಿಶ್ಲೇಷಣೆ

(೧೯ನೆಯ ಸಂಪುಟದಿಂದ ಮುಂದುವರಿದಿದೆ.)

೫೭ನೆಯ ಅಧ್ಯಾಯ :– ಕರ್ಣನು ಧೃಷ್ಟದ್ಯುಮ್ನ-ಭೀಮಸೇನರೊಡನೆ ಯುದ್ಧದಲ್ಲಿ ತೊಡಗಿ ಪಾಂಡವರ ಸೈನ್ಯವನ್ನು ಸಂಹರಿಸುತ್ತಿರುತ್ತಾನೆ. ಅದಕ್ಕೆ ಪ್ರತಿಯಾಗಿ ಭೀಮಸೇನನೂ ಕೌರವರ ಕಡೆಗೆ ಧಾವಿಸಿ ಕುರುಸೈನ್ಯವನ್ನು ಧ್ವಂಸಮಾಡಲು ಉಪಕ್ರಮಿಸುತ್ತಾನೆ. ಹೀಗೆ ಪರಸ್ಪರವಾಗಿ ಶತ್ರುಸೈನ್ಯಗಳನ್ನು ಧ್ವಂಸಮಾಡುತ್ತಾರೆ. ದುರ್ಯೋಧನನು ನಕುಲ-ಸಹದೇವರೊಡನೆ ಯುದ್ಧ ದಲ್ಲಿ ತೊಡಗುತ್ತಾನೆ. ದುರ್ಯೋಧನನು ನಕುಲ-ಸಹದೇವರನ್ನು ಬಹಳವಾಗಿ ಪೀಡಿಸುತ್ತಿರಲಾಗಿ ಧೃಷ್ಟದ್ಯುಮ್ನನು ನಕುಲ-ಸಹದೇವರ ನೆರವಿಗೆ ಬರುತ್ತಾನೆ. ದುರ್ಯೋಧನನಿಗೂ ಧೃಷ್ಟದ್ಯುಮ್ನನಿಗೂ ಭಯಂಕರವಾದ ಯುದ್ಧವು ಪ್ರಾರಂಭವಾಗುತ್ತದೆ. ಧೃಷ್ಟದ್ಯುಮ್ನನು ದುರ್ಯೋಧನನನ್ನು ರಥಹೀನನನ್ನಾಗಿ ಮಾಡುತ್ತಾನೆ. ದಂಡಧರನು ದುರ್ಯೋಧನನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟುಹೋಗುತ್ತಾನೆ. ಅನಂತರ ಕರ್ಣನು ಧೃಷ್ಟದ್ಯುಮ್ನನನ್ನು ಎದುರಿಸಿ ಯುದ್ಧಮಾಡುತ್ತಾನೆ. ಪಾರ್ಷತನ ಬೆಂಬಲಿಗರಾಗಿ ಬಂದ ಅನೇಕ ಚೇದಿ-ಪಾಂಚಾಲಯೋಧರನ್ನೂ ಕರ್ಣನು ಸಂಹರಿಸುತ್ತಾನೆ. ಕರ್ಣನು ಪಾಂಡವರ ಸೈನ್ಯವನ್ನೂ, ಭೀಮಸೇನನು ಕೌರವಸೈನ್ಯವನ್ನೂ, ಧ್ವಂಸಮಾಡುವ ವಿಪುಲವಾದ ವರ್ಣನೆಯು ಈ ಅಧ್ಯಾಯದಲ್ಲಿದೆ. ಸಂಶಪ್ತಕರನ್ನು ನಾಶಮಾಡಿದ ಅರ್ಜುನನು ಕೌರವಸೈನ್ಯದ ಬಳಿಗೆ ಬರುತ್ತಿರುತ್ತಾನೆ. ಆ ಸಮಯದಲ್ಲಿ ದುರ್ಯೋಧನನು ಅರ್ಜುನನನ್ನು ಪುನಃ ಯುದ್ಧಕ್ಕೆ ಕರೆಯುವಂತೆ ಅಳಿದುಳಿದಿದ್ದ ಸಂಶಪ್ತಕರನ್ನು ಪ್ರಚೋದಿಸುತ್ತಾನೆ. ಅವನ ಪ್ರೇರಣೆಯಂತೆ ಸಂಶಪ್ತಕರು ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸುತ್ತಾರೆ.

**ತತೋ ರಥಸಹಸ್ರೇಣ ದ್ವಿರದಾನಾಂ ತ್ರಿಭಿಃ ಶತೈಃ ।**
**ಚತುರ್ದಶಸಹಸ್ರೈಸ್ತು ತುರಗಾಣಾಂ ಮಹಾಹವೇ ।**
**ದ್ವಾಭ್ಯಾಂ ಶತಸಹಸ್ರಾಭ್ಯಾಂ ಪದಾತೀನಾಂ ಚ ಧನ್ವಿನಾಮ್ ॥**

ಒಂದು ಸಾವಿರ ರಥಗಳು, ಮೂರು ನೂರು ಆನೆಗಳು, ಹದಿನಾಲ್ಕು ಸಾವಿರ ಕುದುರೆಗಳು ಮತ್ತು ಎರಡು ಲಕ್ಷ ಪದಾತಿಗಳಿಂದ ಕೂಡಿಕೊಂಡು

ಸಂಶಪ್ತಕರು ಅರ್ಜುನನೊಡನೆ ಯುದ್ಧಕ್ಕೆ ಹೋಗುತ್ತಾರೆ. ಆದರೆ ೫೩ನೆಯ ಅಧ್ಯಾಯದಲ್ಲಿ ಸಂಶಪ್ತಕರಲ್ಲಿ ಅಳಿದುಳಿದಿದ್ದವರ ಸಂಖ್ಯೆಯನ್ನು ಹೇಳುವಾಗ

**ಚತುರ್ದಶ ಸಹಸ್ರಾಣಿ ಯಾನಿ ಶಿಷ್ಟಾನಿ ಭಾರತ ।**
**ರಥಾನಾಮಯುತಂ ಚೈವ ತ್ರಿಸಾಹಸ್ರಾಶ್ಚ ದನ್ತಿನಃ ॥೪೪॥**

ಹದಿನಾಲ್ಕು ಸಾವಿರ ಪದಾತಿಗಳು ಅಥವಾ ಕುದುರೆಸೈನಿಕರೂ, ಹತ್ತುಸಾವಿರ ರಥಗಳೂ, ಮೂರು ಸಾವಿರ ಆನೆಗಳೂ ಇದ್ದುವೆಂದು ಹೇಳಿದೆ. ನಾವಲ್ಲಿ ಪದಾತಿಗಳೆಂದು ಅರ್ಥಮಾಡಿದ್ದೇವೆ. ಈ ಶ್ಲೋಕಾನುಸಾರ ಹದಿನಾಲ್ಕು ಸಾವಿರ ಕುದುರೆಗಳೆಂದು ಅರ್ಥಮಾಡುವುದು ಸಮಂಜಸ ವಾಗಿದೆ. ಹತ್ತು ಸಾವಿರ ರಥಗಳಲ್ಲಿ ಒಂದು ಸಾವಿರ ರಥಗಳನ್ನೂ, ಮೂರು ಸಾವಿರ ಆನೆಗಳಲ್ಲಿ ಮೂರು ನೂರು ಆನೆಗಳನ್ನೂ, ಹದಿನಾಲ್ಕು ಸಾವಿರ ಕುದುರೆಗಳನ್ನೂ, ಎರಡು ಲಕ್ಷ ಪದಾತಿಗಳನ್ನೂ ಅರ್ಜುನನೊಡನೆ ಯುದ್ಧಮಾಡಲು ಕರೆದುಕೊಂಡು ಹೋದರೆಂದು ಅರ್ಥಮಾಡಬಹು ದಾಗಿದೆ. ಪುನಃ ಅರ್ಜುನನಿಗೂ ಸಂಶಪ್ತಕರಿಗೂ ಘೋರವಾದ ಯುದ್ಧವಾಗುತ್ತದೆ. ಸುದಕ್ಷಿಣನ ಸಹೋದರನನ್ನು ಅರ್ಜುನನು ಸಂಹರಿಸುತ್ತಾನೆ. ಸಂಶಪ್ತಕಯೋಧರನ್ನು ಸಂಹರಿಸುತ್ತಿದ್ದಾಗ ಅಶ್ವತ್ಥಾಮನು ಅರ್ಜುನನನ್ನು ಎದುರಿಸಿ ನಿಲ್ಲುತ್ತಾನೆ. ಯುದ್ಧಮಾಡುತ್ತಿದ್ದಾಗ ದ್ರೌಣಿಯ ಕೈಮೇಲಾಗುತ್ತದೆ. ಅರ್ಜುನನು ದುರ್ಬಲನಾಗಿರುವಂತೆ ಕಾಣುತ್ತಾನೆ. ಅದನ್ನು ನೋಡಿದ ಕೃಷ್ಣನಿಗೆ ಕೋಪವೇ ಬರುತ್ತದೆ. ಆದರೂ ಆದರಪೂರ್ವಕವಾಗಿ ಅರ್ಜುನನೊಡನೆ ಅವನ ದೌರ್ಬಲ್ಯಕ್ಕೆ ಕಾರಣವನ್ನು ಕೇಳುತ್ತಾನೆ. 'ಗುರುಪುತ್ರನೆಂದು ಉಪೇಕ್ಷೆಯಿಂದ ಯುದ್ಧಮಾಡುತ್ತಿರುವೆಯಾ? ಉಪೇಕ್ಷೆಗೆ ಇದು ಕಾಲವಲ್ಲ'–ಎಂದು ಎಚ್ಚರಿಸುತ್ತಾನೆ. ನಿಶ್ಚಯವಾಗಿಯೂ ಗುರುಪುತ್ರನೆಂಬ ಕಾರಣದಿಂದಲೇ ಅರ್ಜುನನ ಕೈಯಿಂದ ಬಾಣಗಳು ಬಿರುಸಾಗಿ ಹೋಗುವುದಿಲ್ಲ. ಅವನ ಸ್ವಭಾವವೇ ಅಂತಹುದು. ಶ್ರೀಕೃಷ್ಣನು ಎಚ್ಚರಿಸಿದನಂತರ ಅರ್ಜುನನು ದ್ರೌಣಿಯನ್ನು ಭಲ್ಲಗಳಿಂದ ಪ್ರಹರಿಸಿ ಮೂರ್ಛೆಗೆಡುಹುತ್ತಾನೆ. ಅವನ ಸೂತನು ದ್ರೌಣಿಯನ್ನು ರಣಾಂಗಣದಿಂದ ಬಹಳ ದೂರಕ್ಕೆ ಒಯ್ಯುತ್ತಾನೆ. ಯುಧಿಷ್ಠಿರನು ಬಾಣಗಳಿಂದ ಗಾಯಗೊಂಡು ಮೂರು ಮೈಲಿಗಳ ಅಂತರದಲ್ಲಿ ನಿಂತಿರುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೫೭ನೆಯ ಅಧ್ಯಾಯ :–ದುರ್ಯೋಧನನು ಕರ್ಣನೇ ಮೊದಲಾದ ಯೋಧರನ್ನು ಪ್ರೋತ್ಸಾಹಿಸುತ್ತಾನೆ. ದುರ್ಯೋಧನನ ಮಾತನ್ನು ಕೇಳಿ ದ್ರೌಣಿಯು ಧೃಷ್ಟದ್ಯುಮ್ನನನ್ನು ಸಂಹರಿಸದೇ ಕವಚವನ್ನು ಬಿಚ್ಚುವುದಿಲ್ಲವೆಂದು ಪ್ರತಿಜ್ಞೆಮಾಡುತ್ತಾನೆ. ಧೃಷ್ಟದ್ಯುಮ್ನನನ್ನು ರಕ್ಷಿಸಲು ಬರುವ ಭೀಮಾರ್ಜುನರನ್ನೂ ಸಂಹರಿಸುತ್ತೇನೆಂದೂ ಅವನು ಹೇಳುತ್ತಾನೆ. ಆದರೆ ಯುದ್ಧದಲ್ಲಿ ಅಶ್ವತ್ಥಾಮನು ಧೃಷ್ಟದ್ಯುಮ್ನನನ್ನು ಸಂಹರಿಸುವುದಿಲ್ಲ. ತನ್ನ ಪ್ರತಿಜ್ಞೆಯನ್ನು ಮುಂದೆ ಒಮ್ಮೆಯಾದರೂ ಅವನು ಜ್ಞಾಪಿಸಿಕೊಳ್ಳುವುದೂ ಇಲ್ಲ. ಮುಂದೆ ಇದೇ ಅಧ್ಯಾಯದಲ್ಲಿ ಅಪ್ಸರೆಯರು ಯೋಧರನ್ನು ಆದರಿಸುವ ಪ್ರಕರಣವೂ ಬಂದಿರುತ್ತದೆ. ಈ ಪ್ರಕರಣವು ಸ್ವಲ್ಪ ಅಸಂಗತವಾಗಿ ಕಾಣುತ್ತದೆ. ಈ ಅಧ್ಯಾಯವೂ ಮತ್ತು ಮುಂದಿನ ಅಧ್ಯಾಯವೂ ಭಂ.ರಿ. ಇನ್‌ಸ್ಟಿಟ್ಯೂಟ್‌ನವರ ಪುಸ್ತಕದಲ್ಲಿರುವುದಿಲ್ಲ.

೫೮ನೆಯ ಅಧ್ಯಾಯ :–ಅಶ್ವತ್ಥಾಮನನ್ನು ಪರಾಜಯಗೊಳಿಸಿದ ನಂತರ ಅರ್ಜುನನು ಯುಧಿಷ್ಠಿರನಿರುವ ಕಡೆಗೆ ರಥವನ್ನು ನಡೆಸುವಂತೆ ಶ್ರೀಕೃಷ್ಣನಿಗೆ ಹೇಳುತ್ತಾನೆ. ಆ ವೇಳೆಗೆ ಹಗಲಿನ ಮೂರನೆಯ ಎರಡು ಭಾಗವು ಕಳೆದಿರುತ್ತದೆ. 'ಕರ್ಣನು ನಮ್ಮ ಸೈನ್ಯವನ್ನು ಧ್ವಂಸಮಾಡುತ್ತಿದ್ದಾನೆ. ಆದರೆ ಅಲ್ಲಿ ನಾನು ಯುಧಿಷ್ಠಿರನನ್ನು ಕಾಣುತ್ತಿಲ್ಲ'–ಎಂದು ಅರ್ಜುನನು ಕಳವಳವನ್ನು ವ್ಯಕ್ತಪಡಿಸುತ್ತಾನೆ. ಯುಧಿಷ್ಠಿರನನ್ನೂ ಮತ್ತು ಸಹೋದರರನ್ನೂ ನೋಡಿದನಂತರ ಪುನಃ ಯುದ್ಧಮಾಡುವುದಾಗಿ ಅರ್ಜುನನು ಹೇಳುತ್ತಾನೆ. ಮುಂದೆ ಶ್ರೀಕೃಷ್ಣನು ರಥದಲ್ಲಿ ಕುಳಿತು ಧರ್ಮರಾಜನ ಸಮೀಪಕ್ಕೆ ಹೋಗುತ್ತಿದ್ದಾಗ ಹಾದಿಯಲ್ಲಿ ಯುದ್ಧದಿಂದಾದ ವಿಧ್ವಂಸಗಳನ್ನೆಲ್ಲಾ ವರ್ಣಿಸುತ್ತಾ ಹೋಗುತ್ತಾನೆ. ಅರ್ಜುನನು ಬೇಗಹೋಗುವಂತೆ ಶ್ರೀಕೃಷ್ಣನನ್ನು ಅವಸರಪಡಿಸುತ್ತಾನೆ. ರಥವು ಮುಂದೆ ಹೋದಂತೆಲ್ಲಾ ಶ್ರೀಕೃಷ್ಣನು ತನಗೆ ದೂರದ ಯುದ್ಧಭೂಮಿಯಲ್ಲಿ ಕಾಣುತ್ತಿದ್ದುದೆಲ್ಲವನ್ನೂ ಅರ್ಜುನನಿಗೆ ವಿವರಿಸುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

(ಇಷ್ಟು ಕಥಾಭಾಗವೂ ೧೮ನೆಯ ಸಂಪುಟದಲ್ಲಿರುತ್ತದೆ.)

೫೫ನೆಯ ಅಧ್ಯಾಯ :–ಯದ್ಯಪಿ ಮೊದಲಿನಲ್ಲಿ ಸಂಜಯನು–ಯುಧಿಷ್ಠಿರಪುರಃಸರರಾಗಿ ಪಾರ್ಥರೂ, ಕರ್ಣಪುರಃಸರರಾಗಿ ನಾವೂ ಯುದ್ಧಮಾಡುತ್ತಿದ್ದೇವೆಂದು ಹೇಳಿರುವನಾದರೂ-ಯುಧಿಷ್ಠಿರನು ಯುದ್ಧದಲ್ಲಿ ತೊಡಗಿದ್ದ ಪ್ರಕರಣವು ಈ ಅಧ್ಯಾಯಪೂರ್ತಿಯಾಗಿ ಬರುವುದಿಲ್ಲ. ಧೃಷ್ಟದ್ಯುಮ್ನ-ಕರ್ಣರ ಯುದ್ಧದೊಡನೆ ಅಧ್ಯಾಯವು ಪ್ರಾರಂಭವಾಗುತ್ತದೆ. ಕರ್ಣನು ಧೃಷ್ಟದ್ಯುಮ್ನನ ಮೇಲೆ ಬಿಡಲಿದ್ದ ಭಯಂಕರವಾದ ಬಾಣವನ್ನು ಸಾತ್ಯಕಿಯು ಕತ್ತರಿಸುತ್ತಾನೆ. ಅದೇ ಕಾರಣದಿಂದ ಸಾತ್ಯಕಿಗೂ ಕರ್ಣನಿಗೂ ಘೋರಯುದ್ಧವಾಗುತ್ತದೆ. ದ್ರೌಣಿಯು ಧೃಷ್ಟದ್ಯುಮ್ನನನ್ನು ಆಕ್ರಮಿಸುತ್ತಾನೆ. ದ್ರೋಣರು ಧೃಷ್ಟದ್ಯುಮ್ನನನ್ನು ಕಂಡಾಗ ಕಳವಳಹೊಂದುತ್ತಿದ್ದಂತೆ ದ್ರೌಣಿಯನ್ನು ನೋಡಿದಾಗ ಧೃಷ್ಟದ್ಯುಮ್ನನೂ ಕಳವಳಪಡುತ್ತಾನೆ. ಆದರೆ ಯುದ್ಧದಲ್ಲಿ ಶಸ್ತ್ರದ ಮೂಲಕವಾಗಿ ತನ್ನ ವಧೆಯಾಗಲಾರದೆಂಬ ಮರಣರಹಸ್ಯವನ್ನು ಧೃಷ್ಟದ್ಯುಮ್ನನು ತಿಳಿದಿದ್ದುದರಿಂದ ಧೈರ್ಯವಾಗಿ ದ್ರೌಣಿಯೊಡನೆ ಯುದ್ಧಮಾಡಲು ಮುನ್ನುಗ್ಗಿಹೋಗುತ್ತಾನೆ. ಪರಾಙ್ಮುಖನಾಗದಿದ್ದರೆ ಧೃಷ್ಟದ್ಯುಮ್ನನನ್ನು ಸಂಹರಿಸುವುದಾಗಿ ಅಶ್ವತ್ಥಾಮನು ಪ್ರತಿಜ್ಞೆ ಮಾಡುತ್ತಾನೆ. ಇಬ್ಬರಿಗೂ ಖಡಾ-ಖಡಿಯಾಗಿ ಯುದ್ಧವಾಗುತ್ತದೆ. ಧೃಷ್ಟದ್ಯುಮ್ನನ ರಥ-ಕುದುರೆಗಳೆಲ್ಲವೂ ನಾಶವಾಗುತ್ತವೆ. ಸೂತನೂ ಸಾಯುತ್ತಾನೆ. ಕತ್ತಿಯನ್ನು ಹಿಡಿದು ಕೆಳಗಿಳಿಯಲು ಅದನ್ನೂ ಅಶ್ವತ್ಥಾಮನು ಕತ್ತರಿಸುತ್ತಾನೆ. ಆದರೆ ಶಸ್ತ್ರಪ್ರಹಾರಗಳಿಂದ ಧೃಷ್ಟದ್ಯುಮ್ನನನ್ನು ಸಂಹರಿಸಲು ದ್ರೌಣಿಗೆ ಆಗುವುದಿಲ್ಲ. ರಥದಿಂದಿಳಿದು ಬಂದು ಪಾರ್ಷತನನ್ನು ಹಿಗ್ಗಾ-ಮುಗ್ಗಾಗ್ಗಿ ಎಳೆದಾಡುತ್ತಾನೆ. ಆ ವೇಳೆಗೆ ಸರಿಯಾಗಿ ಅರ್ಜುನನು ಕೃಷ್ಣನ ಪ್ರಚೋದನೆಯಂತೆ ದ್ರೌಣಿಯ ಮೇಲೆ ಬಾಣಗಳನ್ನು ಪ್ರಯೋಗಿಸುತ್ತಾನೆ. ಅಶ್ವತ್ಥಾಮನು ರಥವನ್ನು ಹತ್ತಿ ಅರ್ಜುನನೊಡನೆ ಯುದ್ಧದಲ್ಲಿ ತೊಡಗುತ್ತಾನೆ. ಸಹದೇವನು ಧೃಷ್ಟದ್ಯುಮ್ನನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟುಹೋಗುತ್ತಾನೆ. ಇಲ್ಲಿಯ ಯುದ್ಧವರ್ಣನೆಯು ರೋಮಾಂಚಕಾರಿಯಾಗಿದೆ. ಅರ್ಜುನನೊಡನೆ ಮಾಡಿದ ಯುದ್ಧದಲ್ಲಿ ದ್ರೌಣಿಯು ಬಹಳವಾಗಿ ಗಾಯಗೊಂಡು ಮೂರ್ಛಿತನಾಗುತ್ತಾನೆ. ಸಾರಥಿಯು ರಣರಂಗದಿಂದ ಅವನನ್ನು ಹೊರಕ್ಕೊಯ್ಯು

ತ್ತಾನೆ. ಕರ್ಣನು ಅರ್ಜುನನನ್ನು ಬಾರಿ-ಬಾರಿಗೂ ನೋಡುತ್ತಾ ಅವನೊಡನೆ ದ್ವೈರಥಯುದ್ಧಮಾಡಲು ಅಪೇಕ್ಷಿಸುತ್ತಾನೆ. ದ್ರೋಣರ ಮಗನು ಮೂರ್ಛೆಹೊಂದಿದುದನ್ನೂ–ಧೃಷ್ಟದ್ಯುಮ್ನನು ಬಿಡುಗಡೆಹೊಂದಿದುದನ್ನೂ ಕಂಡ ಪಾಂಡವಯೋಧರು ಆನಂದದಿಂದ ಸಿಂಹನಾದಗಳನ್ನು ಮಾಡುತ್ತಾರೆ. ಇಷ್ಟಾದನಂತರ ಅರ್ಜುನನು ಶ್ರೀಕೃಷ್ಣನಿಗೆ ಹೇಳುತ್ತಾನೆ :

**ಯಾಹಿ ಸಂಶಪ್ತಕಾನ್ಕೃಷ್ಣ ಕಾರ್ಯಮೇತತ್ಪರಂ ಮಮ ॥೬೬॥**

'ಸಂಶಪ್ತಕರ ಕಡೆಗೆ ರಥವನ್ನು ನಡೆಸು. ಅವರನ್ನು ಸಂಹರಿಸುವ ಕಾರ್ಯವೇ ನನಗೆ ಅತ್ಯಂತಶ್ರೇಷ್ಠವಾದ ಕಾರ್ಯವಾಗಿದೆ.' ಹಾಗೆಯೇ ಕೃಷ್ಣನು ಕುದುರೆಗಳನ್ನು ಸಂಶಪ್ತಕರ ಕಡೆಗೆ ಓಡಿಸುತ್ತಾನೆ.

೬೦ನೆಯ ಅಧ್ಯಾಯ :– ಹಿಂದಿನ ಅಧ್ಯಾಯದಲ್ಲಿ ಬಂದಿರುವ ವಿಷಯಗಳನ್ನು ಗಮನಕ್ಕೆ ತೆಗೆದುಕೊಂಡು ಈ ಅಧ್ಯಾಯವನ್ನು ವಿಶ್ಲೇಷಿಸಬೇಕಾಗಿದೆ. ೫೮ನೆಯ ಅಧ್ಯಾಯದಲ್ಲಿ ಸಹೋದರರೊಡನೆ ಸೇರಿಕೊಂಡು ಯುದ್ಧಮಾಡುತ್ತಿರುವ ಅರ್ಜುನನು, 'ಯುಧಿಷ್ಠಿರನು ಕುಶಲಿಯಾಗಿರುವುದನ್ನು ನೋಡಿ ಅನಂತರ ಪುನಃ ಶತ್ರುಗಳೊಡನೆ ಯುದ್ಧಮಾಡುತ್ತೇನೆ'–ಎನ್ನುತ್ತಾನೆ. (೬) ಶ್ರೀಕೃಷ್ಣನೂ ಹಾಗೆಯೇ ಆಗಲೆಂದು ಹೇಳಿ ಯುಧಿಷ್ಠಿರನೂ ಮತ್ತು ಸೃಂಜಯಸೈನಿಕರೂ ಇರುವೆಡೆಗೆ ರಥವನ್ನು ನಡೆಸುತ್ತಾನೆ (೭) ಮುಂದಕ್ಕೆ ರಣರಂಗದ ವರ್ಣನೆಯಿದೆ. ಅಧ್ಯಾಯದ ಕಡೆಯಲ್ಲಿ ಶ್ರೀಕೃಷ್ಣನು 'ಪಶ್ಯ ಪಾಣ್ಡವ ರಾಜಾನಮುಪಯಾತಾಂಶ್ಚ ಪಾರ್ಥಿವಾನ್ (೪೪)-'ಯುಧಿಷ್ಠಿರನನ್ನು ಅನುಸರಿಸಿ ಅನೇಕ ರಾಜರು ಹೋಗುತ್ತಿರುವುದನ್ನು ನೋಡು'–ಎಂದು ಹೇಳುತ್ತಾನೆ. ಅರ್ಥಾತ್ ದೂರದಿಂದ ಯುಧಿಷ್ಠಿರನನ್ನು ತೋರಿಸುತ್ತಾನೆ–ಎಂದು ಅರ್ಥ ಮಾಡಬಹುದಾಗಿದೆ. ಮುಂದೆ ಸಮರಭೂಮಿಯಲ್ಲಿ ನಡೆಯುತ್ತಿರುವ ಇನ್ನೂ ಕೆಲವು ಸಂದರ್ಭಗಳನ್ನೂ ವಿವರಿಸುತ್ತಾನೆ. ೫೯ನೆಯ ಅಧ್ಯಾಯದಲ್ಲಿ ಅರ್ಜುನನು ಪ್ರಾಣಾಪತ್ತಿನಲ್ಲಿರುವ ಧೃಷ್ಟದ್ಯುಮ್ನನನ್ನು ಸಂರಕ್ಷಿಸುತ್ತಾನೆ. ಅನಂತರ ಅವನು ಯುಧಿಷ್ಠಿರನ ಬಳಿಗೆ ಹೋಗಬೇಕಾಗಿದ್ದಿತು. ಅವನು ಹೊರಟ ಉದ್ದೇಶವೇ ಅದಾಗಿದ್ದಿತು. ಆದರೆ ಶ್ರೀಕೃಷ್ಣನೊಡನೆ ಸಂಶಪ್ತಕ

ರೊಡನೆ ಯುದ್ಧಕ್ಕೆ ಹೋಗಬೇಕೆಂದೂ ಅದೇ ತನಗೆ ಪ್ರಧಾನವಾದ ಕಾರ್ಯವೆಂದೂ ಹೇಳುತ್ತಾನೆ. ಸಾಮಾನ್ಯವಾಗಿ ಇದುವರೆಗೆ ಎಲ್ಲ ಸಮಯಗಳಲ್ಲಿಯೂ ಸಂಶಪ್ತಕರು ಯುದ್ಧಕ್ಕೆ ಆಹ್ವಾನಿಸಿದನಂತರವೇ ಅರ್ಜುನನು ಅವರೊಡನೆ ಯುದ್ಧಮಾಡಲು ಹೋಗುತ್ತಿದ್ದನು. ಯುಧಿಷ್ಠಿರನನ್ನು ನೋಡಲು ಬಂದ ಅರ್ಜುನನು ಧರ್ಮಜನನ್ನು ನೋಡದೆಯೇ ಪುನಃ ಸಂಶಪ್ತಕರೊಡನೆ ಯುದ್ಧಕ್ಕೆ ಹೋಗಲು ಏಕೆ ಇಚ್ಛಿಸಿದನೆಂಬುದು ತಿಳಿಯದಾಗಿದೆ. ಶ್ರೀಕೃಷ್ಣನು ಅರ್ಜುನನ ಮಾತಿನಂತೆ ರಥವನ್ನು ನಡೆಸಿಕೊಂಡು ಹೋಗುತ್ತಾನೆ. (೬೭) ೬೦ನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಪುನಃ ರಣರಂಗದಲ್ಲಿ ನಡೆಯುತ್ತಿರುವುದನ್ನು ಹೇಳುತ್ತಾ ಹೋಗುತ್ತಾನೆ. ಹೀಗೆ ಹೇಳುವಾಗ ಯುಧಿಷ್ಠಿರನು ಕೌರವಸೈನಿಕರ ಮಧ್ಯದಲ್ಲಿ ಸಿಕ್ಕಿ ಮೃತ್ಯುವಶನಾಗುತ್ತಿದ್ದಾನೆಂದು ಹೇಳುತ್ತಾನೆ. '**ಮೃತ್ಯೋರ್ಮುಖಗತಂ ಮನ್ಯೇ ಕುನ್ತೀಪುತ್ರಂ ಯುಧಿಷ್ಠಿರಮ್ । ಹುತಮಗ್ನೌ ಚ ಕೌನ್ತೇಯಂ ದುರ್ಯೋಧನವಶಂ ಗತಮ್ ॥**- ದುರ್ಯೋಧನನ ವಶನಾಗಿರುವ ಯುಧಿಷ್ಠಿರನು ಮೃತ್ಯುವಿನ ದವಡೆಯನ್ನಾದರೂ ಸೇರಿರಬಹುದು. ಯುದ್ಧವೆಂಬ ಅಗ್ನಿಯಲ್ಲಿ ಹೋಮಮಾಡಲ್ಪಟ್ಟವನಾಗಿರಲೂಬಹುದು.' (೧೦) ಯುಧಿಷ್ಠಿರನ ವಿಷಯದಲ್ಲಿ ಕಳವಳಗೊಂಡು ಅವನನ್ನು ನೋಡಬೇಕೆಂದು ಬಂದಿದ್ದ ಅರ್ಜುನನು ಶ್ರೀಕೃಷ್ಣನ ಮಾತನ್ನು ಕೇಳಿದನಂತರವೂ ಸಂಶಪ್ತಕರ ಕಡೆಗೇ ಹೋಗುತ್ತಿದ್ದನೇ? ರಣಾಂಗಣದಲ್ಲಿ ನಡೆಯುತ್ತಿರುವುದನ್ನು ಶ್ರೀಕೃಷ್ಣನು ನೋಡಿಕೊಂಡೇ ಹೇಳುತ್ತಿದ್ದುದಾದರೆ (ನೋಡಿಕೊಂಡು ಹೇಳುತ್ತಿರುವಂತೆಯೇ ಇಲ್ಲಿ ವಾಕ್ಯಗಳಿವೆ.) ಯುದ್ಧನಡೆಯುತ್ತಿದ್ದ ಸ್ಥಳವು ಹೆಚ್ಚು ದೂರವೇನೂ ಇರಲಾರದು. ಹೀಗಿರುವಾಗ ಅರ್ಜುನನು ಕಾರ್ಯಪ್ರವೃತ್ತನಾಗದೇ ಶ್ರೀಕೃಷ್ಣನು ಹೇಳಿದುದನ್ನು ಕೇಳಿಕೊಂಡು ಸುಮ್ಮನೇ ಕುಳಿತಿದ್ದನೇ? ಈ ಅಧ್ಯಾಯದ ಪೂರ್ತಿಯಾಗಿ ಶ್ರೀಕೃಷ್ಣನು ಯುದ್ಧದ ಪ್ರಸಂಗವನ್ನು ಹೇಳುವುದೇ ಆಗಿದೆ. ಹಾಗೆ ಹೇಳುತ್ತಾ ಮತ್ತೊಮ್ಮೆ ಶ್ರೀಕೃಷ್ಣನು–'**ನ ಜೀವತಿ ಮಹಾರಾಜೋ ಮನ್ಯೇ ಪಾರ್ಥ ಯುಧಿಷ್ಠಿರಃ** (೧೯)'–'ಯುಧಿಷ್ಠಿರರಾಜನು ಈ ವೇಳೆಗೆ ಬದುಕಿಯೇ ಇಲ್ಲವೆಂದೂ ನಾನು ಭಾವಿಸುತ್ತೇನೆ'–ಎನ್ನುತ್ತಾನೆ. ಹೀಗೆ ಹೇಳಿದ ಮೇಲೆಯೂ ಅರ್ಜುನನು ಶೀಘ್ರವಾಗಿ ಯುಧಿಷ್ಠಿರನನ್ನು ರಕ್ಷಿಸಲು

ಹೋಗದೇ ಇರುವುದು ಬಹಳ ಅಸಹಜವಾಗಿ ಕಾಣುತ್ತದೆ. ಶ್ರೀಕೃಷ್ಣನು ಮುಂದೆ ಹೇಳುವಾಗ **'ಸ್ಥೂಣಾಕರ್ಣೇನ್ದ್ರಜಾಲೇನ ಪಾರ್ಥಂ ಪಾಶುಪತೇನ ಚ । ಪ್ರಚ್ಛಾದಯನ್ತಿ ರಾಜಾನಂ ಶಸ್ತ್ರಜಾಲೈರ್ಮಹಾರಥಾಃ ॥ (೨೨)'** - 'ಕೌರವಮಹಾರಥರು ಯುಧಿಷ್ಠಿರರಾಜನನ್ನು ಸ್ಥೂಣಾಕರ್ಣ, ಇಂದ್ರಜಾಲ, ಪಾಶುಪತವೇ ಮೊದಲಾದ ಶಸ್ತ್ರಾಸ್ತ್ರಗಳ ಸಮೂಹಗಳಿಂದ ಆಚ್ಛಾದಿಸುತ್ತಿದ್ದಾರೆ'–ಎನ್ನುತ್ತಾನೆ. ಪಾಶುಪತಾಸ್ತ್ರವಿದ್ದುದು ಅರ್ಜುನನೊಬ್ಬನ ಬಳಿಯಲ್ಲಿಯೇ. ಈ ಮಹಾಯುದ್ಧದಲ್ಲಿಯೂ ಅವನು ಆ ಮಹಾಸ್ತ್ರವನ್ನು ಯಾರ ಮೇಲೆಯೂ ಪ್ರಯೋಗಿಸಿದ ಉಕ್ತಿಗಳಿಲ್ಲ. ಹೀಗಿರುವಾಗ ಪಾಶುಪತಾಸ್ತ್ರದಿಂದ ದುರ್ಯೋಧನನ ಕಡೆಯ ರಾಜರು ಯುಧಿಷ್ಠಿರನನ್ನು ಮುಚ್ಚಿದರೆಂದರೆ ಸ್ವಲ್ಪ ಅಸಂಗತವಾಗಿಯೇ ಕಾಣುತ್ತದೆ. ಇಂತಹ ಅನೇಕ ಸಂಗತಿಗಳನ್ನೂ ಹೇಳಿದನಂತರ ಶ್ರೀಕೃಷ್ಣನು – **'ರಾಜಾಸೌ ಕುಶಲೀ ಶ್ರೀಮಾನ್ಧರ್ಮಪುತ್ರೋ ಯುಧಿಷ್ಠಿರಃ (೫೭)'** – 'ಶ್ರೀಮಂತನಾದ ರಾಜನು ಈಗ ಕುಶಲಿಯಾಗಿದ್ದಾನೆ'–ಎನ್ನುತ್ತಾನೆ. ಮೊದಲು ಕರ್ಣನ ಪರಾಕ್ರಮವನ್ನು ವರ್ಣಿಸಿ ಪಾಂಡವರಿಗಾದ ಪರಾಜಯವನ್ನು ವರ್ಣಿಸಿದ ಶ್ರೀಕೃಷ್ಣನು ಅನಂತರ ಭೀಮನಿಗಾದ ವಿಜಯವನ್ನೂ ವರ್ಣಿಸುತ್ತಾನೆ. ಕಟ್ಟಕಡೆಗೆ ಕೌರವಸೈನಿಕರು ಭೀಮಸೇನನ ಭಯದಿಂದ ಪಲಾಯನಮಾಡುತ್ತಿರುವರೆಂದೂ ಹೇಳುತ್ತಾನೆ. ಮುಂದೆ ಸಂಜಯನು–ಭೀಮಸೇನನು ಸಂಹಾರಮಾಡದೇ ಉಳಿಸಿದವರನ್ನು ಅರ್ಜುನನು ನಿಶಿತವಾದ ಬಾಣಗಳಿಂದ ಸಂಹಾರಮಾಡಿದನೆಂದು ಹೇಳುತ್ತಾನೆ. (೮೯) ೯೦ನೆಯ ಶ್ಲೋಕದಲ್ಲಿ ಸಂಶಪ್ತಕಯೋಧರು ಹತರಾದರೆಂದಿದೆ. ಪುನಃ ಪಾರ್ಥನು ದುರ್ಯೋಧನನ ಚತುರಂಗಬಲವನ್ನೂ ಸಂಹರಿಸಿದನೆಂದು ಕಡೆಯ ಶ್ಲೋಕದಲ್ಲಿ ಹೇಳಿದೆ. (೯೨) ಹೀಗೆ ಈ ಅಧ್ಯಾಯದಲ್ಲಿ ಊಹಿಸಲೂ ಸಾಧ್ಯವಾಗದಂತಹ ಪ್ರಕರಣಗಳು ಬರುತ್ತವೆ. ಇಲ್ಲಿ ಉದ್ಭವಿಸುವ ಕೆಲವು ಪ್ರಶ್ನೆಗಳಿಗೆ ಸಮಾಧಾನ ಹೇಳುವುದು ಕಷ್ಟವಾಗಿ ಕಾಣುತ್ತದೆ. ಈ ಅಧ್ಯಾಯವು ಭಂ.ರಿ. ಇನ್‌ಸ್ಟಿಟ್ಯೂಟ್‌ನವರ ಪುಸ್ತಕದಲ್ಲಿಯೂ ಇದೆ.

೬೧ನೆಯ ಅಧ್ಯಾಯ :– ಈ ಅಧ್ಯಾಯದಲ್ಲಿ ಶಿಖಂಡಿ-ಕರ್ಣರಿಗೂ, ಧೃಷ್ಟದ್ಯುಮ್ನ-ದುಃಶಾಸನರಿಗೂ, ನಕುಲ-ವೃಷಸೇನರಿಗೂ, ಚಿತ್ರಸೇನ-

ಯುಧಿಷ್ಠಿರರಿಗೂ, ಶಕುನಿ-ಸಾತ್ಯಕಿಗಳಿಗೂ, ಅಶ್ವತ್ಥಾಮಾರ್ಜುನರಿಗೂ, ಯುಧಾಮನ್ಯು-ಕೃಪರಿಗೂ, ಕೃತವರ್ಮೋತ್ತಮೌಜಸರಿಗೂ ರೋಮಾಂಚಕರವಾದ ದ್ವಂದ್ವಯುದ್ಧವು ನಡೆಯುತ್ತದೆ. ಓದುಗರ ರೋಮಕೋಟಿಗಳು ನಿಮಿರಿ ನಿಲ್ಲುತ್ತವೆ. ಕಡೆಗೆ ದುಃಶಾಸನ-ಸೌಬಲರು ಗಜಸೈನ್ಯದೊಡನೆ ಭೀಮಸೇನನನ್ನು ಮುತ್ತಿಗೆಹಾಕುತ್ತಾರೆ. ಭೀಮಸೇನನು ಗಜಸೈನ್ಯವನ್ನು ಸಂಪೂರ್ಣವಾಗಿ ಧ್ವಂಸಮಾಡುತ್ತಾನೆ. ಇದೇ ಅಧ್ಯಾಯದಲ್ಲಿ ದುಃಶಾಸನನು ಧೃಷ್ಟದ್ಯುಮ್ನನೊಡನೆ ಯುದ್ಧಮಾಡುವ ಪ್ರಸಂಗವೂ ಬಂದಿರುತ್ತದೆ. ಅವರ ಯುದ್ಧವು ನಿಂತಿತೆಂಬ ವಿಷಯವು ಬಂದಿಲ್ಲ. ಶಕುನಿಯು ಸಾತ್ಯಕಿಯೊಡನೆ ಯುದ್ಧಮಾಡುತ್ತಿದ್ದ ಪ್ರಸಂಗವೂ ಬಂದಿರುತ್ತದೆ. ಸಾತ್ಯಕಿಯಿಂದ ಪರಾಜಿತನಾದ ಶಕುನಿಯು ತನ್ನ ಮಗನ ರಥದಲ್ಲಿ ಕುಳಿತು ರಣರಂಗದಿಂದಲೇ ಹೊರಟುಹೋಗುತ್ತಾನೆ. (೪೮) ಅವರಿಬ್ಬರೂ ಗಜಸೈನ್ಯದೊಡನೆ ಭೀಮಸೇನನನ್ನು ಪುನಃ ಆಕ್ರಮಿಸಿದರೆಂದು ಉಕ್ತವಾಗಿದೆ (೬೧). ಈ ಮಧ್ಯದಲ್ಲಿ ಇವೆರಡನ್ನೂ ಸೇರಿಸುವ ಕಥಾವಸ್ತುವಿಲ್ಲ. ಈ ಪ್ರಕರಣದಲ್ಲಿ ಭೀಮಸೇನನು ಬಾಣಪ್ರಯೋಗದಿಂದಲೇ ಗಜಸೈನ್ಯವನ್ನು ಧ್ವಂಸಮಾಡುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೬೨ನೆಯ ಅಧ್ಯಾಯ :– ಯುಧಿಷ್ಠಿರನನ್ನು ಸಂದರ್ಶಿಸಲೇಬೇಕೆಂದು ಹೊರಟ ಅರ್ಜುನನು (೫೮-೪೨) ಎಲ್ಲಿದ್ದಾನೆಂಬುದನ್ನು ನಿರ್ಣಯಿಸುವುದೇ ಕಷ್ಟವಾಗಿದೆ. ೫೯ನೆಯ ಅಧ್ಯಾಯದಲ್ಲಿ ಧೃಷ್ಟದ್ಯುಮ್ನನನ್ನು ರಕ್ಷಿಸಿ ಸಂಶಪ್ತಕರೊಡನೆ ಯುದ್ಧಕ್ಕೆ ಹೋದನು–ಎಂದಿದೆ (೬೬). ೬೦ನೆಯ ಅಧ್ಯಾಯದಲ್ಲಿ ರಥದಲ್ಲಿ ಕುಳಿತಿದ್ದ ಅರ್ಜುನನೊಡನೆ ಶ್ರೀಕೃಷ್ಣನು ಯುದ್ಧದ ಪ್ರತ್ಯಕ್ಷವರದಿಯನ್ನು ಮಾಡುತ್ತಾನೆ. ಅನಂತರ ಭೀಮಸೇನನಿಂದ ಹತರಾಗದೇ ಇದ್ದ ಸೈನಿಕರನ್ನೂ ಮತ್ತು ಸಂಶಪ್ತಕಸೈನಿಕರನ್ನೂ ಸಂಹರಿಸಿ ದುರ್ಯೋಧನನ ಚತುರಂಗಬಲವನ್ನೂ ಸಂಹರಿಸುತ್ತಾನೆ. ೬೧ನೆಯ ಅಧ್ಯಾಯದಲ್ಲಿ ಅರ್ಜುನನ ಪ್ರಸ್ತಾಪವೇ ಬರುವುದಿಲ್ಲ. ಅರ್ಜುನನು ಯುಧಿಷ್ಠಿರನ ಬಳಿಗಂತೂ ಬರುವುದಿಲ್ಲ. ಇಲ್ಲಿಯ ಅಧ್ಯಾಯದ ಪ್ರಾರಂಭವು ಈ ರೀತಿಯಾಗಿದೆ. 'ಶ್ರೀಮಂತನಾದ ಅರ್ಜುನನು ಶ್ವೇತಾಶ್ವಗಳಿಂದ ಯುಕ್ತವಾಗಿದ್ದ ಮತ್ತು ನಾರಾಯಣಸ್ವರೂಪನಾದ ಶ್ರೀಕೃಷ್ಣನಿಂದ

ಸಂಚಾಲಿತವಾಗಿದ್ದ ಶ್ರೇಷ್ಠವಾದ ರಥದಲ್ಲಿ ಕುಳಿತು ರಣಾಂಗಣಕ್ಕೆ ಆಗಮಿಸಿದನು. ದುರ್ಯೋಧನನ ಸೈನ್ಯವನ್ನು ಕ್ಷೋಭೆಗೊಳಿಸಿದನು. (೧.೨)' **ದುರ್ಯೋಧನಸ್ತವ ಸುತಃ ಪ್ರಮತ್ತೇ ಶ್ವೇತವಾಹನೇ । ಯುಧಿಷ್ಠಿರಂ ಅವಿಧ್ಯತ** (೩.೪) ಅರ್ಜುನನು ಪ್ರಮತ್ತನಾಗಿರಲಾಗಿ ಇದೇ ಸರಿಯಾದ ಸಮಯವೆಂದು ಭಾವಿಸಿ ದುರ್ಯೋಧನನು ಅರ್ಧಸೈನ್ಯಯುಕ್ತನಾಗಿ ಯುಧಿಷ್ಠಿರನನ್ನು ಗಾಯಗೊಳಿಸಿದನು'–ಎಂಬುದಾಗಿದೆ. ಯುದ್ಧಕ್ಕೆ ಬಂದ ಅರ್ಜುನನು ಪ್ರಮತ್ತನಾಗುವುದೆಂದರೇನು? ಆ ಸಮಯದಲ್ಲಿ ಶ್ರೀಕೃಷ್ಣನೇನು ಮಾಡುತ್ತಿದ್ದನು? ಯುಧಿಷ್ಠಿರನನ್ನು ಕಾಣಬೇಕೆಂಬ ಧಾವಂತವು ಅರ್ಜುನನಿಗಿರಲಿಲ್ಲವೇ? ಧರ್ಮಜನ ರಕ್ಷಣೆಯ ಹೊಣೆಯು ಅವನ ಮೇಲೆ ಇರಲಿಲ್ಲವೇ? ತನ್ನೆದುರಾಗಿಯೇ ಯುಧಿಷ್ಠಿರನನ್ನು ದುರ್ಯೋಧನನು ಪ್ರಹರಿಸುತ್ತಿದ್ದರೂ ಪ್ರತಿಕ್ರಿಯೆಯನ್ನೇ ಮಾಡಲಾಗದಷ್ಟು ಅರ್ಜುನನು ಪ್ರಮತ್ತನಾಗಿದ್ದನೇ? ಪುನಃ ಅವನು ಜಾಗರೂಕನಾದುದು ಯಾವಾಗ? ಇತ್ಯಾದಿ ಅನೇಕ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಮುಂದೆ ಮಹಾಯುದ್ಧ ಪ್ರಕರಣವಿದೆ. ಯುಧಿಷ್ಠಿರನು ಮಹಾಪರಾಕ್ರಮದಿಂದ ಯುದ್ಧಮಾಡುತ್ತಾನೆ. ಅವನ ದೃಷ್ಟಿಪಾತದಿಂದಲೇ ಕೌರವಸೈನ್ಯವು ಭಸ್ಮೀಭೂತವಾಗುತ್ತದೆ. **ಯತ್ರ ಯತ್ರ ಸ ಧರ್ಮಾತ್ಮಾ ದುಷ್ಟಾಂ ದೃಷ್ಟಿಂ ವ್ಯಸರ್ಜಯತ್ । ತತ್ರ ತತ್ರ ವ್ಯಶೀರ್ಯನ್ತ ತಾವಕಾ ಭರತರ್ಷಭ ॥** (೨೬). ಮುಂದೆ ಕರ್ಣನಿಂದ ತಾಡಿತನಾದ ಯುಧಿಷ್ಠಿರನು ರಥದಲ್ಲಿ ಪಕ್ಕಕ್ಕೆ ಸರಿದು ಕುಳಿತು ರಣಾಂಗಣದಿಂದ ಹೊರಟುಹೋಗುವಂತೆ ಸಾರಥಿಗೆ ಹೇಳುತ್ತಾನೆ. ಯುಧಿಷ್ಠಿರನನ್ನು ಜೀವಗ್ರಹಣಮಾಡುವಂತೆ ಎಲ್ಲರೂ ಕೂಗಿಕೊಳ್ಳುತ್ತಾರೆ. ಕೇಕಯ-ಪಾಂಚಾಲಯೋಧರು ಅವರನ್ನು ತಡೆಯುತ್ತಾರೆ. ಭೀಮ-ದುರ್ಯೋಧನರು ಯುದ್ಧದಲ್ಲಿ ತೊಡಗುತ್ತಾರೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ. ಅರ್ಜುನನೇನಾದನೆಂಬುದು ನಮಗೆ ಅಧ್ಯಾಯದ ಕಡೆಯಲ್ಲಿಯೂ ತಿಳಿಯುವುದಿಲ್ಲ. ಮೊದಲನೆಯ ಶ್ಲೋಕದಲ್ಲಿ ಬಳಸಿರುವ – **ನಾರಾಯಣಸಮಾಹಿತೇ ರಥವರೇ ತಿಷ್ಠನ್ ಶ್ರೀಮಾನರ್ಜುನಃ ಸಮುಪದ್ಯತ**–ಇತ್ಯಾದಿ ಪದಗಳೂ ಸಾಮಾನ್ಯವಾಗಿ ಬಳಸುವ ಪದಗಳಾಗಿರುವುದಿಲ್ಲ.

೬೩ನೆಯ ಅಧ್ಯಾಯ :– ಹಿಂದಿನ ಅಧ್ಯಾಯದಲ್ಲಿ ಕರ್ಣನ ಬಾಣಗಳಿಂದ ಬಹಳವಾಗಿ ಗಾಯಗೊಂಡ ಯುಧಿಷ್ಠಿರನು ರಥವನ್ನು ಶಿಬಿರದ ಕಡೆಗೆ ಒಯ್ಯುವಂತೆ ಸಾರಥಿಗೆ ಹೇಳುತ್ತಾನೆ. ರಾಜನ ಜೀವಗ್ರಹಣ ಮಾಡಲು ಮುಂದೆ ಬರುವ ಕೌರವಯೋಧರನ್ನು ಹದಿನೇಳು ನೂರು ಕೇಕಯಯೋಧರೂ ಮತ್ತು ಪಾಂಚಾಲಯೋಧರೂ ತಡೆಯುತ್ತಾರೆ. ಈ ಅಧ್ಯಾಯವು ಪ್ರಾರಂಭವಾಗುತ್ತಲೇ ಯುಧಿಷ್ಠಿರನ ಜೀವಗ್ರಹಣವಾಗದಂತೆ ಕೌರವಯೋಧರನ್ನು ನಿರೋಧಿಸಿದ ಕೇಕಯ-ಪಾಂಚಾಲಯೋಧರನ್ನು ಕರ್ಣನು ಸದೆಬಡಿಯುತ್ತಾನೆ. ಹದಿನೇಳು ನೂರು ರಥಯೋಧರಲ್ಲಿ ಐದುನೂರು ಯೋಧರನ್ನು ಕರ್ಣನು ಸಂಹರಿಸುತ್ತಾನೆ. ಉಳಿದ ಯೋಧರು ಭೀಮನಿರುವೆಡೆಗೆ ಓಡಿಹೋಗುತ್ತಾರೆ. **ಕರ್ಣಬಾಣಪ್ರಪೀಡಿತಾಃ ಭೀಮಸೇನಮುಪಾಗಚ್ಛನ್** (೩). ರಾಜನೇ ಕಷ್ಟದಲ್ಲಿ ಸಿಕ್ಕಿರುವಾಗ ಅವನನ್ನು ಬಿಟ್ಟು ಸ್ವಪ್ರಾಣರಕ್ಷಣೆಗಾಗಿ ಯೋಧರು ಭೀಮಸೇನನ ರಕ್ಷಣೆಯನ್ನು ಪಡೆಯಲು ಓಡಿಹೋಗುತ್ತಾರೆ. ಅಪಾಯದಲ್ಲಿರುವ ರಾಜನನ್ನೇ ಬಿಟ್ಟು ಯೋಧರು ಓಡಿಹೋಗುವ ಪ್ರಸಂಗವು ಸಾಮಾನ್ಯವಾಗಿ ಹಿಂದೆ ಎಲ್ಲೂ ಬಂದಿರುವುದಿಲ್ಲ. ಯುದ್ಧದಿಂದ ಹಿಮ್ಮೆಟ್ಟಿ ಶಿಬಿರದ ಕಡೆಗೆ ಹೋಗುತ್ತಿದ್ದ ಯುಧಿಷ್ಠಿರನನ್ನು ಕರ್ಣನು ಬಾಣಗಳಿಂದ ಪ್ರಹರಿಸುತ್ತಾನೆ. ವೀರಯೋಧರು ಎಂದಿಗೂ ಹಾಗೆ ಮಾಡರು. ಅದಕ್ಕೆ ಪ್ರತಿಯಾಗಿ ರಾಜನೂ ರಾಧೇಯನನ್ನೂ, ಸಾರಥಿಯನ್ನೂ, ಕುದುರೆಗಳನ್ನೂ, ಪ್ರಹರಿಸಿದನೆಂದು ಮುಂದಿನ ಶ್ಲೋಕದಲ್ಲಿದೆ (೭). ರಾಜನನ್ನು ಕರ್ಣನು ವಧಿಸುವಂತಾಗ ಬಾರದೆಂದು ನಕುಲ-ಸಹದೇವರು ಕರ್ಣನೊಡನೆ ಯುದ್ಧಮಾಡುತ್ತಾರೆ. ಆದರೂ ಸಹ ಕರ್ಣನು ಯುಧಿಷ್ಠಿರನ ಕುದುರೆಗಳನ್ನು ಸಂಹರಿಸುತ್ತಾನೆ. ಅವನ ಕಿರೀಟವನ್ನೂ ಕೆಳಕ್ಕೆ ಬೀಳಿಸುತ್ತಾನೆ. ನಕುಲನ ಕುದುರೆಗಳನ್ನೂ ಸಂಹರಿಸುತ್ತಾನೆ. ಆಗ ಯುಧಿಷ್ಠಿರ-ನಕುಲರು ಸಹದೇವನ ರಥದಲ್ಲಿ ಕುಳಿತುಕೊಳ್ಳುತ್ತಾರೆ. ಆ ಸಮಯದಲ್ಲಿ ಶಲ್ಯನು ಕರ್ಣನಿಗೆ ಸಮಾಧಾನ ಹೇಳುತ್ತಾನೆ. 'ನೀನು ಫಾಲ್ಗುನನೊಡನೆ ಯುದ್ಧಮಾಡಬೇಕೇ ಹೊರತು ಧರ್ಮಜನೊಡನೆ ಯುದ್ಧಮಾಡುವುದು ಸರಿಯಲ್ಲ. ಇವನಲ್ಲೀಗ ಬಾಣಗಳಾಗಲೀ, ಬತ್ತಳಿಕೆಯಾಗಲೀ ಇಲ್ಲ. ಸಾರಥಿಯೂ ಬಳಲಿದ್ದಾನೆ. ಕುದುರೆಗಳೂ

ಬಳಲಿವೆ'–ಎನ್ನುತ್ತಾನೆ. ಯುಧಿಷ್ಠಿರನ ಕುದುರೆಗಳನ್ನು ಕರ್ಣನು ಸಂಹರಿಸಿದನೆಂದು ಈ ಹಿಂದೆ ಹೇಳಿದೆ (೧೧). ಶಲ್ಯನು ಹೀಗೆ ಹೇಳಿದರೂ ಕರ್ಣನು ಮೂವರನ್ನೂ ಬಾಣಗಳಿಂದ ಪ್ರಹರಿಸಿ ಯುದ್ಧದಿಂದ ಹಿಮ್ಮೆಟ್ಟಿಸುತ್ತಾನೆ. ಯುಧಿಷ್ಠಿರನು ಶಿಬಿರದ ಕಡೆಗೆ ಹೋಗುತ್ತಿದ್ದನೆಂದು ಈ ಹಿಂದೆಯೇ ಬಂದಿದೆ. ಪುನಃ ವಿಮುಖನನ್ನಾಗಿ ಮಾಡಿದನೆಂದು ಇಲ್ಲಿ ಹೇಳಿದೆ. ಯುಧಿಷ್ಠಿರನ ವಧೆಯಲ್ಲಿ ಬದ್ಧಕಂಕಣನಾಗಿದ್ದ ಕರ್ಣನನ್ನು ಕುರಿತು ಶಲ್ಯನು ಪುನಃ ಮಾತನಾಡುತ್ತಾನೆ. ಈ ಹಿಂದೊಮ್ಮೆ ಕರ್ಣನೇ ಯುಧಿಷ್ಠಿರನೊಡನೆ– 'ನಿನ್ನನ್ನು ಖಂಡಿತವಾಗಿಯೂ ಸಂಹರಿಸುವುದಿಲ್ಲ'–ಎಂದು ಹೇಳಿದ್ದಾನೆ. ನ ಹಿ ತ್ವಾಂ ಸಮರೇ ರಾಜನ್ಹನ್ಯಾತ್ಕರ್ಣಃ (೪೯-೫೮) ಮೇಲಾಗಿ ಅವನಿಗೆ ಕುಂತಿಗೆ ಮಾತುಕೊಟ್ಟ ಸ್ಮರಣೆಯೂ ಇದೆ. ಆದರೆ ಯುಧಿಷ್ಠಿರನ ವಧೆಯಲ್ಲಿ ದೃಢನಿಶ್ಚಯವನ್ನೇ ಮಾಡಿದ್ದನೆಂದು ಇಲ್ಲಿ ಹೇಳಿದೆ. ಮುಂದೆ ಮಾತನಾಡುವಾಗ ಶಲ್ಯನು–ಅರ್ಜುನನು ಹತ್ತಿರದಲ್ಲಿಯೇ ಇರುವನೆಂದೂ ಅವನ ಶಂಖಧ್ವನಿ ಮತ್ತು ಧನುಷ್ಟೇಂಕಾರಶಬ್ದಗಳೂ ಕೇಳುತ್ತಿವೆಯೆಂದೂ ಅವನೊಡನೆಯೇ ಯುದ್ಧಮಾಡುವುದು ಯೋಗ್ಯವೆಂದೂ ಕರ್ಣನಿಗೆ ಹೇಳುತ್ತಾನೆ. ಅರ್ಜುನನು ಅಷ್ಟು ಹತ್ತಿರದಲ್ಲಿಯೇ ಇದ್ದಿದ್ದರೆ ಯುಧಿಷ್ಠಿರನ ಪ್ರಾಣಾಪಾಯದ ಸಮಯದಲ್ಲಿಯೂ ರಕ್ಷಣೆಗೆ ಬರದೇ ಇರುತ್ತಿದ್ದನೇ?

ಶಲ್ಯನ ಮಾತಿನಂತೆ ಕರ್ಣನು ದುರ್ಯೋಧನನ ರಕ್ಷಣೆಗಾಗಿ ಹೊರಟುಹೋಗುತ್ತಾನೆ. ಇತ್ತಲಾಗಿ ಸಹದೇವನ ರಥದಲ್ಲಿ ಕುಳಿತು ಯುಧಿಷ್ಠಿರನು ಶಿಬಿರಕ್ಕೆ ಬರುತ್ತಾನೆ. ಬಳಿಕ ಅವನು ನಕುಲ- ಸಹದೇವರನ್ನೂ ಭೀಮನ ಸಹಾಯಕ್ಕೆ ಕಳುಹಿಸಿಕೊಡುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ. ೬೨ ಮತ್ತು ೬೩ನೆಯ ಅಧ್ಯಾಯಗಳು ಭಂ.ರಿ. ಇನ್‌ಸ್ಟಿಟ್ಯೂಟ್‌ನವರ ಪುಸ್ತಕದಲ್ಲಿರುವುದಿಲ್ಲ.

೬೪ನೆಯ ಅಧ್ಯಾಯ :- ಅಶ್ವತ್ಥಾಮಾರ್ಜುನರ ಯುದ್ಧದಿಂದ ಅಧ್ಯಾಯವು ಪ್ರಾರಂಭವಾಗುತ್ತದೆ. ಪಾರ್ಥನಿದ್ದೆಡೆಗೆ ಹೋಗಿ ಅಶ್ವತ್ಥಾಮನು ಅವನ ಮೇಲೆ ದಾಳಿ ನಡೆಸುತ್ತಾನೆ. ಘೋರವಾದ ಯುದ್ಧವು ನಡೆಯುತ್ತದೆ. ಅಶ್ವತ್ಥಾಮನು ಕೃಷ್ಣಾರ್ಜುನರಿಬ್ಬರನ್ನೂ ಅನೇಕ ಬಾಣಗಳಿಂದ ಪ್ರಹರಿಸುತ್ತಾನೆ. 'ತತೋಽರ್ಜುನೋ ಹಯಾನ್ಹತ್ವಾ ಸರ್ವಾಂ

**ಸ್ತಸ್ಯ ಮಹಾತ್ಮನಃ । ಚಕಾರ ಸಮರೇ ಭೂಮಿಂ ಶೋಣಿತೌಘ ತರಙ್ಗಿಣೀಮ್** (೯)'–'ಅತಿಕ್ರುದ್ಧನಾದ ಅರ್ಜುನನು ಮಹಾತ್ಮನಾದ ಅಶ್ವತ್ಥಾಮನ ಎಲ್ಲ ಕುದುರೆಗಳನ್ನೂ ಸಂಹರಿಸಿ ರಣಭೂಮಿಯನ್ನು ರಕ್ತದ ಪ್ರವಾಹದಿಂದ ಕೂಡಿದ ನದಿಯನ್ನಾಗಿ ಮಾಡಿದನು'–ಎಂದಿದೆ. ಆದರೆ ಕುದುರೆಗಳು ಸತ್ತನಂತರ ಅಶ್ವತ್ಥಾಮನ ರಥದ ಸ್ಥಿತಿಯೇನಾಯಿತೆಂಬುದನ್ನು ಹೇಳಿಲ್ಲ. ಮುಂದೆ ಅಶ್ವತ್ಥಾಮನು ಯಥಾಪೂರ್ವವಾಗಿಯೇ ಯುದ್ಧಮಾಡುತ್ತಿರುತ್ತಾನೆ. '**ಸಂಛಾದ್ಯ ಸಮರೇ ದ್ರೌಣಿ ಚಿಚ್ಛೇದಾಸ್ಯ ಚ ಕಾರ್ಮುಕಮ್**' (೧೯)-'ಅಶ್ವತ್ಥಾಮನನ್ನು ನೂರಾರು ಬಾಣಗಳಿಂದ ಆಚ್ಛಾದಿಸಿ ಅವನ ಧನುಸ್ಸನ್ನು ಕತ್ತರಿಸಿದನು.' ಮುಂದೆ ಅಶ್ವತ್ಥಾಮನು ಹೊಸ ಧನುಸ್ಸನ್ನು ತೆಗೆದುಕೊಂಡ ಪ್ರಸಂಗವಿಲ್ಲ. '**ಐನ್ದ್ರೇಣ ಚಾಸ್ತ್ರ ವೇಗೇನ ಬೀಭತ್ಸುಂ ಸಮವಾಕಿರತ್**' (೨೩) 'ಐಂದ್ರಾಸ್ತ್ರದ ವೇಗ ದಿಂದಲೇ ಅರ್ಜುನನನ್ನು ಮುಚ್ಚಿದನು'–ಎಂದಿದೆ. '**ಸ ಸಂಗೃಹ್ಯ ಸ್ವಯಂ ವಾಹಾನ್ಕೃಷ್ಣೌ ಪ್ರಾಚ್ಛಾದಯಚ್ಛರೈಃ**' (೨೯) 'ಅಶ್ವತ್ಥಾಮನು ಕುದುರೆಗಳನ್ನೂ ತಾನೇ ನಿಯಂತ್ರಿಸುತ್ತಾ ಕೃಷ್ಣಾರ್ಜುನರನ್ನು ಬಾಣಗಳಿಂದ ಮುಚ್ಚಿದನು'–ಎಂದಿದೆ. ೯ನೆಯ ಶ್ಲೋಕದಲ್ಲಿ ಕುದುರೆಗಳು ಮರಣ ಹೊಂದಿದುವೆಂದು ಹೇಳಿದೆ. ಮುಂದೆ ಅರ್ಜುನನು ಕಡಿವಾಣಗಳನ್ನು ಕತ್ತರಿಸುತ್ತಾನೆ. ಕುದುರೆಗಳು ಓಡಿಹೋಗುತ್ತವೆ. ಅರ್ಜುನನು ವಿಜಯಿಯಾಗುತ್ತಾನೆ. ಕೌರವಸೈನಿಕರು ಪಲಾಯನಮಾಡುತ್ತಾರೆ. ಇವೆ ಲ್ಲವೂ ಕರ್ಣ-ಶಕುನಿ-ದುರ್ಯೋಧನರ ಸಮ್ಮುಖದಲ್ಲಿಯೇ ನಡೆಯುತ್ತದೆ. (೩೫) ಮುಂದೆ ಕರ್ಣನು ದುರ್ಯೋಧನನ ಪ್ರೇರಣೆಯಂತೆ ಪಾಂಡವರ ಸೈನ್ಯದ ಮೇಲೆ ಭಾರ್ಗವಾಸ್ತ್ರವನ್ನು ಪ್ರಯೋಗಿಸುತ್ತಾನೆ. ಅದರಿಂದ ಕೋಟಿ-ಕೋಟಿ ಬಾಣಗಳು ಹೊರಬಂದು ಪಾಂಡು-ಪಾಂಚಾಲಯೋಧರನ್ನು ಧ್ವಂಸಮಾಡುತ್ತವೆ. ಆ ಸಮಯದಲ್ಲಿ ಪಾಂಚಾಲ-ಸೃಂಜಯರು ಕೃಷ್ಣಾರ್ಜುನ ರನ್ನು ಸಹಾಯಕ್ಕಾಗಿ ಕೂಗಿಕೊಳ್ಳುತ್ತಾರೆ. ಅದನ್ನು ಕೃಷ್ಣಾರ್ಜುನರೂ ಕೇಳಿಸಿಕೊಳ್ಳುತ್ತಾರೆ. ಅಸ್ತ್ರದ ಪ್ರಭಾವವನ್ನು ಅರ್ಜುನನು ವಿವರಿಸಿ ಹೇಳುತ್ತಾನೆ. ಆದರೆ ಆ ಸಮಯದಲ್ಲಿ ಕೂಗಿಕೊಳ್ಳುವವರನ್ನು ರಕ್ಷಿಸಲು ಹೋಗುವುದಿಲ್ಲ. ಗಾಯಗೊಂಡಿರುವ ಯುಧಿಷ್ಠಿರನನ್ನು ನೋಡಿ ಅವನನ್ನು

ಆಶ್ವಸಿಸಿ ಅನಂತರ ಕರ್ಣನನ್ನು ಸಂಹರಿಸೋಣವೆಂದು ಶ್ರೀಕೃಷ್ಣನು ಸಲಹೆ ನೀಡುತ್ತಾನೆ. 'ಏವಮುಕ್ತ್ವಾ ಪುನಃ ಪ್ರಾಯಾದ್ದ್ರಷ್ಟುಮಿಚ್ಛನ್ಯುಧಿಷ್ಠಿರಮ್-(೬೭)–ಹೀಗೆಂಬುದಾಗಿ ಪುನಃ ಯುಧಿಷ್ಠಿರನನ್ನು ನೋಡಲು ಕೃಷ್ಣಾರ್ಜುನರು ಹೊರಟುಹೋದರು'. ಅರ್ಜುನನು ರಣರಂಗದಲ್ಲಿ ಯುಧಿಷ್ಠಿರನನ್ನು ಕಾಣಲಿಲ್ಲ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೬೫ನೆಯ ಅಧ್ಯಾಯ :– ಅರ್ಜುನನು ಸಮರಾಂಗಣದಲ್ಲಿ ಯುಧಿಷ್ಠಿರನನ್ನು ಕಾಣದೇ ಭೀಮಸೇನನನ್ನು ರಾಜನೆಲ್ಲೆಂದು ಪ್ರಶ್ನಿಸುತ್ತಾನೆ. ಭೀಮನು ಕರ್ಣನ ಬಾಣಪ್ರಹಾರದಿಂದ ಬಳಲಿರುವ ಯುಧಿಷ್ಠಿರನು ಶಿಬಿರಕ್ಕೆ ಹೋದನೆಂದು ಹೇಳುತ್ತಾನೆ. ಅರ್ಜುನನು ಶಿಬಿರಕ್ಕೆ ಹೋಗಿ ಯುಧಿಷ್ಠಿರನನ್ನು ನೋಡಿಕೊಂಡು ಬರುವಂತೆ ಭೀಮನಿಗೆ ಹೇಳುತ್ತಾನೆ. ಅದಕ್ಕೆ ಭೀಮನೊಪ್ಪದೇ ಅರ್ಜುನನಿಗೇ ಹೋಗಲು ಹೇಳುತ್ತಾನೆ. ಅನಂತರ ಕೃಷ್ಣಾರ್ಜುನರಿಬ್ಬರೂ ಯುಧಿಷ್ಠಿರನಿದ್ದ ಶಿಬಿರಕ್ಕೆ ಹೋಗುತ್ತಾರೆ. ಆ ಸಮಯದಲ್ಲಿ ಯುಧಿಷ್ಠಿರನು ಕೃಷ್ಣಾರ್ಜುನರು ಕರ್ಣನನ್ನು ಸಂಹರಿಸಿಯೇ ತನ್ನ ಬಳಿಗೆ ಬಂದಿರುವರೆಂದು ಭಾವಿಸಿ ಅವರಿಬ್ಬರನ್ನೂ ಪ್ರಶಂಸಿಸುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೬೬ನೆಯ ಅಧ್ಯಾಯ :– ಕರ್ಣನು ಹತನಾದನೆಂದೇ ಭಾವಿಸಿದ್ದ ಧರ್ಮರಾಜನು ಆಡುವ ಮಾತುಗಳು ಹೃದಯಸ್ಪರ್ಶಿಯಾಗಿವೆ. ಕರ್ಣನ ಪರಾಕ್ರಮ, ಅವನ ಸ್ವಭಾವ, ತನ್ನನ್ನು ಬಹಳವಾಗಿ ಪೀಡಿಸಿದುದು, ಅವಮಾನಗೊಳಿಸಿದುದು–ಈ ಎಲ್ಲವನ್ನೂ ವಿವರವಾಗಿ ತಿಳಿಸುತ್ತಾನೆ. 'ಅಂತಹವನನ್ನು ನೀನು ಹೇಗೆ ಸಂಹರಿಸಿದೆ?'–ಎಂಬ ಪ್ರಶ್ನೆಯನ್ನು ಅನೇಕ ರೀತಿಗಳಲ್ಲಿ ಕೇಳುತ್ತಾನೆ. 'ಕರ್ಣನು ಹತನಾದನೆಂಬ ವಾರ್ತೆಯು ನಿಶ್ಚಯವಾಗಿಯೂ ಸುದುರ್ಲಭವಾದುದು. ನೀನು ಮಾಡಿದ ಸಾಹಸ ಕಾರ್ಯಕ್ಕಾಗಿ ನಿರಂತರವಾಗಿ ನಿನ್ನನ್ನು ಚಿಂತಿಸುತ್ತಿರುತ್ತೇನೆ'–ಎಂದು ಯುಧಿಷ್ಠಿರನು ತನ್ನ ಮಾತನ್ನು ಮುಗಿಸುತ್ತಾನೆ. ಬಹಳ ಸುಂದರವಾದ ಸಂದರ್ಭವಿದು.

೬೭ನೆಯ ಅಧ್ಯಾಯ :– ಅರ್ಜುನನು ತಾನು ಅದುವರೆಗೆ ಮಾಡಿದ

ಸಾಹಸಕಾರ್ಯವನ್ನು ಯಥಾವತ್ತಾಗಿ ವಿವರಿಸುತ್ತಾನೆ. ಮೊದಲು ಸಂಶಪ್ತಕರೊಡನೆ ಅನಂತರ ಅಶ್ವತ್ಥಾಮನೊಡನೆ ಯುದ್ಧಮಾಡಿದುದನ್ನೂ ಹೇಳುತ್ತಾನೆ. '**ಪಞ್ಚಾಶತಾ ರಥಮುಖ್ಯೈಃ ಸಮೇತ್ಯ ಕರ್ಣಸ್ತ್ವರನ್ಮಾಮುಪಾಯಾತ್ಪ್ರಮಾಥೀ । ತಾನ್ಸೂದಯಿತ್ವಾಹಮಪಾಸ್ಯ ಕರ್ಣಂ ದ್ರಷ್ಟುಂ ಭವನ್ತಂ ತ್ವರಯಾಭಿಯಾತಃ** (೧೩) – 'ಕರ್ಣನು ಐವತ್ತು ರಥಮುಖ್ಯರೊಡನೆ ತ್ವರಾಯುಕ್ತನಾಗಿ ನನ್ನ ಬಳಿಗೆ ಬಂದನು. ನಾನು ಕರ್ಣನೊಡನಿದ್ದ ಐವತ್ತು ರಥಮುಖ್ಯರನ್ನೂ ಸಂಹರಿಸಿ ಕರ್ಣನನ್ನು ಅಲ್ಲಿಯೇ ಬಿಟ್ಟು ನಿನ್ನನ್ನು ನೋಡುವ ಸಲುವಾಗಿ ಇಲ್ಲಿಗೆ ಬಂದೆನು'–ಎಂದು ಹೇಳುತ್ತಾನೆ. ೬೪ನೆಯ ಅಧ್ಯಾಯದಲ್ಲಿ ಕರ್ಣನು ಐವತ್ತು ರಥಮುಖ್ಯರೊಡನೆ ಬಂದ ವಿಷಯವಾಗಲೀ, ಅರ್ಜುನನು ಅವರನ್ನು ಸಂಹರಿಸಿದ ವಿಷಯವಾಗಲೀ–ಬರುವುದಿಲ್ಲ. ಕರ್ಣನನ್ನು ಅರ್ಜುನನು ಎದುರಿಸುವುದೇ ಇಲ್ಲ. ಉಳಿದಂತೆ ಕರ್ಣನು ಮಾಡುತ್ತಿರುವ ಸಂಹಾರ ಕಾರ್ಯವನ್ನು ಅರ್ಜುನನು ಯಥಾವತ್ತಾಗಿ ತಿಳಿಸುತ್ತಾನೆ. ಕರ್ಣನನ್ನು ಸಂಹರಿಸಲು ಪ್ರತಿಜ್ಞೆಮಾಡುತ್ತಾನೆ. ಅದಕ್ಕಾಗಿ ಯುಧಿಷ್ಠಿರನ ಆಶೀರ್ವಾದವನ್ನು ಬೇಡುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೬೮ನೆಯ ಅಧ್ಯಾಯ :- ರಕ್ಷಣೆಗಾಗಿ ಕೂಗಿಕೊಳ್ಳುತ್ತಿದ್ದ ಸೈನಿಕರನ್ನು ಬಿಟ್ಟುಬಂದುದಕ್ಕಾಗಿ ಯುಧಿಷ್ಠಿರನು ಅರ್ಜುನನನ್ನು ಬಹಳವಾಗಿ ಆಕ್ಷೇಪಿಸುತ್ತಾನೆ. ಬಹಳವಾಗಿ ತೆಗಳುತ್ತಾನೆ. ನಿಂದಿಸುತ್ತಾನೆ. ಅರ್ಜುನನ ಪರಾಕ್ರಮದ ವಿಷಯವಾಗಿ ದೇವತೆಗಳು ಹೇಳಿದುದೆಲ್ಲವೂ ಸುಳ್ಳೆನ್ನುತ್ತಾನೆ. ಕಡೆಗೆ–'ನಿನ್ನ ಧನುಸ್ಸನ್ನು ಕೇಶವನಿಗೆ ಕೊಟ್ಟುಬಿಡು'–ಎನ್ನುತ್ತಾನೆ. 'ಕುಂತಿಗೆ ಗರ್ಭಸ್ರಾವವಾಗಿ ನೀನು ಹುಟ್ಟದಿದ್ದರೇ ಚೆನ್ನಾಗಿತ್ತು' – ಎನ್ನುತ್ತಾನೆ. ತನ್ನ ಕೋಪ-ಸಂಕಟ-ದುಃಖಗಳೆಲ್ಲವನ್ನೂ ಯುಧಿಷ್ಠಿರನು ಕೃಷ್ಣಾರ್ಜುನರ ಮುಂದೆ ತೋಡಿಕೊಳ್ಳುತ್ತಾನೆ.

೫೬ ಮತ್ತು ೭೦ನೆಯ ಅಧ್ಯಾಯಗಳು :– ಯುಧಿಷ್ಠಿರನ ಮಾತನ್ನು ಕೇಳಿದೊಡನೆಯೇ ಕುಪಿತನಾದ ಅರ್ಜುನನು ಕತ್ತಿಯನ್ನು ಹೊರಕ್ಕೆ ಸೆಳೆಯುತ್ತಾನೆ. '**ಧನುಶ್ಚ ತತ್ಕೇಶವಾಯ ಪ್ರಯಚ್ಛ**' – ಎಂದು ಯುಧಿಷ್ಠಿರನು ಹೇಳಿದುದೇ ಅರ್ಜುನನು ಕತ್ತಿಯನ್ನು ಹೊರಸೆಳೆಯಲು ಮುಖ್ಯಕಾರಣ.

'ಗಾಂಡೀವಧನುಸ್ಸನ್ನು ಬೇರೆಯವರಿಗೆ ಕೊಟ್ಟುಬಿಡು'–ಎಂದು ಯಾರೇ ಹೇಳಿದರೂ ಅವರನ್ನು ಸಂಹರಿಸುವುದಾಗಿ ಅರ್ಜುನನು ಉಪಾಂಶುವ್ರತ ವನ್ನು ಮಾಡಿದ್ದನು. ಆದರಿಂದಲೇ ಅರ್ಜುನನು ಧರ್ಮಜನನ್ನು ಸಂಹರಿಸಲು ಕತ್ತಿಯನ್ನು ಹೊರಕ್ಕೆ ಸೆಳೆಯುತ್ತಾನೆ. ಅದನ್ನು ನೋಡಿದ ಕೇಶವನು ಅರ್ಜುನನಿಗೆ ಬುದ್ಧಿಹೇಳುತ್ತಾನೆ. ಇಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಮಾಡುವ ಹಿತೋಪದೇಶವು ಒಂದು ಪುಟ್ಟ ಗೀತೆಯೇ ಆಗಿದೆ. ಸತ್ಯಾನೃತಗಳ ಬಗೆಗೆ ವಿಶ್ಲೇಷಣೆಮಾಡುತ್ತಾನೆ. ಅದಕ್ಕಾಗಿ ಎರಡು ಕಥೆಗಳನ್ನೂ ಹೇಳುತ್ತಾನೆ. ಅರ್ಜುನನಿಗೆ ಅದರಿಂದ ಸಮಾಧಾನವಾಗುವುದಿಲ್ಲ. 'ಅಣ್ಣನನ್ನು ಕೊಂದರೆ ಸರ್ವನಾಶವಾಗುವುದು. ನಾನೇ ಉಳಿಯಲಾರೆನು'–ಎಂದು ಅವನೇ ಹೇಳುತ್ತಾನೆ. ಆದರೆ ತನ್ನ ಪ್ರತಿಜ್ಞೆಗೂ ಭಂಗಬರಬಾರದು. ಇದಕ್ಕೆ ಉಪಾಯವನ್ನು ಹೇಳಬೇಕೆಂದು ಶ್ರೀಕೃಷ್ಣನನ್ನೇ ಪ್ರಾರ್ಥಿಸುತ್ತಾನೆ. ಅದಕ್ಕೆ ಶ್ರೀಕೃಷ್ಣನು ಸೂಚಿಸುವ ಮಾರ್ಗವು ಸ್ವಾರಸ್ಯವಾಗಿದೆ. 'ನಿಂದನೆಗೆ ಅನರ್ಹರಾದವರನ್ನು ನಿಂದಿಸಿದರೆ ಅವರನ್ನು ಹತ್ಯೆಮಾಡಿದಂತೆಯೇ. ಈ ನೀತಿಯನ್ನೇ ಅನುಸರಿಸಿ ಧರ್ಮರಾಜನನ್ನು ನಿಂದಿಸು. ಅವನನ್ನು ವಧೆಮಾಡಿದಂತೆಯೇ ಆಗುತ್ತದೆ'–ಎಂಬ ಶ್ರೀಕೃಷ್ಣನ ಮಾತಿನಂತೆ ಅರ್ಜುನನು ಧರ್ಮರಾಜನನ್ನು ನಿಂದಿಸುತ್ತಾನೆ. ಅರ್ಜುನನು ಶ್ರೀಕೃಷ್ಣನು ಹೇಳಿದಂತೆಯೇ ಮಾಡಿದನು. ಆದರೆ ಅಣ್ಣನನ್ನು ನಿಂದಿಸಿದುದಕ್ಕಾಗಿ ಅವನು ಬಹಳ ಖಿನ್ನನಾಗಿ ಕತ್ತಿಯಿಂದ ತನ್ನ ಕತ್ತನ್ನೇ ಕತ್ತರಿಸಿಕೊಳ್ಳಲು ಹೋಗುತ್ತಾನೆ. ಪುನಃ ಶ್ರೀಕೃಷ್ಣನು ಅರ್ಜುನನಿಗೆ ತಿಳಿವಳಿಕೆ ಹೇಳಬೇಕಾಗುತ್ತದೆ. ಅರ್ಜುನನು ಆತ್ಮಹತ್ಯೆಮಾಡಿಕೊಳ್ಳಲು ಹೊರಟಿದ್ದನಲ್ಲವೇ? ಅದಕ್ಕೆ ಪರ್ಯಾಯವಾಗಿ ಆತ್ಮಶ್ಲಾಘನೆಯನ್ನು ಮಾಡಿಕೊಂಡರೆ ಅದು ಆತ್ಮಹತ್ಯೆಮಾಡಿಕೊಂಡಂತೆಯೇ ಎನ್ನುತ್ತಾನೆ ಶ್ರೀಕೃಷ್ಣ. ನಮ್ಮಲ್ಲಿ ಆತ್ಮಪ್ರಶಂಸೆಮಾಡಿಕೊಳ್ಳುವವರ ಸಂಖ್ಯೆ ಕಡಿಮೆ ಯೇನೂ ಇಲ್ಲ. ಆದರೆ ಆತ್ಮಪ್ರಶಂಸೆಮಾಡಿಕೊಂಡರೆ ಆತ್ಮ ಹತ್ಯೆಮಾಡಿಕೊಂಡಂತಾಗುವುದೆಂಬುದು ಅನೇಕರಿಗೆ ತಿಳಿಯದು. ಅರ್ಜುನನು ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುತ್ತಾನೆ. ಇಲ್ಲೊಂದು ವಿಶೇಷವಿದೆ. ಅರ್ಜುನನು ಯುಧಿಷ್ಠಿರನನ್ನು ನಿಂದಿಸಿರುವ ಪ್ರಕರಣದಲ್ಲಾಗಲೀ – ಆತ್ಮಪ್ರಶಂಸೆಮಾಡಿಕೊಂಡ ಪ್ರಕರಣದಲ್ಲಾಗಲೀ–

ಸತ್ಯಕ್ಕೆ ಯಾವುದೂ ದೂರವಾಗಿಲ್ಲ. ಸತ್ಯವನ್ನೇ ಮುಂದಿಡುವ ಧೋರಣೆಗಳಲ್ಲಿ ಪರ್ಯಾಯವಾಗಿ ಯುಧಿಷ್ಠಿರನ ಪ್ರಕರಣದಲ್ಲಿ ನಿಂದೆ ಯಂತೆಯೂ–ಅರ್ಜುನನ ಪ್ರಕರಣದಲ್ಲಿ ಆತ್ಮಪ್ರಶಂಸೆ ಯಂತೆಯೂ–ಕಾಣುತ್ತದೆ. ಕಡೆಯಲ್ಲಿ ಯುಧಿಷ್ಠಿರನು ನಿರ್ವೇದಗೊಂಡು ವನವಾಸಕ್ಕೆ ಹೊರಟುಹೋಗುವುದಾಗಿ ಹೇಳುತ್ತಾನೆ. ಆಗ ಪುನಃ ಶ್ರೀಕೃಷ್ಣನೇ ಅವನಿಗೂ ಸಮಾಧಾನ ಹೇಳಬೇಕಾಗುತ್ತದೆ. ಸಮಾಧಾನಪಡಿಸುತ್ತಾನೆ. ಬಹಳ ಸ್ವಾರಸ್ಯವಾದ ಅಧ್ಯಾಯಗಳಿವು.

೭೧ನೆಯ ಅಧ್ಯಾಯ :– ಅಣ್ಣನನ್ನು ಸಂಹಾರಮಾಡಲು ಹೋದುದಕ್ಕಾಗಿ ಪುನಃ ಶ್ರೀಕೃಷ್ಣನು ಅರ್ಜುನನಿಗೆ ಬುದ್ಧಿಹೇಳಿ ಧರ್ಮರಾಜನನ್ನು ಪ್ರಸನ್ನಗೊಳಿಸುವಂತೆ ಹೇಳುತ್ತಾನೆ. ಅರ್ಜುನನು ನಾಚಿಕೆಪಟ್ಟುಕೊಂಡು ಯುಧಿಷ್ಠಿರನ ಕಾಲುಗಳಲ್ಲಿ ಬಿದ್ದು ಬಿಕ್ಕಿ-ಬಿಕ್ಕಿ ಅಳುತ್ತಾನೆ. ಯುಧಿಷ್ಠಿರನು ಅರ್ಜುನನನ್ನು ಹಿಡಿದೆತ್ತಿ ತಬ್ಬಿಕೊಳ್ಳುತ್ತಾನೆ. ಪಾರ್ಥನು ಕರ್ಣನನ್ನು ಸಂಹರಿಸದೇ ಹಿಂದಿರುಗುವುದಿಲ್ಲವೆಂದು ಪ್ರತಿಜ್ಞೆಮಾಡುತ್ತಾನೆ. ಯುಧಿಷ್ಠಿರನು ಆಶೀರ್ವಾದಮಾಡಿ ಅರ್ಜುನನನ್ನು ರಣರಂಗಕ್ಕೆ ಕಳುಹಿಸಿಕೊಡುತ್ತಾನೆ.

೭೨ನೆಯ ಅಧ್ಯಾಯ :– ಕೃಷ್ಣಾರ್ಜುನರು ರಣರಂಗದ ಕಡೆಗೆ ಹೊರಡುತ್ತಾರೆ. ರಣಾಂಗಣಕ್ಕೆ ಹೋಗುತ್ತಿರುವಾಗ ಶ್ರೀಕೃಷ್ಣನು ಅರ್ಜುನನನ್ನು ಬಹಳವಾಗಿ ಹೊಗಳುತ್ತಾನೆ. ಕಡೆಗೆ ಕರ್ಣನನ್ನು ಅಂದೇ ಸಂಹರಿಸಲು ಪ್ರೋತ್ಸಾಹಿಸುತ್ತಾನೆ.

೭೩ನೆಯ ಅಧ್ಯಾಯ :– ಈ ಅಧ್ಯಾಯದಲ್ಲಿಯೂ ಶ್ರೀಕೃಷ್ಣನು ಅರ್ಜುನನನ್ನು ಬಹಳವಾಗಿ ಹೊಗಳುತ್ತಾನೆ. ಕರ್ಣನು ಮಾಡಿದ ಅನ್ಯಾಯಗಳೆಲ್ಲವನ್ನೂ ವಿವರಿಸಿ ಹೇಳುತ್ತಾನೆ. ಕರ್ಣನನ್ನು ಸಂಹರಿಸುವುದು ಪುಣ್ಯಕಾರ್ಯವೆಂದೂ ಹೇಳುತ್ತಾನೆ-'ಏತತ್ತೇ ಸುಕೃತಂ ಕರ್ಮ' (೬೩) ಕಟ್ಟಕಡೆಗೆ – 'ಕರ್ಣನನ್ನು ಸಂಹರಿಸಿ ಕೃತಾರ್ಥನಾಗು'–ಎನ್ನುತ್ತಾನೆ.

೭೪ನೆಯ ಅಧ್ಯಾಯ :– ಈ ಅಧ್ಯಾಯದಲ್ಲಿ ಅರ್ಜುನನು ತನ್ನ ಪರಾಕ್ರಮವನ್ನು ಹೇಳಿಕೊಳ್ಳುತ್ತಾನೆ. ಆದರೆ ಈ ಸಂದರ್ಭದಲ್ಲಿದು ಆತ್ಮ

ಪ್ರಶಂಸೆ ಎನಿಸಿಕೊಳ್ಳುವುದಿಲ್ಲ. ಕೃಷ್ಣನಿಗಿತ್ತ ಆಶ್ವಾಸನೆಯಾಗುತ್ತದೆ. ಕರ್ಣನನ್ನು ಸಂಹರಿಸಿಯೇ ತೀರುವೆನೆಂದು ಶ್ರೀಕೃಷ್ಣನಿಗೆ ಆಶ್ವಾಸನೆ ನೀಡುತ್ತಾನೆ.

೭೫ನೆಯ ಅಧ್ಯಾಯ :– ಎರಡೂ ಪಕ್ಷಗಳ ಸೈನಿಕರಿಗೂ ಘೋರವಾದ ದ್ವಂದ್ವಯುದ್ಧವು ನಡೆಯುತ್ತದೆ. ಸುಷೇಣನ ವಧೆಯ ವಿಷಯವಾಗಿ ಕಥಾಸಂದರ್ಭದಲ್ಲಿಯೇ ವಿಶ್ಲೇಷಿಸಲಾಗಿದೆ.

೭೬ನೆಯ ಅಧ್ಯಾಯ :– (ಕೃಷ್ಣಾರ್ಜುನರು ಸೈನ್ಯವನ್ನು ರಕ್ಷಿಸುವ ಭಾರವನ್ನು ಭೀಮಸೇನನಿಗೊಪ್ಪಿಸಿದ ನಂತರ ಭೀಮಸೇನನು ಮುಂದೇನು ಮಾಡಿದನೆಂಬ ವಿಷಯವು ಈ ಅಧ್ಯಾಯದಲ್ಲಿ ಬರುತ್ತದೆ.) ಭೀಮಸೇನನು ಕೌರವಸೈನ್ಯವನ್ನು ಸದೆಬಡಿಯುತ್ತಾನೆ. ಅನಂತರ ಧರ್ಮಪುತ್ರನನ್ನು ನೋಡಲು ಹೋದ ಅರ್ಜುನನು ಇನ್ನೂ ಹಿಂದಿರುಗದೇ ಇದ್ದುದಕ್ಕಾಗಿ ಪರಿತಾಪಪಡುತ್ತಾನೆ. ಅನಂತರ ತಮ್ಮಲ್ಲಿರುವ ಆಯುಧಗಳೆಷ್ಟೆಂಬುದನ್ನು ವಿಶೋಕನಿಂದ ಕೇಳಿ ತಿಳಿದುಕೊಳ್ಳುತ್ತಾನೆ. ಎಲ್ಲ ಕುರುಯೋಧರನ್ನೂ ಸಂಹರಿಸುವುದಾಗಿ ಪ್ರತಿಜ್ಞೆಮಾಡುತ್ತಾನೆ. ಅರ್ಜುನನು ಬೇಗ ಬರಲೆಂದು ತವಕಿಸುತ್ತಾನೆ. ಆ ವೇಳೆಗೆ ಕೌರವರ ಸೈನ್ಯವು ಇದ್ದಕ್ಕಿದ್ದಂತೆ ದಿಕ್ಕಾಪಾಲಾಗಿ ಓಡಿಹೋಗುವುದು ದೂರದಲ್ಲಿ ಕಾಣುತ್ತದೆ. ಮುಂದೆ ಕುಳಿತಿದ್ದ ವಿಶೋಕನು ಅರ್ಜುನನು ಶತ್ರುಸೈನಿಕರನ್ನು ಧ್ವಂಸಮಾಡುತ್ತಿರುವುದನ್ನು ಪರಿ-ಪರಿಯಾಗಿ ವರ್ಣಿಸುತ್ತಾನೆ. 'ಪಶ್ಯ ಚಕ್ರಂ ಯಶೋವರ್ಧನಂ ಕೇಶವಸ್ಯ – ಕೇಶವನ ಚಕ್ರವನ್ನು ನೋಡು'–ಎನ್ನುತ್ತಾನೆ ವಿಶೋಕ. ಇಲ್ಲಿ ಶ್ರೀಕೃಷ್ಣನ ಚಕ್ರವೆಲ್ಲಿಂದ ಬಂತೆಂಬುದು ತಿಳಿಯದಾಗಿದೆ. ಈ ಶ್ಲೋಕವು ಎಲ್ಲ ಪುಸ್ತಕಗಳಲ್ಲಿಯೂ ಇದೆ. ಅರ್ಜುನನು ಬಂದು ಯುದ್ಧಮಾಡುತ್ತಿರುವ ಶುಭಸಮಾಚಾರವನ್ನು ತಿಳಿಸಿದುದಕ್ಕಾಗಿ ಭೀಮಸೇನನು ವಿಶೋಕನಿಗೆ ನಾನಾವಿಧವಾದ ಪಾರಿತೋಷಿಕಗಳನ್ನೂ ಕೊಡುವುದಾಗಿ ಹೇಳುತ್ತಾನೆ. ಅಧ್ಯಾಯವು ಮುಗಿಯುತ್ತದೆ.

೭೭ನೆಯ ಅಧ್ಯಾಯ :– ಅರ್ಜುನನು ಶ್ರೀಕೃಷ್ಣನೊಡನೆ ಬಂದನಂತರ ನಡೆದ ವಿಷಯವನ್ನು ಈ ಅಧ್ಯಾಯದಲ್ಲಿ ಹೇಳಿದೆ. ರಣರಂಗವನ್ನು ಸಮೀಪಿಸುತ್ತಲೇ ಅರ್ಜುನನು ಭೀಮನ ಬಳಿಗೆ ಕುದುರೆಗಳನ್ನು ಒಯ್ಯಲು

ಕೇಶವನಿಗೆ ಹೇಳುತ್ತಾನೆ. ಆದರೆ ಕೌರವಸೈನಿಕರು ಅವನನ್ನು ಅಡ್ಡಗಟ್ಟಿ ಯುದ್ಧಮಾಡುತ್ತಾರೆ. ಘೋರವಾದ ಯುದ್ಧವು ನಡೆಯುತ್ತದೆ. ಸೈನಿಕರನ್ನೆಲ್ಲಾ ಸಂಹರಿಸಿ ಉಳಿದವರು ಪಲಾಯನಮಾಡಿದನಂತರ ಅರ್ಜುನನು ಕರ್ಣನ ಕಡೆಗೆ ಹೋಗುತ್ತಾನೆ. **ಪ್ರಾಯಾದಭಿಮುಖಃ ಪಾರ್ಥಃ ಸೂತಾನೀಕಂ ಹಿ ಮಾರಿಷ** (೨೧). ಪಾರ್ಥನ ರಥಶಬ್ದವನ್ನು ಕೇಳುತ್ತಲೇ ಭೀಮಸೇನನು ಆನಂದದಿಂದ ಶತ್ರುಪಕ್ಷದ ಸೈನಿಕರನ್ನು ಇಮ್ಮಡಿಯಾದ ಉತ್ಸಾಹದಿಂದ ಸಂಹರಿಸಲು ಉಪಕ್ರಮಿಸುತ್ತಾನೆ. ಮುಂದೆ ಭೀಮನ ಯುದ್ಧವರ್ಣನೆಯಿದೆ. ಇಲ್ಲೂ ಸಹ ರಕ್ತನದಿಯ ವರ್ಣನೆಯು ಬರುತ್ತದೆ. ಭೀಮಸೇನನ ಉಪಟಳವನ್ನು ತಡೆಯಲಾರದೆ ದುರ್ಯೋಧನನು ಭೀಮಸೇನನನ್ನು ಸಂಹರಿಸುವಂತೆ ಶಕುನಿಗೆ ಹೇಳುತ್ತಾನೆ. ಇವನೊಬ್ಬನನ್ನು ಜಯಿಸಿದರೆ ಎಲ್ಲರನ್ನೂ ಜಯಿಸಿದಂತೆಯೇ ಆಗುವುದೆಂಬುದು ದುರ್ಯೋಧನನ ಅಭಿಪ್ರಾಯ. **ಅಸ್ಮಿಞ್ಜಿತೇ ಜಿತಂ ಮನ್ಯೇ** (೪೮) **ತಸ್ಮಿನ್ಹತೇ ಹತಂ ಮನ್ಯೇ** (೩೧) – ಬಳಿಕ ಶಕುನಿ-ಭೀಮರಿಗೆ ಯುದ್ಧವು ನಡೆಯುತ್ತದೆ. ಶಕುನಿಯು ಭೀಮಸೇನನ ಕುದುರೆಗಳನ್ನು ಸಂಹರಿಸುತ್ತಾನೆ. ಭೀಮನು ಪ್ರಹರಿಸಿದ ಶಕ್ತ್ಯಾಯುಧವನ್ನೇ ಕೈಯಿಂದ ಹಿಡಿದು ಪುನಃ ಅದನ್ನೇ ಭೀಮನ ಮೇಲೆ ಶಕುನಿಯು ಪ್ರಯೋಗಿಸುತ್ತಾನೆ. ಭೀಮಸೇನನು ಶಕುನಿಯ ಸೂತಾಶ್ವಸಹಿತವಾದ ರಥವನ್ನೇ ಧ್ವಂಸಮಾಡುತ್ತಾನೆ. ನೆಲದ ಮೇಲೆಯೇ ನಿಂತು ಶಕುನಿಯು ಯುದ್ಧವನ್ನು ಮುಂದುವರಿಸುತ್ತಾನೆ. ಭೀಮನು ಶಕುನಿಯ ಧನುಸ್ಸನ್ನು ಕತ್ತರಿಸಿ ಅನೇಕ ಬಾಣಗಳಿಂದ ಅವನನ್ನು ಗಾಯಗೊಳಿಸಿ ನೆಲಕ್ಕೆ ಕೆಡವುತ್ತಾನೆ. ದುರ್ಯೋಧನನು ಅವನನ್ನೆತ್ತಿ ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟುಹೋಗುತ್ತಾನೆ. ರಾಜನು ಪರಾಙ್ಮುಖನಾಗುತ್ತಲೇ ಉಳಿದ ಕೌರವಸೈನಿಕರೂ ಪಲಾಯನಮಾಡುತ್ತಾರೆ.

೭೮ನೆಯ ಅಧ್ಯಾಯ :– ೭೧ನೆಯ ಅಧ್ಯಾಯದಲ್ಲಿ ಅರ್ಜುನನು ಕರ್ಣನ ಸೈನ್ಯದ ಕಡೆಗೆ ಹೋದನೆಂದಿದೆ. ಆದರೆ ಆ ಅಧ್ಯಾಯದಲ್ಲಿ ಅರ್ಜುನನ ಪ್ರಸ್ತಾಪವೇ ಬರುವುದಿಲ್ಲ. ಭೀಮಸೇನ, ಶಿಖಂಡಿ, ಸಾತ್ಯಕಿ, ನಕುಲ-ಸಹದೇವರು, ದ್ರೌಪದಿಯ ಮಕ್ಕಳು ಎಲ್ಲರೂ ಒಟ್ಟಾಗಿ ಸೇರಿ ಕರ್ಣನೊಡನೆ ಯುದ್ಧಮಾಡುತ್ತಿದ್ದರೆಂಬ ವಿಷಯವು ಬರುತ್ತದೆ. ಇಂತಹ

ಸಂದರ್ಭಗಳಲ್ಲಿ ರಣಾಂಗಣದ ಚಿತ್ರವನ್ನು ಊಹಿಸಿಕೊಂಡು ಸಮನ್ವಯಿಸುವುದು ಸ್ವಲ್ಪ ಕಷ್ಟವೇ ಆಗುತ್ತದೆ. ಈ ಅಧ್ಯಾಯದ ಪೂರ್ತಿಯಾಗಿ ಕರ್ಣನ ಪರಾಕ್ರಮದ ವರ್ಣನೆಯಿದೆ. ಕರ್ಣನ ಪರಾಕ್ರಮವು ದುರ್ಯೋಧನನಿಗೆ ಮಹಾನಂದವನ್ನುಂಟುಮಾಡುತ್ತದೆ. ಎರಡೂ ಪಕ್ಷಗಳ ಸೈನ್ಯಗಳಲ್ಲೂ ಅಪಾರಸಂಖ್ಯೆಯಲ್ಲಿ ಜನಕ್ಷಯವಾಗುತ್ತದೆ.

೭೯ನೆಯ ಅಧ್ಯಾಯ :- ಅಧ್ಯಾಯದ ಪ್ರಾರಂಭದಲ್ಲಿ ಅರ್ಜುನನು ನಿರ್ಮಿಸಿದ ರಕ್ತನದಿಯ ವರ್ಣನೆಯು ಬರುತ್ತದೆ. ಅರ್ಜುನನು ಕರ್ಣನ ಧ್ವಜವನ್ನು ನೋಡುತ್ತಾನೆ. ಭೀಮಸೇನಾದಿಗಳೊಡನೆ ಯುದ್ಧಮಾಡುತ್ತಿರುವುದನ್ನೂ ನೋಡುತ್ತಾನೆ. ಅವನ ಬಾಣಪ್ರಹಾರಗಳನ್ನು ಸಹಿಸಿಕೊಳ್ಳಲಾರದೇ ಅನೇಕ ಪಾಂಚಾಲಸೈನಿಕರು ಪಲಾಯನಮಾಡುತ್ತಿರುತ್ತಾರೆ. ಆ ಸಮಯದಲ್ಲಿ ಕರ್ಣನನ್ನು ತಡೆಯದಿದ್ದರೆ ತನ್ನ ಸೈನಿಕರೆಲ್ಲರನ್ನೂ ನಿಶ್ಶೇಷಗೊಳಿಸಿಬಿಡುತ್ತಾನೆಂಬ ಭಯದಿಂದ ಅರ್ಜುನನು ಕರ್ಣನ ಬಳಿಗೆ ಶೀಘ್ರವಾಗಿ ರಥವನ್ನು ನಡೆಸುವಂತೆ ಶ್ರೀಕೃಷ್ಣನಿಗೆ ಹೇಳುತ್ತಾನೆ. ರಥದಲ್ಲಿ ಬರುತ್ತಿದ್ದ ಅರ್ಜುನನನ್ನು ನೋಡಿ ಶಲ್ಯನು ಕರ್ಣನಿಗೆ ಹೇಳುತ್ತಾನೆ- **'ಅಯಂ ಸ ರಥ ಆಯಾತಿ ಶ್ವೇತಾಶ್ವಃ ಕೃಷ್ಣಸಾರಥಿಃ (೧೯) –** 'ಶ್ವೇತಾಶ್ವನಾದ, ಕೃಷ್ಣಸಾರಥಿಯಾದ, ಮಹಾರಥನಾದ ಅರ್ಜುನನು ಇತ್ತ ಕಡೆಯೇ ಬರುತ್ತಿದ್ದಾನೆ.' ಈ ಶ್ಲೋಕವೂ ಮತ್ತು ಇದೇ ಅಧ್ಯಾಯದ ಇನ್ನೂ ಹಲವಾರು ಶ್ಲೋಕಗಳೂ ೪೬ನೆಯ ಅಧ್ಯಾಯದಲ್ಲಿಯೂ ಬಂದಿವೆ. ಶಂಖ-ಚಕ್ರ-ಗದಾ-ಶಾರ್ಙ್ಗಪಾಣಿಯಾದ ಶ್ರೀಕೃಷ್ಣನು ಬರುತ್ತಿರುವನೆಂಬ ೪೬ನೆಯ ಅಧ್ಯಾಯದ ಶ್ಲೋಕವು (೫೯) ಇಲ್ಲಿಯೂ (೨೩) ಪುನರಾವರ್ತಿತವಾಗಿದೆ. ಎರಡು ಅಧ್ಯಾಯಗಳಿಗೂ ಇರುವ ವ್ಯತ್ಯಾಸವೆಂದರೆ ೪೬ನೆಯ ಅಧ್ಯಾಯದಲ್ಲಿ ಸಂದರ್ಭವು ಹೊಂದಾಣಿಕೆಯಿರುವಂತೆ ಕಾಣುವುದಿಲ್ಲ. ಅಲ್ಲಿ ಶಲ್ಯನು ಕರ್ಣನನ್ನು ಜರೆಯುತ್ತಾನೆ. ಅರ್ಜುನನನ್ನು ಬಹಳವಾಗಿ ಶ್ಲಾಘಿಸುತ್ತಾನೆ. ಇಲ್ಲಿ ಶಲ್ಯನು ಕರ್ಣನಿಗೆ ಅಚ್ಚರಿಯಾಗುವ ರೀತಿಯಲ್ಲಿ ಅವನನ್ನು ಶ್ಲಾಘಿಸಿ ಅರ್ಜುನನೊಡನೆ ಯುದ್ಧಮಾಡಲು ಪ್ರೋತ್ಸಾಹಿಸುತ್ತಾನೆ. ಇಲ್ಲಿಂದ ಮುಂದಕ್ಕೆ ಶಲ್ಯನು ಕರ್ಣನ ವಿಷಯವಾಗಿ ಒಂದೇ ಒಂದು ನಿಂದನೆಯ ಮಾತನ್ನೂ ಆಡುವುದಿಲ್ಲ. ಶಲ್ಯನ ಮಾತನ್ನು ಕೇಳಿ

ಕರ್ಣನು–'ಪ್ರಕೃತಿಸ್ಥೋಽಸಿ ಮೇ ಶಲ್ಯ ಇದಾನೀಂ ಸಮ್ಮತಸ್ತಥಾ । ಪ್ರತಿಭಾಸಿ ಮಹಾಬಾಹೋ – (೪೯) ಶಲ್ಯ! ಈಗ ನೀನು ನಿನ್ನ ಸ್ವಭಾವಕ್ಕೆ ಅನುಗುಣವಾಗಿರುವಂತೆ ಕಾಣುತ್ತಿರುವೆ. ಈಗ ನೀನು ನನಗೆ ಸಮ್ಮತನೂ ಆಗಿರುವೆ'–ಎನ್ನುತ್ತಾನೆ. ಯುಧಿಷ್ಠಿರನಿಗೆ ಮಾತುಕೊಟ್ಟಿರುವುದರಿಂದ ಶಲ್ಯನು ಕರ್ಣನನ್ನು ಸ್ವಲ್ಪಹೊತ್ತು ನಿಂದಿಸಿ ಮಾತನಾಡಿದನೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಮುಂದೆ ಕರ್ಣನು ಮಾತನಾಡುತ್ತಾ ಕೃಷ್ಣಾರ್ಜುನರನ್ನು ಶ್ಲಾಘಿಸುತ್ತಾನೆ. ತನ್ನ ಪರಾಕ್ರಮವನ್ನೂ ಹೇಳಿಕೊಳ್ಳುತ್ತಾನೆ. ಇಲ್ಲಿ ಅವನ ಮಾತುಗಳು ಬಹಳ ಗಂಭೀರವಾಗಿವೆ.

ಬಳಿಕ ಕರ್ಣನು ಅರ್ಜುನನನ್ನು ದೂರದಲ್ಲಿಯೇ ತಡೆಯುವಂತೆ ತನ್ನ ಸೈನಿಕರಿಗೆ ಹೇಳುತ್ತಾನೆ. ಆದರೆ ಎದುರಾಗಿ ಬಂದ ಯೋಧರೆಲ್ಲರನ್ನೂ ಪಾರ್ಥನು ಧ್ವಂಸಮಾಡುತ್ತಲೇ ಇರುತ್ತಾನೆ. ದುರ್ಯೋಧನ-ಕೃತವರ್ಮಾಶ್ವತ್ಥಾಮ-ಕೃಪರೇ ಆದಿಯಾಗಿ ಎಲ್ಲರೂ ಪಾರ್ಥನನ್ನು ಆಕ್ರಮಿಸುತ್ತಾರೆ. ಅರ್ಜುನನು ಅಶ್ವತ್ಥಾಮನ ಕುದುರೆಗಳನ್ನೂ ಮತ್ತು ಸೂತನನ್ನೂ ಸಂಹರಿಸುತ್ತಾನೆ. ಧ್ವಜವನ್ನೂ ಕತ್ತರಿಸುತ್ತಾನೆ. ಯುದ್ಧಗಳಲ್ಲಿ ಸಾಮಾನ್ಯವಾಗಿ ಸೂತ-ಹಯಗಳು ಹೋದೊಡನೆಯೇ ಯೋಧನು ಬೇರೊಂದು ರಥವನ್ನು ಹತ್ತುತ್ತಾನೆ. ಕುದುರೆಗಳಿಂದಲೂ ಸೂತನಿಂದಲೂ ವಿಹೀನರಾದವರು ರಥದಿಂದ ವಿಹೀನರಾದರೆಂದೇ ಅರ್ಥ. ಆದರೆ ಇಲ್ಲಿ ದ್ರೌಣಿಯು ಬೇರೊಂದು ರಥದಲ್ಲಿ ಕುಳಿತ ಪ್ರಸ್ತಾಪವಿಲ್ಲ. ಅರ್ಜುನನು ಕೃಪ-ಕೃತವರ್ಮರ ರಥಾಶ್ವಗಳನ್ನೂ ಸಂಹರಿಸುತ್ತಾನೆ. ದುರ್ಯೋಧನನ ಧನುರ್ಧ್ವಜಗಳನ್ನೂ ಕತ್ತರಿಸುತ್ತಾನೆ. ಅವರ ವಿಷಯದಲ್ಲಿಯೂ ಪ್ರತಿಕ್ರಿಯೆ ಸ್ಪಷ್ಟವಾಗಿಲ್ಲ. ಅವರು ಬೇರೆಯ ರಥಗಳನ್ನು ಪಡೆದುಕೊಂಡ ವಿಷಯವೂ ಇಲ್ಲ. ಓಡಿಹೋದ ವಿಷಯವೂ ಇಲ್ಲ. ಮತ್ತೊಂದು ಗಮನಿಸಬೇಕಾದ ಸಂಗತಿಯೆಂದರೆ : ಏಕಕಾಲದಲ್ಲಿ ಮೂವರ ಅಶ್ವ-ಸಾರಥಿಗಳನ್ನೂ ಅರ್ಜುನನು ಸಂಹರಿಸುತ್ತಾನೆ. ಆದರೂ ಕೌರವಯೋಧರು ಅರ್ಜುನನನ್ನು ಮುಂದೆ ಹೋಗಲು ಬಿಡುವುದಿಲ್ಲ. ಪುನಃ ಎರಡು ಪಕ್ಷಗಳ ಸೈನಿಕರಿಗೂ ಭಯಂಕರವಾದ ಯುದ್ಧವು ಪ್ರಾರಂಭವಾಗುತ್ತದೆ. ಅರ್ಜುನನು ಇಷ್ಟು ಘೋರವಾಗಿ ಯುದ್ಧಮಾಡುತ್ತಿದ್ದರೂ ಕರ್ಣನು ತಮ್ಮವರ ರಕ್ಷಣೆಗೆ ಬಾರದಿದ್ದುದು ಅಚ್ಚರಿಯೆನಿಸುತ್ತದೆ.

೮೦ನೆಯ ಅಧ್ಯಾಯ :– ೭೭ನೆಯ ಅಧ್ಯಾಯದಲ್ಲಿ ಭೀಮನೊಬ್ಬನೇ ಕೌರವರ ಸೈನ್ಯವನ್ನು ಧ್ವಂಸಮಾಡುತ್ತಿದ್ದನೆಂದಿದೆ. ೭೮ನೆಯ ಅಧ್ಯಾಯದಲ್ಲಿ ಭೀಮಸೇನ, ಸಾತ್ಯಕಿ, ನಕುಲ-ಸಹದೇವರು ಮತ್ತು ದ್ರೌಪದಿಯ ಮಕ್ಕಳು ಎಲ್ಲರೂ ಸೇರಿ ಕರ್ಣನೊಡನೆ ಯುದ್ಧಮಾಡುತ್ತಿದ್ದರೆಂದಿದೆ. ಕರ್ಣನ ಪರಾಕ್ರಮದ ಐತಿಹ್ಯವನ್ನು ಆ ಅಧ್ಯಾಯದಲ್ಲಿ ಹೇಳಿದೆ. ಪುನಃ ಈ ೮೦ನೆಯ ಅಧ್ಯಾಯದಲ್ಲಿ ೭೭ನೆಯ ಅಧ್ಯಾಯದಲ್ಲಿ ಹೇಳಿರುವಂತೆಯೇ ಮತ್ತೆ ಮೊದಲಿನಿಂದಲೂ ಕಥೆಯು ಅನುವರ್ತಿತವಾಗಿ ಬಂದಿರುವಂತೆ ಭೀಮನೊಬ್ಬನೇ ಕೌರವರ ಸೈನ್ಯದೊಡನೆ ಯುದ್ಧಮಾಡುತ್ತಿದ್ದನೆಂಬ ಪ್ರಸ್ತಾಪವಿದೆ. 'ಮಜ್ಜನ್ತಮಿವ ಕೌನ್ತೇಯಮುಜ್ಜಿಹೀರ್ಷುರ್ಧನಂಜಯಃ ವಿಸೃಜ್ಯಸೂತಪುತ್ರಸ್ಯ ಸೇನಾಂ' (೧) – 'ಭೀಮಸೇನನನ್ನು ಶತ್ರುಸೈನ್ಯದಿಂದ ಉದ್ಧರಿಸುವ ಇಚ್ಛೆಯಿಂದ ಧನಂಜಯನು ಕರ್ಣನ ಸೈನ್ಯವನ್ನು ಬಿಟ್ಟು ಭೀಮಸೇನನನ್ನು ಆಕ್ರಮಿಸಿದ್ದವರನ್ನು ನಿಶಿತವಾದ ಬಾಣಗಳಿಂದ ಯಮಲೋಕಕ್ಕೆ ಕಳುಹಿಸಿದನು.' ೭೭ನೆಯ ಅಧ್ಯಾಯದಲ್ಲಿಯೂ ಮತ್ತು ೮೦ನೆಯ ಅಧ್ಯಾಯದಲ್ಲಿಯೂ ಭೀಮಸೇನನೊಬ್ಬನೇ ಕೌರವಸೈನ್ಯದೊಡನೆ ಯುದ್ಧಮಾಡುತ್ತಿರುವನೆಂಬುದು ಸ್ಪಷ್ಟವಾಗಿದೆ. ೭೯ನೆಯ ಅಧ್ಯಾಯದ ೯೨ನೆಯ ಶ್ಲೋಕದಲ್ಲಿ ಶಿಖಂಡೀ, ಸಾತ್ಯಕಿ, ನಕುಲ, ಸಹದೇವ–ಇವರು ಅರ್ಜುನನನ್ನು ಹಿಂಬಾಲಿಸಿ ಹೋಗುತ್ತಿದ್ದ ಕೌರವಸೈನ್ಯವನ್ನು ತಡೆದರೆಂಬ ಪ್ರಸ್ತಾಪವಿದ್ದು ಅಲ್ಲಿ ಭೀಮಸೇನನ ಪ್ರಸ್ತಾಪವಿರುವುದಿಲ್ಲ. (೯೨) ೫೬ನೆಯ ಅಧ್ಯಾಯದ ೩ನೆಯ ಶ್ಲೋಕದಲ್ಲಿ ಭೀಮಸೇನನು ಕರ್ಣನನ್ನು ಬಿಟ್ಟು–ಅಗ್ನಿಯು ಪೊದೆಯನ್ನು ದಹಿಸುವಂತೆ ಕೌರವಸೈನ್ಯವನ್ನು ದಹಿಸಲು ಹೊರಟುಹೋದನು–ಎಂದಿದೆ. ಅಲ್ಲಿಂದ ಮುಂದೆ ಭೀಮಸೇನನೊಬ್ಬನೇ ಏಕಾಕಿಯಾಗಿ ಯುದ್ಧಮಾಡುತ್ತಿದ್ದ ಪ್ರಕರಣಗಳೇ ಬರುತ್ತವೆ. ಈ ಎಲ್ಲ ಕಾರಣಗಳಿಂದಲೂ ೭೮ನೆಯ ಅಧ್ಯಾಯದ ಕಥಾಭಾಗವು ಅಸಂಗತವಾಗಿ ಕಾಣುತ್ತದೆ. ಆದರೆ ಈ ಅಧ್ಯಾಯವು ಎಲ್ಲ ಪುಸ್ತಕಗಳಲ್ಲಿಯೂ ಇದೆ.

ಕರ್ಣನ ಕಡೆಗೆ ಹೋಗುತ್ತಿದ್ದ ಅರ್ಜುನನು ಕುರುಸೈನಿಕರ ಮಧ್ಯದಲ್ಲಿ ಸಿಕ್ಕಿಹಾಕಿಕೊಂಡಿದ್ದ ಭೀಮಸೇನನನ್ನು ರಕ್ಷಿಸುವ ಸಲುವಾಗಿ ಭೀಮಸೇನನ ಕಡೆಗೆ ಬರುತ್ತಾನೆ. ಎದುರಾಗಿ ಬಂದ ಯೋಧರೆಲ್ಲರನ್ನೂ ಧ್ವಂಸಮಾಡು

ತ್ತಾನೆ. ಭೈರವರೂಪದ ರಣರಂಗದ ವರ್ಣನೆಯಿದೆ. ಅರ್ಜುನನ ಪ್ರಹಾರವನ್ನು ತಡೆದುಕೊಳ್ಳಲಾರದೇ ಭೀಮಸೇನನನ್ನು ಆಕ್ರಮಿಸಿದ್ದ ಕೌರವಯೋಧರು ಪಲಾಯನಮಾಡುತ್ತಾರೆ. ಅರ್ಜುನನು ಭೀಮಸೇನ ನನ್ನು ಸಂಧಿಸಿ ಯುಧಿಷ್ಠಿರನು ಕುಶಲನಾಗಿರುವನೆಂದು ತಿಳಿಸಿ ಕರ್ಣನ ಕಡೆಗೆ ಹೋಗುತ್ತಾನೆ. ಆ ಸಮಯದಲ್ಲಿ ಧೃತರಾಷ್ಟ್ರನ ಹತ್ತು ಮಕ್ಕಳು ಅವನನ್ನು ತಡೆಯುತ್ತಾರೆ. ಧಾರ್ತರಾಷ್ಟ್ರರನ್ನು ಬಾಣಗಳಿಂದ ಪೀಡಿಸಿದರೂ ಅವರನ್ನು ಸಂಹರಿಸಲು ಇಚ್ಛಿಸದೇ ಮುಂದೆ ಹೋಗುತ್ತಾನೆ.

೮೧ನೆಯ ಅಧ್ಯಾಯ :– ಕರ್ಣನ ಬಳಿಗೆ ಹೋಗುತ್ತಿದ್ದ ಅರ್ಜುನ ನನ್ನು ಸಂಶಪ್ತಕರು ತಡೆಯುತ್ತಾರೆ. ಅವರೆಲ್ಲರನ್ನೂ ಅರ್ಜುನನು ಧ್ವಂಸ ಮಾಡುತ್ತಾನೆ. ಅನಂತರ ದುರ್ಯೋಧನನು ಮ್ಲೇಚ್ಛಸೈನಿಕರನ್ನು ಕಳುಹಿಸು ತ್ತಾನೆ. ಅವರನ್ನೂ ಅರ್ಜುನನು ಧ್ವಂಸಮಾಡುತ್ತಾನೆ. ಅರ್ಜುನನು ಏಕಾಕಿಯಾಗಿರುವುದನ್ನೂ, ಅವನನ್ನು ಮ್ಲೇಚ್ಛಮಹಾಸೈನ್ಯವು ಮುತ್ತಿರುವು ದನ್ನೂ ಕಂಡು ಭೀಮಸೇನನು ಅವನ ಸಹಾಯಕ್ಕೆ ಹೋಗುತ್ತಾನೆ. ಅರ್ಜುನನಿಂದ ಹತರಾಗದೇ ಇದ್ದವರನ್ನು ಭೀಮಸೇನನು ಸಂಹರಿಸುತ್ತಾನೆ. ಪುನಃ ಅರ್ಜುನನೂ ಕೌರವರ ಸೈನ್ಯವನ್ನು ಅವ್ಯಾಹತವಾಗಿ ಧ್ವಂಸ ಮಾಡುತ್ತಾನೆ. ದುರ್ಯೋಧನನ ಸೈನಿಕರು ಕರ್ಣನನ್ನು ಕೂಗಿಕೊಂಡು ಪಲಾಯನಮಾಡುತ್ತಾರೆ. ಕಟ್ಟಕಡೆಗೆ ಕರ್ಣನೊಬ್ಬನ ಹೊರತಾಗಿ ಉಳಿದವರೆಲ್ಲರೂ ಓಡಿಹೋಗುತ್ತಾರೆ. ಈ ಅಧ್ಯಾಯದಲ್ಲಿ ಭೀಮನು ಬಂದಿರುವುದು ಅಪ್ರಾಸಂಗಿಕವಾಗಿ ಕಾಣುತ್ತದೆ. **'ತಸ್ಮಿನ್ ಕ್ಷಣೇ ಪಾಣ್ಡವಸ್ಯ ಬಾಹ್ವೋರ್ಬಲಮಪಶ್ಯತ । ಯತ್ಸಾದಿನೋ ವಾರಣಾಂಶ್ಚ ರಥಾಂಶ್ಚೈಕೋಽಜಯದ್ಯುಧಿ॥'** (೨೦) 'ಆ ಸಮಯದಲ್ಲಿ ಪಾರ್ಥನ ಭುಜಗಳಲ್ಲಿ ಬಲವೆಷ್ಟಿದೆಯೆಂಬುದು ಕಂಡುಬಂದಿತು. ಪಾರ್ಥನು ಏಕಾಂಗಿ ಯಾಗಿಯೇ ತನ್ನ ಭುಜಬಲದಿಂದ ಅಶ್ವಾರೋಹಿಗಳನ್ನೂ, ಮದಿಸಿದ ಆನೆಗಳನ್ನೂ, ರಥಗಳನ್ನೂ ಸಾವಿರಾರು ಸಂಖ್ಯೆಯಲ್ಲಿ ಧ್ವಂಸಮಾಡಿದನು'– ಅರ್ಥಾತ್ ಅರ್ಜುನನು ತನ್ನನ್ನು ಆಕ್ರಮಿಸಿದ್ದ ತ್ರ್ಯಂಗಸೈನಿಕರನ್ನೂ ಧ್ವಂಸ ಮಾಡಿದನು – ಎಂದು ಅರ್ಥವಾಗುತ್ತದೆ. ಇದರ ಮುಂದಿನ ಶ್ಲೋಕವು ಭೀಮನಿಗೆ ಸಂಬಂಧಿಸಿದಂತೆ – **'ತತಸ್ತ್ರಙ್ಗೇಣ ಮಹತಾ ಬಲೇನ**

**ಭರತರ್ಷಭ । ದೃಷ್ಟ್ವಾ ಪರಿವೃತಂ ರಾಜನ್ಭೀಮಸೇನಃ ಕಿರೀಟಿನಮ್ ॥'** (೨೧) – 'ಮೂರು ಅಂಗಗಳಿಂದ (ಗಜಾಶ್ವ-ರಥಸೈನಿಕರಿಂದ) ಪರಿವೃತನಾದ ಅರ್ಜುನನನ್ನು ನೋಡಿ ಅರ್ಜುನನ ಕಡೆಗೆ ಧಾವಿಸಿದನು'–ಎಂದಿದೆ. ಈ ಎರಡು ಶ್ಲೋಕಗಳಲ್ಲಿಯೂ ವಿರೋಧಾಭಾಸಗಳು ಎದ್ದುಕಾಣುತ್ತವೆ. ಅಲ್ಲಿಂದ ಮುಂದಕ್ಕೆ ಹದಿನೈದು ಶ್ಲೋಕಗಳಲ್ಲಿ ಭೀಮಸೇನನ ಪರಾಕ್ರಮದ ವರ್ಣನೆಯಿದೆ. ಅನಂತರ ಬರುವ ೩೮ನೆಯ ಶ್ಲೋಕವು ಹೀಗಿದೆ. **'ನರಾಶ್ವರಥಮಾತಙ್ಗಾ ಯುಧಿ ಗಾಣ್ಡೀವಧನ್ವನಾ । ಶರವ್ರಾತೈಶ್ಚಿತಾರೇಜುಃ ಕದಮ್ಬಾ ಇವ ಕೇಸರೈಃ** – 'ಗಾಂಡೀವಧನ್ವನಾದ ಅರ್ಜುನನ ಬಾಣಗಳಿಂದ ಚುಚ್ಚಲ್ಪಟ್ಟಿದ್ದ ಗಜಾಶ್ವ-ರಥ-ಪದಾತಿಸೈನಿಕರು ಕೇಸರಗಳಿಂದ ಕೂಡಿದ ಕದಂಬಕುಸುಮಗಳಂತೆಯೇ ಕಾಣುತ್ತಿದ್ದರು.' ೨೦ನೆಯ ಶ್ಲೋಕವಾದನಂತರ ಈ ಶ್ಲೋಕವು ಸರಿಯಾಗಿ ಹೊಂದಿಕೊಳ್ಳುತ್ತದೆ. ವಿರೋಧಾಭಾಸಗಳಿರುವುದಿಲ್ಲ. ಒಟ್ಟು ಮೂರು ರಂಗಗಳಲ್ಲಿ ಯುದ್ಧವು ನಡೆಯುತ್ತಿರುವುದೆಂಬುದನ್ನು ನಾವು ಮನದಟ್ಟು ಮಾಡಿಕೊಳ್ಳಬೇಕಾಗಿದೆ. ಅರ್ಜುನ-ಸಂಶಪ್ತಕರು ಮತ್ತು ಇತರರು, ಭೀಮ-ಕೌರವರು ಮತ್ತು ಕರ್ಣ-ಪಾಂಚಾಲರು–ಈ ವ್ಯವಸ್ಥೆಯಲ್ಲಿಯೇ ನಡೆದುಬರುತ್ತಿದೆ. ಇದಕ್ಕೆ ವ್ಯತಿರಿಕ್ತವಾಗಿರುವ ಸಂದರ್ಭಗಳನ್ನು ನಾವು ಗಮನಿಸಬೇಕಾಗುತ್ತದೆ. ಈ ಅಧ್ಯಾಯದಲ್ಲಿ ಭೀಮಸೇನನ ಪ್ರಕರಣವು ಪ್ರಕ್ಷಿಪ್ತವಾಗಿ ಸೇರಿರುವುದು ಬಹಳ ಸ್ಪಷ್ಟವಾಗಿ ಕಾಣುತ್ತದೆ. ೩೮ನೆಯ ಶ್ಲೋಕದಿಂದ ಮುಂದಕ್ಕೆ ಅಧ್ಯಾಯಪೂರ್ತಿಯಾಗಿ ಅರ್ಜುನನ ಪರಾಕ್ರಮವರ್ಣನೆಯಿದೆ. ಕರ್ಣನು ಪಾರ್ಥನನ್ನು ವಧಿಸಬೇಕೆಂದು ನಿಶ್ಚಯಿಸಿ ಪುನಃ ಪಾಂಚಾಲರ ಮೇಲೆ ದಾಳಿಮಾಡುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೮೨ನೆಯ ಅಧ್ಯಾಯ :– ಹಿಂದಿನ ಅಧ್ಯಾಯದಿಂದ ಇದು ಅನುವರ್ತಿತವಾಗಿ ಮುಂದುವರಿದ ಯುದ್ಧದಿಂದಲೇ ಅಧ್ಯಾಯವು ಪ್ರಾರಂಭವಾಗುತ್ತದೆ. ಈ ಮಧ್ಯದಲ್ಲಿ ೧೦ನೆಯ ಶ್ಲೋಕದಿಂದ ೧೨ನೆಯ ಶ್ಲೋಕದವರೆಗೆ ಕೃಷ್ಣಾರ್ಜುನ-ಭೀಮರ ಪ್ರಸ್ತಾಪವಿದೆ. ಈ ಸಂದರ್ಭವನ್ನು ಮನನ ಮಾಡಿದರೆ ಅರ್ಜುನನು ಕೌರವಸೈನಿಕರನ್ನು ಧ್ವಂಸಮಾಡಿ ಕರ್ಣನ ಹಿಡಿತಕ್ಕೆ ಸಿಕ್ಕಿದ್ದ ಪಾಂಚಾಲರನ್ನು ಬಿಡುಗಡೆ ಮಾಡಿದನೋ–ಎಂಬಂತೆ ಕಾಣುತ್ತದೆ. ಆದರೆ

ಮುಂದೆಯೂ ಅವ್ಯಾಹತವಾಗಿ ಪಾಂಚಾಲರ ವಧೆಯಾಗುತ್ತದೆ. ೧೦ರಿಂದ ೧೫ನೆಯ ಶ್ಲೋಕಗಳವರೆಗೆ ಹೆಚ್ಚು ಶ್ಲೋಕಗಳೆಂಬುದು ಅಸಂದಿಗ್ಧವಾಗಿ ಕಾಣುತ್ತದೆ. ಮುಂದೆ ಇನ್ನೂ ಒಂದು ಕಾರಣವನ್ನು ಕೊಡಲಾಗುವುದು. ೯ನೆಯ ಶ್ಲೋಕದ ಉತ್ತರಾರ್ಧವು ಹೀಗಿರುತ್ತದೆ : **'ತಥಾಭಿನತ್ಸುತ ಸೋಮಂ ಶರೇಣ ಸುಸಂಶಿತೇನಾಧಿರಥಿರ್ಮಹಾತ್ಮಾ'** - 'ಕರ್ಣನು ಬಹಳ ತೀಕ್ಷ್ಣವಾದ ಬಾಣಗಳಿಂದ ಸುತಸೋಮನನ್ನು ಗಾಯ ಗೊಳಿಸಿದನು.' ೧೬ನೆಯ ಶ್ಲೋಕದ ಪೂರ್ವಾರ್ಧವು ಇದಕ್ಕೆ ಹೊಂದಿ ಕೊಳ್ಳುವ ರೀತಿಯಲ್ಲಿ ಹೀಗಿದೆ : **ತಮುತ್ತಮೌಜಾ ಜನಮೇಜಯಶ್ಚ ಕ್ರುದ್ಧೌ ಯುಧಾಮನ್ಯುಶಿಖಣ್ಡಿನೌ ಚ** – ಶಿಖಂಡಿಯನ್ನೂ ಸುತಸೋಮ ನನ್ನೂ ಗಾಯಗೊಳಿಸಿ ಧೃಷ್ಟದ್ಯುಮ್ನನ ಮಗನನ್ನು ಸಂಹರಿಸಿದುದಕ್ಕೆ ಪ್ರತಿಯಾಗಿ ಉತ್ತಮೌಜಸ, ಜನಮೇಜಯ, ಯುಧಾಮನ್ಯು, ಶಿಖಂಡೀ, ಧೃಷ್ಟದ್ಯುಮ್ನ–ಇವರೆಲ್ಲರೂ ಒಟ್ಟಾಗಿ ಸೇರಿ ಗರ್ಜನೆಮಾಡುತ್ತಾ ಕರ್ಣನನ್ನು ಬಾಣಗಳಿಂದ ಬಹಳವಾಗಿ ಗಾಯಗೊಳಿಸಿದರು. ಕರ್ಣನಿಗೂ ಧೃಷ್ಟ ದ್ಯುಮ್ನಾದಿಗಳಿಗೂ ಭಯಂಕರವಾದ ಯುದ್ಧವು ಮುಂದುವರಿಯುತ್ತದೆ. ಕೃಪ-ಕೃತವರ್ಮಾ-ದುರ್ಯೋಧನರೂ ಕರ್ಣನೊಡನೆ ಸೇರಿಕೊಂಡು ಯುದ್ಧಮಾಡುತ್ತಿರುತ್ತಾರೆ. ಪಾಂಚಾಲಸೈನಿಕರಲ್ಲಿ ಅನೇಕರು ಕರ್ಣನಿಂದ ಹತರಾಗುತ್ತಾರೆ. ಮತ್ತೊಂದು ವಿಭಾಗದಲ್ಲಿ ದುಃಶಾಸನನು ಅರ್ಜುನ-ಭೀಮಸೇನರನ್ನು ಆಕ್ರಮಿಸುತ್ತಾನೆ. ಈ ಅಧ್ಯಾಯದ ೧೪ನೆಯ ಶ್ಲೋಕದಲ್ಲಿ (ನಾವು ಹೆಚ್ಚು ಪಾಠವೆಂದು ನಿರ್ಣಯಿಸಿರುವ ಶ್ಲೋಕಗಳಲ್ಲೊಂದು) ಹೇಳಿರುವಂತೆ ಭೀಮಸೇನನು ಅರ್ಜುನನ ಪೃಷ್ಠರಕ್ಷಕನಾಗಿ ಹೋಗುತ್ತಿದ್ದು ದಾದರೆ ದುಃಶಾಸನನು ಅರ್ಜುನ-ಭೀಮರಿಬ್ಬರನ್ನೂ ಎದುರಿಸಬೇಕಾಗಿದ್ದಿತು. (ಮುಂದೆ ಅರ್ಜುನನು ಹೋಗುತ್ತಿರುವಾಗ ಪೃಷ್ಠರಕ್ಷಕನನ್ನು ಎದುರಿಸಿ ಯುದ್ಧಮಾಡುವ ಸಾಧ್ಯತೆಯಿಲ್ಲ. ಛಿದ್ರಾನ್ವೇಷಣೆಮಾಡಿ ಸಂಹರಿಸಲು ಸಾಧ್ಯ.) ಅಧ್ಯಾಯದ ಕಡೆಯಲ್ಲಿ ಭೀಮನು ದುಃಶಾಸನನ ಬಾಣಗಳಿಂದ ಮೂರ್ಛೆಹೊಂದಿದನೆಂದಿದೆ. ಅರ್ಜುನನು ಪಕ್ಕದಲ್ಲಿಯೇ ಇದ್ದಿದ್ದರೆ ಇದನ್ನು ನೋಡಿಕೊಂಡು ಸುಮ್ಮನಿರಲು ಸಾಧ್ಯವಾಗುತ್ತಿರಲಿಲ್ಲ. ಆದುದರಿಂದ ಭೀಮನು ಅರ್ಜುನನ ಹಿಂದೆಯೇ ಹೋದನೆಂಬುದು ಹೆಚ್ಚು

ಪಾಠವೆಂಬುದು ನಮ್ಮ ಅಭಿಪ್ರಾಯವಾಗಿದೆ. ಅಸಂಗತವಾಗಿ ಕಾಣುವ ಆರು ಶ್ಲೋಕಗಳನ್ನು ಬಿಟ್ಟರ ಕಥೆಯು ಸುಸಂಗತವಾಗಿಯೂ, ಸ್ವಾರಸ್ಯವಾಗಿಯೂ, ರೋಮಾಂಚಕರವಾಗಿಯೂ ಸಾಗುತ್ತದೆ.

೮೩ನೆಯ ಅಧ್ಯಾಯ :– ದುಃಶಾಸನ-ಭೀಮಸೇನರ ದ್ವಂದ್ವಯುದ್ಧ ದೊಡನೆ ಅಧ್ಯಾಯವು ಪ್ರಾರಂಭವಾಗುತ್ತದೆ. ಭಯಂಕರವಾದ ಯುದ್ಧವು ನಡೆಯುತ್ತದೆ. ಗದಾಪ್ರಹಾರದಿಂದ ಭೀಮಸೇನನು ದುಃಶಾಸನನನ್ನು ರಥದಿಂದ ಕೆಳಕ್ಕೆ ಬೀಳಿಸುತ್ತಾನೆ. ಅನಂತರ ತಾನೂ ರಥದಿಂದಿಳಿದು ಅವನ ಬಳಿಗೆ ಹೋಗಿ ಕುತ್ತಿಗೆಯ ಮೇಲೆ ಕಾಲಿಟ್ಟು ದುಃಶಾಸನನ ಭುಜವನ್ನು ಕಿತ್ತುಹಾಕುತ್ತಾನೆ. ಪ್ರತಿಜ್ಞೆಮಾಡಿದಂತೆ ರಕ್ತಪಾನಮಾಡುತ್ತಾನೆ. ಅವನ ತಲೆಯನ್ನೂ ಕತ್ತರಿಸುತ್ತಾನೆ. ಕೌರವಸೈನಿಕರೆಲ್ಲರೂ ಭಯದಿಂದ ದಿಕ್ಕಾಪಾಲಾಗಿ ಓಡಿಹೋಗುತ್ತಾರೆ. ಈ ಮಧ್ಯದಲ್ಲಿ ಯುಧಾಮನ್ಯುವು ಕರ್ಣನ ತಮ್ಮನಾದ ಚಿತ್ರಸೇನನನ್ನು ಸಂಹರಿಸಿದ ಪ್ರಸಂಗವು ಬರುತ್ತದೆ. ಆದರೆ ಈ ಪ್ರಕರಣವು ಕೆಲವು ಪುಸ್ತಕಗಳಲ್ಲಿಲ್ಲ. ಭೀಮನು ಕೃಷ್ಣಾರ್ಜುನರ ಬಳಿಗೆ ಹೋಗಿ ತನ್ನ ಪ್ರತಿಜ್ಞೆಯನ್ನು ಪೂರ್ಣಮಾಡಿರುವುದಾಗಿ ತಿಳಿಸು ತ್ತಾನೆ. ಭೀಮಸೇನನ ಸಿಂಹನಾದದೊಡನೆ ಅಧ್ಯಾಯವು ಮುಗಿಯುತ್ತದೆ. ಭೀಮನು ಕೃಷ್ಣಾರ್ಜುನರೊಡನೆ ದುಃಶಾಸನನ ವಧೆಯ ವಿಷಯವಾಗಿ ಹೇಳಿದನೆಂಬ ಶ್ಲೋಕವಿದೆ. ಈ ಪಾಠದ ವಿಷಯವಾಗಿ ಸಂಶಯವಿದೆ. ಭೀಮನ ಸಮೀಪದಲ್ಲಿ ಕೃಷ್ಣಾರ್ಜುನರು ಇರಲಿಲ್ಲವೆಂಬುದನ್ನು ನಾವು ಹಿಂದಿನಿಂದಲೂ ಪ್ರತಿಪಾದಿಸಿಕೊಂಡು ಬಂದಿರುತ್ತೇವೆ. ಭೀಮನು ಯುದ್ಧ ಮಾಡುತ್ತಿದ್ದ ಸ್ಥಳವೇ ಬೇರೆ. ಆದುದರಿಂದ ಭೀಮಸೇನನು ಕೃಷ್ಣಾರ್ಜುನರ ಸಮೀಪಕ್ಕೆ ಹೋಗಿ ಈ ವಾರ್ತೆಯನ್ನು ಹೇಳಿರಲಾರನು. ಒಂದು ವೇಳೆ ಹೇಳಿದ್ದರೆ ಕೃಷ್ಣಾರ್ಜುನರು ಪ್ರಶಂಸಾವಾಕ್ಯಗಳನ್ನು ಹೇಳದೇ ಇರುತ್ತಿರಲಿಲ್ಲ. ಮುಂದಿನ ಅಧ್ಯಾಯದಲ್ಲಿಯೂ ಕೃಷ್ಣನ ಪ್ರಸಂಗವು ಬರುವುದಿಲ್ಲ. ೪೨ ಮತ್ತು ೪೩ನೆಯ ಶ್ಲೋಕಗಳಾದನಂತರ ೫೨ನೆಯ ಶ್ಲೋಕ ವಿರಬಹುದೆಂಬುದು ನಮ್ಮ ಅಭಿಪ್ರಾಯವಾಗಿದೆ. ೪೨ನೆಯ ಶ್ಲೋಕದಲ್ಲಿ ಹೀಗೆ ಬಂದಿದೆ : **'ಯೇ ತದಸ್ಮಾನ್ಪ್ರನೃತ್ಯನ್ತಿ ಪುನರ್ಗೌರಿತಿ ಗೌರಿತಿ । ತಾನ್ವಯಂ ಪ್ರತಿನೃತ್ಯಾಮಃ ಪುನರ್ಗೌರಿತಿ ಗೌರಿತಿ ॥** – ಆ ದಿನ

ಕೌರವಸಭೆಯಲ್ಲಿ ಯಾರು ನಮ್ಮನ್ನು ಹಾಸ್ಯಮಾಡುತ್ತಾ **ಗೌಃ ಗೌಃ** ಎಂದು ಹೇಳಿಕೊಂಡು ಕುಣಿದಾಡುತ್ತಿದ್ದರೋ ಅವರನ್ನು ನಾವೀಗ ಹಾಸ್ಯಮಾಡುತ್ತಾ **ಗೌಃ ಗೌಃ** ಎಂದು ಹೇಳಿಕೊಂಡು ಕುಣಿದಾಡುತ್ತೇವೆ.' ೫೨ನೆಯ ಶ್ಲೋಕವು ಇದಕ್ಕೆ ಸಂಬಂಧಿಸಿದಂತೆ ಇದೆ : '**ಏತಾವದುಕ್ತ್ವಾ ವಚನಂ ಪ್ರಹೃಷ್ಟೋ ನನಾದ ಚೋಚ್ಚೈ ರುಧಿರಾರ್ದ್ರಗಾತ್ರಃ ನನರ್ತ ಚೈವಾತಿಬಲೋ ಮಹಾತ್ಮಾ....** ರಕ್ತದಿಂದ ತೋಯ್ದುಹೋಗಿದ್ದ ಭೀಮಸೇನನು ಇಷ್ಟು ಮಾತನ್ನು ಹೇಳಿ ಆನಂದತುಂದಿಲನಾಗಿ ಗಟ್ಟಿಯಾಗಿ ಗರ್ಜನೆಮಾಡಿದನು ಮತ್ತು ಮಹಾತ್ಮನಾದ ಮಹಾಬಲನಾದ ಭೀಮಸೇನನು ಕುಣಿದಾಡಿದನು' (ಅನುವಾದದ ಸಂದರ್ಭದಲ್ಲಿ **ನನರ್ದ** ಎಂಬ ಪಾಠದಂತೆ ಸಿಂಹನಾದಮಾಡಿದನು ಎಂದು ಅರ್ಥಮಾಡಿರುತ್ತೇವೆ. ಆದರೆ **ನನರ್ತ** ಎಂಬ ಪಾಠವೇ ಸಾಧುವಾಗಿದೆ ಮತ್ತು ಸಮಯಕ್ಕೆ ತಕ್ಕಂತೆ ಹೊಂದಿಕೊಳ್ಳುತ್ತದೆ.)

೮೪ನೆಯ ಅಧ್ಯಾಯ :– ದುಃಶಾಸನನು ಹತನಾದೊಡನೆಯೇ ಅವನ ಹತ್ತು ಮಂದಿ ಅನುಜರು ಭೀಮಸೇನನೊಡನೆ ಯುದ್ಧಕ್ಕೆ ಬಂದು ಎಲ್ಲರೂ ಪ್ರಾಣಾರ್ಪಣೆಮಾಡುತ್ತಾರೆ. ದುಃಶಾಸನನೂ ಸೇರಿ ಕರ್ಣನ ಸೇನಾಪತ್ಯದಲ್ಲಿ ಹದಿನೇಳು ಮಂದಿ ಧೃತರಾಷ್ಟ್ರನ ಮಕ್ಕಳು ಹತರಾಗುತ್ತಾರೆ. ಒಟ್ಟು ೮೬ ಮಂದಿ ಹತರಾಗಿದ್ದಾರೆ. ಶಲ್ಯಪರ್ವದಲ್ಲಿ ಇವರ ಹೆಸರನ್ನು ವಿಶ್ಲೇಷಿಸಲಾಗುವುದು. ಧೃತರಾಷ್ಟ್ರನ ಮಕ್ಕಳು ಹತರಾಗಲಾಗಿ ಕರ್ಣನು ಬಹಳವಾಗಿ ಭಯಪಡುತ್ತಾನೆ. ಅನೇಕ ಸಂದರ್ಭಗಳಲ್ಲಿ ತನ್ನೆದುರಾಗಿಯೇ ಧೃತರಾಷ್ಟ್ರನ ಮಕ್ಕಳನ್ನು ಸಂಹಾರಮಾಡುತ್ತಿದ್ದರೂ ಕರ್ಣನಿಗೆ ಏನೂ ಮಾಡಲು ಸಾಧ್ಯವಾಗುವುದಿಲ್ಲ. ಇದರಿಂದ ಕರ್ಣನು ಅಧೀರನಾಗುತ್ತಾನೆ. ಶಲ್ಯನು ಧೈರ್ಯ ಹೇಳುತ್ತಾನೆ. '**ಮಾ ವ್ಯಥಾಂ ಕುರು ರಾಧೇಯ ನೈವ ತ್ವಯ್ಯುಪಪದ್ಯತೇ ।** - ಕರ್ಣ! ವ್ಯಥೆಗೊಳ್ಳಬೇಡ. ನಿನ್ನಂತಹವನು ಈ ಸಮಯದಲ್ಲಿ ವ್ಯಥೆಪಡುತ್ತಾ ಅಧೀರನಾಗುವುದು ಉಚಿತವೆನಿಸುವುದಿಲ್ಲ–ಎನ್ನುತ್ತಾನೆ ಶಲ್ಯ. ಶಲ್ಯನ ಹಿಂದಿನ ಭಾವನೆಗೂ ಇಲ್ಲಿಯ ಮಾತಿಗೂ ಅಪಾರವಾದ ವ್ಯತ್ಯಾಸವನ್ನು ನಾವು ಕಾಣಬಹುದಾಗಿದೆ. ಶಲ್ಯನಿಲ್ಲಿ ಯೋಗ್ಯರೀತಿಯಲ್ಲಿ ವರ್ತಿಸುತ್ತಾನೆ. ಶ್ರೀಕೃಷ್ಣನು ಅರ್ಜುನನಿಗೆ ಧೈರ್ಯತುಂಬುವಂತೆ

ಸಮಯಗಳಲ್ಲಿ ಶಲ್ಯನು ಕರ್ಣನಿಗೆ ಧೈರ್ಯತುಂಬುತ್ತಾನೆ. ಶಲ್ಯನಿಂದ ಉತ್ತೇಜನವನ್ನು ಪಡೆದ ಕರ್ಣನು ಯುದ್ಧಮಾಡಲು ಮನಸ್ಸನ್ನು ಗಟ್ಟಿ ಮಾಡಿಕೊಳ್ಳುತ್ತಾನೆ. **ಯುದ್ಧಾಯ ಸುಸ್ಥಿರಂ ಭಾವಂ ಚಕ್ರೇ** – ಮತ್ತೊಂದು ವಿಭಾಗದಲ್ಲಿ ವೃಷಸೇನನು ಭೀಮನೊಡನೆ ಯುದ್ಧಕ್ಕೆ ಹೋಗುತ್ತಾನೆ. ನಕುಲನು ಅವನನ್ನು ತಡೆದು ವೃಷಸೇನನೊಡನೆ ಯುದ್ಧವನ್ನು ಪ್ರಾರಂಭಿಸುತ್ತಾನೆ. ವೃಷಸೇನನು ನಕುಲನ ರಥಾಶ್ವಗಳೆಲ್ಲವನ್ನೂ ಧ್ವಂಸಮಾಡುತ್ತಾನೆ. ನಕುಲನು ಖಡ್ಗಪಾಣಿಯಾಗಿಯೇ ಯುದ್ಧವನ್ನು ಮುಂದುವರಿಸುತ್ತಾನೆ.

ಆದರೆ ನಕುಲನು ವೃಷಸೇನನೊಡನೆ ಖಡ್ಗಯುದ್ಧವನ್ನು ಮಾಡುವು ದಿಲ್ಲ. ಈ ಮಧ್ಯದಲ್ಲವನು ರಣಾಂಗಣದ ಸುತ್ತಲೂ ಸಂಚರಿಸುತ್ತಾ ಎರಡು ಸಾವಿರ ಯೋಧರನ್ನೂ, ಅನೇಕಾನೇಕ ಗಜಾಶ್ವ-ರಥಸೈನಿಕರನ್ನೂ ಸಂಹರಿ ಸಿದನೆಂದು ಇಲ್ಲಿ ಹೇಳಿದೆ. ಆದರೆ ಯುದ್ಧದ ಕಥೆಯು ಸಾಮಾನ್ಯವಾಗಿ ಹೀಗೆ ಇರುವುದಿಲ್ಲ. ರಥ-ಕುದುರೆಗಳನ್ನೂ ಕಳೆದುಕೊಂಡನಂತರ ಖಡ್ಗಪಾಣಿಯಾಗಿ ತನ್ನ ಎದುರಾಳಿಯೊಡನೆ ಯುದ್ಧಮಾಡುವ ಪ್ರಸಂಗಗಳೇ ಹೆಚ್ಚು. ನಕುಲನು ಖಡ್ಗಪಾಣಿಯಾಗಿ ಎರಡು ಸಾವಿರ ಯೋಧರನ್ನು ಸಂಹರಿಸುತ್ತಿದ್ದಾಗ ವೃಷಸೇನನು ಏನು ಮಾಡುತ್ತಿದ್ದನೆಂಬ ಪ್ರಶ್ನೆಯು ಸ್ವಾಭಾವಿಕವಾಗಿಯೇ ಉದ್ಭವಿಸುತ್ತದೆ. ಆದುದರಿಂದ ಈ ಪ್ರಕರಣದಲ್ಲಿ ಕೆಲವು ಶ್ಲೋಕಗಳು ಹೆಚ್ಚಾಗಿರುವಂತೆ ಕಾಣುತ್ತದೆ. ಕತ್ತಿಯನ್ನು ವರಸೆ-ವರಸೆಯಾಗಿ ತಿರುಗಿಸುತ್ತಾ ನಕುಲನು ಪಕ್ಷಿಯಂತೆಯೇ ಸಂಚರಿಸುತ್ತಿದ್ದನು (೨೪) – ಎಂಬ ಶ್ಲೋಕದ ನಂತರ **ಅಥಾಸ್ಯ ತೂರ್ಣಂ ಚರತೋ ನರೇನ್ದ್ರ** (೩೧)–ಖಡ್ಗಪಾಣಿಯಾಗಿ ರಣಾಂಗಣದಲ್ಲಿ ಸಂಚರಿಸುತ್ತಿದ್ದ ನಕುಲನ ಸಾವಿರ ನಕ್ಷತ್ರಗಳ ಚಿಹ್ನೆಗಳಿದ್ದ ಗುರಾಣಿಯನ್ನು ವೃಷಸೇನನು ಕತ್ತರಿಸಿದನು. ಈ ಶ್ಲೋಕದ ಅನುವರ್ತನೆಯು ಸಂಗತವಾಗಿ ಕಾಣುತ್ತಿದೆ. ಮುಂದಿನ ಶ್ಲೋಕದಲ್ಲಿ ವೃಷಸೇನನು ನಕುಲನ ಕತ್ತಿಯನ್ನೂ ಕತ್ತರಿಸುತ್ತಾನೆ. ಅನಂತರ ನಕುಲನು ಭೀಮಸೇನನ ರಥವನ್ನು ಅರ್ಜುನನು ನೋಡುತ್ತಿದ್ದಂತೆಯೇ ಹತ್ತಿಕೊಳ್ಳುತ್ತಾನೆ (೩೬)-ಕೆಲವು ಪುಸ್ತಕಗಳಲ್ಲಿ ಇಲ್ಲಿಗೇ ಅಧ್ಯಾಯವು ಮುಗಿದಿದೆ. ಇದೇ ಸಮಂಜಸವಾಗಿ ಕಾಣುತ್ತದೆ.

ನಾವು ಅನುವಾದಿಸುತ್ತಿರುವ ಪುಸ್ತಕದಲ್ಲಿ ಮುಂದೆ ಆರು ಶ್ಲೋಕಗಳಿವೆ. ವೃಷಸೇನನು ಒಂದೇ ರಥದಲ್ಲಿ ಕುಳಿತಿದ್ದ ಭೀಮ-ನಕುಲರಿಬ್ಬರ ಮೇಲೂ ಬಾಣಗಳನ್ನು ಸುರಿಸಿದನೆಂದಿದೆ. ಅವರ ಪ್ರತಿಕ್ರಿಯೆ ಉಕ್ತವಾಗಿಲ್ಲ. ೩೯ನೆಯ ಶ್ಲೋಕದಲ್ಲಿ ಭೀಮಾರ್ಜುನರಿಬ್ಬರೂ ಸೇರಿ ವೃಷಸೇನನ ಮೇಲೂ ಅವನ ಅನುಯಾಯಿಗಳ ಮೇಲೂ ಬಾಣಗಳ ಮಳೆಗರೆದರು–ಎಂದಿದೆ. ಮುಂದಿನ ಶ್ಲೋಕಗಳಲ್ಲಿ ಭೀಮನೂ ಮತ್ತು ನಕುಲನೂ ವೃಷಸೇನನನ್ನು ಸಂಹರಿಸುವಂತೆ ಅರ್ಜುನನಿಗೆ ಹೇಳಿದರೆಂದಿದೆ. ಕಡೆಯ ಶ್ಲೋಕದಲ್ಲಿ (೪೨)–ಸಹೋದರರ ಮಾತನ್ನು ಕೇಳಿ ಅರ್ಜುನನು ವೃಷಸೇನನ ಸಮೀಪಕ್ಕೆ ಬಹಳ ವೇಗವಾಗಿ ಹೋದನೆಂದಿದೆ. ೩ನೆಯ ಶ್ಲೋಕದಲ್ಲಿ ವೃಷಸೇನನು ಭೀಮ-ನಕುಲರ ಮೇಲೆ ಬಾಣಗಳ ಮಳೆಗರೆದನು–ಎಂದು ಹೇಳಿರುವಾಗ ಅರ್ಜುನನು ವೃಷಸೇನನ ಕಡೆಗೆ ಹೋದನೆಂದು ಈ ಕಡೆಯ ಶ್ಲೋಕದಲ್ಲಿ ಹೇಳಿರುವುದು ಸಂಗತವಾಗಿ ಕಾಣುವುದಿಲ್ಲ. ಈ ಆರು ಶ್ಲೋಕಗಳ ತಾತ್ಪರ್ಯಾರ್ಥ :- ವೃಷಸೇನನು ಭೀಮ-ನಕುಲರಿಬ್ಬರ ಮೇಲೂ ಬಾಣಗಳ ಮಳೆಗರೆಯುತ್ತಿದ್ದನು. ಭೀಮಾರ್ಜುನರು ವೃಷಸೇನನ ಅನುಯಾಯಿಗಳನ್ನು ಬಾಣಗಳ ಸಮೂಹಗಳಿಂದ ಮುಚ್ಚುತ್ತಿದ್ದರು. ಭೀಮನೂ ಮತ್ತು ನಕುಲನೂ ವೃಷಸೇನನನ್ನು ಸಂಹರಿಸುವಂತೆ ಅರ್ಜುನನಿಗೆ ಹೇಳಿದರು. ಅವರ ಮಾತಿನಂತೆ ಅರ್ಜುನನು ಒಡನೆಯೇ ಎದುರಾಗಿ ನಿಂತಿದ್ದ ವೃಷಸೇನನ ಮೇಲೆ ಯುದ್ಧವನ್ನು ಪ್ರಾರಂಭಿಸಬಹುದಾಗಿದ್ದಿತು. ಆದರೆ ವೃಷಸೇನನ ಕಡೆಗೆ ವೇಗವಾಗಿ ಹೋದನೆಂದು ಕಡೆಯ ಶ್ಲೋಕದಲ್ಲಿ ಹೇಳಿದೆ. ಹೀಗೆ ಕೆಲವು ವಿರೋಧಾಭಾಸಗಳು ಈ ಆರು ಶ್ಲೋಕಗಳಲ್ಲಿ ಕಾಣುವುದರಿಂದ ಇವು ಹೆಚ್ಚು ಶ್ಲೋಕಗಳೆಂದು ಅನುಮಾನಿಸಬಹುದಾಗಿದೆ.

[ಮುಂದುವರಿಯುವುದು.]

